

# ಇತಿಹಾಸ ದರ್ಶನ

ಸಂಪುಟ ೧೩/೧೯೯೮

೧೯೯೭ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಶಿರಸಿಯಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ಹನ್ನೊಂದನೆಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನ

ಸಂಪಾದಕರು

ಎಂ. ಜಿ. ನಾಗರಾಜ್

ಪಿ. ವಿ. ಕೃಷ್ಣಮೂರ್ತಿ




ಕರ್ನಾಟಕ ಇತಿಹಾಸ ಅಕಾದೆಮಿ (ರಿ.,) ಬೆಂಗಳೂರು



# ITIHASA DARSANA

Proceedings of the Eleventh Annual Conference of
the **Karnataka Itihasa Academy** (Regd.)
held at Sirsi, (N.K),
on 25th, 26th and 27th October 1997

**Volume 13, November 1998**

Edited by : ***M. G. Nagaraj***
***P. V. Krishna Murthy***

Published by ***Karnataka Itihasa Academy (Regd.)***
Gokhale Institute of Public Affairs Premises
Basavanagudi Road, Narasimharaja Colony
Bangalore - 560 019



ಬೆಲೆ : ರೂ. ೧೦೦-೦೦

***ಪ್ರಬಂಧಕಾರರ ಗಮನಕ್ಕೆ***

ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ. ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ. ಕರ್ನಾಟಕ ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುವ ಬರಹಗಳಿಗೆ ಇತಿಹಾಸ ದರ್ಶನ ಮೀಸಲಾಗಿದೆ. ಲೇಖನಗಳು ಹಸ್ತಲಿಖಿತ ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವೆಡೆ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥ ಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ. ಈ ೧೨ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಕೊಡಲಾಗದಿರುವ ಅಕಾದೆಮಿಯ ಸದಸ್ಯಲೇಖಕರು ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಜನವರಿ ೩೧, ೧೯೯೯ರ ಒಳಗಾಗಿ **ಸಂಪಾದಕರು, ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು** – ೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಸಂಪಾದಕೀಯ

ಶಿರಸಿಯ ಹಸಿರು ತಂಪಿಗೆ ಹೆಸರು. ಆ ತಂಪಿನ ಸೊಬಗಿನ ತಾಣದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯು ಶಿರಸಿಯ ಶ್ರೀ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನದ ಸಹಯೋಗದಲ್ಲಿ ೧೯೯೭ನೆಯ ಅಕ್ಟೋಬರ್ ೨೫ರಿಂದ ೨೭ರವರೆಗೆ, ಶ್ರೀ ಕೆ. ಅಭಿಶಂಕರ್ ಅವರ ಅಧ್ಯಕ್ಷತೆಯಲ್ಲಿ ನಡೆಸಿದ ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿತವಾದುವುಗಳ ಪೈಕಿ ಒದಗಿದ ಸಂಶೋಧನ ಪ್ರಬಂಧಗಳ ಸಂಕಲನವೇ ಸದ್ಯದ **ಇತಿಹಾಸ ದರ್ಶನ** ಸಂಪುಟ ಹದಿಮೂರು. ಅಲ್ಲಿ ಮಂಡಿತವಾದ ೮೨ ಪ್ರಂಬಂಧಗಳಲ್ಲಿ ಪ್ರಕಟಣೆಗೆ ಬಂದ ೭೫ ಪ್ರಬಂಧಗಳು ಮಾತ್ರ ಇಲ್ಲಿ ಸೇರಿವೆ. ಅವುಗಳ ಅವಲೋಕನದಿಂದ ಕರ್ನಾಟಕದ ಇತಿಹಾಸದ ಬಗೆಗೆ ಆಗುತ್ತಿರುವ ವಿವಿಧ ಮುಖಗಳ ಪರಿಚಯ ಆಗದೇ ಇರಲಾರದು.

ಕಳೆದ ಒಂದು ದಶಕದಿಂದ ಅವಿರತವಾಗಿ ಪ್ರಕಟವಾಗುತ್ತಿರುವ **ಇತಿಹಾಸ ದರ್ಶನ**ದ ಸಂಪುಟಗಳು ನಾಡಿನ ಸಂಶೋಧಕರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿರುವುದು ಸಂತೋಷದ ಸಂಗತಿ. ಹಾಗೆ ನೋಡಿದರೆ ಸಂಶೋಧನೆ ಎನ್ನುವುದೇ ಹೊಸತುಗಳ ಹುಡುಕಾಟ. ಇದರಲ್ಲಿ ಸೃಜನಶೀಲತೆಯು ಅವಿಭಾಜ್ಯ ಅಂಗ. ಅಂತೇ ಅದಿದ್ದಷ್ಟೂ ಹೊಸತುವಿನ ಆವಿರ್ಭವ. ಅದು ಮನಸ್ಸಿಗೆ, ಭಾವಕ್ಕೆ, ಬುದ್ಧಿಗೆ ತಾಗಿದಾಗ ಸಂಶೋಧನೆಯ ಸಾರ್ಥಕ್ಯ, ಅರ್ಥವತ್ತಾದ ಸೃಜನಶೀಲತೆ. ಇದು ಸಮಾಜೋಪಯೋಗಿಯಾದಾಗ ಮೌಲಿಕ.

ಈ ದೃಷ್ಟಿಯಿಂದ ಅಜಕೋಟಿ ಹಿರಿಯತನವೆಂದುಕೊಳ್ಳದೆ, ಕಳಕಳಿ ಲವಲವಿಕೆಯಿಂದ ಪ್ರೌಢವೂ ವಿದ್ವತ್ಪೂರ್ಣವೂ ಆದ ಪ್ರಬಂಧಗಳನ್ನು ಬರೆದಿರುವ ಹಿರಿಯ ವಿದ್ವಾಂಸರುಗಳ ಬಗ್ಗೆ ಮತ್ತಷ್ಟು ಗೌರವ; ಬರಹದ ಶೈಲಿ, ತರ್ಕ ಹಾಗೂ ಕ್ಷೇತ್ರಕಾರ್ಯ ಮಾಡಿ ಹೊಸತುಗಳನ್ನು ನೀಡುವಲ್ಲಿ ಪಕ್ವತೆಯನ್ನು ಬೆಳೆಸಿಕೊಳ್ಳುತ್ತಿರುವ ಯುವ ಪ್ರಬಂಧಕಾರರನ್ನು ಕಂಡು ಸಂತಸ, ನೆಮ್ಮದಿ. ಈ ಇತಿಹಾಸ ಪ್ರಜ್ಞಾಶೋಭೆಯ ಬೆಳೆಸು, ಶಿಸ್ತು ಸತತವಾಗಲೆಂಬ ಆಶಯ ನಮ್ಮದು. ಇದಕ್ಕೆಲ್ಲ ಅಕಾದೆಮಿಯ ಆರಂಭದಿಂದಲೂ ಸೇರ್ಪಡೆಯಾಗುತ್ತ ಬಂದ ಉತ್ಸಾಹೀ ಸದಸ್ಯ ಬಳಗ ಹಾಗೂ ಸಕ್ರಿಯ ಕಾರ್ಯಕಾರಿ ಸಮಿತಿಯ ಸದಸ್ಯರುಗಳೆಲ್ಲ ಕಾರಣ; ಜಿಲ್ಲಾ ಘಟಕಗಳು, ಸುದ್ದಿ-ಸಮೂಹ ಮಾಧ್ಯಮಗಳ ಸಹಕಾರವೂ ಕಾರಣ. ಕೈಬಳೆಮಾಡಿಸಿಕೊಳ್ಳಲು ಕೂಡಿಟ್ಟುಕೊಂಡು ಬಂದಿದ್ದ ಸ್ತ್ರೀಧನವನ್ನು, ಸದ್ಯದ ಸಮ್ಮೇಳನದ ಒಂದು ಹೊತ್ತಿನ ದಾಸೋಹಕ್ಕೆಂದು ದಾನಕೊಟ್ಟ ಸದಸ್ಯೆಯರಂಥವರ ಹೃದಯಸ್ಪರ್ಶಿ ನಡೆಯೂ ಕಾರಣ. ಎಂದಿನಂತೆ ಈ ವರ್ಷವೂ ರಾಜ್ಯದ ದ್ವಿತೀಯ ಪದವಿಪೂರ್ವ ತರಗತಿಯ ವಿದ್ಯಾರ್ಥಿಗಳಿಗೆ ಕರ್ನಾಟಕ ಇತಿಹಾಸ ಪ್ರಶಸ್ತಿಯ ಸ್ಪರ್ಧಾತ್ಮಕ ಪರೀಕ್ಷೆ ಏರ್ಪಡಿಸಲಾಗಿತ್ತು. ೫೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ಇದರಲ್ಲಿ ಭಾಗವಹಿಸಿದ್ದರು. ಪರೀಕ್ಷಾ ಕಾರ್ಯಗಳಲ್ಲಿ ತೊಡಗಿಕೊಂಡವರ ಹಾಗು ಮೌಲ್ಯಮಾಪಕರ ಸಹಕಾರದಿಂದಾಗಿ ಸಕಾಲಕ್ಕೆ ಮೌಲ್ಯಮಾಪನ, ಹಾಗೂ ಫಲಿತಾಂಶ ಪ್ರಕಟಣೆ, ಪ್ರಶಸ್ತಿಪತ್ರಗಳ ವಿತರಣೆ ಇವೆಲ್ಲ ನಡೆದಿವೆ.

ಅಕಾದೆಮಿಯು ಹಮ್ಮಿಕೊಂಡಿರುವ **'ಐತಿಹಾಸಿಕ ಪರಂಪರೆ ಉಳಿಸಿ'** ಸಪ್ತಾಹ ಕಾರ್ಯಕ್ರಮಗಳು ಈಗ ನಾಡಿನಾದ್ಯಂತ ಸಾರ್ವಜನಿಕರ ಗಮನ ಸೆಳೆದು ನಾಡಿನ ಇತಿಹಾಸದ ಬಗ್ಗೆ ಅವರು ಹೆಮ್ಮೆಪಡುವ ಮತ್ತು ಪರಂಪರೆಯನ್ನು ರಕ್ಷಿಸುವ ಮನೋಭಾವವನ್ನು ಬೆಳೆಸಿಕೊಳ್ಳುತ್ತಿರುವುದು ಅಕಾದೆಮಿಯ ಹೆಮ್ಮೆಯ ಸಾಧನೆ ಎನ್ನಬಹುದು. ೧೯೯೮ರ ಜುಲೈ ತಿಂಗಳಲ್ಲಿ ಬೆಂಗಳೂರಿನಲ್ಲಿ **'ಕರ್ನಾಟಕ ಇತಿಹಾಸ ಲೇಖನ ಪರಾಮರ್ಶೆ'**ಯ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಂಕಿರಣದಲ್ಲಿ ನಾಡಿನ ನುರಿತ ವಿದ್ವಾಂಸರಿಂದ ಇತಿಹಾಸ ವಲಯದಲ್ಲಿ ಕ್ರಮಿಸಿರುವ, ಕ್ರಮಿಸಬೇಕಾದ ಪಥದ ಬಗ್ಗೆ ಚಿಂತನೆ ನಡೆಯಿತು. ಇದಕ್ಕೂ ಮೊದಲು ಫೆಬ್ರುವರಿ ೨೧-೨೨ರಲ್ಲಿ ಅಕಾದೆಮಿಯ ಬೆಂಗಳೂರು ಜಿಲ್ಲಾ ಘಟಕ ಹಾಗೂ ಮಿಥಿಕ್ ಸೊಸೈಟಿ ಇವುಗಳ ಜಂಟಿ ಆಶ್ರಯದಲ್ಲಿ **ಬೆಂಗಳೂರು ನಗರ ಇತಿಹಾಸ** ಕುರಿತು ವಿಚಾರ ಸಂಕಿರಣ ಯಶಸ್ವಿಯಾಗಿ ನಡೆಯಿತು. ಅಕಾದೆಮಿಯ ಶಿವಮೊಗ್ಗ ಮತ್ತು ಮೈಸೂರು ಜಿಲ್ಲಾ ಘಟಕಗಳೂ ಸಂಶೋಧನ ಕಮ್ಮಟ, ಹಾಗೂ ವಿಚಾರ ಸಂಕಿರಣಗಳನ್ನು ನಡೆಯಿಸಿವೆ. ಇವೆಲ್ಲ ಅಕಾದೆಮಿಯ ಕಾರ್ಯಕ್ರಮಗಳ ಯಶಸ್ಸಿನ ಮೈಲಿಗಲ್ಲುಗಳು. ಇನ್ನು ಸಮ್ಮೇಳನದ ಸಮಯದಲ್ಲಿ ಮಂಡಿಸಿದ ಪ್ರಂಬಂಧಗಳನ್ನು ಅನಿವಾರ್ಯದಿಂದ ಕೊಡಲಾಗದ ವಿದ್ವಾಂಸರು ಸಂಪಾದಕರ ವಿಳಾಸಕ್ಕೆ ಸಕಾಲಕ್ಕೆ ತಮ್ಮ ಪೂರ್ಣ ವಿಳಾಸದೊಡನೆ ವಿನಂತಿಯ ಸೂಚನೆಗಳಿಗನುಗುಣವಾಗಿ ಕಳುಹಿಸಿದರೆ, ಸಂಪಾದನ ಮುದ್ರಣಕಾರ್ಯಗಳು ಸುಗಮವಾಗಿ ನಡೆಯ ಲನುಕೂಲವಾಗುತ್ತದೆ. ದಯವಿಟ್ಟು ವಿದ್ವಾಂಸರು ಈ ದಿಸೆಯಲ್ಲಿ ಸಹಕರಿಸಬೇಕೆಂದು ಕೋರುತ್ತೇವೆ.

ಕಳೆದ ವರ್ಷದಿಂದ ಆಯಾ ವರ್ಷದ ವಾರ್ಷಿಕ ವರದಿಯನ್ನು ಆಯಾ ವರ್ಷದ ಸಂಪುಟದಲ್ಲೇ ಸೇರಿಸಿ ಮುದ್ರಿಸುವ ಕೆಲಸವನ್ನು ಆರಂಭಿಸಲಾಯಿತು. ಈ ಬಾರಿಯ ವಿಶೇಷವೆಂದರೆ ಕಾ. ಕಾ. ಸಮಿತಿಯಲ್ಲಿ ಬಂದ ಸಲಹೆಯಂತೆ ಈ ಸಂಪುಟದಲ್ಲಿ ೧೯೯೭ನೆಯ ಸಾಲಿನ ವಾರ್ಷಿಕ ವರದಿಯ ಜೊತೆಗೆ ಲೆಕ್ಕ ಪರಿಶೋಧನೆಯಾದ ೧೯೯೭ನೇ ಸಾಲಿನ ಅಕಾದೆಮಿಯ **ಆರ್ಥಿಕ ಸ್ಥಿತಿಗತಿಯ ವಿವರಪಟ್ಟಿ**ಯನ್ನೂ ಮುದ್ರಿಸಲಾಗಿದೆ.

ಕಳೆದ ಶಿರಸಿ ಸಮ್ಮೇಳನದ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದ ಕೆ. ಅಭಿಶಂಕರ್ ಅವರು ಕಾಲನ ಕರೆಗೆ ಸಂದುಹೋಗಿ ಇಂದು ನಮ್ಮೊಡನಿಲ್ಲದಿದ್ದರೂ ಅವರ ವಿದ್ವತ್ತು, ವೈಚಾರಿಕತೆ, ಸಜ್ಜನಿಕೆ, ಲವಲವಿಕೆ ನಮ್ಮ ನೆನಪುಗಳಲ್ಲಿ ಉಳಿಯುತ್ತವೆ. ಅಂತು ಅಕಾದೆಮಿಗೆ ಒಬ್ಬ ಕ್ರಿಯಾಶೀಲ, ಸಜ್ಜನ ಪ್ರೌಢವ್ಯಕ್ತಿ ಇನ್ನಿಲ್ಲವಾದಂತಾಯಿತು. ಈ ಬಾರಿ ರಾಜಧಾನಿ ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ನಡೆಯುತ್ತಿರುವ ಅಕಾದೆಮಿಯ ೧೨ನೆಯ ವಾರ್ಷಿಕ ಸಮ್ಮೇಳನದಲ್ಲಿ (೧೯೯೮ನೇ ನವೆಂಬರ್ ೧೪ ರಿಂದ ೧೬) **ಇತಿಹಾಸ ದರ್ಶನದ ೧೩ನೆಯ ಸಂಪುಟವು** ಅನಾವರಣಗೊಳ್ಳುತ್ತಿರುವುದು ಸಂತಸದ ವಿಷಯ. ಈ ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಒಡೆಯರಾದ ಶ್ರೀ ಅಶೋಕ್ ಕುಮಾರ್, ವ್ಯವಸ್ಥಾಪಕರಾದ ವೆಂಕಟೇಶ್, ಮೇಲ್ವಿಚಾರಕ ಶ್ರೀ ಬಾಚಮಂಡ ಎಸ್. ನಂಜುವಮ್ಮಯ್ಯ ಹಾಗೂ ಸಿಬ್ಬಂದಿ ವರ್ಗದವರಿಗೂ ಕೆಲವು ಛಾಯಾಚಿತ್ರಗಳನ್ನು ಒದಗಿಸಿದ ಡಾ॥ ಹೆಚ್. ಚಂದ್ರಶೇಖರ್, ಡಾ॥ ಅ. ಲ. ನರಸಿಂಹನ್ ಮತ್ತು ಮೈಸೂರು ನಾಗರಾಜ ಶರ್ಮ ಅವರುಗಳಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಬಹುಧಾನ್ಯ ಸಂವತ್ಸರ
ತುಲಾಮಾಸ, ಭಾನುವಾರ ಉತ್ಥಾನ ದ್ವಾದಶಿ
ಕನ್ನಡ ರಾಜ್ಯೋತ್ಸವ ದಿನ: ೧.೧೧.೧೯೯೮

★ ಎಂ. ಜಿ. ನಾಗರಾಜ್
★ ಪಿ. ವಿ. ಕೃಷ್ಣಮೂರ್ತಿ

# ಕರ್ನಾಟಕ ಇತಿಹಾಸ ಅಕಾದೆಮಿ ( ರಿ., )

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಕ ೯.೬.೧೯೯೬ರಲ್ಲಿ ಆಯ್ಕೆಗೊಂಡಂತೆ)

★ *ಅಜೀವ ಗೌರವ ಅಧ್ಯಕ್ಷರು*

ಪ್ರೊ ॥ ಜಿ. ಎಸ್. ದೀಕ್ಷಿತ್, ಧಾರವಾಡ

★ *ಅಧ್ಯಕ್ಷರು*

ಡಾ ॥ ಸೂರ್ಯನಾಥ ಕಾಮತ್, ಬೆಂಗಳೂರು

★ *ಉಪಾಧ್ಯಕ್ಷರು*

ಡಾ ॥ ಡಿ. ವಿ. ದೇವರಾಜ್, ಮೈಸೂರು

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು

★ *ಪ್ರಧಾನ ಕಾರ್ಯದರ್ಶಿ*

ಡಾ ॥ ಹೆಚ್. ಎಸ್. ಗೋಪಾಲರಾವ್

★ *ಕಾರ್ಯದರ್ಶಿಗಳು*

ಡಾ ॥ ಎಚ್. ಆರ್. ರಘುನಾಥಭಟ್, ಧಾರವಾಡ

ಡಾ ॥ ಕೋ. ವಸಂತಲಕ್ಷ್ಮಿ, ಬೆಂಗಳೂರು

★ *ಕೋಶಾಧಿಕಾರಿ*

ಶ್ರೀ ಎಂ. ಬಿ. ಪಾಟೀಲ್, ಬೆಂಗಳೂರು

★ *ಸದಸ್ಯರು*

ಡಾ ॥ ಬೆಂ. ಶಾ. ಶ್ಯಾಮಲಾರತ್ನ ಕುಮಾರಿ, ಬೆಂಗಳೂರು

ಡಾ ॥ ಅ. ಸುಂದರ, ಬಿಜಾಪುರ

ಡಾ ॥ ಎಸ್. ರಾಜಶೇಖರ್, ಧಾರವಾಡ

ಡಾ ॥ ಚೆನ್ನಕ್ಕಪಾವಟೆ, ಧಾರವಾಡ

ಡಾ ॥ ಎ. ಕೆ. ಶಾಸ್ತ್ರಿ, ಶಿರಸಿ

ಡಾ ॥ ಕೆ. ಜಿ. ವಸಂತ ಮಾಧವ, ಹಳಿಯಂಗಡಿ

ಶ್ರೀ ಗುರುಮೂರ್ತಿ ಪೆಂಡಕೂರು, ಹಗರಿಬೊಮ್ಮನಹಳ್ಳಿ

ಪ್ರೊ ॥ ಲಕ್ಷ್ಮಣ್ ತೆಲಗಾವಿ, ಹಂಪಿ

ಡಾ ॥ ದೇವರಕೊಂಡಾರೆಡ್ಡಿ, ಹಂಪಿ

ಶ್ರೀ ವಿ. ಸಿ. ಮಾಲಗತ್ತಿ, ಬೆಳಗಾವಿ

ಪ್ರೊ ॥ ಭೀಮಪ್ಪ ಸುರಪುರ, ಶಹಾಪುರ

ಶ್ರೀ ಕೇಶವ ಉಮರ್ಜಿ, ಜಮಖಂಡಿ

ಶ್ರೀ ಸಿದ್ದಯ್ಯ ಹಿರೇಮಠ, ಶಿವಮೊಗ್ಗ

# ಪರಿವಿಡಿ

ಹನ್ನೊಂದನೆಯ ಸಮ್ಮೇಳನದ ಅಧ್ಯಕ್ಷರು



ಶ್ರೀ ಕೆ. ಅಭಿಶಂಕರ್



ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳು
(ಪ್ರಸ್ತುತ ಪೀಠಾಧಿಪತಿಗಳು)
ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ, ಶಿರಸಿ

ಸಮ್ಮೇಳನಾಧ್ಯಕ್ಷರು ಭಾಷಣ ಮಾಡುತ್ತಿರುವುದು




ಸ್ವಾಮಿಗಳ ಸನ್ನಿಧಿಯಲ್ಲಿ ಶ್ರೀ ಕೆ. ಅಭಿಶಂಕರ್, ಡಾ॥ ಎಚ್. ಎಸ್. ಗೋಪಾಲರಾವ್
ಡಾ॥ ಅ. ಸುಂದರ ಮತ್ತು ಇತರರು

ಶ್ರೀಗಳವರ ಸಾನಿಧ್ಯದಲ್ಲಿ ಸೋಂದೆಯ ರಾಜಕುಮಾರರಾದ
ಶ್ರೀ ಬಸವಲಿಂಗ ಒಡೆಯರ್ ಮತ್ತು ಶ್ರೀ ಮಧುಲಿಂಗ ಒಡೆಯರ್

ಅಕಾದೆಮಿ ಅಧ್ಯಕ್ಷ ಡಾ॥ ಸೂರ್ಯನಾಥಕಾಮತ್
ಅವರು ಪ್ರಾಸ್ತಾವಿಕ ಭಾಷಣ ಮಾಡುತ್ತಿರುವುದು




ಸರ್ವಸದಸ್ಯರ ಸಭೆಯಲ್ಲಿ ಅಕಾದೆಮಿ ಅಧ್ಯಕ್ಷ ಡಾ॥ ಸೂರ್ಯನಾಥ ಕಾಮತ್
ಉಪಾಧ್ಯಕ್ಷ ಎಂ.ಜಿ. ನಾಗರಾಜ್, ಕೋಶಾಧಿಕಾರಿ ಎಂ.ಬಿ. ಪಾಟೀಲ್




ಆಕಾದೆಮಿಯ ಶಿವಮೊಗ್ಗ ಘಟಕದ ಸಮಾರಂಭದಲ್ಲಿ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಹಾಗೂ
ಜಿಲ್ಲಾಧಿಕಾರಿಗಳಾದ ಶ್ರೀ. ಟಿ. ಆರ್. ಪಾಂಡುರಂಗ, ಶ್ರೀ ಎಚ್. ಎಂ. ಚಂದ್ರಶೇಖರಪ್ಪ, ಶ್ರೀ ಜಯದೇವಪ್ಪ ಜೈನಕೇರಿ



ಅಕಾದೆಮಿಯ ಮೈಸೂರು ಘಟಕದಲ್ಲಿ ಸಂಶೋಧನ ಶಿಬಿರದ ಉದ್ಘಾಟನಾ ಸಂದರ್ಭದಲ್ಲಿ ಡಾ॥ ಎಂ. ಮಾದಯ್ಯ
(ಮೈ.ವಿ.ವಿ. ಕುಲಪತಿಗಳು) ಡಾ॥ ಸೂರ್ಯನಾಥ ಕಾಮತ್ ಡಾ॥ ಎಂ. ಎಸ್. ಕೃಷ್ಣಮೂರ್ತಿ,
ಶ್ರೀ ಮಾಧವ ನಾ. ಕಟ್ಟಿ ಮತ್ತು ಇತರರು

## ಶಿರಸಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಸಮ್ಮೇಳನ
## ಅಕ್ಟೋಬರ್ ೨೫, ೨೬ ಮತ್ತು ೨೭, ೧೯೯೭

# ಸಮ್ಮೇಳನದ ಅಧ್ಯಕ್ಷ ಶ್ರೀ ಕೆ. ಅಭಿಶಂಕರ್ ಅವರ ಭಾಷಣ

ನಮ್ಮ ದೇಶದ ಮಠಮಾನ್ಯಗಳು ಅಧ್ಯಯನ-ಅಧ್ಯಾಪನಕ್ಕೆ ನೆರವಾಗುವ ಮತ್ತು ಸಂಸ್ಕೃತಿಯನ್ನು ಪೋಷಿಸುವ ಉಜ್ವಲ ಪರಂಪರೆಯನ್ನು ಹೊಂದಿವೆ. ಈ ವಾಡಿಕೆ ಇತರ ಪ್ರದೇಶಗಳಿಗಿಂತ ಹೆಚ್ಚಾಗಿ ಕರ್ನಾಟಕದಲ್ಲಿ ಶತಮಾನಗಳಿಂದ ನಿರಂತರವಾಗಿ ನಡೆದು ಬಂದಿದೆ ಎಂಬುದು ಗಮನಾರ್ಹ. ಈ ಸಂಪ್ರದಾಯಕ್ಕೆ ಅನುಗುಣವಾಗಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಪೂಜ್ಯ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳವರ ಚೈತನ್ಯಯುತ ನೇತೃತ್ವದಲ್ಲಿ ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನವು ಮತ್ತು ಸರ್ವಜ್ಞೇಂದ್ರ ಸರಸ್ವತಿ ಪ್ರತಿಷ್ಠಾನವು ವಿವಿಧ ಸಾಂಸ್ಕೃತಿಕ ಕಾರ್ಯಗಳನ್ನು ಹಮ್ಮಿಕೊಂಡು ಫಲಪ್ರದವಾಗಿ ನಡೆಸುತ್ತಿರುವಂತೆ, ಈ ಅಖಿಲ ಕರ್ನಾಟಕ ಇತಿಹಾಸ ಸಮ್ಮೇಳನದ ಸಂಘಟನೆಗೆ ಉದಾರಾಶ್ರಯ ನೀಡಿ ಸಹಕರಿಸಿವೆ. ಇದಕ್ಕಾಗಿ ನಾವೆಲ್ಲ ಆಭಾರಿಯಾಗಿದ್ದೇವೆ.

ರಾಷ್ಟ್ರೀಯ ವಿಮೋಚನಾ ಆಂದೋಲನದಲ್ಲಿ ಅಸಾಧಾರಣವಾಗಿ, ಪ್ರಮುಖ ಪಾತ್ರ ವಹಿಸಿದ ಉತ್ತರ ಕನ್ನಡ ಜಿಲ್ಲೆಯಲ್ಲಿ, ಸ್ವಾತಂತ್ರ್ಯದ ಸ್ವರ್ಣಮಹೋತ್ಸವವನ್ನು ಆಚರಿಸುತ್ತಿರುವ ಈ ವರ್ಷದಲ್ಲಿ, ಈ ಭಾಗದಲ್ಲಿಯೇ ಹುಟ್ಟಿ ಬೆಳೆದ ನನಗೆ ಅನೇಕ ವರ್ಷಗಳಿಂದ ಕಾರ್ಯಕ್ಷೇತ್ರವೂ ಆಗಿರುವ ಇತಿಹಾಸ-ಪ್ರಸಿದ್ಧ ಬನವಾಸಿ ಸೀಮೆಯ ಮುಖ್ಯ ಪಟ್ಟಣವಾದ ಶಿರಸಿಯಲ್ಲಿ ನಡೆಯುತ್ತಿರುವ ಈ ಇತಿಹಾಸ ಸಮ್ಮೇಳನಕ್ಕೆ ದೇಶದ ಪಾರತಂತ್ರ್ಯದ ಬಿಡುಗಡೆಯ ಹೋರಾಟದಲ್ಲಿ ಭಾಗವಹಿಸಿದ ನಾನು ಅಧ್ಯಕ್ಷನಾಗಿರುವುದು ಸನ್ನಿವೇಶಗಳ ಸಂಯೋಗವೆಂದು ಹೇಳಬಹುದು. ಈ ಸ್ಥಾನಕ್ಕೆ ನನ್ನನ್ನು ಸರ್ವಾನುಮತದಿಂದ ಆಯ್ಕೆ ಮಾಡಿದ ಕರ್ನಾಟಕ ಇತಿಹಾಸ ಅಕಾದೆಮಿಯ ಪದಾಧಿಕಾರಿಗಳಿಗೆ ನಮನಗಳು.

ಪ್ರಬಲ ಪಲ್ಲವರನ್ನು ಪರಾಭವಗೊಳಿಸಿ ಕರ್ನಾಟಕದ ಪ್ರಥಮ ಸರ್ವತಂತ್ರ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ ಕದಂಬ ಮಯೂರ ವರ್ಮ, ಛತ್ರಪತಿ ಶಿವಾಜಿಯ ಸೈನ್ಯವನ್ನು ಸೋಲಿಸಿದ ಸೋದೆಯ ರಾಜಕುಮಾರಿಯಾಗಿದ್ದ ಬೆಳವಡಿಯ ವೀರರಾಣಿ ಮಲ್ಲಮ್ಮ, ಕರ್ನಾಟಕದ ಗಾಂಧಿ ಹರ್ಡೇಕರ್ ಮಂಜಪ್ಪ, ತ್ಯಾಗಿ ತಿಮ್ಮಪ್ಪನಾಯಕ ಮುಂತಾದವರು ಈ ಸೀಮೆಯವರೇ. ಇಲ್ಲಿ ನಡೆದ ಕರನಿರಾಕರಣೆಯ ಚಳವಳಿ ಸರ್ದಾರ್ ಪಟೇಲರ ಬಾರ್ಡೋಲಿಯ ಹೋರಾಟಕ್ಕಿಂತ ಮಿಗಿಲಾಗಿತ್ತೆಂದು ಜನಜನಿತವಾಗಿದೆ. ಈ ಭಾಗಗಳ ಮೇಲೆ ವಿಶೇಷವಾಗಿ ಕದಂಬರ ಮತ್ತು ಸೋದೆಯ ಅರಸು ಮನೆತನದವರ ಕೊಡುಗೆಗಳು ದಟ್ಟವಾದ ಪ್ರಭಾವ ಬೀರಿವೆ. ಈ ಸಂದರ್ಭಕ್ಕೆ ಸೋದೆ ರಾಜವಂಶದ ಗೌರವಾನ್ವಿತ ಸವಾಯಿವೀರ ಸದಾಶಿವ ರಾಜೇಂದ್ರ ಬಸವಲಿಂಗ ಒಡೆಯರ್ ಅವರ ಇಬ್ಬರು ಸುಪುತ್ರರು ಗೋವೆಯಿಂದ ಮತ್ತು ರಾಜ್ಯದ ಕನ್ನಡ ಮತ್ತು ಸಂಸ್ಕೃತಿ, ಪುರಾತತ್ವ, ಗ್ಯಾಸೆಟಿಯರ್ ಇತ್ಯಾದಿ ಇಲಾಖೆಗಳ ಜನಪ್ರಿಯ ಸಚಿವೆಯರಾದ ಸನ್ಮಾನ್ಯ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಆಗಮಿಸಿರುವುದು ಹರ್ಷದಾಯಕವಾಗಿದೆ.

ನಾವೀಗ ಭಾರತೀಯ ಮತ್ತು ಜಾಗತಿಕ ಚರಿತ್ರೆಯ ಒಂದು ನಿರ್ಣಾಯಕ ಮಹತ್ವದ ಘಟ್ಟದ ಪ್ರತ್ಯಕ್ಷದರ್ಶಿಗಳಾಗಿದ್ದೇವೆ. ಇತಿಹಾಸದ ಅರಿವನ್ನು ಗತಕಾಲದ ತಪ್ಪುಗಳಿಂದ ಉಂಟಾಗಿರುವ ಸಮಸ್ಯೆಗಳನ್ನು ಪರಿಹರಿಸಲೂ ಉಪಯೋಗಿಸಿಕೊಳ್ಳಬೇಕು. ಐತಿಹಾಸಿಕ ಸಂಗತಿಗಳ ಪರಿಣಾಮಗಳೇನು ಎಂಬುದನ್ನು ಎತ್ತಿ ತೋರಿಸಿ, ಅವುಗಳ ಪರಿಮಾರ್ಜನೆ ಹೇಗೆ, ಎಷ್ಟು ಸಾಧ್ಯ ಎಂಬುದನ್ನು ಚರಿತ್ರಕಾರರು ಧೈರ್ಯದಿಂದ ತಿಳಿಸಬೇಕು. ಅವರು ಸಾಧ್ಯವಾದ ಮಟ್ಟಿಗೆ ಇತಿಹಾಸದ ನಿರ್ಮಾಪಕರೂ ಆಗಲು ಪ್ರಯತ್ನಿಸಬೇಕು. ನಿರ್ದಿಷ್ಟ ಸಮಸ್ಯೆಗಳ ಬಗ್ಗೆ ಹಿಂದಕ್ಕೆ ಜಾಡು ಹಿಡಿದು ಹೋಗಿ ಅವುಗಳ ಮೂಲವನ್ನು, ಕಾರಣಗಳನ್ನು ಶೋಧಿಸಿ ನೋಡಿ ಪರಿಹಾರವನ್ನು ಸೂಚಿಸುವುದಕ್ಕೆ ಇತಿಹಾಸದ ಅನ್ವಯಿಕ ಆಯಾಮ ಎಂದು ಕರೆಯಬಹುದು.

ಕಳೆದ ವರ್ಷ ಧಾರವಾಡದಲ್ಲಿ ನಡೆದ ಇತಿಹಾಸ ಸಮ್ಮೇಳನದ ಅಧ್ಯಕ್ಷರಾಗಿದ್ದ ವಂದ್ಯ ಹಿರಿಯರಾದ ಪ್ರೊಫೆಸರ್ ಜಿ. ಎಸ್. ದೀಕ್ಷಿತ್ ಅವರು ತಮ್ಮ ಭಾಷಣದಲ್ಲಿ ಇತಿಹಾಸ ಸಂಶೋಧನೆಯಿಂದ ಈಗಿನ ಕಠಿಣ ನೀರಿನ ಸಮಸ್ಯೆಗೆ

ಪರಿಹಾರವನ್ನು ಸೂಚಿಸಿದ್ದರು. ಅದನ್ನು ಸಂಬಂಧಪಟ್ಟವರು ಗಮನಿಸಿ ಕ್ರಮಗಳನ್ನು ಕೈಗೊಂಡಿರಬಹುದು. ಕರ್ನಾಟಕ ಶೌರ್ಯ-ಸಾಹಸಗಳಿಗೆ ಹೆಸರಾಗಿತ್ತು. ಬಾದಾಮಿ ಚಾಲುಕ್ಯರ ಕಾಲದಿಂದಲೇ ''ಕರ್ನಾಟಕ ಬಲಂ ಅಜೇಯಂ'' ಎಂದು ಪ್ರಖ್ಯಾತವಾಗಿತ್ತು. ವೀರತ್ವಕ್ಕೆ, ಧೀರ ಗುಣಗಳಿಗೆ ಬಹಳಷ್ಟು ಮಹತ್ವ ಇತ್ತು ಎಂಬುದಕ್ಕೆ ಕರ್ನಾಟಕದ ತುಂಬೆಲ್ಲ ಇರುವ ವೀರಗಲ್ಲುಗಳೇ ಸಾಕ್ಷಿ. ಆದರೆ ಈ ಪರಂಪರೆ ಕ್ಷೀಣಿಸಿ ಹೋಗಿ, ಕರ್ನಾಟಕದಿಂದ ದೇಶದ ಸಶಸ್ತ್ರ ಪಡೆಗಳಿಗೆ ಸೇರುವವರ ಸಂಖ್ಯೆ ಅತ್ಯಂತ ಕಡಿಮೆ ಆಗಿರುತ್ತದೆ. ನಾವು ಈ ಸಮಸ್ಯೆಯನ್ನು ಗುರುತಿಸಿ, ಈ ಜಾಡ್ಯವನ್ನು ಹೋಗಲಾಡಿಸಲು ಸಹಾಯಕವಾಗುವ ಕೆಲವು ಕ್ರಮಗಳನ್ನು ಬನವಾಸಿ ವಲಯ ಅಭ್ಯುದಯ ಸಮಿತಿಯ ಮೂಲಕ ಕೈಗೊಂಡಿದ್ದೇವೆ. ಸರ್ಕಾರದ ಉನ್ನತ ಅಧಿಕಾರಿಗಳೊಡನೆ ಚರ್ಚಿಸಿ, ಅವರೂ ಆಸಕ್ತಿ ವಹಿಸುವಂತೆ ಉತ್ತೇಜಿಸಿದ್ದೇವೆ. ತರುಣರನ್ನು ಪ್ರೋತ್ಸಾಹಿಸಿ ಸೈನ್ಯಭರ್ತಿ ಮೇಳವನ್ನು ನಡೆಸಿದೆವು; ಲೇಖನ ಬರೆದೆವು; ''ಕರ್ನಾಟಕದ ವೀರ ಪರಂಪರೆ''ಯನ್ನು ಕುರಿತು ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಡಾ॥ ಎಚ್. ಆರ್. ರಘುನಾಥ ಭಟ್ ಅವರಿಂದ ಉಪನ್ಯಾಸ ಏರ್ಪಡಿಸಿ ಪ್ರಚುರಪಡಿಸಿದ್ದೇವೆ. ಶಿರಸಿಯ ಮಾಡರ್ನ್ ಎಜ್ಯುಕೇಶನ್ ಸೊಸಾಯಿಟಿಯವರ ಮೂಲಕ ಸೈನ್ಯಭರ್ತಿಗಾಗಿ, ಉಮೇದು ವಾರರಿಗೆ ಪೂರ್ವಭಾವಿ ತರಬೇತಿಯನ್ನು ನೀಡುವ ಬಗ್ಗೆ ಪ್ರಯತ್ನಿಸಲಾಗಿದೆ. ಇದೂ, ಅನ್ವಯಿಕ ಇತಿಹಾಸದ ಕ್ರಿಯೆಯ ಒಂದು ಉದಾಹರಣೆ.

ಈ ಮುಂಚೆ, ಭಾರತೀಯರು ತಾವು ವೀಕ್ಷಿಸಿದ್ದನ್ನು, ಕೇಳಿದ್ದನ್ನು, ಅನುಭವಿಸಿದ್ದನ್ನು ವಾಸ್ತವಿಕವಾಗಿ, ನಿಖರವಾಗಿ, ಕ್ರಮಬದ್ಧವಾಗಿ ಬರೆದಿಡುವ ಪದ್ಧತಿಯನ್ನು ರೂಢಿಸಿಕೊಳ್ಳಲಿಲ್ಲ. ಗತಗೋಷ್ಠಿಗಳನ್ನು ತಿಳಿದು ಮಾಡುವುದೇನು ಎಂದು ನಮ್ಮ ವಿದ್ಯಾವಂತರು ಸಹ ಹೀಗಳೆಯುತ್ತಾರೆ. ಇತಿಹಾಸವು ಕಬ್ಬಿಣದ ಕಡಲೆ, ಬೇಸರಪಡಿಸುವಂತಹದು ಎಂಬ ಭಾವನೆ ವ್ಯಾಪಕವಾಗಿದೆ. ಕಾಲಚಕ್ರದಂತೆ, ಇತಿಹಾಸ ಪ್ರವಹಿಸುತ್ತಲೇ ಇರುತ್ತದೆ. ಗತಕಾಲ-ವರ್ತಮಾನಕಾಲ-ಭವಿಷ್ಯತ್ ಕಾಲವೆಂಬುದೆಲ್ಲ ಅವಿಚ್ಛಿನ್ನ. ಆದ್ದರಿಂದ ಇತಿಹಾಸಕಾರರಿಗೆ ತ್ರಿಕಾಲದೃಷ್ಟಿ ಇರಬೇಕಾದುದು ಅಪೇಕ್ಷಣೀಯ. ಐತಿಹಾಸಿಕ ಘಟನೆಗಳ ಬಗ್ಗೆ ಕುತೂಹಲವನ್ನು ಕೆರಳಿಸುವಂತೆ, ಆಸಕ್ತಿಯನ್ನು ಉಂಟುಮಾಡುವಂತೆ ರೋಚಕ ರೀತಿಯಲ್ಲಿ ನಿರೂಪಣೆ ಮಾಡುವುದು ಸಾಧ್ಯ. ಕರ್ನಾಟಕ ಇತಿಹಾಸ ಅಕಾದೆಮಿಗೆ ಮೊದಲಿನಿಂದಲೂ ಅಧ್ಯಕ್ಷರಾಗಿ, ಈಗ ಆಜೀವ ಗೌರವಾಧ್ಯಕ್ಷರಾಗಿರುವ, ಅನೇಕರಿಗೆ ಇತಿಹಾಸದ ದೀಕ್ಷಾ-ಗುರುಗಳಾದ, ನನಗೆ ಗುರು-ಸಮಾನರಾದ ಪ್ರೊ॥ ದೀಕ್ಷಿತ್ ಅವರು ನಿರೂಪಣೆಯ ಅಂಥ ಕಲೆಯನ್ನು ಕರಗತ ಮಾಡಿಕೊಂಡವರಲ್ಲಿ ಅಗ್ರಗಣ್ಯರು. ಮಧ್ಯೆ-ಮಧ್ಯೆ ತಿಳಿ, ಮಧುರ ವಿನೋದದಿಂದ ವಿವರಣೆಯನ್ನು ವಿಶ್ಲೇಷಣೆಯನ್ನು, ಚರ್ಚೆಯನ್ನು ಅವರು ಉಲ್ಲಾಸಕರಗೊಳಿಸುತ್ತಾರೆ. ಅವರ ಶಿಷ್ಯರಾದ, ನನ್ನ ಮಿತ್ರರಾದ, ಕರ್ನಾಟಕದ ಇತಿಹಾಸವನ್ನು ಕರತಲಾಮಲಕ ಮಾಡಿಕೊಂಡಿರುವ, ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತರೂ ಹಾಗೆಯೇ.

ಭಾರತದ ದೀರ್ಘ ಇತಿಹಾಸದಲ್ಲಿ ಮಗಧ ಪ್ರದೇಶ, ದೆಹಲಿ ಪ್ರದೇಶ, ಕರ್ನಾಟಕ ಮತ್ತು ಮಹಾರಾಷ್ಟ್ರ – ಇವು ಅಖಿಲ ಭಾರತ ಮಹತ್ವದ ನಿರ್ಣಾಯಕ ಪಾತ್ರಗಳನ್ನು ವಹಿಸಿದವು. ಚಂದ್ರಗುಪ್ತ ಮೌರ್ಯ ಮತ್ತು ವಿಜಯನಗರದ ಸಂಗಮರು ದೇಶಕ್ಕೆ ಬಂದ ಭಯಂಕರ ವಿಪತ್ತಿನ ಕಾಲದಲ್ಲಿ ವಿಶಿಷ್ಟ ಮೌಲ್ಯಗಳ ಮೇಲೆ ಆಧಾರಿತ ಸಾಮ್ರಾಜ್ಯಗಳನ್ನು ಕಟ್ಟಿದರು. ವಿಜಯನಗರ ಚಕ್ರಾಧಿಪತ್ಯದ ಸ್ಥಾಪನೆಯ ಶ್ರೇಯಸ್ಸಿನ ಕೆಲಭಾಗ ಮುಮ್ಮಡಿ ಹೊಯ್ಸಳ ಬಲ್ಲಾಳನಿಗೂ, ಕಂಪಿಲರಾಯನಿಗೂ ಸಲ್ಲುತ್ತದೆ. ವಿಜಯನಗರದಿಂದಲೇ ಪ್ರೇರಣೆ ಪಡೆದು ಸ್ಥಾಪಿತವಾದದ್ದು ಛತ್ರಪತಿ ಶಿವಾಜಿಯ ನೇತೃತ್ವದ ಮರಾಠಾ ಮಹಾರಾಜ್ಯ. ಇದೂ ಮೌಲ್ಯಗಳ ಮೇಲೆ ಆಧಾರಿತವಾದದ್ದೇ ಆಗಿತ್ತು. ಪಂಜಾಬ್ ಪ್ರದೇಶದಲ್ಲಿ ಸಿಖ್ ಗುರುಗಳ ಪ್ರತಿಭಟನಾ ಹೋರಾಟ ಮತ್ತು ಅದರಿಂದ ಸ್ಫೂರ್ತಿ ಪಡೆದ ರಣಜಿತ್ ಸಿಂಗ್ ಸ್ಥಾಪಿಸಿದ ರಾಜ್ಯಕ್ಕೆ ಸಹ ಮೌಲ್ಯಗಳ ಆಧಾರವಿದ್ದಿತು. ಗುಜರಾತ್‌ನಲ್ಲಿದ್ದ ಚಾಲುಕ್ಯರು ಅರಬ್ ದಾಳಿಗಳನ್ನು ತಡೆಗಟ್ಟಿದ್ದರು. ಆಂಧ್ರದಲ್ಲಿದ್ದ ಚಾಲುಕ್ಯವಂಶದ ಇಮ್ಮಡಿ ರಾಜೇಂದ್ರನು ಆಂಧ್ರದ ವೆಂಗಿ ಮತ್ತು ತಮಿಳುನಾಡಿನ ಚೋಳ ರಾಜ್ಯಗಳನ್ನು ಒಂದುಗೂಡಿಸಿ ರಾಜಕೇಸರಿ ಕುಲೋತ್ತುಂಗನೆಂಬ ಹೆಸರಿನಿಂದ ಎರಡೂ ರಾಜ್ಯಗಳಿಗೆ ಅಧಿಪತಿಯಾದನು. ಕರ್ನಾಟಕದ ರಾಷ್ಟ್ರಕೂಟರು ತಮ್ಮ ಕಾಲದಲ್ಲಿ ಇಡೀ ಭಾರತದಲ್ಲಿಯೇ ಅತ್ಯಂತ ಪ್ರಬಲ ಶಕ್ತಿಯಾಗಿದ್ದರು. ಮಗಧದ ಮೌರ್ಯರು, ಆಂಧ್ರ-ಮಹಾರಾಷ್ಟ್ರದ ಶಾತವಾಹನರು-ಚುಟುಗಳು, ತಮಿಳುನಾಡಿನ ಪಲ್ಲವರು-ಚೋಳರು, ಮಹಾರಾಷ್ಟ್ರದ ಮರಾಠರು ಕರ್ನಾಟಕದ ಕೆಲವು ಭಾಗಗಳನ್ನು ಆಳಿದರು. ಹೊಯ್ಸಳ ಸೋದರ-ಸಂಬಂಧಿಗಳು ತಮಿಳುನಾಡಿನಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಕದಂಬರ ಒಂದು ಶಾಖೆಯವರು ಗೋವೆಯಲ್ಲಿ ಜನಪ್ರಿಯ ಅರಸರಾಗಿದ್ದರು. ಇಂಥ ಇತರ ಕೆಲವು ಉದಾಹರಣೆಗಳೂ ಇವೆ. ಇದನ್ನೆಲ್ಲ ಹೇಳುವುದಕ್ಕೆ ಕಾರಣವೇನೆಂದರೆ, ಕರ್ನಾಟಕವು ಪ್ರಾಚೀನ ಕಾಲದಿಂದಲೂ ಅಖಿಲ ಭಾರತದ ಮುಖ್ಯಧಾರೆಯಲ್ಲಿ ಸಮ್ಮಿಳಿತವಾಗಿರುವ ದೃಢ ಪರಂಪರೆಯನ್ನು ಪಡೆದಿದೆ; ಉತ್ತರ-ದಕ್ಷಿಣವನ್ನು ಒಂದುಗೂಡಿಸುವ ಅನುಪಮ ಪ್ರದೇಶವಾಗಿದೆ. ತನ್ನದೇ ಆದ ಸ್ವಂತಿಕೆಯಲ್ಲದೆ, ಅಖಿಲ ಭಾರತದ ಸಂಸ್ಕೃತಿಯ ಸಾಮರಸ್ಯವನ್ನು ಅದು ಹೊಂದಿದೆ. ಸಮನ್ವಯ ದೃಷ್ಟಿಯಿಂದ ಇಡೀ ಭಾರತದ ಐಕ್ಯತೆಗೆ ಸಹಾಯಕವಾಗುವ ಸಬಲ ಹಿನ್ನೆಲೆ ಕರ್ನಾಟಕಕ್ಕೆ ಇದೆ.

ಮಯೂರನಿಂದ ಕದಂಬ ರಾಜ್ಯ ಸ್ಥಾಪನೆಯಾದದ್ದೂ ಮೌಲ್ಯಾಧಾರಿತವಾಗಿತ್ತೆಂದು ಹೇಳಬಹುದು. ಪಲ್ಲವರ ಗರ್ವದಿಂದ ಅವಮಾನಿತನಾದ, ವೇದಶಾಸ್ತ್ರ - ಪಾರಂಗತನಾದ ಬನವಾಸಿ ಸೀಮೆಯ ತಾಳಗುಂದದ ಈ ಶರ್ಮ ಖಡ್ಗಧಾರಿಯಾದ. ಆತ್ಮಗೌರವ ಸ್ವಾಭಿಮಾನದಿಂದ ಹೋರಾಡಿ, ಕರ್ನಾಟಕದ ಪ್ರಥಮ ಸ್ವತಂತ್ರವಾದ ರಾಜ್ಯವನ್ನು ಕಟ್ಟಿದ. ಪ್ರವೃತ್ತಿಗೆ ಅನುಸಾರವಾದ ವೃತ್ತಿ ಎಂಬ ತತ್ವಕ್ಕೆ ಅನುಸಾರವಾಗಿ, ಬ್ರಾಹ್ಮಣ್ಯವನ್ನು ತ್ಯಜಿಸಿ, ರಾಜವರ್ಮನಾದ. ಅವನ ತಂದೆ ನಿಮಿತ್ತ-ಜ್ಞಾನ-ನಿಷ್ಣಾತನಾದ ಆಚಾರ್ಯ ಬಂಧುಷೇಣ ವರ್ಣಾತೀತವಾದ ಶ್ರಮಣಧಾರೆಯ ಜೈನ ಮತಕ್ಕೆ ಪರಿವರ್ತಿತನಾಗಿದ್ದನೆಂದು ಗ್ರಹಿಸಲು ಅವಕಾಶವಿದೆ. ಮಯೂರನ ವಂಶಜರೂ ಪರಮತ-ಸಹಿಷ್ಣುತೆಯ ಉದಾತ್ತ ಉದಾಹರಣೆಯನ್ನು ಹಾಕಿಕೊಟ್ಟರು. ವರ್ಣ, ಜಾತಿಗಳ ಭೇದಭಾವವಿಲ್ಲದೆ ಅವರು ಉತ್ತರ ಭಾರತದ ಗುಪ್ತರೊಡನೆ, ಮಹಾರಾಷ್ಟ್ರದ ವಾಕಾಟಕರೊಡನೆ, ಕರ್ನಾಟಕದ ಜೈನ ದೊರೆಗಳಾಗಿದ್ದ ಗಂಗರು, ಮುಂತಾದವರೊಡನೆ ವಿವಾಹ-ಸಂಬಂಧಗಳನ್ನು ಬೆಳೆಸಿದರು. ಸುಮಾರು ಒಂದು ಸಾವಿರ ವರ್ಷದಷ್ಟು ದೀರ್ಘಕಾಲ ಬಾಳಿ, ಬೆಳಗಿದ ಅಸಾಮಾನ್ಯ ಕೀರ್ತಿ ಕದಂಬರದ್ದು. ಅವರ ಸಮಕಾಲೀನರಾಗಿದ್ದ ತಲಕಾಡಿನ ಗಂಗರೂ ಸಹ ದೀರ್ಘಕಾಲ ಆಳಿ, ಕರ್ನಾಟಕಕ್ಕೆ ಅಮೂಲ್ಯ ಕೊಡಿಗೆಗಳನ್ನು ನೀಡಿದರು. ಕದಂಬರು ತಮ್ಮ ರಾಜ್ಯ ನರ್ಮದೆಯವರೆಗೂ ಹಬ್ಬಿದೆ ಎಂದು ಹೇಳಿಕೊಂಡದ್ದು ಕೇವಲ ಬಡಾಯಿ ಎಂದು ಕೆಲವರು ಅಭಿಪ್ರಾಯಪಟ್ಟಿದ್ದರು. ಆದರೆ, ಮಹಾರಾಷ್ಟ್ರದ ವಾಕಾಟಕರ ಇತಿಹಾಸವನ್ನು ನಾವು ಪರಿಶೀಲಿಸಲಾಗಿ, ಕದಂಬರ ಆ ಹೇಳಿಕೆಯಲ್ಲಿ ಒಂದಿಷ್ಟು ಸತ್ಯಾಂಶವಿದೆಯೆಂದು ಕಂಡುಬಂದಿತು. ಒಂದು ಸಮಯದಲ್ಲಿ ವಾಕಾಟಕರ ರಾಜ್ಯ ಕದಂಬರ ಅಳಿಯಂದಿರ ರಾಜ್ಯವಾಗಿದ್ದಿತು. ಆ ಅಳಿಯಂದಿರು ದಾಳಿಗೆ ಗುರಿಯಾದಾಗ ಕದಂಬರು ಅವರ ನೆರವಿಗೆ ಸಶಸ್ತ್ರ ಪಡೆಯನ್ನು ಕಳುಹಿಸಿದ್ದರು. ಹೀಗೆ, ಕದಂಬರು ಮತ್ತು ವಾಕಾಟಕರಲ್ಲಿ ನೆಂಟಸ್ತನದ ಆತ್ಮೀಯತೆ ಇದ್ದಿತು. ತಮ್ಮ ಅಳಿಯಂದಿರ ರಾಜ್ಯದ ಉತ್ತರದ ಗಡಿ ನರ್ಮದಾ ನದಿಯಾದ್ದರಿಂದ, ಅಲ್ಲಿವರೆಗೂ ತಮ್ಮ ಪ್ರಭಾವ ಹಬ್ಬಿದೆಯೆಂಬುದು ಕದಂಬರ ಹೇಳಿಕೆಯ ತಾತ್ಪರ್ಯವೆಂದು ಗ್ರಹಿಸಲು ಅಡ್ಡಿಯಿಲ್ಲ. ಪ್ರೊ॥ದೀಕ್ಷಿತ್‌ರವರು ಆಂಧ್ರ ಮೂಲದ ಆಕರಗಳಿಂದ ಮಾಹಿತಿ ಪಡೆದು, ಬಸವಣ್ಣನವರ ಜೀವಿತದ ಅವಧಿಯ ಬಗ್ಗೆ ಇತ್ತೀಚೆಗೆ ಬರೆದ ಲೇಖನ ಹೊಸ ಬೆಳಕನ್ನು ಚೆಲ್ಲಿದೆ. ಹೀಗೆ ಪ್ರದೇಶಗಳ ಇತಿಹಾಸ ಪರಸ್ಪರ ಹೆಣೆದುಕೊಂಡಿರುವುದರಿಂದ, ಕರ್ನಾಟಕದ ಇತಿಹಾಸದ ವಿದ್ಯಾರ್ಥಿಗಳು ಸುತ್ತಮುತ್ತಲಿನ ರಾಜ್ಯಗಳ ಚರಿತ್ರೆಯನ್ನೂ ತಕ್ಕಮಟ್ಟಿಗೆ ಅಭ್ಯಸಿಸುವುದು ಆವಶ್ಯಕ. ಅದರಂತೆಯೇ ನಮ್ಮ ನೆರೆ ರಾಜ್ಯಗಳ ಇತಿಹಾಸ-ಪ್ರಿಯರು ಕರ್ನಾಟಕದ ಇತಿಹಾಸದ ಅಧ್ಯಯನವನ್ನು ಮಾಡಬೇಕಾಗುತ್ತದೆ. ತಮಿಳಿನಿಂದ ಬೇರೆಯಾದ ಮಲಯಾಳ ಭಾಷೆಯ ಸಂಸ್ಕೃತೀಕರಣಕ್ಕೆ ಕನ್ನಡಿಗರ ಪ್ರಭಾವ ಕಾರಣವೆಂದು ಕೇರಳದ ಪಂಡಿತರು ಬರೆದಿದ್ದಾರೆ. ಕೆಲವು ಮಂದಿ ಇತಿಹಾಸಾಸಕ್ತ ವಿದ್ಯಾರ್ಥಿಗಳು ಅಕ್ಕಪಕ್ಕದ ರಾಜ್ಯಗಳ ಲಿಪಿ ಮತ್ತು ಭಾಷೆಗಳನ್ನು ಕಲಿತುಕೊಂಡರೆ ಅನುಕೂಲಕರವಾಗುತ್ತದೆ. ಮಧ್ಯಕಾಲದ ಇತಿಹಾಸದ ಪುಷ್ಕಳ ಸಾಮಗ್ರಿ ಫಾರಸಿ ಭಾಷೆಯಲ್ಲಿದೆಯಾದ್ದರಿಂದ ಕೆಲವು ಇತಿಹಾಸ-ಪ್ರಿಯರು ಆ ಭಾಷೆಯನ್ನು ಕಲಿಯಲೂ ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಪ್ರೋತ್ಸಾಹಿಸಬೇಕು.

ಧರ್ಮ, ತತ್ವಜ್ಞಾನ, ಅಗಾಧವಾದ ಪಾರಮಾರ್ಥಿಕ ಚಿಂತನೆ ಸಾಧನೆ-ಸಿದ್ಧಿ, ಭಾಷೆ, ಸಾಹಿತ್ಯ, ನಾಗರಿಕತೆ, ಸಂಸ್ಕೃತಿ, ಕಲೆಗಳು, ಶಾಸ್ತ್ರಗಳು ಹಸ್ತಕೌಶಲ್ಯದ ವಸ್ತುಗಳ ತಯಾರಿಕೆ, ವಿವಿಧ ಕೈಗಾರಿಕೆಗಳು ಇತ್ಯಾದಿ ಅನೇಕ ಕ್ಷೇತ್ರಗಳಲ್ಲಿ ಪ್ರಾಚೀನ ಕಾಲದಿಂದ ನಮ್ಮ ಪೂರ್ವಜರು ಜಗತ್ತಿನಲ್ಲಿಯೆ ವಿಶಿಷ್ಟವಾದ, ಅಸಾಧಾರಣವಾದ ಕಾರ್ಯಗಳನ್ನು ಸಾಧಿಸಿದರು. ಆದರೆ ಸಾಮಾಜಿಕ ವೈಚಾರಿಕತೆಯ ವಿಷಯದಲ್ಲಿ ಮತ್ತು ಬಾಹ್ಯ ಪ್ರಪಂಚದಲ್ಲಿ (ಅಂದರೆ ಸುದೂರ ಮತ್ತು ನಿಕಟ ವಿದೇಶಗಳಲ್ಲಿ) ಯಾವ-ಯಾವ ಕ್ಷೇತ್ರಗಳಲ್ಲಿ ಏನೇನು ನಡೆಯುತ್ತಿದೆ, ಅದರ ಪರಿಣಾಮ ನಮ್ಮ ದೇಶದ ಮೇಲೆ ಏನಾಗಬಹುದು ಎಂಬುದನ್ನು ತಿಳಿದುಕೊಂಡು ಎಚ್ಚರಿಕೆ ವಹಿಸುವಲ್ಲಿ ಬಹಳ ಹಿಂದುಳಿದರು. ಲೌಕಿಕ, ಸಾಮಾಜಿಕ ವಸ್ತುಸ್ಥಿತಿಯನ್ನು ನಿರ್ಲಕ್ಷಿಸಿದರು. ವರ್ಣವ್ಯವಸ್ಥೆ ತಪ್ಪು ದಾರಿಯನ್ನು ಹಿಡಿಯಿತು. ಜನ್ಮದ ಮೇಲೆ ಆಧಾರಿತ ವರ್ಣಭೇದಗಳ ಕಲ್ಪನೆ, ಕೆಲವು ವೃತ್ತಿಗಳು ಹಾಗೂ ಜನರು, ಮೇಲು-ಕೀಳೆಂಬ ಭಾವನೆ ಅಸಹಜವಾದದ್ದು, ಪ್ರಮಾದಪೂರ್ಣವಾದುದು ಎಂದು ಎರಡೂವರೆ ಸಾವಿರ ವರ್ಷಗಳಿಗಿಂತ ಹೆಚ್ಚು ಹಿಂದೆಯೇ ಸಿದ್ಧಾರ್ಥ ಗೌತಮ ಬುದ್ಧರು ತಮ್ಮಲ್ಲಿ ವಾದಕ್ಕೆ ಬಂದಿದ್ದ ಪಂಡಿತರಿಗೆ ತಿಳಿಸಿ ಹೇಳಿದರು. ಆದರೆ, ಅನುದಾರಿ ಮತ್ತು ಅವಿವೇಕದ ಶಕ್ತಿಗಳು ಅವರ ಮಾತನ್ನು ಮನ್ನಿಸದೆ, ವರ್ಣಭೇದಗಳು ಸಾಲವೋ ಎಂಬಂತೆ, ಅವಕ್ಕೆ ಅಸಂಖ್ಯ ಜಾತಿ-ಉಪಜಾತಿ-ಒಳಜಾತಿಗಳನ್ನು, ಅಸ್ಪೃಶ್ಯತೆಯನ್ನು ಜೋಡಿಸಿ ಸಾಮಾಜಿಕ ವಾತಾವರಣವನ್ನು ಬಹಳಷ್ಟು ಕಲುಷಿತಗೊಳಿಸಿದವು. ಇದರಿಂದ ಭಾರತೀಯ ಸಮಾಜ ಸತತವಾಗಿ ಛಿದ್ರ-ವಿಚ್ಛಿದ್ರವಾಗತೊಡಗಿತು. ಅಂಥ ಅಸಮಂಜಸ ಸಾಮಾಜಿಕ ವ್ಯವಸ್ಥೆಯ ಫಲಾನುಭವಿಗಳ ಮತ್ತು ಆಳರಸರ ಬೆಂಬಲದಿಂದ ಸಂಕುಚಿತ ದೃಷ್ಟಿಯ ಶಕ್ತಿಗಳದೇ ಕೈಮೇಲಾಗಿ, ಭಾರತೀಯ ಸಮಾಜವು ದುರ್ಬಲಗೊಂಡು, ನಮ್ಮ ದೇಶ ಶತ-ಶತಮಾನಗಳವರೆಗೆ ಪರಕೀಯರ ಪ್ರಭುತ್ವಕ್ಕೆ ಗುರಿಯಾಗಿ, ದಾಸ್ಯದ ವಿಶ್ವದಾಖಲೆಯನ್ನೇ ಸ್ಥಾಪಿಸುವಂತಾಯಿತು. ಪರಂಪರಾಗತ ಸಂಕುಚಿತ ಸಾಮಾಜಿಕ ಪರಿಸ್ಥಿತಿ ನಮ್ಮೀ ಆಧುನಿಕ ಕಾಲದವರೆಗೂ ಮುಂದುವರಿದು, ಅಧಿಕಾರ ದಾಹದ ಪೈಪೋಟಿಯಲ್ಲಿ ಹೊಸ-ಹೊಸ ರೂಪಗಳನ್ನು ತಾಳುತ್ತಿದೆ.

ನಿವೇದನೆಯ ಫಲವಾಗಿ, ಇಡೀ ರಾಜ್ಯಕ್ಕೆ ಯೋಜಿತ ಏಕರೂಪದ ಮುಝುರಾಯಿ ಕಾನೂನಿನ ಕರಡಿನಲ್ಲಿ ಸಾಮಾನ್ಯ ಹಿತದ ನಿಧಿ (ಕಾಮನ್ ಗುಡ್ ಫಂಡ್) ಏರ್ಪಡಿಸುವ ಬಗ್ಗೆ ಪ್ರಸ್ತಾವನೆಯನ್ನು ಸೇರಿಸಲಾಗಿದೆಯೆಂದು ತಿಳಿದಿದೆ. ಜಾಗತಿಕ ಮಹತ್ವದ ಸ್ಮಾರಕಗಳೆಂದು ಕರ್ನಾಟಕದಲ್ಲಿ ಹಂಪಿ ಮತ್ತು ಪಟ್ಟದಕಲ್ಲು ಇವೆರಡರನ್ನು ಮಾತ್ರ ಆರಿಸಲಾಗಿದೆ. ಆದರೆ, ಕರ್ನಾಟಕದಲ್ಲಿ ಹಲವಾರು ಊರುಗಳಲ್ಲಿರುವ ಉತ್ಕೃಷ್ಟ ಪ್ರಾಚ್ಯ ಕಟ್ಟಡಗಳು ಅಂಥ ಪಟ್ಟಿಗೆ ಸೇರಲು ಅರ್ಹವಾಗಿವೆ ಎಂಬುದನ್ನು ಸಂಬಂಧಪಟ್ಟವರು ಗಮನಿಸಿ ಪ್ರಯತ್ನಿಸಬೇಕಾಗಿದೆ. ಕಾಂಚೀಪುರ ಮತ್ತು ಪರಿಸರದಲ್ಲಿ ಯುನೆಸ್ಕೋದ ಆಶ್ರಯದಲ್ಲಿ ನಡೆದಂತಹ ಮಾನವಶಾಸ್ತ್ರೀಯ ಮತ್ತು ಪುರಾತತ್ವೀಯ ಸರ್ವೇಕ್ಷಣೆಯನ್ನು ಬನವಾಸಿ-ಬಳ್ಳಿಗಾವೆ ಭಾಗದಲ್ಲಿಯೂ ನಡೆಸಬೇಕೆಂದು ಕೇಂದ್ರ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದೇವೆ.

ಪ್ರೊ॥ ದೀಕ್ಷಿತರವರ ಇನ್ನೊಬ್ಬ ಪ್ರಮುಖ ಶಿಷ್ಯರಾದ, ಜನಪ್ರಿಯ ಪ್ರಾಧ್ಯಾಪಕ ಮತ್ತು ಶಿರಸಿಯವರೇ ಆದ ಡಾ॥ ಎ.ಕೆ. ಶಾಸ್ತ್ರಿ ಅವರು ಶೃಂಗೇರಿ, ಸ್ವರ್ಣವಲ್ಲೀ ಮಠಗಳನ್ನು ಕುರಿತು ವಿಶೇಷ ಅಧ್ಯಯನ-ಅನ್ವೇಷಣೆ ಮಾಡಿ ಸಾರ್ಥಕ ಮುಂಚೂಣಿಯ ಕಾರ್ಯವನ್ನು ಮಾಡಿದ್ದಾರೆ. ಕರ್ನಾಟಕದ ಅಂಥ ಅನೇಕ ಸಂಸ್ಥೆಗಳ ಬಗ್ಗೆ ಸಂಶೋಧನೆ ನಡೆಸಲು ಡಾ॥ ಶಾಸ್ತ್ರಿ ಅವರ ಸಾಧನೆ ಉತ್ತಮ ಮಾದರಿಯಾಗಿದೆ. ಇದೇ ಸೀಮೆಯವರಾದ ಡಾ॥ಎಚ್. ಆರ್. ರಘುನಾಥ ಭಟ್ ಅವರು ಶಾಸನಗಳು ಹಾಗು ವಾಸ್ತು ಮತ್ತು ಮೂರ್ತಿ ಶಿಲ್ಪಗಳ ಕ್ಷೇತ್ರಗಳಲ್ಲಿ ಅಸಾಮಾನ್ಯ ಸೇವೆ ಸಲ್ಲಿಸಿ ಪ್ರಖ್ಯಾತ ತಜ್ಞರಾಗಿದ್ದಾರೆ. ಅಲ್ಲದೆ, ಅವರು ಚತುರ ಚಿತ್ರ ಕಲಾವಿದರೂ ಆಗಿರುವ ಸವ್ಯಸಾಚಿ. ಆಂಧ್ರದ ಡಾ॥ ಪದ್ದಯ್ಯನವರು ಕರ್ನಾಟಕದ ವಿಜಾಪುರ-ಕಲುಬರ್ಗಿ ಜಿಲ್ಲೆಗಳಲ್ಲಿ ಪ್ರಾಗಿತಿಹಾಸ ಕ್ಷೇತ್ರದಲ್ಲಿ ಅಪ್ರತಿಮ ಕಾರ್ಯ ಮಾಡುತ್ತಿದ್ದಾರೆ. ಪ್ರಾಗಿತಿಹಾಸದ ಪುರಾತತ್ವ ಮತ್ತು ಇತಿಹಾಸದ ಪುರಾತತ್ವ ಇವೆರಡರಲ್ಲಿಯೂ ಡಾ॥ ಸುಂದರ ಅವರ ಸಿದ್ಧಿ ಮತ್ತು ವಿಶೇಷವಾಗಿ ನಾಣ್ಯಶಾಸ್ತ್ರದಲ್ಲಿ ಡಾ॥ಎ.ವಿ. ನರಸಿಂಹಮೂರ್ತಿ ಅವರ ನೈಪುಣ್ಯ ಅನುಪಮವಾಗಿವೆ. ಅವರ ಉದಾಹರಣೆಗಳಿಂದಾಗಿ, ಪ್ರಾಗಿತಿಹಾಸದ ಪುರಾತತ್ವಕ್ಕೆ ಮತ್ತು ನಾಣ್ಯಶಾಸ್ತ್ರಕ್ಕೆ ಇತ್ತೀಚೆಗೆ ಕೆಲವು ಯುವ ವಿದ್ವಾಂಸರು ಆಕರ್ಷಿತರಾಗಿದ್ದಾರೆ. ಕೀರ್ತಿಶೇಷ ಎನ್. ಲಕ್ಷ್ಮೀನಾರಾಯಣರಾವ್, ಪಂಚಮುಖಿ, ಪಿ.ಬಿ. ದೇಸಾಯಿ, ಗಾಯಿ, ಬಾ.ರಾ. ಗೋಪಾಲ್ ಅವರು ಶಾಸನಗಳ ಶ್ರೇಷ್ಠ ತಜ್ಞರಾಗಿದ್ದರು. ಡಾ॥ ಕೆ. ವಿ. ರಮೇಶ್, ಪ್ರೊ॥ ಶ್ರೀನಿವಾಸ ರಿತ್ತಿ, ಶ್ರೀ ಮಾಧವ ಕಟ್ಟಿ, ಡಾ॥ ಎಂ. ಎಂ. ಕಲಬುರ್ಗಿ, ಡಾ॥ ಷಡಕ್ಷರಯ್ಯ. ಡಾ॥ರಾಜಶೇಖರಪ್ಪ, ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ದೇವರಕೊಂಡಾರೆಡ್ಡಿ, ಡಾ॥ಶೇಷಶಾಸ್ತ್ರಿ, ಶ್ರೀ ಲಕ್ಷ್ಮಣ ತೆಲಗಾವಿ, ಸೀತಾರಾಮ ಜಾಗೀರದಾರ ಇವರು ಶಾಸನಶಾಸ್ತ್ರ ಮೊದಲಾದ ಆಯಾಮಗಳಲ್ಲಿ ಪರಿಶ್ರಮಿಸಿದ್ದಾರೆ. ಡಾ॥ ಎಸ್. ಶೆಟ್ಟರ್ ಅವರು ಕಲೆಗಳ ಇತಿಹಾಸದಲ್ಲಿ ಪ್ರಸಿದ್ಧ ಪರಿಣತರು.

ಕರ್ನಾಟಕದಲ್ಲಿ ಕೇಂದ್ರ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಎರಡನೆಯ ವೃತ್ತ ಧಾರವಾಡದಲ್ಲಿ ರಚನೆಯಾಗಬೇಕೆಂಬ ಬಹುದಿನಗಳ ಬೇಡಿಕೆ ಇತ್ತೀಚೆಗಷ್ಟೇ ಈಡೇರಿದೆ. ಬೆಂಗಳೂರು ಮತ್ತು ಧಾರವಾಡಗಳಲ್ಲಿ ಅವುಗಳ ಅಧೀಕ್ಷಕ - ಪುರಾತತ್ವಜ್ಞರಾದ ಡಾ॥ ಕೆ.ಪಿ. ಪೂಣಚ್ಚ ಮತ್ತು ಡಾ॥ ಕೆ.ಎಂ. ಭದ್ರಿ ಅವರು ಕರ್ನಾಟಕದ ವಿಶೇಷ ಅವಶ್ಯಕತೆಗಳನ್ನು ಪರಿಗಣಿಸಿ, ಸಾಕಷ್ಟು ಅನುಕೂಲತೆಗಳನ್ನು ಪಡೆದುಕೊಂಡು ಇವರೆಡೂ ವೃತ್ತಗಳಲ್ಲಿ ಕಾರ್ಯಗಳು ತ್ವರಿತಗತಿಯಿಂದ ಸಾಗುವಂತೆ ಮಾಡುವರೆಂದು ನಿರೀಕ್ಷಿಸುವುದು ಸಹಜ. ರಾಜ್ಯ ಪುರಾತತ್ವ ಮತ್ತು ವಸ್ತು-ಸಂಗ್ರಹಾಲಯಗಳ ಇಲಾಖೆಯು ಇತ್ತೀಚಿಗಿನ ವರ್ಷಗಳಲ್ಲಿ ಡಾ॥ ಡಿ.ವಿ. ದೇವರಾಜ್ ಅವರ ಚೈತನ್ಯ ಶೀಲ ನೇತೃತ್ವದಲ್ಲಿ ಅನೇಕ ಶ್ಲಾಘನೀಯ ಕಾರ್ಯಗಳನ್ನು ಮಾಡಿದೆ. ಈಗ ಶ್ರೀ ಎಂ.ಎಲ್. ಶಿವಶಂಕರ್ ಅವರ ಉತ್ಸಾಹೀ ಮಾರ್ಗದರ್ಶನದಲ್ಲಿ ಅದು ಉತ್ತಮ ಪ್ರಗತಿಯನ್ನು ಸಾಧಿಸುವ ನಿರೀಕ್ಷೆ ಇದೆ. ಕೇಂದ್ರದ ಮತ್ತು ರಾಜ್ಯದ ಇವೆರಡೂ ಇಲಾಖೆಗಳು ಪರಸ್ಪರ ಸಹಯೋಗದಿಂದ, ಇತರ ತಜ್ಞರ ಸಹಕಾರದಿಂದ ಶೀಘ್ರವಾಗಿ ಮುನ್ನಡೆಯಬೇಕಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಇಲಾಖೆಗಳಿಗೆ ಹಾಗು ರಾಜ್ಯ ಪತ್ರಾಗಾರ ಇಲಾಖೆಗೆ ಸಾಕಷ್ಟು ಹಣವನ್ನು, ತಾಂತ್ರಿಕ ಸಿಬ್ಬಂದಿಯನ್ನು ಒದಗಿಸಬೇಕೆಂದು ಸಂಘ-ಸಂಸ್ಥೆಗಳು ಒತ್ತಡ ತರಬೇಕು. ಬೆಂಗಳೂರಿನಲ್ಲಿ ಪತ್ರಾಗಾರ, ಗ್ಯಾಸೆಟಿಯರ್, ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಇತ್ಯಾದಿ ಇಲಾಖೆಗಳಿಗೆಲ್ಲ ಸೇರಿ ಒಂದು ಪ್ರತ್ಯೇಕ ಕಟ್ಟಡವನ್ನು ನಿರ್ಮಿಸಿ ಕೊಟ್ಟರೆ ಅನುಕೂಲಕರವಾಗುತ್ತದೆ. ಬೆಂಗಳೂರಿನ ಮಿಥಿಕ್ ಸೊಸೈಟಿ, ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರ, ಕರ್ನಾಟಕ ಹಿಸ್ಟರಿ ಕಾಂಗ್ರೆಸ್, ಮೈಸೂರು, ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಧಾರವಾಡ., ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು ಮುಂತಾದವು ಇತಿಹಾಸ-ಸಂಸ್ಕೃತಿ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದು ಅವಕ್ಕೆ ಆವಶ್ಯಕ ಬೆಂಬಲ ನೀಡಬೇಕು.

ವ್ಯಾಪಕ ಪ್ರಮಾಣದಲ್ಲಿ ಕರ್ನಾಟಕದ ಇತಿಹಾಸವನ್ನು ಹಲವು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಯೋಜನೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಮೂಲಕ ಕಾರ್ಯಗತವಾಗುತ್ತಿದೆಯಷ್ಟೆ. ವಿಶ್ವಕೋಶಗಳನ್ನು ಹೇಗೆ ಆಗಾಗ ಪರಿಷ್ಕರಿಸಿ ಪ್ರಕಟಿಸುತ್ತಾರೋ ಆ ರೀತಿಯಲ್ಲಿ ನಿಪುಣರ ನೆರವಿನಿಂದ ನಿಯತ ಕಾಲಾವಧಿಯಲ್ಲಿ ಈ ಸಂಪುಟಗಳ ಹೊಸ ಆವೃತ್ತಿಗಳನ್ನು ತರುವ ಪರಿಪಾಟ ಆವಶ್ಯಕ.

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಶಾಸನಗಳ ಬಗ್ಗೆ ಸಾದ್ಯಂತ ಸರ್ವೇಕ್ಷಣೆ ಮಾಡಿ ಅವನ್ನೆಲ್ಲ ಸಂಪುಟಗಳಲ್ಲಿ ಪ್ರಕಟಪಡಿಸುವ ಯೋಜನೆ ತ್ವರಿತವಾಗಿ ಅನುಷ್ಠಾನಕ್ಕೆ ಬರುವಂತೆ ಕ್ರಮಗಳನ್ನು ಕೈಗೊಳ್ಳುವಲ್ಲಿ ಇನ್ನು ತಡವಾಗಬಾರದು. ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ರಕ್ಷಿತ ಎಲ್ಲ ಪ್ರಾಚ್ಯವಸ್ತುಗಳ ಕೈಪಿಡಿಗಳನ್ನು ತಯಾರಿಸುವ ಕಾರ್ಯವನ್ನು ದಕ್ಷ ಸಂಸ್ಥೆಗಳಿಗೆ ವಹಿಸಿ, ಅವು ಬೇಗನೆ ಬೆಳಕು ಕಾಣುವಂತೆ ನೋಡಿಕೊಳ್ಳಬೇಕಾದದ್ದು ಅತಿ ಅಗತ್ಯ. ಇತಿಹಾಸ ಮತ್ತು ಪುರಾತತ್ವಗಳ ಬೋಧನೆಯಲ್ಲದೆ, ಸಂಶೋಧನೆಗೆ ಮಾರ್ಗದರ್ಶನ ಮಾಡುವ ಗುರುತರ ಹೊಣೆಗಾರಿಕೆಯೂ ವಿಶ್ವವಿದ್ಯಾಲಯಗಳ ವಿಭಾಗಗಳದ್ದೇ ಆಗಿರುವುದರಿಂದ, ಅವು ಕ್ಷೇತ್ರ-ಕಾರ್ಯಗಳನ್ನು ಕೈಗೊಳ್ಳುವುದು ಅನಿವಾರ್ಯ. ವಿಶ್ವವಿದ್ಯಾಲಯಗಳ ವಿಭಾಗಗಳ, ಕೇಂದ್ರ ಮತ್ತು ರಾಜ್ಯ ಪುರಾತತ್ವ ಇಲಾಖೆಗಳ ಹಾಗು ರಾಜ್ಯ ಪತ್ರಾಗಾರ ಇಲಾಖೆಯ ಪ್ರತಿನಿಧಿಗಳನ್ನೊಳಗೊಂಡ ಒಂದು ಸ್ಥಾಯಿ ಅಳವಡಿಕೆ ಸಮಿತಿಯನ್ನು ರಚಿಸಿದರೆ ಪ್ರಯೋಜನಕರವಾದೀತು. ರಾಜ್ಯದಲ್ಲಿ ಇತಿಹಾಸ ಮತ್ತು ಪುರಾತತ್ವಗಳ ವಿವಿಧ ಆಯಾಮಗಳಲ್ಲಿ ಇದುವರೆಗೆ ಆಗಿರುವ ಕಾರ್ಯಗಳನ್ನು ಅವಲೋಕಿಸಿ, ಮುಂದಿನ ಹತ್ತು ವರ್ಷಗಳ ಅವಧಿಯಲ್ಲಿ ನಿರೀಕ್ಷಿಸಬಹುದಾದ ಮುನ್ನೋಟವನ್ನು ಸುಮಾರು ಆರು ತಿಂಗಳಲ್ಲಿ ತಯಾರಿಸಲು ರಾಜ್ಯ ಸರ್ಕಾರವು ಕೂಡಲೆ ಒಂದು ಸಮಿತಿಯನ್ನು ರಚಿಸಬೇಕೆಂದು ಸೂಚನೆ. ವಿಶ್ವವಿದ್ಯಾಲಯಗಳಿಂದ ಸ್ವೀಕೃತವಾದ ಅನೇಕ ಉತ್ತಮ ಉಪಯೋಗಕಾರಿ ಸಂಪ್ರಬಂಧಗಳು ಪ್ರಕಟವಾಗದೆ ಉಳಿದಿವೆಯಾದ್ದರಿಂದ, ಈ ಬಗ್ಗೆಯೂ ಸಂಬಂಧಪಟ್ಟವರು ಲಕ್ಷ್ಯ ಕೊಡಬೇಕಾಗಿದೆ. ಐತಿಹಾಸಿಕ ಅಂಶಗಳನ್ನು ಒಳಗೊಂಡ ಅಥವಾ ಐತಿಹಾಸಿಕ ಘಟನೆಗಳನ್ನು ಪರೋಕ್ಷವಾಗಿ ಇಲ್ಲವೆ ಅಪರೋಕ್ಷವಾಗಿ ಉಲ್ಲೇಖಿಸಿರುವ ಯಾವುದೇ ಹೊತ್ತಗೆಗಳನ್ನು ಪಠ್ಯಪುಸ್ತಕಗಳನ್ನಾಗಿ ಗೊತ್ತುಮಾಡುವ ಮುನ್ನ ಇತಿಹಾಸ-ಪರಿಣತರ ಸಮಿತಿಯು ಅವನ್ನು ಕೂಲಂಕಷವಾಗಿ ಪರಿಶೀಲಿಸುವಂತೆ ವ್ಯವಸ್ಥೆಯಾಗಬೇಕು. ಇತಿಹಾಸ ಮತ್ತು ಪುರಾತತ್ವಗಳ ಅಧ್ಯಯನವಲ್ಲದೆ ಸಂಶೋಧನಗಳು ನಡೆಯುವುದು ಸಮಾಜಕ್ಕೆ ಹಲವು ರೀತಿಗಳಲ್ಲಿ ಪ್ರಯೋಜನಕರವಾದ್ದರಿಂದ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆ ಬಗ್ಗೆ ಆವಶ್ಯಕ ಹಣವನ್ನು ಮಂಜೂರು ಮಾಡುವುದಕ್ಕೆ ಹಿಂಜರಿಯಬಾರದು.

ಈ ವಿಶಾಲ ಕ್ಷೇತ್ರದಲ್ಲಿ ಜ್ಞಾನ ಮತ್ತು ಅನುಭವಗಳಿಂದ ಪಕ್ವರಾದ ಪ್ರಾಜ್ಞರು ಕರ್ನಾಟಕದಲ್ಲಿ ಅನೇಕ ಮಂದಿ ಇದ್ದಾರೆ - ಪ್ರೊ॥ ದೀಕ್ಷಿತ್, ಎಸ್.ಆರ್. ರಾವ್, ದೇಶಿಕಾಚಾರ್, ಎ. ಸುಂದರ, ಶ್ರೀನಿವಾಸ ರಿತ್ತಿ. ಕೆ.ವಿ. ರಮೇಶ್, ಷೇಕ್ ಅಲಿ, ಷಡಾಕ್ಷರಪ್ಪ ಶೆಟ್ಟರ್, ಎಂ.ಎಸ್. ನಾಗರಾಜರಾವ್, ಆರ್.ಸಿ. ಹಿರೇಮಠ, ಚಿದಾನಂದಮೂರ್ತಿ, ಎಂ. ಎಂ. ಕಲಬುರ್ಗಿ, ಎಸ್.ಕೆ. ಜೋಶಿ, ಶ್ರೀನಿವಾಸ ಹಾವನೂರ್, ಸೂರ್ಯನಾಥಕಾಮತ್, ಎ. ವಿ. ನರಸಿಂಹಮೂರ್ತಿ, ಎಂ. ವಿ. ಶ್ರೀನಿವಾಸ, ಎಲ್. ಕೆ. ಶ್ರೀನಿವಾಸನ್, ಟಿ. ವಿ. ವೆಂಕಟರತ್ನಂ, ಮಾಧವ, ಕಟ್ಟಿ, ವಸಂತಮಾಧವ, ಡಿ. ವಿ. ದೇವರಾಜ್, ನಾಗರಾಜು, ಸಿಂದಗಿರಾಜಶೇಖರ್, ಜ್ಯೋತ್ಸ್ನಾಕಾಮತ್, ಶಾಂತಕುಮಾರಿ ಮುಂತಾದವರು. ಇತಿಹಾಸ-ಪ್ರೇಮಿಗಳು ಅವರಲ್ಲಿಗೆ ಹೋಗಿ, ಉಪನಿಷದ್ ರೀತಿಯಲ್ಲಿ ಅವರ ಬಳಿ ಕುಳಿತು ಕಲಿಯುವುದು ಬಹಳಷ್ಟಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ದಿವಂಗತ ಪ್ರೊ॥ ಲಿಂಗೇಶಶರ್ಮ, ಬಿ.ಎಚ್. ಶ್ರೀಧರ, ಎಮ್. ಆರ್. ಆನವಟ್ಟಿ ಮೊದಲಾದವರು ಶ್ರೀಪಾದ ಕಡವೆ ಹೆಗಡೆ ಅವರ ಸಹಾಯದಿಂದ, ಬಾ.ರಾ. ಗೋಪಾಲ್ ಅವರ ಸಲಹೆ ಪಡೆದು ಇತಿಹಾಸ-ಪುರಾತತ್ವ ವಿಷಯದಲ್ಲಿ ಮತ್ತಷ್ಟು ಸೇವೆ ಸಲ್ಲಿಸಬೇಕೆಂಬ ಹಂಬಲವುಳ್ಳವರಾಗಿದ್ದರು. ಇಲ್ಲಿ ಶ್ರೀ ಕಡವೆ ಹೆಗಡೆ ಸ್ಮಾರಕ ಕಲ್ಯಾಣ ಮಂಟಪದಲ್ಲೇ ಈ ಅಖಿಲ ಕರ್ನಾಟಕ ಇತಿಹಾಸ ಸಮ್ಮೇಳನವು ನಡೆಯುತ್ತಿರುವುದು ಅವರುಗಳ ಕನಸನ್ನು ನನಸು ಮಾಡಿದೆಯೆಂದು ಹೇಳಬಹುದು.

''ಸಮವಾಯ ಏವ ಸಾಧುಃ'' ಎಂದು ಬಂಡೆಗಳ ಮೇಲೆ ಕೊರೆಯಿಸಿ ಸಾರಿದ ಮಹಾನ್ ಅಶೋಕನ ಉಕ್ತಿ, ವಿಶ್ವಕವಿ ಕಾಳಿದಾಸನ ಉದ್ಗಾರಕ್ಕೆ ನಮ್ಮದನ್ನೂ ಸೇರಿಸಿಕೊಂಡು ''ಪುರಾಣಮಿತ್ಯೇವ ನ ಸಾಧು ಸರ್ವಂ, ನವೀನ ಮಿತ್ಯೇವ ಚ ನ ಸಾಧು ಸರ್ವಂ'' ಎಂಬುದು, ಕನ್ನಡದ ಆದಿ ಕವಿ ಪಂಪನ ''ಮನುಷ್ಯಜಾತಿ ತಾನೊಂದೆ ವಲಂ'' ಎಂಬ ಹೇಳಿಕೆ ನಮಗೆ ದಿಕ್ ಸೂಚಿಯಾಗಲಿ. ನಮ್ಮ ಭಾರತ ದೇಶಕ್ಕೆ, ಮಹಾಕವಿ ಕುವೆಂಪು ಹಾಡಿದಂತೆ 'ಭಾರತ ಜನನಿಯ ತನುಜಾತೆ'ಯಾದ ಕರ್ನಾಟಕಕ್ಕೆ ನಮ್ಮ ಅಳಿಲು ಸೇವೆಯನ್ನು ಸದಾ ಸಲ್ಲಿಸೋಣ. ಈ ಅಖಿಲ ಕರ್ನಾಟಕ ಇತಿಹಾಸ ಸಮ್ಮೇಳನವನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ಸಹಯೋಗದಿಂದ ಶಿರಸಿ-ಸೋಂದಾಗಳಲ್ಲಿ ಆಪ್ಯಾಯಮಾನವಾಗಿ ಸಂಘಟಿಸಿರುವ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಸರ್ವಜ್ಞೇಂದ್ರ ಸರಸ್ವತಿ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಸ್ವಾಮಿಗಳವರಿಗೆ, ಅಧ್ಯಕ್ಷರಾದ ಶ್ರೀ ಜಿ.ಎಸ್. ಹೆಗಡೆ ಅಜ್ಜೀಬಳ, ಕಾರ್ಯಾಧ್ಯಕ್ಷರಾದ ಶ್ರೀ ಜಿ.ವಿ. ಜೋಶಿ ಕಾಗೇರಿ, ಉಪಾಧ್ಯಕ್ಷರುಗಳಾದ ಶ್ರೀ ಜಿ.ಟಿ. ಹೆಗಡೆ ತಟ್ಟೀಸರ, ಶ್ರೀ ಶಾಂತಾರಾಮ್ ಹೆಗಡೆ ಶೀಗೇಹಳ್ಳಿ, ಶ್ರೀ ಜಿ.ಎಂ. ಹೆಗಡೆ ಹುಳಗೋಳ ಮತ್ತು ಶ್ರೀ ವಿ.ಎಸ್. ಸೋಂದೆ, ಪ್ರಧಾನ ಕಾರ್ಯದರ್ಶಿಗಳಾದ ಡಾ॥ ಎ.ಕೆ. ಶಾಸ್ತ್ರಿ ಕಾರ್ಯದರ್ಶಿಗಳಾದ ಶ್ರೀ ಎಂ. ಎಸ್. ಪ್ರಭು ಮತ್ತು ಶ್ರೀ ಆರ್. ಎಸ್. ಹೆಗಡೆ ಭೈರುಂಬೆ, ಮತ್ತು ಅವರೊಡನೆ ಸಹಕರಿಸಿದ ಸಮಸ್ತ ಸಜ್ಜನರಿಗೆ, ಸನ್ಮಾನ್ಯ ಸಚಿವೆಯರಾದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಲೋಕಸಭಾ ಸದಸ್ಯರಾದ ಮಾನ್ಯ ಶ್ರೀ ಅನಂತಕುಮಾರ

ಹೆಗಡೆ, ಶಾಸಕರಾದ ಮಾನ್ಯಶ್ರೀ ಪ್ರೇಮಾನಂದ ಜೈವಂತ್ ಮತ್ತು ಮಾನ್ಯ ಶ್ರೀ ವಿಶ್ವೇಶ್ವರಹೆಗಡೆ ಕಾಗೇರಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಕರ್ನಾಟಕ ಇತಿಹಾಸ ಅಕಾದೆಮಿಯ ಗೌರವಾಧ್ಯಕ್ಷರಾದ ಪ್ರೊ॥ ಜಿ. ಎಸ್. ದೀಕ್ಷಿತ್, ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್, ಉಪಾಧ್ಯಕ್ಷರಾದ ಪ್ರೊ॥ ಎಂ.ಜಿ. ನಾಗರಾಜ್, ಪ್ರಧಾನ ಕಾರ್ಯದರ್ಶಿಗಳಾದ ಡಾ॥ ಎಚ್.ಎಸ್. ಗೋಪಾಲರಾವ್, ಕರ್ನಾಟಕ ಗ್ಯಾಸೆಟಿಯರ್‌ಗಳ ಮುಖ್ಯ ಸಂಪಾದಕರೂ, ಅಕಾದೆಮಿಯ ಕೋಶಾಧಿಕಾರಿಗಳೂ ಆದ ಶ್ರೀ ಎಂ.ಬಿ. ಪಾಟೀಲ್, ''ಇತಿಹಾಸ ದರ್ಶನ''ದ ಸಹ-ಸಂಪಾದಕರಾದ ಶ್ರೀ ಪಿ. ವಿ. ಕೃಷ್ಣಮೂರ್ತಿ, ಕಾರ್ಯಕರ್ತರಾದ ಶ್ರೀವೇಮಗಲ್ ಸೋಮಶೇಖರ್ ಮುಂತಾದವರಿಗೆ, ಪತ್ರಕರ್ತರು ಮತ್ತು ಪತ್ರಿಕಾಪ್ರತಿನಿಧಿಗಳಿಗೆ, ಬೇಸರವಿಲ್ಲದೆ ಭಾಷಣ ಕೇಳಿದ ತಮಗೆಲ್ಲ ಮನಸಾರೆ ಧನ್ಯವಾದಗಳನ್ನು ಅರ್ಪಿಸಿ, ನನ್ನೀ ಮಾತುಗಳನ್ನು ಮುಗಿಸುತ್ತೇನೆ.



## ಶ್ರದ್ಧಾಂಜಲಿ

ಕಳೆದ ಸಾಲಿನಲ್ಲಿ ವೈಚಾರಿಕ-ವೈದುಷ್ಯದ, ರಾಷ್ಟ್ರೀಯ ದೃಷ್ಟಿಯ, ನಾಡ ಕುರಿತು ಕಾಳಜಿಯ ಹಾಗು ಮೇಲಿನ ಕಳಕಳಿಯ ಪ್ರೀತಿಯ ದನಿಗಳನ್ನಾಡಿದ ಕೆ.ಅಭಿಶಂಕರ್ ಅವರು ಈಗ ನಮ್ಮೊಡನಿಲ್ಲ. ಅದಾಗಿ ಅವರ ಆತ್ಮಕ್ಕೆ ಶಾಂತಿ ಕೋರುತ್ತ 'ಇತಿಹಾಸ ದರ್ಶನದ' ಶ್ರದ್ಧಾಂಜಲಿ:

ಎಪ್ಪತ್ತಾರು ವಸಂತಗಳನ್ನು ಕಂಡಿದ್ದ ದಿ॥ ಕೆ. ಅಭಿಶಂಕರ್ ಅವರು ಬನವಾಸಿಯಲ್ಲಿಹುಟ್ಟಿದ್ದು ಅಕ್ಟೋಬರ್ ೧೯೨೧ ರಲ್ಲಿ. ಭಾರತದ ವಿವಿಧ ವಿಶ್ವವಿದ್ಯಾಲಯಗಳಲ್ಲಿ [ಬಿ. ಎ. ( ಉತ್ಕಲ ), ಎಂ. ಎ. ( ಭಾಗಲ್‌ಪುರ-ಬಿಹಾರ ), ಬಿ. ಲಿಟ್ ( ಆಗ್ರಾ )] ಓದಿ ಪದವಿಗಳನ್ನು ಪಡೆದ ಅವರು 'ಸಾಹಿತ್ಯ ರತ್ನ', 'ಸಂಪಾದನಾ ಕಲಾ ವಿಶಾರದ'ರೂ ಆಗಿದ್ದರು. ಕರ್ನಾಟಕ ಗಾಂಧಿ ಎನಿಸಿದ್ದ ಹರ್ಡೇಕರ್ ಮಂಜಪ್ಪ ಅವರ ಸೋದರ ಸಂಬಂಧಿಯಾಗಿ ಸಂಪರ್ಕವಿದ್ದ ಅವರು ತಿಮ್ಮಪ್ಪನಾಯಕ, ಸ್ವಾಮಿ ರಮಾನಂದ ತೀರ್ಥರ ಸಂಪರ್ಕಗಳಿಂದಾಗಿ ರಾಷ್ಟ್ರೀಯ ಆಂದೋಳನಗಳಲ್ಲಿ ಪಾಲ್ಗೊಂಡು ಖಾದಿ, ಹರಿಜನ ಸೇವೆ, ಅರಣ್ಯ ಸತ್ಯಾಗ್ರಹಗಳಲ್ಲಿ ತೊಡಗಿದ್ದರು. 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಭಾಗವಹಿಸಲೆಂದೇ ಸುಭದ್ರ ಸರ್ಕಾರಿ ನೌಕರಿಯನ್ನು ತ್ಯಜಿಸಿ ಬಂದವರು. ಆಗ್ರಾ ವಿಶ್ವವಿದ್ಯಾಲಯದಲ್ಲಿ ಭಾರತ ಸಂಪರ್ಕ ಭಾಷಾ ಪರಂಪರೆಯ ಕುರಿತು ಸಂಶೋಧನೆ, ಗಾಂಧೀಜಿ ಕುರಿತ ಕೃತಿ ರಚನೆ, ಕರ್ನಾಟಕ ಗ್ಯಾಸೆಟಿಯರ್‌ನ ಪ್ರಧಾನ ಸಂಪಾದಕತ್ವ ( ೧೯೭೫-೮೧ ), ಇವರ ಸಾಧನೆಯ ಹೆಜ್ಜೆಗಳಾಗಿವೆ. ಇತಿಹಾಸೋ-ಸಾಂಸ್ಕೃತಿಕ ಕೇಂದ್ರವಾದ ಬನವಾಸಿ ಅಭ್ಯುದಯ ಸಮಿತಿ ಎಂಬ ಸ್ವಯಂ ಸೇವಾ ಸಮಿತಿಯ ಸಂಚಾಲಕರಾಗಿ ಗ್ರಾಮ ಸಮೂಹದ ಪುನರುಜ್ಜೀವನ ಕಾರ್ಯದಲ್ಲಿ ೧೯೮೨ರಿಂದ ತೊಡಗಿಕೊಂಡಿದ್ದರು. ಪ್ರತಿಷ್ಠಿತ ಇತಿಹಾಸ ಹಾಗು ಸಾಂಸ್ಕೃತಿಕ ಸಂಸ್ಥೆಗಳ ಸದಸ್ಯರಾಗಿದ್ದರು. ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ವಿದ್ವತ್‌ಗೋಷ್ಠಿಗಳಲ್ಲಿ ಇತಿಹಾಸ-ಸಂಸ್ಕೃತಿ ಸಂಶೋಧನಾತ್ಮಕ ಪ್ರಬಂಧಗಳನ್ನು ಬಹಳಷ್ಟು ಮಂಡಿಸಿದ್ದರು. ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನದ ಹಾಗು ಕೆಳದಿ ಮ್ಯೂಸಿಯಂ-ಸಂಶೋಧನ ಸಂಸ್ಥೆಯ ವಿಶ್ವಸ್ಥ ಮಂಡಲಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದರು. ಅಕಾದೆಮಿಯ ಉಪಾಧ್ಯಕ್ಷರಾಗಿಯೂ ಸೇವೆಸಲ್ಲಿಸಿದ್ದರು. ಈ ಎಲ್ಲ ಸಕ್ರಿಯ ವಂತಿಕೆಯ ಹಿಂದೆ ಶ್ರೀಮತಿ ವಿಶಾಲಾಕ್ಷಿ ಅಭಿಶಂಕರ್ ಅವರ ಸದ್ದುಗದ್ದಲವಿಲ್ಲದ ಸಹಕಾರವಿತ್ತು.

ಕೆ. ಅಭಿಶಂಕರ್ ಅವರ ಕೈಕೆಳಗೆ ಕೆಲಸ ಮಾಡಿ ನಿಕಟ ಸಂಪರ್ಕವನ್ನು ಅವರ ನಿವೃತ್ತಿಯ ನಂತರವೂ ಉಳಿಸಿಕೊಂಡಿದ್ದ ಕರ್ನಾಟಕ ಗ್ಯಾಸೆಟಿಯರ್‌ನ ನಿವೃತ್ತ ಮುಖ್ಯಸಂಪಾದಕ( ಪ್ರಭಾರ )ರಾದ ಶ್ರೀ ಎಂ. ಬಿ. ಪಾಟೀಲ್ ಅವರು ತಿಳಿಸಿದಂತೆ: *ಅಭಿಶಂಕರ್ ಅವರು 'ಕರ್ನಾಟಾಲಜಿ' ಎಂಬ ಗ್ರಂಥಭಂಡಾರವನ್ನು ಸ್ಥಾಪಿಸಿದರು. ಸ್ವಂತ ಗ್ರಂಥಭಂಡಾರ ಹಾಗು ಮಾಹಿತಿ ಕಡತಗಳು ಸಂಶೋಧನ ವಿದ್ಯಾರ್ಥಿಗಳ ಉಪಯೋಗಕ್ಕಾಗುವಂತೆ ಕುಟುಂಬದ ಟ್ರಸ್ಟ್‌ನ ಸಂಸ್ಥಾಪನೆ ಅವರ ಕನಸಾಗಿತ್ತು. ತಮಿಳುನಾಡಿನ ಗಾಂಧಿ ಗ್ರಾಮದ ಮಾದರಿ ಅನುಸರಿಸಿ ಬನವಾಸಿ ಗ್ರಾಮೀಣ ವಿಶ್ವವಿದ್ಯಾಲಯವನ್ನು ಕಟ್ಟಬೇಕೆಂಬ ಕನಸೂ ಅವರದಾಗಿ ಆ ದಿಸೆಯಲ್ಲಿ ಪ್ರಯತ್ನ ಮಾಡಿದ್ದರು.*

ಈ ಕನಸುಗಳೆಲ್ಲ ನನಸಾಗಿ ನಿಷ್ಪತ್ತಿಯ ಹಣ್ಣಾಗಿ ತೊಟ್ಟು ಕಳಚಿ ಬೀಳುವ ಮುನ್ನ ೧೦.೯.೧೯೯೮ರಂದು ಅವರನ್ನು ಶಿವ ತನಗೆ ಬೇಕೆಂದು ಎತ್ತಿಕೊಂಡುಬಿಟ್ಟ.

– ಸಂಪಾದಕರು

ಡಾ॥ ಪುಂಡಿಕ್ಕಾ ಗಣಪಯ್ಯ ಭಟ್ *

# ತುಳುನಾಡಿನಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಯ ಕುರುಹುಗಳು

ಕರ್ನಾಟಕದಲ್ಲಿ ಇತಿಹಾಸಪೂರ್ವ ಸಂಸ್ಕೃತಿಗಳ ಸಂಶೋಧನೆ ಸುಮಾರು ಒಂದು ಶತಮಾನಕ್ಕಿಂತಲೂ ಹಿಂದೆಯೇ ಪ್ರಾರಂಭವಾಗಿದ್ದರೂ ಕರ್ನಾಟಕದ ಕರಾವಳಿ ಪ್ರದೇಶವಾದ ತುಳುನಾಡಿನಲ್ಲಿ ಇತ್ತೀಚಿನ ತನಕವೂ ಈ ಕುರಿತ ಯಾವುದೇ ರೀತಿಯ ಶೋಧನೆಗಳಾಗಿರಲಿಲ್ಲ. ಈ ಪ್ರದೇಶದಲ್ಲಿ ಮೊದಲ ಮಾನವನು ಎಂದು ಕಾಣಿಸಿಕೊಂಡ? ಇದು ಇತ್ತೀಚಿನ ತನಕವೂ ಪ್ರಶ್ನೆಯಾಗಿಯೇ ಉಳಿದಿದ್ದ ವಿಚಾರ. ತುಳುನಾಡಿನಲ್ಲಿ ಕ್ರಮಬದ್ಧವಾದ ಪುರಾತತ್ವ ಶೋಧನೆ, ಸಂಶೋಧನೆಗಳು ನಡೆಯದಿದ್ದುದರ ಕೊರತೆಯನ್ನು ಮನಗಂಡ ವಿದ್ವಾಂಸರು ''ಪುರಾತತ್ವ ಸಂಶೋಧಕನ ಸಲಿಕೆಯು ತುಳುನಾಡಿನ ಮಣ್ಣನ್ನು ಈತನಕ ಅಗೆದಿಲ್ಲವೆಂಬುದು ವಿಷಾದನೀಯವೇ ಸರಿ'' ಎಂದು ಕಳವಳಿಸಿದ್ದಿದೆ. *೧ ಆದರೆ ಕಳೆದ ಸುಮಾರು ಮೂರು ದಶಕಗಳಿಂದೀಚೆಗೆ ತುಳುನಾಡಿನ ಪೂರ್ವೇತಿಹಾಸದ ಮೇಲೆ ಬೆಳಕು ಚೆಲ್ಲಬಲ್ಲ ಕೆಲವು ಶೋಧನೆಗಳು ನಡೆದ ಫಲವಾಗಿ ತುಳುನಾಡಿನ ಹಲವೆಡೆಗಳಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಯ ಕುರುಹುಗಳು ಬೆಳಕಿಗೆ ಬಂದಿವೆ. *೨ ಈ ತನಕ ಸುಮಾರು ೩೦ರಷ್ಟು ಸ್ಥಳಗಳಲ್ಲಿ ಬೃಹತ್ ಶಿಲಾಯುಗದ ಅವಶೇಷಗಳು ಪತ್ತೆಯಾಗಿವೆ. ಈ ಕುರಿತು ಇನ್ನೂ ವ್ಯಾಪಕವಾದ ಅನ್ವೇಷಣೆ ಹಾಗೂ ವಿಸ್ತೃತವಾದ ಅಧ್ಯಯನವು ನಡೆಯಬೇಕಿದೆ.

ತುಳುನಾಡಿನಲ್ಲಿ ಈತನಕ ಪತ್ತೆಯಾಗಿರುವ ಅವಶೇಷಗಳು ಬೃಹತ್ ಶಿಲಾಯುಗದ ಸಮಾಧಿಗಳು ಮಾತ್ರ. ಈ ಯುಗದ ಮಾನವನ ವಾಸದ ನೆಲೆಗಳಿನ್ನೂ ಈ ಪ್ರದೇಶದಲ್ಲಿ ಬೆಳಕು ಕಂಡಿಲ್ಲ. ಈತನಕ ತುಳುನಾಡಿನ ವಿವಿಧ ಕಡೆಗಳಲ್ಲಿ ಕಂಡು ಬಂದಿರುವ ಬೃಹತ್ ಶಿಲಾಯುಗದ ಸಮಾಧಿಗಳೂ ಈ ಪ್ರದೇಶದಲ್ಲಿ ಕಬ್ಬಿಣಯುಗದ ಸಂಸ್ಕೃತಿಯ ಅಸ್ತಿತ್ವವನ್ನು ಸ್ಥಿರಪಡಿಸಿವೆ ಎನ್ನಬಹುದು. ಈತನಕ ಬೆಳಕಿಗೆ ಬಂದಿರುವ ಈ ಬೃಹತ್ ಶಿಲಾಸಮಾಧಿಗಳನ್ನು ಮುಖ್ಯವಾಗಿ ಮೂರು ವಿಧದವುಗಳನ್ನಾಗಿ ವರ್ಗೀಕರಿಸಬಹುದು: ೧) **ಶಿಲಾಕೋಣೆ ಸಮಾಧಿಗಳು** (Chamber Tombs). ೨) **ಮೃತ್ಪಾತ್ರೆ ಸಮಾಧಿಗಳು** (Urn burials). ಮತ್ತು ೩) ಲಾಟರೈಟ್ ಕಲ್ಲಿನಲ್ಲಿ ಕೊರೆದು ನಿರ್ಮಿಸಲಾದ **ಗುಹಾಸಮಾಧಿಗಳು** (Rock-cut caves).

### ಶಿಲಾಕೋಣೆ ಸಮಾಧಿಗಳು

ತುಳುನಾಡಿನಲ್ಲಿ ಇಂತಹ ರಚನೆಗಳು ಪ್ರಥಮಬಾರಿಗೆ ಬೆಳಕಿಗೆ ಬಂದದ್ದು ಬಂಟ್ವಾಳ ತಾಲೂಕಿನ ಬಡಗ ಕಜೆಕಾರಿನಲ್ಲಿ. *೩ ಕುಂದಾಪುರ ತಾಲೂಕಿನ ಬೇಳೂರು, ಕಾರ್ಕಳ ತಾಲೂಕಿನ ಬೋರ್ಕಟ್ಟೆ ಮತ್ತು ಕೊಣಾಜೆ ಹಾಗೂ ಉಡುಪಿ ತಾಲೂಕಿನ ಕಕ್ಕುಂಜೆಯಲ್ಲೂ ಇಂತಹ ಶಿಲಾಕೋಣೆ ಸಮಾಧಿಗಳು ಪತ್ತೆಯಾಗಿವೆ.

ನಾಲ್ಕು ಬೃಹತ್ ಗಾತ್ರದ ಶಿಲಾ ಚಪ್ಪಡಿಗಳನ್ನು ಗೋಡೆಗಳಂತೆ ನಿಲ್ಲಿಸಿ, ಮೇಲಿನಿಂದ ಇನ್ನೊಂದು ಶಿಲಾ ಚಪ್ಪಡಿಯಿಂದ ಮುಚ್ಚಲಾದಂತೆ ನಿರ್ಮಿತವಾಗಿರುವ ಈ ಶಿಲಾ ಕೋಣೆಗಳ ಒಂದು ಪಾರ್ಶ್ವದ ಚಪ್ಪಡಿಯಲ್ಲಿ ವೃತ್ತಾಕಾರದ ರಂಧ್ರವೊಂದಿರುವುದು ವಾಡಿಕೆ. ತುಳುನಾಡಿನಲ್ಲಿ ಕಂಡುಬಂದ ಶಿಲಾ ಕೋಣೆ ಸಮಾಧಿಗಳು ಉತ್ತರ ಕರ್ನಾಟಕದ ಐಹೊಳೆ, ಹಗರಟಗಿ, ರಾಜನಕೊಳೂರು ಮತ್ತು ಅಕ್ಕರಗಲ್‌ನಲ್ಲಿರುವ ಇಂತಹದೇ ರಚನೆಗಳನ್ನು ಬಹುಮಟ್ಟಿಗೆ ಹೋಲುತ್ತವೆ. *೪ ಕೊಣಾಜೆಯಲ್ಲಿ ಗುರುತಿಸಲಾದ ಶಿಲಾಕೋಣೆಗಳಲ್ಲಿ ಒಂದು ವೈಶಿಷ್ಟ್ಯವಿದೆ. ಇವು ವಿಶಾಲವಾದ ಬಂಡೆಗಲ್ಲಿನ ಮೇಲೆಯೇ ನಿರ್ಮಿತವಾಗಿದ್ದು ಇಂತಹ ರಚನೆಗಳು ರಾಯಚೂರು ಜಿಲ್ಲೆಯ ಹಿರೇಬೆನಕಲ್ ಪ್ರದೇಶದಲ್ಲಿ ವಿಶೇಷವಾಗಿ ಕಾಣಸಿಗುತ್ತವೆ. *೫ ಬೋರ್ಕಟ್ಟೆಯಲ್ಲಿ ಗುರುತಿಸಲಾದ ಶಿಲಾ ಕೋಣೆಗಳೂ ಇದೇ ಮಾದರಿಯವು.

---

* ಪ್ರವಾಚಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಶ್ರೀ ಧವಳಾ ಕಾಲೇಜು, ಮೂಡುಬಿದಿರೆ - ೫೭೪ ೨೨೭

### ಮೃತ್ಪಾತ್ರೆಸಮಾಧಿಗಳು

ಗೋಳಾಕಾರದ ಗಡಿಗೆಗಳಲ್ಲಿ ಮೃತರ ಅಸ್ಥಿ ಅವಶೇಷಗಳನ್ನಿಟ್ಟು ಹೂಳುವ ಪದ್ಧತಿ ಕಬ್ಬಿಣಯುಗದ ಜನರಲ್ಲಿ ರೂಢಿಯಲ್ಲಿದ್ದಂತೆ ಕಂಡುಬರುತ್ತದೆ. ತುಳುನಾಡಿನ ಕೆಲವೆಡೆಗಳಲ್ಲಿ ಇಂತಹ ಅವಶೇಷಗಳು ಬೆಳಕಿಗೆ ಬಂದಿವೆ. ಪುತ್ತೂರಿನ ಬಳಿ ಗುರುತಿಸಲಾದ ಇಂತಹ ಸಮಾಧಿ ನಿವೇಶನದಲ್ಲಿ ಸುಮಾರು ಏಳರಷ್ಟು ಮೃತ್ಪಾತ್ರೆಗಳು ಕಂಡುಬಂದಿವೆ. *೫ ಬಡಗ ಕಜೆಕಾರಿನ ನಿವೇಶನದಲ್ಲಿ ಶಿಲಾ ಕೋಣೆ ಸಮಾಧಿಗಳು ಹಾಗೂ ಮೃತ್ಪಾತ್ರೆ ಸಮಾಧಿಗಳು ಜೊತೆಯಾಗಿಯೇ ಕಂಡುಬಂದಿರುವುದು ವಿಶೇಷ. *೬ ಬೂದಿ ಹಾಗೂ ಅಸ್ಥಿ ಅವಶೇಷಗಳನ್ನು ಹೊಂದಿರುವ ಇದೇ ರೀತಿಯ ಕೆಂಪು ಬಣ್ಣದ ಮಣ್ಣಿನ ಗಡಿಗೆಗಳ ಮೃತ್ಪಾತ್ರೆ ಸಮಾಧಿಗಳನ್ನು ಕೇರಳದ ಪೋರ್ಕಾಲಂ ಬಳಿಯೂ ಶೋಧಿಸಲಾಗಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. *೭ ಪುತ್ತೂರಿನಲ್ಲಿ ಬೆಳಕಿಗೆ ಬಂದಿರುವ ನಿವೇಶನದಲ್ಲಿ ಮೂರು ಕಾಲುಗಳುಳ್ಳ ಗಡಿಗೆಗಳು, ಅಗಲ ಬಾಯಿಯ ಬಟ್ಟಲಿನಾಕಾರದ ಮಣ್ಣಿನ ಪಾತ್ರೆಗಳು, ಆಟಿಕೆಗಳನ್ನು ಹೋಲುವ ಅತಿ ಚಿಕ್ಕ ಗಾತ್ರದ ಮಣ್ಣಿನ ಕುಡಿಕೆಗಳು ಅಲ್ಲದೆ ಎರಡು ಚಿನ್ನದ ಮಣಿಗಳೂ, ಹಿತ್ತಾಳೆ ಚೂರುಗಳೂ ಪತ್ತೆಯಾಗಿವೆ. ಪುತ್ತೂರಿನಲ್ಲಿ ಕಂಡುಬಂದಂಥದೇ ರೀತಿಯ ಆಟಿಕೆಯಾಕಾರದ ಚಿಕ್ಕ ಕುಡಿಕೆಗಳು ಕೊಡಗಿನಲ್ಲಿ *೮ ಮತ್ತು ಬೆಳುವನಕೂಡಿಗೆಯಲ್ಲಿ *೯ ಗುರುತಿಸಲಾದ ಶಿಲಾಕೋಣೆ ಸಮಾಧಿಗಳಲ್ಲೂ ಕಂಡುಬಂದಿವೆ ಎಂಬುದಿಲ್ಲಿ ಗಮನಾರ್ಹ. ಕುಂದಾಪುರ ತಾಲೂಕಿನ ಬೇಳೂರು ಮತ್ತು ವಡ್ಡರ್ಸೆ*೧೦, ಪುತ್ತೂರು ತಾಲೂಕಿನ ಕನ್ನಡ್ಕ*೧೧ ಮತ್ತು ಉಡುಪಿ ತಾಲೂಕಿನ ಹಿರಿಯಡ್ಕದ ಸಮೀಪವೂ ಬೃಹತ್ ಶಿಲಾಯುಗದ ಮೃತ್ಪಾತ್ರೆ ಸಮಾಧಿಗಳು ಕಂಡುಬಂದಿವೆ.

### ಗುಹಾಸಮಾಧಿಗಳು

ಪಶ್ಚಿಮ ಕರಾವಳಿಯಲ್ಲಿ ಕಂಡುಬರುವ ಲಾಟರೈಟ್ ಕಲ್ಲಿನಲ್ಲಿ ಕೊರೆದು ನಿರ್ಮಿಸಲಾದ, ಕಬ್ಬಿಣಯುಗಕ್ಕನ್ವಯಿಸುವ ಗುಹಾಸಮಾಧಿಗಳು ಕೇರಳಕ್ಕಷ್ಟೆ ಸೀಮಿತ ಎಂದು ಇತ್ತೀಚಿನವರೆಗೂ ನಂಬಲಾಗಿತ್ತು. *೧೨ ಆದರೆ ತುಳುನಾಡಿನಲ್ಲಿ ಕೈಗೊಳ್ಳಲಾದ ಶೋಧನೆಗಳು ಇಂತಹ ಗುಹಾಸಮಾಧಿಗಳು ಈ ಪ್ರದೇಶದ ಉದ್ದಗಲಕ್ಕೂ ಹರಡಿಕೊಂಡಿವೆ ಎಂಬುದನ್ನು ನಿರೂಪಿಸಿವೆ. ಕುಂದಾಪುರ. ಕಾರ್ಕಳ, ಉಡುಪಿ, ಬಂಟ್ವಾಳ ಹಾಗೂ ಸುಳ್ಯ ತಾಲೂಕುಗಳ ಸುಮಾರು ೨೨ ಸ್ಥಳಗಳಲ್ಲಿ ಗುಹಾಸಮಾಧಿಗಳು ಪತ್ತೆಯಾಗಿವೆ. ಈ ಪೈಕಿ ಹೆಚ್ಚಿನ ಸಂಖ್ಯೆಯ ಗುಹಾಸಮಾಧಿಗಳನ್ನು ಬೆಳಕಿಗೆ ತಂದವರು. ದಿ ॥ ಬಿ. ವಸಂತ ಶೆಟ್ಟಿಯವರು, ಎಂಬುದನ್ನಿಲ್ಲಿ ಸೂಚಿಸಲೇ ಬೇಕು. *೧೩ ತುಳುನಾಡಿನಲ್ಲಿ ವಿಶೇಷವಾಗಿ ಕಂಡುಬರುವ ಲಾಟರೈಟ್ ಭೂಪದರದೊಳಗೆ ಅರ್ಧಗೋಳಾಕಾರವಾಗಿ ಅಥವಾ ಚೌಕಾಕೃತಿಯಲ್ಲಿ ಕೊರೆದು ನಿರ್ಮಿಸಲಾದ ಗುಹೆಯಂಥ ಈ ರಚನೆಗಳು ಪ್ರಥಮಬಾರಿಗೆ ಪತ್ತೆಯಾದದ್ದು ಉಡುಪಿಯ ಮೂಡನಿಡುಂಬೂರಿನಲ್ಲಿ. *೧೪ ತುಳುನಾಡಿನಲ್ಲಿ ಕಂಡುಬರುವ ಈ ರೀತಿಯ ಗುಹಾಸಮಾಧಿಗಳು ಕೇರಳದ ಕರಾವಳಿಯುದ್ದಕ್ಕೂ ಹಲವೆಡೆಗಳಲ್ಲಿ ಕಂಡುಬಂದಿರುವ ಇಂತಹುದೇ ರಚನೆಗಳನ್ನು ಬಹುಮಟ್ಟಿಗೆ ಹೋಲುತ್ತವೆ. *೧೫

ಮೇಲೆ ವಿವರಿಸಲಾದ ಮೂರೂ ಬಗೆಯ ಸಮಾಧಿ ರಚನೆಗಳು ಕಬ್ಬಿಣಯುಗದವು ಎಂಬುದು ನಿರ್ವಿವಾದ. ದಕ್ಷಿಣ ಭಾರತದ ನೂರಾರು ಕಡೆಗಳಲ್ಲಿ ಬೆಳಕಿಗೆ ಬಂದಿರುವ ಇಂಥದೇ ರಚನೆಗಳು ಹಾಗೂ ಅವುಗಳ ಕುರಿತು ನಡೆಸಲಾದ ವ್ಯಾಪಕ ಸಂಶೋಧನೆಗಳೇ ಇದಕ್ಕೆ ಆಧಾರ. ಬೃಹದಾಕಾರದ ಹಾಗೂ ಒರಟಾದ ಶಿಲಾ ಚಪ್ಪಡಿಗಳಿಂದ ನಿರ್ಮಿಸಲಾದ ಸಮಾಧಿಗಳೇ ಈ ಸಂಸ್ಕೃತಿಯ ಹೆಗ್ಗುರುತುಗಳು. ಆದ್ದರಿಂದ ಈ ಸಂಸ್ಕೃತಿಯನ್ನು ಬೃಹತ್‌ಶಿಲಾಯುಗ ಸಂಸ್ಕೃತಿ ಎಂದೇ ಗುರುತಿಸುವುದು ವಾಡಿಕೆ.

### ಕಾಲನಿರ್ಣಯ

ಧಾರವಾಡ ಜಿಲ್ಲೆಯ ಹಳ್ಳೂರಿನಲ್ಲಿ ನಡೆಸಿದ ಉತ್ಖನನದಲ್ಲಿ ದೊರೆತ ಆಧಾರಗಳಂತೆ ದಕ್ಷಿಣ ಭಾರತದಲ್ಲಿ ಕಬ್ಬಿಣಯುಗ ಪ್ರಾರಂಭವಾದದ್ದು ಕ್ರಿ.ಪೂ. ೧೧೦೦ರ ಸುಮಾರಿಗೆ. *೧೬ ಬ್ರಹ್ಮಗಿರಿ ಉತ್ಖನನವು ಈ ಸಂಸ್ಕೃತಿ ಕ್ರಿ.ಶ. ಒಂದನೆಯ ಶತಮಾನದವರೆಗೂ ಮುಂದುವರಿದಿತ್ತು ಎಂಬುದನ್ನು ಸೂಚಿಸುತ್ತದೆ. *೧೭ ಉತ್ತರ ಕರ್ನಾಟಕದಲ್ಲಿ ಕಂಡುಬರುವ ಬೃಹತ್‌ಶಿಲಾಸಮಾಧಿಗಳ ವಿವಿಧ ಮಾದರಿಗಳನ್ನು ಕ್ರಮಬದ್ಧವಾಗಿ ವರ್ಗೀಕರಿಸಿ ಅವರ ಆಧಾರದಂತೆ ಡಾ॥ ಸುಂದರ ಅವರು ಈ ಸಂಸ್ಕೃತಿಯನ್ನು ಕ್ರಿ.ಪೂ. ೧೨೦೦ ಮತ್ತು ಕ್ರಿ.ಶ. ೨-೩ನೇ ಶತಮಾನದ ಕಾಲಮಿತಿಯೊಳಗೆ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. *೧೮

ತುಳುನಾಡಿನಲ್ಲಿ ಹಾಗೂ ಕರ್ನಾಟಕದ ಇತರ ಭಾಗಗಳಲ್ಲಿ ಕಂಡುಬರುವ ಬೃಹತ್‌ಶಿಲಾಯುಗದ ಸಮಾಧಿರಚನೆಗಳ ತುಲನಾತ್ಮಕ ವಿಶ್ಲೇಷಣೆಯಿಂದ ಇವುಗಳ ಕಾಲಮಾನವನ್ನು ಕುರಿತಂತೆ ಕೆಲವು ಸಾಧ್ಯತೆಗಳನ್ನು ಸೂಚಿಸಬಹುದು. ಇಲ್ಲಿನ ಬೃಹತ್ ಶಿಲಾಯುಗದ ಶಿಲಾಕೋಣೆಸಮಾಧಿಗಳು ಐಹೊಳೆ ಮತ್ತು ರಾಜನಕೊಳೂರು ಪ್ರದೇಶದಲ್ಲಿ ಗುರುತಿಸಲಾದ ಇಂಥದೇ ಸಮಾಧಿರಚನೆಗಳನ್ನು ಹೋಲುತ್ತವೆ. ಡಾ॥ ಸುಂದರ ಅವರ ಅಭಿಪ್ರಾಯದಂತೆ ತುಳುನಾಡಿನ ಮತ್ತು ಐಹೊಳೆ-ರಾಜನಕೊಳೂರಿನ ಶಿಲಾಕೋಣೆ ಸಮಾಧಿಗಳು ಒಂದೇ ಕಾಲಕ್ಕನ್ವಯಿಸುವಂಥವುಗಳಾಗಿದ್ದು, ಇವುಗಳ ಕಾಲವನ್ನು ಕ್ರಿ.ಪೂ. ಸುಮಾರು ೮೦೦ರಿಂದ ೬೦೦ ಎಂದು ಅವರು ನಿರ್ಧರಿಸಿದ್ದಾರೆ. *೨೦ ಕೊಣಾಜೆ ಹಾಗೂ ಬೋರ್ಕಟ್ಟೆಯಲ್ಲಿನ ಶಿಲಾಕೋಣೆಗಳಿಗೂ ರಾಯಚೂರಿನ ಹಿರೇಬೆನಕಲ್ ಪ್ರದೇಶದ ಶಿಲಾಕೋಣೆಗಳಿಗೂ ತುಂಬಾ ಸಾಮ್ಯವಿದೆ. ಸುಂದರ

ಅವರ ಅಭಿಪ್ರಾಯದಂತೆ ಒರೇಬೆನಕಲ್ ಮಾದರಿಯ ಶಿಲಾಕೋಣೆಗಳು ರಾಜನಕೊಳೂರು-ಐಹೊಳೆ ಮಾದರಿಯ ಶಿಲಾಕೋಣೆಗಳಿಗಿಂತ ನಂತರದಲ್ಲಷ್ಟೆ ಬೆಳೆದು ಬಂದವು. ಒರೇಬೆನಕಲ್ ಮಾದರಿಯ ಶಿಲಾಕೋಣೆಗಳ ರಚನೆ ಕ್ರಿ.ಪೂ. ೮೦೦ ಮತ್ತು ಕ್ರಿ.ಶ. ಒಂದನೆಯ ಶತಮಾನದ ಕಾಲಾವಧಿಯಲ್ಲಿ ಬೆಳೆದು ಬಂದಿರಬೇಕೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. *೨೧ ಇದೇ ಅಭಿಪ್ರಾಯವನ್ನು ಬೋರ್ಕಟ್ಟೆ ಮತ್ತು ಕೊಣಾಜೆಯ ಸಮಾಧಿಗಳಿಗೂ ಅನ್ವಯಿಸಿದರೆ ತಪ್ಪಾಗದು.

ಪುತ್ತೂರಿನ ಬಳಿ ಪತ್ತೆಯಾದ ಮೃತ್ಪಾತ್ರೆ ಸಮಾಧಿಗಳಲ್ಲಿ ಕಂಡುಬಂದಿರುವ ಅತಿಚಿಕ್ಕಗಾತ್ರದ ಮಣ್ಣಿನ ಕುಡಿಕೆಗಳು ಈ ಮಾದರಿಯ ಸಮಾಧಿಗಳ ಕಾಲವನ್ನು ನಿರ್ಣಯಿಸುವಲ್ಲಿ ಸಹಕಾರಿ. ಇದೇ ರೀತಿಯ ಚಿಕ್ಕಕುಡಿಕೆಗಳು ಘಟ್ಟಪ್ರದೇಶದ ಬೆಳವನ ಕೂಡಿಗೆಯಲ್ಲಿ ಬೆಳಕಿಗೆ ಬಂದ ಐಹೊಳೆ-ರಾಜನಕೊಳೂರು ಮಾದರಿಯ ಶಿಲಾಕೋಣೆ ಸಮಾಧಿಗಳಲ್ಲೂ ಕಂಡುಬಂದಿವೆ. *೨೨ ಅಂದರೆ, ಐಹೊಳೆ-ರಾಜನಕೊಳೂರು ಮತ್ತು ಬೆಳವನ ಕೂಡಿಗೆಯ ಶಿಲಾಕೋಣೆ ಸಮಾಧಿಗಳು ಹಾಗೂ ಪುತ್ತೂರಿನಲ್ಲಿ ಗುರುತಿಸಲಾದ ಮೃತ್ಪಾತ್ರೆಸಮಾಧಿ ಮಾದರಿಯ ರಚನೆಗಳು ಯಾವುದೋ ಒಂದು ಹಂತದಲ್ಲಿ ಸಮಕಾಲೀನವಾಗಿದ್ದಿರಬೇಕು. ಬಡಗ ಕಜೆಕಾರಿನಲ್ಲಿ ಗುರುತಿಸಲಾದ ಐಹೊಳೆ-ರಾಜನಕೊಳೂರು ಮಾದರಿಯ ಶಿಲಾಕೋಣೆ ಸಮಾಧಿಗಳ ಜೊತೆಯಲ್ಲೇ ಮೃತ್ಪಾತ್ರೆ ಸಮಾಧಿಗಳೂ ಕಂಡುಬಂದಿರುವುದು ಮೇಲಿನ ಹೇಳಿಕೆಯನ್ನು ದೃಢೀಕರಿಸುತ್ತದೆ. ಐಹೊಳೆ-ರಾಜನಕೊಳೂರು ಮಾದರಿಯ ಶಿಲಾಕೋಣೆಗಳ ರಚನೆಯಾದದ್ದು ಕ್ರಿ.ಪೂ. ಸುಮಾರು ೮೦೦-೬೦೦ರ ಅವಧಿ ಎಂದಿರುವಲ್ಲಿ ತುಳುನಾಡಿನಲ್ಲಿ ಬೆಳಕು ಕಂಡಿರುವ ಮೃತ್ಪಾತ್ರೆ ಸಮಾಧಿಗಳನ್ನು ಅದೇ ಕಾಲಮಾನದೊಳಗೆ ಗುರುತಿಸುವುದು ಸಮರ್ಥನೀಯ.

ನಿರ್ಮಾಣ ತಂತ್ರದ ದೃಷ್ಟಿಯಿಂದ ಗುಹಾಸಮಾಧಿಗಳು ಇತರ ಮಾದರಿಯ ಸಮಾಧಿಗಳಿಗಿಂತ ಹೆಚ್ಚು ಪರಿಷ್ಕೃತ ರಚನೆಗಳು. ಪ್ರಾಯಶಃ ಕಾಲಮಾನದ ದೃಷ್ಟಿಯಿಂದ ಇವು ಇತರ ಮಾದರಿಯ ಸಮಾಧಿರಚನೆಗಳಿಗಿಂತ ನಂತರದವುಗಳಾಗಿರುವುದೇ ಇದಕ್ಕೆ ಕಾರಣ. *೨೩ ಕೇರಳದ ಕೊಚ್ಚಿನ್ ಮತ್ತು ಮಲಪುರಂ ಜಿಲ್ಲೆಗಳಲ್ಲಿ ಶೋಧಿಸಲಾದ ಈ ರೀತಿಯ ಗುಹಾಸಮಾಧಿಗಳಲ್ಲಿ 'ರಸೆಟ್ ಕೋಟೆಡ್ ಪೈಂಟೆಡ್ ವೇರ್' ಎಂಬ ವಿಶಿಷ್ಟವಾದ ಚಿತ್ರಿತ ಮೃತ್ಪಾತ್ರೆಗಳು ಕಂಡುಬಂದಿವೆ. *೨೪ ಇತ್ತೀಚಿನ ಅಧ್ಯಯನಗಳ ಆಧಾರದಂತೆ ಈ ರೀತಿಯ ಮೃತ್ಪಾತ್ರೆಗಳು ಕ್ರಿ.ಪೂ. ೧೫೦ ರಿಂದ ಕ್ರಿ.ಶ. ೩-೪ನೇ ಶತಮಾನದ ಅವಧಿಗೆ ಅನ್ವಯಿಸುಪಂಥವು. *೨೫ ಈ ಆಧಾರದಂತೆ ಕೇರಳದಲ್ಲಿ ಬೃಹತ್‌ಶಿಲಾಯುಗದ ಗುಹಾ ಸಮಾಧಿಗಳ ರಚನೆ ಕ್ರಿ.ಶ. ಸುಮಾರು ೩-೪ನೇ ಶತಮಾನದ ತನಕವೂ ಮುಂದುವರಿದಿತ್ತೆನ್ನಬಹುದು. ತುಳುನಾಡಿನ ಹೆಚ್ಚಿನ ಕಡೆಗಳಲ್ಲಿ ಗುರುತಿಸಲಾದ, ಮೇಲ್ಭಾಗದಲ್ಲಿ ವೃತ್ತಾಕಾರದ ರಂಧ್ರವನ್ನು ಹೊಂದಿರುವ, ಅರ್ಧಗೋಳಾಕಾರದಲ್ಲಿ ಕೆತ್ತಲಾಗಿರುವ ಗುಹಾಸಮಾಧಿಗಳು ಗುಹಾಸಮಾಧಿ ರಚನೆಯ ವಿಕಾಸದ ಕೊನೆಯ ಹಂತಕ್ಕನ್ವಯಿಸುತ್ತದೆಂಬುದು ವಿದ್ವಾಂಸರ ಅಭಿಮತ. *೨೬ ಇದರಂತೆ ತುಳುನಾಡಿನಲ್ಲಿ ಕಂಡುಬರುವ ಗುಹಾಸಮಾಧಿಗಳನ್ನು ಕ್ರಿ.ಪೂ. ೧ನೇ ಶತಮಾನದಿಂದ ಕ್ರಿ.ಶ. ೨-೩ನೇ ಶತಮಾನದ ಅವಧಿಯ ಕಾಲಮಿತಿಯೊಳಗಿರಿಸಬಹುದು. *೨೭

ಈ ಅಧ್ಯಯನದ ಹಿನ್ನೆಲೆಯಲ್ಲಿ, ತುಳುನಾಡಿನಲ್ಲಿ ಕಂಡುಬರುವ ವಿವಿಧ ಮಾದರಿಯ ಬೃಹತ್ ಶಿಲಾ ಸಮಾಧಿ ರಚನೆಗಳ ಕಾಲವನ್ನು ಈ ಕೆಳಗಿನಂತೆ ಗುರುತಿಸಬಹುದು:

| | | |
|---|---|---|
| **ಶಿಲಾಕೋಣೆ ಸಮಾಧಿಗಳು** | - | ಕ್ರಿ. ಪೂ. ೮೦೦ ರಿಂದ ಕ್ರಿ. ಪೂ. ೬೦೦ |
| **ಕೊಣಾಜೆ, ಬೋರ್ಕಟ್ಟೆ ಮಾದರಿ ಶಿಲಾಕೋಣೆ ಸಮಾಧಿಗಳು** | - | ಕ್ರಿ.ಪೂ. ೮೦೦ರಿಂದ ಕ್ರಿ.ಶ. ೧ನೇ ಶತಮಾನ |
| **ಮೃತ್ಪಾತ್ರೆ ಸಮಾಧಿಗಳು** | - | ಕ್ರಿ.ಪೂ. ೮೦೦ ರಿಂದ ಕ್ರಿ.ಪೂ. ೬೦೦ |
| **ಗುಹಾಸಮಾಧಿಗಳು** | - | ಕ್ರಿ.ಪೂ. ೧ನೇ ಶತಮಾನ - ಕ್ರಿ.ಶ. ೨-೩ನೇ ಶತಮಾನ |

ಲಭ್ಯವಿರುವ ಸೀಮಿತ ಆಧಾರಗಳ ಅಧ್ಯಯನದಿಂದ ತುಳುನಾಡಿನ ಬೃಹತ್‌ಶಿಲಾಯುಗ ಸಂಸ್ಕೃತಿಯ ಸಮಗ್ರ ಚಿತ್ರಣವನ್ನು ನೀಡುವುದು ಕಷ್ಟಸಾಧ್ಯ. ಬೃಹತ್ ಶಿಲಾಯುಗದಲ್ಲಿ ತುಳುನಾಡಿನ ಉದ್ದಗಲಕ್ಕೂ ಮಾನವನು ನೆಲಸಿದ್ದ ಎಂಬ ವಿಚಾರವು ಈ ಪ್ರದೇಶದಲ್ಲಿ ಪತ್ತೆಯಾದ ಬೃಹತ್‌ಶಿಲಾಯುಗದ ಅವಶೇಷಗಳಿಂದ ಸ್ಪಷ್ಟವಾಗದಿರದು. ದಟ್ಟವಾದ ಕಾಡುಗಳಿಂದ ತುಂಬಿದ್ದ ಈ ಪ್ರದೇಶವನ್ನು ವಾಸಯೋಗ್ಯವನ್ನಾಗಿಸುವಲ್ಲಿ ಬೃಹತ್ ಶಿಲಾಯುಗದ ಮಾನವನಿಗೆ ಅವನು ಅರಿತಿದ್ದ ಕಬ್ಬಿಣದ ಕೊಡಲಿಗಳ ಉಪಯೋಗ ಬಹುಮಟ್ಟಿಗೆ ಸಹಕಾರಿಯಾಗಿದ್ದಿರಬೇಕು. ಒಟ್ಟಿನಲ್ಲಿ ಹೇಳುವುದಾದರೆ, ಬೃಹತ್‌ಶಿಲಾ ಸಮಾಧಿಗಳನ್ನು ನಿರ್ಮಿಸಿದ್ದ ಕಬ್ಬಿಣಯುಗದ ಜನರು ಹೆಚ್ಚು ಸತ್ವಶಾಲಿಗಳಾಗಿದ್ದು ತಮ್ಮ ಜೀವನವನ್ನು ಪ್ರಗತಿದಾಯಕವಾಗಿ ರೂಪಿಸಿದ್ದಲ್ಲದೆ ಸಮಾಜವು ನಾಗರಿಕತೆಯ ದಾರಿಯಲ್ಲಿ ಮುನ್ನಡೆಯುವಂತೆ ಮಾಡುವುದರಲ್ಲಿಯೂ ಸಫಲರಾದರು, ತುಳುನಾಡಿನಲ್ಲಿ ಅಕ್ಷರಸ್ಥ ನಾಗರಿಕತೆಯ ಹಾಗೂ ಇತಿಹಾಸ ಯುಗದ ಪ್ರವರ್ತಕರೆನಿಸಿಕೊಂಡರು.

ಅನುಬಂಧ

## ತುಳುನಾಡಿನಲ್ಲಿ ಬೆಳಕಿಗೆ ಬಂದಿರುವ ಬೃಹತ್ ಶಿಲಾಯುಗದ ನಿವೇಶನಗಳು

| ಕ್ರಮ ಸಂಖ್ಯೆ | ಸ್ಥಳ | ತಾಲೂಕು | ಅವಶೇಷದ ಸ್ವರೂಪ |
|---|---|---|---|
| ೧. | ಬಡಗ ಕಜೆಕಾರು | ಬಂಟ್ವಾಳ | ಶಿಲಾಕೋಣೆ ಸಮಾಧಿ, ಮೃತ್ಪಾತ್ರೆ ಸಮಾಧಿ |
| ೨. | ವಗೆನಾಡು | ಬಂಟ್ವಾಳ | ಗುಹಾಸಮಾಧಿ |
| ೩. | ಬೇಳಂಜೆ | ಕಾರ್ಕಳ | ಗುಹಾಸಮಾಧಿ |
| ೪. | ಬೋರ್ಕಟ್ಟೆ | ಕಾರ್ಕಳ | ಶಿಲಾಕೋಣೆ ಸಮಾಧಿ |
| ೫. | ಚಾರ | ಕಾರ್ಕಳ | ಗುಹಾಸಮಾಧಿ |
| ೬. | ಕೊಣಾಜೆ | ಕಾರ್ಕಳ | ಶಿಲಾಕೋಣೆ; ಗುಹಾಸಮಾಧಿ |
| ೭. | ಅಮಾಸೆಬೈಲು | ಕುಂದಾಪುರ | ಗುಹಾಸಮಾಧಿ |
| ೮. | ಬೇಳೂರು | ಕುಂದಾಪುರ | ಶಿಲಾಕೋಣೆ; ಮೃತ್ಪಾತ್ರೆ ಸಮಾಧಿ |
| ೯. | ಹಳ್ನಾಡಿ-ಹರ್ಕಾಡಿ | ಕುಂದಾಪುರ | ಗುಹಾಸಮಾಧಿ |
| ೧೦. | ಕಡಸೆ | ಕುಂದಾಪುರ | ಗುಹಾಸಮಾಧಿ |
| ೧೧. | ವಳ್ತೂರು | ಕುಂದಾಪುರ | ಗುಹಾಸಮಾಧಿ |
| ೧೨. | ವರ್ಡರ್ಸೆ | ಕುಂದಾಪುರ | ಮೃತ್ಪಾತ್ರೆ ಸಮಾಧಿ |
| ೧೩. | ಕನ್ನಡ್ಕ | ಪುತ್ತೂರು | ಮೃತ್ಪಾತ್ರೆ ಸಮಾಧಿ |
| ೧೪. | ಪುತ್ತೂರು | ಪುತ್ತೂರು | ಮೃತ್ಪಾತ್ರೆ ಸಮಾಧಿ |
| ೧೪. | ಬಾರಳಿ | ಉಡುಪಿ | ಗುಹಾಸಮಾಧಿ |
| ೧೬. | ಬೆಳ್ಕರ್‌ಪಳ್ಳಿ | ಉಡುಪಿ | ಗುಹಾಸಮಾಧಿ |
| ೧೭. | ಬೋಳುಗುಡ್ಡೆ | ಉಡುಪಿ | ಗುಹಾಸಮಾಧಿ |
| ೧೮. | ಬ್ರಹ್ಮಾವರ | ಉಡುಪಿ | ಗುಹಾಸಮಾಧಿ |
| ೧೯. | ಹಿರಿಯಡ್ಕ | ಉಡುಪಿ | ಮೃತ್ಪಾತ್ರೆ ಸಮಾಧಿ |
| ೨೦. | ಕಕ್ಕುಂಜೆ | ಉಡುಪಿ | ಗುಹಾಸಮಾಧಿ, ಶಿಲಾಕೋಣೆ |
| ೨೧. | ಕೆಳಕುಂಜಾಲು | ಉಡುಪಿ | ಗುಹಾಸಮಾಧಿ |
| ೨೨. | ಕಿರಾಡಿ | ಉಡುಪಿ | ಗುಹಾಸಮಾಧಿ |
| ೨೩. | ಮೈರುಕೊಮ್ಮೆ | ಉಡುಪಿ | ಗುಹಾಸಮಾಧಿ |
| ೨೪. | ಮೂಡನಿಡುಂಬೂರು | ಉಡುಪಿ | ಗುಹಾಸಮಾಧಿ |
| ೨೫. | ಪರ್ಕಳ | ಉಡುಪಿ | ಗುಹಾಸಮಾಧಿ |
| ೨೬. | ಪೆರಂಪಳ್ಳಿ | ಉಡುಪಿ | ಗುಹಾಸಮಾಧಿ |
| ೨೭. | ಸಾಂತೂರು | ಉಡುಪಿ | ಗುಹಾಸಮಾಧಿ |
| ೨೮. | ಸುಭಾಸ್‌ನಗರ (ಶಿರ್ವ) | ಉಡುಪಿ | ಗುಹಾಸಮಾಧಿ |
| ೨೯. | ಐವರ್‌ನಾಡು | ಸುಳ್ಯ | ಗುಹಾಸಮಾಧಿ |

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ **ರಮೇಶ್ ಕೆ.ವಿ: ತುಳುನಾಡಿನ ಇತಿಹಾಸ**

*೨ ಈ ಪ್ರದೇಶದಲ್ಲಿ ಪ್ರಥಮವಾಗಿ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಬೆಳಕಿಗೆ ತಂದವರು ಡಾ॥ ಪಿ. ಗುರುರಾಜ ಭಟ್ಟರು. ನೋಡಿ - **Antiquities of South Kanara,** 1969, p. 17

*೩. Gururaja Bhatt, P : **Antiquitices of South Kanara,** Udupi, 1969, p. 17, Plates exxx-exxxiii

*೪. Sundara A: **Early Chamber Tombs of South India,** Delhi, 1975, p. 160

*೫. Sundara A: ಅದೇ, ಪು. ೧೬೨

*೬. Sundara A: **"Megaliths in the Western Coast and Ghat regions of Karnataka-A Study"** Jr. of Karnataka University, vol X, 1974, p. 75

*೭ ಬಡಗಕಜೆಕಾರಿಗೆ ಇತ್ತೀಚೆಗೆ ಭೇಟಿನೀಡಿದ್ದಾಗ ಈ ಅಂಶವು ಲೇಖಕನ ಗಮನಕ್ಕೆ ಬಂತು

*೮. Thaper B.K.: "Porkalam 1948, Excavation of a Megalithic Urn Burial". **Ancient India**, No. 8, 1952, PP. 3-8

*೯. Cole R.A. "On the discovery of Cromlechs in Coorg" **Proceedings of Asiatie Society of Bengal,** 1869, pp 243-45

*೧೦. Sundara A: "Megaliths in the Western coast and ghat regions of Karnataka", p. 80

*೧೧. Gururaja Bhatt P,: **Studies in Tuluva History and Culture,** Udupi, 1975, p. X

*೧೨. ಡಾ॥ ಪಿ.ಎನ್. ನರಸಿಂಹಮೂರ್ತಿಯವರಿಂದ ವೈಯಕ್ತಿಕ ಮಾಹಿತಿ.

*೧೩. Ramachandran: "Megalithic Rockcut caves and their parallels outside India," **Seminar papers on the Problem of Megaliths in India,** Varanasi 1969, p 59; Gururaja Rao., -**Megalithic Culture in South India,** p. 50

*೧೪. Vasantha Shetty B.: "Some recent Archaeological Notices: Megalithic relies in Dakshina Kannada - A Study" A. Sundara (ed). **Archaeology in Karnatak,** Mysore, 1990, pp. 215-16

*೧೫. Gururaja Bhatt P.: **Studies in Tuluva History and Culture,** p. IX

*೧೬. Sharma Y.D.: "Rock cut caves in Cochin", **Ancient India,** No. 12, I 956, pp 93-115

*೧೭. Nagaraja Rao M.S. : **Prehistoric Cultures of the Tungabhadra valley**, Dharwar, 1971, p.15

*೧೮. Wheeler R.E.M, "Brahmagiri and Chandravalli 1947: Megalithic and other cultures in the Chirtradurga District, Mysore State", **Ancient India,** No.4, pp 181-308

*೧೯. Sundara A: **Early chamber Tombs of South India,** p.215

*೨೦. ಸುಂದರ ಎ.: ಅದೇ, ಪು. ೨೧೫

*೨೧. ಸುಂದರ ಎ.: ಅದೇ, ಪು. ೨೦೮, ೨೧೫

*೨೨. Sundara A: "Megaliths in the Western coast and Ghat regions of Karnataka". p. 181

*೨೩. Gururaja Rao.: **Megalithic Culture in South India,** Mysore, 1972 p. 318

*೨೪. Indian Archaeology, A Review - 1970-71, p. 19

*೨೫. Narasimhiah B.: **Neolithic and Megalithic Cultures of Tamil Nadu,** ph.D Thesis (unpublished), Poona, 1976

*೨೬. Sharma Y.D. "Rock Cut caves in Cochin", p. 114

*೨೭. Ganapayya Bhat, p. "Megalithic Rock-cut caves of Coastal Karnataka", **Archaeological Studies,** 1978, Vol III, pp. 67-68



A

ಮೈಸೂರು ನಾಗರಾಜ ಶರ್ಮ*

# ರಾಜಗಟ್ಟ - ಒಂದು ಐತಿಹಾಸಿಕ ನೆಲೆ

ಹಿನ್ನೆಲೆ: ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದಿಂದ ನಂದಿಬೆಟ್ಟದ ಕಡೆಗೆ ಚಲಿಸುವಾಗ, ನಾಲ್ಕಾರು ಕಿ.ಮೀ. ಚಲಿಸಿದ ನಂತರ ಎದುರಾಗುವ ಪುಟ್ಟ ಗ್ರಾಮವೇ ರಾಜಗಟ್ಟ. ಇದುವರೆವಿಗೂ ಐತಿಹಾಸಿಕವಾಗಿ ಗುರುತಿಸಲ್ಪಡದ ಈ ಗ್ರಾಮವು ಇತ್ತೀಚಿನ ಶೋಧನೆಯಿಂದಾಗಿ ಐತಿಹಾಸಿಕ ನಕ್ಷೆಯಲ್ಲಿ ಒಂದು ಶಾಶ್ವತ ಚುಕ್ಕೆಯಾಗಿ ನಿಲ್ಲುವ ಲಕ್ಷಣಗಳು ಕಂಡುಬಂದಿದೆ.

ಈಗ್ಗೆ ೫ ವರುಷಗಳ ಹಿಂದೆ ರಾಜಗಟ್ಟದ ಪರಿಚಯ ನನಗಾದದ್ದು, ಅಲ್ಲಿನ ಬೃಹತ್ ಶಿಲಾ ಸಮಾಧಿಗಳ ಸ್ವಾಗತದಿಂದ. ಊರಿಗರು ಕಲ್‌ಮನೆ ಎಂದು ಗುರುತಿಸಲ್ಪಡುತ್ತಿದ್ದ ನಾಲ್ಕಾರು ಶಿಲಾವೃತ್ತ ಸಮಾಧಿಗಳು, ಆಗಷ್ಟೇ ನಿಧಿಶೋಧಕರಿಂದ ಸೂರೆಗೊಳ್ಳಲ್ಪಟ್ಟಿದ್ದುವು. ನಿಧಿಶೋಧಕರು ಅನಧಿಕೃತ ಉತ್ಖನನವನ್ನು(?) ನಡೆಸಿ, ನಿರಾಶರಾಗಿ ಎರಚಾಡಿದ್ದ ವಸ್ತುಗಳನ್ನು ಸಂಗ್ರಹಿಸಿದಾಗ, ಈ ಕಲ್ಲುಗೋರಿಗಳು ಈಗಾಗಲೇ ಕರ್ನಾಟಕದಲ್ಲಿ ಪತ್ತೆಯಾಗಿರುವ ಸಾವಿರಾರು ಕಲ್ಲುಗೋರಿಗಳ ಸಂಖ್ಯೆಯನ್ನು ಹೆಚ್ಚಿಸುವ ಸಾಧ್ಯತೆಯನ್ನು ಬಿಟ್ಟರೆ, ಹೆಚ್ಚಿನದೇನೂ ಲಭ್ಯವಿರಲಿಲ್ಲ.

**ಬೂದಿಗುಂಡಿ?** : ಇಂದಿನ ರಾಜಗಟ್ಟವು ಒಂದು ಪುಟ್ಟ ಹಳ್ಳಿಯಾಗಿದ್ದು, ಸಣ್ಣಪುಟ್ಟ ಗುಡಿ ದೇಗುಲಗಳಿಂದ ಕೂಡಿರುವ ಒಂದು ಗ್ರಾಮ. ಊರಿನ ದಕ್ಷಿಣ ಭಾಗದಲ್ಲಿ ರೈತರು ಹತ್ತಾರು ಎಕರೆ ಪ್ರದೇಶಗಳಲ್ಲಿ (ಹಳೇ ಊರು) ಫಲವತ್ತಾದ ಬೂದಿಮಣ್ಣು ಇರುವುದನ್ನು ಕಂಡುಕೊಂಡಿದ್ದು, ಇದನ್ನು ಅವರು ತಮ್ಮ ಹೊಲ ಗದ್ದೆಗಳಿಗೆ ಮೇಲುಮಣ್ಣಾಗಿ ಸಾಗಿಸುತ್ತಾರಲ್ಲದೆ, ಈ ನಿವೇಶನವನ್ನು 'ಬೂದಿಗುಂಡಿ' ಎಂದು ಕರೆಯುತ್ತಾರೆ. ಬೂದಿಗುಂಡಿ ಎಂಬ ಹೆಸರು ನನ್ನನ್ನು ನವಶಿಲಾಯುಗಕ್ಕೆ ಕರೆದೊಯ್ಯಿತಾದರೂ, ರಾಜಗಟ್ಟದ ಬೂದಿಗುಂಡಿಯ ಕೂಲಂಕಷ ತಪಾಸಣೆ ನಡೆಸಿದಾಗ, ಅಲ್ಲಿ ಫಲವತ್ತಾದ ಮಣ್ಣು ದೊರೆಯುವುದು ಖಚಿತವಾದರೂ, ನವಶಿಲಾಯುಗದ ಬೂದಿಗುಡ್ಡೆಗಳ ಯಾವುದೇ ಲಕ್ಷಣಗಳನ್ನೂ ಅದು ಹೊಂದಿಲ್ಲದಿರುವುದು ಸ್ಪಷ್ಟವಾಯಿತು.

ಸದರಿ ನಿವೇಶನದಲ್ಲಿ ದೊರೆಯುತ್ತಿದ್ದ ಮಣ್ಣು ಸ್ವಾಭಾವಿಕವಾದ ಮಣ್ಣಿನಷ್ಟು ಗಟ್ಟಿಯಾಗಿರದೆ, ಬೂದಿಮಿಶ್ರಿತವಾಗಿದ್ದು ಬಹು ಮೃದುವಾಗಿರುವುದು ಕಂಡುಬಂತು. *೧ ಅಂತೆಯೇ ಹತ್ತಾರು ಅಡಿಗಳ ಆಳಕ್ಕೆ ರೈತರು ಮಣ್ಣನ್ನು ಅಗೆದು ಸಾಗಿಸುವಾಗ, ನೆಲದಿಂದ ಹೊರಬರುವ ಪ್ರಾಚ್ಯವಸ್ತುಗಳು ಹಳ್ಳಿಗರಿಗೆ ಅನುಪಯುಕ್ತವಾಗಿದ್ದು, ಹೊರಗೆಸೆಯಲ್ಪಡುತ್ತಿದ್ದುವು. ಇಂತಹ ಗುಡ್ಡೆಗಳನ್ನು ತಪಾಸಿಸಿದಾಗ, ಅನೇಕ ಪ್ರಾಚ್ಯವಸ್ತುಗಳು ಕಣ್ಣಿಗೆ ಬಿದ್ದುವು.

ಇವುಗಳಲ್ಲಿ ಮುಖ್ಯವಾದುವು ಆದಿಚರಿತ್ರಕಾಲಕ್ಕೆ ಸೇರಿದ ಪ್ರಾಚ್ಯಾವಶೇಷಗಳು. ಕೆಂಪುಲೇಪಿತ ಹೊಳಪಿನೊಂದಿಗೆ ದೊರೆತ ಹಲವು ಮಡಕೆಯ ಚೂರುಗಳನ್ನು (Red Slipped Ware) ಪುನರ್ ಜೋಡಿಸಿದಾಗ, ಅವುಗಳು, ಅಗಲ ಬಾಯಿಯ ಬೋಗುಣಿಗಳು, (Bowls) ಹೂಜಿಯ ಪ್ರನಾಳಗಳು (Sprouts) ಹಿಡಿಕೆಯುಳ್ಳ ಮುಚ್ಚಳಗಳು (Lids), ದೊರೆತು ಲೆಕ್ಕಾಚಾರಕ್ಕೆ ಪುಟನೀಡಿದುವು. ಇಂತಹ ರಚನೆಯ ವಸ್ತುಗಳನ್ನು ಈಗಾಗಲೇ ಸನ್ನತಿ, ಚಂದ್ರವಳ್ಳಿ, ಬ್ರಹ್ಮಗಿರಿ ಮುಂತಾದ ಸ್ಥಳಗಳಲ್ಲಿ ಗುರುತಿಸಿದ್ದು, ಅವುಗಳನ್ನು ಶಾತವಾಹನರ ಸಂಸ್ಕೃತಿಗೆ ಸೇರಿಸಲಾಗಿದೆ. ಆದರೆ ರಾಜಗಟ್ಟದಲ್ಲಿ ದೊರೆತ ಪ್ರಾಚ್ಯವಸ್ತುಗಳು, ಶಾತವಾಹನರ ಸಂಸ್ಕೃತಿಯ ನಿಖರವಾದ ಕುರುಹುಗಳನ್ನು ಪಡೆದಿಲ್ಲವಾಗಿ, ಶಾತವಾಹನರ ಸ್ಪಷ್ಟ ಸಂಕೇತಗಳಾದ ಬಿಳಿ ಪಟ್ಟೆಯ ವಿನ್ಯಾಸಗಳು (Kaolin Painted Ware)ಅಥವಾ

* ಛಾಯಾಗ್ರಾಹಕ ಮತ್ತು ಸಂಶೋಧಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿ.ವಿ.



ಶಾತವಾಹನರ ಕಾಲದ ಸ್ಪಷ್ಟ ನಾಣ್ಯಗಳು ಇನ್ನೂ ದೊರೆತಿಲ್ಲವಾಗಿ, ಸದರಿ ನಿವೇಶನವನ್ನು ಶಾತವಾಹನರಿಂದ ಬೇರೆ ಇಟ್ಟು ಅಧ್ಯಯನಿಸ ಬೇಕಾದ ಅಂಶವಾಗಿದೆ.



ಮಣ್ಣಿನ ವಿವಿಧ ಸ್ತರಗಳಲ್ಲಿ ವಿವಿಧ ಮಾದರಿಯ ಪ್ರಾಚ್ಯವಸ್ತುಗಳು ಲಭ್ಯವಿದ್ದು, ಬೇರೆಬೇರೆ ಕಾಲಗಳಲ್ಲಿ ರಾಜಗಟ್ಟದಲ್ಲಿನ ಜನವಸತಿಯ ಬಗೆಗೆ ಮಾಹಿತಿಯನ್ನು ಒದಗಿಸುತ್ತವೆ. ಆದಿಚರಿತ್ರಕಾಲ, ಗಂಗರಕಾಲ, ಮಧ್ಯಕಾಲೀನ ಯುಗ, ಹೀಗೆ ಬೇರೆಬೇರೆ ಕಾಲಗಳ ಮಡಕೆಯ ಚೂರುಗಳು ವಿವಿಧ ಸ್ತರಗಳಲ್ಲಿ ಕಂಡುಬರುತ್ತವೆ. ಈವರೆಗೆ ಈ ಊರಿನಲ್ಲಿ ದೊರೆತಿರುವ ಬಹುಪಾಲು ಇಟ್ಟಿಗೆಗಳು ಗಂಗರ ಕಾಲದ ಲಕ್ಷಣಗಳನ್ನೇ ಹೊಂದಿದ್ದು *೨ ಅವು ಸಹಸ್ರಾರು ಸಂಖ್ಯೆಯಲ್ಲಿ ದೊರೆತಿವೆ. ಆದರೆ ಇತ್ತೀಚೆಗೆ ಪತ್ತೆಯಾದ ಇಟ್ಟಿಗೆಯ ಕಟ್ಟಡವೊಂದು ಅತ್ಯಂತ ದೊಡ್ಡ ಅಳತೆಯ ಇಡಿಯಾದ ಇಟ್ಟಿಗೆಗಳಿಂದ ಕೂಡಿದ್ದು, (೪೦ x ೨೦ x ೬ ಸೆಂ.ಮೀ.) ಗಂಗರಿಂದ ಭಿನ್ನವಾಗಿದ್ದು, ಆದಿಚರಿತ್ರ ಕಾಲದ ಇಟ್ಟಿಗೆಗಳಿಗೆ ಬಹು ಸಮೀಪವಾಗಿವೆ. ಗಾಜಿನ ಮಣಿಗಳು, ಅರೆಪ್ರಶಸ್ತಶಿಲೆಗಳು, ಅಲ್ಲದೆ ಲೋಹವನ್ನು ಕರಗಿಸುವ ಮಣ್ಣಿನ ಮೂಸೆಗಳು ಲಭ್ಯವಾಗಿದ್ದು, ಇವುಗಳೆಲ್ಲವೂ ಇತರ ಆದಿಚರಿತ್ರ ನೆಲೆಗಳೊಂದಿಗೆ ದೊರೆತಿರುವ ಪ್ರಾಚ್ಯವಸ್ತುಗಳೊಂದಿಗೆ ಸಾಮ್ಯವನ್ನು ಪಡೆದಿವೆ.




**ನಂತರದ ಕಾಲ :** ಆದಿಚರಿತ್ರಕಾಲದ ಪ್ರಾಚ್ಯವಸ್ತುಗಳಿಂದ ಶ್ರೀಮಂತವಾಗಿರುವ ರಾಜಗಟ್ಟದ ನಿವೇಶನದಲ್ಲಿನ ಉಳಿದ ಸ್ತರಗಳನ್ನು ಗಮನಿಸಿದರೆ, ನಂತರದ ಕಾಲದ ಪ್ರಾಚ್ಯವಸ್ತುಗಳು ಅಪಾರವಾಗಿ ಕಣ್ಣಿಗೆ ಬೀಳುತ್ತವೆ. ಗಂಗರ ಕಾಲದ ಹೊಳಪಿನ ಮಡಕೆಗಳು, ಬೋಗುಣಿಗಳು, ದಂತ ಮತ್ತು ಗಾಜಿನ ಮಣಿಗಳು ಮುಂತಾದ ಅನೇಕ ಪ್ರಾಚ್ಯವಸ್ತುಗಳು ಇತ್ತೀಚಿನ ತಲಕಾಡು ಉತ್ಖನನದಲ್ಲಿ ದೊರೆತ ಪ್ರಾಚ್ಯವಸ್ತುಗಳೊಂದಿಗೆ ತಾಳೆ ಯಾಗುತ್ತವೆ. *೩ ಇದೇ ಕಾಲದ ಗಂಗರ ಲಿಪಿಯುಳ್ಳ ಕೆಲವು ವೀರಗಲ್ಲುಗಳು ರಾಜಗಟ್ಟದಲ್ಲಿ ಲಭ್ಯವಿವೆ. ಮಣ್ಣಿನಲ್ಲಿ ಮತ್ತಷ್ಟು ಮೇಲಿನ ಸ್ತರದಲ್ಲಿ ಮಧ್ಯಕಾಲೀನ ಯುಗಕ್ಕೆ ಸೇರಿದ, ಹೆಚ್ಚು ಅಲಂಕಾರಿಕವಲ್ಲದ ಒರಟಾದ ದಪ್ಪ ಮಡಕೆಯ ಚೂರುಗಳು ಲಭ್ಯವಿದ್ದು, ಮಧ್ಯಕಾಲೀನ ಜನಜೀವನದ ಮಾಹಿತಿಯನ್ನು

ನೀಡುವಲ್ಲಿ ಯಶಸ್ವಿಯಾಗುತ್ತವೆ. ಈಗಾಗಲೇ ದಾಖಲಿಸಿರುವ ಮಧ್ಯಯುಗೀನ ಶಾಸನವೊಂದು (ಕ್ರಿ.ಶ. ೧೫೩೨) ಹತ್ತಿರದ ಹೊಲವೊಂದರಲ್ಲಿ ಲಭ್ಯವಿದ್ದು*೪ ಅದನ್ನು ಈ ಲೇಖಕರು ಹೊರತೆಗೆದು ಪಡಿಯಚ್ಚು ಮಾಡಿದಾಗ, ಮತ್ತೂ ಹನ್ನೊಂದು ಹೆಚ್ಚಿನ ಸಾಲುಗಳು ಪತ್ತೆಯಾಗಿವೆ. *೫

**ನಾಣ್ಯಗಳು:** ರಾಜಗಟ್ಟದ ಮಣ್ಣಿನ ತೀವ್ರ ತಪಾಸಣೆಯಿಂದ ದೊರೆತ ಕೆಲವು ಪ್ರಾಚ್ಯವಸ್ತುಗಳಲ್ಲಿ ಕೆಲವು ನಾಣ್ಯಗಳೂ ಸೇರಿವೆ. ಅವುಗಳಲ್ಲಿ ಮುಖ್ಯವಾದುವು ವಿಜಯನಗರ ಕಾಲಕ್ಕೆ ಸೇರಿದ ಎರಡು ಚಿನ್ನದ ನಾಣ್ಯಗಳು. ಸುಮಾರು ೬-೮ ಮಿ.ಮೀ.ನಷ್ಟು ವ್ಯಾಸವುಳ್ಳ ಈ ನಾಣ್ಯಗಳು ಹೆಚ್ಚಿನ ಮಾಹಿತಿಯನ್ನೇನೂ ನೀಡುವುದಿಲ್ಲ. ಚೋಳರ ತಾಮ್ರದ ನಾಣ್ಯವೊಂದು ದೊರೆತಿದ್ದು, ಚೋಳರ ಸಂಪರ್ಕದ ಬಗ್ಗೆ ತುಸು ಮಾಹಿತಿಯನ್ನು ನೀಡುತ್ತದೆ.

ಒಟ್ಟಾರೆ ಬೃಹತ್‌ಶಿಲಾ ಸಮಾಧಿಗಳೂ ಸೇರಿದಂತೆ ರಾಜಗಟ್ಟವು ಆದಿಚರಿತ್ರ ಕಾಲದ ಪ್ರಾಚ್ಯಾವಶೇಷಗಳಿಂದ ಶ್ರೀಮಂತವಾಗಿದೆ. ಉತ್ತರ ಕರ್ನಾಟಕದಲ್ಲಿನ ಸನ್ನತಿ, ಬನವಾಸಿ, ಬ್ರಹ್ಮಗಿರಿ ಮುಂತಾದ ಕಡೆ ಆದಿಚರಿತ್ರಕಾಲದ ಸಂಸ್ಕೃತಿಯು ಕಂಡುಬಂದಿದ್ದು, ಇದೀಗ ಕರ್ನಾಟಕದ ದಕ್ಷಿಣ ಭಾಗದಲ್ಲಿ ಕಂಡುಬಂದಿರುವ ಈ ನೆಲೆಯು, ಉತ್ತರ ಮತ್ತು ದಕ್ಷಿಣ ಭಾಗಗಳ ವ್ಯಾಪಾರ ಮಾರ್ಗವನ್ನು ಗುರುತಿಸುವಲ್ಲಿ ಬಹು ಸಹಕಾರಿಯಾಗಿದೆ. *೬ ಆದಿಚರಿತ್ರ ಕಾಲದಿಂದ ಇಂದಿನವರೆಗೆ ನಿರಂತರ ಜನವಸತಿಯ ಕೇಂದ್ರವಾಗಿರುವ ರಾಜಗಟ್ಟವು ಕರ್ನಾಟಕದ ಕೆಲವೇ ಜೀವಂತ ಐತಿಹಾಸಿಕ ನೆಲೆಗಳಲ್ಲಿ ಒಂದಾಗಿ ನಿಂತಿದೆ.

(ಈ ನಿವೇಶನದ ಬಗ್ಗೆ ತಮ್ಮ ಅಮೂಲ್ಯ ಅಭಿಪ್ರಾಯವನ್ನು ಒದಗಿಸಿದ ಡಾ॥ ಅ. ಸುಂದರ, ಡಾ॥ ಹೆಚ್. ಆರ್. ರಘುನಾಥ ಭಟ್ಟ ಮತ್ತು ಡಾ॥ ಎಂ. ಎಸ್. ಕೃಷ್ಣಮೂರ್ತಿ ಅವರುಗಳಿಗೆ ಲೇಖಕ ಋಣಿ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಅನೇಕ ತಲೆಮಾರುಗಳ ಕಾಲ ಜನವಸತಿಯಿದ್ದ ಪ್ರಾಚೀನ ಪ್ರದೇಶಗಳಲ್ಲಿನ ಮಣ್ಣಿನಲ್ಲಿ, ಜನ-ಜಾನುವಾರುಗಳ ಉಚ್ಚಿಷ್ಟಗಳು ಬೆರೆತಿರುವುದೇ ಅಲ್ಲದೆ, ಸತ್ತ ಪ್ರಾಣಿಗಳ ದೇಹದ ಸಸಾರಜನಕಾಂಶವು ಮಣ್ಣಿನಲ್ಲಿ ಬೆರೆತು ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತದೆ.

*೨. ತಲಕಾಡು ನರಸಮಂಗಲ ಮತ್ತು ಮಣ್ಣೆ ಮುಂತಾದ ಕಡೆಗಳ ಇಟ್ಟಿಗೆಗಳಂತೆ.

*೩. ತಲಕಾಡು ಉತ್ಖನನದ ನಿರ್ದೇಶಕರಲ್ಲೊಬ್ಬರಾದ ಡಾ॥ ಎಂ.ಎಸ್. ಕೃಷ್ಣಮೂರ್ತಿಯವರ ಮಾಹಿತಿ- ಹೆಚ್ಚಿನ ವಿವರಗಳಿಗೆ Excavation at Talkad, Pub. by Dir. of Arch & Mus. Kar. Section on pottery by MSK.

*೪. E.C., Vol. IX (old) Bang,. Dist, Doddaballapur 26

*೫. ಮೈಸೂರು ವಿ.ವಿ.ದ ಶಾಸನ ವಿಭಾಗವು ಮಾಹಿತಿಯನ್ನು ಸ್ವೀಕರಿಸಿದ್ದು, ಮುಂದಿನ ಎಪಿಗ್ರಾಫಿಯ ಕರ್ನಾಟಕ ಸಂಪುಟದಲ್ಲಿ ಪ್ರಕಟಿಸಲಿದೆ.

*೬ ಡಾ॥ ಅ. ಸುಂದರರ ಮೌಖಿಕ ಅಭಿಪ್ರಾಯ.

ಲೋಕೇಶ್ ಎಂ., ಮರಿದೇವರು ಎಂ.ಎಸ್. , ಅರವಿಂದ ಎಸ್. *

# ಬೃಹತ್ ಶಿಲಾಯುಗದ ನೆಲೆಯಾಗಿ ಮೋಟಗಾನಹಳ್ಳಿ

ಪ್ರಾಗೈತಿಹಾಸಿಕ ಯುಗವು ಆದಿ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಮತ್ತು ನವಶಿಲಾಯುಗ ಎಂದು ವಿಂಗಡಿತ. ನವಶಿಲಾಯುಗದಲ್ಲಿ ಶಿಲಾಯುಧಗಳ ಜೊತೆಯಲ್ಲಿಯೇ ತಾಮ್ರದ ಆಯುಧಗಳೂ ಬಳಕೆ ಆಗಿ ಈ ಯುಗವು ತಾಮ್ರ ಶಿಲಾಯುಗ, ನಂತರದ ಕಾಲದಲ್ಲಿ ಕಬ್ಬಿಣದ ಅವಿಷ್ಕಾರವಾಗಿ ಕಬ್ಬಿಣದ ಆಯುಧಗಳು ಬಳಕೆ ಆಗಿ ಈ ಯುಗವು ಕಬ್ಬಿಣದ ಯುಗವೆನಿಸಿತ್ತು. ಈ ಯುಗದ ಜನರು ಬೃಹದಾಕಾರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದುದರಿಂದ ಈ ಯುಗವನ್ನು ಬೃಹತ್‌ಶಿಲಾಯುಗ ಎಂದೂ ಕರೆಯುತ್ತಾರೆ. ಕರ್ನಾಟಕದಾದ್ಯಂತ ಬೃಹತ್‌ಶಿಲಾಯುಗದ ಅನೇಕ ನೆಲೆಗಳು ಪತ್ತೆಯಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಪಟ್ಟಿರುವ ಹಲವಾರು ನಿವೇಶನಗಳು ತಜ್ಞರಿಂದ ಬೆಳಕಿಗೆ ಬಂದಿವೆ. ಅವುಗಳಲ್ಲಿ ಪ್ರಮುಖವಾದವು ಹೂಜಿಗಲ್ಲು, ಸಾವನದುರ್ಗದ ಇಟ್ಟಿಗೆ ಬಯಲು, ಎಲೆಕ್ಯಾತನ ಹಳ್ಳಿ, ಮೈಲನಹಳ್ಳಿ, ಅರಳೇಮರದದೊಡ್ಡಿ, ರೈಲ್ವೆಗೊಲ್ಲಹಳ್ಳಿ, ಕನಕಪುರ ತಾಲ್ಲೂಕಿನ ಗುತ್ತಲಹುಣಸೆ, ಸಾತನೂರಿನ ಸಂಬೇಗೌಡನ ದೊಡ್ಡಿ, ಗದ್ದೆಮಡಿನಕ್ಕಲು, ಬಂಡೆಗುಡಿ ತಿಗಳರಹೊಸಳ್ಳಿ, ಮರಳೇಗವಿಮಠ ಮತ್ತು ಕುಪ್ಪೆದೊಡ್ಡಿ, ಜಡಿಗೇನಹಳ್ಳಿ (ಹೊಸಕೋಟೆ ತಾಲ್ಲೂಕು) ಬನವಳ್ಳಿ (ಚನ್ನಪಟ್ಟಣ ತಾಲ್ಲೂಕು) ಚಿಕ್ಕಜಾಲ (ಬೆಂಗಳೂರು ಉತ್ತರ ತಾಲ್ಲೂಕು) ಸೋಲೂರು ಹೋಬಳಿಯ ಕಲ್ಯಾಣಪುರ, ಬಿಲ್ಲನಕೋಟೆ ಬಳಿಯ ಆಲದ ಹಳ್ಳಿ, ಮಹಿಮೆ ರಂಗನಬೆಟ್ಟ, ರಾಮನಗರದ ಹತ್ತಿರದ ಬಸವನಪುರ, ಗಂಗರಾಜರ ಹಳ್ಳಿ, ಕೆಂಜಿಗರಹಳ್ಳಿ, ವಡೇರಹಳ್ಳಿ ಮುಂತಾದವು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೋಕು ಸೋಲೂರು ಹೋಬಳಿಯ ಮೋಟಗಾನಹಳ್ಳಿಯ ಪಶ್ಚಿಮ ದಿಕ್ಕಿನಲ್ಲಿರುವ ಅಂಕನಪಾಳ್ಯದಲ್ಲಿ ೩೮ ಬೃಹತ್ ಶಿಲಾಯುಗದ ಸಮಾಧಿಗಳನ್ನು ನಮ್ಮ ಕ್ಷೇತ್ರಕಾರ್ಯದಲ್ಲಿ ಪತ್ತೆಹಚ್ಚಲಾಗಿದೆ. ಇದೇ ಹೋಬಳಿಯ ಹೊಸಪಾಳ್ಯದಲ್ಲಿ ಈ ಯುಗದ ೧೮ ಸಮಾಧಿಗಳೂ ಬೆಳಕಿಗೆ ಬಂದಿವೆ. *೧

ಅಂಕನಪಾಳ್ಯದಲ್ಲಿ ಪತ್ತೆ ಮಾಡಿರುವ ಸಮಾಧಿಗಳು ಸ್ವಸ್ತಿಕ್ ಆಕಾರದಲ್ಲಿ ಒಂದನ್ನೊಂದು ಒರಗಿಸಿ ಇಟ್ಟಂತೆ ನಿರ್ಮಿಸಲಾಗಿದೆ. ಸುಸ್ಥಿತಿಯಲ್ಲಿರುವಂತಹ ಕೆಲವು ಸಮಾಧಿಗಳ ಸುತ್ತಲೂ ಉಂಡೆಕಲ್ಲುಗಳನ್ನು ಜೋಡಿಸಿ ಶಿಲಾವರ್ತುಳಗಳನ್ನು ರಚಿಸಿರುವುದು ಕಂಡುಬರುತ್ತದೆ. ಶಿಲಾವರ್ತುಳದ ಅತಿ ಹೆಚ್ಚಿನ ವಿಸ್ತಾರವನ್ನು ಹೊಂದಿರುವ ಸಮಾಧಿಯ ಸುತ್ತಳತೆ ೨೫ ಅಡಿ ಇದೆ; ಅತಿಕಡಿಮೆ ಅಳತೆಯ ವೃತ್ತವನ್ನು ಹೊಂದಿರುವ ಸಮಾಧಿಯ ಸುತ್ತಳತೆ ೭ ಅಡಿ ಇದೆ.

ಸಮಾಧಿಗಳು ಸರಿ ಸುಮಾರು ೬ ಅಡಿಗಳಷ್ಟು ಉದ್ದ ಮತ್ತು ೪ ಅಡಿಗಳಷ್ಟು ಅಗಲವನ್ನು ಹೊಂದಿವೆ. ಸಮಾಧಿಗಳ ಪೂರ್ವದಿಕ್ಕಿನಲ್ಲಿ ಒಬ್ಬ ವ್ಯಕ್ತಿ ನುಸುಳಿ ಒಳಗೆ ಹೋಗಿ ಹೊರಬರುವಷ್ಟು ಅಗಲದ ಕಿಂಡಿಕೋಣೆಯನ್ನು ನಿರ್ಮಿಸಲಾಗಿದೆ ಮತ್ತು ಸಮಾಧಿಗಳನ್ನು ಹಾಸುಗಲ್ಲು (capstones) ಹಾಕಿ ಮುಚ್ಚಲಾಗಿದೆ. ಹೆಚ್ಚಿನ ಸಮಾಧಿಗಳು ಸುಸ್ಥಿತಿಯಲ್ಲಿವೆ. ಆದರೆ ೪ ಸಮಾಧಿಗಳು ಅಗೆಯಲ್ಪಟ್ಟು ನಾಶವಾಗಿವೆ. ಅಗೆದಿರುವ ಮಣ್ಣಿನಲ್ಲಿ ಕಪ್ಪು ಮತ್ತು ಕೆಂಪು ಮಿಶ್ರಿತ ಬಣ್ಣದ ಮಡಿಕೆಯ ಚೂರುಗಳು ದೊರೆತಿವೆ. ಬ್ರೂಸ್‌ಫೂಟ್‌ರವರ ಪ್ರಕಾರ ''ಕಂದು, ಕೆಂಪು ಬಣ್ಣದ ಮಡಿಕೆಯ ಚೂರುಗಳು ನವಶಿಲಾಯುಗದ ಆದಿಭಾಗದಲ್ಲಿ ತಯಾರಾದವು. *೨ ಸಮಾಧಿಗಳ ಸುತ್ತಲಿನ ಹೊಲದಲ್ಲಿ (ಸರ್ವೆ ನಂ. ೧೪೯ ) ನಯ ಮಾಡಿರುವ ಕಲ್ಲಿನ ಕೈಕೊಡಲಿ ದೊರೆತಿರುತ್ತದೆ. ಇದರ ಅಳತೆ ೫ ಇಂಚು ಉದ್ದ ಮತ್ತು ೨ ಇಂಚು ಅಗಲ. ಉಪಕರಣ ದೊರೆತ ಹೊಲದಲ್ಲಿ ಬೂದಿ ಮಿಶ್ರಿತವಾದ ಮಣ್ಣು, ಮೂಳೆಯ ಚೂರುಗಳು ದೊರೆತಿವೆ; ನಿಲುವುಗಲ್ಲು ಪತ್ತೆಯಾಗಲಿಲ್ಲ.

ಈ ಸ್ಥಳದಲ್ಲಿನ ಸಮಾಧಿಗಳು ಕಲ್ಲು ಚಪ್ಪಡಿಗಳಿಂದ ನಿರ್ಮಿತವಾಗಿವೆ. ಮತ್ತು ಕಿಂಡಿಕೋಣೆಗೋರಿಗಳ (port-hole cist) ರಂಧ್ರವು ಪೂರ್ವದಿಕ್ಕಿಗೆ ಇರುತ್ತದೆ. ಈ ಸಮಾಧಿಗಳು

* ಅಂತಿಮ ಬಿ.ಎ. ವಿದ್ಯಾರ್ಥಿಗಳು, ಬಸವೇಶ್ವರ ಪದವಿ ಕಾಲೇಜ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಬೃಹತ್ ಶಿಲಾಯುಗದ ಕಾಲದವು. ಅಂದರೆ ವಿದ್ವಾಂಸರ ಪ್ರಕಾರ ಕ್ರಿ.ಪೂ. ೧೨೦೦ರಿಂದ ಕ್ರಿ.ಪೂ. ೩೦೦. ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಕ್ರಿ.ಪೂ. ನಾಲ್ಕು ಶತಮಾನಗಳಷ್ಟು ಪ್ರಾಚೀನವೆಂದು ಸಂಶೋಧಕರ ಅಭಿಪ್ರಾಯ.

ಈ ಸಂಸ್ಕೃತಿಯಲ್ಲಿ ಕಬ್ಬಿಣದ ಉಪಯೋಗದ ಜೊತೆಗೆ ಕಪ್ಪು ಬಣ್ಣದ ಮತ್ತು ಕೆಂಪು ಬಣ್ಣದ ಮಡಕೆಗಳು ಮತ್ತು ಮಡಕೆಗಳ ಮೇಲೆ ರೇಖಾಚಿತ್ರಗಳು ಇರುವುದು ವಿಶೇಷ ಅಂಶವಾಗಿದೆ. ಆದರೆ ಈ ಸ್ಥಳದಲ್ಲಿ ಕಬ್ಬಿಣದ ಯಾವುದೇ ವಸ್ತುಗಳು ದೊರೆಯಲಿಲ್ಲ, ಬದಲು ಮಡಕೆಯ ಚೂರುಗಳು ಹೆಚ್ಚಾಗಿ ಕಂಡು ಬಂದಿವೆ. ಈ ಅಂಶಗಳ ಕಾರಣ ಈ ಸ್ಥಳವು ಪ್ರಾಗೈತಿಹಾಸಿಕ ನೆಲೆಯಾಗಿತ್ತು ಎನ್ನಬೇಕು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಇತಿಹಾಸದರ್ಶನ: ಸಂಪುಟ. ೧೧/೧೯೯೬

*೨. ಎಂ.ಎ. ಆರ್, ೧೯೪೨, ಪು. ೧೦೭

* (ನಮ್ಮ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ರಾಜೇಶ್ ಬಾಬು. ಬಿ.ಎಸ್, ಮೂರ್ತಿ .ಕೆ. ರೇಣುಕಸ್ವಾಮಿ. ಎನ್ಕೆ, ಯವರಿಗೆ, ಲೇಖನ ಸಿದ್ಧಪಡಿಸಲು ಸಲಹೆ ಸೂಚನೆಗಳನ್ನು ನೀಡಿದ ಶ್ರೀ ಜೆ.ಟಿ. ಜಯರಾಮಯ್ಯನವರಿಗೆ, ಮತ್ತು ಆರ್ಥಿಕವಾಗಿ ನಮ್ಮನ್ನು ಪ್ರೋತ್ಸಾಹಿಸಿದ ನಮ್ಮ ತಂದೆ ತಾಯಿಗಳಿಗೆ ನಾವು ಕೃತಜ್ಞರು)

ಜೆ.ಟಿ. ಜಯರಾಮಯ್ಯ *

# ಬಂಡೆಚಿಕ್ಕನಹಳ್ಳಿಯ ಶಿಲಾಯುಗದ ಸಮಾಧಿಗಳು – ಶೋಧನೆ

ಪ್ರಾಗೈತಿಹಾಸಿಕ ನೆಲೆಯಾದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ; ಹೊಸಕೋಟೆ, ಮಾಗಡಿ, ರಾಮನಗರ, ಕನಕಪುರ, ನೆಲಮಂಗಲ ಮುಂತಾದ ತಾಲ್ಲೋಕುಗಳಲ್ಲಿ ಶಿಲಾಯುಗದ ನೆಲೆಗಳು ಪತ್ತೆ ಆಗಿವೆ.

ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲೂಕಿನ ಬಂಡೆಚಿಕ್ಕನಹಳ್ಳಿಯ ಪಕ್ಕದಲ್ಲಿ ಗುಡ್ಡಗಳು ಕಂಡುಬರುತ್ತವೆ. ಇಲ್ಲಿರುವ ಬಂಡೆಗಳನ್ನು ಒಡೆದು ಜಲ್ಲಿಕಲ್ಲು ಮಾಡಿ ಬೆಂಗಳೂರಿಗೆ ಸಾಗಿಸುತ್ತಾರೆ. ಇದರಿಂದಾಗಿ ಈ ಹಳ್ಳಿಯನ್ನು ಬಂಡೆ ಚಿಕ್ಕನ ಹಳ್ಳಿಯೆಂದು ಕರೆಯುತ್ತಾರೆ. ಈ ಹಳ್ಳಿಯ ಪರಿಸರದಲ್ಲಿ ೭೫ ಶಿಲಾಯುಗದ ಸಮಾಧಿಗಳನ್ನು ಇತ್ತೀಚಿನ ನನ್ನ ಕ್ಷೇತ್ರಕಾರ್ಯದಲ್ಲಿ ಪತ್ತೆಹಚ್ಚಲಾಗಿದೆ.

ಈ ಸಮಾಧಿಗಳು ಕ್ರಿ.ಪೂ. ೧ನೇ ಶತಮಾನಕ್ಕೆ ಸೇರಿರಬಹುದೆಂದು, ಸಂಶೋಧಕರ ಅಭಿಪ್ರಾಯ. ಈ ಸ್ಥಳದಲ್ಲಿ ಎರಡು ಸಮಾಧಿಗಳನ್ನು ಮಾತ್ರ ಹಾಳು ಮಾಡಿದ್ದಾರೆ. ಉಳಿದ ಸಮಾಧಿಗಳು ಸುಸ್ಥಿತಿಯಲ್ಲಿವೆ. ಈ ಸಮಾಧಿಗಳ ಬಳಿಯಲ್ಲಿ ದೊರೆಯುವ ವಸ್ತುಗಳಿಂದ ಶಿಲಾಯುಗದ ಜೀವನಕ್ರಮವನ್ನು ತಿಳಿಯ ಬಹುದಾಗಿದೆ.

ಸ್ಥಳೀಯ ಜನರು ಇಂತಹ ಸ್ಥಳಗಳನ್ನು ಮತ್ತು ಸಮಾಧಿಗಳನ್ನು ಪಾಂಡವರಗುಡಿಗಳೆಂದು ಕರೆಯುತ್ತಾರೆ. ಮತ್ತು ಕೆಲವು ಕಡೆ ನಿಧಿಯ ಆಸೆಯಿಂದ ಹಾಳು ಮಾಡಿರುತ್ತಾರೆ. ಇದಲ್ಲದೆ ಈ ಹಳ್ಳಿಯ ಸುತ್ತಮುತ್ತಲಿನ ಹೊಲಗಳಲ್ಲಿಯೂ ಸಹ ಶಿಲಾವೃತ್ತಗಳು ಕಂಡುಬರುತ್ತವೆ.

ಭಿನ್ನವಾಗಿರುವ ಸಮಾಧಿಯೊಂದರ ಮೇಲ್ಭಾಗದ ಚಪ್ಪಡಿಯು (Capstone) ೧೨ ಅಡಿಯಷ್ಟು ಉದ್ದವಾಗಿದ್ದು ೬೧/೨ ಅಡಿಗಳಷ್ಟು ಅಗಲವಾಗಿದೆ. ಮತ್ತು ೦.೫ ಅಡಿಯಷ್ಟು ಗಾತ್ರವುಳ್ಳದ್ದಾಗಿರುತ್ತದೆ. ಈ ಶಿಲಾಗೋರಿಯು ೨೩ ಅಡಿಗಳಷ್ಟು ವೃತ್ತಾಕಾರವಾಗಿರುತ್ತದೆ.

ಈ ಸಮಾಧಿಯ ಸುತ್ತಮುತ್ತ ಮಡಕೆಯ ಚೂರುಗಳು ಬೂದಿ ಮತ್ತು ಕಿಟ್ಟಗಳು ಕಂಡುಬರುತ್ತವೆ. ಕಪ್ಪು ಬಣ್ಣದ, ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಯ ಚೂರುಗಳು ಹೆಚ್ಚಾಗಿ ದೊರೆಯುತ್ತವೆ. ಕೆಲವು ಮಡಿಕೆ ಚೂರುಗಳ ಮೇಲೆ ಕೆಂಪು ಬಣ್ಣದ ರೇಖೆಗಳು ಕಂಡುಬರುತ್ತವೆ. ಇಂತಹ ಮಡಿಕೆಗಳು ನವಶಿಲಾಯುಗದ ಪ್ರಾರಂಭದ ಕಾಲದಲ್ಲಿ ತಯಾರಿಸಲ್ಪಟ್ಟಿವೆಂದು ಬ್ರೂಸ್‌ಫೂಟರವರು ಅಭಿಪ್ರಾಯ ಪಟ್ಟಿರುತ್ತಾರೆ. ಇದರಿಂದಾಗಿ ಈ ಸಮಾಧಿಗಳು ಕ್ರಿ.ಪೂ. ೧ನೆಯ ಶತಮಾನಕ್ಕೆ ಸೇರಿರಬಹುದಾಗಿವೆ. ಪಕ್ಕದಲ್ಲಿ ಹೇರಳವಾಗಿ ದೊರೆಯುವ ಬಂಡೆಗಳ ಕಲ್ಲುಗಳನ್ನು ಉಪಯೋಗಿಸಲಾಗಿದೆ. ಸುಸ್ಥಿತಿಯಲ್ಲಿರುವ ಈ ಶಿಲಾವೃತ್ತಗಳು ಮತ್ತು ಶಿಲಾಸಮಾಧಿಗಳನ್ನು ವೈಜ್ಞಾನಿಕವಾಗಿ ಸಂಶೋಧನೆ ಮಾಡಿ ಅಭ್ಯಾಸ ಮಾಡಿದರೆ ಹೆಚ್ಚಿನ ಮಾಹಿತಿಗಳು ದೊರೆಯುತ್ತವೆ.

* ಉಪನ್ಯಾಸಕರು, ವಿವೇಕಾನಂದ ಪದವಿ ಪೂರ್ವ ಕಾಲೇಜು, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಎಂ. ಲೋಕೇಶ್ ಮತ್ತು ಪಿ. ಗೋಪಿ*

# ಮುನಿನಗರದ ಶಿಲಾಯುಗದ ಸಮಾಧಿಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾವನದುರ್ಗ, ಇಟ್ಟಿಗೆಬೈಲು, ಹೂಜಿಗಲ್ಲು, ಚಿಕ್ಕಜಾಲ, ಅರದಳೇಹಳ್ಳಿ ಮುಂತಾದ ಕಡೆ ಬೃಹತ್ ಶಿಲಾಯುಗದ ಅವಶೇಷಗಳು ಪತ್ತೆ ಆಗಿವೆ.

ಸದ್ಯದ ಕ್ಷೇತ್ರಕಾರ್ಯದಲ್ಲಿ, ಕನಕಪುರದ, ರಸ್ತೆಯ ಕಗ್ಗಲೀಪುರದ ಮುನಿನಗರ ಎಂಬಲ್ಲಿ ಸುಮಾರು ೩೫ಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳನ್ನು, ನಾವು ಗುರುತಿಸಿದ್ದೇವೆ. ಹೆಚ್ಚಿನ ಶಿಲಾಗೋರಿಗಳು ಸ್ಥಳೀಯರಿಂದ ಹಾಳಾಗಿವೆ. ನಿಧಿ ಇರಬಹುದೆಂಬ ನಂಬಿಕೆಯಿಂದ ಸಮಾಧಿಗಳನ್ನು ಹಾಳು ಮಾಡಲಾಗಿದೆ. ಸಮಾಧಿಯ ಮೇಲ್ಭಾಗದ ಕಲ್ಲನ್ನು ಒಡೆದು ಅದರೊಳಗಿರುವ ವಸ್ತುಗಳನ್ನು ಹೊರತೆಗೆದಿರುವುದು ಕಂಡು ಬರುತ್ತದೆ. ಕಪ್ಪು ಮತ್ತು ಕೆಂಪು ಮಿಶ್ರಿತ ಮಡಿಕೆಯ ಚೂರುಗಳು ಈ ಸಮಾಧಿಗಳ ಸುತ್ತಮುತ್ತಲೂ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ಹೆಚ್ಚಿನ ಸಮಾಧಿಗಳು ೪ x ೪ ಅಡಿಗಳ ಉದ್ದ ಅಗಲವಾಗಿದ್ದು, ಪಕ್ಕದ ಕಲ್ಲುಚಪ್ಪಡಿಗಳು ಅರ್ಧ ಅಡಿ ಗಾತ್ರವುಳ್ಳವಾಗಿವೆ. (Cap stone) ಮುಚ್ಚಳದ ಕಲ್ಲುಗಳು ಅರ್ಧ ಅಡಿಗಿಂತಲೂ ದಪ್ಪನಾಗಿವೆ.

ಪಾಂಡವರ ಗುಡಿಗಳೆಂದು ಕರೆಸಿಕೊಳ್ಳುವ ಈ ಸಮಾಧಿಗಳು ದಾರಿ ಕೋಣೆಯ ಸಮಾಧಿಗಳಾಗಿರುತ್ತವೆ. ಪೂರ್ವಮುಖ ಕಿಂಡಿಗಳುಳ್ಳ ಸಮಾಧಿಗಳು ಹೆಚ್ಚು ಸಂಖ್ಯೆಯಲ್ಲಿದ್ದು ಹೆಚ್ಚಿನ ಶಿಲಾಸಮಾಧಿಗಳ ಸುತ್ತಲೂ ಕಲ್ಲುಗಳಿಂದ ವೃತ್ತವನ್ನು ರಚಿಸಲಾಗಿದೆ. ಒಂದು ಅಥವಾ ಎರಡು ಶಿಲಾವೃತ್ತಗಳು ಕಂಡು ಬರುತ್ತವೆ.

ಕೆಲವು ಸಮಾಧಿಗಳ ಮೇಲೆ ಸಣ್ಣ ಸಣ್ಣ\ ಕಲ್ಲುಗಳ ಗುಡ್ಡೆಗಳಿರುವುದು ಕಂಡು ಬಂದಿದೆ. ಇದಲ್ಲದೆ, ಭೂಮಿಯ ಮೇಲ್ಭಾಗದಲ್ಲಿ ಕಲ್ಲುಗಳನಿಟ್ಟು, ಆ ಕಲ್ಲುಗಳ ಮೇಲೆ ಚಪ್ಪಡಿ ಕಲ್ಲನ್ನು ಇಟ್ಟಿರುವುದು ಕಂಡು ಬಂದಿದೆ. ಇಂಥ ೩ ಸಮಾಧಿಗಳು ಇಲ್ಲಿವೆ. ಸ್ಥಳೀಯವಾಗಿ ದೊರೆಯುವ ಕಲ್ಲಿನ ಚಪ್ಪಡಿಗಳನ್ನು ಇವಕ್ಕೆ ಬಳಸಲಾಗಿದೆ. ಆ ಸ್ಥಳಕ್ಕೆ ಹೊಂದಿಕೊಂಡಿರುವ ಬೆಟ್ಟದಲ್ಲಿ ಕಲ್ಲಾಸರೆಗಳು ಮತ್ತು ಗವಿಗಳು ಇವೆಯೆಂದು ಹಳ್ಳಿಯವರ ಅಂಬೋಣ. ಈ ಕಲ್ಲಾಸರೆಯಲ್ಲಿ ಚಿತ್ರಗಳು ಇದ್ದಿರಬಹುದಾದ ಸಾಧ್ಯತೆಗಳಿವೆ. ಕಂಡಿಗವಿ ಎಂದು ಕರೆಯುವ ಬೆಟ್ಟದ ಎದುರು ಭಾಗದ ಹೊಲದಲ್ಲಿ ಎರಡು ಸಾಲುಗಳುಳ್ಳ ಶಾಸನದ ಕಲ್ಲಿದೆ. ಆದರೆ ಅಕ್ಷರಗಳು ತ್ರುಟಿತವಾಗಿದ್ದ ಕಾರಣ ಓದಲು ಸಾಧ್ಯ ವಾಗಲಿಲ್ಲ.

ಈ ಸಮಾಧಿಗಳ ಪಕ್ಕದಲ್ಲಿ ಮುನೀಶ್ವರ ಎಂಬ ಹಳೆಯ ಕಾಲದ ದೇಗುಲವಿದೆ. ಅಪರೂಪಕ್ಕೆ ಇಲ್ಲಿ ಪೂಜೆ ನಡೆಯುತ್ತದೆ. ಈ ದೇವಾಲಯದ ಹಿಂಭಾಗದಲ್ಲಿಯೂ ೬ ಶಿಲಾ ಸಮಾಧಿಗಳನ್ನು ಕಾಣಬಹುದಾಗಿದೆ. ಈ ಪ್ರದೇಶದಲ್ಲಿ ಉತ್ಖನನವನ್ನು ನಡೆಸಿದರೆ ಹೆಚ್ಚಿನ ಮಾಹಿತಿ ಲಭ್ಯವಾಗಬಹುದು.

(ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ನಂಜುಂಡಸ್ವಾಮಿ, ಕಲಿ, ಹಾಗೂ ಅಭಿರುಚಿ ತಂಡದ ಸದಸ್ಯರಿಗೆ ನಮ್ಮ ಧನ್ಯವಾದಗಳು)

* ಭುವನೇಶ್ವರಿನಗರ, ಬೆಂಗಳೂರು

ಕು || ಎಸ್.ವೈ. ನಿರ್ಮಲಾ *

# ಶ್ರೀನಿವಾಸಪುರ ಮತ್ತು ಮಾದೀಪುರದ ಬೃಹತ್ ಶಿಲಾಯುಗದ ಸಮಾಧಿಗಳು

ಶಿಲಾಯುಗದ ಕೊನೆಯ ಹಂತವಾದ ಬೃಹತ್ ಶಿಲಾ ಯುಗಕ್ಕೆ ಸೇರುವ ಈ ಸಮಾಧಿಗಳು ಬೆಂಗಳೂರಿನ ಸುತ್ತಮುತ್ತ ಇದ್ದು. ಅವುಗಳಲ್ಲಿ ಅನೇಕವು ಬೆಳಕಿಗೆ ಬಂದಿವೆ. ನನ್ನ ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಶ್ರೀನಿವಾಸಪುರ ಮತ್ತು ಮಾದೀಪುರಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳು ಕಂಡು ಬಂದಿವೆ.

ಮಾದೀಪುರದಲ್ಲಿ ಕಂಡುಬರುವ ಸಮಾಧಿಗಳು ದಾರಿ ಕೋಣೆಯ ಸಮಾಧಿಗಳಾಗಿದ್ದು ಹೆಚ್ಚಿನ ಸಮಾಧಿಗಳಲ್ಲಿ ಕಿಂಡಿಗಳು ಪೂರ್ವಾಭಿಮುಖವಾಗಿವೆ.



ಬೆಂಗಳೂರು-ಕುಣಿಗಲ್ ನಡುವೆ ಹೊಸದಾಗಿ ರಸ್ತೆ ನಿರ್ಮಿಸುವಾಗ ಭಗ್ನಗೊಂಡಿರುವ ಮೂರು ಸಮಾಧಿಗಳ ಬಳಿಯಲ್ಲಿ ಅನೇಕ ಮಡಿಕೆ ಚೂರುಗಳನ್ನು ಕಾಣಬಹುದು. ಅಲ್ಲಿ ದೊರೆತಿರುವ ಬ್ಲಾಕ್‌ವೇರ್ ಪಾಟರೀಸ್ ಹಾಗೂ ರೆಡ್ ಮತ್ತು ಬ್ಲಾಕ್‌ವೇರ್ ಪಾಟರೀಸ್‌ಗಳನ್ನು ಸಂಗ್ರಹಿಸಿಲಾಯಿತು. ಇಲ್ಲಿ



ಭಗ್ನಗೊಂಡಿರುವ ಮೂರು ಸಮಾಧಿಗಳ ಸುತ್ತಲೂ ಸಣ್ಣ ಸಣ್ಣ ಕಲ್ಲುಗಳನ್ನು ಇಟ್ಟು ವೃತ್ತಾಕಾರದಲ್ಲಿ ರಚಿಸಲಾಗಿದೆ. ಇನ್ನುಳಿದ ಸಮಾಧಿಗಳು ನಾಲ್ಕು ಅಡಿಗಳಷ್ಟು ಅಗಲ ಹಾಗೂ ಐದೂವರೆ ಅಡಿಗಳಷ್ಟು ಉದ್ದವಾಗಿವೆ.

ಬೃಹತ್ ಶಿಲಾಯುಗದ ಕಾಲದಲ್ಲಿ ಕಬ್ಬಿಣದ ಆಯುಧಗಳು ಸಮಾಧಿಗಳಲ್ಲಿ ದೊರೆಯುವುದು ಸಾಮಾನ್ಯವಾದ ಸಂಗತಿ. ಈ ಪ್ರದೇಶಗಳಲ್ಲಿ ಕಬ್ಬಿಣದ ಆಯುಧಗಳಿಗೆ ಬದಲಾಗಿ ಕಬ್ಬಿಣದ ಕಿಟ್ಟದ ಉಂಡೆಗಳು ಕಾಣಬರುತ್ತವೆ.

ಬೃಹತ್ ಶಿಲಾಯುಗದ ಸಮಾಧಿಗಳನ್ನು ನಿರ್ದೇಶಿಸಲು ಎತ್ತರವಾದ ಕಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇಂತಹ ನಿಲುವುಗಲ್ಲನ್ನು ಸಹ ನಾವು ಇಲ್ಲಿ ಕಾಣಬಹುದು. ಸುಮಾರು ಮೂರು ಅಡಿ ಎತ್ತರದ ನಿಲುವುಗಲ್ಲು ಇದೆ.

ಭಗ್ನಗೊಂಡಿರುವ ಸಮಾಧಿಗಳು ರಸ್ತೆಯ ಎಡಭಾಗದಲ್ಲಿ ಕಂಡು ಬಂದರೆ ರಸ್ತೆಯ ಬಲಭಾಗದ ನೀರಿನ ಕಟ್ಟೆಯ ಬಳಿಯಲ್ಲಿ ಹಾಸುಬಂಡೆಯೊಂದು ಕಂಡುಬರುತ್ತದೆ. ಬಂಡೆಯ

---

* ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩



ಮೇಲೆ ಕಲ್ಲುಗಳನ್ನು ಜೋಡಿಸಿ ಇದರ ಮೇಲೆ ವಿಶಾಲವಾದ ಹಾಸುಚಪ್ಪಡಿಯನ್ನು ಹಾಸಲಾಗಿದೆ. ಇದು ಸುಮಾರು ಒಂದು ಅಡಿ ದಪ್ಪ ಹದಿಮೂರೂವರೆ ಅಡಿ ಉದ್ದ ಮತ್ತು ಒಂಬತ್ತೂವರೆ ಅಡಿ ಅಗಲವನ್ನು ಹೊಂದಿದೆ. ಈ ಚಪ್ಪಡಿಯ ಕೆಳಗೆ ಒಂದೂವರೆ ಅಡಿಯಷ್ಟು ಜಾಗವಿದ್ದು ಒಬ್ಬ ಮನುಷ್ಯ ನುಸುಳಿ ಬರಬಹುದಾಗಿದೆ.

ಶ್ರೀನಿವಾಸಪುರದ ಬಳಿ ಐದೂ ವೃತ್ತಾಕಾರದ ಸಮಾಧಿಗಳು ರಸ್ತೆಗೆ ಹತ್ತಿರದಲ್ಲಿಯೇ ಕಾಣಸಿಗುತ್ತವೆ.

(ಈ ಪ್ರಬಂಧ ರಚನೆಗೆ ಹಾಗೂ ಕ್ಷೇತ್ರಕಾರ್ಯಕ್ಕೆ ನೆರವಾದ ಶ್ರೀಯುತ ಜಯರಾಮ್‌ರವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು)

ಎಂ. ಪಿ. ವೀಣಾ*

# ಕೊಟ್ನಕಲ್ಲು ಪರಿಸರದ ಪ್ರಾಗೈತಿಹಾಸಿಕ ನೆಲೆಗಳು

ಬಳ್ಳಾರಿ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಅದರಲ್ಲಿಯೂ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಆದಿ, ನೂತನ, ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಜನರ ಅವಶೇಷಗಳಾದ ಶಿಲಾಯುಧ, ಮಡಕೆ, ಗವಿವರ್ಣ ರೇಖಾಚಿತ್ರ, ಬಯಲು ಬಂಡೆ ರೇಖಾಕೃತಿ ಮತ್ತು ಶಿಲಾಗೋರಿ ಇತ್ಯಾದಿ ಪ್ರಾಗೈತಿಹಾಸಿಕ ಅವಶೇಷಗಳ ನೆಲೆಗಳು ಇವೆ.

ಈ ನಿಟ್ಟನಲ್ಲಿ ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳಲ್ಲಿ ಒಂದಾದ ಹಡಗಲಿ ತಾಲ್ಲೂಕಿನ ಉತ್ತರಕ್ಕೆ ಇರುವ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಮತ್ತು ಈ ನದಿಗೆ ಸೇರುವ ಸಣ್ಣ ಹಳ್ಳ, ತೊರೆಗಳ ದಡದಲ್ಲಿ ಅನೇಕ ಪ್ರಾಗೈತಿಹಾಸಿಕ ನೆಲೆಗಳಿವೆ. ಇಂಥ ನೆಲೆಗಳು ಕೊಟ್ನಕಲ್ಲು, ನವಲಿ, ಹಡಗಲಿ, ರಾಜವಾಳ ಹುಲಿಗುಡ್ಡ, ಮಾಗಳ ಮೈಲಾರದ ಬಳಿಯೂ ದೊರೆತಿವೆ.

**ಕೊಟ್ನಕಲ್ಲು :** ಹೂವಿನ ಹಡಗಲಿಯಿಂದ ಸುಮಾರು ೫.೦೦ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದ್ದು ಇಂದಲ್ಲಿ ಜನವಸತಿ ಇಲ್ಲ. ಈ ಪ್ರದೇಶದ ಬಯಲು ಬಂಡೆಗಳ ಮೇಲೆ ಕೆಲವು ರೇಖಾಕೃತಿಗಳು ದೊರೆತಿವೆ. ಕೊಟ್ನಕಲ್ಲು ಪರಿಸರವು ನದಿಗೆ ಸಮೀಪವಾಗಿದ್ದು, ಭೂಮಿಯ ಮೇಲೆ ಅಲ್ಲಲ್ಲಿ ಕಲ್ಲುಗುಂಡುಗಳ ಗುಡ್ಡವಿದೆ. ಈ ಭೂಮಿ ವ್ಯವಸಾಯಕ್ಕೆ ಯೋಗ್ಯವಲ್ಲದ ಬಂಜರು ಭೂಮಿ. ಹಡಗಲಿಯನ್ನು ಹಾದುಬರುವ ಜಾಲಿಹಳ್ಳಿ ಮತ್ತು ಬಸುರೆಡ್ಡಪ್ಪನ ಕೆರೆಯಿಂದ ಬರುವ ಹಳ್ಳಗಳು ಸೇರುವ ಸಂಗಮದಲ್ಲಿ (ಇವೆರಡು ಹಳ್ಳಿಗಳು ಮುಂದೆ ತುಂಗಭದ್ರವನ್ನು ಸೇರುತ್ತವೆ.) ಕಲ್ಲುಬಂಡೆಗಳ ಸಣ್ಣಗುಡ್ಡದ ಪಕ್ಕದಲ್ಲಿಯೇ ಕೊಟ್ನಕಲ್ಲು ಎಂಬ ಹಳೆಯ ಗ್ರಾಮವಿದ್ದು, ಹಳೇ ಊರಿನ ಪ್ರದೇಶದಲ್ಲಿ ಹಗೇವುಗಳು, ಹಳೇ ಮಣ್ಣು, ಮಧ್ಯಯುಗೀನ ಬೂದು ಮತ್ತು ಕೆಂಪು ವರ್ಣದ ಮಡಕೆ ಚೂರು, ಕಬ್ಬಿಣದ ಕಿಟ್ಟ, ಇಟ್ಟಂಗಿ ಚೂರು ಇತ್ಯಾದಿಗಳು ಸಿಕ್ಕಿವೆ. ಈ ಊರಿನ ಪಕ್ಕದ ಗುಡ್ಡದ ಸಾಲಿನಲ್ಲಿ ಉಳಿಯಿಂದ ಹಾಗೂ ಕಲ್ಲುಗಿಂಡಿನಿಂದ ಮಾಡಿಸಿದ ಚಿತ್ರ-ವಿಚಿತ್ರ ರೇಖಾಚಿತ್ರಗಳಿವೆ. ಕೆಲವು ಇಸ್ಲಾಂ ಧರ್ಮದ ಮೊಹರಂ ಪಟ್ಟಕ್ಕೆ ಸಂಬಂಧಿಸಿದ ದೇವರುಗಳಂತಿವೆ (ಹಸ್ತದಾಕಾರ) ಅಥವಾ ಪಂಜ, ರೇಖಾ ಚಿತ್ರಗಳಿವೆ.

ಇವುಗಳ ಜೊತೆಗೆ ಜಾಮಿತಿಯ ರೇಖಾಚಿತ್ರಗಳಿವೆ. ಅನೇಕ ಚಿತ್ರಗಳ ಮೇಲೆ ಆಧುನಿಕ ಚಿತ್ರಗಳನ್ನು ಬಿಡಿಸಿರುವ ಕಾರಣ ಹಳೆಯ ಚಿತ್ರಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಈ ಚಿತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇವುಗಳು ಒಂದೇ ಕಾಲದವುಗಳಾಗಿರದೇ ಭಾಗಶಃ ಬೃಹತ್ ಶಿಲಾಯುಗ ಸಂಸ್ಕೃತಿಯಿಂದ ಇತ್ತೀಚಿನ ಕಾಲದವರೆಗಿನವುಗಳಾಗಿವೆ.

ತುದಿಗಳನ್ನು ಕೂಡಿಸಿರುವ ಕತ್ತರಿ ರೇಖೆಗಳು, ಡಮರಿನ(ಗಾಳಿಪಟದ) ಆಕಾರದಲ್ಲಿ ಕಾಣುವ ಸ್ವಲ್ಪ ಸವೆದು ಹೋದ ಆಕಾರಗಳು ಬಹುಶಃ ಬೃಹತ್ ಶಿಲಾಯುಗದ ಸಂಸ್ಕೃತಿಯ ಉತ್ತರ ಭಾಗದವುಗಳು. ಈ ನೆಲೆಯ ಸಮೀಪದಲ್ಲಿಯೇ ಬೃಹತ್ ಶಿಲಾಯುಗ ಸಂಸ್ಕೃತಿಯ ವಾಸ್ತವ್ಯದ ನೆಲೆಯು ಇದ್ದಿರಬಹುದು. ಸದ್ಯಕ್ಕೆ ಡಮರುವಿನಂತೆ ಕಾಣುವ ಚಿತ್ರವು ಕೊಟ್ನಕಲ್ಲಿನ ಈಶಾನ್ಯಕ್ಕೆ ಸುಮಾರು ೫೦-೬೦ ಕಿ.ಮೀ. ದೂರದಲ್ಲಿರುವ ಬಿಳೇಬಾವಿ (ಗಂಗಾವತಿ ತಾಲ್ಲೂಕು, ರಾಯಚೂರು ಜಿಲ್ಲೆ) ಯ ಗುಡ್ಡದ ಒಂದು ಗವಿಯಲ್ಲಿನ ಕೆಮ್ಮಣ್ಣಿನ ವರ್ಣಚಿತ್ರದಲ್ಲಿ ಇಂಥ ಒಂದು ರೇಖಾಚಿತ್ರವಿದೆ. ಬಿಳೇಬಾವಿ ರೇಖಾಚಿತ್ರದ ಸಮೀಪ ಬೃಹತ್‌ಶಿಲಾಯುಗ ಸಂಸ್ಕೃತಿಯ ಕಲ್ಗೋರಿಯ ಅವಶೇಷಗಳಿವೆ ಮತ್ತು ಈ ನೆಲೆಯ ಸಮೀಪದ ಪೂರ್ವದಿಕ್ಕಿನಲ್ಲಿಯೇ ಹಿರೇಬೇಣಕಲ್ಲು ಗುಡ್ಡದಲ್ಲಿ ನೂರಾರು ಕಲ್ಗೋರಿಗಳು ಮತ್ತು ಗವಿವರ್ಣ ಚಿತ್ರಗಳಿವೆ.

ಕೊಟ್ನಕಲ್ಲಿನ ರೇಖಾಚಿತ್ರಗಳನ್ನು ಕೂಲಂಕಷವಾಗಿ ಪರಿಶೀಲಿಸಲು ಕ್ಷೇತ್ರ ಕಾರ್ಯ ಮುಂದುವರೆಸಿದಾಗ ಕೊಟ್ನಕಲ್ಲಿನಿಂದ ಪಶ್ಚಿಮಕ್ಕೆ ಸುಮಾರು ಒಂದೂವರೆ ಕಿ.ಮೀ. ದೂರದ ನವಲಿ ಎಂಬ ಗ್ರಾಮದ ಬಳಿಯ ಕಲ್ಲಿನ ಗುಡ್ಡದ ಸಾಲಿನಲ್ಲಿ ಕೊಟ್ನಕಲ್ಲಿನಲ್ಲಿ ದೊರೆತ ಡಮರಿನಾಕಾರದ ರೇಖಾಚಿತ್ರ ಕಂಡುಬಂದಿತು. ಈ

* ಸಂಶೋಧನ ವಿದ್ಯಾರ್ಥಿ, ಚರಿತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ- ೫೮೩ ೨೭೬

ಪ್ರದೇಶದ ಸಮೀಪದಲ್ಲಿಯೇ ಕಬ್ಬಿಣಯುಗದ ಕಲ್ಗೋರಿಯ ಅವಶೇಷವಿದೆ. ಈ ಕಲ್ ಮನೆಗಳು ತೀರ ಹಾಳಾಗಿದ್ದು, ಬಹಳಷ್ಟು ಅಳಿಸಿ ಹೋಗಿವೆ. ಉಳಿದ ಸುಮಾರು ನಾಲ್ಕೈದು ಕಲ್ ಮನೆಗಳಲ್ಲಿ ಕಲ್‌ಮನೆಯ ಸುತ್ತಲಿನ ಕಟ್ಟೆ ಅಥವಾ ಕಲ್‌ಮನೆಗಳ ಬದಿಗಳಲ್ಲಿ ನಿಲ್ಲಿಸುವ ಕಲ್ಲುಗಳು ಮಾತ್ರ ಉಳಿದಿವೆ. ಆದ್ದರಿಂದ ಇವುಗಳ ವಿನ್ಯಾಸ ಅಥವಾ ಪ್ರಕಾರಗಳ ತಿಳಿವು ಸಾಧ್ಯವಾಗುತ್ತಿಲ್ಲ. ಆದರೂ ಸ್ವಲ್ಪ ಉಳಿದ ಕಲ್‌ಕಟ್ಟೆಯಲ್ಲಿ ಕಲ್ಲುಗಳ ಕ್ರಮಬದ್ಧ ಜೋಡಣೆ ಮತ್ತು ಹೊರಬದಿಯಲ್ಲಿ ಉಳಿಯಿಂದ ಶುದ್ಧಮಾಡಿದ ಗುರುತುಗಳಿವೆ. ಇದರಿಂದ ಕಲ್‌ಮನೆಯ ಸುತ್ತಲಿನ ಕಟ್ಟೆಯನ್ನು ವ್ಯವಸ್ಥಿತವಾಗಿ ಉಳಿಯಿಂದ ಶುದ್ಧಮಾಡಿ ಸರಿಯಾಗಿ ವೃತ್ತ ಬರುವಂತೆ ಕಟ್ಟಲಾಗುತ್ತಿತ್ತು. ಈ ರೀತಿಯ ಕಟ್ಟೆಯ ಕಲ್ಲುಗಳನ್ನು ಉಳಿಯಿಂದ ಶುದ್ಧಮಾಡಿರುವುದು ಗುಲಬರ್ಗಾ ಜಿಲ್ಲೆಯ ಹುಣಸಿಗೆಯಲ್ಲಿ ಶೋಧಿತವಾಗಿದೆ. ಹುಣಸಿಗೆಯು ನವಲಿಯಿಂದ ಸುಮಾರು ೬೦-೭೦ ಕಿ.ಮೀ. ಉತ್ತರಕ್ಕಿದೆ. ಅಂದರೆ ಈ ಭಾಗಗಳಲ್ಲಿ ಹೀಗೆ ಸುಧಾರಿಸಿದ ಶಿಲ್ಪಕೆಲಸಗಳನ್ನು ಕಾಣಬಹುದು.



ಇದೇ ಪ್ರದೇಶದಲ್ಲಿ ಕಲ್ಗೋರಿಯ ಜೊತೆ ಸುಮಾರು ಎರಡುವರೆ ಅಡಿ ಎತ್ತರದ ಮಾನವಾಕೃತಿಯ ಕಲ್ಲು ದೊರೆತಿದೆ. ಇಂಥ ಮಾನವಾಕೃತಿಯ ಕಲ್ಲು ನವಲಿಯಿಂದ ಸುಮಾರು ೪೦-೫೦ ಕಿ.ಮೀ. ದೂರದಲ್ಲಿರುವ ಕಮುದಿ (ಕೂಡ್ಲಿಗಿ ತಾಲ್ಲೂಕು) ಯಲ್ಲಿ ಕಂಡುಬಂದಿದೆ.

ಇತ್ತೀಚೆಗೆ ಹಡಗಲಿಯಲ್ಲಿಯೂ ಒಂದು ಬೃಹತ್ ಶಿಲಾಯುಗ ಸಂಸ್ಕೃತಿಯ ಕಲ್ಗೋರಿಯೊಂದು ದೊರೆತಿವೆ. ಹಡಗಲಿ ಗ್ರಾಮದ ಹೊರಭಾಗದಲ್ಲಿ ಹಂಪಸಾಗರಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿ ಈ ಕಲ್ಗೋರಿ ಇದೆ. ಕಲ್ಗೋರಿಯ ಪಶ್ಚಿಮ ದಿಕ್ಕಿನಲ್ಲಿ ಇಂಗ್ಲಿಷ್ ''ಯು'' ಆಕಾರದ ಕಿಂಡಿ ಇದೆ. (ಕಿಂಡಿ ಕೋಣೆ ಕಲ್ಗೋರಿ) ಈ ಕಲ್ಗೋರಿಯು ಪುನರ್ ಜೋಡಣೆಯಾದಂತೆ ಕಂಡು ಬರುತ್ತದೆ.

ಇವಲ್ಲದೇ ಕೊಟ್ನಕಲ್ಲು ಪರಿಸರದ ಸುತ್ತಲು ಅಂದರೆ ಹಂಪಸಾಗರ, ರಾಜವಾಳ, ಮಾಗಳ ಇತ್ಯಾದಿ ಸ್ಥಳಗಳಲ್ಲಿ ನೂತನ ಶಿಲಾಯುಗ, ಬೃಹತ್‌ಶಿಲಾಯುಗ, ಆದಿಇತಿಹಾಸ ಕಾಲದ ಅವಶೇಷಗಳು ಶೋಧಿತವಾಗಿದ್ದು, ವರದಿಗಳು ಪ್ರಕಟಿತವಾಗಿವೆ. ಕೊಟ್ನಕಲ್ಲಿನಿಂದ ಸುಮಾರು ೧೫ ಕಿ.ಮೀ. ದೂರದಲ್ಲಿರುವ ಹಂಪಸಾಗರದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ನಾಲ್ಕು ಕಾಲಿನ ಮೃತ್ಪಾತ್ರೆ ದೊರೆತಿದೆ. ಹಾಗೆಯೇ ನವಲಿಯಿಂದ ಸುಮಾರು ಮೂರ‍್ನಾಲ್ಕು ಕಿ.ಮೀ. ದೂರದಲ್ಲಿರುವ ರಾಜವಾಳ ಎಂಬ ಗ್ರಾಮದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಮೂವತ್ತಕ್ಕೂ ಹೆಚ್ಚಿನ ಕಲ್ಗೋರಿಗಳು ದೊರೆತಿವೆ. ಅಂತೆಯೇ ಮಾಗಳದಲ್ಲಿಯೂ ನೂತನ ಶಿಲಾಯುಗದ ಆಯುಧಗಳು ದೊರೆತ ವರದಿಯಾಗಿದೆ. ಮಾಗಳವು ರಾಜವಾಳದಿಂದ ನಾಲ್ಕು ಕಿ.ಮೀ. ದೂರದಲ್ಲಿದೆ.

ಈ ಅಂಶಗಳಿಂದಾಗಿ ಹಡಗಲಿ ತಾಲ್ಲೂಕಿನ ತುಂಗ ಭದ್ರಾದಂಡೆಯಲ್ಲಿ ಅನೇಕ ಪ್ರಾಗೈತಿಹಾಸಿಕ ನೆಲೆಗಳಿದ್ದು ಅವುಗಳ ಶೋಧ ಮತ್ತು ವೈಜ್ಞಾನಿಕ ವಿಶ್ಲೇಷಣೆ ಅವಶ್ಯವೆನಿಸುತ್ತದೆ.

(ಈ ಲೇಖನ ಸಿದ್ಧಪಡಿಸಲು ಸಹಾಯ ಮಾಡಿದ ಪ್ರೊ॥ ಅ. ಸುಂದರ ಅವರಿಗೆ ಕೃತಜ್ಞನಾಗಿದ್ದೇನೆ.)

ವಾಸುದೇವ ಬಡಿಗೇರ *

# ಬಳ್ಳಾರಿ - ಕೊಪ್ಪಳ ಜಿಲ್ಲಾಗಳ ಕೆಲವು ಪುರಾತತ್ವ ಅವಶೇಷಗಳು

ಬಳ್ಳಾರಿ - ಕೊಪ್ಪಳ ಜಿಲ್ಲೆಗಳು ಪ್ರಾಗೈತಿಹಾಸ ಮತ್ತು ಇತಿಹಾಸ ಕಾಲದ ಅವಶೇಷಗಳಿಗೆ ಹೆಸರುವಾಸಿಯಾಗಿವೆ. ಈ ಎರಡೂ ಕಾಲಘಟ್ಟಗಳ ಸಂಸ್ಕೃತಿ ಶ್ರೀಮಂತವಾಗಿ ಬೆಳೆದು ಬರಲು ಅಲ್ಲಿಯ ಭೌಗೋಳಿಕ ಲಕ್ಷಣಗಳೇ ಕಾರಣ. ಫಲವತ್ತಾದ ಭೂಮಿ, ನದಿಹಳ್ಳಗಳು, ಲೋಹದ ಅದಿರು, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ಕಾಡು ಮುಂತಾದವುಗಳು ಈ ಪ್ರದೇಶದ ಸಾಂಸ್ಕೃತಿಕ ಅಭಿವೃದ್ಧಿಗೆ ಪ್ರಚೋದನೆಯನ್ನುಂಟು ಮಾಡಿದವು.

ಈಗಾಗಲೇ ಸಂಶೋಧನೆ ಹಾಗೂ ಅಧ್ಯಯನವಾದಂತೆ ಇಲ್ಲಿಯ ಸಂಗನಕಲ್ಲು, ಕಪಗಲ್ಲು, ನಿಟ್ಟೂರು, ತೆಕ್ಕಲಕೋಟೆ ಕುಡತಿನಿ, ಕೊಪ್ಪಳ, ಹಂಪಿ, ಕುರುಗೋಡು, ಕುಮತಿ,. ಹರೆಬೆಣಕಲ್ಲು ಮುಂತಾದ ಸ್ಥಳಗಳು ಪ್ರಾಗಿತಿಹಾಸ ಕಾಲದಿಂದಲೂ ಪ್ರಮುಖ ವಾಸ್ತವ್ಯ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿವೆ. ಸಂಶೋಧನೆಗೊಂಡ ಕೆಲವು ಸ್ಥಳಗಳ ಮರುಶೋಧನೆಯಿಂದ ಹೊಸ ವಿಷಯಗಳು ಬೆಳಕಿಗೆ ಬಂದಿರುವುದಲ್ಲದೇ ಕಾಲಗರ್ಭದಲ್ಲಿ ಅಡಗಿರುವ ಅನೇಕ ವಾಸ್ತು-ಮೂರ್ತಿಶಿಲ್ಪಗಳ ಮಹತ್ವ ಕಂಡು ಬಂದವು.

### ಪ್ರಾಗಿತಿಹಾಸ ಮತ್ತು ಇತಿಹಾಸ ಕಾಲದ ನೆಲೆಗಳು

ಸಂಗನಕಲ್ಲು ಮತ್ತು ಕಪಗಲ್ಲು (ಬಳ್ಳಾರಿ. ಜಿ) ಪ್ರಾಗಿತಿಹಾಸ ನೆಲೆಗಳ ಮರುಪರಿಶೀಲನೆಯಿಂದ ಕೆಲವು ಮಹತ್ವದ ಅವಶೇಷಗಳನ್ನು ಸಂಗ್ರಹಿಸಲಾಯಿತು. ಈ ನೆಲೆಗಳನ್ನು ಪುಣೆ ಡೆಕ್ಕನ್‌ಕಾಲೇಜು ತಂಡದವರು ೧೯೬೮ರಲ್ಲಿ ಉತ್ಖನನ ಮಾಡಿದ್ದಾರೆ. ಇದರಿಂದ ಸೂಕ್ಷ್ಮ ಶಿಲಾಯುಗದಿಂದ ಆದಿ ಇತಿಹಾಸ ಕಾಲದವರೆಗಿನ ಸಾಂಸ್ಕೃತಿಕ ಬೆಳವಣಿಗೆಯನ್ನು ಗುರುತಿಸಲಾಯಿತು. ಇಲ್ಲಿಯ ಬೆಟ್ಟಗಳಲ್ಲಿಯ ದೊಡ್ಡ ದೊಡ್ಡ ಬಂಡೆಗಳನ್ನು ಜನರು ಛಿದ್ರಮಾಡುವ ಮೂಲಕ ಅವು ನೆಲಸಮವಾಗುತ್ತಿವೆ. ಇದರಿಂದ ಬಂಡೆಗಳ ಆಶ್ರಯ ಪಡೆದು ಗುಪ್ತವಾಗಿದ್ದ ಅನೇಕ ಶಿಲಾಯುಗದ ಅವಶೇಷಗಳು ಬೆಳಕಿಗೆ ಬರುತ್ತಿವೆ. ಹೀಗೆ ಕಂಡುಬಂದ ೩೦ಕ್ಕೂ ಹೆಚ್ಚು ಅವಶೇಷಗಳನ್ನು ಪರಿಶೀಲಿಸಲಾಗಿದೆ.

ನೂತನ ಶಿಲಾಸಂಸ್ಕೃತಿಯ ಆಯುಧಗಳಲ್ಲಿ ಒಂದು ಅಪರೂಪದ ಕಪ್ಪು ಬಿಳಿ ಮಿಶ್ರಿತ ಶಿಲೆಯಿಂದ ತಯಾರಿಸಿದ ಹರಿತವಾದ ಕೈಗೊಡಲಿ ೩೪ ಸೆಂ.ಮೀ. ಉದ್ದ ೨೮ ಸೆಂ.ಮೀ. ಸುತ್ತಳತೆ ಹೊಂದಿದ್ದು ಅದರ ಮೂಲೆ ೧೨.೫೦ ಸೆಂ.ಮೀ. ಅಗಲವಾಗಿದೆ.



ಸಂಗನಕಲ್ಲು ಮತ್ತು ಕಪಗಲ್ಲು ನೆಲೆಗಳಲ್ಲಿಯ ಪ್ರಾಗಿತಿಹಾಸದ ಕಾಲದ ಅವಶೇಷಗಳನ್ನು ಗಮನಿಸಿದರೆ, ಅವರೆಡರಲ್ಲೂ ಸಾಮ್ಯತೆ ಕಂಡು ಬರುತ್ತದೆ. ಬಯಲು ಬಂಡೆಯ ರೇಖಾಚಿತ್ರ ಮತ್ತು ಬೂದಿದಿಬ್ಬಗಳನ್ನು ಹೊಂದಿದ ಕಪಗಲ್ಲು ಬೆಟ್ಟದಲ್ಲಿ ಹೇರಳವಾಗಿ ಹರಡಿರುವ ನವಶಿಲಾಸಂಸ್ಕೃತಿಯ ಆಯುಧಗಳಲ್ಲಿ, ಉಜ್ಜಿನಯಗೊಳಿಸುವ ಪೂರ್ವದ ಹಂತದ, ಚಕ್ಕೆ ಎಬ್ಬಿಸಿ ನಿರ್ಮಾಣದ ಹಂತದ ಆಯುಧಗಳೇ ಹೆಚ್ಚಾಗಿವೆ. ಅಲ್ಲಿ ಪ್ರಾಕೃತಿಕವಾಗಿ ದೊರೆಯುವ ದೊಡ್ಡ ದೊಡ್ಡ ಬಂಡೆಗಳನ್ನೊಡೆದು ಆಯುಧಗಳ ನಿರ್ಮಾಣಕ್ಕೆ ಬಳಸಲಾಗುತ್ತಿತ್ತು. ಒರಟು ಶಿಲೆಯಿಂದ ಚಕ್ಕೆಗಳನ್ನೆಬ್ಬಿಸಿ ಮತ್ತೊಂದು ಶಿಲೆಗೆ ಉಜ್ಜಿ

---

* ಸಹಾಯಕ ನಿರ್ದೇಶಕರು, ವಸ್ತುಸಂಗ್ರಹಾಲಯ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ನಯಗೊಳಿಸಲಾಗುತ್ತಿತ್ತು. ಹೀಗೆ ಆಯುಧ ತಯಾರಿಕೆಯಲ್ಲಿ ಉಜ್ಜಿ ನಯಗೊಳಿಸುವಾಗ ಆದ ಅನೇಕ ಕುಳಿಗಳು ಅಲ್ಲಿ ಕಂಡುಬರುತ್ತವೆ. ಈ ರೀತಿಯ ನಿರ್ಮಾಣದ ಹಂತದಲ್ಲಿರುವ ಆಯುಧಗಳು ಸಂಗನಕಲ್ಲು ನೆಲೆಯಲ್ಲಿ ವಿರಳವಾಗಿವೆ. ಹೀಗಾಗಿ ನವಶಿಲಾಯುಗದ ಸಂಸ್ಕೃತಿಯ ಮಾನವನು ಕಪಗಲ್ಲು ನೆಲೆಯನ್ನು ಕಾರ್ಯಾಗಾರ ವನ್ನಾಗಿ ಮಾಡಿಕೊಂಡು, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಸಂಗನಕಲ್ಲು ಬೆಟ್ಟವನ್ನು ವಾಸ್ತವ್ಯಕ್ಕಾಗಿ ಬಳಸಿಕೊಂಡಂತೆ ಕಾಣುತ್ತದೆ.

### ನವಶಿಲಾ ಸಂಸ್ಕೃತಿಯ ನೆಲೆ

ಮಾಡಲಗೇರಿ (ಹರಪನಹಳ್ಳಿ ತಾ.) ಗ್ರಾಮದ ಪೂರ್ವಭಾಗದಲ್ಲಿ ಸೂಕ್ಷ್ಮ ಶಿಲಾ ಸಂಸ್ಕೃತಿಯಿಂದ ಮಧ್ಯ ಇತಿಹಾಸ ಕಾಲದವರೆಗಿನ ಅವಶೇಷಗಳು ಹರಡಿವೆ. ಇಲ್ಲಿ ಒಂದು ಅಪ್ರಕಟಿತ ಶಿಲಾಶಾಸನವಿದೆ. ಅದರ ಹತ್ತಿರ ಎರಡು ದಿಬ್ಬಗಳಿದ್ದು, ಅವುಗಳಲ್ಲಿ ಸೂಕ್ಷ್ಮ ಶಿಲಾಯುಗದ ಹರಿತವಾದ ಆಯುಧಗಳು, ನವ ಶಿಲಾಯುಗದ ಬೂದುಬಣ್ಣದ ಮಡಕೆಗಳು, ಬೃಹತ್‌ಶಿಲಾಯುಗದ ಚಿತ್ರಿತ ಕಪ್ಪು-ಕೆಂಪು ಮಡಿಕೆಗಳು, ಹಾಗೂ ಆದಿ-ಮಧ್ಯ ಇತಿಹಾಸಕಾಲಕ್ಕೆ ಸೇರಿದ ಅವಶೇಷಗಳಿವೆ. ಎರಡು ಹಳ್ಳಗಳು ಹರಿದು ಬಂದು ಸೇರುವ ಈ ಸ್ಥಳದಲ್ಲಿ ಒಂದು ದೊಡ್ಡ ಕೆರೆ ಇದೆ. ಹಳ್ಳದ ನೀರು ಕೆರೆಗೆ ಸಾಗಿ ಹೆಚ್ಚಾದ ನೀರು ಮುಂದೆ ಸಾಗುವಂತೆ ವ್ಯವಸ್ಥೆ ಮಾಡಲಾಗಿದೆ.

ಕಲ್ಯಾಣದ ಚಾಳುಕ್ಯ ಅರಸ ಎರಡನೆಯ ಜಗದೇಕಮಲ್ಲನ ಕಾಲದ ಕ್ರಿ.ಶ. ೧೧೬೧ರ ಈ ಶಾಸನದಲ್ಲಿ ಮಂಡಿಯಾನಹಟ್ಟಿ (ಮಾಡಲಗೇರಿ) ಗ್ರಾಮದ ಕನ್ನಗೌಡನು ತನ್ನ ಬಂಧು ವರ್ಗದಿಂದ ಕ್ರಯವಾಗಿ ಪಡೆದುಕೊಂಡು ಈಶ್ವರ ದೇವರಿಗೆ ಭೂದಾನ ಬಿಟ್ಟ ಬಗ್ಗೆ ಹಾಗೂ ಗ್ರಾಮಸ್ಥರು ಎಲ್ಲೇರಿ ದೇವೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿ ಭೂದತ್ತಿ ಬಿಡುತ್ತಾರೆ. ಅಲ್ಲದೆ ಪಂಪರಸನು ಮಹಾದೇಶ್ವರ ದೇವರಿಗೆ ಭೂದಾನ ಬಿಟ್ಟ ಉಲ್ಲೇಖಗಳಿವೆ. ಇಲ್ಲಿರುವ ಎರಡೂ ದಿಬ್ಬಗಳನ್ನು ಸಂಶೋಧನೆಗೆ ಒಳಪಡಿಸಿದರೆ ಶಾಸನ ಉಲ್ಲೇಖಿತ ದೇವಸ್ಥಾನದ ಅವಶೇಷಗಳು ದೊರೆಯ ಬಹುದು.

### ಮಾನವಾಕೃತಿಯ ಬೃಹತ್ ಬಂಡೆಗಳು

ಇತ್ತೀಚೆಗೆ ಕೇಂದ್ರ ಪುರಾತತ್ವ ಇಲಾಖೆಯವರು ಶೋಧಿಸಿದ ಕುಮತಿಯ (ಕೂಡ್ಲಿಗಿ ತಾ.) ಬೃಹತ್ ಶಿಲಾಯುಗದ ಬಂಡೆಗಳನ್ನು ಮರುಶೋಧನೆಯಲ್ಲಿ ಕೆಲವು ವಿಚಾರಗಳನ್ನು ತರ್ಕಿಸ ಬಹುದಾಗಿದೆ. ಇಲ್ಲಿ ನಿಲ್ಲಿಸಿದ ಮೂರು ಬೃಹತ್ ಬಂಡೆಗಳಿಗೆ ರಾಕ್ಷಸರ ಕಲ್ಲುಗಳು ಹಾಗೂ ಪಾಂಡವರ ಕಲ್ಲುಗಳೆಂದು ಸ್ಥಳೀಯ ಜನರು ಕರೆಯುವುದುಂಟು. ಆ ಪ್ರದೇಶವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇನ್ನೂ ಎರಡೂ ಚಿಕ್ಕ ಬಂಡೆಗಳನ್ನು ನಿಲ್ಲಿಸಿದ್ದರೆಂಬುದು ಗಮನಕ್ಕೆ ಬರುತ್ತದೆ. ಹೀಗೆ ಐದು ಬಂಡೆಗಳನ್ನು ನಿಲ್ಲಿಸಿದ್ದರಿಂದ ಪಾಂಡವರ ಕಲ್ಲುಗಳೆಂದು ಕರೆದಿರಬಹುದು. ಇದಕ್ಕೆ ಹತ್ತಿರವಿರುವ ಹಂಪೆ ಪ್ರಾಚೀನ ಕಿಷ್ಕಿಂಧವಾಗಿತ್ತು. ರಾಮಾಯಣ ಮಹಾಭಾರತ ಕಾವ್ಯಗಳಲ್ಲಿ ಉಲ್ಲೇಖಿತ ಅನೇಕ ಹೆಸರುಗಳು ಇಲ್ಲಿಯ ಬಳ್ಳಾರಿ, ಸಂಡೂರು, ಹೊಸಪೇಟೆ, ಕೂಡ್ಲಿಗಿ ತಾಲ್ಲೂಕುಗಳಲ್ಲಿ ಕಂಡುಬರುತ್ತವೆ. ಕುಮ್ತಿ ಗ್ರಾಮನಾಮವೂ ಕೂಡಾ ಈ ಬಂಡೆಗಳ ಪ್ರಭಾವದಿಂದ ಕುಂತಿ ಎಂದು ಕರೆದು ನಂತರ ಕುಮ್ತಿಯಾಗಿರಬಹುದೆಂದು ತಿಳಿಯ ಬಹುದು.

### ಯಕ್ಷ-ಯಕ್ಷಿಯ ಶಿಲ್ಪಗಳು

ಕತ್ತೆಬೆನ್ನೂರು (ಹಡಗಲಿ ತಾ.) ಗ್ರಾಮದಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ಶೈವ, ವೈಷ್ಣವ ದೇವಾಲಯಗಳು ಮತ್ತು ಜೈನ ಮತದ ಅವಶೇಷಗಳಿವೆ. ಗ್ರಾಮದ ವಾಯವ್ಯಭಾಗದ ಹಾಳುಭೂಮಿಯಲ್ಲಿ ತೀರ್ಥಂಕರ ಮುಖ ಹಾಗೂ ಚಾಮರಧಾರಿಣಿ ಯರನ್ನೊಳಗೊಂಡ ಒಂದು ತೋರಣವಿದೆ. ಅವುಗಳೊಂದಿಗೆ ಅಪರೂಪದ ಯಕ್ಷ-ಯಕ್ಷಿಯರ ಶಿಲ್ಪಗಳಿವೆ.

ಎರಡೂವರೆ ಅಡಿ ಎತ್ತರವಾಗಿರುವ ಈ ಶಿಲ್ಪಗಳು ಕರ್ಣ, ಕಂಠಾಭರಣ, ಕೈಬಳೆ, ಕಾಲುಕಡಗ ಮುಂತಾದ ಆಭರಣಗಳನ್ನು ಧರಿಸಿದ್ದು, ಕಿರೀಟ ಮುಕುಟ ಅದರ ಮೇಲೆ ಸರ್ಪವಿದೆ. ಕೈಗಳಲ್ಲಿ ಪದ್ಮ-ಫಲ ಹಾಗೂ ಅಂಕುಶ - ಪಾಶಗಳಿವೆ. ಈ ಯಕ್ಷ - ಯಕ್ಷಿಯರ ಲಕ್ಷಣಗಳನ್ನು ಗಮನಿಸಿದರೆ ಪದ್ಮಾವತಿ, ಧರಣೇಂದ್ರರ ಶಿಲ್ಪಗಳೆಂದು ಸ್ಪಷ್ಟವಾಗುತ್ತದೆ.

ದಕ್ಷಿಣ ಭಾರತದ ಪ್ರಮುಖ ಅರಸುಮನೆತನಗಳಾದ ಗಂಗ, ಚಾಳುಕ್ಯ, ರಾಷ್ಟ್ರಕೂಟ, ಹೊಯ್ಸಳರ ಕಾಲದಲ್ಲಿ ಪದ್ಮಾವತಿಯ ಆರಾಧನೆ ಬಹಳ ಪ್ರಚಾರದಲ್ಲಿತ್ತು. ಈ ದೇವತೆಯ ಆರಾಧನೆಯಿಂದ ನನ್ನಿಗಂಗ ದೊರೆ ಹಾಗೂ ರಾಣಿ ಕಂಚಲ ಮಹಾದೇವಿಯು ಹೆಮ್ಮಾಡಿದೇವನೆಂಬ ಮಗನನ್ನು ಪಡೆದರೆಂಬ ಶಾಸನದ ಉಲ್ಲೇಖವಿದೆ. ಗಂಗವಂಶದ ಸ್ಥಾಪಕರಿಗೆ ಸಿಂಹನಂದಿಮುನಿ ಪದ್ಮಾವತಿಯ ಪ್ರಸಾದ ಕೊಡಿಸಿದರೆ, ಸುದತ್ತಮುನಿ ಪದ್ಮಾವತಿಯ ಕೃಪೆಯಿಂದ ಸಳನಿಗೆ ರಾಜ್ಯಪ್ರಾಪ್ತಿ ಮಾಡಿಕೊಟ್ಟನು. ಸೇನವರು ತಮ್ಮನ್ನು ''ಪದ್ಮಾವತಿಯ ಚರಣ ಸರೋಜಭೃಂಗ'' ಎಂದು ಕರೆದುಕೊಂಡಿದ್ದಾರೆ. ಅಲ್ಲದೇ ಐಹೊಳೆಯ ಐನೂರ್ವರು ಪದ್ಮಾವತಿಯ ಆರಾಧಕರಾಗಿದ್ದರು. ಈ ರೀತಿ ಪ್ರಚಾರದಲ್ಲಿದ್ದ, ಈ ದೇವತೆಯ ದೇವಾಲಯಗಳು ಪೊಂಬುಚ ಹಾಗೂ ಆನೆವಾಳುಗಳಲ್ಲಿವೆ.

ಮುಖ್ಯವಾಗಿ ಅನೇಕ ಜೈನ ಕೃತಿಗಳ ಉಲ್ಲೇಖದಂತೆ ಕತ್ತೆಬೆನ್ನೂರಿನ ಯಕ್ಷ-ಯಕ್ಷಿಯ ಶಿಲ್ಪಗಳು ಶ್ವೇತಾಂಬರ ಪಂಥಕ್ಕೆ ಸಂಬಂಧಿಸಿವೆ. ಆಚಾರದಿನಕರದಲ್ಲಿ ತಿಳಿಸಿರುವಂತೆ ಇಲ್ಲಿಯ ಯಕ್ಷಿಯ ಕೈಗಳಲ್ಲಿ ಪದ್ಮ-ಪಾಶ, ಅಂಕುಶ-ಫಲಗಳಿವೆ. ಧರಣೇಂದ್ರ ಯಕ್ಷ ಪದ್ಮಾವತಿಯ ಪತಿ. ಜೈನ ಸಾಹಿತ್ಯದಲ್ಲಿ ಶ್ವೇತಾಂಬರ ಧರಣೇಂದ್ರ ಯಕ್ಷನ ಮೇಲಿನ ಎರಡೂ ಕೈಗಳಲ್ಲಿ ವಾಸುಕಿ ಕೆಳಗಿನ ಕೈಗಳಲ್ಲಿ ವರದ, ನಾಗಪಾಶಗಳಿರುತ್ತವೆ. ಅಥವಾ ಬಲಗೈಗಳಲ್ಲಿ ನಕುಲ-ಸರ್ಪಗಳು, ಎಡಗೈಗಳಲ್ಲಿ ಬೀಜಪುರ-ಸರ್ಪಗಳಿರುತ್ತವೆಂದು ಹೇಳಿದೆ. ಇಲ್ಲಿಯ ಧರಣೇಂದ್ರ ಯಕ್ಷನ ಕೈಗಳಲ್ಲಿ ಈ ಲಕ್ಷಣಗಳಿಲ್ಲ. ಆತನೂ ಕೂಡ ಪದ್ಮಾವತಿಯ ಕೈಯಲ್ಲಿರುವಂತೆ ಪದ್ಮ-ಫಲ, ಅಂಕುಶ-ಪಾಶಗಳನ್ನು ಹಿಡಿದು ಕೊಂಡಿದ್ದಾನೆ. ಇದು ಈ ಶಿಲ್ಪದಲ್ಲಿಯ ವಿಶೇಷತೆಯಾಗಿದೆ.

### ತೀರ್ಥಂಕರರ ವಿಗ್ರಹಗಳು

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅವರ ಸಾಮಂತರಾದ ಸಿಂದರು ಯಲಬುರ್ಗಿ(ಕೊಪ್ಪಳ ಜಿ.)ಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಅವರ ಕಾಲದಲ್ಲಿ ಯಲಬುರ್ಗಿ ಒಂದು ಜೈನಕೇಂದ್ರವಾಗಿತ್ತಲ್ಲದೇ ಅನೇಕ ದೇವಾಲಯ ಮೂರ್ತಿಶಿಲ್ಪಗಳು ನಿರ್ಮಾಣವಾದವು. ಈಗಲೂ ಯಲಬುರ್ಗಿಯಲ್ಲಿ ಹಾಳಾದ ಜೈನ ಅವಶೇಷಗಳು ಹರಡಿವೆ. ಇತ್ತೀಚೆಗೆ ನೆಲ ಅಗೆಯುವಾಗ ಪೀಠದ ಮೇಲೆ ಶಾಸನಗಳನ್ನು ಹೊಂದಿದ ಎರಡು ಜೈನಶಿಲ್ಪಗಳು ದೊರೆತವು, ಮಧ್ಯದಲ್ಲಿ ಮಹಾವೀರ ಸಮಭಂಗಿಯಲ್ಲಿ ನಿಂತಿದ್ದು ಸುತ್ತಲೂ ೨೩ ತೀರ್ಥಂಕರರ ವಿಗ್ರಹಗಳಿವೆ. ಒಂದು ವಿಗ್ರಹದ ಪೀಠದ ಮೇಲೆ, "ಶ್ರೀ ಕಮಳಸೇನ ದೇವರಗುಡ್ಡ ತಿಪ್ಪಸೆಟ್ಟರ ಮದುವಳಿಗೆ ಮಾಡಳಿವೆ ಪದವಿ ಜಳಿಯ ನೊನ್ತು" ಎಂದೂ, ಮತ್ತೊಂದರಲ್ಲಿ ಹಯರಾಣ ತಿ ೨೪ ಪ್ರತಿಮೆ ಎಂದು ಬರೆಯಲಾಗಿದೆ.

### ಜೈನ ಬಸದಿಗಳು

ಈಶ್ವರ ದೇವಾಲಯವೆಂದು ಕರೆಯುತ್ತಿರುವ ಹೊಳಲ ಗೊಂದಿಯ(ಹಡಗಲಿ ತಾ.)ಬಸದಿ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯದ ಲಲಾಟ ಬಿಂಬದಲ್ಲಿರುವ ಜೈನಶಿಲ್ಪ ಹಾಗೂ ಸಭಾಮಂಟಪದಲ್ಲಿಯ ಶಾಸನದಿಂದ ಇದು ಪೂರ್ವದಲ್ಲಿ ಬಸದಿಯಾಗಿತ್ತೆಂದು ತಿಳಿಯುವುದು. ಈ ಶಾಸನವು ವಿಜಯಪಾಂಡ್ಯ ಭೂಪಾಳನ ಆಳಿಕೆಯ ನಾಲ್ಕನೆಯ ವರ್ಷದಲ್ಲಿ ಬರೆಯಲಾಗಿದ್ದು ಮಲ್ಲಿನಾಥ ಜೀನೇಂದ್ರನ ಶ್ಲೋಕದಿಂದ ಪ್ರಾರಂಭವಾಗುತ್ತದೆ. ಸಂದ ಹೊಳಗೊಂದಿಯ ವಾಸುಪೂಜ್ಯಯತಿಯರ ಶಿಷ್ಯ ಮಲ್ಲಿದೇವ ನೆಂಬುವನು ಮಲ್ಲಿನಾಥ ಜಿನಮಂದಿರವನ್ನು ಕಟ್ಟಿಸಿದನೆಂದು ಉಲ್ಲೇಖವಿದೆ.



ಶಿರಗೇರಿ(ಶಿರಗುಪ್ಪಾ ತಾ.)ಯಲ್ಲಿ ವೀರಭದ್ರ ದೇವಾಲಯವು ಪಾರ್ಶನಾಥ ತೀರ್ಥಂಕರ ಬಸದಿಯಾಗಿತ್ತು. ಈ ದೇವಾಲಯದ ಗರ್ಭಗೃಹದ ಹೊರಗೋಡೆಯ ಮೂರು ಭಾಗಗಳಲ್ಲಿ ನಡುಭಂಗಿಯಲ್ಲಿ ನಿಂತ ಪಾರ್ಶನಾಥ ತೀರ್ಥಂಕರರ ಹಾಗೂ ಲಲಾಟಬಿಂಬದಲ್ಲಿ ತೀರ್ಥಂಕರ ಶಿಲ್ಪಗಳಿವೆ. ಇವಲ್ಲದೆ ಬಾಗಳಿಯ ಮೈಲಾರ ಲಿಂಗೇಶ್ವರ ದೇವಾಲಯ ಕುಡುತಿನಿಯ ರಾಮಲಿಂಗೇಶ್ವರ ಮಠಗಳೂ ಮೂಲತಃ ಜೈನ ಬಸದಿಗಳಾಗಿದ್ದವು.

### ವೀರಗಲ್ಲು

ಬೂದಗುಪ್ಪಾ (ಕೊಪ್ಪಳ ಜಿ.) ಗ್ರಾಮದಲ್ಲಿ ವಿಜಯನಗರ ಕಾಲಕ್ಕೆ ಸೇರಿದ ಅಪರೂಪದ ವೀರಗಲ್ಲು ಇದೆ. ಅದರಲ್ಲಿ ವೀರನು ಬಿಲ್ಲು, ಬಾಣ ಹಿಡಿದು ಎದುರಾಳಿಗಳೊಂದಿಗೆ ಯುದ್ಧದಲ್ಲಿ ತೊಡಗಿದ್ದಾನೆ. ಆತನ ಹಿಂಭಾಗ ಎರಡು ಎಮ್ಮೆಗಳು (ಅಥವಾ

ಕೋಣಗಳು) ಎರಡು ಎತ್ತುಗಳು ಹಾಗೂ ಮೇಲ್ಭಾಗ ಒಂದು ನೇಗಿಲು ಇವೆ. ಅಸ್ಪಷ್ಟವಾದ ಮೂರು ಸಾಲಿನ ಶಾಸನ ಕೂಡಾ ಇದೆ. ಮೇಲ್ಭಾಗದಲ್ಲಿ ಸಖಿಯರು ವೀರನನ್ನು ಸ್ವರ್ಗಕ್ಕೆ ಕರೆದು ಕೊಂಡು ಹೋಗುತ್ತಿರುವ ಚಿತ್ರಣವಿದೆ.



ಈ ವೀರಗಲ್ಲಿನ ವಿಶೇಷತೆ, ನೇಗಿಲು ಇರುವುದರಿಂದ ಆತನು ರೈತ ಕುಟುಂಬಕ್ಕೆ ಸೇರಿದವನಂತೆ ಕಾಣುತ್ತದೆ. ಎಮ್ಮೆ ಮತ್ತು ಎತ್ತುಗಳನ್ನು ರಕ್ಷಿಸುವುದಕೋಸ್ಕರ ಯುದ್ಧಮಾಡಿ ಮರಣ ಹೊಂದಿದ್ದು ಸ್ಪಷ್ಟವಾಗಿ ಗುರುತಿಸಬಹುದು.

**ವೈಕುಂಠನಾಥ**

ಕಮಲಾಪುರದಿಂದ (ಹೊಸಪೇಟೆ ತಾ.) ೩ ಕಿ.ಮೀ. ಪೂರ್ವದ ಬೆಟ್ಟದ ಆಶ್ರಯದಲ್ಲಿ ಕೊರೆದ ಚಿತ್ರವಿದೆ. ಜನಪದ ಶೈಲಿಯಲ್ಲಿರುವ ಇದು ಮೂರು ಮುಖಗಳು, ನಾಲ್ಕು ಕೈಗಳನ್ನು ಹೊಂದಿದೆ. ಕರಂಡ ಮುಕುಟ, ಕರ್ಣ ಕಂಠಾಭರಣ, ಹಾರ, ಕೌಸ್ತುಭಮಣಿ, ಯಜ್ಞೋಪವೀತ, ತೆಳುವಾದ ಧೋತಿ ಧರಿಸಲಾಗಿದೆ. ಬಲಗೈಗಳಲ್ಲಿ ಧನಸ್ಸು, ಬಾಣ, ಎಡಕೈಗಳಲ್ಲಿ ಶಂಖ ಚಕ್ರಗಳಿವೆ. ಮಧ್ಯ ಮಾನವ, ಎಡಭಾಗ ವರಾಹ, ಬಲಭಾಗ ನರಸಿಂಹ ಮುಖಗಳಿವೆ.

ಪುರಾಣಗಳ ಪ್ರಕಾರ ವೈಕುಂಠನಾಥನು ನಾಲ್ಕು ಮುಖಗಳನ್ನು, ನಾಲ್ಕು ಅಥವಾ ಎಂಟು ಕೈಗಳನ್ನು ಹೊಂದಿರುತ್ತಾನೆ. ಮಧ್ಯ ನರ, ಬಲಭಾಗ ನರಸಿಂಹ, ಎಡಭಾಗ ವರಾಹ, ಹಿಂಭಾಗ ಶಕ್ತಿಯ ಮುಖಗಳಿರುತ್ತವೆ. ಕೈಗಳಲ್ಲಿ ಗದಾ, ಖಡ್ಗ, ಬಾಣ, ಬಿಲ್ಲು, ಚಕ್ರ, ಶಂಖ, ಪದ್ಮಗಳನ್ನು ಹಿಡಿದಿರುತ್ತಾನೆ. ಇಲ್ಲಿಯ ಚಿತ್ರದಲ್ಲಿ ಹಿಂದಿನ ಮುಖವನ್ನು ಬಿಡಿಸಲು ಆಗದೇ ಇರುವುದರಿಂದ ಮೂರು ಮುಖಗಳನ್ನು ಮಾತ್ರ ತೋರಿಸಲಾಗಿದೆ. ಈ ಚಿತ್ರವು ವೈಕುಂಠನಾಥನ ಲಕ್ಷಣಗಳನ್ನು ಹೊಂದಿರುವದರಿಂದ ಹಂಪೆಯ ಪರಿಸರದಲ್ಲಿ ಕಂಡುಬಂದ ಏಕೈಕ ಚಿತ್ರ ಇದಾಗಿದೆ.

(ಮೇಲಿನ ಎಲ್ಲಾ ಗ್ರಾಮಗಳ ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡು ಸಹಕರಿಸಿದ ಹಂಪಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಗಂಗಾಧರ ದೈಪಪ್ಪ, ಶ್ರೀ ಎಸ್. ವೈ. ಸೋಮಶೇಖರ ಹಾಗೂ ಶ್ರೀ ಎಂ. ಕೊಟ್ರೇಶಿ ಅವರಿಗೆ ಕೃತಜ್ಞತೆಗಳು.)

ಮುತ್ತುರಾಜು *

# ಹರಿಹರ ಗ್ರಾಮದ ಪ್ರಾಚ್ಯಾವಶೇಷಗಳು - ಒಂದು ಹೊಸ ಶೋಧನೆ

ಹರಿಹರವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲೂಕಿನ ಬಸವನಬೆಟ್ಟ ಅರಣ್ಯದ ಅಂಚಿನಲ್ಲಿ ಇರುವ ಒಂದು ಗ್ರಾಮ. ಈ ಗ್ರಾಮವನ್ನು ವಿಜಯನಗರದ ಅರಸ ಪ್ರೌಢರಾಯವೊಡೆಯನ ಆಳ್ವಿಕೆಯ (ಕ್ರಿ.ಶ. ೧೪೧೨) ಶಾಸನವೊಂದು*೧ ಉಲ್ಲೇಖಿಸುತ್ತದೆ; ವಿಜಯನಗರದರಸರ ಅವಧಿಯ ಕಂಪಒಡೆಯ ದಂಡನಾಯಕನ ಶಾಸನವೂ*೨ ಸಹ ಉಲ್ಲೇಖಿಸುತ್ತದೆ. ಇದೇ ಶಾಸನದಲ್ಲಿ ಅಲ್ಲಿದ್ದ **ಹರಿಹರದೇವರ** ಉಲ್ಲೇಖ ಬರುವುದರಿಂದ ದೇವರ ಹೆಸರಿನಿಂದ ಈ ಗ್ರಾಮಕ್ಕೆ **ಹರಿಹರ** ಎಂಬ ನಾಮ ಪ್ರಚಲಿತವಾದಂತೆ ಕಂಡುಬರುತ್ತದೆ. ಈ ಅಭಿಪ್ರಾಯಕ್ಕೆ ಪುಷ್ಟಿಯಾಗಿ ಅಲ್ಲಿ ಪ್ರಚಲಿತವಿರುವ ಜನನಿರುಕ್ತಿಯಾದ **ಹರಿಹರ ದೇವರುಗಳು** ಇಲ್ಲಿ ನೆಲಸಿದ್ದರು ಎಂಬ ಪಂಡಿತನಿಷ್ಪತ್ತಿಯನ್ನು ಕೊಡ ಬಹುದಾದರೂ, ಪ್ರೌಢದೇವರಾಯನ ತಂದೆ ಹರಿಹರನ ಹೆಸರಿನಿಂದಲೂ ಸಹ ಈ ಗ್ರಾಮಕ್ಕೆ ಹರಿಹರ ಎಂಬ ಹೆಸರು ಬಂದಿರಲೂ ಸಾಕು. ನಿಜನಿಷ್ಪತ್ತಿ ಇನ್ನೂ ಹೊರಬೀಳಬೇಕಾಗಿದೆ.

ಈ ಹರಿಹರ ಗ್ರಾಮದ ಪರಿಸರವು ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಯ ಸ್ಥಳವಾಗಿದ್ದಿತು ಎಂಬುದಕ್ಕೆ



ಕುರುಹುಗಳು ವಿಪುಲವಾಗಿ ದೊರೆತಿವೆ. ಕ್ರಿ. ಪೂ. ಸುಮಾರು ೩೦೦೦ಕ್ಕೆ ಸೇರುವ ನವಶಿಲಾಯುಗದ ೨೭ ಕೈಕೊಡಲಿ ಮತ್ತು ಕೈಬಾಚಿಗಳು ದೊರೆತಿದ್ದು ಅವುಗಳನ್ನು ಸಮೀಪದ ಬ್ಯಾಟರಾಯನ **ಗುಡಿ** ಎಂಬಲ್ಲಿ ಇಟ್ಟಿದ್ದಾರೆ. *೩ ಇದೇ ಪರಿಸರದ ಕುಪ್ಪೆದೊಡ್ಡಿ ಎಂಬಲ್ಲಿ ಬೃಹತ್‌ಶಿಲಾಯುಗಕ್ಕೆ ಸೇರುವ (ಕಾಲ- ಕ್ರಿ.ಪೂ. ಸುಮಾರು ೮೦೦) ೫೦ಕ್ಕಿಂತಲೂ ಹೆಚ್ಚಿನ ದುಂಡುಕಟ್ಟೆ ಶಿಲಾಸಮಾಧಿಗಳು ಬೆಳಕಿಗೆ ಬಂದಿವೆ. *೪

ಈ ಕುಪ್ಪೆದೊಡ್ಡಿ ನಿರ್ಮಾಣದ ಕುರಿತು ಜನಪದ ಕಾವ್ಯಗಳಲ್ಲಿ ಒಂದಾದ **ಓರುಗಲ್ಲುಸೂರೆ** ಎಂಬುದು ಮಾಹಿತಿ ನೀಡುತ್ತದೆ. ಆದರೂ ಅಲ್ಲಿ ಉಕ್ತವಿರುವ ಕಬ್ಬಿಣದ ಆಯುಧ, ಸಂಸ್ಕರಣೆಯ ಉಲ್ಲೇಖ ಬಹುಮುಖ್ಯವಾಗಿದ್ದು ಈ ಭಾಗದಲ್ಲಿ ಲೋಹಬಳಕೆಯ ಪ್ರಾಚೀನತೆಯನ್ನು ವಿವರಿಸಿದಂತಾಗಿದೆ.

ಇಲ್ಲಿಯೇ ಕಲ್ಲುಗಳಿಂದ ನಿರ್ಮಿಸಿರುವ **ಲಿಂಗದಗುಡಿ** ಎಂಬ ದೇಗುಲದ ಅವಶೇಷಗಳು ಲಭ್ಯವಿದ್ದು ದೇವಾಲಯದ ಛಾವಣಿಯ ಪುಷ್ಪಾಲಂಕಾರಿಕ ಕೆತ್ತನೆಗಳು ಬೋದಿಗೆಗಳು, ಅಲಂಕಾರಿಕ ಕಂಬಗಳು ಮತ್ತು ಪುಷ್ಪಗಳ ಬಳ್ಳಿಗಳಿಂದ ಅಲಂಕೃತವಾದ ಇತರ ಭಾಗಗಳು ಬಿದ್ದಿವೆ. ಇಲ್ಲಿದ್ದ ಶಿವಲಿಂಗವನ್ನು ಇದೇ ತಾಲೂಕಿನಲ್ಲಿರುವ **ಶಿವಾಲದಪ್ಪನ ಬೆಟ್ಟದಲ್ಲಿ** ಪ್ರತಿಷ್ಠಾಪಿಸಲಾಗಿದೆ ಎಂದು ಜನಪ್ರತೀತಿ ಇದೆ. ಈ ದೇವಾಲಯದ ತುಸುದೂರದಲ್ಲಿ ಕಲ್ಲಿನ ಮಂಟಪವೊಂದು ಉರುಳಿ ಹೋಗಿದ್ದು ಅದರ ಭಾಗಗಳೂ ಸಹ ಅಲ್ಲಿ ಲಭ್ಯವಿವೆ. ದೇವಾಲಯದ ಬದಿಯಲ್ಲಿ ಕೆರೆ ಒಂದಿದ್ದು ಕೆರೆಯಲ್ಲಿನ ಒಂದು ನೆಲವಿಸ್ತಾರದ ಬಂಡೆಯ ಮೇಲೆ ೪ ಅಡಿ. ವೃತ್ತವ್ಯಾಸದ ದುಂಡನೆಯ, ಪೀಠವೊಂದನ್ನು ಕೆತ್ತಲಾಗಿದೆ. ಪೀಠದ ಮಧ್ಯದಲ್ಲಿ ಎರಡು ಶಿಲಾ ಆವುಗೆಗಳನ್ನು ಕಡೆದಿದ್ದಾರೆ. ಇವು ಗಾತ್ರದಲ್ಲಿ ದಪ್ಪನಾಗಿದ್ದು, ಉಂಗುಷ್ಟವನ್ನು ಹೊಂದಿವೆ. ಆದರೆ ಈಗ ಒಂದು ಆವುಗೆಯಲ್ಲಿ ಉಂಗುಷ್ಟ ಕಾಣಬರದು. ಪೀಠಕ್ಕೆ ನಳಿಕೆಯೂ ಇದ್ದು ಇದನ್ನು ದೇವಾಲಯವು ಸುಸ್ಥಿತಿಯಲ್ಲಿದ್ದಾಗ

* ಕನ್ನಡ ಉಪಾಧ್ಯಾಯರು, ಜವಾಹರ್ ನವೋದಯ ವಿದ್ಯಾಲಯ, ಹರಿದ್ವಾರ, (ಉ.ಪ್ರ) - ೨೪೯೪೦೨

ಜನತೆಯು ತಮ್ಮ ಸಾಮಾಜಿಕ ಧಾರ್ಮಿಕ ವಿಧಿಗಳಿಗೆ ಬಳಸುತ್ತಿದ್ದಂತೆ ತೋರಿಬರುತ್ತದೆ. ಈ ಆವುಗೆಗಳನ್ನು ಸ್ಥಳೀಯರು ಹೆಬ್ಬೆಟ್ಟರಾಯನ ಪಾದ ಎಂದು ಕರೆದರೂ ಬಹುದೂರದಲ್ಲಿರುವ ಹೆಬ್ಬೆಟ್ಟರಾಯ ದೇವರಿಗೂ ಈ ಆವುಗೆಗಳಿಗೂ ಸಂಬಂಧವಿಲ್ಲವೆಂದು ಹೇಳಬಹುದು.

ಈ ದೇವಾಲಯದ ಮುಂದೆ ಶ್ರವಣನಬಡ್ಡು ಎಂಬ ಎತ್ತರವಾದ ಸ್ಥಳವೊಂದಿದ್ದು ಇಲ್ಲಿ ಜಿನತೀರ್ಥಂಕರನ ಪ್ರತಿಮೆಯೊಂದು ಲಭ್ಯವಾಗಿದೆ.*೫ ಎರಡೂವರೆ ಅಡಿ ಎತ್ತರ ಎರಡು ಅಡಿಗಳ ಅಗಲವಾಗಿರುವ ಈ ಪ್ರತಿಮೆಯನ್ನು ಗ್ರಾನೈಟ್ ಕಲ್ಲಿನಿಂದ ಮೂಡಿಸಲಾಗಿದೆ. ತೀರ್ಥಂಕರನು ಧ್ಯಾನಾಸಕ್ತನಾಗಿ ಪೀಠವೊಂದರ ಮೇಲೆ ಕುಳಿತಿದ್ದಾನೆ. ಇಕ್ಕೆಲಗಳಲ್ಲೂ ಚಾಮರ ಧಾರಿಣಿಯರ ಚಿತ್ರವಿರುವಂತೆ ಕಂಡುಬಂದರೂ ಸಹ ಅದು ಅಸ್ಪಷ್ಟವಾಗಿದೆ. ಆದಿತೀರ್ಥಂಕರನ ಮೂರ್ತಿ ಇದೆನ್ನಬಹುದು. ಈ ಪ್ರತಿಮೆ ಇರುವ ಬಂಡೆಗೆ ಹೊಂದಿಕೊಂಡಂತೆ ಇಳಿಜಾರಿನಲ್ಲಿ ೩ ಅಡಿ ಅಗಲ ೨.೫ ಅಡಿ ಉದ್ದದ ಪೀಠವೊಂದಿದ್ದು ಪೀಠದ ಮುಂಭಾಗದಲ್ಲಿ ೬X೬ ಅಂಗುಲದ ಚೌಕಾಕಾರದ ಕುಳಿ ಇದೆ. ಧ್ಯಾನಾಸಕ್ತನಾಗಿ ಕುಳಿತಿರುವ ತೀರ್ಥಂಕರನ ಪ್ರತಿಮೆಯನ್ನು ಇದರಲ್ಲಿ ಇಟ್ಟಿದ್ದರೆಂದು ತೋರುತ್ತದೆ. ಹಲವಾರು ವರ್ಷಗಳಿಂದ ಪ್ರತಿಮೆಯು ಬಂಡೆಯ ಮೇಲೆ ಮುಮ್ಮುಖವಾಗಿ ಉರುಳಿ ಹೋಗಿದ್ದುದರಿಂದ ಮುಖ ಮತ್ತು ದೇಹದ ಇತರ ಭಾಗಗಳು ಸವೆದುಹೋಗಿವೆ. ಈ ಗ್ರಾಮದಲ್ಲಿ ಪ್ರಾಚೀನ ಕಾಲದಲ್ಲೆ ಜೈನಧರ್ಮದ ಅನುಯಾಯಿಗಳು ಇದ್ದರೆಂಬುದಕ್ಕೆ ಸಾಕ್ಷಿಯಾಗಿ ಈ ಪ್ರತಿಮೆ ದೊರೆತಿದೆ.

ಜೈನಧರ್ಮವು ಗಂಗರು ಮತ್ತು ಹೊಯ್ಸಳರ ಕಾಲದಲ್ಲಿ ಸುಸ್ಥಿತಿಯಲ್ಲಿದ್ದಿತಾದ್ದರಿಂದ ಈ ತೀರ್ಥಂಕರ ಪ್ರತಿಮೆಯ ಕಾಲವನ್ನು ಕ್ರಿ. ಶ. ಸುಮಾರು ೧೧ನೇ ಶತಮಾನವೆಂದು ಹೇಳಬಹುದಾಗಿದೆ. ಇಂದು ಈ ಗ್ರಾಮದಲ್ಲಿ ಯಾವುದೇ ಜೈನಮನೆತನವೂ ಇಲ್ಲವಾಗಿದ್ದು ಕ್ರಿ. ಶ. ಸುಮಾರು ೧೬ನೇ ಶತಮಾನದ ಹೊತ್ತಿಗೆ ಅವರೆಲ್ಲ ಈ ಗ್ರಾಮವನ್ನು ತೊರೆದಿರಬಹುದಾಗಿದೆ.

ಈ ಹರಿಹರ ಗ್ರಾಮದಲ್ಲಿ ಎರಡು ಶಾಸನಗಳಿದ್ದು ಅವು ಪ್ರಕಟವಾಗಿವೆ. ಒಂದು ದಾನ ಶಾಸನವಾದರೆ*೬ ಮತ್ತೊಂದು ವೀರಗಲ್ಲಿಗೆ ಸಂಬಂಧಿಸಿದುದಾಗಿದೆ. *೭ ಕ್ರಿ. ಶ. ೧೫ನೇ ಶತಮಾನದ





ದಾನ ಶಾಸನವು ಇಲ್ಲಿದ್ದ ಹರಿಹರದೇವರ ದೇವಾಲಯವನ್ನು ಉಲ್ಲೇಖ ಮಾಡುತ್ತದೆ. *೮ ಈ ಶಾಸನವು ಇಂದಿನ ಬಸವೇಶ್ವರನ ದೇವಾಲಯದ ಬಳಿಯಲ್ಲಿಯೇ ಇರುವುದರಿಂದ ಮತ್ತು ಇಲ್ಲಿದ್ದ ಹಳೆಯ ದೇವಾಲಯಕ್ಕೆ ಬೆಂಕಿ ಬಿದ್ದು ನಾಶವಾಗಿರುವುದರಿಂದ ಶಾಸನೋಕ್ತ ಹರಿಹರದೇವಾಲಯವು ಈ ಸ್ಥಳದಲ್ಲಿಯೇ ಇದ್ದಿತು ಎನ್ನಬಹುದು. ದೇವಾಲಯಕ್ಕೆ ಬೆಂಕಿ ಬಿದ್ದ ಸಂದರ್ಭದಲ್ಲಿ ಇಲ್ಲಿದ್ದ ಗಣಪತಿ, ಬಸವ, ದುರ್ಗಾ-ಪ್ರತಿಮೆಗಳು ಹಾಳಾಗಿವೆ. ಗಣಪತಿಯು *೯ ನಾಲ್ಕು ಅಡಿಗಳ ಎತ್ತರದ ಚತುರ್ಭುಜ ಮೂರ್ತಿ. ಬಲ ಮೇಲ್ಕೈನಲ್ಲಿ ಜೋಡಿ ತಾವರೆ ಮೊಗ್ಗುಗಳನ್ನೂ ಬಲ ಕೆಳಗೈನಲ್ಲಿ ಅಕ್ಷಮಾಲೆಯನ್ನು ಹಿಡಿದಿದ್ದು ಎಡಭಾಗದ ಮೇಲಿನ ಕೈ ಮತ್ತು ಎಡಭಾಗದ ಕೆಳಗಿನ ಕೈ ಒಡೆದು ಹೋಗಿವೆ. ಸೊಂಡಿಲಿನ ಭಾಗವೂ ಸಹ ಶಿಥಿಲವಾಗಿದ್ದು ಗಣಪತಿಯೂ ಪೀಠವೊಂದರ ಮೇಲೆ ಕುಳಿತಿರುವಂತೆ ಚಿತ್ರ ಬಿಡಿಸಲಾಗಿದೆ. ದುಂಡನೆಯ ಬಂಡೆಯೊಂದರಿಂದ ಕಡೆಯಲಾಗಿರುವ ತಾವರೆಮೊಗ್ಗುಗಳು, ಅಕ್ಷಮಾಲೆಯನ್ನು ಹಿಡಿದಿರುವ ಈ ಗಣಪತಿಯು ಅಪರೂಪದ್ದಾಗಿದೆ. ಮೂರ್ತಿಶಿಲ್ಪದ ಆಧಾರದ ಮೇಲೆ **ಶಕ್ತಿಗಣಪತಿಯ ಮೂರ್ತಿ** ಇದು ಎಂದು ಹೇಳಬಹುದಾಗಿದೆ. ಅಲ್ಲದೆ ಇದರ ಕಾಲಮಾನವು ಕ್ರಿ. ಶ. ಸುಮಾರು ೧೪ನೇ ಶತಮಾನವೆಂದು ನಿರ್ಧರಿಸಬಹುದಾಗಿದೆ.

ಈ ಹರಿಹರ ದೇವಾಲಯದಲ್ಲಿನ ಕಂಬವೊಂದರ ಮೇಲೆ ಅಡ್ಡ ಶಿಲಾಫಲಕವೊಂದರ ಮೇಲೆ ಇಟ್ಟು ಪೂಜಿಸುತ್ತಿದ್ದ ಬಸವನ ಪ್ರತಿಮೆಯು ಈಗ ದೇವಾಲಯದ ಹೊರವೇದಿಕೆಯ ಮೇಲೆ ಇದ್ದು ಅದು ಮೂರು ಅಡಿ ಉದ್ದವಿದೆ. ಈ ಬಸವನನ್ನಿಟ್ಟಿದ್ದ ಕಲ್ಲುಗಳನ್ನು ವೇದಿಕೆಗಾಗಿ ಈಗ ಉಪಯೋಗಿಸಲಾಗಿದೆ. ಈ ಬಸವನ ಪ್ರತಿಮೆಯ ಬಳಿಯಲ್ಲಿಯೇ ಸಿಂಹ ಒಂದರ ಕಲ್ಲಿನ ಕಿರುಪ್ರತಿಮೆ ಇದೆ. ಅಲ್ಲದೆ ಶಿವನ ಬಳಿ ಇರುವ ಬ್ರಹ್ಮರಾಕ್ಷಸನ ಶಿರವನ್ನೂ ಸಹ ಇಡಲಾಗಿದೆ.

ದೇವಾಲಯದ ವಿಶಾಲವಾದ ಹೊರವೇದಿಕೆಯ ಮುಂಭಾಗದಲ್ಲಿ ನಾಡಮಾರಮ್ಮ ಎಂದು ಸ್ಥಳೀಯರು ಹೆಸರಿಸುವ ದುರ್ಗಿಯ ಶಿಲ್ಪವಿದೆ. ಎರಡು ಅಡಿ ಎತ್ತರ ಒಂದೂವರೆ ಅಡಿ ಅಗಲದ ಶಿಲ್ಪವನ್ನು ಕರಿಬಣ್ಣದ ಗ್ರಾನೈಟ್ ಕಲ್ಲಿನಿಂದ ಮಾಡಲಾಗಿದೆ. ದೇವಿಯು ತನ್ನ ಕೈಗಳಲ್ಲಿ ಡಮರುಗ, ಕತ್ತಿ, ತ್ರಿಶೂಲ ಮತ್ತು ಪಾನಪಾತ್ರೆಯನ್ನು ಹಿಡಿದಿದ್ದು, ಕುಳಿತಿರುವ ಚಿತ್ರಣವಿದೆ. ದೇವಾಲಯಕ್ಕೆ ಬೆಂಕಿ ಬಿದ್ದಾಗ ಬೆಂಕಿಯ ತೀಕ್ಷ್ಣತೆಯಿಂದ ಮೂರ್ತಿಯ ಮುಖದ ಭಾಗವು ಒಡೆದು ಹೋಗಿದೆ.

ಈ ಗ್ರಾಮದಲ್ಲಿ ೧೨ ವೀರಗಲ್ಲುಗಳು ಮತ್ತು ಕುಪ್ಪೆದೊಡ್ಡಿ ಪ್ರದೇಶದಲ್ಲಿ ೪ ಗಮನಾರ್ಹ ವೀರಗಲ್ಲುಗಳು ಕಂಡುಬಂದಿವೆ. ಮೊದಲು ವೀರಗಾರರ ಗುಡಿಗಳು ಇದ್ದು ಅವುಗಳನ್ನು ಕಿತ್ತು ಈಗ ಸ್ಥಳಾಂತರಿಸಲಾಗಿದೆ. ಬಸವೇಶ್ವರನ ದೇವಾಲಯದ ಭಾಗದಲ್ಲಿ ಮೊದಲು ಮಣ್ಣಿನ ಕೋಟೆಯು ಇದ್ದಿತ್ತಾಗಿ ತಿಳಿದುಬಂದಿದೆ. ಈ ಸ್ಥಳದಲ್ಲಿಯೇ ಯುದ್ಧಗಳು ಜರಗುತ್ತಿದ್ದುದ್ದಾಗಿಯೂ ಕುರುಹುಗಳು ಲಭ್ಯವಾಗಿವೆ.

ಏಳುವರೆ ಅಡಿ ಎತ್ತರದ ಆರೂವರೆ ಅಡಿ ಅಗಲದ ಗ್ರಾನೈಟ್ ಕಲ್ಲಿನ ಬೃಹತ್ ಗಾತ್ರದ ವೀರಗಲ್ಲು ಒಂದನ್ನು ನಾಲ್ಕು ಹಂತಗಳಲ್ಲಿ ಚಿತ್ರಿಸಲಾಗಿದೆ. ಯುದ್ಧಕ್ಕೆ ಹೊರಡುವ ಚಿತ್ರಣ, ಯುದ್ಧಮಾಡುತ್ತಿರುವ ಚಿತ್ರಣ, ಕುದುರೆಯ ಮೇಲೆ ಕುಳಿತು ಯುದ್ಧಮಾಡುತ್ತಿರುವ ಯೋಧರು, ಮಡಿದಿರುವ ಮೂರುಜನ ಯೋಧರು, ಅಲ್ಲದೇ ಮಡಿದ ಯೋಧರ ಶಿರೋಭಾಗದ ಚಿತ್ರಗಳು ಇಲ್ಲಿವೆ. ಯೋಧರ ಕೈಗಳಲ್ಲಿ ಈಟಿ, ಕತ್ತಿ, ಗುರಾಣಿಗಳು ಇದ್ದು ಬಿಲ್ಲು ಬಾಣದ ಪ್ರಯೋಗವು ಸಹ ಚಿತ್ರಿತವಾಗಿದೆ. ಮಡಿದ ಯೋಧರನ್ನು ಸ್ವರ್ಗಕ್ಕೆ ಕೊಂಡೊಯ್ಯುವ ಚಿತ್ರಣ, ಕೈಲಾಸವಾಸಿಯಾದ ಯೋಧರ ಚಿತ್ರಣವೂ ಸಹ ಇಲ್ಲಿದೆ. ಈ ವೀರಗಲ್ಲು ಚನ್ನಪಟ್ಟಣ ತಾಲೂಕಿನ ಮಳೂರುಪಟ್ಟಣದ ವೀರಗಲ್ಲನ್ನು ಹೋಲುತ್ತದೆ. ಈ ವೀರಗಲ್ಲಿನ ಆಸುಪಾಸಿನಲ್ಲಿಯೇ ಮತ್ತೆ ಕೆಲವು ವೀರಗಲ್ಲುಗಳು ಇವೆ.

ಇಲ್ಲಿನ ಚೌಡೇಗೌಡನ ಕಟ್ಟೆ ಎಂಬಲ್ಲಿ ತುರುವೊಂದನ್ನು



ಹುಲಿ ಕೊಲ್ಲಲು ಬಂದಾಗ ವೀರನೊಬ್ಬನು ತುರುವನ್ನು ರಕ್ಷಿಸಿ ಹುಲಿಯ ಜೊತೆ ಹೋರಾಡುತ್ತಿರುವ ಚಿತ್ರಣದ ಅಪರೂಪದ ವೀರಗಲ್ಲು ಇದೆ. ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವುದು ನಂತರ ಸ್ವರ್ಗವಾಸಿಯಾದ ವೀರನ ಚಿತ್ರಣವಿದೆ. ವ್ಯಕ್ತಿಯು ತನ್ನ ಪ್ರಾಣರಕ್ಷಣೆಗಾಗಿ ಹುಲಿಯೊಡನೆ ಹೋರಾಡುವುದು ಸ್ವಾಭಾವಿಕ. ಆದರೆ ತುರುವಿನ ರಕ್ಷಣೆಗಾಗಿ ತಾನು ಹುಲಿಯ ಜೊತೆ ಕಾದಾಡಿ ಮಡಿದಿರುವುದು ವಿಶೇಷವಾಗಿದೆ.

ಹರಿಹರಗ್ರಾಮವು ಸತಿ ಹೋಗುತ್ತಿದ್ದಂತಹ ಸ್ಥಳವೂ ಆಗಿತ್ತು ಎಂಬುದಕ್ಕೆ ಕುರುಹುಗಳಾಗಿ ಅಲ್ಲಿ ಮಾಸ್ತಿಕಲ್ಲುಗಳು ಮತ್ತು ಮಾಸ್ತಿ ಹೋದಂತಹ ಘಟನೆಗಳ ಐತಿಹ್ಯಗಳು ದೊರೆಯುತ್ತವೆ. ಈ ಗ್ರಾಮದ ಮಾಸ್ತಿತೋಪಿನಬೋರೆ ಎಂಬಲ್ಲಿ ಮಾಸ್ತಿ ನಡೆಯುತ್ತಿದ್ದಂತಹ ಸ್ಥಳವನ್ನು ಸ್ಥಳೀಯರು ಗುರುತಿಸುತ್ತಾರೆ. ಬೂದಿಯಿಂದಲೇ ತುಂಬಿರುವ ಈ ಪ್ರದೇಶದಲ್ಲಿ ಮಾಸ್ತಿ ಹೋಗುತ್ತಿದ್ದುದೇ ಅಲ್ಲದೇ ಯುದ್ಧದಲ್ಲಿ ಮಡಿದ ಇನ್ನಿತರ ಯೋಧರ ದಹನವೂ ಇಲ್ಲಿ ಆಗುತ್ತಿತ್ತು ಎಂದು ಖಚಿತಪಡಿಸ ಬಹುದಾಗಿದೆ.

ಈಗ ಪೂಜೆಗೊಳ್ಳುತ್ತಿರುವ ಮಾರಮ್ಮ ಎಂದು ಕರೆಯಲ್ಪಡುವ ಕಾಳಿಕಾದೇವಿಯು ಇಲ್ಲಿನ ಇನ್ನೊಂದು ಆಕರ್ಷಣೆ. ಹೊನ್ನೆಮರದಿಂದ ರಚಿಸಿರುವ ವಿಗ್ರಹವು ನಾಲ್ಕು ಅಡಿಗಳ ಎತ್ತರವನ್ನುಳ್ಳದ್ದಾಗಿದೆ. ವಿಗ್ರಹದ ಮೇಲು ಭಾಗದಲ್ಲಿ ಮರದಿಂದಲೇ ಅಲಂಕಾರವನ್ನು ಕಮಾನಿನಾಕೃತಿಯಲ್ಲಿ ಕೆತ್ತಲಾಗಿದೆ. ಕಾಳಿಕಾದೇವಿಗೆ ನಾಲ್ಕು ಕೈಗಳಿದ್ದು ಡಮರುಗ, ತಾವರೆ, ಕತ್ತಿ, ತ್ರಿಶೂಲಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಬದಿಯಲ್ಲಿಯೇ ಒಂದು ಅಡಿ ಎತ್ತರದ ಕೊಂತಮಾರಮ್ಮನ ವಿಗ್ರಹವೂ ಇದೆ. ಕಾಳಿಕಾದೇವಿಯ ವಿಗ್ರಹವನ್ನು ಸುಮಾರು ೨೦೦ ವರ್ಷಗಳ ಹಿಂದೆ ಸ್ಥಾಪಿಸಿದ್ದಾರೆಂದು ಮೂರ್ತಿಶಿಲ್ಪದ ಆಧಾರಗಳಿಂದ ಹೇಳಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಹರಿಹರ ಗ್ರಾಮವು ಪ್ರಾಗೈತಿಹಾಸಿಕ ಕಾಲ ಅಂದರೆ ಕ್ರಿ. ಪೂ ೩,೦೦೦ ವರ್ಷಗಳಿಂದಲೂ ಜನಚಟುವಟಿಕೆಯ ತಾಣವಾಗಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಧಾರ್ಮಿಕವಾಗಿ ತನ್ನದೆ ಆದ ಒಂದು ಸ್ಥಾನವನ್ನು ಉಳಿಸಿಕೊಂಡು ಬಂದಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧. ಎ. ಕ. (ಹಳೆಯ ಆವೃತ್ತಿ) IX, ಕಾನಕಾನಹಳ್ಳಿ ೭೪
*೨. ಅದೇ, ೭೩
*೩. ಮುತ್ತುರಾಜು : 'ಬಸವನಬೆಟ್ಟ ಅರಣ್ಯದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು ಪತ್ತೆ', ಹೊಸದಿಗಂತ ೨೬-೧೧-೧೯೯೭
*೪. ಮುತ್ತುರಾಜು : 'ಕನಕಪುರ ತಾಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು - ಹೊಸಶೋಧನೆ', ಇತಿಹಾಸದರ್ಶನ, ಸಂಪುಟ ೧೧, ಪುಟ. ೪೩.
*೫. ಮುತ್ತುರಾಜು : 'ಕನಕಪುರ ತಾಲೂಕಿನಲ್ಲಿ ಪ್ರಾಚೀನ ಜಿನಶಿಲ್ಪ ಪತ್ತೆ', ಕನ್ನಡ ಪ್ರಭ ೩-೮-೧೯೯೭.
*೬. ಎ. ಕ. (ಹ. ಆ) IX, ಕಾನಕಾನಹಳ್ಳಿ ೭೩
*೭. ಅದೇ, ೭೪.
*೮. ಅದೇ, ೭೩.
*೯. 'ಮುತ್ತುರಾಜು: ಹರಿಹರ ಗ್ರಾಮದಲ್ಲಿ ಶಕ್ತಿಗಣಪತಿ ಶಿಲ್ಪ ಪತ್ತೆ', ಪ್ರಜಾವಾಣಿ ೨೩-೫-೧೯೯೭, ಪುಟ ೪.

(ಈ ಪ್ರಬಂಧವನ್ನು ರಚಿಸುವಲ್ಲಿ ಸಲಹೆ ಸೂಚನೆಗಳನ್ನು ಕೊಟ್ಟ ನನ್ನ ಗುರುಗಳಾದ ಡಾ॥ ದೇವರಕೊಂಡಾರೆಡ್ಡಿಯವರಿಗೂ, ಈ ಗ್ರಾಮದ ವೀರಗಲ್ಲುಗಳ ಬಗ್ಗೆ ನನ್ನ ಗಮನ ಸೆಳೆದ ಸ್ನೇಹಿತರಾದ ಡಾ॥ ಡಿ. ವಿ. ಪರಮಶಿವಮೂರ್ತಿಯವರಿಗೂ ನಾನು ಋಣಿ.)

ಡಾ॥ ಸಿ. ಮಹದೇವ *

# ಶ್ರೀರಂಗಪಟ್ಟಣದಲ್ಲಿ ಪ್ರಾಗೈತಿಹಾಸಿಕ ನೆಲೆಯ ಶೋಧ

ತಲಕಾಡಿನ ಗಂಗ, ವಿಜಯನಗರ ಮೈಸೂರು ಒಡೆಯರ ಹಾಗೂ ಹೈದರ್ ಮತ್ತು ಟಿಪ್ಪುಸುಲ್ತಾನರ ಆಡಳಿತ ಸಂಬಂಧದಿಂದಾಗಿ ಶ್ರೀರಂಗಪಟ್ಟಣವು ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕಾಲದ ಚಾರಿತ್ರಿಕ ಕುರುಹುಗಳನ್ನು ಒಳಗೊಂಡಿದೆ. ಈಚಿನ ಶೋಧನೆಯಿಂದಾಗಿ ಪ್ರಾಗೈತಿಹಾಸ ಕಾಲದ ಅವಶೇಷಗಳು ಬೆಳಕಿಗೆ ಬಂದಿವೆ.

ಮಾನವನ ಬದುಕಿಗೆ ನೆಲೆಯಾಗಿರುವ ಕಾವೇರಿ ನದಿ ಕಣಿವೆಯ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಟಿ. ನರಸೀಪುರ, ಹೆಮ್ಮಿಗೆ, ಕೊಪ್ಪ(ಮೈಸೂರು ಜಿಲ್ಲೆ) ಪ್ರಮುಖವಾಗಿವೆ. ಕಾವೇರಿ ನದಿಯ ದ್ವೀಪವಾಗಿರುವ ಶ್ರೀರಂಗಪಟ್ಟಣದಲ್ಲಿ ೧೯೮೭ರ ಆಗಸ್ಟ್ ತಿಂಗಳಲ್ಲಿ ಕೈಗೊಂಡ ನಿವೇಶನಾನ್ವೇಷಣೆಯಿಂದಾಗಿ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಅವಶೇಷಗಳಾಗಿ ಶಿಲಾಯುಧಗಳು ಮತ್ತು ಅವುಗಳ ಚಕ್ಕೆಗಳು. ನೆಲದ ಮೇಲೆ ತೆಳುವಾಗಿ ಹರಡಿಕೊಂಡಿರುವ ಆಯುಧಗಳು ಮತ್ತು ಚಕ್ಕೆಗಳು ಅಧಿಕ ಸಂಖ್ಯೆಯಲ್ಲಿ ದೊರೆತಿವೆ. ಈ ನೆಲೆಯು ಕಾವೇರಿ ನದಿಯ ದಕ್ಷಿಣ ಶಾಖೆಯ ಎಡದಂಡೆಯಲ್ಲಿ ಕೋಟೆಯ ಒಳಭಾಗಕ್ಕೆ ಸೇರಿದಂತೆ ರಂಗನಾಥ ದೇವಾಲಯದಿಂದ ಸರಿಯಾಗಿ ಆಗ್ನೇಯಕ್ಕೆ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಹೊಸದಾಗಿ ತಲೆ ಎತ್ತಿರುವ ರಂಗನಾಥ ನಗರದಲ್ಲಿದೆ. ಇಲ್ಲಿ ಮನೆಗಳನ್ನು ನಿರ್ಮಿಸಲು ಅಡಿಪಾಯವನ್ನು ಅಗೆದಾಗ ಸುಮಾರು ನಾಲ್ಕು ಅಡಿ ಆಳದಲ್ಲಿ (೧.೨೦ ಮೀಟರ್) ಬುಟ್ಟಿಗಟ್ಟಲೆ ಶಿಲಾಚಕ್ಕೆಗಳು, ಶಿಲಾಯುಧಗಳನ್ನು ಬಿಟ್ಟರೆ ಇತರ ಯಾವ ಅವಶೇಷಗಳೂ ಕಂಡುಬಂದಿಲ್ಲ. ಇಲ್ಲಿ ಉದ್ಯಾನವನಕ್ಕಾಗಿ ಮೀಸಲಿಟ್ಟಿರುವ ಸ್ಥಳದಲ್ಲಿ ಕ್ರಮಬದ್ಧವಾಗಿ ಉತ್ಖನನ ನಡೆಸಿದಲ್ಲಿ ಇನ್ನೂ ನಿಖರವಾದ ಮಾಹಿತಿಗಳನ್ನು ಪಡೆಯಬಹುದು.

ಇಲ್ಲಿ ದೊರೆತ ಚಕ್ಕೆಗಳು ಸಾಮಾನ್ಯವಾಗಿ ಕಪ್ಪು ಒತ್ತಿದ ಅಪಾರದರ್ಶಕ ಹಾಗೂ ಚಾಕೊಲೆಟ್ ಬಣ್ಣದ ಅಪಾರದರ್ಶಕ ಜಾಸ್ಪರ್ ಶಿಲೆಯಿಂದ ಮಾಡಿದವುಗಳಾಗಿವೆ. ಅಪರೂಪಕ್ಕೆ ಅಲ್ಲೊಂದು, ಇಲ್ಲೊಂದು ಚರ್ಟ್‌ಕಲ್ಲಿನ ಶಿಲಾಯುಧಗಳಿವೆ. ಡಾ॥ ಅ. ಸುಂದರ ಅವರು ಈ ಶಿಲಾಯುಧಗಳನ್ನು ಪರಿಶೀಲಿಸಿ, *"ಶ್ರೀರಂಗಪಟ್ಟಣದಲ್ಲಿ ದೊರೆತಿರುವ ಈ ಚಕ್ಕೆಗಳ ಒಂದು ಅಂಚಿನಲ್ಲಿ ಬುದ್ಧಿ ಪೂರ್ವಕವಾಗಿ, ಸ್ಪಷ್ಟವಾಗಿ ಪುಡಿಚಕ್ಕೆ ತೆಗೆದ ಗುರುತುಗಳಿವೆ. ಈ ರೀತಿಯ ಒಂದು ವಿಶಿಷ್ಟ ಕ್ರಮವನ್ನು ಮಧ್ಯಹಳೇ ಶಿಲಾಯುಗ, ಅಂತ್ಯಹಳೇಶಿಲಾಯುಗ, ಸೂಕ್ಷ್ಮಶಿಲಾಯುಗ ಮತ್ತು ಶಿಲಾ-ತಾಮ್ರಯುಗದ ಚಕ್ಕೆಕಲ್ಲಿನ ಉಪಕರಣಗಳ ರಚನೆಯಲ್ಲಿ ಕಾಣಬಹುದೆಂದು"* ತಿಳಿಸುತ್ತಾರೆ. ಈ ಶಿಲಾಯುಧಗಳನ್ನು ಎರಡು ವರ್ಗಗಳಾಗಿ ವಿಂಗಡಿಸಲಾಗಿದೆ. ಮೊದಲ ವರ್ಗದ ಆಯುಧಗಳು ನಿರ್ದಿಷ್ಟ ಆಕಾರ ಹೊಂದಿದ್ದು, ಅವುಗಳನ್ನು ನಾಲ್ಕು ಉಪ ಪಂಗಡಗಳಾಗಿ ವಿಂಗಡಿಸಲಾಗಿದೆ:

**ಅ) ಅರ್ಧಚಂದ್ರಾಕೃತಿಯ ಆಯುಧಗಳು, ಆ) ಮೊನೆಗಳು ಇ) ಹೆರೆಯುವ ಆಯುಧಗಳು ಈ) ಹೆಬ್ಬೆರಳಾಕೃತಿಯ ಆಯುಧಗಳು**

ಈ ಮೇಲೆ ಹೇಳಿದ ಆಯುಧಗಳ ಬದಿಯಲ್ಲಿ ಅಥವಾ ತುದಿಯಲ್ಲಿ ಒಂದು ಅಂಚಿನುದ್ದಕ್ಕೂ ಒತ್ತೊತ್ತಾಗಿ ಪುಡಿ ಚಕ್ಕೆಗಳನ್ನು ತೆಗೆದು ತಮ್ಮ ಉದ್ದೇಶಿತ ಕೆಲಸಕ್ಕೆ ಪರಿಣಾಮಕಾರಿಯಾಗಿರುವಂತೆ ಸಿದ್ಧಪಡಿಸಿಕೊಳ್ಳಲಾಗಿದೆ.

ಎರಡನೇ ವರ್ಗದ ಚಕ್ಕೆಕಲ್ಲುಗಳು ಯಾವುದೇ ನಿರ್ದಿಷ್ಟ ಆಕೃತಿಯನ್ನು ಹೊಂದಿಲ್ಲ. ಆದರೂ ಅನುಕೂಲಕರವಾದ ಒಂದು ಅಂಚಿನುದ್ದಕ್ಕೂ ಒತ್ತೊತ್ತಾಗಿ ಪುಡಿಚಕ್ಕೆಗಳನ್ನು ತೆಗೆಯಲಾಗಿದೆ. ಈ ರೀತಿ ಪುಡಿಚಕ್ಕೆಗಳನ್ನು ತೆಗೆಯುವ ಕ್ರಮವನ್ನು, ಈ ಮೊದಲೇ ತಿಳಿಸಿದಂತೆ ಮಧ್ಯ ಹಳೇಶಿಲಾಯುಗದಿಂದ ಶಿಲಾ-ತಾಮ್ರಯುಗದ ಹಂತದವರೆಗಿನ ಶಿಲಾಯುಧಗಳ ರಚನೆಯು ಕಂಡುಬರುವ ಒಂದು ಪ್ರಮುಖ ಲಕ್ಷಣವೆಂದು ಗುರುತಿಸಿದ್ದಾರೆ. ಆದರೆ ಇಲ್ಲಿ ದೊರೆತಿರುವ ಶಿಲಾಯುಧಗಳು ಪ್ರಮಾಣದಲ್ಲಾಗಲೀ, ನಿರ್ದಿಷ್ಟ ಆಕಾರದಲ್ಲಾಗಲೀ ಶಿಲಾಯುಗದ ಯಾವುದೇ ಹಂತದ ಉಪಕರಣಗಳನ್ನು ಅಷ್ಟಾಗಿ ಹೋಲುವುದಿಲ್ಲ. ಈ ಉಪಕರಣಗಳು ದೊರೆತ ಪರಿಸರವನ್ನು ಅವುಗಳ ಸಾಂಸ್ಕೃತಿಕ ಹಂತವನ್ನು ಮತ್ತು ತತ್ಸಂಬಂಧ ಕಾಲಮಾನವನ್ನು ಸರಿಯಾಗಿ ತಿಳಿದುಕೊಳ್ಳುವ

* ಪ್ರವಾಚಕ, ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ಕಮಲಾಪುರ, - ೫೮೩ ೨೨೧ (ಬಳ್ಳಾರಿ ಜಿಲ್ಲೆ)

ಪ್ರಯತ್ನ ಮಾಡಬೇಕಾಗಿದೆ. ಪ್ರೊ॥ ಅ. ಸುಂದರ ಅವರು ಈ ಶಿಲಾಯುಧಗಳಿಗೆ ಸಂಬಂಧಿಸಿದಂತೆ ಕೆಲವು ಸೂಚನೆಗಳನ್ನು ನೀಡುತ್ತಾರೆ. ಅವುಗಳೆಂದರೆ, ಇವು ಶಿಲಾಯುಗಕ್ಕೆ ಸಂಬಂಧಪಟ್ಟಿದ್ದಲ್ಲಿ ಇವುಗಳಿದ್ದ ನೆಲ ನದಿದಂಡೆಯಲ್ಲಿನ ಪದರುಗಳ ಮಣ್ಣಿನಂತಿರುತ್ತದೆ. ಶಿಲಾ-ತಾಮ್ರ ಯುಗಕ್ಕೆ ಸಂಬಂಧಿಸಿದಲ್ಲಿ ಇವುಗಳೊಡನೆ ಜನವಾಸ್ತವ್ಯದ ಇತರ ಅವಶೇಷಗಳು, ವಸತಿಯಿಂದ ಮಾರ್ಪಾಡಾದ ಮಣ್ಣು ಇರುತ್ತವೆ. ಮಧ್ಯಯುಗೀನ ಕಾಲದಲ್ಲಿ ದೊಡ್ಡ ದೊಡ್ಡ ಫಿರಂಗಿಗಳಿಗೆ ತುಂಬಿ ಹಾರಿಸಲು ಇಂತಹ ಚಕ್ಕೆಗಳನ್ನು ಮಾಡಿ ಉಪಯೋಗಿಸಲಾಗುತ್ತಿತ್ತು. ಈ ರೀತಿಯ ಚಕ್ಕೆಗಳು ಮಹಾರಾಷ್ಟ್ರದ ಔರಂಗಾಬಾದಿನ ಸಮೀಪದ ದೌಲತಾಬಾದಿನಲ್ಲಿ ಹೇರಳವಾಗಿ ದೊರೆತಿವೆ ಎಂದು ಹೇಳುವ ಪ್ರೊ॥ ಅ. ಸುಂದರ ಅವರು ಮುಂದುವರೆದು, ಈ ಹಿನ್ನೆಲೆಯಲ್ಲಿ ಶ್ರೀರಂಗಪಟ್ಟಣದ ಕಲ್ಲಿನ ಚಕ್ಕೆಗಳು ಈಗಿನ ನೆಲಮಟ್ಟದಿಂದ ೧.೨೦ ಮೀಟರ್ ಆಳದಲ್ಲಿ ದೊರೆತಿರುವುದರಿಂದ ಆ ಅಂತರದಲ್ಲಿ ಮಧ್ಯಯುಗೀನ ಕಾಲದ ಹಾಳುಮಣ್ಣು ಮತ್ತು ಅವಶೇಷಗಳು ಇರುವ ಸಾಧ್ಯತೆ ಇದೆ. ಹಾಗಿದ್ದಲ್ಲಿ ಇವು ಮಧ್ಯಯುಗೀನ ಉತ್ತರ ಕಾಲಕ್ಕೆ ಸೇರುತ್ತವೆ ಎಂದು ಅಭಿಪ್ರಾಯಪಡುತ್ತಾರೆ.

ಶ್ರೀರಂಗಪಟ್ಟಣದಲ್ಲಿ ದೊರೆತಿರುವ ಚಕ್ಕೆಗಳನ್ನು ತಯಾರಿಸಲು ಮಧ್ಯಹಳೇ ಶಿಲಾಯುಗದ ಲೆವಾಲ್ವ ತಂತ್ರವನ್ನಾಗಲೀ (ಉಂಡೆಕಲ್ಲಿನಿಂದ ಎಬ್ಬಿಸುವ ತಂತ್ರದ ದೃಷ್ಟಿಯಿಂದ) ಅಥವಾ ಅಂತ್ಯಹಳೇಶಿಲಾಯುಗ, ಸೂಕ್ಷ್ಮಶಿಲಾಯುಗ ಹಾಗೂ ಶಿಲಾ-ತಾಮ್ರಯುಗ ಕಾಲದ ಓರೆಕೋರೆ ಉಬ್ಬು ಇರುವ ಉಬ್ಬಿನ ತಂತ್ರವನ್ನಾಗಲೀ ಬಳಸಿರುವುದು ಸ್ಪಷ್ಟವಿಲ್ಲ. ಆದರೆ ಈ ಚಕ್ಕೆಗಳ ಅಂಚಿನಲ್ಲಿ ಒತ್ತೊತ್ತಾಗಿ, ಪುಡಿ ಚಕ್ಕೆಗಳನ್ನು ಎಬ್ಬಿಸಿದ್ದು, ಹೆಚ್ಚಿನ ಚಕ್ಕೆಗಳು ಮಧ್ಯಹಳೇಶಿಲಾಯುಗ, ಅಂತ್ಯ ಹಳೇ ಶಿಲಾಯುಗ ಮತ್ತು ಸೂಕ್ಷ್ಮಶಿಲಾಯುಗದ ಕೆಲವೇ ನಿರ್ದಿಷ್ಟ ಆಕೃತಿಗಳಲ್ಲಿವೆ. ಇವು ಶಿಲಾಯುಗದ ಇದುವರೆಗೆ ಕಾಣಬರದ ಒಂದು ವಿಶಿಷ್ಟ ತಂತ್ರದಿಂದ ಮಾಡಿದ ಕಲ್ಲಿನ ಉಪಕರಣಗಳಾಗಿರಬಹುದೇ ಎಂದು ಪ್ರೊ॥ ಅ. ಸುಂದರ ಅವರು ಸಂಶಯ ವ್ಯಕ್ತಪಡಿಸುತ್ತಾರೆ. ಈ ಉಪಕರಣಗಳು ಒಂದೇ ಪ್ರಕಾರವಾದ ಗಾತ್ರವನ್ನು ಹೊಂದಿಲ್ಲ. ಒಂದು ಅಂಚು ತೀರ ದಪ್ಪವಾಗಿದ್ದು, ಮತ್ತೊಂದು ಅಂಚು ತೀವ್ರವಾಗಿ ತೆಳುವಾಗಿದೆ. ಉಪಕರಣಗಳು ಮತ್ತು ನೆಲೆಯನ್ನು ಕುರಿತಂತೆ ಕ್ರಮಬದ್ಧವಾದ ಅಧ್ಯಯನ ಮಾಡಿದಾಗಲೇ ಸೂಕ್ತ ತೀರ್ಮಾನಕ್ಕೆ ಬರಬಹುದಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಅವುಗಳ ಯಥಾಸ್ಥಿತಿಯನ್ನು ವರದಿ ಮಾಡುವ ಪ್ರಯತ್ನವಿದು.

ಉಪಕರಣಗಳು ಸಾಮಾನ್ಯವಾಗಿ ೨.೫ ಸೆಂ.ಮೀಟರ್‌ನಿಂದ ೩ ಸೆಂ. ಮೀಟರ್ ಉದ್ದವನ್ನು, ೧.೫ ಸೆಂ. ಮೀಟರ್‌ನಿಂದ ೨ ಸೆಂ. ಮೀಟರ್ ಅಗಲವನ್ನು ಮತ್ತು ೦.೫ ಸೆಂ. ಮೀಟರ್ ದಪ್ಪವನ್ನು ಹೊಂದಿವೆ. ಅಲ್ಲದೇ ಈ ಆಯುಧಗಳಲ್ಲಿ ಮೊನೆಗಳು, ಹೆರೆಗಗಳು, ಅರ್ಧಚಂದ್ರಾಕೃತಿ ಮತ್ತು ತ್ರಿಕೋನಾಕೃತಿಗಳು ಕಂಡುಬರುವುದರಿಂದ ಹಾಗು ಇವುಗಳ ಗಾತ್ರ ಮತ್ತು ಆಕೃತಿಗಳನ್ನು ಗಮನಿಸಿದರೆ ಬಹುಶಃ ಇವು ಅತ್ಯಂತ ಹಳೇಶಿಲಾಯುಗದ ಕೊನೆಗಾಲಕ್ಕೆ ಅಥವಾ ಸೂಕ್ಷ್ಮ ಶಿಲಾಯುಗದ ಆರಂಭ ಕಾಲಕ್ಕೆ ಸೇರಿರಬಹುದೆಂದು ನಮ್ಮ ಸಾಮಾನ್ಯ ಜ್ಞಾನಕ್ಕೆ ಹೊಳೆಯುತ್ತದೆ. ಅಂದರೆ ಅಂತ್ಯಹಳೇಶಿಲಾಯುಗ ಮತ್ತು ಸೂಕ್ಷ್ಮಶಿಲಾಯುಗ ಕಾಲದ ನಡುವಿನ ಪರಿವರ್ತನಾ ಕಾಲಕ್ಕೆ ಸೇರಿದ ಶಿಲಾಯುಧಗಳಿರಬಹುದೆಂದು ಗ್ರಹಿಸಬಹುದು. ಹಾಗಿದ್ದಲ್ಲಿ ಇವು ವಿಶಿಷ್ಟ ಹಂತವೊಂದರ ಶಿಲಾಯುಧಗಳೆನಿಸುತ್ತವೆ. ಇಲ್ಲಿ ದೊರೆತಿರುವ ಅಸಂಖ್ಯಾತ ಚಕ್ಕೆಗಳು- ಉಪಕರಣಗಳಿಂದಾಗಿ ಇದೊಂದು ಆಯುಧಗಳ ತಯಾರಿಕೆಯ ನೆಲೆಯಾಗಿತ್ತೆಂದು ಸುಸ್ಪಷ್ಟ.

**ಆಯುಧೋಪಕರಣಗಳ ತಯಾರಿಕೆಗಾಗಿ ಬಳಸಿರುವ ಶಿಲೆಗಳು ಕಾವೇರಿ ಕಣಿವೆಯಲ್ಲಿ ದೊರೆಯುವುದಿಲ್ಲ. ಬಹುಶಃ ಈ ಶಿಲೆಗಳನ್ನು ಉತ್ತರ ಕರ್ನಾಟಕ ಪ್ರದೇಶದಿಂದ ಪಡೆದಿರಬೇಕು. ನೆಲೆಯು ಕಾವೇರಿ ನದಿಯ ದ್ವೀಪ ಪ್ರದೇಶದಲ್ಲಿರುವುದರಿಂದ, ಆ ಕಾಲಕ್ಕೆ ಇಲ್ಲಿ ನೆಲೆಸಿದ್ದ ಜನರ ಮುಖ್ಯ ಕಸುಬು ಮೀನುಗಾರಿಕೆ ಮತ್ತು ಬೇಟೆಗಾರಿಕೆಯಾಗಿತ್ತೆಂದು ಹೇಳಬಹುದು. ಇಂದಿಗೂ ಕಾವೇರಿ ನದಿಯ ಈ ಭಾಗದಲ್ಲಿ ಅನೇಕ ನಡುಗಡ್ಡೆಗಳಿದ್ದು, ಅವು ದಟ್ಟವಾದ ಮರಗಿಡಗಳನ್ನು ಹೊಂದಿವೆ. ಇನ್ನು ಶಿಲಾಯುಗ ಕಾಲದಲ್ಲಿ ಕಾವೇರಿ ನದಿಕಣಿವೆಯು ದಟ್ಟವಾದ ಅರಣ್ಯಪ್ರದೇಶ ವನ್ನು ಒಳಗೊಂಡಿತ್ತೆಂಬುದರಲ್ಲಿ ಸಂಶಯವಿಲ್ಲ.**

ಹೆಸರಾಂತ ಭೂವಿಜ್ಞಾನಿ ರಾಬರ್ಟ್ ಬ್ರೂಸ್‌ಫೂಟ್ ಕಾವೇರಿ ನದಿಯಲ್ಲಿರುವ ಅನೇಕ ಪ್ರಾಗೈತಿಹಾಸಿಕ ನೆಲೆಗಳನ್ನು ಕುರಿತು ಹೇಳಿದ್ದರೂ ಅವರ ವರದಿಯಲ್ಲಿ ಶ್ರೀರಂಗಪಟ್ಟಣದಲ್ಲಿನ ಈ ಪ್ರಾಗೈತಿಹಾಸಿಕ ನೆಲೆಯನ್ನು ಕುರಿತಂತೆ ಯಾವುದೇ ಮಾಹಿತಿಯಿಲ್ಲ. ಆ ಬಗೆಗೆ ಸ್ಪಷ್ಟ ಮಾಹಿತಿಯನ್ನು ಪಡೆಯಬೇಕಾದರೆ, ಅಲ್ಲಿ ಉತ್ಖನನ ನಡೆಸುವುದು ತುಂಬಾ ಅವಶ್ಯವಾಗಿದೆ.

**ಆಧಾರ ಸೂಚಿ**


೧. **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು**

೨. ನರಸಿಂಹಮೂರ್ತಿ ಎ.ವಿ, (ಸಂ) : **ಆರ್ಕಿಯಾಲಜಿ ಆಫ್ ಕರ್ನಾಟಕ,** ಪ್ರಸಾರಾಂಗ, ಮೈಸೂರು ವಿ.ವಿ. ೧೯೭೮

೩. ಸಂಕಾಲಿಯ ಎಚ್.ಡಿ : **ದಿ ಪ್ರಿ ಹಿಸ್ಟರಿ ಅಂಡ್ ಪ್ರೋಟೋಹಿಸ್ಟರಿ ಆಫ್ ಇಂಡಿಯ ಅಂಡ್ ಪಾಕಿಸ್ತಾನ್,** ಡೆಕ್ಕನ್ ಕಾಲೇಜು, ಪೂನಾ, ೧೯೭೪

೪. ಶೇಷಾದ್ರಿ ಎಂ.: **ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರೀ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರ್,** ಲಂಡನ್, ೧೯೫೬

೫. ಶೇಷಾದ್ರಿ ಎಂ.: **ರಿಪೋರ್ಟ್ ಆನ್ ದಿ ಎಕ್ಸ್‌ಕವೇಷನ್ ಅಟ್ ಟಿ. ನರಸೀಪುರ,** ಮೈಸೂರು ಸರ್ಕಾರ, ಮೈಸೂರು, ೧೯೭೧

ಕಲ್ಲನಗೌಡ ತಿಪ್ಪನಗೌಡ ಪಾಟೀಲ *

# ಕಪ್ಪತ್ತಗಿರಿಯ ಗವಿಮನೆಗಳು ಹಾಗೂ ಗವಿಮಠಗಳು

ಗದಗ ಜಿಲ್ಲೆ ಶಿರಹಟ್ಟಿ, ಮುಂಡರಗಿ ಹಾಗೂ ಗದಗ ತಾಲೂಕು ಗಡಿಗಳು ಸಂಧಿಸುವ ಭಾಗದಲ್ಲಿರುವ ಕಪೋತಗಿರಿ ಕ್ರಿಸ್ತಪೂರ್ವ ಕಾಲದಲ್ಲಿ ಕಾಡು ಜನಾಂಗದ ಬೀಡಾಗಿದ್ದಿತು. ಇಲ್ಲಿ ಈಗ ಅನೇಕ ಗವಿಗಳು ಮಠಗಳು ಇವೆ.

## ಮಲ್ಲಯ್ಯಸ್ವಾಮಿ ಮಠ

ಇದು ಕಪ್ಪತ್ತಗಿರಿ ಗುಡ್ಡದ ಅರ್ಧಭಾಗದಲ್ಲಿ ಇದ್ದು, ಭೂಮಟ್ಟದಿಂದ ೭೦-೮೦ ಅಡಿಗಳಷ್ಟು ಎತ್ತರದಲ್ಲಿದೆ. ಇದು ಸ್ವಾಭಾವಿಕ ಗವಿಯಾಗಿದ್ದು ೪೦ ಅಡಿ ಅಗಲ ೩೦ ಅಡಿ ಉದ್ದವುಳ್ಳದ್ದಾಗಿದೆ. ಈ ಗವಿಯೊಳಗೆ ಚಿಕ್ಕದಾದ ಈಶ್ವರ ಲಿಂಗವಿದೆ. ಈ ಗವಿಯ ಮುಂಭಾಗವನ್ನು ಹೊಸದಾಗಿ ಗುಡಿಯಾಕಾರದಲ್ಲಿ ಕಟ್ಟಲಾಗಿದೆ. ಈ ಗವಿಯ ಮೇಲುಛಾವಣಿಯಾಗಿ ದೊಡ್ಡ ಬಂಡೆಗಲ್ಲು ಇದೆ. ಈ ಬಂಡೆಗಲ್ಲಿನ ಮೇಲೆ ಒಂದು ಚಿಕ್ಕ ಗುಡಿ ಇದೆ. ಅದರಲ್ಲಿ ಚಕ್ರಬಸವೇಶ್ವರ ಶಿಲ್ಪವಿದೆ. ಈ ಬೃಹತ್ತಾದ ಗವಿಯೇ ಮಲ್ಲಯ್ಯ ಸ್ವಾಮಿಮಠ. ಆದಿಮಾನವನ ನೆಲೆಯಾಗಿದ್ದ ಈ ಗವಿಯು ಈಗ ಮಠವಾಗಿದೆ. ಈ ಗವಿಮಠದ ಮುಂದೆ ಅದಕ್ಕೆ ಅಂಟಿಕೊಂಡಂತೆ ದೊಡ್ಡದಾದ ಸರೋವರವಿದೆ. ಈ ಗವಿಯಿಂದ ಮೇಲಕ್ಕೆ ಸುಮಾರು ೧೨೦ ಅಡಿಗಳಷ್ಟು ಎತ್ತರದಲ್ಲಿ ಗುಡ್ಡದ ತುದಿ ಇದೆ.

## ಕಾರಿಸಿದ್ಧರ ಗವಿ

ಮಲ್ಲಯ್ಯಸ್ವಾಮಿ ಮಠದ ಹತ್ತಿರವೇ ಈ ಮಹಾಗವಿ ಉಂಟು. ಇಲ್ಲಿ ಹಿಂದೆ ಸಿದ್ಧರಾದ ಸಾಧುಗಳು ಇದ್ದುದರಿಂದ ಇದಕ್ಕೆ ಕಾರಿಸಿದ್ಧರಗವಿಯೆಂದು ಹೆಸರು ಬಂದಿರಬೇಕು. ಇದು ಹೊರನೋಟಕ್ಕೆ ದೊಡ್ಡ ಕಮಾನಿನಂತೆ ಕಾಣುತ್ತದೆ. ಒಳಗೆ ಒಂದು ಚಿಕ್ಕ ಗೂಡಿದೆ. ಆ ಗೂಡೇ ಈ ಗವಿಯ ಮುಖ್ಯದ್ವಾರ. ಇದರ ಮೂಲಕ ಮನುಷ್ಯ ಒಳಗೆ ಹೋಗಬೇಕಾದರೆ ಮಲಗಿಕೊಂಡು ಹಾವಿನಂತೆ ಸರಿಯುತ್ತಾ ಹೋಗಿ, ಮುಂದೆ ಕುಳಿತುಕೊಂಡು ನುಸುಳಬೇಕು. ನಂತರ ಬಾಗಿಕೊಂಡು ಮಂಗನ ಹಾಗೆ ನಡೆಯಬೇಕು. ನಂತರ ಮುಂದೆ ವಿಶಾಲವಾದ ದಾರಿಯಿದ್ದು ನಡೆದುಕೊಂಡು ಹೋಗಲಿಕ್ಕೆ ಬರುತ್ತದೆ. ಈ ಸ್ಥಳದ ಎಡಬಲಗಳಲ್ಲಿ ಸಣ್ಣ ಸಣ್ಣ ಗವಿಮನೆಗಳಿವೆ. ಇಲ್ಲಿ ಹವಾ ಹಾಗೂ ಬೆಳಕು ಇದೆ. ಇವು ಮಾನವ ನಿರ್ಮಿತ ಗವಿಗಳೆನ್ನಬಹುದು. ಏಕೆಂದರೆ ಈ ಪರಿಸರದಲ್ಲಿ ಚಿನ್ನ ಮತ್ತು ತಾಮ್ರದ ಗಣಿಗಳು ಇದ್ದವು. ಹಿಂದೆ ಅಡವಿ ಮಾನವರೂ ಇಲ್ಲಿ ವಾಸಿಸಿರಬಹುದು. ಈ ಗವಿಗಳಲ್ಲಿ, ಬೂದಿ, ಇದ್ದಿಲು, ಗಡಿಗೆ ಚೂರುಗಳು ಚಿಕ್ಕ ಗುಣಿಗಳು ಕಂಡು ಬರುತ್ತವೆ. ಈ ಸ್ಥಳದಲ್ಲಿ ಕಳ್ಳರು ವಾಸಿಸುತ್ತಿದ್ದರೆಂದು ಹಿರಿಯರು ಹೇಳುತ್ತಾರೆ. ಆದರೆ ಈಗ ಇಲ್ಲಿ ಸಿದ್ಧೇಶ್ವರನ ಕಲ್ಲಿನ ಮೂರ್ತಿ ಇದ್ದು, ಇದನ್ನು ಕಾರಿಸಿದ್ಧೇಶ್ವರನ ಮಠವೆನ್ನುತ್ತಾರೆ. ಇಲ್ಲಿ ಈಗಲೂ ಪೂಜೆ ನಡೆಯುತ್ತಿದೆ.

## ಗೊಲಗೇರಿ ಮಠ

ಇದು ಭೂಮಿಯ ಸಮಪಾತಕ್ಕೆ ಇದ್ದು, ದೊಡ್ಡ ಸರೋವರದ ಹತ್ತಿರವೇ ಇದೆ. ಗುಡ್ಡವನ್ನೇ ಕೊರೆದು ಮಾಡಿರುವ ಚೌಕಾಕಾರದ ಮನೆಯಂತಿರುವ ಗವಿ ಇದಾಗಿದೆ. ಇಲ್ಲಿ ಶರಣನೊಬ್ಬನ ಗದ್ದುಗೆ ಇದ್ದು ಈಗ ಮಠವಾಗಿದೆ. ಶಿವಶರಣರು, ಮಹಾಮಹಿಮರು ತಪಸ್ಸುಮಾಡಿದ ಸುಕ್ಷೇತ್ರವಿದೆಂದು ಹೆಸರಾಗಿದೆ.

## ಮಲ್ಲಿಕಾರ್ಜುನ ಗುಡಿ

ಗೊಲಗೇರಿಮಠಕ್ಕೆ ಹೊಂದಿಕೊಂಡಂತೆ ಇರುವ ಸರೋವರದ ಮುಂದೆ ಗುಡ್ಡದ ಅರ್ಧ ಜಾರಿನಲ್ಲಿ ಪುರಾತನವಾದ ಮಲ್ಲಿಕಾರ್ಜುನ ಗುಡಿಯಿದೆ. ಈ ಗುಡಿಗೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಬಾಗಿಲುಗಳಿವೆ. ಈ ಗುಹೆಯ ಗೂಡಿನಲ್ಲಿ ಚಿಕ್ಕ ಶಿವಲಿಂಗವಿದೆ. ಇಲ್ಲಿಗೆ ಸನಿಹದ ಗುಹೆಗಳು ಕಾಡು ಜನರ ವಾಸಸ್ಥಾನವಾಗಿದ್ದವು. ಇಲ್ಲಿ ಒಬ್ಬ ಬೇಟೆಗಾರನ ಸಮಾಧಿ ಇದೆ. ಆತ ಇಲ್ಲಿನ ದೊಡ್ಡ ಬಂಡೆಯ ಮೇಲಿಂದ ಕೆಳಕ್ಕೆ ಹಾರಿ

* ಬೆಳಧಡಿ, ಗದಗ ತಾಲೂಕು, ಗದಗ ಜಿಲ್ಲೆ

ಪ್ರಾಣಬಿಟ್ಟನೆಂಬ ಕಥೆ ಪ್ರಚಲಿತವಿದೆ. ಇದಕ್ಕೆ **ಕನ್ನಡಪಡೆ** ಎಂಬ ನಾಮಕರಣವಿದೆ. ಇಲ್ಲಿಗೆ ಸನಿಹದಲ್ಲೆ ಉಪ್ಪಿನ ಗವಿಯೊಂದು ಇದ್ದು, ಇದರಲ್ಲಿ ಚಳಿಗಾಲದಲ್ಲಿ ಪದರು ಪದರಾಗಿ ಕೆಂಪು ಉಪ್ಪು ತಯಾರಾಗುತ್ತದೆ. ಈ ಉಪ್ಪನ್ನು ಕೆಮ್ಮು, ದಮ್ಮುಗಳಿಗೆ ಔಷಧವಾಗಿ ಜನರು ಉಪಯೋಗಿಸುತ್ತಾರೆ. ಹಿಂದೆ ಕಾಡು ಜನರು ಈ ಉಪ್ಪನ್ನೇ ಬಳಸಿರುವಂತಿದೆ.

### ಗಂಗಿಬಾವಿ

ಕಪ್ಪತ್ತಗಿರಿಯ ಮಧ್ಯಭಾಗದಲ್ಲಿ ಗಂಗಿಬಾವಿ ಇದೆ. ಇದಕ್ಕೆ ೮೦ ಮೆಟ್ಟಲುಗಳಿದ್ದು ಮತ್ತೆ ಇನ್ನೂ ೪೦ ಅಡಿ ಆಳಕ್ಕೆ ಜಲದಿಂದ ಕೂಡಿದ ಬಾವಿ ಇದೆ. ಇದಕ್ಕೆ ಸಮೀಪದಲ್ಲೇ ಗಂಗಮ್ಮನ ಮಠವಿದೆ. ಪ್ರತಿವರ್ಷ ಶ್ರಾವಣ ಮಾಸದಲ್ಲಿ ಬರುವ ಒಂದು ಗುರುವಾರದಲ್ಲಿ ವೈಭವದ ದೊಡ್ಡ ಜಾತ್ರೆ ಕೂಡುತ್ತದೆ. ಮಲ್ಲಯ್ಯ ಸ್ವಾಮಿಗೂ ಗಂಗಮ್ಮಳಿಗೂ ಮದುವೆ ಉತ್ಸವ ಮಾಡುತ್ತಾರೆ. ಇದೇ ಸಂದರ್ಭದಲ್ಲಿ ಎಷ್ಟೋ ಬಡವರ ಮದುವೆಗಳಿಗೂ ಅವಕಾಶ ಕಲ್ಪಿಸುತ್ತಾರೆ.

### ನಂದಿವರಿ ಮಠ

ಗವಿ ಸಿದ್ದೇಶ್ವರ ಮಹಿಮಾಕ್ಷೇತ್ರ ಮಹಾಲಿಂಗೇಶ್ವರ ಮಠವಿದು. ಸ್ವಾಮಿಗಳೂ ಇದ್ದಾರೆ. ಈ ಮಹಾಲಿಂಗ ಮಠದ ಅಕ್ಕಪಕ್ಕದಲ್ಲಿ ಪ್ರಾಚೀನ ಶಿಲ್ಪಗಳು ಕಂಡುಬರುತ್ತವೆ. ಇದು ಅರಸರ ಆಳಿಕೆಗೆ ಒಳಪಟ್ಟದ್ದಿರಬೇಕು.

### ಹಳೇ ಮಠ

ಇದು ಹೆಸರಿಗೆ ಮಠವಾದರೂ, ಹಿಂದೆ ಸಾಂಗಲಿ ಸಂಸ್ಥಾನಿಕರಾದ ಬಸವಂತದೇಸಾಯರು ತಮ್ಮ ವಿಶ್ರಾಂತಿಗಾಗಿ ಕಟ್ಟಿಸಿದ ಚಿಕ್ಕ ಅರಮನೆ. ಇದಕ್ಕೆ ಪೂರ್ವಮುಖವಾಗಿ ಚಿಕ್ಕ ದ್ವಾರವಿದೆ. ಎಡ ಬಲಕ್ಕೆ ಸೈನಿಕರ ತಂಗುದಾಣಗಳಿವೆ. ಈ ಅರಮನೆಯ ಮುಖ್ಯ ಬಾಗಿಲು ಉತ್ತರಮುಖವಾಗಿ ಇದೆ. ಈ ಕಟ್ಟಡದ ಸುತ್ತಲೂ ಕೋಟೆ ಇದ್ದು ಇದರ ಪಕ್ಕಕ್ಕೆ ಅಡವಿ ಪ್ರಾಣಿಗಳು ಒಳಗೆ ಬಾರದ ಹಾಗೆ ಕಂದಕವಿದೆ. ಅರಮನೆಯ ಒಳಗಡೆ ಪಾಠಶಾಲೆ, ಚೌಕಿ ಅಂಕವಿದ್ದು ಇನ್ನೂರು ಜನರು ಕುಳಿತು ಕೊಳ್ಳುವ ಹಾಗೆ ಭೋಜನ ಶಾಲೆ, ವಿಶ್ರಾಂತಿ ಪಡೆಯಲು ಮೇಲುಪ್ಪರಿಗೆ ಇದೆ. ಇಲ್ಲಿ ಗುಪ್ತ ಗುಹಾದಾರಿ ಇದ್ದು ಒಂದು ಮೈಲು ದೂರದಷ್ಟು ಹೋಗಿಬರಲಿಕ್ಕಾಗುತ್ತದೆ. ಈ ಅರಮನೆ ಹಾಳಾಗಿದೆ. ಇದರ ಕಾಲ ೧೭ನೇ ಶತಮಾನವೆಂದು ತಿಳಿದುಬರುತ್ತದೆ. ದೇಸಾಯರ ದರ್ಬಾರು ನಿಂತ ಬಳಿಕ ಇದು ಹಾಳುಬಿದ್ದ ಈ ನೆಲೆಯಲ್ಲಿ ಒಬ್ಬ ಸಾಧುಪುರುಷನ ವಾಸ್ತವವಾಗಿ ಆತನು ತೀರಿದ ಮೇಲು ಶವಸಂಸ್ಕಾರವಾಗದೆ, ಅಸ್ಥಿಪಂಜರ ಮಾತ್ರ ಉಳಿದಿತ್ತು. ಮುಂದೆ ಬೇಟೆಗಾರರು ಬಂದಾಗ ಈ ಅಸ್ಥಿಪಂಜರವು ಮಡಿವಾಳ ಸ್ವಾಮಿಯದೆಂದು ತಿಳಿದು ಅದೇ ಜಾಗದಲ್ಲಿ ಸಮಾಧಿಮಾಡಿ ಮಡಿವಾಳ ಸ್ವಾಮಿಮಠವೆಂದು ಕರೆದರು. ಇದೇ ಹಳೇಮಠವೆಂದು ಹೆಸರುವಾಸಿಯಾಗಿದೆ. ಈ ಕಥೆಯು ಈಗ ಇಲ್ಲಿ ವಾಸವಾಗಿರುವ ಸಂಸಾರಿ ಸ್ವಾಮಿಗಳಿಂದ ತಿಳಿಯಿತು.

ಈ ಕಪೋತಗಿರಿಯಲ್ಲಿ ಚಿನ್ನ, ತಾಮ್ರ, ಕಬ್ಬಿಣದಂತಹ ಲೋಹಗಳಲ್ಲದೆ, ಅನೇಕ ವನೌಷಧಿ ಸಸ್ಯಗಳಿಂದ ಕೂಡಿ ಪ್ರಸಿದ್ಧವಾಗಿದೆ. ಇಲ್ಲಿ ಸಂಜೀವನಿ ಮೂಲಿಕೆಯು ಇದೆಯೆಂದು ಪ್ರತೀತಿ ಇದೆ. ಈ ಗುಡ್ಡದಲ್ಲಿ ಇನ್ನೂ ಎಷ್ಟೋ ಗವಿಗಳಿದ್ದು ಅಲ್ಲಲ್ಲ ನವಿಲು, ಬೆಚನ, ತೋಳ ಮುಂತಾದ ಮೃಗ ಪಕ್ಷಿಗಳು ವಾಸಿಸುತ್ತಿವೆ. ಈ ಗುಡ್ಡದ ಬಗ್ಗೆ ಸ್ಕಾಂದಪುರಾಣದಲ್ಲೂ ಉಲ್ಲೇಖವಿದೆಯಂತೆ. **'ಎಪ್ಪತ್ತಗಿರಿಗಿಂತ ಕಪ್ಪತ್ತಗಿರಿನೋಡಾ, ಕಪೋತಗಿರಿ ಮೇಲಾ ಮಲ್ಲಿನಾಥ'** ಎಂಬ ಮಾತು ಪ್ರಚಲಿತವಿದೆ.

ಸಾಸಲು ಜೆ. ವಿಶ್ವನಾಥ್ * ಮತ್ತು ಎಂ.ಜಿ. ಮಂಜುನಾಥ **

# ಐದು ಅಪ್ರಕಟಿತ ಶಾಸನಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿಗೆ ಸೇರಿದ ಐದು ಅಪ್ರಕಟಿತ ಶಾಸನಗಳ ಬಗ್ಗೆ ಪ್ರಸ್ತುತ ಪ್ರಬಂಧ. ಇವುಗಳಲ್ಲಿ ಮೂರು ಶಾಸನಗಳು ದೊಡ್ಡಬಳ್ಳಾಪುರ ತಾಲ್ಲೂಕಿನ ಸಾಸಲು ಹೋಬಳಿಗೆ ಸೇರಿದ್ದರೆ ಉಳಿದೆರಡು ದೊಡ್ಡಬೆಳವಂಗಲ ಹೋಬಳಿಗೆ ಸೇರಿವೆ.

**ಶಾಸನ - ೧ :** ಸಾಸಲು ಹೋಬಳಿ ಸಾಸಲು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಚಿಗರೆ ಮರದ ಕೆಳಗಿನ ಶಾಸನ.

**ಶಾಸನ ಶಿಲ್ಪ :** ಶಾಸನ ಫಲಕದ ಮೇಲ್ಭಾಗದಲ್ಲಿ ಹಸು, ಕರು ನಂದಿ ಮತ್ತು ಸೂರ್ಯ ಚಂದ್ರರ ರೇಖಾಚಿತ್ರಗಳಿವೆ.

**ಶಾಸನ ಪಾಠ**

| | | | |
|---|---|---|---|
| ೧ | ಶ್ರೀ | ೮ | ಸಮುದ್ರ (ಸು)ವ(ರ್ಣ) |
| ೨ | ಸಿವ(ಪು)ರದ | ೯ | ವ ೧ ನೂ ಇ |
| ೩ | ಬಸವಾ | ೧೦ | ಧರ್ಮಕೆ ಆ(ಹ)ವ |
| ೪ | ಭಟರಲಕ | ೧೧ | ಕ್ರವಾದವರುಗಂಗೆ |
| ೫ | ಭೋಗದ ಅ | ೧೨ | ತೀರದಲಿ ಕಪಿಲೆಕೊಂ |
| ೬ | ಗ್ರಾರ | ೧೩ | ದಪಾಪ.,...... |
| ೭ | ಕ್ರುಷ್ಣರಾಯ | ೧೪ | ಹೋಹರು.... |

(ಮುಂದೆ ಅಕ್ಷರಗಳು ಸ್ಪಷ್ಟವಾಗಿಲ್ಲ)

ಪ್ರಸ್ತುತ ಎರಡು ಅಡಿ ಅಗಲ, ನಾಲ್ಕು ಅಡಿ ಎತ್ತರದ ಕಣಶಿಲೆಯ ಚಪ್ಪಡಿಯ ಮೇಲೆ ಶಾಸನವು ಕಂಡರಿಸಲ್ಪಟ್ಟಿದೆ. ಶಿವಪುರದ ಬಸವಾಭಟ್ಟರ ಅಗ್ರಹಾರದ ಕೃಷ್ಣರಾಯ ಸಮುದ್ರ ಎಂಬ ಕೆರೆಗೆ ೧ ಸುವರ್ಣ ವರಹವನ್ನು ದಾನವಾಗಿ ಕೊಟ್ಟಿದ್ದನ್ನು ಈ ಶಾಸನವು ಉಲ್ಲೇಖಿಸುತ್ತದೆ. ಕೆರೆಯ ನಿರ್ವಹಣೆಗಾಗಿ ಈ ದಾನ ಕೊಟ್ಟಿದ್ದಾರೆಂಬುದು ವೇದ್ಯವಾಗುತ್ತದೆ. ಕಾಲದ ಉಲ್ಲೇಖವಿಲ್ಲದ ಈ ಶಾಸನದ ಲಿಪಿಸ್ವರೂಪದಿಂದ ಇದು ಕ್ರಿ. ಶ.. ೧೬ನೆಯ ಶತಮಾನದ ಕಾಲದ್ದೆಂದು ಗುರ್ತಿಸಬಹುದು. ಪ್ರಾಯಶಃ ವಿಜಯನಗರದ ಕೃಷ್ಣದೇವರಾಯನ ಹೆಸರಿನ ಕೃಷ್ಣರಾಯ ಸಮುದ್ರವೆಂಬ ಕೆರೆಯ ಹೆಸರನ್ನು ಗಮನಿಸಿದರೆ ಕೃಷ್ಣದೇವರಾಯನಿಂದ ಈ ಕೆರೆ ನಿರ್ಮಾಣವಾಗಿರಬಹುದೆ ಎಂಬ ಸಂಶಯವೂ ಉಂಟಾಗುತ್ತದೆ. ಖಚಿತವಾಗಿ ಹೇಳಲು ಸಾಧ್ಯವಿಲ್ಲ.



**ಶಾಸನ - ೨ :** ಸಾಸಲು ಹೋಬಳಿ ಬೈರಾಪುರದ ಊರ ಮಧ್ಯದಲ್ಲಿರುವ ಚಾವಡಿಯ ಪಶ್ಚಿಮದಲ್ಲಿರುವ ಶಾಸನ.

**ಶಾಸನ ಶಿಲ್ಪ :** ಶಾಸನ ಫಲಕದ ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಮಧ್ಯದಲ್ಲಿ ನಂದಿಯ ಉಬ್ಬುಶಿಲ್ಪವಿದೆ.

---

* ಕನ್ನಡ ಉಪನ್ಯಾಸಕ, ಎಸ್.ಜೆ. ಆರ್.ಸಿ. ಪ್ರಥಮ ದರ್ಜೆ ಕಾಲೇಜು, ಬೆಂಗಳೂರು - ೫೬೦ ೦೦೯.

** ಕನ್ನಡ ಉಪನ್ಯಾಸಕ, ಸ್ನಾತಕೋತ್ತರ ಕೇಂದ್ರ (ಬೆಂಗಳೂರು ವಿಶ್ವವಿದ್ಯಾನಿಲಯ), ಕೋಲಾರ

**ಶಾಸನ ಪಾಠ**

೧ ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯು
೨ ದಯ ಶಾಲಿವಾಹನ ಶಕವರು
೩ ಸಂಗಳು ೧೪೫೦ ಸಾರ್ವರಿ ಸಂವತ್ಸ
೪ ರದ ಕಾರ್ತಿಕ ಶು ೧೨ ಶ್ರೀಮತು ಹುಲುಕುಡಿನಾ
೫ ಮಾಳನಗೊ ತಿಂಪುರ ಸೀಮೆಯಲು ಬ
೬ ಯಿರಪುರದ ಆನ್ತಹರದಲಿ ತಿಪೂರ ಅಜ್ಜಂ
೭ ಪಸೆಂಟಿಯರಮ್ಮಂಕಳು ವೊನವೀರಸೆಟಿ
೮ ಯರು ತಂಮಮಕ್ಕಳು...... ಸಿವಲೋಕಸಾ
೯ ಜಿ ಮಾಡಿಸಿದ ಕೆಜಿ ಬ್ರಾಹ್ಮಣ
೧೦ ರ್ಣ್ಗೆ ಕನ್ಯಾದಾನ ಮಾಡಿ ಧೇನುವನು ಕೊಂಟು ಮಾಡಿ
೧೧ ದರು ॥ ಮೂಲಸ್ತಳದ ಸಮಸ್ತ ಮ
೧೨ ಹಾಜನ ಮಾನಂಗಳು ಕೊಂಟ ಕೊ
೧೩ ಡಗಿಯ ಗದ್ಯಾಣ................
೧೪ ಬರೆದ.............
೧೫ ಮಂಗಳ ಮಹಾ ಶ್ರೀಶ್ರೀ



ಪ್ರಸ್ತುತ ಶಾಸನ ೧೭೦ ಸಂಟಿಮೀಟರ್ ಎತ್ತರ ಹಾಗೂ ೯೫ ಸೆಂಟಿಮೀಟರ್ ಅಗಲವಾಗಿರುವ ಕಣಶಿಲೆಯ ಫಲಕದ ಮೇಲೆ ಕಂಡರಿಸಲ್ಪಟ್ಟಿದೆ. ತಿಪ್ಪೂರ ಸೀಮೆಯಲ್ಲಿರುವ ಬೈರಾಪುರದಲ್ಲಿ ತಿಪ್ಪೂರ ಅಜ್ಜಪ್ಪಸೆಟ್ಟಿಯ ಮಗನಾದ ಹೊನ್ನವೀರಸೆಟ್ಟಿಯು ತನ್ನ ಮಕ್ಕಳು ಶಿವಲೋಕ ಸೇರಿದಾಗ ಅಂದರೆ ಮರಣಿಸಿದಾಗ ಒಂದು ಕೆರೆ ಕಟ್ಟಿಸಿ ಕನ್ಯಾದಾನ ಗೋದಾನ ಸಹಿತವಾಗಿ ಬ್ರಾಹ್ಮಣರಿಗೆ ದಾನಪೂರ್ವಕವಾಗಿ ಕೊಟ್ಟಿದ್ದನ್ನು ಪ್ರಸ್ತುತ ಶಾಸನ ವಿವರಿಸುತ್ತದೆ. ಹಾಗೂ ಆ ಊರಿನ ಮಹಾಜನಗಳು ಸಹ ಆ ಕೆರೆಯ ನಿರ್ವಹಣೆಗೆ ಕೆಲವು ಗದ್ಯಾಣದ ದಾನಕೊಟ್ಟದ್ದನ್ನು ಶಾಸನ ಉಲ್ಲೇಖಿಸುತ್ತದೆ. ಈ ಶಾಸನವು ಶಕ ಸಂವತ್ಸರ ೧೪೫೦ನೆಯ ಶಾರ್ವರಿ ಸಂವತ್ಸರದ ಕಾರ್ತಿಕ ಶುದ್ಧದಶಮಿ ಶುಕ್ರವಾರದಂದು ರಚಿತವಾಗಿದೆ. ಇದು ಕ್ರಿ.ಶ. ೧೫೨೮ ನವೆಂಬರ್ ತಿಂಗಳಿನ ೨೪ ಶುಕ್ರವಾರಕ್ಕೆ ಹೊಂದಿಕೆಯಾಗುತ್ತದೆ.

**ಶಾಸನ - ೩ :** ಸಾಸಲು ಹೋಬಳಿ ಹೊಸಹಳ್ಳಿಯ ಉತ್ತರ ದಿಕ್ಕಿನಲ್ಲಿರುವ ಹೊಲದಲ್ಲಿನ ವೀರಗಲ್ಲು ಶಾಸನವನ್ನು ೨೧೦ ಸೆಂ.ಮೀ. ಅಗಲ ೨೦೦ ಸೆಂ.ಮೀ. ಎತ್ತರವಾಗಿರುವ ಕಣಶಿಲೆಯ ಫಲಕದ ಮೇಲೆ ಕೆತ್ತಲಾಗಿದೆ.

**ಶಾಸನ ಶಿಲ್ಪ :** ಪ್ರಸ್ತುತ ವೀರಗಲ್ಲಿನ ಶಿಲ್ಪ ಅತ್ಯಂತ ಗಮನಾರ್ಹವಾದುದಾಗಿದೆ. ವೀರನೊಬ್ಬನು ತನ್ನ ಎಡಗೈಯ್ಯಲ್ಲಿ ಗುರಾಣಿ ಹಾಗೂ ಬಲಗೈಯ್ಯಲ್ಲಿ ಖಡ್ಗವನ್ನು ಹಿಡಿದು ಆಲೀಢಾಸನದಲ್ಲಿ ವೀರಾವೇಶದಿಂದ ನಿಂತಿದ್ದಾನೆ. ಆತನ ಎದುರಿನಲ್ಲಿ ಆತನಿಂದಲೇ ಹತವಾದ ಎರಡು ಆನೆಗಳು ಬಿದ್ದಿವೆ. ಮೂರನೆಯ ಆನೆ ವೀರನ ಭರ್ಜಿಯಿಂದ ತಿವಿಯಲ್ಪಟ್ಟು ಹತವಾಗಿ ಬಿದ್ದಿದೆ. ಈ ವೀರನ ಕಾಲಕೆಳಗೆ ಇಬ್ಬರು ಶತ್ರುವೀರರ ಶವಗಳಿವೆ. ವೀರನ ಹಿಂಭಾಗದಲ್ಲಿ ಕುದುರೆಯೊಂದರ ಶಿಲ್ಪವಿದೆ. ಅದರ ಹಿಂಭಾಗದಲ್ಲಿ ೮ ಸಾಲುಗಳ ಶಾಸನ ಪಾಠವಿದೆ. ಮೇಲ್ಭಾಗದಲ್ಲಿ ವೀರನನ್ನು ದೇವಕನ್ಯೆಯರು ಸ್ವರ್ಗಕ್ಕೆ ಒಯ್ಯುತ್ತಿರುವ ಶಿಲ್ಪವಿದೆ. ಈ ವೀರಗಲ್ಲಿನ ಶಿಲ್ಪವನ್ನು ನೋಡಿದರೆ ಆ ಸ್ಥಳದಲ್ಲಿ ನಡೆದ ದೊಡ್ಡ ಯುದ್ಧವೊಂದನ್ನು ಇದು ದಾಖಲಿಸಿದೆಯೆಂಬುದು ತಿಳಿಯುತ್ತದೆ.

**ಶಾಸನ ಪಾಠ**

೧
೨
೩ ಗುತ್ತು ಕಲ್ಲು ನಾಡುವಂ ದೇವನ
೪ ನಾಡು ಗನುಲಪಳ್ಳಿ ಕಲ್ಲುದೇವನಹಳ್ಳಿ
೫ ........................ ರಾಜ್ಯದೊಳೆ

ಮುಂದಿನ ಮೂರು ಸಾಲುಗಳ ಬರಹ ಅಸ್ಪಷ್ಟವಾಗಿದೆ. ಓದಲು ಸಾಧ್ಯವಿಲ್ಲ. ಈ ಶಾಸನದಲ್ಲಿ ಕಾಲದ ಉಲ್ಲೇಖವಿರುವ ಮೊದಲನೆಯ ಭಾಗವು ಸವೆದು ಹೋಗಿದ್ದು ಖಚಿತವಾಗಿ

ಗುರ್ತಿಸಲು ಸಾಧ್ಯವಾಗುವುದಿಲ್ಲ. ಲಿಪಿಸ್ವರೂಪದ ಆಧಾರದಿಂದ ಈ ಶಾಸನವು ಕ್ರಿ.ಶ. ೧೧ನೆಯ ಶತಮಾನದ್ದೆಂದು ಹೇಳಬಹುದು.



ಈ ವೀರಗಲ್ಲಿನ ಪಕ್ಕದಲ್ಲಿಯೇ ಮತ್ತೊಂದು ವೀರಗಲ್ಲು ನೆಲದ ಮೇಲೆ ಬಿದ್ದಿದೆ. ಆ ವೀರಗಲ್ಲಿನಲ್ಲಿಯೂ ವೀರನೊಬ್ಬನು ಖಡ್ಗಗುರಾಣಿಗಳೊಂದಿಗೆ ರಣರಂಗದಲ್ಲಿ ಹೋರಾಡುತ್ತಿರುವ ಉಬ್ಬುಶಿಲ್ಪವಿದೆ. ಆ ವೀರನ ಮುಂದಿರುವ ಆನೆಯು ಈ ವೀರನ ಹೊಡೆತದಿಂದ ಗಾಸಿಗೊಂಡು ಬೆನ್ನು ತಿರುಗಿಸಿ ಹೆದರಿ ಓಡುತ್ತಿದೆ. ವೀರನಿಗೆ ಒಂದೆರಡು ಬಾಣಗಳು ಚುಚ್ಚಿಕೊಂಡಿವೆ. ಐದು ಅಡಿ ಅಗಲ ಆರು ಅಡಿ ಎತ್ತರದ ಈ ವೀರಗಲ್ಲಿನಲ್ಲಿ ಯಾವುದೇ ರೀತಿಯ ಬರಹವಿಲ್ಲ.

**ಶಾಸನ – ೪ : ದೊಡ್ಡಬೆಳವಂಗಲ ಹೋಬಳಿಯ ಅಕ್ಕತಮ್ಮನಹಳ್ಳಿಯ ಸಿದ್ಧಲಿಂಗಯ್ಯನವರ ಹೊಲದಲ್ಲಿನ ಶಾಸನ.**

**ಶಾಸನ ಪಾಠ**

೧ ಸಕನ್ರಿಪಕಾಲಾತೀತ ಸಂವ
೨ ತ್ಸರ ಸತಂಗಳ್ ೯೦೨ನೆಯ ವಿಷು
೩ ಸಂವತ್ಸರಂ ಪ್ರವರ್ತ್ತಿಸುತ್ತಿಱೆ
೪ ಕಾರ್ತ್ತಿಕ ಬಹುಳತ್ರಯೋದ
೫ ಸಿಯಾದಿತ್ಯವಾರ ಸ್ವಸ್ತಿನಯವಿನಯ
೬ ....................................
೭ ಗಾಮುಣ್ಡರ ಮಗನಾಟ್ಗಾಮು
೮ - ಣ್ಡ...........................
೯ ನ ವೇಳೆ................ ಯೊಳ್
೧೦ ತಲೆಗಡಿಯಿಸಿ.....................
೧೧ ಸತ್ತಂ ಅವಂಗೆ ................
೧೨ ಐಯ್ದುಗಣ್ಡುಗಗಟ್ಟೆ
೧೩ ..........ಗೆಯದಾಯಂಗಾಮುಣ್ಡ
೧೪ ಹುಱುಡಿಯ..................
೧೫ ಪುಱುಡಿಯದಾಯ ||

ಪ್ರಸ್ತುತ ಶಾಸನವು ೯೬ ಸೆಂ.ಮೀ. ಅಗಲ ೧೨೪ ಸೆಂ.ಮೀ. ಎತ್ತರದ ಕಣಶಿಲೆಯ ಫಲಕದ ಮೇಲೆ ಕೊರೆಯಲ್ಪಟ್ಟಿದೆ. ಒಟ್ಟು ೧೫ ಸಾಲುಗಳುಳ್ಳ ಈ ಶಾಸನ ಸಾಂಸ್ಕೃತಿಕವಾಗಿ ಮಹತ್ವದ ಅಂಶಗಳುಳ್ಳ ಶಾಸನವಾಗಿದೆ. ವೇಳೆವಾಳಿಯೊಬ್ಬ ಆತ್ಮಾಹುತಿ ಮಾಡಿಕೊಣ್ಡದ್ದನ್ನು ಈ ಶಾಸನ ಉಲ್ಲೇಖಿಸುತ್ತದೆ. ದುರದೃಷ್ಟ ವಶಾತ್ ಆ ವೇಳೆವಾಳಿಯ ಹೆಸರಿನ ಭಾಗದ ಪಾಠ ಅಸ್ಪಷ್ಟವಾಗಿದೆ. ಆ ವೇಳೆವಾಳಿಯ ಕುಟುಂಬದವರಿಗೆ ಐದು ಕಂಡುಗ ಬೆಳೆ ಬರುವ ಗದ್ದೆಯನ್ನು ದಾನವಾಗಿ ಕೊಟ್ಟಿದ್ದನ್ನು ಶಾಸನದ ಕಡೆಯ ಭಾಗ ಉಲ್ಲೇಖಿಸಿದೆ.

ಈ ಶಾಸನದ ಕಾಲ ಶಕವರ್ಷ ೯೦೨ನೆಯ ವಿಷು ಸಂವತ್ಸರದ ಕಾರ್ತಿಕ ಬಹುಳ ತ್ರಯೋದಶಿ ಆದಿತ್ಯವಾರ. ಅಂದರೆ ಕ್ರಿ.ಶ. ೯೮೦ ವಿಷು ಸಂವತ್ಸರ, ನವೆಂಬರ್ ೨೭ ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನ ಹಾಕಿಸಿದ ಕಾಲದಲ್ಲಿ ಗಂಗರ ದೊರೆಯಾದ ರಾಚಮಲ್ಲನು ರಾಜ್ಯವಾಳುತ್ತಿದ್ದನು. ಬಹುಶಃ ಪ್ರಸ್ತುತ ಶಾಸನದ ವೇಳೆವಾಳಿ ನಾಟ್ಗಾಮುಂಡನು ರಾಚಮಲ್ಲನ ವೇಳೆವಾಳಿಯಾಗಿರ ಬಹುದು. ಆದರೆ ಇದು ಕೇವಲ ಊಹೆ ಮಾತ್ರ. ಶಾಸನದಲ್ಲಿನ ಎರಡು ಸಾಲುಗಳು ತೀರಾ ಸವೆದಿರುವುದರಿಂದ ಈ ಬಗ್ಗೆ ಖಚಿತವಾಗಿ ಹೇಳಲಾಗುತ್ತಿಲ್ಲ.

**ಶಾಸನ – ೫: ಅದೇ ಸ್ಥಳದಲ್ಲಿರುವ ಮತ್ತೊಂದು ಶಾಸನ.**

ಇದೊಂದು ವೀರಗಲ್ಲು ಶಾಸನ. ವೀರನೊಬ್ಬನು ಖಡ್ಗ ಹಾಗೂ ಗುರಾಣಿಗಳನ್ನು ಹಿಡಿದು ತನ್ನ ಎಡಗಾಲನ್ನು ಮುಂದಕ್ಕಿಟ್ಟು ಖಡ್ಗವನ್ನು ಹಿಂದಕ್ಕೆತ್ತಿ ಬೀಸಿ ಹೊಡೆಯುತ್ತಿರುವಂತೆ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಈ ಶಿಲ್ಪದ ಮೇಲ್ಭಾಗದಲ್ಲಿ ಕೇವಲ ಎರಡು ಸಾಲಿನ ಬರಹವಿದೆ.

**ಶಾಸನ ಪಾಠ**

೧ (ಸ್ವಸ್ತಿ) ಸಕ ನ್ರಿಪಕಾಲಾತೀತ ಸಂವತ್ಸರ
೨ ಸತಂಗಟೊಂಬೈನೂರ (ಮುಂದೆ ಬರಹವಿಲ್ಲ)

ಈ ವೀರಗಲ್ಲು ೮೪ ಸೆಂ.ಮೀ. ಎತ್ತರ ಹಾಗೂ ೧೦೦ ಸೆಂ.ಮೀ ಅಗಲವಾಗಿದೆ. ಇದು ೧೦ನೆಯ ಶತಮಾನಕ್ಕೆ ಸೇರಿದ ಶಾಸನವಾಗಿದೆ. ಶಾಸನದ ಪೂರ್ಣ ಪಾಠ ಲಭ್ಯವಾಗದಿರುವುದರಿಂದ ಪ್ರಸ್ತುತ ಶಾಸನದ ಬಗ್ಗೆ ಹೆಚ್ಚಿನ ವಿವರಗಳೇನೂ ಉಪ ಲಬ್ಧವಾಗಿಲ್ಲ.

ಡಾ॥ ಭೋಜರಾಜ ಪಾಟೀಲ *

# ಕುಮಾರರಾಮನನ್ನು ಕುರಿತ ಐತಿಹಾಸಿಕ ಮಹತ್ವದ ಒಂದು ಹೊಸ ಶಾಸನ

ಕುಮಾರರಾಮನ ಕುರಿತ ಹೊಸ ಶಾಸನವಿಂತಿದೆ:

**ಶಾಸನ ಪಾಠ**

೧ ಬಹುದಾಂನಯ ಸಂತ್ಸರದ ಆಸ್ವಿವಿಜ ಶುದ್ಧ ೧೨ ಅ ಶ್ರೀಮತು ಕಂಪಿಲ

೨ ದೇವನ ಕುಮಾರ ರಾಮನಾಥ ವೊಡೇರಿಗೆ ತಾಳಗುಂದದ ಒ

೩ ಳಗಣ ಕೊಪ್ಪದ ಕೆಂಚಗಉಡನ ಮಗ ಮಾಳಗಉಡ ಮಾಡಿದ ದ

೪ ರ್ಮ ಕಉಲಕಟ್ಟೆಯ ಕೆಳಗಣ ಗದ್ದೆ ಖ ॥ ೧॥ ಕೊಳಗ ಹೊಲನ ದ್ಯೇವರ ನೆವೆ

೫ ದ್ಯಕೆ ಬಿಟ್ಟ ದಂರ್ಮ ಮಂಗಳ ಮಹಾ.....

**ವಿವರಣೆ**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲೂಕ ಮಾಳಗೊಂಡನ ಕೊಪ್ಪ (ಬಳ್ಳಿಗಾವೆ ತಾಳಗುಂದದ ಮಧ್ಯದಲ್ಲಿದೆ.) ಗ್ರಾಮವು ಈ ಹೊಸ ಶಾಸನದ ಸ್ಥಳ. ಈ ಗ್ರಾಮದ ಪಶ್ಚಿಮಕ್ಕೆ ಒಂದಂಕಣದ ಪೂರ್ವಾಭಿಮುಖವಾಗಿರುವ ರಾಮಂತ ದೇವಾಲಯವಿದೆ. (ಕಲ್ಲು-ಇಟ್ಟಿಗೆ-ಮಣ್ಣುಗಳಿಂದ ಕಟ್ಟಿ ಮೇಲೆ ತಗಡು ಹೊಂದಿಸಿದ್ದಾರೆ. ಸದ್ಯ ಜೀರ್ಣಾವಸ್ಥೆಯಲ್ಲಿದೆ.) ಇದರಲ್ಲಿ ಸು. ೩ ಅಡಿ ಎತ್ತರ ೧॥ ಅಡಿ ಅಗಲವಿರುವ ಶಿಲಾಫಲಕದ ಮೇಲ್ಭಾಗದಲ್ಲಿ ಕುದುರೆ ಸವಾರನಾಗಿರುವ ರಾಮನಾಥನ ಉಬ್ಬುಶಿಲ್ಪವಿದೆ. ಓಡುತ್ತಿರುವ ಕುದುರೆಯ ಕಡಿವಾಣವನ್ನು ಎಡಗೈಯಲ್ಲಿಯೂ, ಎಸೆಯಲಿರುವ ಈಟಿಯನ್ನೂ ಬಲಗೈಯಲ್ಲಿಯೂ ಹಿಡಿದಿದ್ದಾನೆ. ಕುದುರೆ ಹಿಂದಿನಿಂದ ಓರ್ವನು ರಾಮನಾಥನ ತಲೆಯಮೇಲೆ ಛತ್ರ ಹಿಡಿದು ಬರುತ್ತಿದ್ದಾನೆ. ಈತನಿಗೆ ಓರ್ವ ಸಂಗಾತಿಯೂ ಉಂಟು. ಈ ಶಿಲ್ಪದ ಅಡಿಯಲ್ಲಿಯೇ ಮೆಲ್ಕಾಣಿಸಿದ ಐದು ಸಾಲಿನ ಶಾಸನವಿದೆ.

ಕುಮಾರ ರಾಮನಾಥನ ಇಂಥ ಶಿಲಾಫಲಕಗಳು ಕರ್ನಾಟಕದ ಹಲವಾರು ಹಳ್ಳಿಗಳಲ್ಲಿವೆಯಾದರೂ ಶಾಸನಸ್ಥ ಶಿಲ್ಪಗಳು ಅತಿ ಕಡಿಮೆ. ಅದರಲ್ಲಿಯೂ ಕುಮಾರರಾಮನಿಗೆಂದೇ ಮೀಸಲಾದ ಶಿಲ್ಪಗಳು ತೀರ ವಿರಳ. ಇಂಥದರಲ್ಲಿ ಈ ಶಾಸನ ಒಂದಾಗಿದೆ. ಇದರಲ್ಲಿ ತಂದೆ-ಮಕ್ಕಳ ಹೆಸರುಗಳು ಸ್ಪಷ್ಟವಾಗಿ ಉಲ್ಲೇಖ ಗೊಂಡಿರುವುದೂ ವಿಶೇಷ.

ಎರಡನೆಯದಾಗಿ ಈ ಶಾಸನ ಮಾಳಗಉಡನು ಧರ್ಮಕಾರ್ಯಕ್ಕೆ ದತ್ತಿಬಿಟ್ಟ ಗದ್ದೆ **'ಕೌಲಕಟ್ಟೆಯ ಕೆಳಗಿನದು'** ಎಂದು ಹೇಳುವ ಮೂಲಕ ಈ ಗ್ರಾಮ ಒಂದು ಕಾಲದಲ್ಲಿ ಕೌಲರು ವಾಸವಾಗಿದ್ದ ಸ್ಥಳವಾಗಿತ್ತೆಂದು ಹೇಳುತ್ತದೆ. ಬಳ್ಳಿಗಾವೆ ಸುತ್ತ ಕೌಳರು ಇದ್ದರೆಂದು ಶಾಸನಗಳು ಹೇಳುತ್ತವೆ. ಆದರೆ ಎಲ್ಲೆಲ್ಲಿ ಎಂಬುದಕ್ಕೆ ಆಧಾರಗಳಿರಲಿಲ್ಲ. ಈ ಶಾಸನ ಅಂಥದೊಂದು ಆಧಾರವಾಗಿ ನಿಲ್ಲುತ್ತದೆ.

ಮೂರನೆಯದಾಗಿ ಈ ಶಾಸನ ಆ ಗ್ರಾಮದ ಸ್ಥಳನಾಮ ನಿರ್ಧರಿಸುತ್ತದೆ. ರಾಮನಾಥನ ಉಬ್ಬು ಶಿಲಾಫಲಕ ಹಾಗೂ ಶಾಸನ ರಚಿಸಲು ಕಾರಣನಾದ ವ್ಯಕ್ತಿ ಮಾಳಗೌಂಡ. ಈತ ತಾಳಗುಂದದ ಬಳಿಯ 'ಕೊಪ್ಪ' ಗ್ರಾಮದವ, ಎಂದರೆ ಪ್ರಸ್ತುತ ಶಾಸನವಿರುವ ಗ್ರಾಮ ಮೊದಲು ಕೊಪ್ಪವೆಂದು ಮಾತ್ರ ಹೆಸರಾಗಿತ್ತು. ಮಾಳಗೌಂಡನ ಈ ಧರ್ಮಕಾರ್ಯದಿಂದಾಗಿ 'ಮಾಳಗಉಡನ ಕೊಪ್ಪ' ಎಂದಾಯಿತು. ಮುಂದೆ ಕಾಲಕ್ರಮೇಣ ಅದು ಅಪಭ್ರಂಶಗೊಳ್ಳುತ್ತ ಮಾಳಗೊಂಡನಕೊಪ್ಪ-ಮಾಳನ ಕೊಪ್ಪ ಎಂದಾಗಿದೆ.

* ಮಹಾಂತಸ್ವಾಮಿ ಮಹಾವಿದ್ಯಾಲಯ, ಹಂಸಬಾವಿ - ೫೮೧ ೧೦೯.

ಡಾ॥ ಬಿ. ನಂಜುಂಡಸ್ವಾಮಿ *

# ಬೆಟ್ಟದಕೋಟೆ ಪ್ರಭುಗಳ ವಂಶಸ್ಥರು ಶಿವಗಂಗೆ ಗಂಗಾಧರೇಶ್ವರನಿಗೆ ಕೊಟ್ಟ ಪೂಜಾದತ್ತಿ ತಾಮ್ರಶಾಸನ

ಶಿವಗಂಗೆ ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕಿನ ಪ್ರಸಿದ್ಧ ಶೈವಕ್ಷೇತ್ರದಲ್ಲಿ, ಗುಹಾಂತರಗತ ದೇವಾಲಯಗಳಿದ್ದು ಹೊನ್ನಾದೇವಿ ಮತ್ತು ಶ್ರೀಗಂಗಾಧರೇಶ್ವರರು ಈ ಕ್ಷೇತ್ರದ ಅಧಿದೇವತೆಗಳು. ಶಿವಗಂಗೆಗೆ ಸಂಬಂಧಪಟ್ಟ ಅನೇಕ ಶಿಲಾ ಶಾಸನಗಳು ಮತ್ತು ತಾಮ್ರ ಶಾಸನಗಳು ಪ್ರಕಟವಾಗಿವೆ. ಪ್ರಸ್ತುತ ಶಾಸನವು ಶಿವಗಂಗೆ ಪಕ್ಕದ ಕಂಬಾಳು ಗ್ರಾಮದಲ್ಲಿದ್ದು ನೋಡಲವಕಾಶವಾಯಿತು. *೧

ಆರು ಅಂಗುಲ ಅಗಲ ಹನ್ನೆರಡು ಅಂಗುಲ ಉದ್ದದ ಮೂರು ಮಿ. ಮೀ. ದಪ್ಪದ ತಾಮ್ರದ ತಗಡಿನ ಮೇಲೆ ಶಾಸನವನ್ನು ಬರೆಯಲಾಗಿದೆ. ಶಾಸನದ ಪಾಠವನ್ನು ಒಂದು ಮಗ್ಗುಲಲ್ಲೇ ಬರೆದಿದ್ದು ಶಾಸನದ ಮೇಲುಭಾಗದಲ್ಲಿ ಸೂರ್ಯ, ಲಿಂಗಮುದ್ರೆ (ಲಿಂಗು ಮತ್ತು ಬಸವ), ಮತ್ತು ಚಂದ್ರನ ಚಿಹ್ನೆ ಇದೆ. ಈ ಶಾಸನದಿಂದ ತಿಳಿದು ಬರುವ ಪ್ರಮುಖ ಅಂಶ: ಪ್ರತಿನಿತ್ಯ ಗಂಗಾಧರೇಶ್ವರನಿಗೆ ಬಿಲ್ವಪತ್ರೆ ಮತ್ತು ತುಂಬೆಹೂವಿನ ಪೂಜೆಯಾಗಬೇಕು ಎಂದು ಶಿವಗಂಗೆ ಗ್ರಾಮದ 'ಶೆಟ್ಟರಿಗೆ' ಹಣವನ್ನು ಇಡುಗಂಟಾಗಿ ಕೊಟ್ಟು ಅವರು ಪ್ರತಿನಿತ್ಯ ಆ ಸೇವೆಯನ್ನು ಮಾಡುವ ಹಾಗೆ ಒಪ್ಪಂದವನ್ನು ಮಾಡಿಕೊಂಡಿದ್ದಾರೆ. ವೀರಶೈವ ಜನಾಂಗಕ್ಕೂ ಮತ್ತು ಹದಿನೆಂಟು ಪಣಕ್ಕೂ ಯಜಮಾನರಾದ 'ಶೆಟ್ಟರ' ವಂಶಸ್ಥರನ್ನು ನಾವು ಈಗಲೂ ಶಿವಗಂಗೆಯಲ್ಲಿ ನೋಡಬಹುದು. ಹೊನ್ನಶೆಟ್ಟರು ಪ್ರತಿದಿನ ನೂರೆಂಟು ಬಿಲ್ವಪತ್ರೆಯನ್ನು, ಗಂಗಾಧರಶೆಟ್ಟರು ಪ್ರತಿದಿನ ಅಳತೆ ಸೇರು ತುಂಬೆ ಹೂವನ್ನು (ಒಂದು ಸೇರು ಅಂದರೆ ೨೪ ತೊಲ ಅರ್ಥಾತ್ ೨೯೦ ಗ್ರಾಂ) ತುಂಬೆ ಹೂ ಕೊಡಬೇಕು. ಶಿವಗಂಗೆ ಗಂಗಾಧರೇಶ್ವರನಿಗೆ ಸೂರ್ಯಚಂದ್ರರಿರುವವರೆಗೆ ಈ ಸೇವೆ ನಡೆಯಬೇಕು ಎಂಬುದು ಅವರ ಆಸೆ. ಈ ಧರ್ಮ ಪ್ರಯೋಜನಕ್ಕೆ ಪ್ರತಿಯೊಬ್ಬರು ಸಹಾಯಕರಾಗಿ ಇರಬೇಕು. ಇದಕ್ಕೆ ತೊಂದರೆ ಮಾಡಿದವರು ಇಹಲೋಕ ಮತ್ತು ಪರಲೋಕಕ್ಕೆ ಬಾಹಿರರು. ಈ ಸೇವೆ ಕಕೊದ್ಗಿರಿ ಗಂಗಾಧರೇಶ್ವರನ ಪಾದಾರವಿಂದಗಳಿಗೆ ಸಮರ್ಪಣೆಯಾಗಿದೆ ಎಂದು ಶಾಸನದ ಪಾಠ ತಿಳಿಸುತ್ತದೆ. ಈ ತಾಮ್ರಶಾಸನದ ಕಾಲ ಶಾ.ಶ. ೧೬೨೯ (ಕ್ರಿ. ಶ. ೧೭೦೭). ಇದೇ ಬೆಟ್ಟದ ಕೋಟೆ ವಂಶಸ್ಥರಿಗೆ ಸಂಬಂಧಪಟ್ಟ ಧ್ವಜಸ್ತಂಭದ ಶಾಸನ ತುಮಕೂರಿನ ದೇವರಾಯನದುರ್ಗ ಬೆಟ್ಟದ ಮೇಲಿನ ಕುಂಭೀ ನರಸಿಂಹಸ್ವಾಮಿ ದೇವಸ್ಥಾನದಲ್ಲಿದೆ. *೨

1 ನಂದನಸಂವತ್ಸರದ ಮಾರ್ಗಶಿರ ಸು. ೧೫ ಸೋಮವಾರದಲ್ಲು ಶ್ರೀಮತು ಕರಿಗಿರಿ ನರಸಿಂಹಸ್ವಾಮಿಯುವರ ಸನ್ನಿಧಿ

2 ಯಲ್ಲು ಬೆಟ್ಟದಕೋಟೆ ಬಸವರಾಜೈಯನವರ ಕೊಮಾರ್‍ರು । ಚಂನರಾಜೈಯನವರ ಮಲ್ಲರಾಜೈಯನವರಿಂದ ಗೋಪುರ

3 ಪ್ರಾಕಾರ ಧ್ವಜಸ್ತಂಭ ಸಹ ॥ ವೊಪ್ಪಿಸ್ತಶಾವೆ॥ ಜಯಮಂಗಳ ಮಹಾ ॥ ಶ್ರೀ ಶ್ರೀ ಶ್ರೀ

ಇಂಗ್ಲೀಷ್ ಭಾಷೆಗೆ ಆಗಿರುವ ತರ್ಜುಮೆಯಲ್ಲಿ ಈ ಶಾಸನ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದ್ದು, ಶಾ.ಶ. ೧೭೫೪ ನಂದನ ಸಂವತ್ಸರ ಮಾರ್ಗಶಿರ ೧೫, ಶುದ್ಧ ಸೋಮವಾರಕ್ಕೆ (ಕ್ರಿ.ಶ. ೧೮೩೨ ಮಾರ್ಚಿ ೧೫) ಸರಿ ಹೊಂದುತ್ತದೆ ಎಂದು ಬರೆದಿದೆ. ಈ ಶಾಸನ ಮೊದಲು ೧೯೧೮ರ ಎಂ. ಎ. ಆರ್. ನ ೬೪ನೇ ಪುಟದಲ್ಲಿ ಪ್ರಕಟವಾಯಿತು.

ತಾಮ್ರಶಾಸನದಲ್ಲಿ ಬೆಟ್ಟದ ಕೋಟೆ ಪ್ರಭು ಚಂನರಾಜೈಯ್ಯ ಅವನ ಮಗ ಬಸವರಾಜೈಯ್ಯ, ಅವನ ಮಗ ಚಿಕ್ಕದೇವರಾಯ ದುರ್ಗದ ಚಂನರಾಜೈಯ್ಯ, ಅವನ ಸಹೋದರ ಸಿದ್ಧರಾಜೈಯ್ಯ ಕೊಟ್ಟಂತಹ ದಾನಶಾಸನವೆಂದಿದೆ. ಈ ಮೊದಲು ಚಿಕ್ಕದೇವರಾಯ ದುರ್ಗ್ಗ ಅರ್ಥಾತ್ ದೇವರಾಯನ ದುರ್ಗ್ಗ ಆಡಳಿತ ಕೇಂದ್ರವಾಗಿತ್ತು. ಅಂತಹ ಚಿಕ್ಕದೇವರಾಯದುರ್ಗ್ಗದ ಆಡಳಿತ ನೋಡಿಕೊಳ್ಳುತ್ತಾ ಇದ್ದುದ್ದರಿಂದ ಚಂನರಾಜೈಯ್ಯನವರಿಂದ ಚಿಕ್ಕದೇವರಾಯ ದುರ್ಗ್ಗದ ವಿಶೇಷಣ ಬಂದಿರಬಹುದು. ಬೆಟ್ಟದಕೋಟೆ ಕೈಫಿಯತ್ತು ರೀತ್ಯ*೩ ''ದಕ್ಷಿಣ ಗೋವರ್ಧನಗಿರಿ ಪರ್ವತಕೆ

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ. ಹೆಚ್. ರಸ್ತೆ, ತುಮಕೂರು - ೫೭೨ ೧೦೨

ಪ್ರತಿನಾಮಧೇಯವಾದ ಕಮಲಾಚಲವೆಂಬ ಹೆಸ್ರು ಯಿದಕೆ ಪ್ರತಿನಾಮ ಬೆಟ್ಟದಕೋಟೆ ಕೃಷಿಯತ್ತು......'' ಎಂದಿದೆ. ಮೈಸೂರು ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಕೇಂದ್ರಕ್ಕೆ ಈ ಬೆಟ್ಟ ಹದಿನೈದು ಕಿ. ಮೀ. ದೂರದಲ್ಲಿದೆ. ಈ ಬೆಟ್ಟಕ್ಕೆ ಕಮಲಾಚಲ, ಕಂಜಗಿರಿ, ಹಿಮವದ್ಗೋಪಾಲಸ್ವಾಮಿ ಬೆಟ್ಟ, ಗೋವರ್ಧನಗಿರಿ, ಬೆಟ್ಟದ ಕೋಟೆ ಎಂಬ ಹಲವು ಹೆಸರುಗಳಿವೆ. *೪

ಕಾಲಾಂತರದಲ್ಲಿ ಬೆಟ್ಟದಕೋಟೆ ಮೈಸೂರು ರಾಜರ ಪ್ರಾಬಲ್ಯದಿಂದಾಗಿ ಮೈಸೂರು ದೊರೆಗಳ ಆಡಳಿತ ವಲಯಕ್ಕೆ ಒಳಪಟ್ಟಿತು. ಕ್ರಿ. ಶ. ೧೫೦೪ ರ ನಂಜನಗೂಡು ಶಾಸನದಲ್ಲಿ ಈ ನಡುವೆ ಆಳಿಹೋದ ಬೆಟ್ಟದಕೋಟೆ ಅರಸರ ಉಲ್ಲೇಖವಿದೆ. ಇಮ್ಮಡಿ ರಾಜ ಒಡೆಯರ್ - ನಂಜರಾಜ ಒಡೆಯರ್ (೧೪೮೯)- ದೇವರಾಜ ಒಡೆಯರ್ (೧೫೦೩)-ಗೋವಣ್ಣ ಒಡೆಯರ್ (೧೫೦೪) ಹೀಗೆ ಮುಂದುವರಿದಿದೆ. ಬೆಟ್ಟದಕೋಟೆ ಮತ್ತು ಮೈಸೂರು ರಾಜಮನೆತನಗಳ ಸಂಬಂಧ ಮಧುರವಾಗಿತ್ತು. ಮೈಸೂರು ರಾಜಮನೆತನದಲ್ಲಿ ಗಂಡು ಮಕ್ಕಳಿಲ್ಲದಿರುವಾಗ ಬೆಟ್ಟದಕೋಟೆ ಮನೆತನದಿಂದ ದತ್ತು ಸ್ವೀಕರಿಸುತ್ತಿದ್ದರು. ನವರಾತ್ರಿಕಾಲದಲ್ಲಿ ಮೈಸೂರು ಅರಮನೆಯಲ್ಲಿ ಆಯುಧ ಪೂಜೆ ಮಾಡಿ ಆಯುಧವನ್ನು ಮೈಸೂರು ರಾಜರ ಕೈಗೆ ಕೊಡುತ್ತಿದ್ದರು, ಬೆಟ್ಟದಕೋಟೆ ಅರಸುಗಳು. ಹಾಗೆಯೇ ಮೈಸೂರು ರಾಜರು ಸಿಂಹಾಸನ ಏರುವಾಗ ಬೆಟ್ಟದಕೋಟೆ ಅರಸರು ಹಸ್ತಲಾಘವ ಕೊಡುತ್ತಿದ್ದರು.

ದೇವರಾಯನದುರ್ಗ್ಗದ ಶಾಸನದ ಕಾಲಕ್ಕೂ ಮತ್ತು ಈ ತಾಮ್ರಶಾಸನದ ಕಾಲಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಬೇರೆ ಆಧಾರಗಳು ಸಿಕ್ಕಾಗ ಈ ಗೋಜಲನ್ನು ಬಿಡಿಸಬಹುದು. ಈ ಶತಮಾನದ ಪ್ರಾರಂಭದಲ್ಲಿ ಸಹ ಬಿಲ್ವಪತ್ರೆ ಮತ್ತು ತುಂಬೆಹೂವಿನ ಸೇವೆಯನ್ನು ಶೆಟ್ಟರ ವಂಶಸ್ಥರು ನಡೆಸುತ್ತಾ ಇದ್ದದ್ದು ನಿಜ. ಈಗ ಈ ಸೇವೆ ನಿಂತುಹೋಗಿದೆ.

**ಕಂಬಾಳು ಶಾಸನ ಪಾಠ : ****

೧ ಶ್ರೀ ಸದಾಶಿವಾಯನಮಃ ಶುಭಮಸ್ತು
೨ ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರಚಾರವೆ
೩ ಮತ್ರ್ಯಲೋಕನಗರಾರಂಭ । ಮೂಲಸಾಂಬ
೪ ಯ ಶಂಭವೆ । ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿ
೫ ವಾಹನ ಶಕವರ್ಷಂಗಳು ೧೬೨೯ ನೆಯ ಸರ್ವ್ವ
೬ ಜಿತು ಸಂವತ್ಸರದ ಆಶ್ವಿಜ ಶು ೧೦ಲ್ಲೂ ಶ್ರೀ ಮತು
೭ ಶಿವಗಂಗೆ ಗಂಗಾಧರೇಶ್ವರ ಸ್ವಾಮಿಯವರ
೮ ಶ್ರೀಪಾದಪದ್ಮಂಗಳ ಅರ್ಚ್ಚನಾನಿಮಿತ್ತವಾ
೯ ಗಿ ಬೆಟ್ಟದಕೋಟೆ ಪ್ರಭು ಚಂನರಾಜೈಯ್ಯನವರ
೧೦ ಪೌತ್ರರಾದ ಬಸವರಾಜೈಯ್ಯನವರ ಪುತ್ರರಾ
೧೧ ದ ಚಿಕ್ಕದೇವರಾಯದುರ್ಗ್ಗದ ಚಂನ
೧೨ ರಾಜೈಯ್ಯನವರ ಸಹೂದರರಾದಂತ್ಹಾ
೧೩ ಸಿದ್ಧರಾಜ್ಯಯ್ಯನವರು ಶಿವಗಂಗೆ ಸ್ಥಳದ
೧೪ ಹೊಂನಶೆಟ್ಟರಿಂದಾ ದಿನ ೧ಕ್ಕೆ ಬಿಲ್ವಪತ್ರ
೧೫ ದಳ ೧೦೮ ಗಂಗಾಧರಶೆಟ್ಟರಿಂದಾ
೧೬ ತುಂಬೆ ಹೂಉ ಅಳತೆಯಲ್ಲಿ ಸೆ ೧
೧೭ ಯಿಾ ಪ್ರಕಾರ ಪ್ರತಿನಿತ್ಯಊ ಆ ಚಂದ್ರಾರ್ಕ್ಕ
೧೮ ವಾಗಿ ನಡೆದು ಬರುವ ಹಾಗೆ ಪಡಿವಟ್ಟ
೧೯ ನೂ ಕೊಟ್ಟು ಯಿದ್ಧಿತು ಯಿಾ ಧರ್ಮ ಪ್ರಯೊ
೨೦ ಜನಕೆ ಸರ್ವ್ವರೂ ಸಹಾಯವಾಗಿ ನಡೆಸು
೨೧ ವದು ಯಿದಕೆ ಯಾರೂ ಅಡ್ಡಿಯ ಮಾಡಿದ
೨೨ ರೂ ಅವರು ಯಿಹಲೋಕ ಪರಲೋಕ ಬಾ
೨೩ ಹಿರರು । ಯಿ ಬಗೆ ಶಾವೆಯೂ ಕಕೊದ್ದಿ
೨೪ ರಿಯ ಶ್ರೀಗಂಗಾಧರಸ್ವಾಮಿಯವರ ದಿ
೨೫ ವ್ಯ ಪಾದರವಿಂದಗಳಿಗೆ ಸಮರ್ಪ್ಪಣೆ
೨೬ ಯಂದು ಬರಶಿವಪ್ಪಿಸಿದ ಬರಹ ಶಾಸ
೨೭ ನಕ್ಕೆ ನಿತ್ಯ ಜಯಮಂಗಳ ಮಹಾ ಶ್ರೀ ಶ್ರೀ
೨೮ ಶ್ರೀ ಶ್ರೀ ಶ್ರೀ ಶ್ರೀ
೨೯ ಸದಾಶಿವಾರ್ಪ್ಪಣ ಮಸ್ತು

** (ಶಾಸನದ ಛಾಯಾಚಿತ್ರವನ್ನು ನೀಡಿಲ್ಲವಾದ್ದರಿಂದ ಲೇಖಕರು ಓದಿರುವಂತೆ ಇಲ್ಲಿ ಪ್ರಕಟಿಸಿದೆ - ಸಂ)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಪ್ರಸ್ತುತ ಶಾಸನವು ಕಂಬಾಳು ಗ್ರಾಮದ ಹಿರಿಯ ಜಾನಪದ ವಿದ್ವಾಂಸ ಶ್ರೀ ಬಿ. ಸಿದ್ಧಗಂಗಯ್ಯ ಕಂಬಾಳು ಅವರಿಗೆ ಶಿವಗಂಗಾ ಕ್ಷೇತ್ರದಲ್ಲಿ ದೊರೆತಿದ್ದು ಅವರು ಈ ಶಾಸನವನ್ನು ಅಧ್ಯಯನಿಸಲು ನೀಡಿದುದಕ್ಕೆ ಕೃತಜ್ಞತೆಗಳು.

*೨. ಎ. ಕ. ೧೬ (ಸಪ್ಲಿಮೆಂಟ್), ತುಮಕೂರು ೭೪

*೩. ಕರ್ನಾಟಕ ಕೈಫಿಯತ್ತುಗಳು : (ಸಂ) ಡಾ॥ ಎಂ. ಎಂ. ಕಲಬುರ್ಗಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೪, ಪು. ೨೮೮.

*೪. ವೈ. ಸಿ. ಭಾನುಮತಿ, 'ಹಿಮವತ್ ಗೋಪಾಲಸ್ವಾಮಿ ಬೆಟ್ಟದ ಸ್ಥಳ ಪುರಾಣ, ಗೋಪಾಲಸ್ವಾಮಿ ಬೆಟ್ಟ', ವನ ಶ್ರೀ (ಸಂ) ಜಿ. ಜಿ. ಮಂಜುನಾಥ್, ಗುಂಡ್ಲುಪೇಟೆ ತಾಲ್ಲೂಕು ಅಭಿವೃದ್ಧಿ ಮಂಡಲಿ, ಮೈಸೂರು ಜಿಲ್ಲೆ, ೧೯೮೨.

ಮಂಜುಳಾ ಹುಲ್ಲಹಳ್ಳಿ *

# ನಂಜನಗೂಡಿನ ಒಂದು ಅಪ್ರಕಟಿತ ಶಾಸನ

ದಕ್ಷಿಣ ಕರ್ನಾಟಕದಲ್ಲಿ ಮಹದೇಶ್ವರ, ಮಂಟೇಸ್ವಾಮಿ, ಸಿದ್ದಪ್ಪಾಜಿ, ನಂಜುಂಡೇಶ್ವರ ಈ ಮುಂತಾದ ದೈವಗಳು ಸಮೃದ್ಧವಾದ ಜಾನಪದ ಹಿನ್ನೆಲೆಯನ್ನು ಪಡೆದಿವೆ. ಇವರಲ್ಲಿ ನಂಜುಂಡೇಶ್ವರ ಹೆಚ್ಚು ಪ್ರಾಚೀನತೆ ಪಡೆದುಕೊಂಡಿರುವುದನ್ನು ಇತಿಹಾಸ ಮತ್ತು ಜನಪದ ಸಾಹಿತ್ಯಗಳೆರಡೂ ಸಮರ್ಥಿಸುತ್ತವೆ.

ನಂಜನಗೂಡಿನ ಅಧಿದೇವತೆ ನಂಜುಂಡೇಶ್ವರನ ಆಲಯದ ಪರಂಪರೆ ಮತ್ತು ಇತಿಹಾಸಗಳೂ ಭವ್ಯವಾಗಿವೆ. ಸುಮಾರು ಐವತ್ತೆರಡು ಚದುರ ಅಡಿ ವಿಸ್ತೀರ್ಣದ ಮತ್ತು ಆಚ್ಛಾದಿತ ಕಟ್ಟಡದ ದೃಷ್ಟಿಯಿಂದ ಕರ್ನಾಟಕದಲ್ಲಿಯೇ ಪ್ರಥಮ ಸ್ಥಾನ ಪಡೆದಿರುವ ಈ ಆಲಯದ ಒಟ್ಟು ಉದ್ದ ಸುಮಾರು ಮೂನ್ನೂರೆಂಬತ್ತು ಅಡಿಗಳು ಮತ್ತು ಅಗಲ ನೂರ ಅರವತ್ತೆಂಟು ಅಡಿಗಳು. ನೂರ ನಲವತ್ತಾರಕ್ಕೂ ಹೆಚ್ಚು ಕಂಬಗಳು ಈ ಆಲಯಕ್ಕೆ ಆಸರೆಯಾಗಿವೆ. ಹೀಗೆ ಬೃಹತ್ತು-ಮಹತ್ತು ಎರಡೂ ದೃಷ್ಟಿಯಿಂದಲೂ ವಿಶಿಷ್ಟ ವಾಗಿರುವ ಈ ಆಲಯ ನಂಜನಗೂಡಿನ ಜೀವನಾಡಿಯಂತೆ ಇದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸವನ್ನು ಕುರಿತ ಅಧ್ಯಯನಗಳಿಗೆ ಗಟ್ಟಿಯಾದ, ಖಚಿತವಾದ, ಸ್ಪಷ್ಟವಾದ ಮಾಹಿತಿಗಳನ್ನು ನೀಡುವ ಪ್ರಮುಖ ಆಧಾರಗಳಾದ ಶಾಸನಗಳು ನಂಜನಗೂಡಿನಲ್ಲಿ ಸುಮಾರು ಒಂದುನೂರ ಇಪ್ಪತ್ತರಷ್ಟು ದೊರೆತಿವೆ. ಇವುಗಳಲ್ಲಿ ನೂರೈದು ಶಾಸನಗಳು ನಂಜುಂಡೇಶ್ವರನ ಆಲಯದಲ್ಲಿಯೇ ಕಂಡುಬರುತ್ತವಾದರೂ ಹೆಚ್ಚಿನವು ಮೈಸೂರು ಒಡೆಯರ ಕಾಲದವು. ಉಳಿದ ಶಾಸನಗಳು ವಿಜಯನಗರ ಅರಸರ ಹೆಸರನ್ನು ಉಲ್ಲೇಖಿಸುತ್ತವೆ.

ನಂಜನಗೂಡಿನ ನಂಜುಂಡೇಶ್ವರ ಆಲಯ ಗಂಗರ ಕಾಲದ್ದೇ ಇರಬಹುದು ಎಂಬ ಊಹೆ ಇದೆ.*೧ ಆದರೆ ಆಲಯದ ಬಗೆಗೆ ಸ್ಪಷ್ಟವಾದ ಉಲ್ಲೇಖ ದೊರೆಯುವುದು ಕ್ರಿ.ಶ. ೧೩೯೯ ರ ಇಮ್ಮಡಿ ಹರಿಹರರಾಯನ ಕಾಲದಲ್ಲಿ. *೨ ನಂತರದ ಶಾಸನಗಳು ನಂಜುಂಡೇಶ್ವರನನ್ನು ವ್ಯಾಪಕವಾಗಿ ಸ್ತುತಿಸಿವೆ. '*ಶ್ರೀಮನ್ಮಹಾದೇವ ದೇವೋತ್ತಮ, ಪಾರ್ವತಿಪ್ರಾಣನಾಥ, ಭಕ್ತಜನವತ್ಸಲ, ಶರಣುವಂದರ ಕಾವ, ಭವರೋಗವೈದ್ಯ, ಕರ್ಮ್ಮಾರಣ್ಯ ದಹನ ದಾವಾನಲ, ತಿಮಿರ ದಿವಾಕರ, ಯುಕ್ತಿ ಮುಕ್ತಿ ಫಲದಾಯಕ, ಶಮೆಶಾಂತಿವಮೌನ, ಪರಶುರಾಮಪಾಪಕ್ಷಯ ಕೃತಯುಗ ರಾಮನಾಥ, ತ್ರೇತಾಯುಗ ಭೋಗನಾಥ, ದ್ವಾಪರಯುಗಕ್ಕೆ ಸಂಗಮೇಶ್ವರ, ಕಲಿಯುಗಕ್ಕೆ ಚಿಂತಾರತ್ನ....*' ಈ ರೀತಿಯ ವರ್ಣನೆಗಳು ೧೫-೧೬ನೇ ಶತಮಾನದ ಶಾಸನಗಳಲ್ಲಿ ವಿಶೇಷವಾಗಿ ಕಂಡುಬರುವುದರಿಂದ ಈ ಕಾಲಕ್ಕೆ ನಂಜುಂಡೇಶ್ವರನ ಕೀರ್ತಿ ವಿಶಾಲವಲಯಕ್ಕೆ ಹರಡಿತ್ತು ಎಂದು ಹೇಳಬಹುದು. ಅಂತೆಯೇ ವಿವಿಧ ಪ್ರದೇಶಗಳ ನಾಡಿಗರು ಮತ್ತು



* ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೫೭೦ ೦೦೬

ನಾಡನ್ನು ಆಳುವ ದೊರೆಗಳು ನಂಜುಂಡೇಶ್ವರನ ಹೆಸರಿನಲ್ಲಿ ಸಾಕಷ್ಟು ದತ್ತಿ ಬಿಟ್ಟಿರುವುದನ್ನೂ ಸುಮಾರು ನಲ್ವತ್ತಕ್ಕೂ ಹೆಚ್ಚಿನ ಶಾಸನಗಳು ಸಮರ್ಥಿಸುತ್ತವೆ. ನಂಜನಗೂಡಿನ ಆಲಯದಲ್ಲಿಯೇ ದೊರೆತಿರುವ ಅಪ್ರಕಟಿತ ಶಾಸನವು ಈ ನಿಟ್ಟಿನ ಮತ್ತೊಂದು ಗಮನಾರ್ಹ ದಾಖಲೆಯಾಗಿದೆ.

ನಂಜುಂಡೇಶ್ವರ ಆಲಯದೊಳಗೇ ಮಹಡಿ ಮೆಟ್ಟಿಲ ಬಳಿ ನಿಲ್ಲಿಸಲಾಗಿರುವ ಈ ಶಾಸನ ಬಿ.ಎಲ್. ರೈಸರ ಕಣ್ತಪ್ಪಿಸಿಕೊಂಡಿದ್ದು ನಂತರದ ಎಂ. ಎ. ಆರ್ ಮತ್ತು ಪರಿಷ್ಕೃತ ಎಪಿಗ್ರಾಫಿಯಾ ಕರ್ನಾಟಿಕಗಳಲ್ಲಿಯೂ ದಾಖಲಾಗಿಲ್ಲ.

ಒಟ್ಟು ಇಪ್ಪತ್ತನಾಲ್ಕು ಸಾಲುಗಳಿರುವ ಈ ಶಾಸನದ ಪೂರ್ಣಪಾಠ ಹೀಗಿದೆ:

**ಶಾಸನ ಶಿಲ್ಪಗಳು ಮತ್ತು ಪಾಠ**

**ಚಂದ್ರ ವೃಷಭ ಪೀಠಸ್ಥ ಲಿಂಗ ಸೂರ್ಯ ತ್ರಿಶೂಲ**

೧ ಶ್ರೀ ಶುಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿ
೨ ವಾಹನ ಶಕಾವಾರ್ಷ ೧೪೫೩ ಸಂದು ವರ್ತ್ತಮಾನ ಖರಸಂ
೩ ವತ್ಸರದ ಚೈತ್ರ ಶುದ್ಧ ೧೫ ಸೋಮೋಪರಾಗ ಪುಣ್ಯಕಾಲದಲ್ಲಿ ಶ್ರೀ
೪ ಮನ್ಮಹಾದೇವ ದೇವೋತ್ತಮ ಶ್ರೀ ನಂಜುಡೇಶ್ವರ ದೇವರಿಗೆ ಅಚುತ
೫ ರಾಯ ಮಹಾರಾಯರ ನಿರೂಪದಿಂದ ಪೆರುಮಾಳೆ ಅಧಿಖರಿ ಆಯ್ಯ
೬ ನವರೂ ಸ್ವಾಮಿಯ ಮಾದ್ಯಾಂಹಿಕ ಕಾಲದಲ್ಲಿ ನೈವೇದ್ಯಕ್ಕೆ ಉಂಮತ್ತೂ
೭ ರ ಸೀಮೆಯ ಉಯ್ಯಂಬಳಿಯ ಸ್ಥಳದೊಳರ್ಕೆ ದಣಯಕ ಪುರಗ್ರಾಮ
೮ ವನೂ ವಿರುಪಾಕ್ಷಲಿಂಗನ ಸಂನಿಧಿಯಲ್ಲಿ ಆ ಗ್ರಾಮಕ್ಕೆ ಸಲುವ ಸರ್ವ
೯ ಸ್ವಾಮ್ಯವನೂ ಧಾರೆಯನೆಱದು ಆ ವಳಯಕ್ಕೆ ಸಿಲಾಶಾಸನವನೂ ಮಾಡಿ
೧೦ ಸ್ವಾಮಿಗೆ ಧೂಪದೀಪ್ತಿನೈವೇದ್ಯ ತಾಂಬೂಲವನೂ ಮಾಡಿ ಬಹ ಹಾಗೆ ಲಿಂ
೧೧ ಗಪ್ಪಗಳ ಕೆಂಪನಂಜಯಗಳು ದೇವೇಶಭಟ್ಟರ ಮಕ್ಕಳೂ ದೊಡನಂಜಯ
೧೨ ಗಳೂ ಬುಸ್ಯಪ್ಪಗಳ ನಾರಿಪ್ಪಗಳೂ ಚಲುಡಪ್ಪಗಳ ಮಕ್ಕಳೂ ಲಿಂಗಯಂ
೧೩ ಯಗಳು ದೇವೇಶಭಟ್ಟರ ಮಕ್ಕಳು ಚಿಕ್ಕನಂಜಯ್ಯಗಳೂ ಬುಸ್ಸಪಗ
೧೪ ಳವಿರುಪಯ್ಯಗಳು ಯೀ ಆಱು ಮಂದಿಯೂ ಆ ಗ್ರಾಮನೂ ಅ
೧೫ ನುಭವಿಸಿಕೊಂಡು ಧೂಪದೀಪನೈವೇದ್ಯ ತಾಂಬುಲವನು ದಿನಚ(ರಿ)
೧೬ ಯಲ್ಲಿ ಮಾಡಿ ಆ ಪ್ರಸಾದವನು ತಾವೇ ಕೊಂಡು ಹೋಹರು ಆ
೧೭ ಗ್ರಾಮವನು ಅಗ್ರಹಾರವಾಗಿ ಪುತ್ರ ಪಾತ್ರ ಪಾರಂಪರಿ ಅ
೧೮ ಚಂದ್ರಾರ್ಕಸ್ಥಾಯಿಯಾಗಿ ಅನುಭವಿಸಿಕೊಂಡು ಬಹರೂ
೧೯ ಯೆಂದು ಬರದ ಶಿಲಾಶಾಸನ ಯಿ ಧರ್ಮಕ್ಕೆ ಆರೊಬ್ಬರೂ ಅ
೨೦ ಳುಪಿದವರು ವಾರಣಾಸಿಯಲ್ಲಿ ತಂಮ ತಂದೆ ತಾಯನೂ ಗೋ
೨೧ ವನೂ ಬ್ರಾಹ್ಮಣರುಗಳು ವಧಿಸಿದವರೂ ಶ್ರೀ ಶ್ರೀ ಶ್ರೀ
೨೨ ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ (ಪರದತ್ತಾ
೨೩ ನುಪಾಲನಂ) ಪರಾದತ್ತಾಪಹಾರೋಣ ಸ್ವದತ್ತ ನಿಷ್ಫಲಂ ಭವೇತಿ
೨೪ ತಳಕಾಡ ಚಲಪಿಳೆದಾಸರ ಬರಹ। ಶ್ರೀ*೩

***ಶಾಲಿವಾಹನ ಶಕವರುಷ ೧೪೫೩ ವರ್ತಮಾನ ಖರಸಂವತ್ಸರ ಚೈತ್ರ ಶುದ್ಧ ಸೋಮೋಪರಾಗ (ಚಂದ್ರಗ್ರಹಣ) ದಂದು ಅಂದರೆ ದಿ. ೧.೪.೧೫೩೧ರಲ್ಲಿ ದಾಖಲಾಗಿರುವ ಈ ಶಾಸನವು ನಂಜುಂಡೇಶ್ವರ ಆಲಯ ಮೊದಲಿನಿಂದಲೂ ತಮ್ಮಡಿಗಳ ವಶದಲ್ಲಿತ್ತು, ಮುಮ್ಮಡಿ ಕೃಷ್ಣರಾಜ ಒಡೆಯರು ಆಗಮೋಕ್ತವಾಗಿ ಪೂಜೆ ನಡೆಯಲೆಂಬ ಉದ್ದೇಶದಿಂದ ತಮಿಳುನಾಡಿನ ಬ್ರಾಹ್ಮಣರನ್ನು ಕರೆತಂದರು ಎಂಬ ಜನಜನಿತ ಹೇಳಿಕೆಯನ್ನು ಅಲ್ಲಗಳೆಯುವುದಕ್ಕೆ ಪುಷ್ಟಿ ನೀಡುತ್ತದೆ.***

ಎ.ಕ. ೫ರ ಮೈಸೂರು ೧೧೬ನೇ ಶಾಸನವು ಕ್ರಿ.ಶ. ೧೫೧೧ಕ್ಕೆ ಸೇರಿದುದ್ದಾಗಿದ್ದು ಇಲ್ಲಿಯೂ ನಂಜುಂಡೇಶ್ವರ ದೇವಾಲಯದ ಕೆಲವು ಅರ್ಚಕರ ಹೆಸರುಗಳು ಉಕ್ತವಾಗಿವೆ. *೪ ಈ ಶಾಸನಕ್ಕೂ ಮತ್ತು ಪ್ರಸ್ತುತ ಅಪ್ರಕಟಿತ ಶಾಸನಕ್ಕೂ ಕೇವಲ ಇಪ್ಪತ್ತು ವರುಷಗಳ ಅಂತರ ಮಾತ್ರವೇ ಇರುವುದು. ಆದರೆ ಅರ್ಚಕರ ಹೆಸರುಗಳಲ್ಲಿ ಇರುವ ಪೂರ್ಣ ಬದಲಾವಣೆ ಆಶ್ಚರ್ಯವನ್ನುಂಟುಮಾಡುವುದರ ಜೊತೆಗೆ ಆಲಯದ ಪೂಜಾಕಾರ್ಯ ಅನುವಂಶೀಯವಾಗಿ ನಡೆಯುತ್ತಿರಲಿಲ್ಲವೇ ಎಂಬ ಸಂದೇಹವನ್ನು ಹುಟ್ಟುಹಾಕುತ್ತದೆ.

ಇಲ್ಲಿ ಅಗ್ರಹಾರವಾಗಿ ಸಂದಿರುವ 'ದಣಾಯಕಪುರ'ದ ಬಗೆಗೆ

ಕೊಂಚ ವಿಚಾರ ಮಾಡಬಹುದಾಗಿದೆ.'ದಣಾಯಕಪುರ'ವು ದಣ್ಣಾಯಕಪುರ, ದಂಡನಾಯಕಪುರ ಎಂಬುದರಿಂದ ರೂಪು ಗೊಂಡು ಬಂದಿದೆ. ಡಣಾಯಕಪುರ ಎಂಬ ಉಲ್ಲೇಖವೂ ಅಲ್ಲಲ್ಲಿ ದೊರೆಯುತ್ತದೆ. ಹೊಯ್ಸಳರ ಮತ್ತು ಪದಿನಾಲ್ಕುನಾಡು ಒಡೆಯರ ಕಾಲದಲ್ಲಿ ಮೈಸೂರು ಪರಿಸರವು ದಂಡನಾಯಕರ ಆಳ್ವಿಕೆಗೆ ವ್ಯಾಪಕವಾಗಿ ಒಳಗೊಂಡಿದ್ದಿತು. ಈ ದಂಡನಾಯಕರು ಇರುತ್ತಿದ್ದ ಮುಖ್ಯಗ್ರಾಮಗಳನ್ನು ಅಥವಾ ಇವರಿಗೆ/ಇವರು ದತ್ತಿ ನೀಡಿದ ಗ್ರಾಮಗಳನ್ನು 'ದಣಾಯಕಪುರ' ಎಂದು ಕರೆದಿರಬಹುದು.

ಪ್ರಸ್ತುತ ಶಾಸನದ 'ದಣಾಯಕಪುರ'ವು ಉಮ್ಮತ್ತೂರು ಸೀಮೆಯ ಉಯ್ಯಂಬಳ್ಳಿ ಸ್ಥಳಕ್ಕೆ ಸೇರಿದ್ದಿತೆಂಬ ಉಲ್ಲೇಖ ಇದೆ. ಈಗಿನ ಚಾಮರಾಜನಗರ ಜಿಲ್ಲೆ ಕಸಬಾ ತಾಲೂಕು ಹರವೆ ಹೋಬಳಿಗೆ ಸೇರಿದ 'ನಂಜೇದೇವರಪುರ'ವೇ ಶಾಸನೋಕ್ತ ದಣಾಯಕಪುರ ಆಗಿರಬಹುದೇ ಎಂಬ ಊಹೆ ಮಾಡಬಹುದಾಗಿದೆ

ಈ ಗ್ರಾಮದ ನಂಜುಂಡೇಶ್ವರಸ್ವಾಮಿ ದೇವಸ್ಥಾನದ ಗರ್ಭಗುಡಿಯ ಒಳಗಿರುವ ಅಪೂರ್ಣ ಶಾಸನ *೫ ಈ ಊಹೆಗೆ ಮುಖ್ಯ ಆಧಾರವಾಗಿದೆ. ೮ ಸಾಲುಗಳ ಈ ಶಾಸನ ನಂಜನಗೂಡಿನಲ್ಲಿ ದೊರೆತಿರುವ ಅಪ್ರಕಟಿತ ಶಾಸನದ ಹೂರಣವನ್ನೇ ಒಳಗೊಂಡಿದೆ. ಸಾಧಾರಣವಾಗಿ ಸಂಸ್ಥೆಗಳಿಗೆ ಗ್ರಾಮಗಳನ್ನು ದತ್ತಿಯಾಗಿ ನೀಡಿದಾಗ ಆ ಸಂಸ್ಥೆಗಳಿಗಿಂತಲೂ ಹೆಚ್ಚಾಗಿ ಸಂಬಂಧಪಟ್ಟ ಗ್ರಾಮಗಳಲ್ಲಿ ಈ ಬಗೆಗಿನ ಶಾಸನಗಳನ್ನು ನಿಲ್ಲಿಸುವುದಕ್ಕೆ ಪ್ರಾಶಸ್ತ್ಯ ಕೊಡಲಾಗುತ್ತದೆ. ಆದುದರಿಂದ ಈ ಶಾಸನವು ನಂಜನಗೂಡು ನಂಜುಂಡೇಶ್ವರನ ಆಲಯಕ್ಕೆ ನೀಡಿರುವ ದತ್ತಿಯದೇ ಆಗಿದೆ ಎಂಬುದು ನಿಸ್ಸಂಶಯ. ಹೀಗಾಗಿ ಈ ಶಾಸನೋಕ್ತ 'ದಣಾಯಕಪುರ' ಈ ಗ್ರಾಮವೇ ಆಗಿರಬಹುದು; ಅಥವಾ ಇದರ ಆಸುಪಾಸು ಆಗಿರಬಹುದು.

ಹೊಯ್ಸಳರ, ಪದಿನಾಲ್ಕು ನಾಡು ಅರಸರ ಕಾಲಾನಂತರ ದಂಡನಾಯಕತ್ವವು ಕ್ಷೀಣಿಸಿದುದರಿಂದ ಕ್ರಮೇಣ ಈ ದಣಾಯಕಪುರವು ಹಾಳಾಗಿರುವ ಸಾಧ್ಯತೆ ಇದೆ. ಆದರೆ ಈ ಪರಿಸರದಲ್ಲಿ ದತ್ತಿಯ ದ್ಯೋತಕವಾಗಿ ನಿಲ್ಲಿಸಿದ್ದ ಈ ಶಾಸನಶಿಲೆಯು ಗಟ್ಟಿಯಾಗಿ ಉಳಿದು ಕೊಂಡಿರಬಹುದು. ಸುಮಾರು ಹದಿನೇಳನೆಯ ಶತಮಾನದಲ್ಲಿ 'ಉಯ್ಯಂಬಳ್ಳಿ'ಯು ಪ್ರಾಕೃತಿಕ ವಿಕೋಪಕ್ಕೆ ಸಿಲುಕಿ ಪೂರ್ಣವಾಗಿ ನಾಶಗೊಂಡಾಗ ಅಲ್ಲಿನ ಜನರು ಆ ಸ್ಥಳದಿಂದ ಸ್ವಲ್ಪ ಮೇಲಕ್ಕಿರುವ, ವಾಸಸ್ಥಳಕ್ಕೆ ಸೂಕ್ತ ಎನಿಸುವ ಈ ಸ್ಥಾನಕ್ಕೆ ವಲಸೆ ಬಂದವರು ಇಲ್ಲಿದ್ದ ಶಾಸನಶಿಲೆಯನ್ನು ಗೌರವಿಸಿ, ಇದರಲ್ಲಿ ಉಲ್ಲೇಖಿತವಾಗಿರುವ ನಂಜುಂಡೇಶ್ವರ ದೇವರ ಹೆಸರಿನಲ್ಲಿಯೇ, ಆ ಶಾಸನಶಿಲೆಯೂ ಗರ್ಭಗುಡಿಯ ಒಳಗೇ ಬರುವಂತೆ ಆಲಯವೊಂದನ್ನು ನಿರ್ಮಿಸಿರಬೇಕು ಮತ್ತು ಹೊಸದಾಗಿ ರಚಿಸಿಕೊಂಡ ಗ್ರಾಮಕ್ಕೂ ಆ ದೈವದ ಹೆಸರಿನಲ್ಲೇ '**ನಂಜೇದೇವನಪುರ**' ಎಂದು ಕರೆದಿರಬೇಕು. ಗ್ರಾಮದ ಈ ಆಲಯವನ್ನು ಬಿಟ್ಟರೆ, ಅನ್ಯದೇಗುಲಗಳೆಲ್ಲ ಊರಿನ ಹೆಚ್ಚು ಪಾಲು ಜನರು ಉಯ್ಯಂಬಳ್ಳಿ 'ಸ್ಥಲ'ದಲ್ಲಿ ಇನ್ನೂ ಶಿಥಿಲರೂಪದಲ್ಲಿ ಉಳಿದಿರುವ **ಶಂಕರೇಶ್ವರ** ಮತ್ತು **ಮಾರಿಗುಡಿಗಳಿಗೆ** ನಡೆದು ಕೊಳ್ಳುತ್ತಾರೆ. ಈ ಕಾರಣಗಳು ಮೇಲಿನ ಊಹೆಗೆ ಹೆಚ್ಚಿನ ಸಮರ್ಥತೆಯನ್ನು ಒದಗಿಸುತ್ತದೆ.

ಹೀಗೆ ನಂಜನಗೂಡು ಆಲಯದ ಈ ಶಾಸನವು ಹಲವು ವಿಷಯಗಳ ಬಗೆಗೆ ಚಿಂತನೆಗೆ ಹಚ್ಚುವುದರ ಜೊತೆಗೆ ನಂಜೇದೇವರ ಪುರದ ಶಾಸನದ ಪರಿಶೀಲನೆಯು ಶಾಸನಗಳಿಗೆ ನಮ್ಮ ಜನ ಹೇಗೆಲ್ಲಾ ಗೌರವ ತೋರಿಸುತ್ತಿದ್ದಿರಬಹುದು ಎಂಬ ವಿಚಾರದ ಕಡೆಗೆ ಗಮನ ಸೆಳೆಯುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ **Karnataka Gazetter (Mysore Dist):** C.Ed. Suryanath. U. Kamat, 1988, P. 901

*೨ **ಎಪಿಗ್ರಾಫಿಯಾ ಕರ್ನಾಟಿಕ,** ಸಂ. ೩ ನಂಜನಗೂಡು ೧೩೭

*೩ ಈ ಹೊಸ ಶಾಸನದ ಪಡಿಯಚ್ಚನ್ನು ಮೈಸೂರಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಿರಿಯ ಶಾಸನತಜ್ಞ ಎಚ್. ಎಂ. ನಾಗರಾಜರಾವ್ ಅವರು ತೆಗೆದುಕೊಟ್ಟಿದ್ದಾರೆ. ಅವರನ್ನು ಗೌರವಪೂರ್ವಕವಾಗಿ ನೆನೆಯುತ್ತೇನೆ.

*೪ ಆ ಹೆಸರುಗಳು ಹೀಗಿವೆ, ನಂಬಿನಾಥ ದೇವಗಳ ಮಕ್ಕಳು ಲಕ್ಷುಮಣಗಳು, ತಿಂಮಂಣಗಳ ಮಕ್ಕಳು ನಂಜುಂಡದೇವಗಳು, ವಿಷ್ಣುಗಳ ಮಕ್ಕಳು ವಿರೂಪಾಕ್ಷ ಭಠರು,...... ಮಕ್ಕಳ ಮಕ್ಕಳು ದೇವರಾಯಗಳು, ವೀರಣಗಳ ಮಕ್ಕಳು ಅಂಣಿಭಠರು.

*೫. **ಎಪಿಗ್ರಾಫಿಯಾ ಕರ್ನಾಟಿಕ,** ಸಂ. ೪, ಚಾಮರಾಜನಗರ ೪೦೧

ಡಾ॥ ಎಚ್. ಎಸ್. ಗೋಪಾಲರಾವ್ *

# ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಐದು ದಾನ ಪತ್ರಗಳು

ಮಾಗಡಿಯಲ್ಲಿ ದೊರೆತ ಕ್ರಿ.ಶ. ೧೭೪೦ (ಶಾ.ಶ. ೧೬೬೨)ರಿಂದ ಆರಂಭವಾಗಿ ಕ್ರಿ.ಶ. ೧೭೬೩ (ಶಾ.ಶ.೧೬೮೫)ರ ವರೆಗಿನ ಅವಧಿಯಲ್ಲಿ ಮಾಗಡಿಯ ಆಸುಪಾಸಿನಲ್ಲಿ ಪ್ರಚಲಿತವಿದ್ದ, ಭೂಮಿಯ ಶುದ್ಧಕ್ರಯದಾನಗಳ ಬಗೆಗೆ ತಿಳಿಯಲು ಸುರುಳಿಯಾಗಿ ಸುತ್ತಿಟ್ಟಿದ್ದ ಐದೂ ದಾನ ಪತ್ರಗಳು ನೆರವಾಗುತ್ತವೆ. ೧೮ನೆಯ ಶತಮಾನದ ವೇಳೆಗೆ ಭೂವ್ಯವಹಾರಗಳು ತಾಮ್ರ ಪತ್ರದ ಬದಲು ಓಲೆಗರಿಗಳ ಮೇಲೆ ದಾಖಲಾಗುತ್ತಿದ್ದ ಕ್ರಮವನ್ನು ಈ ದಾನ ಪತ್ರಗಳ ಮೂಲಕ ತಿಳಿಯಬಹುದಾಗಿದೆ.

ಆರಂಭದಲ್ಲಿ ಸುಮಾರು ೦.೪'' ನಿಂದ ೦.೬''ನಷ್ಟು ಮಧ್ಯದಲ್ಲಿ ಸುಮಾರು ೧'' ರಷ್ಟು ಅಗಲ ಮತ್ತು ಸುಮಾರು ೩೦''ರಿಂದ ೩೨'' ರಷ್ಟು ಉದ್ದದ, ಐದು ಪ್ರತ್ಯೇಕ ಓಲೆಗರಿಗಳಲ್ಲಿ ಈ ದಾನಪತ್ರಗಳಿವೆ. ಮೊದಲ ದಾನಪತ್ರದ ವಿನಹ ಉಳಿದ ದಾನಪತ್ರಗಳ ಬರವಣಿಗೆ ಸ್ಪಷ್ಟ. ದಾನಪತ್ರಗಳ ಕೊನೆಯಲ್ಲಿ ಸಾಕ್ಷಿದಾರರು ನಾಗರಿ ಅಥವಾ ಕನ್ನಡ ಲಿಪಿಯಲ್ಲಿ ಖುದ್ದಾಗಿ ಸಹಿ ಮಾಡಿದ್ದಾರೆ. ಈ ಲೇಖನದಲ್ಲಿ ಕಾಲಾನುಕ್ರಮದಲ್ಲಿ ನೀಡಲಾಗಿರುವ ಐದು ದಾನಪತ್ರಗಳಲ್ಲಿ ಮೊದಲ ದಾನಪತ್ರದ ಕಾಲ ಕ್ರಿ.ಶ. ೧೭೪೦ ಮತ್ತು ನಾಲ್ಕನೆಯ ದಾನಪತ್ರದ ಕಾಲ ಕ್ರಿ.ಶ. ೧೭೬೩. ಎರಡು ಮತ್ತು ಮೂರನೆಯ ದಾನಪತ್ರಗಳು ಕ್ರಿ.ಶ. ೧೭೫೭ಕ್ಕೆ ಸೇರಿವೆ. ಐದನೆಯ ದಾನಪತ್ರದಲ್ಲಿ ಕಾಲದ ಉಲ್ಲೇಖವಿರುವ ಭಾಗ ಹಾಳಾಗಿದೆಯಾದರೂ ಬರಹದ ಮಾದರಿಯನ್ನು ಆಧರಿಸಿ ಅದರ ಕಾಲವನ್ನು ಕ್ರಿ.ಶ. ಸು. ೧೭೫೭ಕ್ಕೆ ಸೇರಿಸಬಹುದು.

ಐದು ದಾನಪತ್ರಗಳ ಪೈಕಿ ನಾಲ್ಕರ ಕ್ರಯದಾನ ಪಡೆದಿರುವವರು ಪಾಂನ್ಯದ ವಂಶಸ್ಥರಾದ ಸೋಮೆಲಿಂಗಂಭಟ್ಟರು. ಕ್ರಿ.ಶ. ೧೬೭೯ಕ್ಕೆ ಸೇರಿದ ಎರಡು ಮತ್ತು ಮೂರನೆಯ ದಾನಪತ್ರಗಳಲ್ಲಿ ಕ್ರಯದಾನ ಮಾಡಿರುವವರು ತಾಳಿಕೆರೆ ವಂಶಸ್ಥರಾದ ಶಿವರಾಮಯ್ಯ. ತಾಳಿಕೆರೆ ವಂಶಸ್ಥರಿಗೆ ಮುಂಮಡಿ ಕೆಂಪೇಗೌಡರಿಂದ ದಾನವಾಗಿ ಬಂದಿದ್ದ, 'ಮಾಗಡಿ ಸೀಮೆಗೆ ಸಲ್ಲುವ ಸಾತನೂರ ಹೋಬಳಿ ಕೆಂಪಸಾಗರ ಸರ್ವಮಾನ್ಯ ಅಗ್ರಹಾರ'ದಲ್ಲಿ ಭೂಕ್ರಯದಾನ ಮಾಡಿದ್ದಾರೆ. ಮೂರನೆಯ ದಾನಪತ್ರದಲ್ಲಿ ಉಲ್ಲೇಖವಾಗಿರುವಂತೆ ಮತ್ತು ಒಂದನೆಯ ದಾನಪತ್ರದಲ್ಲಿ ದಾಖಲಾಗಿರುವಂತೆ ತಾಳಿಕೆರೆಯ ಶಿವರಾಮಯ್ಯನವರಿಗೆ ಬೆಪೂರ ಶಾಂ(ಶ್ಯಾಮಿ)ಭಟ್ಟರಿಂದ ಕ್ರಿ.ಶ. ೧೭೪೦ರಲ್ಲಿ ಕೆಂಪಸಾಗರದಲ್ಲಿ ಕ್ರಯಲಬ್ಧವಾಗಿ ಬಂದಿದ್ದ ಭೂಮಿಯನ್ನು ಶಿವರಾಮಯ್ಯನವರು ಕ್ರಿ.ಶ. ೧೭೫೭ರಲ್ಲಿ ಪಾಂನ್ಯದ ಸೋಮೆಲಿಂಗಂಭಟ್ಟರಿಗೆ ಕ್ರಯದಾನ ಮಾಡಿದ್ದಾರೆ. ಕ್ರಿ.ಶ. ೧೭೪೦ರಲ್ಲಿ ಮೈಸೂರು ರಾಜ್ಯವನ್ನು ಇಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ.ಶ. ೧೭೩೪ರಿಂದ ೧೭೬೬) ಆಳುತ್ತಿದ್ದರು.

ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ (ಕ್ರಿ.ಶ. ೧೬೭೩ರಿಂದ ೧೬೭೮) ತಂಬೈಯನವರ ತಾತನವರಿಗೆ ದಾನವಾಗಿ ಬಂದಿದ್ದ 'ತೂಬಿನಕೆರೆ ಸ್ವಾಸ್ತ್ಯಕೆ ಸಲುವ ಕೆಂಪಸಾಗರದ ಕೆರೆ ಕೆಳಗಣ ಸಾತನೂರ' ಒಳಗೆ ಆಗಿರುವ ಶುದ್ಧಕ್ರಯದಾನವನ್ನು ನಾಲ್ಕನೆಯ ದಾನಪತ್ರ ದಾಖಲಿಸಿದೆ.

ಬಹುತೇಕ ಇಲ್ಲಿ ಪ್ರಸ್ತಾಪಿಸಿರುವ ಎಲ್ಲಾ ದಾನಪತ್ರಗಳು 'ಶುದ್ಧಕ್ರಯ'ದ ವ್ಯಾಪ್ತಿಗೆ ಸೇರಿದ್ದರೂ ಸಹ 'ಕ್ರಯದಾನ' ವೆಂದೇ ಉಲ್ಲೇಖಿತವಾಗಿವೆ. ಅಂದರೆ ಕ್ರಯವೂ ಒಂದು ರೀತಿಯಲ್ಲಿ ದಾನವೆಂದೇ ಪರಿಗಣಿತವಾಗುತ್ತಿತ್ತು ಎಂದು ತಿಳಿಯಬಹುದಾಗಿದೆ. ಈ ದಾನಪತ್ರಗಳಿಂದ ತಿಳಿದು ಬರುವ ಮತ್ತೊಂದು ಮುಖ್ಯ ವಿಷಯವೆಂದರೆ, ಮಾಗಡಿಗೆ 'ಕೃಷ್ಣರಾಜನಗರ' ಎಂಬ ಒಂದು ಪ್ರತಿನಾಮಧೇಯವಿತ್ತು.

೧೮ನೆಯ ಶತಮಾನದಲ್ಲಿ ಪ್ರಚಲಿತವಿದ್ದ ಭಾಷಾಶೈಲಿಯಲ್ಲಿ ರಚಿತವಾಗಿರುವ ದಾನಪತ್ರಗಳ ಕೊನೆಯಲ್ಲಿ ಸಾಕ್ಷಿದಾರರು ಖುದ್ದಾಗಿ ಸಹಿ ಹಾಕಿದ್ದಾರೆ. ಕೆಲವು ಸಹಿಗಳು ನಾಗರ ಅಕ್ಷರಗಳಲ್ಲಿವೆ. ಭೂಕ್ರಯ ಪತ್ರಗಳು ಆಳುವ ರಾಜನ ಉಲ್ಲೇಖದೊಂದಿಗೆ, ಸಾಂಪ್ರದಾಯಿಕವಾಗಿ ಮತ್ತು ಓಲೆಗರಿಗಳ

* 'ಸ್ವಸ್ತಿ ಶ್ರೀ ಸ್ಕಂದ', ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ - ೫೬೨ ೧೨೩

ಮೇಲೆ ದಾಖಲಾಗುತ್ತಿದ್ದುದಕ್ಕೆ ಈ ದಾನಪತ್ರಗಳು ಒಳ್ಳೆಯ ಉದಾಹರಣೆಗಳಾಗಿವೆ.

ನಾಲ್ಕು ದಾನಪತ್ರಗಳಲ್ಲಿ ಕ್ರಯದಾನ ಪಡೆದಿರುವ ಪಾಂನ್ಯದ ಸೋಮೆಲಿಂಗಂಭಟ್ಟರ ವಂಶಕ್ಕೆ ಸೇರಿದ ಶ್ರೀ ಪಾ.ನಟರಾಜ ಅವರ ಕುಟುಂಬದಲ್ಲೇ ಈ ದಾನಪತ್ರಗಳಿವೆ. * ಮುಮ್ಮಡಿ ಕೆಂಪೇಗೌಡರ ಕಾಲದಲ್ಲಿ ಆಂಧ್ರದ ಪಾಂನ್ಯನಿಂದ ಮೈಸೂರು ಸಂಸ್ಥಾನಕ್ಕೆ ಈ ಕುಟುಂಬವು ವಲಸೆ ಬಂದಿದೆ ಎಂದು ಶ್ರೀ ಪಾ. ನಟರಾಜ ಹೇಳುತ್ತಾರೆ. ಈ ದಾನಪತ್ರಗಳ ಹಿನ್ನೆಲೆಯಲ್ಲಿ ಪಾಂನ್ಯನಿಂದ ವಲಸೆ ಬಂದವರು ಸೋಮೆಲಿಂಗಂಭಟ್ಟರ ತಾತ ನಾರಾಯಣ ಭಟ್ಟರು ಎಂದು ತಿಳಿಯಬಹುದಾಗಿದೆ.

### ಒಂದನೆಯ ದಾನಪತ್ರ

#### ಮುಂಭಾಗ

(ಅಂಚಿನಲ್ಲಿ 'ಶ್ರೀ ರಾಮಾ' ಎಂದಿದೆ)

೧ ಶುಭಮಸ್ತು ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ಯಾಲ್ಯಿವಾಹನ ಶಕ ವರುಷಂಗಳು ೧೬೬೨ ಸಂದ ವರ್ತಮಾನವಾದ ರಉದ್ರಿನಾಮ ಸಂವತ್ಸರ ಕಾರ್ತಿಕ ಬ೨ಲು ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಪ್ರಹುಡ ಪ್ರತಾಪ ವೀರನರಪತಿ ಶ್ರೀಕೃಷ್ಣರಾಜವಡೆಯರ್ಯೆಯನವರು ಶ್ರೀರಂಗಪಟಣ...............

೨ ಸಿಂಹಾಸನಾರೂಢರಾಗಿ 'ಸುಖದಿಂ ಪೃಥ್ವಿ ಸಾಂಬ್ರಾಜ್ಯಂಗೈಯುತಿರಲು ಭಾರದ್ವಾಜ ಸಗೋತ್ರದ ಅಪಸ್ತಂಭ ಸೂತ್ರದ ಯಜುಶಾಖಾಧ್ಯಾಯಿಗಳಾದ ಬೆಪೂರ ಅಂಣಾಭಟರ ಪಉತ್ರರಾದ ಗಂಗಾಧರಭಟರ ಪುತ್ರರಾದ ಶ್ಯಾಂಭಟರು ಕಾಶ್ಯಪಗೋತ್ರದ ಆಪಸ್ತಂಬ ಸೂತ್ರದ ಯಜುಶಾಖಾ.......................

೩ ರಾಮ್ಮೆಯನವರ ಪಉತ್ರರಾದ ಕಾಶಿಪತ್ಯೆಯನವರ ಪುತ್ರರಾದ ಶಿವರಾಮ್ಮೆಯನವರಿಗೆ ಬರೆಸಿಕೊಟ್ಟ ವೃತಿ ಕ್ರಯದಾನ ಶಾಸನದ ಕ್ರಮವೆಂತೆಂದರೆ ಮಾಗಡಿಗೆ ಪ್ರತಿನಾಮದೇಯವಾದ ಕೃಷ್ಣರಾಜನಗರಕೆ ಸಲುವ ಸಂಕುದೂರ ಹೋಬಳಿ ಕೆಂಪಸಾಗರವೆಂಬ ಸರ್ವಮಾನ್ಯ ಅಗ್ರಹಾರದಲ್ಲು ಗಣಸಂಖೆ ವೃತಿ ೧೧ ಹನ್ನೊಂದುರಲ್ಲು ನಮಗೆ ........

೪ ಧಾರಾಗೃಹೀತವಾಗಿ ಬಂದ ವೃತಿ ೧ರಲ್ಲಿ ನಂಮ ತಂಮ ನಮಗೆ ನರಸಿಂಹ್ಯಶಾಸ್ತ್ರಿಯಿಂದ ಕೈಬಂದ ಅರ್ಧವೃತಿಯು ನಿಮಗೆ ಕ್ರಯವಾಗಿಯಿರುವುದನುಳಿದು (೮)ದ ನಂಮ

(೮) ಯಶಕ್ಕೆ ಅರ್ಧವೃತ್ತಿಯಂನು ನಿಮಗೆ ಶುದ್ಧಕ್ರಯವಾಗಿ ಕೊಟೆವಾದ ಕಾರಣ ಯಿಾ ಅರ್ಧವೃತ್ತಿಗೆ ಸಲುವ ಕ್ರಯ ತತ್ಕಾಲೋಚಿತ ಮಧ್ಯಸ್ಥದಿ ಅಕಲ್ಪಿತ ಲಕ್ಷಣಲಕ್ಷ........

೫ ಸಂಪ್ರತಿಪನ್ನ ಕಾಲದ ವರ್ತಮಾಬ ಶು ೧ ಲು ನಾಂಣ್ಯಾದ್ರಿಯಶ್ಯಾವಿಶಂ ಗಂ ೧೫೦ ಅಕ್ಷರದಲಿಯುಯಿದೆ ಕಂಲ್ಪಿವಾಯಗುನಿಗೆ ನೂರುಆಯಿವತು ವರ್ಹಹಲು ಹಸ್ತಾಧಸ್ತವಾಗಿ ಸದ್ಯವಾಲೀ ತೆರವಾಗಿ ಕಾಣುದಿನನುಳಿಯದೆ ನಮಗೆ ಸಂತಾದ ಕಾರಣ ಯಿಲ್ಲಿಂದ ಮುಂದೆಯೂ ಅರ್ಧವೃತಿಗೆ ಸಲುವ........

೬ ★ಕ್ಷೇತ್ರಪಾಲ ಕೃಷ್ಣಂಭಟ್ಟನ ಸಾಕ್ಷಿವ್ರಾಲು ಸಾಸಲ ಕೃಷ್ಣಂಭಟ್ಟನ ಸಾಕ್ಷಿವ್ರಾಲು

#### ಹಿಂಭಾಗ

೭ ಗಾದ ಗದ್ದೆಬೆದಲು ತೋಟತುಡಿಗೆ ಅಣೆ ಅಚುಕಟು ಕಾಡಾರಂಬ ನೀರಾರಂಬ ಮಗ್ಗಮನೆವಣ ಸುಂಕಸು ವರ್ನಾದಾಯ ಕಾಣಿಕೆ ಗಿರೆತಿಗಳ ಅಗ್ರಹಾರವಾದ ಮಪತಿಯ ನಿವೇಶನ ಹಳ್ಳಿಹಿರಿಯೂರು ಮುಂತಾದ ಸಕಲ ಸುವರ್ನಾದಾಯ ಸಮಸ್ತದವಸಾದಾಯ ಮುಂತಾದ ಆ ಸಕಲ ಸ್ವಾಂಮ್ಯವಂನ್ನು ಅನುಭವಿಸಿ ಬರಲುಳ್ಳವರೂ ಯೆಂದು ಭಾರದ್ವಾಜ....

೮ ಸೂತ್ರದ ಯಜುಶ್ಯಾಖಾಧ್ಯಾಯಿಗಳಾದ ಬೆಪೂರ ಅಂಣಾಭಟರ ಪಉತ್ರರಾದ ಗಂಗಾಧರಭಟರ ಪುತ್ರರಾದ ಶ್ಯಾಂಭಟರು ಕಾಶ್ಯಪಗೋತ್ರದ ಆಪಸ್ತಂಬ ಸೂತ್ರದ ಯಜುಶ್ಯಾಖಾಧ್ಯಾಯಿಗಳಾದ ತಾಳೆಕೆರೆ ಶಿವರಾಮ್ಮೆಯನವರ ಪಉತ್ರರಾದ ಕಾಶಿಪತ್ಯೆಯನವರ ಪುತ್ರರಾದ ಶಿವರಾಮ್ಮೆಯನವರಿಗೆ। ನಂಮ ಅಂಉದ್ದಶೆಯಿಂದ ಅರ್ಧವೃತ್ತಿಯಂನು ನಿಮಗೆ ಶುದ್ಧ.....

೯ ಯೀ ಅರ್ಧವೃತ್ತಿಗೆ ಸಲುವ ಚೆತುಸೀಮೆವಳಗಣ ನಿಧಿ ನಿಕ್ಷೇಪ ಜಲ ತರು ಪಾಷಾಣ ಅಕ್ಷೀಣ್ಯಾಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯಂಗಳನು ನೀಉ ಮಾಡುವ ದಾನ ಕ್ರಯ ಭೋಗ್ಯಾಧಿನಿಯಮಂಗಳಿಗೆ ಯ್ಯೊಗ್ಯವಾಗಿ ಅನುಭವಿಸಿಕೊಂಡು ಬರಲುಳ್ಳವರೆಂದು ಕಾಶ್ಯಪಗೋತ್ರದ ಆಪಸ್ತಂಬ ಸೂತ್ರದ ಯಜುಶ್ಯಾಖಾಧ್ಯಾಯಿಗಳಾದ ತಾಳೆಕೆರೆ

೧೦ ಕಾಶಿಪತ್ಯೆಯನವರ ಪುತ್ರರಾದ ಶಿವರಾಮ್ಮೆಯನವರಿಗೆ ಭಾರದ್ವಾಜ ಸಗೋತ್ರದ ಆಪಸ್ತಂಭ ಸೂತ್ರದ ಯಜುಶಾಖಾಧ್ಯಾಯಿಗಳಾದ ಬೆಮೂರ ಅಂಣಾಭಟರ

* ಮಾಗಡಿಯ ನಿವಾಸಿಗಳಾದ ಸ್ನೇಹಿತ ಶ್ರೀ ಪಾ. ನಟರಾಜ ಅವರು ತಮ್ಮ ಮನೆಯಲ್ಲಿ ಓಲೆಗರಿಗಳ ಮೇಲೆ ದಾಖಲಾಗಿದ್ದ ಈ ೫ ದಾನಪತ್ರಗಳನ್ನು ಅಧ್ಯಯನಕ್ಕಾಗಿ ನೀಡಿ ಉಪಕರಿಸಿದ್ದಾರೆ.

ಪಉತ್ರರಾದ ಗಂಗಾಧರಭಟರ ಪುತ್ರರಾದ ಶ್ಯಾಂಭಟರು ನಿಮಗೆ ಶುದ್ಧಕ್ರಯವಾಗಿ ಕೊಟ ಅರ್ಧವೃತ್ತಿಯಂನು ನಿಂಮ ಪುತ್ರಪಉತ್ರ ಪಾರಂಪರ್ಯೆಯವಾಗಿ। ಅಜಿಯನೂರ। ಸ್ತಾಯಿಗಳಾಗಿ ಸುಖದಿಂದಾ.......

೧೧ ದು ನಾವು ನಂಮ ಸ್ತ್ರೀಪುತ್ರಗ್ನಾತಿದಾಯಾದ್ಯನು ಮತಿಯಿಂದಾ ಸ್ವರೂಚ್ಯಾ ವಪಿ ಬರೆಸಿಕೊಟ ವೃತ್ತಿ ಕ್ರಯದಾನ ಸಾಧನದ ವಾಲೆ ಯಿಂತದಿದ್ದಕೆ ಸಾಕ್ಷಿಗಳು ಭಾಸ್ಕರ ನರಸಿಂಭಟ್ರೂ ಆಚಿಭಟರ್ರೂ ಕ್ಷೇತ್ರಪಾಲ ಕೃಷ್ಣಂಭಟರ್ರೂ ಮುದುಗುಂದೂರ ಸೂರ್ಯನಾರಾಯಣ ಭಟ್ರುಯಿವರ ಸಮ್ಮತಯಿಂದ ಅಮ್ರುತೂರೆ ನಿಮ್ಮರಾಯರದು ಗಯ....

೧೨ + ಅನಂತಭಟ್ರಪವಿರ+ ಮೂಲಕರ್ತುಗಳ ವಪ್ಪಿತ + ಶಾಮಿಭಟರ ವಪ್ಪಿತ ಔಭಳಯ್ಯ ವಪ್ಪಿತಂ ನರಸಿಂಹ ಶಾಸ್ತ್ರುಲ ವಪ್ಪಿತಂ ಸಾಂಬಶಿವುಣಿ ವಪಿತಂ ತಂಮಂನ ವಪಿತಂ ಚಂದ್ರಶೇರಣಿ ಸಾಕ್ಷಿವ್ರಾಲಿ + ಸೂರ್ಯನಾರಾಯಣ ಶಾಸ್ತ್ರಿ +

+ನಾಗರಾಕ್ಷರ

ಸಾಕ್ಷಿದಾರರು ಖುದ್ದು ಸಾಕ್ಷಿ ಸಹಿ ಹಾಕಿದ್ದಾರೆ.

**ಎರಡನೆಯ ದಾನಪತ್ರ**

**ಮುಂಭಾಗ**

೧ ಶುಭಮಸ್ತು ॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೬೭೯ನೆ ಸಂದ ವರ್ತಮಾನ ಈಶ್ವರ ಸಂವತ್ಸರ ಜ್ಯೇಷ್ಠ ಶು ೭ಲ್ಲು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾ ಪ್ರತಿವಿಕನಕಪತಿ ಶ್ರೀ ಕೃಷ್ಣರಾಜ ವಡೆರಯ್ಯನವರು ಶ್ರೀರಂಗಪಟ್ಟಣದಲ್ಲು ಸುಖದಿಂ ಪೃಥ್ವಿಸಾಂಮ್ರಾಜ್ಯಂಗಯುತ್ತಿರಲು ಕಾಶ್ಯಪಸ ಗೋತ್ರದ ಆಪಸ್ತಂಬ ಸೂತ್ರದ

೨ ಯಜುಃಶಾಖಾಧ್ಯಾಯಿಗಳಾದ ತಾಳೆಕೆರೆ ಶಿವರಾಮಯ್ಯ ನವರ ಪೌತ್ರರಾದ ಕಾಶಿಪತಯ್ಯನವರ ಪುತ್ರರಾದ ಶಿವರಾಮಯ್ಯನವರು ಕೌಂಡಿನ್ಯ ಸಗೋತ್ರದ ಆಪಸ್ತಂಬ ಸೂತ್ರದ ಯಜುಃಶಾಖಾಧ್ಯಾಯಿಗಳಾದ ಪಾನ್ಯದ ನಾರಾಯಣಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಬರೆಶಿಕೊಟ್ಟ ಭೂದಾನ ಸಾಧನಕ್ರಮವೆಂತೆಂದರೆ ಮಾಗಡಿ ಸೀ

೩ ಮೆಗೆ ಸಲುವ ಸಾತನೂರ ಹೋಬಳಿ ಕೆಂಪಸಾಗರವೆಂಬ ಸರ್ವಮಾನ್ಯ ಅಗ್ರಹಾರದಲ್ಲಿ ಗಣಸಂಖ್ಯವೃತ್ತಿ ೧೧ಲ್ಲಿ ಗಂಗಾಧರಭಟ್ಟರಿಂದಾ ಕ್ರಯಲಬ್ಧವಾಗಿ ಬಂದ (ಹಾ) ಗ ವೃತ್ತಿಯಲ್ಲಿ ಬೆಳೆವೃತ್ತಿಯಂನು ನಂಮ ಮಾತಾ ಪಿತೃಗಳಿಗೆ ಪುಣ್ಯಲೋಕ ಉಂಟಾಗಲಿಯಂದು ಸಹಿರಣ್ಯೋದಕ ದಾನ ಧಾರಾಪೂರ್ವಕವಾ--ವಾದ ಕಾರಣ ಈ ಬೆಳೆವೃತ್ತಿಗೆ ಸಲುವ ಚ

೪ ತುಃಸೀಮೆಯಲ್ಲಿರುವ ಗದ್ದೆ ಬೆದ್ದಲು ತೋಟತುಡಿಕೆ ಕಾಡಾರಂಭನೀರಾರಂಭ ಸುಂಕ ಸುವರ್ಣಾದಾಯ ಮಗ್ಗಮನೆವಣ ಪ್ರಥಮದ್ವಿತೀಯ ನಿವೇಶನ ಮುಂತಾದ ಆ ಸಕಲ ಸ್ವಾಮ್ಯವೂ ನೀವೆ ಅನುಭವಶಿಕೊಂಡು ಬರಲುಳ್ಳವರು (ಯ)ಂಮ ಕಾಶ್ಯಪಸಗೋತ್ರದ ಆಪಸ್ತಂಭ ಸೂತ್ರದ ಯಜುಃಶಾಖಾಧ್ಯಾಯಿಗಳಾದ ತಾಳೆಕೆರೆ ಶಿವರಾಮಯ್ಯನವರ ಪೌತ್ರರಾದ ಕಾಶಿಪ

೫ ತೆಯ್ಯನವರ ಪುತ್ರರಾದ (ಕಾ) ಶಿವರಾಮಯ್ಯನವರು ಕೌಂಡಿನ್ಯಸಗೋತ್ರದ ಆಪಸ್ತಂಭಸೂತ್ರದ ಯಜುಃ ಶಾಖಾಧ್ಯಾಯಿಗಳಾದ ನಾರಾಯಣಭಟ್ಟರ ಪೌತ್ರರಾದ ವೆಂಕಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಈ ಬೆಳೆವೃದ್ಧಿಯಂನು ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ನಿಮಿಗೆ ಕೊಟ್ಟೆವಾದ ಕಾರಣ ಈ ಬೆಳೆವೃತ್ತಿ ಚತುಃಸೀಮೆಯಲಿ ಉಂಟಾದ ನಿಧಿ

೬ ನಿಕ್ಷೇಪಾದ್ಯಷ್ಟಭೋಗತೇಜಸ್ವಾಮ್ಯಂಗಳು ನಿಮಿಗೆ ಸಲು- ವದು ಈ ಬೆಳೆವೃತ್ತಿಯಲೆ ನೀವು ಮಾಡುವ ಅಧಿಕ್ರಯ ದಾನವಿನಿಮಯಗಳೆಂಬ ವ್ಯವಹಾರ ಚತುಷ್ಟಯಕ್ಕೆ ಸಲುವದು ಯಂ ಕೌಂಡಿನ್ಯಸಗೋತ್ರ ಆಪಸ್ತಂಭಸೂತ್ರ ಯಜುಃಶಾಖಾಧ್ಯಾಯಿಗಳಾದ ನಾರಾಯಣಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆ- ಲಿಂಗಂಭಟ್ಟರಿಗೆ ಶಿವರಾಮಯ್ಯನವರ

೭. ಪೌತ್ರರಾದ ಕಾಶಿಪತ್ಯೆಯನವರ ಪುತ್ರರಾದ ಶಿವರಾಮ ಯ್ಯನವರು ನಾವು ನಂಮ ಸ್ತ್ರೀಪುತ್ರಜ್ನಾತಿದಾಯಾದಿ ನಾಮಾದ್ಯನುಮತಿಯಿಂದಾಸುರೂಚ್ಯಾ ವೊಪ್ಪಿ ಬರೆಶಿಕೊಟ್ಟ ಬೆಳೆವೃತ್ತಿ ಭೂದಾನ ಧರ್ಮಸಾಧನ ಇಂತಪ್ಪುದಕ್ಕೆ ಸಾಕ್ಷಿಗಳು ಲಿಂಗಂಭಟ್ಟರ ಕುಮಾರರು ಸೂರ್ಯನಾರಾಯಣಭಟ್ಟರು ನಂಜೆಲಿಂಗಂಭಟ್ಟರ ಕುಮಾರರು ನಂಜುಂ

೮ ಡಭಟ್ಟರು ವೆಲ್ಲಾಲ ರಾಮೇಶ್ವರ ಸೋಮಯಾಜಿಗಳು ಕೃಷ್ಣಸಾಗರದ ನಾಗಂಭಟ್ಟರ ಕುಮಾರರು ಶೇಷಭಟ್ಟರು ಇವರ ಉಭಯಾನುಮತಿಯಿಂದಾ ಕುಣಿಗಿಲ ಧಾಳಿ ಸೋಮೆಯಾಜಿಗಳ ಬರಹಾ ಮೂಲಕರ್ತೃವಪ್ಪಿತ ಶಿವರಾಮ್ಯನ ವಪ್ಪಿತ ರಾಮಲ್ಯನ ವಪ್ಪಿತ

**ಹಿಂಭಾಗ**

೯ ಸೂರ್ಯನಾರಾಯಣ ಸಾಕ್ಷಿ ಬರಹಾ + ಮಂಶಂ ಐಯ್ಯನ ಸಾಕ್ಷಿಬರಹ + ವೆಲ್ಲಾಲರಾಮೇಶ್ವರ ಸೋಮಯ ಅಜುಲ ಸಾಕ್ಷಿವ್ರಾಲು ಶೇಷಭಟನ ಸಾಕ್ಷಿಬರಹ+ಕಪಿನೀಭಟ್ಟನ ಸಾಕ್ಷಿಬರಹ + ರಾಮುಣಿ ಸಾಕ್ಷಿವ್ರಾಲು ಚಂದ್ರಶೇಖರ ದೀಕ್ಷಿತನ ಸಾಕ್ಷಿಬರಹ+ರಂಗಂಭಟ್ಟ ಸಾಕ್ಷಿ+

+ ಈ ಗುರುತಿನ ನಡುವಿನ ಭಾಗಗಳು ನಾಗರಿ ಲಿಪಿಯಲ್ಲಿವೆ.

## ಮೂರನೆಯ ದಾನಪತ್ರ

ಮುಂಭಾಗ

೧ ಶುಭಮಸ್ತು ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೬೭೯ ಸಂದ ವರ್ತಮಾನವಾದ ಈಶ್ವರನಾಮ ಸಂವತ್ಸರ ಜ್ಯೇಷ್ಟ ಶು ೭ಲ್ಲು ಶ್ರೀಮದ್ರಾಜಾಧಿ ರಾಜರಾಜ ಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮನರಪತಿ ಕೃಷ್ಣರಾಜ.....ರು ಶ್ರೀರಂಗಪಟ್ಟಣದಲ್ಲು ರತ್ನಸಿಂಹಾಸನಾ....ಗಿ ಸುಖದಿಂ ಪೃಥ್ವಿಸಾಮ್ರಾಜ್ಯಂಗೆಯಿ ಉತ್ತಿರಲೂ ಕಾಶ್ಯಪಸಗೋತ್ರದ ಆಪಸ್ತಂಭ ಸೂತ್ರದ ಯಜುಃಶಾಖಾಧ್ಯಾಯಿಗಳಾದ

೨ ತಾಳೀಕೆರೆ ಶಿವರಾಮಯ್ಯನವರ ಪೌತ್ರರಾದ ಕಾಶೀಪತಯ್ಯ ನವರ ಪುತ್ರರಾದ-ವರಾಮಯ್ಯನವರು ಕೌಂಡಿನ್ಯಸಗೋತ್ರ ಆಪಸ್ತಂಭಸೂತ್ರದ ಯಜುಃಶಾಖಾಧ್ಯಾಯಿಗಳಾದ ಪಾನ್ಯದ ನಾರಾಯಣಭಟ್ಟರ ಪೌತ್ರರಾದ ವೆಂಕ...ತ್ರರಾದ ಸೋಮೆಲಿಂಗಂಭಟ್ಟರಿಗೆ ಬರೆಶಿಕೊಟ್ಟ ಅರ್ಧವೃತ್ತಿ ಭೂಕ್ರಯದಾನ ಸಾಧನಕ್ರಮವೆಂತೆಂದರೆ ಮಾಗಡಿಗೆ ಪ್ರತಿನಾಮ ದೇಯವಾದ ಶ್ರೀ ಕೃಷ್ಣರಾಜ ನಗರದ ಹೋಬಳಿ ಸಾತನೂರು ಸ್ಥ

೩ ಳಕ್ಕೆ ಸಲುವ ಕೆಂಪಸಾಗರವೆಂಬ ಸರ್ವಮಾನ್ಯ ಅಗ್ರಹಾರದಲ್ಲಿ ಗಣಸಂಖ್ಯವೃತ್ತಿ ೧೧ರಲ್ಲಿ ಬೆಪೂರ ಶಾಮಿಭಟ್ಟರಿಂದಾ ನಮಗೆ ಕ್ರಯಲಬ್ಧವಾಗಿ ಬಂದ ಅರ್ಧವೃತ್ತಿಯಂನು ಮಿಗೆ ಶುದ್ಧಕ್ರಯಧ್ದಾನವಾಗಿ ಕೊಟ್ಟೆವಾದ ಕಾರಣ ಈ ಅ...ಕ್ರಯದ್ರವ್ಯ ತತ್ಕಾಲೋಚಿತ ಮಧ್ಯಸ್ಥಪರಿಕಲ್ಪಿತ ಉಭಯವಾರಿ ಸಂಪ್ರತಿಪನ್ನ ಕ್ರಯಲಕ್ಷಣ ಲಕ್ಷಿತ ಕ್ರಯದ್ರವ್ಯ ಪರಿಮಾಣ ಕಾಲಪರಿವರ್ತಮಾನಕೆ ಸಲುವತ್ರಯಶ್ಯಾರ್ಷಿ

೪ ಕಂಠೀರವ ಗು ೧೫೫ ವರಹಾ ಅಕ್ಷಾರದಲ್ಲೂ ಇದನೂರ ಅರುವತ್ತು ವರಹಾ...ರೃಹಾ ಸ್ತಾದ್ಧಸ್ತವಾಗಿ ದಿವಾನೊಟ ವಾಗಿ ಸಧ್ಯಃ ಪೂಚ್ಛೇದಕಾಗಿ ಸಾಕಲ್ಯವಾಗಿ ಕಾಸುವೀಸವ ನುಳಿಯದೆ ನಿಂಮಿದಾನಮಿಗೆ ಸಂತಾದ ಕಾರಣ ಈ ಅ..ಗದ್ದೆಬೆದ್ದಲು ತೋಟತುಡಿಕೆ ಅಣೆ ಅಚ್ಚುಕಟ್ಟು ಕಾಡಾರಂಭ ನೀರಾರಂಭ ಮಗ್ಗ ಮನೆವಣ ಸುಂಕ ಸುವರ್ನಾದಾಯ ಪ್ರಥಮ ದ್ವಿತೀಯನಿವೇಶನ ಮುಂತಾದ ಆ ಸಕಲ ಸ್ವಾಮ್ಯವ ನೀವು

೫ ಅನುಭವಿಶಿಕೊಂಡು ಬರಲುಳ್ಳವರು ಯಂದು ಕಾಶ್ಯಪಸಗೋತ್ರದ ಆಪಸ್ತ-ಭ ಸೂತ್ರದ ಯಜುಃ ಶಾಖಾಧ್ಯಾಯಿಗಳಾದ ತಾಳಕರ ಶಿವರಾಮಯ್ಯನವರ ಪೌತ್ರರಾದ ಕಾಶೀಪತಯ್ಯನವರ ಪುತ್ರರಾದ ಶಿವರಾಮಯ್ಯನವರಿ.....ತ್ರದ ಆಪಸ್ತಂಭ ಸೂತ್ರದ ಯಜುಃ ಶಾಖಾಧ್ಯಾಯಿಗಳಾದ ನಾರಾಯಣಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ನಾವು ಶುದ್ಧಕ್ರಯದಾನವಾಗಿ

೬ ಕೊಟ್ಟೆವಾದ ಕಾರಣ ಈ ಅರ್ಧವೃತ್ತಿಗೆ ಸಲುವ ಚತುಃ ಸೀಮೆವಳಗುಳ್ಳ ನಿಧಿನಿಕ್ಷೇಪ ಜಲ ತರು ಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಗಳೆಂಬ ಅಷ್ಟಭೋಗ ತೇಜ ಸ್ವಾಮ್ಯಂಗಳು ನಿಮಿಗೆ ಸಲುವ..ತ್ತಿಯೂ ನೀವು ಮಾಡುವ ಆಧಿಕ್ರಯದಾನಪರಿವರ್ತನೆಯಂಬ ವ್ಯವಹಾರ ಚತುಷ್ಟಯಕ್ಕೆ ಯೋಗ್ಯವಾಗಿ ನಿಮಿಗೆ ಸಲುವದುಯಂದು ಕೌಂಡಿನ್ಯಸಗೋತ್ರದ ಆಪಸ್ತಂಭಸೂತ್ರ

೭ ದ ಯಜುಃಶಾಖಾಧ್ಯಾಯಿಗಳಾದ ಪಾನ್ಯದ ನಾರಾಯಣಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಕಾಶ್ಯಪಸಗೋತ್ರ...ಸೂತ್ರದ ಯಜುಃಶಾಖಾಧ್ಯಾಯಿಗಳಾದ ತಾಳಿಕೇರಿ ಶಿವರಾಮಯ್ಯ ನವರ ಪೌತ್ರರಾದ ಕಾಶೀಪತಯ್ಯನವರ ಪುತ್ರರಾದ ಶಿವರಾಮಯ್ಯನವರು ನಿಮಿಗೆ ಶುದ್ಧಕ್ರಯವಾಗಿ ಕೊಟ್ಟೆ

೮ ವಾದ ಕಾರಣ ಈ ಅರ್ಧವೃತ್ತಿಯು ನೀವು ನಿಂಮ ಪುತ್ರಪೌತ್ರ ಪಾರಂಪರ್ಯವಾಗಿ ಆಚಂದ್ರ...ವಾಗಿ ಸುಖದಿಂದಾನು ಭವಿಶಿಕೊಂಡು ಬರಲುಳ್ಳವರುಯಂದು ನಾವು ನಂಮ ಸ್ತ್ರೀಪುತ್ರ ಜ್ಞಾತಿದಾಯಾದಿ ಸಾಮಂತಾದ್ಯತಿಯಿಂದಾ ಸುರೂಚ್ಯಾವೊಪ್ಪಿ

ಹಿಂಭಾಗ

೯ ವಡಂಬಟ್ಟು ಬರಶಿಕೊಟ್ಟ ಅರ್ಧವೃತ್ತಿ ಭೂಕ್ರಯ ದಾನಸಾಧನ ಇಂತಪ್ಪುದಕ್ಕೆ ಸಾಕ್ಷಿಗಳು ಭಾಸ್ಕರ ಅಣ್ಣಾಜಿಭಟ್ಟರ ಕುಮಾರರು ರಾಮಾಶಾಸ್ತ್ರಿಗಳು ರಾಮಕೃಷ್ಣಂಭಟ್ಟರು ಕಪಿನೀಭಟ್ಟರು ವೆಲ್ಲಾಲ ಚಂದ್ರಶೇಖರ ಶಾಸ್ತ್ರಿಗಳು ನಂಜೇಲಿಂಗಂಭಟ್ಟರ ಕುಮಾರರು ನಂಜುಂಡಭಟ್ಟರು ಮೂಲಕತೃಗಳ ವಪ್ಪಿತ

೧೦ ಶಿವರಾಮೈನವಪ್ಪಿತ॥ರಾಮೈನವಪ್ಪಿತಾ ಸಾಕ್ಷಿಗಳ ಬರಹಾ ಭಾಸ್ಕರರಾಮುಣಿ ಸಾಕ್ಷಿವ್ರಾಯಿ+ಕಪಿನೀಭಟ್ಟನ ಸಾಕ್ಷಿಬರಹ+ ಚಂದ್ರಶೇಖರ ದೀ – ಬರಹ+ನಂಜುಂಡೈಯನ ಸಾಕ್ಷಿ ಬರಹ+ ಇವರ ಸಂಮತದಿಂದಾ ಕುಣಿಗಿಲ ಧಾಳಿ ಸೋಮಯಾಜಿಗಳಬರಹ

೧೧ +ನಾಗಂಭಟ್ಟ ಸಾಕ್ಷಿ+ಅಲ್ಪ – ಟ್ಲವಾರಿ ಸಾಕ್ಷಿ

+ ನಾಗರೀ ಲಿಪಿ

## ನಾಲ್ಕನೆಯ ದಾನಪತ್ರ

**ಮುಂಭಾಗ**

೧ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೬೮೫ನೆ ಸಂದ ವರ್ತಮಾನ... ಪ್ರೌಢ ಪ್ರತಾಪನ ಪ್ರತಿಮವೀರನರಪತಿ ಮಹಿಶೂರಕೃಷ್ಣರಾಜ ವಡೆಯರೈಯನವರು ಶ್ರೀರಂಗ

೨ ಪಟ್ಟಣದಲ್ಲು ರತ್ನಸಿಂಹಾಸನಾರೂಢರಾಗಿ ಪೃಥ್ವಿ (ಯಂ) ಭೋಜ್ಯಗೈಯುತ್ತಿರಲು ಕೌಂಡಿನ್ಯಸಗೋತ್ರದ ಆಪಸ್ತಂಭ ಸೂತ್ರದ । ಯಜುಶ್ಯಾಖಾಧ್ಯಾಯಿ......... ರಾದ ತಿರುಮಲೈಯನವರ ಪುತ್ರರಾದ ತಂಬೈಯನವರು ಕೌಂಡಿನ್ಯಸಗೋತ್ರದ ಆಪಸ್ತಂಭ ಸೂತ್ರದ ಯಜುಃ

೩ ಶ್ಯಾಖಾಧ್ಯಾಯಿಗಳಾದ ಪಾನ್ಯದ ನಾರಣಭಟ್ಟರ ಪೌತ್ರರಾದ ವೆಂಕಟಸಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಬರೆಶಿಕೊಟ್ಟ ತೋಟದ ಕ್ರಯಸಾಧನದ ಕ್ರಮವೆಂತೆಂದರೆ ನಮ್ಮ ತಾತನವರಿಗೆ ಮುಂಮಡಿ ಕೆಂಪೆಗೌಡರೈಯ ನವರಿಂದಾ ಸಹಿರಂಣ್ಯೋದಕ ದಾನಧಾರಾಪೂರ್ವಕವಾಗಿ ಬಂದ ತೂಬಿನಕೆರೆ ಸ್ವಾ

೪ ಸ್ತ್ಯಕೆ ಸಲುವ ಕೆಂಪಸಾಗರದ ಕೆರೆ ಕೆಳಗಣ ಸಾತನೂರ ವಳಗೆ ವೊಡೆದಲ್ಲಿ ಶಿಲಾಪ್ರತಿಷ್ಠೆಪೂರ್ವಕವಾಗಿ ಸರ್ವಮಾಂನ್ಯವಾಗಿ ನಡದುಬರುವ ರಾಜಪಾಲು.. ನೂರು ಸ್ಥಳ ತೋಟವಂನೂ ನಿಮಗೆ ಶುದ್ಧಕ್ರಯದಾನವಾಗಿ ಕೊಟ್ಟೆವಾದ ಕಾರಣ ಯೀ ತೋಟಕೆ ಸಲುವ ಕ್ರಯ ದ್ರವ್ಯ ತತ್ಕಾಲೋಚಿತ ಮಧ್ಯಸ್ಥಪ(ತಿ)ಕಲ್ಪಿಉ

೫ ಭಯವಾಗಿ ಸಂಪ್ರತಿ(ಪ)ಂನ ಕ್ರಯಲಕ್ಷಣ ಲಕ್ಷಿತ ಕ್ರಯ ದ್ರವ್ಯಪರಿಮಾಣ ಕಾಲ ಪರಿವರ್ತಮಾನಕೆ ಸಲುವ ಕಂಠೀರವ ಗುಳಿಗೆ ಗು ೩೫೦ ವರಹಾ ಅಕ್ಷಾ........ವರಹಾವು ನಿಂಮಿಂದಾ ನಮಗೆ ಹಸ್ತಾದ್ಧಸ್ತವಾಗಿ ದಿವಾನೋ( )ವಾಗಿ ಸದ್ಯಃ ಪರಿಭೇದ ವಾಗಿ ಸಾಕಲ್ಯವಾಗಿ ನಿಂಮಿಂದಾ ಸಂತಾದ

೬ ಕಾರಣಯಿಲ್ಲಿಂದಂ ಮುಂದೆ...ಚತುಸ್ಸೀಮೆಯೊಳಗುಳ್ಳ ನಿಧಿ ನಿಕ್ಷೇಪ ಜಲಪಾಷಾಣ ಅಕ್ಷೀಣ್ಯಾಗಾಮಿ ಸಿದ್ಧಸಾಧ್ಯಂ ಗಳೆಂಬ ಅಷ್ಟಭೋಗ ತೇ....ಳನ್ನೂ ನೀವೇ ಸುಖದಲ್ಲಿ ಅನುಭವಿಸಿಕೊಂಡು ಯಿರಲುಳ್ಳವರು ಯೀ ತೋಟವು ನೀವು ಮಾಡುವ (ವಿ) ಧಿ ಕ್ರಯದಾನ ಪರಿವರ್ತನೆಗಳೆಂಬ್ಬ ವ್ಯ

೭ ವ ಹಂರೂಕತು.....ಚಂದ್ರಾರ್ಕಸ್ಥಾಯಿಗಳಾಗಿ ಸುಖದಿಂ ನೀವು....ವರುಂ...ಜ್ಞಾತಿದಾಯಾದಿ ಸಾಮಂತಾದ್ಯ........

**ಹಿಂಭಾಗ:**

೮ ಬರೆಯಿಶಿಕೊಟ್ಟೆ..........ಗಳ ಬರಹಾ ದೀಕ್ಷಿತ ಭಟ್ಟರ ಸಾಕ್ಷಿಬರಹಾ+ಲಕ್ಷ್ಮೀನಾರಾಯಣ ಶಾಸ್ತ್ರಿ ಬರಹಾ+ ಅನಂತೈಯನ ಸಾಕ್ಷಿ
+ ನಾಗರಾಕ್ಷರದಲ್ಲಿ

## ಐದನೆಯ ದಾನಪತ್ರ

**ಮುಂಭಾಗ**

೧ ಶುಭಮಸ್ತು । ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ...........ವರ್ತಮಾ.............ಶುದ್ಧ ೧೫ ಯಲ್ಲು ಶ್ರೀಮದ್ರಾ..............ರ ಪ್ರೌಢಪ್ರತಾಪ ನಪ್ರತಿಮವೀರ ನರಪತಿ ಶ್ರೀ ಮಹೀಶೂರ ಶ್ರೀ ಕೃಷ್ಣರಾಜ ವಡಿಯರಯ್ಯ........ರತ್ನ ಸಿಂಹಾಸನಾರೂಢರಾಗಿ ಸುಖದಿಂ ಪೃಥ್ವೀ ಸಾಮ್ರಾಜ್ಯಂ

೨ ಗೈಯುತ್ತಿರಲು ಕೌಂಡಿನ್ಯಗೋತ್ರದ ಆಪಸ್ತಂಭ ಸೂತ್ರದ ಯಜುಶ್ಯಾಕಾಧ್ಯಾಯಿಗಳಾದ ಪಾಂನ್ಯದ ನಾರಾಯಣ ಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಹರಿತಸಗೋತ್ರದ ಆಪಸ್ತಂಬಸೂತ್ರದ ಯಜುಶ್ಯಾಕಾಧ್ಯಾಯಿಗಳಾದ ಮಾಗಡಿ ಸ್ಥಳದ ಅವಸರದ ರಘುಪತಯ್ಯನವರ ಪೌತ್ರರಾದ ಪದ್ಮನಾಭಯ್ಯನವರ ಪುತ್ರರಾದ ಕೃಷ್ಣಯ್ಯನವರು ಬರಿಯಸಿಕೊಟ್ಟ ೧ ವೃತ್ತಿ ಕ್ರಯದಾನ ಶಾಸನದ ಕ್ರಮವೆಂತೆಂದರೆ ಶ್ರೀ ಕೃಷ್ಣರಾಜನ

೩ ಗರದ ಯಲಗಲವಾಡಿ ಹೋಬಳಿಯಾದ ಹೊಸಹಳ್ಳಿ ಗ್ರಾಮಕ್ಕೆ ಪ್ರತಿನಾಮದೇಯುವಾದ ಲಿಂಗ ಸಾಗರಾಗ್ರಹಾರದಲ್ಲಿ ನಂಮ ಹಿರಿಯರಿಗೆ ಕೆಂಪೇ ಗೌಡಯ್ಯನವರಿಂದ ಧಾರಾಗೃಹೀತವಾಗಿ ಬಂದ ಹೊಲ ಬ೧ ಗದ್ದೆ ಬ೧ ಗ ಸಹಾ ಗ್ರಾಮದ ಮಹಾಜನಂಗಳಿಗೆ ವಪ್ಪಿಸಿ ಮಹಾಜನಂಗಳಿಂದಾ ಗಣಸಂಖೆ ವೃತ್ತಿ೧ರಲ್ಲಿ ನಮಗೆ ಪರಿವರ್ತನೆಯಾಗಿ ಬಂದ ೧ ವೃತ್ತಿಯು ನಿಮಿಗೆ ಶುದ್ಧ ಕ್ರಯದಾನವಾಗಿ ಕೊಟ್ಟೆವಾದ ಕಾರಣ ಯೀ ೧ ವೃತ್ತಿಗೆ ಸಲುವ ಕ್ರ

೪ ಯ ದ್ರವ್ಯ ತತ್ಕಾಲೋಚಿತ ಮಧ್ಯ ಸ್ವಪರಿಕಲ್ಪಿತ ಉಭಯವಾಗಿ ಸಂಪ್ರತಿಪನ್ನ ಕ್ರಯಲಕ್ಷಣ ಲಕ್ಷಿತ ಕ್ರಯ ದ್ರವ್ಯ ಪರಿಮಾಣ ಕಾಲ ಪರಿವರ್ತತಿಗೆ ಸಲುವ ಕಂ ಗುಳಿಗೆ ೧೦೫ ವರಹಾ ಅಕ್ಷಾರದಲ್ಲು ಯೀ ನೂರು ಅಯಿದು ವರಹ ನಿಂಮಿಂದಾ ನಮಗೆ ಹಸ್ತಾದ್ಧಸ್ತವಾಗಿ ದಿವಾಣಾ ಕೈವಾಗಿ ಸಧ್ಯಂ ಪರಿಭೇದವಾಗಿ ಸಾಕಲ್ಯವಾಗಿ ಕಾಸುವಿನ ಅಳಿಯದೆ ನಿಂಮಿಂದಾ ನಮಗೆ ಸಂತಾದ ಕಾರಣ ಯಿಲ್ಲಿಂದಾ ಮುಂದೆ ಯೀ ವೃತ್ತಿ

೫ ಯಂ ತಗಿಸಿ ನೀವು ಸುಖದಿಂ ಆಚಂದ್ರಾರ್ಕಸ್ಥಾಯಿಗಳಾಗಿ

ನೀವೇ ಅನುಭವಿಸಿಕೊಂಡು ಬರಳುಳ್ಳವರು ಯೆಂದು ಕೌಂಡಿನ್ಯಗೋತ್ರದ ಆಪಸ್ತಂಭ ಸೂತ್ರದ ಯಜುಶ್ಶಾಕಾಧ್ಯಾಯಿಗಳಾದ ಪಾಂನ್ಯದ ನಾರಾಯಣ ಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಸೋಮೆಲಿಂಗಂಭಟ್ಟರಿಗೆ ಹರಿತಸಗೋತ್ರದ ಆಪಸ್ತಂಬ ಸೂತ್ರದ ಯಜುಶ್ಶಾಕಾಧ್ಯಾಯಿಗಳಾದ ಅವಸರದ ರಘುಪತ್ಯೆಯನವರ ಪೌತ್ರರಾದ ಪದ್ಮನಾಭಯ್ಯನವ

೬ ರ ಪುತ್ರರಾದ ಕ್ರಿಷ್ಣಯ್ಯನವರ.....ವೃತ್ತಿಕ್ರಯದಾನ ಶಾಸನ ಕ್ರಮವೆಂತೆಂದರೆ ಯೀ ೧ದು ವೃತ್ತಿಗೆ ಸಲುವ ಹಳ್ಳಿಹಿರಿಯೂರು ಗದ್ದೆ ಬೆದ್ದಲು ತೋಟತುಡಿಕೆ ಅಣೆ ಅಚ್ಚುಕಟ್ಟು ಕಾಡಾರಂಭ ನೀರಾರಂಭ ಮಗ್ಗ ಮನೆವಣ ಸುಂಕ ಸುವರ್ಣಾದಾಯ ಸೊಪ್ಪಿನತೋಟ.......

ಹಿಂಭಾಗ

೭ ದ್ವಿತೀಯ್ಯ ನಿವೇಶನ ಮುತ್ತಾದ ಆ ಸಕಲ ಸ್ವಾಂಮ್ಯವು ನೀವೆ ಅನುಭ......ಯಿಲ್ಲಿಂದ ಮುಂದೆಯೂ ೧ ವೃತ್ತಿ ಚತುಸ್ಸೀಮೆವಳಗುಳ್ಳ ನಿಧಿನಿಕ್ಷೇಪ ಜಲತರುಪಾಷಾಣ ಅಕ್ಷೀಣ್ಯಾಗಾಮಿ ಸಿದ್ಧಸಾಧ್ಯಗಳೆಂಬ ಅಷ್ಟಭೋಗ ತೇಜಸ್ವಾಂಮ್ಯಗಳಂನು ನೀವೆ ಅನುಭವಿಸಿಕೊಂಡು ಬರಳುಳ್ಳವರು......ಂಬ ಸೂತ್ರದ ಯಜುಶ್ಶಾಕಾ ಧ್ಯಾಯಿಗಳಾದ ರಘುಪತಯ್ಯ

೮ ನವರ ಪೌತ್ರರಾದ ಕ್ರಿಷ್ಣಯ್ಯನವರು ಕೌಂಡಿನ್ಯಸಗೋತ್ರದ ಆಪಸ್ತಂಭ ಸೂತ್ರದ ಯಜುಶ್ಶಾಖಾಧ್ಯಾಯಿಗಳಾದ ನಾರಾಯಣಭಟ್ಟರ ಪೌತ್ರರಾದ ವೆಂಕಟಶಾಸ್ತ್ರಿಗಳ ಪುತ್ರರಾದ ಪಾಂನ್ಯದ ಸೋಮೆಲಿಂಗಂಭಟ್ಟರಿಗೆ ಬರಶಿಕೊಟ್ಟ ಕ್ರಯ ಸಾಧನ ಕ್ರಮವೆಂತೆಂದರೆ ಯೀವಂದು ವೃತ್ತಿಯು ನೀವು ಮಾಡುವ ಆಧಿಕ್ರಯದಾನ ಪರಿವರ್ತನೆಗಳೆಂಬ ವ್ಯವಹಾರ ಚೆತುಷ್ಟಯಂಗಳಿಗೆ ಯೋಗ್ಯವಾಗಿ ನಿಮಗೆ ಸಲೋದು ಯಿಲ್ಲಿಂದಾ ಮುಂ

೯ ದೆ ಯೀ ೧ ವೃತ್ತಿಯು ನೀವು ನಿಂಮ ಪುತ್ರ ಪೌತ್ರ ಪಾರಂಪರ್ಯವಾ- ಆಚಂದ್ರಾರ್ಕಸ್ಥಾಯಿಗಳಾಗಿ ಸುಖದಿಂ ಅನುಭವಿಶಿಕೊಂಡು ಬರಳುಳ್ಳವರು ಯಂದು ನಾವು ನಂಮ ಸ್ತ್ರೀ ಪುತ್ರ ಜ್ಞಾತಿ ದಾಯಾದಿ ಸಾಮಂತಾದ್ಯನುಮತದಿಂದಾ ಸುರೂಜ್ಯಾ ವಡಂಬಟ್ಟು ಬರಶಿಕೊಟ್ಟ ೧ ವೃತ್ತಿ ಕ್ರಯ ದಾನ ಸಾಧನ ಯಿಂತಪ್ಪುದಕ್ಕೆ ಸಾಕ್ಷಿಗಳು.

ಡಾ|| ಎಫ್. ಟಿ. ಹಳ್ಳಿಕೇರಿ *

# ಆಕರ ಸಾಮಗ್ರಿಗಳಾಗಿ ಹಸ್ತಪ್ರತಿ ಪ್ರಶಸ್ತಿಗಳು

ಕರ್ನಾಟಕದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮುಂತಾದ ಸಾಂಸ್ಕೃತಿಕ ಸಂಗತಿಗಳನ್ನು ತಿಳಿದುಕೊಳ್ಳುವಲ್ಲಿ ಹಲವಾರು ಆಕರಗಳ ಪೈಕಿ ಭಾಷಾಸಾಮಗ್ರಿಗಳು ಪ್ರಧಾನವಾಗಿವೆ. ಈ ಭಾಷಾ ಸಾಮಗ್ರಿಗಳಲ್ಲಿ 'ಹಸ್ತಪ್ರತಿಗಳು' ಪ್ರಮುಖವಾಗಿ ಪರಿಗಣಿಸಲ್ಪಟ್ಟಿವೆ. ಇಂಗ್ಲೀಷಿನ 'Manuscriptology' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಹಸ್ತಪ್ರತಿಶಾಸ್ತ್ರ' ಬಳಕೆಗೊಂಡಿವೆ. ಇತ್ತೀಚೆಗೆ ಇದೊಂದು ಅಧ್ಯಯನ ಶಿಸ್ತಾಗಿ ಪರಿಗಣಿತವಾಗಿದೆ.

**ಹಸ್ತಪ್ರತಿ ಪ್ರಶಸ್ತಿಗಳು:** ಸಾಮಾನ್ಯವಾಗಿ ಯಾವುದೇ ಹಸ್ತಪ್ರತಿಯಲ್ಲಿ ಕವಿಯ ಪಾಠ ಮತ್ತು ಲಿಪಿಕಾರನ ಪಾಠಗಳು ಸೇರಿಕೊಂಡಿರುತ್ತವೆ. ಲಿಪಿಕಾರನ ಪಾಠಗಳನ್ನು ಪ್ರಶಸ್ತಿ ಅಥವಾ ಪುಷ್ಪಿಕೆ(Colophon)ಗಳೆಂದು ಕರೆಯುತ್ತಾರೆ.

ಹಸ್ತಪ್ರತಿ ಲಿಪಿಕಾರರು ಈ ಪ್ರಶಸ್ತಿಗಳ ಕರ್ತೃಗಳು. ಅವರು ತಮ್ಮ ಚರಿತ್ರೆಯನ್ನು ಹೇಳುವುದರ ಜೊತೆಗೆ ನಾಡಿನ ಚರಿತ್ರೆಗೆ ಸಂಬಂಧಿಸಿದಂತೆ ಹಲವಾರು ಚಾರಿತ್ರಿಕ ಸಂಗತಿಗಳನ್ನು ಹೇಳಿದ್ದಾರೆ. ಈ ಕಾರಣದಿಂದ ಹಸ್ತಪ್ರತಿ ಪ್ರಶಸ್ತಿಗಳು ಕರ್ನಾಟಕದ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರಕ ಆಕರಗಳಾಗಿ ಸಹಾಯಕಾರಿಯಾಗುತ್ತವೆ.

**ಪ್ರಶಸ್ತಿಗಳ ಸ್ವರೂಪ :** ಒಂದು ಹಸ್ತಪ್ರತಿಯ ಆದಿ ಮತ್ತು ಅಂತ್ಯಭಾಗಗಳಲ್ಲಿ ಈ ಪ್ರಶಸ್ತಿಗಳು ಕಂಡುಬರುತ್ತವೆ. ಹೆಚ್ಚಾಗಿ ಕೃತಿಯ ಆದಿಭಾಗಕ್ಕಿಂತ ಅಂತ್ಯಭಾಗದಲ್ಲಿಯೇ ಇವುಗಳನ್ನು ಕಾಣುತ್ತೇವೆ. ಎಲ್ಲ ಹಸ್ತಪ್ರತಿಗಳಲ್ಲಿಯೂ ಈ ಪ್ರಶಸ್ತಿಗಳು ಕಂಡುಬರುವುದಿಲ್ಲ.

**ಆಕರ ಸಾಮಗ್ರಿಗಳಾಗಿ ಹಸ್ತಪ್ರತಿ-ಪ್ರಶಸ್ತಿಗಳು :** ಹಸ್ತಪ್ರತಿ ಲಿಪಿಕಾರರ ಚರಿತೆಯನ್ನು ರೂಪಿಸುವಲ್ಲಿ ಈ ಪ್ರಶಸ್ತಿಗಳು ಮೂಲ ಆಕರಗಳಾಗಿವೆ. ಲಿಪಿಕಾರರ ಹೆಸರು, ಗ್ರಾಮ, ಕಾಲ, ತಂದೆ-ತಾಯಿ, ಗುರುಪರಂಪರೆ, ಇಷ್ಟದೈವ, ಪ್ರತಿ ಮಾಡಿದ ಕೃತಿ ಮುಂತಾದ ವಿಷಯಗಳನ್ನು ತಿಳಿದುಕೊಳ್ಳಬೇಕಾದರೆ ನಾವು ಹಸ್ತಪ್ರತಿ ಪ್ರಶಸ್ತಿಗಳಿಗೆ ಮೊರೆ ಹೋಗಬೇಕಾಗುತ್ತದೆ.

ಕನ್ನಡ ಸಾಹಿತ್ಯ-ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಬಂದವರಲ್ಲಿ ಹಸ್ತಪ್ರತಿ ಲಿಪಿಕಾರರು ಒಬ್ಬರು. ಇವರು ಕವಿಕೃತಿಯನ್ನು ಪ್ರತಿಮಾಡುವುದರ ಮೂಲಕ ಕವಿಗಳನ್ನೂ, ಆ ಕವಿಯ ಕೃತಿಯನ್ನೂ ನಾಡಿನ ಜನತೆಗೆ ಪರಿಚಯಿಸಿದ್ದಾರೆ. ಈ ಲಿಪಿಕಾರರ ಚರಿತೆಯನ್ನು ಇಲ್ಲಿಯವರೆಗೂ ಸಮಗ್ರವಾಗಿ ಒಂದೆಡೆ ಕಟ್ಟಿಕೊಡುವ ಕಾರ್ಯವನ್ನು ಮಾಡಿಲ್ಲ. ಸದ್ಯ ಅಂತಹ ಒಂದು ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

**ಕಲಿಗಲ್ಲ ರಾಮಯ್ಯ**

*''ಸ್ವಸ್ತಿ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೭೩೫ ಪರಿವರ್ತಮಾನಕ್ಕೆ ಸಲ್ಲುವ ಪ್ಲವ ಸಂವತ್ಸರದ ಮಾಘ ಯೀಸು ೯ಲು ಗುರುವಾರದಲ್ಲು ಬರದು ಮುಗಿಸಿದ ಭಾರತದೊಳಗಣ ಶಾಂತಿಪರ್ವ ೧ಕ್ಕೆ ಆಶ್ರಮವಾಸಪರ್ವ ೧ಕ್ಕೆ ಅಶ್ವಮೇಧಪರ್ವ ೧ಕ್ಕೆ ಅಂತೂ ಪರ್ವ ೩ಕ್ಕೆ ಆಚಂದ್ರಾರ್ಕ ಮಸ್ತು..... ಶಂಬ್ಡೂರ ಸವಳನಾಡ ಮಾಗಣಿ ಕಲಿಗಲ್ಲಗ್ರಾಮ ಬೊಮ್ಮಯ್ಯನವರ ಮಗ ಬೆಮ್ಮಯ್ಯನ ತಮ್ಮ ದೇವಪ್ಪ ತುಂಬ್ರಿ ಕಲಿಗಲ್ಲ ರಾಮಯ್ಯನ ಬರಹ... ಯಿಕ್ಕೇರಿ ಶಿಮೆ ಬಾಳೆಹಳ್ಳಿ ಸಣ್ಣಯ್ಯನ ಮನೆಯಲ್ಲು ಬರೆದು ಮುಗಿಸಿದ್ದುಯಿ ಪುಸ್ತಕ''*೧

ಮೇಲಿನ ಉಲ್ಲೇಖದಿಂದ ಕಲಿಗಲ್ಲ ರಾಮಯ್ಯನ ಚರಿತೆಯನ್ನು ನಿರೂಪಿಸಬಹುದು. ಈತನು ಕಲಿಗಲ್ಲ ಗ್ರಾಮದವನಿದ್ದು, ಇದು ಸವಳನಾಡ ಮಾಗಣಿಗೆ ಸೇರಿದ್ದೆಂದೂ ಹೇಳಬಹುದು. ಸು. ೧೭೩೫ರಲ್ಲಿ ಕುಮಾರವ್ಯಾಸ ಭಾರತದ ಮೂರು ಪರ್ವಗಳನ್ನು ಬರೆದು ಮುಗಿಸಿದ್ದಾನೆ. ಅಂದರೆ ೧೮ನೆಯ ಶತಮಾನದ ಮಧ್ಯಭಾಗದಲ್ಲಿ ಈತ ಬದುಕಿದ್ದನೆಂದು ಊಹಿಸಲವಕಾಶವಿದೆ. ಈತನ ವಂಶಾವಳಿಯನ್ನು ಹೀಗೆ ಗುರುತಿಸಬಹುದು.

---

* ಪ್ರವಾಚಕ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ - ೫೮೩ ೨೭೬




ಹೆಚ್ಚಾಗಿ ಪ್ರಶಸ್ತಿಗಳಲ್ಲಿ ತಾಯಿಯ ಉಲ್ಲೇಖವೇ ಬರುವುದಿಲ್ಲ.

**ಶಾನಭೋಗ ಭೀಮರಾಯ**

*"ಸ್ವಸ್ತಿ ಶ್ರೀ ನೃಪ ಶಾಲಿವಾಹನ ಶಕೆ ೧೭೨೮ನೆಯ ಕ್ಷಯ ಸಂವತ್ಸರದ ಮಾಘಶುದ್ಧ ೧೦ ಬುಧವಾರ ಶುಭನಕ್ಷತ್ರ ದಿವಸದಲ್ಲಿ ಶತಕ (ಸೋಮೇಶ್ವರ) ಮುಗೀತು. ಪ್ರಿಯ ಪೂರ್ವಕದಿಂದ ಹುಬ್ಬಳ್ಳಿ ಪ್ರಭುನವರ ಚನ್ನ ಬಸಪ್ಪಗೆ ಅಣ್ಣಿಗೇರಿ ಕೆಳಗಿನ ಗ್ರಾಮ ಕೋಡಿ ಕೊಪ್ಪದ ಶಾನಭೋಗರಾದ ರಾ॥ ನರಸಪ್ಪನವರ ಸುಪುತ್ರನಾದ ರಾ॥ ಭೀಮರಾಯನ ಹಸ್ತಾಂತರ ಬರಹವಿದೆ.* *೨

ಈತನು ಅಣ್ಣಿಗೇರಿ ಸಮೀಪದ ಕೊಂಡಿಕೊಪ್ಪ ಗ್ರಾಮದ ಕ್ರಿ.ಶ ೧೭೨೮ರ ಶಾನಭೋಗ ನರಸಪ್ಪನವರ ಮಗ. ಈತನು ಹುಬ್ಬಳ್ಳಿಯ ಚನ್ನಬಸಪ್ಪನಿಗೆ ಪ್ರೀತಿಯಿಂದ ಸೋಮೇಶ್ವರ ಶತಕವನ್ನು ಬರೆದುಕೊಟ್ಟಿದ್ದಾನೆ. ಈತ ೧೭೪೩ರಲ್ಲಿ ಹಿರೇಮಠದ ಪುರಾಣಿಕ ಮಡಿವಾಳಯ್ಯನಿಗೆ ಪ್ರಭುಲಿಂಗಲೀಲೆಯನ್ನು ಬರೆದುಕೊಟ್ಟ ಬಗ್ಗೆ ಹಸ್ತಪ್ರತಿಯೊಂದರಲ್ಲಿ ಉಲ್ಲೇಖ ಸಿಗುತ್ತದೆ. *೩

**ರಾಯಣ್ಣ**

ಈತ ಚಂದ್ರಸಾಗರ (೧೮೦೦)ನ ಜಿನ ರಾಮಾಯಣವನ್ನು ಪ್ರತಿ ಮಾಡಿದ್ದಾನೆ. ಚಂದ್ರನಾಥಸ್ವಾಮಿ ಚೈತ್ಯಾಲಯದಲ್ಲಿ ಸು. ೧೮೯೭ರಲ್ಲಿ ಕಾವ್ಯವನ್ನು ತನಗಾಗಿ ಪ್ರತಿ ಮಾಡಿಕೊಂಡೆನೆಂದು ಹೇಳಿದ್ದಾನೆ. "ಅಮರಪ್ರವೀಣನಾದ ತೋವಿನಕೆರೆ ಬಸ್ತಿಯಿಂದ್ರ ವರ್ಗದ ನಾಗಪ್ಪನ ಕುಮಾರ ಪದ್ಮಣ್ಣ ಇವರ ಮಗ ರಾಯಣ್ಣ"ನೆಂದು ತನ್ನ ವಂಶಾವಳಿಯನ್ನು ಹೇಳಿ ಕೊಂಡಿದ್ದಾನೆ. *೪

**ನಾರಾಯಣ**

*"ಘಟ್ಟದ ಕೆಳಗಣ ಕೊಡೆಯಾಲದ ಹೋಬಳಿ ವೊಮಾಂಜೂರ ಮಾಗಣ ಸೇನಭೋಗ ಕೃಷ್ಣಯ್ಯ ಸೇನಭೋಗನ ಪುತ್ರ ರಾಮಯ್ಯ ಸೇನ ಭೋಗರ ಪುತ್ರ ಸೋಮನ ಮಗ ನಾರಾಯಣ"ನೆಂದು ಲಿಪಿಕಾರ ಹೇಳಿಕೊಂಡಿದ್ದಾನೆ. *೫ ಈತ ಕೊಪ್ಪದ ಸೀಮೆಯ ಬಲರಾಮಯ್ಯ ನಾಯ್ಕರ ಮಗ ಕಾಳನಾಯ್ಕರಿಗೆ ತೊರವೆರಾಮಾಯಣವನ್ನು ಬರೆದುಕೊಟ್ಟಿದ್ದಾನೆ.*

**ವಿರಕ್ತ ಅನ್ನದಾನದೇವ**

ಈತ ನೀಲಕಂಠ ನಾಗ ನಾಥಾಚಾರ್ಯರ 'ವೀರಮಾಹೇಶ್ವರಾಚಾರ ಸಂಗ್ರಹ'ವೆಂಬ ಕೃತಿಯನ್ನು ಆಚಾರ್ಯ ಚಿಕ್ಕೆಯದೇವಗೆ ಲಿಪಿ ಮಾಡಿಕೊಟ್ಟಿದ್ದಾನೆ. *"ಶಾಲಿವಾಹನ ಶಕ ಸಂದುದು ೧೫೪೮ ೩ವರುಷ ಸಂದು ವರ್ತಮಾನವಾದ ಶಾರ್ವರಿ ಸಂವತ್ಸರದ ಚೈತ್ರ ಮಾಸದ ಶುಕ್ಲ ಪಕ್ಷದ ರೇವತಿ ನಕ್ಷತ್ರದ ಶುದ್ಧ ದಶಮಿ ಶಶಿವಾರದಲ್ಲು ಬರದು"* ಎಂದು ಹೇಳಿಕೊಂಡಿದ್ದಾನೆ. *೬

ಹೀಗೆ ಕನ್ನಡ ಹಸ್ತಪ್ರತಿ ಲಿಪಿಕಾರರ ಬಗೆಗಿನ ವಿವರಗಳನ್ನು ಸಂಗ್ರಹಿಸುತ್ತಾ ಹೋಗಬಹುದು.

| ಸಂಖ್ಯೆ | ಲಿಪಿಕಾರನ ಹೆಸರು | ತಂದೆ/ತಾಯಿ | ಕಾಲ | ಸ್ಥಳ | ಪ್ರತಿಮಾಡಿದ ಕೃತಿ |
|---|---|---|---|---|---|
| ೧. | ತಿಮ್ಮಯ್ಯ | ವೆಂಕಟಯ್ಯ | – | ಕಟಿಗೆ ಪಟ್ಟಣ | ಅಕಾರಾದಿ ನಿಘಂಟು |
| ೨. | ಅನಂತ | ಸಂಣನಾರಾಯಣ | ೧೬೮೦ | ಪೆರದೂರು | ಆದಿತ್ಯ ಪುರಾಣ |
| ೩. | ಪುಟ್ಟಯ್ಯ | ಅಜ್ಜಪ್ಪ | ೧೭೯೯ | ಚಿಕ್ಕಬಸ್ತಿ | ಆದಿಪುರಾಣ |
| ೪. | ತಿರುಮಲಯ್ಯ | ವೆಂಕಪ್ಪಯ್ಯ | ೧೭೯೫ | ನಾಗಮಂಗಲ | ಆದಿಪುರಾಣ |
| ೫. | ಮಲ್ಲಣ್ಣ | ಮಾಣಿಕದೇವ | ೧೩೨೪ | ಮಂಟೂರು | ಆದಿಪುರಾಣ |
| ೬. | ಗಿರಿಯಪ್ಪ | ಹನುಮಂತರಾಯ | ? | – | ಕರ್ನಾಟಕ ಮಹಾಭಾರತ |
| ೭. | ಕೃಷ್ಣಯ್ಯ | ಮಹದೇವಯ್ಯ | – | ಉಪ್ಪಿನಕುದ್ರಾ | ಶಾಂತಿ ಪರ್ವ |
| ೮. | ರುದ್ರಪ್ಪ | – | ೧೭೭೧ | ಕುಪಟೂರು | – |
| ೯. | ಗರುಡಯ್ಯ | ಕಾಶೀಪತಯ್ಯ | ೧೭೩೬ | ಕಡಬ | ಜೈಮಿನಿಭಾರತ |
| ೧೦. | ದಾಸಪ್ಪ | ಲಿಂಗಪ್ಪ | – | ಕೈದಾಳ | ಪರಶುರಾಮ ರಾಮಾಯಣ |
| ೧೧. | ತಿಪ್ಪೀರಯ್ಯ | ಶಿವರುದ್ರಪ್ಪ | – | ಹಿರಿಯೂರು | ಪ್ರಭುಲಿಂಗಲೀಲೆ |
| ೧೨. | ಕರಿಯಪ್ಪ | ಸುಬ್ಬರಾಯಪ್ಪ | – | ದೊಡ್ಡಬಳ್ಳಾಪುರ (ತಾ) ಮದಗೊಂಡದಳ್ಳಿ | ಪ್ರಹ್ಲಾದ ಚರಿತ್ರೆ |
| ೧೩. | ವೆಂಕಟರಮಣ | ವೆಂಕಟದಾಸಯ್ಯ | ೧೭೬೩ | – | ರಾಜಶೇಖರವಿಳಾಸ |

ಕೆಲವು ಲಿಪಿಕಾರರು ತಮ್ಮ ಪರಿಚಯವನ್ನು ಹೇಳುವುದರ ಜೊತೆಗೆ ತಮ್ಮ ವೃತ್ತಿ, ಪ್ರವೃತ್ತಿ, ನಿಷ್ಠೆ, ವಿಧೇಯತೆ, ಪ್ರಾಮಾಣಿಕತೆಗಳನ್ನು ಸಹ ಮುಕ್ತವಾಗಿ ಹೇಳಿಕೊಂಡಿದ್ದಾರೆ. ಅವು ಇಂತಿವೆ:

*''ಯಿ ಬಸವ ಚರಿತ್ರಯಲ್ಲಿದೊ ತಿಳಿಯಲಿಲ್ಲವಾದರಿಂದ ಜಾಗ್ರತಯಾಗಿ ಬರದುಯಿದೇನ. ನಾನು ತಿದ್ದುವುದಕ್ಕ ಬರದ್ದ ಹೊರತು ನಾನು ಚಂನಾಗಿ ಬರಲಿಲ್ಲವಾದರಿಂದ ಬೈಯಲಾಗದು. ಯಾಕಂದರ ಪ್ರತಿಸಹ ಹಳಗನ್ನಡ. ಅದರಿಂದ ತಪ್ಪ ಬರದಿರ್ದಡಂ ವಪ್ಪದಿಂದೋದಿಕೊಳ್ಳುವುದು. ತಪ್ಪೆಂದು ಬೈದಡೆ ಆ ಪಾಪ ನಿಮನ್ನ ಕೂಡಿದು. ಪ್ರತಿಯಿದ್ದಹಾಗೆ ಬರದುಯಿದೇನು ಎಂದು ವೀರಣಗರ ದೊಡ್ಡಸುಬ್ಬಯ್ಯನ ಮೊಮ್ಮಗ ದೇವಯ್ಯನು ಹೇಳಿಕೊಂಡಿದ್ದಾನ.* *೨

ಇನ್ನೊಬ್ಬ ಲಿಪಿಕಾರನು ''ಪ್ರಾಗ್ನರುಗಳು ಪರಾಂಬರಿಸಿ ತಪ್ಪುಯಿದ್ದರೆ ಹಸ್ತದೋಷವಿದ್ದರೆ ಬೈಯಲಾಗದು ತಿದ್ದಿ ರಕ್ಷಿಸಬೇಕು'' ಎಂದು ಓದುಗರಲ್ಲಿ ವಿನಂತಿಸಿಕೊಂಡಿದ್ದಾನೆ. *೮ ಇಂಥ ಹೇಳಿಕೆಗಳನ್ನು ಗಮನಿಸಿದಾಗ ಲಿಪಿಕಾರರ ವಿಧೇಯತೆ, ಪ್ರಾಮಾಣಿಕತೆಗಳನ್ನು ಮೆಚ್ಚುವಂತಹುದಾಗಿವೆ.

ರಾಯಸದ ಭಾಗವತ ಕೃಷ್ಣಪ್ಪ, ಬೊಕ್ಕಸದ ನರಸಯ್ಯ, ಪಾರುಪತ್ಯಗಾರ ಸಿದ್ದಯ್ಯ, ಸುಂಕದ ದೇವಪ್ಪನ ಅಣ್ಣಪ್ಪ, ಟಂಕಸಾಲೆ ತಮ್ಮಿಸೆಟ್ಟಿ, ಉಗ್ರಾಣದ ಕರಣಿಕ ದೊಡ್ಡಯ್ಯ, ಹುಚ್ಚಯ್ಯ, ಅರಮನೆ ಲೇಖರಿ ದಾಸಪ್ಪ ಮುಂತಾದ ಲಿಪಿಕಾರರು ತಮ್ಮ ಹೆಸರಿನೊಂದಿಗೆ ತಾವು ಮಾಡುತ್ತಿದ್ದ ವೃತ್ತಿಯನ್ನು ಹೇಳಿಕೊಂಡಿದ್ದಾರೆ. ತಮ್ಮ ವೃತ್ತಿಯೊಂದಿಗೆ ಪ್ರತಿಮಾಡುವ ಕೆಲಸವನ್ನು ಮಾಡುತ್ತಿದ್ದರೆಂದು ಕಂಡುಬರುತ್ತದೆ. ಹಸ್ತಪ್ರತಿಗಳನ್ನು ಪ್ರತಿ ಮಾಡುವುದರ ಜೊತೆಗೆ, ಅವುಗಳನ್ನು ಸಂರಕ್ಷಿಸುವ ಜವಾಬ್ದಾರಿ ಅಷ್ಟೇ ದೊಡ್ಡದು. ಇಂಥ ಸಂರಕ್ಷಣೆಯ ಬಗೆಗೆ ಲಿಪಿಕಾರರು ತುಂಬ ಮನೋಜ್ಞವಾಗಿ ಹೇಳಿದ್ದಾರೆ. ಕೆಲವು ಉದಾಹರಣೆಗಳನ್ನು ಗಮನಿಸಬಹುದು.

*''ಪುಸ್ತಕಂ ವನಿತಾ ವಿತ್ತಂ ಪರಹಸ್ತ ಗತಂ ಗತಂ ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾ ಚ ಖಂಡಶ:''*

*''ತೈವಾದ್ರಕ್ಷೇತ್ ಜಲಾದ್ರಕ್ಷೇತ್ ರಕ್ಷೇತ್ ಶಿಥಿಲ ಬಂಧನಾತ್ ಮೂರ್ಖ ಹಸ್ತೆನ ದಾತವ್ಯ ಏವಂ ವದತಿ ಪುಸ್ತಕಂ*

ಇಂಥ ಹೇಳಿಕೆಗಳು ಹಸ್ತಪ್ರತಿ ಪ್ರಶಸ್ತಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ.

ಒಟ್ಟಿನಲ್ಲಿ ಡಾ ॥ ಎಂ.ಎಂ. ಕಲಬುರ್ಗಿಯವರು ಹೇಳುವಂತೆ ವೈವಿಧ್ಯಪೂರ್ಣ ಬರವಣಿಗೆಯನ್ನು ಕಲೆಯಾಗಿ ಬೆಳೆಸಿಕೊಂಡುಬಂದ ಕನ್ನಡಿಗರ ಕೈಯಿಂದ, ಸಾವಿರಾರು ಹಸ್ತಪ್ರತಿಗಳು ಜನ್ಮ ತಳೆದಿವೆ. ಒಟ್ಟು ಪ್ರತಿಯ ಮೇಲೆ ಕಣ್ಣಾಡಿಸಿದಾಗ ಲಿಪಿಕಾರನ ಭಾಷಾಜ್ಞಾನ, ಲಿಪಿಪರಿಣತಿ ಓರಣದ ಒಲವು, ಸೌಂದರ್ಯಪ್ರಜ್ಞೆಗಳೂ, ಕೆಲವೊಮ್ಮೆ ವ್ಯತಿರಿಕ್ತವಾದ ಗುಣಗಳು ಕಂಡುಬಂದು, ದೈಹಿಕವಾಗಿ ಗತಿಸಿಹೋದ ಲಿಪಿಕಾರರ ವ್ಯಕ್ತಿತ್ವ ಹಸ್ತಪ್ರತಿಯ ಮೂಲಕ ಗಂಭೀರ ಲಘು ಸ್ವಭಾವಗಳೆಲ್ಲ ವೇದ್ಯವಾಗುತ್ತವೆ. ಆದುದರಿಂದ ಒಂದರ್ಥದಲ್ಲಿ ಹಸ್ತಪ್ರತಿಗಳ ಅಭ್ಯಾಸವೆಂದರೆ ಪ್ರಾಚೀನ ಲಿಪಿಕಾರರ ಮನೋಧರ್ಮದ ಅಭ್ಯಾಸವೆನಿಸುತ್ತದೆ. *೯

ಇಂಥ ಉಪಯುಕ್ತವಾದ ಹಸ್ತ ಪ್ರತಿ ಪ್ರಶಸ್ತಿಗಳನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಕಾರ್ಯ ತುರ್ತಾಗಿ ಆಗಬೇಕಾಗಿದೆ. ಈ ನಿಟ್ಟಿನಲ್ಲಿ ಈಗಾಗಲೇ ಎಸ್. ಶಿವಣ್ಣನವರು 'ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು' ಎಂಬ ಗ್ರಂಥವನ್ನು ಸಂಪಾದಿಸಿ ಪ್ರಕಟಿಸುವುದರ ಮೂಲಕ ನಾಂದಿ ಹಾಡಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಶಾಸ್ತ್ರ ವಿಭಾಗವು ''ಸಮಗ್ರ ಕನ್ನಡ ಹಸ್ತಪ್ರತಿ ಪ್ರಶಸ್ತಿಗಳ ಸಂಗ್ರಹ ಪ್ರಕಟಣೆ, ಅಧ್ಯಯನ'' ಯೋಜನೆಯನ್ನು ಈಗ ಕೈಗೆತ್ತಿಕೊಂಡಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

* ಡಾ ॥ ಎಂ.ಎಂ. ಕಲಬುರ್ಗಿ, ಡಾ ॥ ಬಿ.ಕೆ. ಹಿರೇಮಠ, ಡಾ ॥ ಬಿ.ಆರ್. ಹಿರೇಮಠ ಅವರು ಈ ನಿಟ್ಟಿನಲ್ಲಿ ಅಧ್ಯಯನ ಮಾಡಿದ್ದಾರೆ.
*೧ ಕನ್ನಡ ಸಾಹಿತ್ಯ ಪರಿಷತ್ ಹಸ್ತಪ್ರತಿ ಸೂಚಿ ಸಂ. ೭೮
*೨. ಮೂರು ಸಾವಿರ ಮಠದ ಹಸ್ತಪ್ರತಿಗಳ ಸೂಚಿ ೩೭೨
*೩. ಅದೇ. ೧೯೪
*೪. ಮೈಸೂರು ವಿ.ವಿ. ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ ಸಂ. II ಪು. ೬೪
*೫ ಅದೇ, ಸಂ. II ಪು. ೧೪೧
*೬ ಅದೇ, ಸಂ. ಪೀಠಿಕೆ X
*೭. ಅದೇ, ಸಂ. III ೧೦೧೭
*೮ ಅದೇ, ಸಂ. VIII ೧೦೩
*೯. ಡಾ ॥ ಎಂ.ಎಂ. ಕಲಬುರ್ಗಿ., ಕನ್ನಡ ಗ್ರಂಥ ಸಂಪಾದನ ಶಾಸ್ತ್ರ, ಪು. ೬೧

ಜಯದೇವಪ್ಪ ಜೈನಕೇರಿ *

# ನ್ಯಾಮತಿಯ ಅಪೂರ್ವ ಗೋಸಾಸಗಳು-ಒಂದು ಹೊಸ ಶೋಧ

ಕರ್ನಾಟಕದಲ್ಲಿ ಶಿವಮೊಗ್ಗ, ಧಾರವಾಡ, ಬಿಜಾಪುರ, ಬೆಳಗಾಂ, ಕಾರವಾರಗಳಲ್ಲಿ ವಿಶೇಷವಾಗಿ ಕಂಡು ಬರುವ ಅಪೂರ್ವ ಶಿಲ್ಪ ಸಹಿತವಾದ ಗೋಸಾಸ ಶಾಸನಗಳು, ವಿಶಿಷ್ಟ ಆಕಾರದಿಂದಾಗಿ ಗಮನ ಸೆಳೆಯುತ್ತವೆ. ಇವುಗಳು ಗೋಸಾಸಶಿಲ್ಪಗಳೆಂದೂ, ಗೋಸಹಸ್ರ ದಾನದ ಶಾಸನಶಿಲ್ಪಗಳೆಂದೂ ಕರೆಯಲ್ಪಡುತ್ತಿವೆ. ಶಿವಮೊಗ್ಗ ಜಿಲ್ಲೆ, ನ್ಯಾಮತಿ(ಈಗ ದಾವಣಗೆರೆ ಜಿಲ್ಲೆ)ಯ ಬೇಡರಕೇರಿಯಲ್ಲಿ ಅನಾಥವಾಗಿ ಬಿದ್ದಿದ್ದ ಕಲ್ಲುಗಳ ಸಮೂಹವನ್ನು ನೋಡಿ ಸ್ಥಳೀಯರನ್ನು ವಿಚಾರಿಸಿದಾಗ, ಅವರು ಕರೇಕಲ್ಲು ಎಂದರು. ಅವುಗಳ ಫೋಟೋ ಹಾಗು ಶಾಸನದ ಪ್ರತಿ ತೆಗೆಯಲಾಯಿತು. ಅಕ್ಷರಗಳು ಕನ್ನಡ ಲಿಪಿಯಲ್ಲಿವೆ. ಪೂರ್ಣ ಕುಂಭ, ರಾಷ್ಟ್ರಕೂಟರ ಲಾಂಛನ ನೇಗಿಲು ಶಿಲ್ಪ ಕೆಳಭಾಗದಲ್ಲಿವೆ. ಲಿಪಿ ತೀರಾ ಹಾಳಾಗಿದ್ದು, ಓದಲು ಸಾಧ್ಯವಾಗಲಿಲ್ಲ. ಈ ರೀತಿಯ ಶಿಲ್ಪಗಳು ಕ್ರಿ.ಶ. ೭೫೩-೯೭೩ರ ವರೆಗೆ ಆಳಿದ ರಾಷ್ಟ್ರಕೂಟರ ಕಾಲದ ಗೋಸಹಸ್ರದಾನದ, ಗೋಸಾಸ ಶಿಲ್ಪಶಾಸನಗಳೆಂದು ಡಾ॥ ಸುಂದರ ಅವರಿಂದ ತಿಳಿದು ಬಂದಿತು.

ವಿಷ್ಣು ಮತ್ತು ಶಿವನ ಆರಾಧಕರಾಗಿದ್ದ ರಾಷ್ಟ್ರಕೂಟ ದೊರೆಗಳು ಮೂರ್ತಿ ಪೂಜಕರು. ಆ ಕಾಲದ ತಾಮ್ರ ಶಾಸನಗಳಲ್ಲಿ ಇಬ್ಬರ ಸ್ತುತಿಯೂ, ಉಲ್ಲೇಖಗಳೂ ಕಂಡು ಬರುತ್ತವೆ. ಗರುಡ ಮತ್ತು ಯೋಗಮುದ್ರೆಯ ಶಿವ ಇವರ ಮುದ್ರಿಕೆಗಳಲ್ಲಿ ಇವೆ.

ರಾಷ್ಟ್ರಕೂಟ ವಂಶದ ಮೂಲಪುರುಷ ದಂತಿದುರ್ಗ ಮಹಾರಾಜನು ಕ್ರಿ. ಶ. ೭೫೦ರಲ್ಲಿ ಉಜ್ಜಯಿನಿಗೆ ಹೋಗಿ ಹಿರಣ್ಯ ಗರ್ಭ ಮಹಾದಾನ ಮಾಡಿದನೆಂದು ತಿಳಿದು ಬರುತ್ತದೆ. ಮೊದಲನೇ ಕೃಷ್ಣನು ನಿರ್ಮಿಸಿದ ಕೈಲಾಸ ದೇವಾಲಯವು ಪರ್ವತದಲ್ಲಿ ಕೊರೆದು ಕೆತ್ತಿದ ವಿಶ್ವದ ಅದ್ಭುತಗಳಲ್ಲಿ ಒಂದಾಗಿದೆ. ಅವನು ರಾಜ್ಯಾದ್ಯಂತ ದೇವಾಲಯಗಳಿಗೆ ಅಪಾರವಾದ ದಾನದತ್ತಿ ನೀಡಿದ್ದನು. ವೈಭವಯುತ ಪೂಜಾ ಕಾರ್ಯಗಳು ನಿರಂತರವಾಗಿ ನಡೆಯುವಂತೆ ಏರ್ಪಾಡು ಮಾಡಿದ್ದಲ್ಲದೆ ವಿಶೇಷವಾಗಿ ಗೋಪೂಜೆಗೆ ಪ್ರಾಶಸ್ತ್ಯ ಕೊಟ್ಟಿದ್ದಾನೆ. ಕ್ರಿ. ಶ. ೯ನೇ ಶತಮಾನದ ರಾಷ್ಟ್ರಕೂಟರ ಮೂರನೇ ಗೋವಿಂದನ ಆಳ್ವಿಕೆಗೆ ಸೇರಿದ್ದ ಶಿವಮೊಗ್ಗ ಜಿಲ್ಲೆಯ, ಮಾದವಳ್ಳಿಯಲ್ಲಿನ ಶಿಲ್ಪಫಲಕಗಳನ್ನು ಈ ಸಂದರ್ಭಕ್ಕೆ ಸ್ಮರಿಸಬಹುದು.

**ಗೋದಾನ ವಿಧಿ :** ಗೋಸಾಸ ಎಂಬುದು ಸಂಸ್ಕೃತದ ಗೋಸಹಸ್ರದ ತದ್ಭವ ರೂಪ. ಷೋಡಶ ದಾನಗಳಲ್ಲಿ ಗೋದಾನವೂ ಸಹ ಒಂದಾಗಿದೆ. ಮತ್ಸ್ಯಪುರಾಣದಲ್ಲಿ ಇದರ ಉಲ್ಲೇಖವಿದೆ. ಗೋಸಾಸವು ಗೋದಾನದ ಸಂಕೇತವಾಗಿದೆ. ಇದು ಹಿಂದೆ ನಡೆದ ಒಂದು ಸಾವಿರಗೋವುಗಳ ದಾನದ ಪ್ರಕ್ರಿಯೆ. ಧಾರ್ಮಿಕ ವಿಧಿಯಂತೆ ಗೋದಾನ ಮಾಡುವವನು ಮೂರು ದಿನಗಳ ಕಾಲ ಕೇವಲ ಹಾಲನ್ನು ಸೇವಿಸಬೇಕು. ನಂತರ ದೇಹಶುದ್ಧಿಗೆ ಪುಣ್ಯಾಹವಾಚನ ವಿರುತ್ತದೆ. ಒಂದು ಎತ್ತಿನ ದೇಹಕ್ಕೆ ಗಂಧವನ್ನು ಲೇಪಿಸಿ ಗೋದಾನ ಮಾಡುವ ವೇದಿಕೆಯ ಮೇಲೆ ನಿಲ್ಲಿಸಬೇಕು. ಸಾವಿರ ಗೋವುಗಳಲ್ಲಿ ಹತ್ತನ್ನು ಆಯ್ದುಕೊಂಡು ರೇಷ್ಮೆ ವಸ್ತ್ರದಿಂದ ಅಲಂಕರಿಸಿ ಮಂಟಪಕ್ಕೆ ತರಬೇಕು. ದಾನಿಯು ಪರಿಶುದ್ಧನಾಗಿ ಬಂಗಾರದ ನಂದಿಯೊಂದಿಗೆ ಎರಡು ಗೋವುಗಳನ್ನು ಮೊದಲು ಗುರುವಿಗೆ ದಾನ ಮಾಡಬೇಕು. ಎಂಟು ಆಕಳನ್ನು ಎಂಟು ಪುರೋಹಿತರಿಗೂ ಉಳಿದ ೯೯೦ನ್ನು ಐದು ಅಥವಾ ಹತ್ತು ಆಕಳುಗಳಂತೆ ಬ್ರಾಹ್ಮಣರಿಗೆ ದಾನ ಮಾಡಬೇಕೆಂದು ಹೇಳಲಾಗಿದೆ. ದಾನಿಯು ಬ್ರಾಹ್ಮಣನೇ ಆಗಿರಬೇಕೆಂಬ ನಿಯಮವಿಲ್ಲ.

**ಚಾರಿತ್ರಿಕ ಹಿನ್ನೆಲೆ :** ಗೋಸಾಸಗಳ ಇತಿಹಾಸವನ್ನು ಡಾ॥ ಫ್ಲೀಟ್, ಡಾ॥ ಎಂ. ಎಂ. ಕಲಬುರ್ಗಿ ಮತ್ತು ಡಾ॥ ಭೋಜರಾಜ ಪಾಟೀಲರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಡಾ॥ ಪಿ. ವಿ. ಕಾಣೆಯವರ ಹಿಸ್ಟರಿ ಆಫ್ ಧರ್ಮಶಾಸ್ತ್ರ ಎಂಬ

* ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತಿ ಎದುರು, ಶಿವಮೊಗ್ಗ - ೫೭೭ ೨೦೧

ಗ್ರಂಥದಲ್ಲಿಯೂ ಇದರ ವಿವರಣೆಯಿದೆ. ಡಾ ||ಕಲಬುರ್ಗಿಯವರು ಈವರೆಗೆ ೩೨ ಗೋಸಾಸಗಳನ್ನು ಗುರುತಿಸಿ ವಿವರಣೆ ನೀಡಿದ್ದಾರೆ. ಗೋಸಾಸಗಳು ಬಾದಾಮಿ ಚಾಲುಕ್ಯರ ಆಡಳಿತದ ಕೊನೆಗಾಲದಲ್ಲಿ ಆರಂಭವಾಗಿ ರಾಷ್ಟ್ರಕೂಟರು ಹಾಗೂ ಕಲ್ಯಾಣಿ ಚಾಲುಕ್ಯರವರೆಗೆ ಒಂಬತ್ತರಿಂದ ಹನ್ನೊಂದನೇ ಶತಮಾನದವರೆಗೂ ಕಂಡು ಬಂದಿವೆ.





**ಸಮುದಾಯ ಶಿಲ್ಪ :** ಗೋಸಾಸಗಳು ಸಾಮಾನ್ಯವಾಗಿ ಗುಂಪುಗುಂಪಾಗಿರುತ್ತವೆ.* ಶಿವಮೊಗ್ಗ ಜಿಲ್ಲೆಯ ಬಂದಣಿಕೆ ಸಮೀಪದ ಮುತ್ತಳ್ಳಿಯಲ್ಲಿ ೩೦ ಗೋಸಾಸಗಳ ಒಂದುಗುಂಪಿದೆ. ಇವುಗಳಲ್ಲಿ ೭ರಲ್ಲಿ ಶಾಸನವಿದೆ. ಇದರ ಸಮೀಪದ ಕರಿನಲ್ಲಿಯಲ್ಲಿ ೧೦ ಗೋಸಾಸಗಳು ಹಾರೋಮುಚಡಿಯಲ್ಲಿ ೯ ಗೋಸಾಸಗಳಿವೆ. ಇವುಗಳಲ್ಲಿ ಶಾಸನವಿಲ್ಲ. ಸೊರಬ ತಾಲ್ಲೂಕಿನ ಬಾರಂಗಿಯ ಬಳರಿ ದೇವಾಲಯದ ದಿನ್ನೆಯಲ್ಲಿ ೧೫ ಗೋಸಾಸ ಕಂಬಗಳಿದ್ದು, ಒಂದರಲ್ಲಿ ಶಾಸನವಿದೆ. ಮುತ್ತಳ್ಳಿಯಲ್ಲಿಗೋಸಾಸಗಳ ದೊಡ್ಡ ಸಮೂಹವೇ ಇದೆ ಎಂದು ತಿಳಿದು ಬಂದಿದೆ. ಕುಪಟೂರಿನ ಸವಕ್ಕನ ಮಗ, ಚಟ್ಟ ಮುತ್ತಳ್ಳಿಯ ಗುಪ್ಪಸೇನ ಎಂಬ ಹೆಸರು ಶಾಸನದಲ್ಲಿದೆ. ಮುತ್ತಳ್ಳಿಯ ಗೋಸಾಸದಲ್ಲಿ ದೇವೇಂದ್ರಸೇನ ಪಂಡಿತರು ಧರ್ಮರಾಜ್ಯವಾಳೆ ಎಂದಿದ್ದು ಬಹುಶಃ ಇದರಲ್ಲಿ ಜೈನರೂ ಪಾಲ್ಗೊಂಡಂತೆ ತಿಳಿದು ಬರುತ್ತದೆ.

**ಶಿಲ್ಪ ವಿನ್ಯಾಸ :** ಗೋಸಾಸಗಳು ಶಿಲೆಯ ಕಂಬದ ಆಕಾರದಲ್ಲಿವೆ. ಕೆಲವು ಶಾಸನಗಳಲ್ಲಿ 'ಮೇಂಟೆ' ಎಂಬ ಶಬ್ದವಿದೆ. ಮೇಲುಭಾಗ ಕಮಾನಿನಂತೆ ಅರ್ಧವರ್ತುಲಾಕಾರವಾಗಿದೆ. ಇವುಗಳಲ್ಲಿ ಆನೆ, ಎತ್ತು, ಹಂಸ, ಮೀನು, ಶಿವಲಿಂಗ ಅಥವಾ, ಗಣಪತಿ ಮತ್ತು ಸೂರ್ಯನ ಉಬ್ಬು ಶಿಲ್ಪಗಳಿವೆ. ಮತ್ತಳ್ಳಿಯ ಗೋಸಾಸದಲ್ಲಿ ಕಳಶ, ನಂದಿ, ಕುದುರೆ ಮತ್ತು ಆನೆಯ ಉಬ್ಬು ಶಿಲ್ಪಗಳಿವೆ.

**ಐತಿಹಾಸಿಕ ಹಿನ್ನೆಲೆ:** ನ್ಯಾಮತಿಯ ಕ್ರಿ.ಶ ಸು. ೯-೧೧ನೇ ಶತಮಾನದಲ್ಲಿ ರಾಷ್ಟ್ರಕೂಟರಕಾಲದಲ್ಲಿ ನೆಲವತ್ತಿ, ನಲವತ್ತು ಅಗ್ರಹಾರ ಎಂದು ಹೆಸರು ಪಡೆದ ಬಗ್ಗೆ ಇಲ್ಲಿನ ಶಾಸನಗಳು ಸೂಚಿಸಿವೆ. ಈ ಕಾಲದ ನಂದಿ ಮತ್ತು ಶಿಲಾಸ್ತಂಭದ ದೇವಾಲಯವಿಲ್ಲಿದೆ. ರಾಷ್ಟ್ರಕೂಟರ ಎರಡನೇ ಕೃಷ್ಣನ ಕಾಲದಲ್ಲಿ ಕಟ್ಟಿರಬಹುದಾದ ಸುಂದರವಾದ ಜಿನ ಬಸದಿಯಿದೆ. ತ್ರಿಕೂಟ ವಿನ್ಯಾಸದ ಈ ಬಸದಿಯ ಸ್ತಂಭಗಳು ಮನೋಹಕವಾಗಿವೆ. ಶಿಖರವೂ ಸಹ ಆಕರ್ಷಕವಾಗಿದೆ. ಅಪರೂಪದ ಬೊಂತೆಯಮ್ಮನ ಶಿಲ್ಪವಿಲ್ಲಿದೆ. ಬೆಳಗುತ್ತಿಯಲ್ಲಿ ಆಳುತ್ತಿದ್ದ ಬಂದರ ದೊರೆಗೂ ಯಾದವರ ಸೇನಾಪತಿ ಶ್ರೀಧರನಿಗೂ ನ್ಯಾಮತಿಯಲ್ಲಿ ಯುದ್ಧವು ನಡೆದು ಬೆಳಗುತ್ತಿಯ ಅರಸನು ಮರಣ ಹೊಂದಿದ ಸಂಗತಿ

* ಉತ್ತರ ಕನ್ನಡ ಜಿಲ್ಲೆಯ ಬಳಿಯ ಎಸಳೆ ಗ್ರಾಮದ ಈಶ್ವರ ಗುಡಿಯ ಬಳಿ ಇದೇ ಬಗೆಯ ಸಮುದಾಯ ಗೋಸಾಸ ಶಿಲ್ಪ ಸ್ತಂಭಗಳನ್ನು ಹೋಲುವ 'ದಿಬ್ಬಣಕಲ್ಲು'ಗಳೆಂದೂ ಕರೆಯಲ್ಪಡುವ ೧೧ನೇ ಶತಮಾನದ ಶಾಸನೋಕ್ತ ಶಿಲ್ಪ ಸ್ತಂಭಗಳಿವೆ. ನೋಡಿ ಶಾಸನಶಿಲ್ಪಗಳು, ಪುಟ ೩೧-೩೨ ಮತ್ತು ಚಿತ್ರ - ಸಂ.

ಇದೆ. ವಿಜಯನಗರ ಕಾಲದಲ್ಲಿ ನ್ಯಾಮತಿಯು ಅಡಿಕೆ, ಬೆಲ್ಲ ಮತ್ತು ಸೇಂಗಾ ವ್ಯಾಪಾರದ ದೊಡ್ಡ ವಾಣಿಜ್ಯ ಕೇಂದ್ರವಾಗಿತ್ತು. ಇದು ಜೈನ ಧಾರ್ಮಿಕ ಕೇಂದ್ರವಾಗಿಯೂ ಪ್ರಸಿದ್ಧಿ ಪಡೆದಿತ್ತು. ಪ್ರಸ್ತುತ ದೊರೆತಿರುವ ಗೋಸಾಸಗಳು ಇತಿಹಾಸಕ್ಕೆ ಲಭ್ಯವಾದ ಅಮೂಲ್ಯ ಕೊಡುಗೆಯಾಗಿವೆ.

ಸದ್ಯ ನ್ಯಾಮತಿಯಲ್ಲಿ ಏಳು ಗೋಸಾಸಗಳ ಸಮುದಾಯ ವಿದೆ. ಮತ್ತು ಒಂದು ಒರೆಗಲ್ಲು ಸಹ ಇದೆ. ಈ ಶಿಲ್ಪಗಳು ಸುಮಾರು ಒಂಬತ್ತನೇ ಶತಮಾನದ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ್ದು, ಒಂದರಲ್ಲಿ ಇವರ ಲಾಂಛನವಾದ ನೇಗಿಲಿನ ಚಿತ್ರವಿದೆ. ಗೋಸಾಸಗಳ ಅಳತೆಗಳು ಮುಂದಿನಂತಿವೆ.

| | ಎತ್ತರ | ಅಗಲ | ಸುತ್ತಳತೆ | ಚಿತ್ರ |
|---|---|---|---|---|
| ೧ | ೫ ಅಡಿ | ೧ಅ ೧೦ಅಂ | ೪ ಅ ೬ಅಂ | ನೇಗಿಲು |
| ೨ | ೩ ಅ ೪ಅಂ | ೧ಅ ೧ಅಂ | ೨ ಅ ೧೦ಅಂ | ಪೂರ್ಣಕುಂಭ |
| ೩ | ೩ ಅ ೬ ಅಂ | ೯ ಅಂ | ೧ ಅ ೧೧ ಅಂ | - |
| ೪ | ೪ ಅ ೩ ಅಂ | ೧ ಅ ೧೧ ಅಂ | ೪ ಅ ೧೦ ಅಂ | ಶಾಸನವಿದೆ |
| ೫ | ೪ ಅ ೪ಅಂ | ೧ ಅ ೧೦ಅಂ | ೪ ಅ ೯ ಅಂ | - |
| ೬ | ೩ ಅ ೪ ಅಂ | ೧ ಅ ೮ ಅಂ | ೪ ಅ ೧೦ ಅಂ | ಸೂರ್ಯ - ನೇಗಿಲು |
| ೭ | ೪ ಅ ೮ ಅಂ | ೧ ಅ ೦೫ ಅಂ | ೩ ಅ ೧೧ ಅಂ | ಸೂರ್ಯ- ನೇಗಿಲು |

ಕರ್ನಾಟಕದಲ್ಲಿ ಇದುವರೆಗೆ ಪ್ರಕಟವಾಗಿರುವ ೩೨ ಗೋಸಾಸಗಳಲ್ಲಿ ಸದ್ಯ ಶೋಧಿಸಿರುವ ಇವು ಸೇರಿಲ್ಲ, ಇದರ ಸಮೀಪದಲ್ಲಿ ಇನ್ನೊಂದು ಅಪೂರ್ವ ಗೋಸಾಸವು ಒಂಟಿಯಾಗಿ ಬಿದ್ದಿದೆ. ತುರ್ತಾಗಿ ರಕ್ಷಿಸಲ್ಪಡಬೇಕಾದ ಇವುಗಳು ಸರಿಯಾದ ರಕ್ಷಣೆ ಇಲ್ಲದೆ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ.

(ಈ ದಿಸೆಯ ಕ್ಷೇತ್ರ ಕಾರ್ಯದಲ್ಲಿ ಶ್ರೀ ಸಿದ್ದಯ್ಯ ಹಿರೇಮಠ, ಶ್ರೀ ಬಿ.ಎಸ್. ರಾಮಭಟ್ಟರು ಜೊತೆಯಿದ್ದು ಶ್ರೀ ಸಾಮಗ ಅವರು ಶಾಸನದ ನಕಲು ತೆಗೆಯಲು ನೆರವಾದರು.)

## ಆಕರಗಳು

*೧. ಡಾ॥ ಎಂ.ಎಂ. ಕಲಬುರ್ಗಿ; ಐತಿಹಾಸಿಕ, ಬೆಂಗಳೂರು, ೧೯೯೧
*೨. ಡಾ॥ ಭೋಜರಾಜ ಪಾಟೀಲ್, ನಾಗರ ಕಂಡ ೭೦
*೩. ಕರ್ನಾಟಕ ವಿಷಯ ವಿಶ್ವಕೋಶ

ಡಾ॥ ಕೆ.ಬಿ. ಸುದರ್ಶನ್*

# ಉತ್ತರ ಕನ್ನಡ ಜಿಲ್ಲೆಯ ಸೂರ್ಯ ಮೂರ್ತಿಗಳ ವೈಶಿಷ್ಟ್ಯಗಳು

ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸೂರ್ಯಾರಾಧನೆಯು ಜನಪ್ರಿಯವಾಗಿತ್ತು. ಅಲ್ಲಿನ ಸೂರ್ಯಮೂರ್ತಿಯ ಲಕ್ಷಣಗಳು ವೈಶಿಷ್ಟ್ಯಪೂರ್ಣವಾಗಿವೆ.

ಕರಾವಳಿ ಕರ್ನಾಟಕದ ದಕ್ಷಿಣದಲ್ಲಿ ಕುಂಭಕಾಶಿ, ಬೈಂದೂರು, ಬಾರಕೂರು, ಮರೋಳಿ, ಮುಂತಾದವುಗಳಲ್ಲಿ ಸೂರ್ಯ ಮಂದಿರಗಳಿವೆ. ಬೈಂದೂರಿನ ಸೂರ್ಯಶಿಲ್ಪ ಪ್ರಸಿದ್ಧವಾದುದು,

ಉತ್ತರಕನ್ನಡ ಜಿಲ್ಲೆಯಲ್ಲಿ, ನಾಲ್ಕೈದು ಸೂರ್ಯ ಮೂರ್ತಿಗಳು ಕಂಡು ಬಂದಿವೆ. ಕವಂಚೂರಿನ ಸೂರ್ಯ ಮೂರ್ತಿಯು, ಎಲ್ಲಾ ಶೈಲಿಗಳ ಸಂಗಮವಾಗಿದ್ದರೆ, ರಾಯಪಟ್ನದ ಸೂರ್ಯಕಿರೀಟವು ರೇಖಾನಾಗರ ಶೈಲಿಯಲ್ಲಿದೆ. ಕಾವಲವಾಡದ ಸೂರ್ಯ ಪ್ರತಿಮೆಯು, ಸ್ಥಳೀಯ ಶೈಲಿಗೆ ಅನುವು ಮಾಡಿ ಕೊಟ್ಟಿದ್ದರೆ, ಬನವಾಸಿಯ ಸೂರ್ಯ, ಸ್ಥಳೀಯ ಹಾಗೂ ಕಲ್ಯಾಣ ಚಾಲುಕ್ಯರ ಶೈಲಿಯನ್ನು ಅನುಕರಿಸಿದೆ.

**ಕವಂಚೂರಿನ ಸೂರ್ಯಶಿಲ್ಪ ( ಸಿದ್ದಾಪುರ ತಾ॥ )***೧: ಶಿರಸ್ಸಿನ ಚಕ್ರವಿಲ್ಲದ, ಜಟಾ ಮತ್ತು ಕರಂಡಮುಕುಟಶೈಲಿ ಮಿಶ್ರಿತ ವಾಗಿರುವ, ತ್ರಿಕೋಣಾಕೃತಿಯ ಕಿರೀಟವನ್ನು ಹೊಂದಿರುವ ಕವಂಚೂರಿನ ಸೂರ್ಯಮೂರ್ತಿಯು, ವಿಶಿಷ್ಟವಾದುದಾಗಿದೆ. ಇದು ಚೋಳ, ಬಾದಾಮಿ ಹಾಗೂ ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳರ ಶೈಲಿಯ ಸಂಗಮವೆಂದರೆ ಬಹುಶಃ ಅತಿಶಯೋಕ್ತಿ ಎನಿಸದು. ಬಾದಾಮಿ ಚಾಲುಕ್ಯರಲ್ಲಿಯಂತೆ ಇಲ್ಲಿನ ಸೂರ್ಯನಿಗೆ, ನಾಲ್ಕು-ನಾಲ್ಕು ಕೈಗಳು ಎರಡೂ ಬದಿಯಲ್ಲಿವೆ. ಡಾ॥ ಶ್ರೀನಿವಾಸ ಪಾಡಿಗಾರ್‌ರವರು, ಬಾದಾಮಿಯಲ್ಲಿರುವ ಅರಳೀತೀರ್ಥದ ಬಿಂಬದಲ್ಲಿ, ಇಂತಹುದೇ ಶೈಲಿಯನ್ನು ಗುರುತಿಸಿದ್ದಾರೆ. ಅದಕ್ಕೂ ಎಂಟು ಕೈಗಳು. ಮೊದಲ ಎರಡು ಕೈಗಳಲ್ಲಿ ಕಮಲಗಳಿವೆ. ಉಳಿದ ಕೈಗಳಲ್ಲಿ ವಿವಿಧ ಆಯುಧಗಳು ಇವೆ. ಶಿವ, ವಿಷ್ಣು, ಸೂರ್ಯ ಒಂದೇ ಕಡೇ ತರಲ್ಪಟ್ಟು, ಇದನ್ನು ತ್ರೈಪುರುಷ ಕಲ್ಪನೆ ಎಂದು ಹೇಳಲಾಗಿದೆ. ಕವಂಚೂರಿನ ಸೂರ್ಯನಿಗೂ ಹೀಗೆಯೇ ಕಮಲ ಹಾಗು ಆಯುಧ ಧಾರಣೆ ಇದೆ. ಮುಖ ಭಗ್ನವಾಗಿದೆ. ಮೊದಲ ಎರಡು ಕೈಗಳಲ್ಲಿರುವ, ತ್ರಿಕೋಣಾಕೃತಿಯ ಕಮಲವು ಹಾಗೂ ಸಣ್ಣದಂಟು, ಗಂಗರ ಶೈಲಿಯನ್ನು ವ್ಯಕ್ತಪಡಿಸುತ್ತದೆ. (ಮಣ್ಣೆ, ನೆಲಮಂಗಲ ತಾ.) ಎರಡೂ ಕೈಗಳ ಬಾಹುಗಳನ್ನು ಹೊಂದಿ, ವಿಶಾಲ ಎದೆ, ಕಂಠಾಭರಣ, ಉಪವೀತ, ಕಟೀಬಂಧ ಇವುಗಳು ಮಣಿ ಖಚಿತವಾಗಿ ಹಾಗೂ ಕಟೀವಸ್ತ್ರವು ಎರಡೂ ಕಡೆ ಇಳಿ ಬಿದ್ದಿರುವ ಶೈಲಿಯನ್ನು ಗುರುತಿಸಿದಾಗ, ಚೋಳರ ಶೈಲಿಗೆ ಸಂಬಂಧಿಸಿದ್ದು ಎಂದು ಹೇಳಬಹುದು. (ಉದಾ: ತಗಡೂರು ಮತ್ತು ಕೊಳ್ಳೇಗಾಲದ ಸೂರ್ಯಮೂರ್ತಿಗಳು)

ಆಭರಣಗಳು, ಕಲ್ಯಾಣೀ ಚಾಲುಕ್ಯರ ಶೈಲಿಯದಾಗಿವೆ. ಸಾಮಾನ್ಯವಾಗಿ, ಉಷೆ ಹಾಗೂ ಪ್ರತ್ಯುಷೆಯರು ಮೂರ್ತಿಯ ಕೆಳಭಾಗದಲ್ಲಿರುವುದು ವಾಡಿಕೆ. ಆದರೆ ಈ ಶಿಲ್ಪದಲ್ಲಿ ಇವರಿಬ್ಬರೂ ಕಟೀ ಭಾಗಕ್ಕೆ, ಸಮನಾಗಿ, ಅದೂ ಸಮೀಪದಲ್ಲಿಯೇ ನಿಂತಿರುವುದು ವೈಶಿಷ್ಟ್ಯ. ಇವರದು ಕ್ರಿಯಾಭಂಗಿ. ಏಕಾಗ್ರಚಿತ್ತದ ಉಷೆಯು ಬಾಣವನ್ನು ಎಸೆಯಲು ಸಿದ್ಧಳಾಗಿ ನಿಂತಿದ್ದರೆ ಪ್ರತ್ಯುಷೆಯು ಬಾಣವನ್ನು ಬಿಟ್ಟು ನಂತರ ವಿಶ್ರಾಂತಿ ಭಂಗಿಯಲ್ಲಿರುವಂತೆ ಚಿತ್ರಿತಳಾಗಿದ್ದಾಳೆ. ಇಂಥದೇ ಉಷೆಯ ಶೈಲಿಯನ್ನು ಹಳೇಬೀಡಿನ ಹೊಯ್ಸಳೇಶ್ವರ ದೇವಸ್ಥಾನದ, ಪೂರ್ವ ಬದಿಯ ಹೊರಭಿತ್ತಿಯಲ್ಲಿ ಕಾಣಬಹುದು. ಆದರೆ ಪ್ರತ್ಯುಷೆಯ ಮುಖವು ಭಗ್ನವಾಗಿದೆ. ಇಲ್ಲಿ ಅದೇ ಹೊಯ್ಸಳ ಶೈಲಿಯಲ್ಲಿ ಉಷಾ ಹಾಗು ಪ್ರತ್ಯುಷೆಯರು ಸ್ಪಷ್ಟವಾಗಿ ಕಾಣುತ್ತಾರೆ. ಇವರಿಬ್ಬರ, ಸಮೀಪದಲ್ಲಿಯೇ, ಚಾಮರ ಧಾರಿಣೆಯರು ನಿಂತಿರುವುದು ಸಾಮಾನ್ಯ ಲಕ್ಷಣ. ಆದರೆ, ಇಲ್ಲಿ ಚಾಮರ ಧಾರಿಣೆಯರ ಬದಲು, ಕೇವಲ ಚಾಮರಗಳು, ಯಾವ ಆಶ್ರಯವೂ ಇಲ್ಲದೆ, ಉಷಾ ಹಾಗು ಪ್ರತ್ಯುಷೆಯರ ಮೇಲೆ ಗಾಳಿಯಲ್ಲಿ ತೇಲಾಡುತ್ತಿರುವುದನ್ನು ಕಾಣುತ್ತೇವೆ. ಸೂರ್ಯನನ್ನು ಬಾದಾಮೀ ಚಾಲುಕ್ಯರ ಕಾಲದಲ್ಲಿ, ತ್ರೈಪುರುಷ ಎಂದು ಹೇಳಿ, ಶಿವ ಹಾಗೂ ವಿಷ್ಣು ವಿನೊಡನೆ ಗುರುತಿಸುತ್ತಿದ್ದರು. ಇಲ್ಲಿ ಸೂರ್ಯನೊಡನೆ ವಾಯುವನ್ನು ಗುರುತಿಸಬಹುದು.

---

* ಪ್ರಾಧ್ಯಾಪಕರು, ವಿ.ವಿ.ಪುರಂ ಕಲೆ ಮತ್ತು ವಾಣಿಜ್ಯ ಕಾಲೇಜು, ಬೆಂಗಳೂರು - ೫೬೦ ೦೦೪

ಈ ಸಿದ್ಧಾಂತವನ್ನು ಚಿಹ್ನಾರ್ಥಕವಾಗಿ ಚಾಮರರೂಪದಲ್ಲಿ ಪ್ರತಿನಿಧಿಸಿರುವಂತಿದೆ.

**ರಾಯಪಟ್ನದ ಎರಡು ಸೂರ್ಯನ ಶಿಲ್ಪಗಳು ( ಹಳಿಯಾಳ್ ತಾ ॥ )***೨: ಇಲ್ಲಿ ದೊರೆತ ಸೂರ್ಯ ಮೂರ್ತಿ ಮೂರು ಚೂರಾಗಿದೆ. ಗ್ಯಾಜೆಟಿಯರ್ ಇಲಾಖೆಯವರು, ಈ ಮೂರ್ತಿಯನ್ನು ಹಳಿಯಾಲ ತಹಸೀಲ್ದಾರರ ಕಛೇರಿಗೆ ಮುಟ್ಟಿಸಿದ್ದಾರೆ. ಅದನ್ನು ಜೋಡಿಸಿ ಭಾವಚಿತ್ರವನ್ನು ಪಡೆಯಲಾಗಿದೆ.

ಈ ರಾಯಪಟ್ನದ ಸೂರ್ಯನ ಕಿರೀಟವು ಕರಂಡ ಅಥವಾ ಜಟಾಮುಕುಟದಂತಿರದೆ, ಬಾದಾಮೀ ಚಾಲುಕ್ಯರ ಕಾಲದ ರೇಖಾನಾಗರ ಶೈಲಿಯನ್ನು ಹೋಲುತ್ತದೆ. ಇಂಥ ಶೈಲಿಯಲ್ಲಿ ಕಲಾತಂತ್ರ ಮತ್ತು ನೈಜತೆಯು ಪ್ರತಿಬಿಂಬಿಸಿ, ಸ್ಪಷ್ಟತೆ ಕಾಣುತ್ತದೆ. ಉದ್ದನೆಯ ಕಿರೀಟಕ್ಕೆ ಮುಖವು ಸಣ್ಣದಾಗಿದ್ದು, ಕಿರೀಟದ ಭಾರಕ್ಕೆ ಮುಖವು ಸ್ವಲ್ಪ ಕೆಳಕ್ಕೆ ವಾಲಿದಂತಿದೆ. ಸಾಮಾನ್ಯವಾಗಿ, ಸೂರ್ಯನ ಪಾದವನ್ನು ಚಿತ್ರಿಸುವುದಿಲ್ಲ. ಆದರೆ, ಇಲ್ಲಿ ಪಾದ ಮತ್ತು ಬೆರಳುಗಳು ಸ್ಪಷ್ಟವಾಗಿ ಕಾಣುತ್ತಿದ್ದು, ಇಡೀ ದೇಹದ ಭಾರವು ಪಾದದ ಬೆರಳುಗಳ ಮೇಲೆ ಕೇಂದ್ರೀಕೃತವಾಗಿರುವುದು, ಈ ಮೂರ್ತಿಯ ವೈಶಿಷ್ಟ್ಯ. ರೇಖಾನಾಗರ ಶೈಲಿಯಲ್ಲಿರುವ ಕಿರೀಟಕ್ಕೆ ಕೊಟ್ಟಿರುವ ಪ್ರಾಮುಖ್ಯವನ್ನು ಉಳಿದ ಭಾಗಕ್ಕೆ ಕೊಟ್ಟಂತಿಲ್ಲ, ಉದ್ದನೆಯ ಹಾರ, ಕಟೀವಸ್ತ್ರ ಇವುಗಳು ಕಲ್ಯಾಣಿ ಚಾಲುಕ್ಯರ ಶೈಲಿಯಾದರೂ, ಎಲ್ಲವೂ ಸೇರಿ ಕಚ್ಚೆಯನ್ನು ಧರಿಸಿದಂತೆ ಕಾಣಿಸುತ್ತಿರುವ, ಸ್ಥಳೀಯ ಶೈಲಿಯು ವೈಶಿಷ್ಟ್ಯ ಪೂರ್ಣವಾಗಿದೆ. ದ್ವಿಭಂಗದಲ್ಲಿರುವ ಪ್ರತ್ಯೂಷೆ, ಏಳು ಕುದುರೆಗಳು, ಇವೆಲ್ಲವೂ ಕೇವಲ ಸಾಂಕೇತಿಕವಾಗಿವೆ.

ಇಲ್ಲಿನ ಕಂಬದಲ್ಲಿ ಸೂರ್ಯನ ಅಪರೂಪದ ಉಬ್ಬುಶಿಲ್ಪವೊಂದಿದೆ. ಕಡಿವಾಣವನ್ನು ಹಿಡಿದು, ಸೂರ್ಯ ಏಳು ಕುದುರೆಗಳನ್ನು ನಡೆಸುತ್ತಿರುವುದು ಈ ಮೂರ್ತಿಯ ವೈಶಿಷ್ಟ್ಯ. ಸೂರ್ಯನ ಮುಖವು ಗುಂಡಾಗಿದ್ದರೂ, ಸಣ್ಣದಾದ ಕಿರೀಟವು ಮುಖಕ್ಕೆ ಹೊಂದಿಕೆಯಾಗಿಲ್ಲ. ಕಿರೀಟ, ದುಂಡು ಮುಖ, ಮಣಿ ಖಚಿತವಾದ ಕಂಠೀಹಾರ ಮೊದಲಾದವು, ಕೋಲಾರಜಿಲ್ಲೆಯ ಮುಳಬಾಗಿಲು ತಾಲ್ಲೂಕು ಆವನಿಯಲ್ಲಿರುವ ಲಕ್ಷ್ಮಣೇಶ್ವರ ದೇವಾಲಯದ, ಉತ್ತರಭಿತ್ತಿಯ ಮೇಲಿರುವ ಬಾಲಸೂರ್ಯನದಂತಿದ್ದು, ಚೋಳ–ನೊಳಂಬರ ಶೈಲಿಯನ್ನು ಹೋಲುವಂತಿವೆ. ಕುದುರೆಗಳು ಸ್ಪಷ್ಟವಾಗಿ ಬಿಡಾವಣೆಗೊಂಡಿವೆ. ವಿಜಯನಗರದ ಅರಸರುಗಳು ಸಾಹಸಪ್ರಿಯರು ಅಥವಾ ಯುದ್ಧಪ್ರಿಯರು ಎಂಬ ಅಭಿಪ್ರಾಯವನ್ನು ಉಂಟು ಮಾಡುವುದಕ್ಕಾಗಿ, ಕುದುರೆಗಳನ್ನು ನಡೆಸುತ್ತಿರುವ ಸೂರ್ಯನನ್ನು ಸಾಂಕೇತಿಕವಾಗಿ ಇಲ್ಲಿ ಪ್ರದರ್ಶಿಸಿರಬೇಕು.

**ಕಾವಲವಾಡದ ಸೂರ್ಯಶಿಲ್ಪ ( ಹಳಿಯಾಳ್ ತಾ ॥)***೩: ಸ್ಥಳೀಯ ಶೈಲಿಯನ್ನು ಪ್ರತಿಬಿಂಬಿಸುವುದಕ್ಕಾಗಿ ಕಾವಲವಾಡ ಸೂರ್ಯಮೂರ್ತಿಯನ್ನು ಪ್ರತಿನಿಧಿಸಿರಬೇಕು. ತ್ರಿಕೋಣಾಕೃತಿಯಾದ ಪ್ರಭಾವಳಿಯಲ್ಲಿ ಶಿರಶ್ಚಕ್ರವು ಎಲೆಯ ಮತ್ತು ಬೆಂಕಿಯ ಜ್ವಾಲೆರೂಪದಲ್ಲಿದ್ದು, ವೈಷ್ಣವ ಹಾಗೂ ಶೈವ ಸಂಪ್ರದಾಯವನ್ನು ಪ್ರತಿನಿಧಿಸುತ್ತದೆ. ಕಿರೀಟವು ಯಕ್ಷಗಾನ ಕಲಾವಿದರುಗಳು ಕಟ್ಟಿಕೊಳ್ಳುವ ಪೇಟದಂತಿದೆ. ಕಿವಿಯಲ್ಲಿರುವ ಮಕರ ಕುಂಡಲಗಳು ಹಿಂಭುಜದವರೆಗೂ ಇಳಿಬಿದ್ದಿವೆ. ಕಮಲ ಹಾಗೂ ದಂಟು ಕಟ್ಟಿಗೆಯಂತಿದ್ದು, ಅದು ಸೂರ್ಯನ ಇನ್ನೆರಡು ಹಸ್ತಗಳೋ ಎಂಬಂತೆ ಭಾಸವಾಗುತ್ತದೆ. ವಿಶಾಲವಾದ ಎದೆಯ ಮೇಲೆ, ಕಂಠೀಹಾರ ಹಾಗೂ ಕಂಠಾಭರಣಗಳು ಹರಡಿಕೊಂಡಿದೆ. ಕಟೀ ಪ್ರದೇಶವು ಆಭರಣಗಳಿಂದ ಕೂಡಿ, ಅದೇ ವಸ್ತ್ರಾಲಂಕಾರವೆಂದು ಭಾಸ ವಾಗುವಂತಿದೆ. ಆದ್ದರಿಂದ, ಇವುಗಳು ಸ್ಥಳೀಯ ಶೈಲಿಯನ್ನು ಹೋಲುತ್ತವೆ ಈ ಜಿಲ್ಲೆಯು, ಯಕ್ಷಗಾನಕ್ಕೆ ಪ್ರಖ್ಯಾತಿಯಾಗಿರುವುದರಿಂದ, ಇಂತಹ ಪ್ರಭಾವವು ಹಾಗೂ ಯಕ್ಷಗಾನ ಕಲಾವಿದರುಗಳ ವೇಷಧಾರಣೆಯ ಛಾಯೆಯು ಈ ಸೂರ್ಯ ಮೂರ್ತಿಯಲ್ಲಿ ಪ್ರತಿನಿಧಿಸಿರಬಹುದು.

**ಬನವಾಸಿಯ ಸೂರ್ಯಶಿಲ್ಪ ( ಸಿರಸಿ ತಾ ॥ )***೪: ಕೊನೆಯದಾಗಿ, ಬನವಾಸಿ, ಸಿರಸಿ ತಾ. ಮಧುಕೇಶ್ವರ ದೇವಸ್ಥಾನ; ಇಲ್ಲಿರುವ ಸೂರ್ಯನ ಶಿಲ್ಪ ವೈಷ್ಣವ ಸಂಪ್ರದಾಯದ್ದು ಎಂದು ಹೇಳಲು ಮೂರು ಕಾರಣಗಳಿವೆ. ಶಿರಶ್ಚಕ್ರ ಹಾಗೂ ಸಿಂಹಲಲಾಟ ಕೂಡಿಕೊಂಡು ''ಓಂ'' ಆಕಾರದಲ್ಲಿದೆ; ಕಿರೀಟವು ಕಲಶದ ಮಾದರಿಯಲ್ಲಿದೆ; ಯಜ್ಞೋಪವೀತವನ್ನು ಹೊಂದಿದೆ. ಮೂರ್ತಿಯ ಆಕೃತಿ ಮತ್ತು ಮುಖವು, ಹಳೇಬೀಡಿನ ಹೊಯ್ಸಳೇಶ್ವರ ದೇವಸ್ಥಾನದಲ್ಲಿರುವ ಸೂರ್ಯನಾರಾಯಣನಂತಿದ್ದರೂ ವಯಸ್ಸಿಗೆ ಸಹಜವಾದ ಬೊಜ್ಜು ಹಾಗೂ ಬಾಗಿರುವ ಎದೆಯ ಭಾಗವು ಸ್ಪಷ್ಟವಾಗಿ ಕಾಣುತ್ತದೆ. ಎರಡೂ ಕೈಯಲ್ಲಿರುವ ಕಮಲಗಳು ಬೆಂಕಿಯ ಕೊಳ್ಳಿಯ ಮಾದರಿಯಲ್ಲಿವೆ.

ಕಲ್ಯಾಣಿ ಚಾಲುಕ್ಯ ಶೈಲಿಯ ಆಭರಣಗಳ ಸಹಿತವಾದ ಹೊಯ್ಸಳ ಶೈಲಿಯ ಈ ಮೂರ್ತಿಯು, ಧೀರೋದಾತ್ತ ವ್ಯಕ್ತಿತ್ವವನ್ನು ಹೊಂದಿದ್ದರೂ, ಸೂಕ್ತವಾದ ಹಾಗೂ ಸಮರ್ಪಕವಾದ ವಿನ್ಯಾಸದ ಕೊರತೆ ಎದ್ದು ಕಾಣುತ್ತದೆ. ಶಿಲ್ಪಿಗೆ, ಸೂರ್ಯನಾರಾಯಣನ ಮೂರ್ತಿಯ ಕಲ್ಪನೆಯಿದ್ದು ಕಾರಣಾಂತರಗಳಿಂದ, ಚತುರ್ಭುಜವನ್ನು ವಿನ್ಯಾಸಗೊಳಿಸುವುದರ ಬದಲು, ದ್ವಿಭುಜವನ್ನು ಮೂಡಿಸಿದ್ದಾನೆ. ಏಕೆಂದರೆ, ಈ ಎರಡು ಹಸ್ತಗಳನ್ನು ವಾಸ್ತವಕ್ಕಿಂತಲೂ ಹೆಚ್ಚುಭಾಗ ಕೆಳಭಾಗದಲ್ಲಿ ಕಾಣುತ್ತೇವೆ. ಆಕರ್ಷಕವಾದ ಆಕಾರದ ಜೊತೆ, ವಿನ್ಯಾಸ ಮೂಡಿಸಿದ್ದೇ ಆಗಿದ್ದರೆ, ಸೂರ್ಯನಾರಾಯನಾರ್ ಕೋಯಿಲ್‌ನ ಸೂರ್ಯ ಅಥವಾ ಅದಕ್ಕಿಂತಲೂ ಮಿಗಿಲಾದ ಮೂರ್ತಿಯನ್ನು ಸೃಷ್ಟಿಸ

ಬಹುದಿತ್ತೇನೋ ಎಂದೆನಿಸುತ್ತದೆ. ಮಧುಕೇಶ್ವರ ದೇವಾಲಯದ ನವರಂಗದ ಕೈಪಿಡಿಯ ಮೇಲೆ, ಸಾಲಾಗಿ ದ್ವಾದಶ ಆದಿತ್ಯರ ಉಬ್ಬು ಶಿಲ್ಪಗಳನ್ನು ಕೆತ್ತಿದ್ದಾರೆ. ಆದರೆ, ಈ ಶಿಲ್ಪಗಳಲ್ಲಿ ಸ್ಪಷ್ಟತೆ ಇಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಕವಂಚೂರಿನ ಸೂರ್ಯನ ಮೂಲ ಆಕರ : ಡಾ || ಅ.ಸುಂದರ

*೨. ರಾಯಪಟ್ನದ ಎರಡು ಸೂರ್ಯ ಶಿಲ್ಪಗಳು: ಮೂಲ ಆಕರ ಡಾ || ಸೂರ್ಯನಾಥ ಕಾಮತ್

*೩ ಕಾವಲವಾಡದ ಸೂರ್ಯಶಿಲ್ಪ: ಮೂಲ ಆಕರ ಡಾ || ಸೂರ್ಯನಾಥ ಕಾಮತ್

*೪ ಬನವಾಸಿಯ ಸೂರ್ಯಶಿಲ್ಪ: ಮೂಲ ಆಕರ ಡಾ || ಸೂರ್ಯನಾಥ ಕಾಮತ್

ಹೆಚ್. ಜಯಮ್ಮ ಕರಿಯಣ್ಣ *

# ಶಿಂದಿಹಟ್ಟಿಯ ಅಪರೂಪದ ವಿಷ್ಣು ಶಿಲ್ಪ

ಬೆಳಗಾಂ ಜಿಲ್ಲೆಯ ಹಿಡಕಲ್ ಜಲಾಶಯದ ಕಾಲುವೆಯ ದಡದಲ್ಲಿ ಶಿಂದಿಹಟ್ಟಿ ಎಂಬ ಗ್ರಾಮವಿದೆ. ಆ ಗ್ರಾಮದ ನಿವಾಸಿ ಶ್ರೀ ಹುದ್ದಾರ ಎಂಬವರ ಹೊಲದಲ್ಲಿನ ಹುಣಸೆ ಮರದ ಕೆಳಗೆ ಸುಮಾರು. ೫ ಅಡಿ ಎತ್ತರ ಮತ್ತು ೩ ಅಡಿ ಅಗಲದ ಒಂದು ಶಿಲ್ಪವಿದೆ. ಆ ಶಿಲ್ಪವನ್ನು ಅಲ್ಲಿನ ಸ್ಥಳೀಯರು ತಿರುಗಿ ನಿಂತ ತಿಮ್ಮಪ್ಪ ಎಂದು ಕರೆಯುತ್ತಾರೆ. ಈ ಶಿಲ್ಪ ಕುರಿತ ಕಥೆಯೂ ಇದೆ**

ಈ ಶಿಲ್ಪವು ಚತುರ್ಭುಜಗಳನ್ನು ಹೊಂದಿದ್ದು ಸಮಭಂಗದಲ್ಲಿ ನಿಂತಿದೆ. ಬಲಹಿಂಗೈಯಲ್ಲಿ ಶಂಖವಿದೆ. ವರದ ಹಸ್ತ ಕೆಳಮುಖವಾಗಿ ಚಾಚಿದೆ. ಎಡಭಾಗದ ಕೈಗಳಲ್ಲಿ ಶಂಖ ಮತ್ತು ಗದೆಗಳು ಇವೆ. ಕಿರೀಟವು ಹಂತ ಹಂತವಾಗಿ ಕಿರಿದಾಗುತ್ತಾ ಹೋಗಿದೆ. ಕಿವಿಗಳಲ್ಲಿ ಭುಜದ ಮೇಲೆ ಇಳಿಬಿದ್ದಿರುವ ಕುಂಡಲಗಳಿವೆ. ಕಂಠದಲ್ಲಿ ಕಂಠೀಹಾರ, ಎದೆಯ ಮೇಲೆ ಕೌಸ್ತುಭ ಹಾರ, ಉದರಬಂಧ, ಯಜ್ಞೋಪವೀತವಿದೆ. ಉಟ್ಟಿರುವ ವಸ್ತ್ರವು ಚೆನ್ನಾಗಿ ಕಾಣುವಂತೆ ನಿರಿಗೆಗಳನ್ನು ಇಳಿಬಿಟ್ಟಿದೆ. ಕಾಲಲ್ಲಿ ಕಾಲಿನ ಕಡಗಗಳಿವೆ (ಅಂದುಗೆಗಳಿವೆ). ಇದು ಮುಖ್ಯಶಿಲ್ಪದ ವಿವರವಾದರೆ ಶಿಲ್ಪದ ಸುತ್ತಲೂ ಬಿಡಾವಣೆಗೊಂಡಿರುವ ಪ್ರಭಾವಳಿ ಇದೆ. ಪ್ರಭಾವಳಿ ಹಾಗೂ ಶಿಲ್ಪದ ಬಲತಳದ ಮೂಲೆಯಲ್ಲಿ ಜಲಪ್ರಣಾಲಿ ಹೊಂದಿರುವ ಶಿವಲಿಂಗವಿದೆ. ಪ್ರಭಾವಳಿಯ ಪಟ್ಟಿಕೆಯಲ್ಲಿ ಕೆಳಗೆ ಮತ್ತು ಮೇಲಿನ ಚೌಕಟ್ಟುಗಳಲ್ಲಿ ಇಬ್ಬರು ಭಕ್ತರು ಕುಳಿತಿದ್ದಾರೆ. ಅದೇ ರೀತಿ ಎಡಭಾಗದ ಪಟ್ಟಿಕೆಯಲ್ಲಿ ಸ್ಥಾನಕ ಭಂಗಿಯಲ್ಲಿ ಪ್ರಣಾಮ ಮುದ್ರೆಯೊಡನೆ ಭಕ್ತನೊಬ್ಬನ ಶಿಲ್ಪವನ್ನು ಬಿಡಿಸಿದೆ. ಈ ಭಕ್ತನ ಮೇಲಿನ ಪಟ್ಟಿಕೆಯಲ್ಲಿ ಕೈಮುಗಿದು ಕುಳಿತಿರುವ ಭಕ್ತೆ(?)ಯನ್ನು ಬಿಡಿಸಿದೆ. ಈ ಶಿಲ್ಪಗಳ ಮೇಲೆ ಎರಡೂ ಭಾಗದಲ್ಲಿ ಕತ್ತರಿ ಆಕಾರದ(x)ರೀತಿಯ ಅಲಂಕೃತ ಚೌಕಟ್ಟುಗಳು ಇವೆ. ಅದರ ಮೇಲೆ ಮಕರವನ್ನು ಬಿಡಿಸಿದೆ. ಅದರ ಮೇಲೆ ಎರಡೂ ಕಡೆ ವಲ್ಲಿಮಾಲೆ ಬಂದಿದ್ದು ನೆತ್ತಿಯ ಕೇಂದ್ರದಲ್ಲಿ ಸಿಂಹಲಲಾಟವಿದೆ.



ಕೆಳಗಿನ ಮೂಲೆಯಲ್ಲಿರುವ ಶಿವಲಿಂಗವು ವಿಷ್ಣುವಿಗ್ರಹಕ್ಕಿಂತ

* 'ಆಶೀರ್ವಾದ', ನಂ.೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦.

ಚಿಕ್ಕದಾಗಿದ್ದು ಹಾಗೂ ಭಕ್ತರ ವಿಗ್ರಹದ ಅಳತೆಗಿಂತ ಸ್ವಲ್ಪ ದೊಡ್ಡದಾಗಿದ್ದು ಶಿವ ವಿಷ್ಣುಗಳ ಪಾರಮ್ಯವನ್ನು ಒಪ್ಪಿಕೊಂಡಂತೆ ಕಾಣುವುದು ಒಂದು ವಿಶೇಷವೆನಿಸುತ್ತದೆ. (ಆದರೂ ವಿಷ್ಣುವಿನ ಬಲಹಸ್ತವು ಶಿವಮುಖಿಯಾಗಿರಲು ಆಗಮೋಕ್ತ ಪರಂಪರೆಯ ಹರಿ-ಹರ ಸಂಗಮದ ಪವಿತ್ರ ಸನ್ನಿಧಿ ಎಂಬ ಸಂಕೇತವಿಲ್ಲಿರ ಬಹುದೆ? ಉದಾ: ಯಾವುದೇ ತೀರ್ಥಕ್ಷೇತ್ರದಲ್ಲಿ ಹರಿ-ಹರರ ಸಂಗಮ ಅಸ್ತಿತ್ವ)*** ವಿಗ್ರಹಕ್ಕೆ ವಸ್ತ್ರ ತೊಡಿಸಲು ಕಟಿ ಪ್ರದೇಶದ ಬಳಿಯ ಎರಡೂ ಬದಿಗಳಲ್ಲಿ ರಂಧ್ರಗಳನ್ನು ಮಾಡಲಾಗಿದೆ.

ಇಷ್ಟೇ ಇದ್ದಿದ್ದರೆ ಈ ಶಿಲ್ಪದ ಬಗ್ಗೆ ಹೇಳಬೇಕಾದ್ದೇನೂ ಇರಲಿಲ್ಲವೆನ್ನಿಸುತ್ತದೆ. ಆದರೆ ಈ ಶಿಲ್ಪವು ಇಡಿಯಾಗಿ ಜಾನಪದ ರೀತಿಯನ್ನೂ ಮೈಗೂಡಿಸಿಕೊಂಡು ರಚಿತವಾಗಿರುವುದು ಇದರ ವಿಶೇಷ. ಶಿಲ್ಪದ ಕಣ್ಣುಗುಡ್ಡೆಗಳು ಈಚೆಗೆ ಬಂದಂತೆ ಇದ್ದು ಕೈಗಳು ಅದರಲ್ಲೂ ಹಿಂದಿನ ಕೈಗಳು ಭುಜದ ಬಳಿಯಿಂದ ಮೂಡದೆ ತೋಳಿನ ಬಳಿ ಮೂಡಿದ್ದು ಲಂಬ ರೀತಿಯಲ್ಲಿ ನೇರವಾಗಿ ಮೇಲಕ್ಕೆ ಹೋಗಿವೆ. ಆಯುಧಗಳನ್ನು ಹಿಡಿದಿರುವ ರೀತಿ ವಸ್ತುವೊಂದನ್ನು ಬಿಗಿಯಾಗಿ ಹಿಡಿದಿರುವ ರೀತಿಯಂತಿದೆ. ವರದ ಹಸ್ತವಂತೂ ಮಾಮೂಲಿ ಶಿಲ್ಪಗಳಲ್ಲಿರುವಂತೆ ಹಸ್ತವು ಮುಂದಕ್ಕೆ ಬಂದು ಕೆಳಕ್ಕೆ ಚಾಚಿಲ್ಲ. ನೇರವಾಗಿ ಕೈಯನ್ನು ಅಗಲವಾಗಿ ನೀಡಿದಂತೆ ಇದೆ. ಗದೆಯಂತೂ ದಂಡದಂತಿದ್ದು ಅಂತ್ಯದಲ್ಲಿ ಸ್ವಲ್ಪ ಗುಂಡಗಿದೆ.

ಇವೆಲ್ಲಕ್ಕಿಂತ ಹೆಚ್ಚು ಗಮನ ಸೆಳೆಯುವಂತಹದು ಇದರಲ್ಲಿರುವ ಶಿವಲಿಂಗ ಬಲಗಡೆ ತಿರುಗಿರುವುದರಿಂದ ಇದು ಬ್ರಹ್ಮಲಿಂಗ. ಅಂದರೆ ಶೈವರ ಪ್ರಭಾವದ ಹಿನ್ನೆಲೆಯಲ್ಲಿ ಈ ವಿಷ್ಣು ಶಿಲ್ಪ ಮೂಡಿರುವುದರಿಂದ ಇಲ್ಲಿ ಶಿವಲಿಂಗದ ಶಿಲ್ಪ ಬಂದಿದೆ. ಸ್ಮಾರ್ತಬ್ರಾಹ್ಮಣರು ಪೂಜಿಸುತ್ತಿದ್ದ ವಿಷ್ಣುಶಿಲ್ಪವೂ ಇದಾಗಿರಬಹುದು.

ಈ ಶಿಲ್ಪದ ಕೆತ್ತನೆಯ ರೀತಿಯಿಂದಾಗಿ ಇದರ ಕಾಲವನ್ನು ಸುಮಾರು ಕ್ರಿ. ಶ. ೧೭-೧೮ನೆ ಶತಮಾನಕ್ಕೆ ಹಾಕಬಹುದಾಗಿದೆ. ಬಹುಶಃ ಮರಾಠರ ಕಾಲದಲ್ಲಿ ಈ ಶಿಲ್ಪವನ್ನು ಕೆತ್ತಿರಬೇಕು.

(ಈ ಶಿಲ್ಪದ ಬಗ್ಗೆ ಮಾಹಿತಿ ನೀಡಿ ಶಿಂದಿಹಟ್ಟಿ ಗ್ರಾಮಸ್ಥರ ಪರಿಚಯ ಮಾಡಿಕೊಟ್ಟ ಹಿಡಕಲ್ ಜಲಾಶಯದಲ್ಲಿರುವ ಶ್ರೀ. ವೈ. ಹೆಚ್. ದೇಶಪಾಂಡೆಯವರಿಗೆ ಹಾಗೂ ಈ ಲೇಖನ ಸಿದ್ಧಪಡಿಸುವಲ್ಲಿ ಪೂರ್ಣ ಸಹಕಾರ ನೀಡಿದ ಗುರುಗಳಾದ ಡಾ॥ ದೇವರಕೊಂಡಾ ರೆಡ್ಡಿಯವರಿಗೆ ನನ್ನ ಕೃತಜ್ಞತೆಗಳು).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

** ಶಿಂದಿಹಟ್ಟಿ ಗ್ರಾಮದ ಶ್ರೀ ಗಣಪತಿ ಹುದ್ದಾರ ಅವರ ಅಜ್ಜ, ತಿರುಪತಿ ತಿಮ್ಮಪ್ಪನ ಅಪ್ರತಿಮ ಭಕ್ತರು. ವಾಹನ ಸೌಕರ್ಯವಿಲ್ಲದೆ ಪ್ರತಿವರ್ಷ ತಿಮ್ಮಪ್ಪನ ದರ್ಶನಕ್ಕೆ ಕಾಲುನಡಿಗೆಯಲ್ಲಿ ಹೋಗಿಬರುತ್ತಿದ್ದು, ಕ್ರಮೇಣ ವಯಸ್ಸಾಗಿ ಶಕ್ತಿಗುಂದಿ ನಡೆಯಲು ಅಸಮರ್ಥರಾಗಿ ದೇವರ ದರ್ಶನ ಹೇಗೆ ಸಾಧ್ಯ ಎಂದು ದಿನವೂ ಪರಿತಪಿಸುತ್ತಿದ್ದರು. ಒಂದು ದಿನ ತಮ್ಮ ಹೊಲದಲ್ಲಿ ಓಡಾಡುತ್ತ ಚಿಂತಿಸುತ್ತಿರುವಾಗ ಹಿಂದಿನಿಂದ ಒಂದು ಧ್ವನಿ ಕೇಳಿಸಿತು.' ನೀನು ಅಲ್ಲಿಗೆ ಬಂದು ನನ್ನ ದರ್ಶನ ಪಡೆಯಲು ಸಾಧ್ಯವಾಗದಿದ್ದರೆ ನಾನೇ ನಿನ್ನ ಬಳಿ ಬಂದು ದರ್ಶನ ಕೊಡುತ್ತೇನೆ. ನೀನು ಹಿಂದೆ ತಿರುಗಿ ನೋಡದೆ ಮುಂದೆ ಹೋಗು' ಎಂದು. ಸ್ವಲ್ಪ ದೂರ ಬಂದು ಕುತೂಹಲ ತಡೆಯಲಾರದೆ ಹಿಂದಿರುಗಿ ನೋಡಿದಾಗ ಮಿಂಚು ಹೊಳೆದಂತೆ ಬೆಳಕು ಬಂದು ಒಂದು ಗಳಿಗೆ ಕಣ್ಣು ಮುಚ್ಚಿ, ಬಿಟ್ಟಾಗ ಈಗ ಇರುವ ಜಾಗದಲ್ಲಿ ಶಿಲ್ಪ ಕಾಣಬಂತು, ಎಂಬ ಕಥೆಯೂ ಅವರ ಮನೆತನದಲ್ಲಿ ಪ್ರಚಲಿತವಿದೆ. ಅಂದಿನಿಂದ ಈ ಶಿಲ್ಪವನ್ನು 'ತಿರುಗಿನಿಂತ ತಿಮ್ಮಪ್ಪ'- ವೆಂಕಟೇಶ್ವರ ನನಗಾಗಿ ದರ್ಶನ ಕೊಡಲು ಬಂದಾಗ ನನ್ನ ಆತುರದಿಂದ ಶಿಲೆಯ ರೂಪದಲ್ಲಿ ನೋಡಬೇಕಾಯಿತು ಎಂದು ಕೊರಗಿ ಪ್ರತಿ ವರ್ಷ ಪೂಜೆ, ಸೇವೆ ಮಾಡುತ್ತಾ ಊರಿನವರಿಗೆ ಆ ಅಜ್ಜ ಸಂತರ್ಪಣೆ ಮಾಡುತ್ತಿದ್ದರಂತೆ. ಅದರಂತೆ ಇಂದಿಗೂ ನಾವು ಸಹ ಅವರಂತೆಯೆ ನಡೆಸಿಕೊಂಡು ಬರುತ್ತಿದ್ದೇವೆ ಎಂದು ಹೇಳಿದರು. ಈ ಕಥೆ ಶಿಂದಿಹಟ್ಟಿ ಗ್ರಾಮದಲ್ಲಿ ಪ್ರಚಲಿತವಿದ್ದರೂ ಈ ಶಿಲ್ಪ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ ಕೂಡಿದ್ದು ಗಮನ ಸೆಳೆಯುವಂತಹದ್ದಾಗಿದೆ.

*** ವಿಷ್ಣುವಿನ ಅಭಿಷೇಕ ಹಸ್ತವೆಂದು ಪರಿಭಾವಿಸಲು ಸಾಧ್ಯವಿದೆಯೆ? ಎಂಬುದನ್ನು ಇಮ್ಮಡಿ ಕೆಂಪೇಗೌಡನು ಮಾಗಡಿಯ ಕೋಟೆ ರಾಮೇಶ್ವರನನ್ನು 'ಶ್ರೀ ರಾಮಚಂದ್ರ ಪರಿಪೂಜಿತ ಶ್ರೀ ರಾಮೇಶ್ವರಾಯ ನಮಃ' ಎಂದು ಸ್ತುತಿಸಿರುವುದು ಶಾಸನೋಕ್ತವಾಗಿರುವ ಹಿನ್ನಲೆಯಲ್ಲಿ ಇದರ ತೌಲನಿಕ ಸಾಧ್ಯತೆಗಳನ್ನು ಪರಿಶೀಲಿಸಬಹುದು. -(ಸಂ)

ಸುರೇಶ ಬ. ಹರ್ಲಾಪುರ *

# ಹಾನಗಲ್ಲ ಪರಿಸರದಲ್ಲಿ ಕುಮಾರರಾಮನ ಶಿಲ್ಪಗಳು

ಕರ್ನಾಟಕದ ಪ್ರಥಮ ಸ್ವಾತಂತ್ರ್ಯವೀರ ಕುಮಾರರಾಮನು ಹೊಯ್ಸಳರ ಅಂತ್ಯಕಾಲ, ವಿಜಯನಗರದ ಆರಂಭ ಕಾಲ, ಈ ಎರಡರ ಮಧ್ಯದಲ್ಲಿ ಮಿನುಗುವ ಒಂದು ಉಜ್ವಲ ನಕ್ಷತ್ರ. ಈತನನ್ನು ಕುರಿತು ಕನ್ನಡದಲ್ಲಿ ಮೂರು ಸಾಂಗತ್ಯ ಕಾವ್ಯಗಳು. ಹಲವಾರು ಶಾಸನ-ವಿಗ್ರಹಗಳು, ಕೈಫಿಯತ್ತುಗಳು, ದೇವಾಲಯಗಳು, ಜಾತ್ರೆ, ಜಾನಪದ ಸಾಹಿತ್ಯ ಮೊದಲಾದ ಆಕರಗಳು ಸೃಷ್ಟಿಯಾಗಿವೆ. ಇಂಥ ಸೃಷ್ಟಿಗೆ ಪ್ರಮುಖ ಕಾರಣ ಆತನ ಧರ್ಮಶ್ರದ್ಧೆ, ದೇಶಪ್ರೇಮ ಮತ್ತು ಪರಾಕ್ರಮ. ಮಾನವೀಯ ಸಾತ್ವಿಕ ಗುಣದೊಡನೆ ಶೌರ್ಯ ಹಾಗೂ ಶುಚಿತ್ವವನ್ನು ಅಳವಡಿಸಿಕೊಂಡ ಈ ವೀರ ೧೪ನೇ ಶತಮಾನದಲ್ಲಿ ದಕ್ಷಿಣ ಭಾರತವನ್ನು ಪರಕೀಯರ ಆಕ್ರಮಣದಿಂದ ದೂರ ಮಾಡಿ, ಅಪ್ರತಿಮ ವೀರತನವನ್ನು ಮೆರೆದು, ಹಿಂದೂ ಸಂಸ್ಕೃತಿಯನ್ನು ಮೇಲೆತ್ತಿ, ವಿಜಯನಗರ ಸಾಮ್ರಾಜ್ಯಕ್ಕೆ ಪೀಠಿಕೆ ಆದ.

ಉತ್ತರ ಕರ್ನಾಟಕದಲ್ಲಿ ಕುಮಾರರಾಮನ ಹೆಸರನ್ನು ಇಂದಿಗೂ ವಿಶೇಷವಾಗಿ ಚೆಲುವಿಗೆ, ಬಡಾಯಿಗೆ ಮತ್ತು ಕಾಮಕ್ಕೆ ಸಂಕೇತವಾಗಿ ಬಳಸುತ್ತಾರೆ. ಜನಪದದಲ್ಲಿ ''ಏನು ಈ ಮಗ ಕೊಮರಾಮ ಆಗ್ಯಾನ'' ಎಂದು ಹೇಳುವ, ಕೆಲವು ವೇಳೆ ಬಡಾಯಿ ಕೊಚ್ಚಿಕೊಳ್ಳುವವನನ್ನು ಕಂಡಾಗ'' ಮಹಾಕೊಮರಾಮ ಬಂದ'' ಎಂದು ಹೀಯಾಳಿಸುತ್ತಾರೆ. ಹೀಗೆ ಸಾಮಾನ್ಯರ ಬಾಯಲ್ಲಿ 'ಕೊಮರಾಮ'ನಾದ ಈತನ ಮೌಲ್ಯಗಳಿಗೆ ಆಕರ್ಷಿತರಾಗಿ ನಂಜುಂಡ ಮೊದಲಾದ ಕವಿಗಳು ಕಾವ್ಯ ರಚಿಸಿದರೆ, ದೇವಾಲಯಗಳನ್ನು ನಿರ್ಮಿಸಿ ಭಯ ಭಕ್ತಿಯಿಂದ ಜಾತ್ರೆಯನ್ನು ಆಚರಿಸುವವರು ಕೆಲವರು. ಅಲ್ಲದೆ ಶಿಲೆಗಳಲ್ಲಿ ಈತನ ಶಿಲ್ಪವನ್ನು ಕಂಡರಿಸಿ ಪೂಜಿಸುವವರು ಮತ್ತೆ ಕೆಲವರು. ಇದಲ್ಲದೆ ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಕುಮಾರರಾಮನ ವೈವಿಧ್ಯಮಯ ಶಿಲ್ಪಗಳು ಗೋಚರಿಸುತ್ತವೆ. ಹೀಗೆ ಕುಮಾರರಾಮನ ಆಕರ್ಷಕ ವ್ಯಕ್ತಿತ್ವವನ್ನು ಶಿಲ್ಪದಲ್ಲಿ ದಾಖಲಿಸುವ ಕೆಲಸವು ವಿಶೇಷವಾಗಿ ಹಾನಗಲ್ಲಿನ ಪರಿಸರದಲ್ಲಿ ನಡೆದಿದ್ದು, ಸದ್ಯ ಇಲ್ಲಿ ನಾಲ್ಕು ಕುಮಾರರಾಮನ ಶಿಲ್ಪಗಳನ್ನು ಪ್ರಸ್ತುತಪಡಿಸಲಾಗಿದೆ.

**೧. ಮೂಡೂರು ಶಿಲ್ಪ, ೨. ಶಿರಗೋಡು ಶಿಲ್ಪ,**
**೩. ಚಿಕ್ಕಾಂಶಿ ಶಿಲ್ಪ, ೪. ಹಿರೇಕಾಂಶಿ ಶಿಲ್ಪ.**

**ಮೂಡೂರು ಶಿಲ್ಪ :** ಹಾನುಗಲ್ಲಿನಿಂದ ಸು.೧೮ ಕಿ.ಮೀ. ಅಂತರದಲ್ಲಿರುವ ಈ ಗ್ರಾಮದ ನೆರೆಯ ಪ್ರದೇಶದಲ್ಲಿ ಸುಂದರವಾದ ಅಶ್ವಾರೋಹಿ ಕುಮಾರರಾಮನ ಶಿಲಾ ಶಿಲ್ಪವೊಂದು ಗೋಚರಿಸುತ್ತದೆ. ಆತನ ಬಲಗೈಯಲ್ಲಿ ಭಲ್ಲೆ, ಎಡಗೈಯಲ್ಲಿ ಕುದುರೆಯ ಕಡಿವಾಣವಿದೆ. ತಲೆಗೂದಲನ್ನು ನೇವರಿಸಿ ಕಟ್ಟಿದೆ. ಮುಖವು ನೇರವಾಗಿದೆ. ಮೇಲೆ ಶಿಲೆಯ ತುದಿ ಕೋನಾಕೃತಿಯಲ್ಲಿದೆ. ಸುಮಾರು ಮೂರು ಅಡಿ ಉದ್ದ ಒಂದೂವರೆ ಅಡಿ ಅಗಲವಿರುವ



---

* ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೫೮೦ ೦೦೩

ಈ ಶಿಲ್ಪ ತುಂಬ ಸೊಗಸಾಗಿದೆ. ಸ್ಥಳೀಯ ಜನರು ಇಂದಿಗೂ ಅತ್ಯಂತ ಭಯಭಕ್ತಿಯಿಂದ ಈ ಶಿಲ್ಪವನ್ನು 'ಕೊಮರಾಮ' ದೇವರೆಂದು ಪೂಜಿಸುತ್ತಾ ಬಂದಿದ್ದಾರೆ. ಇದರ ಪಕ್ಕದಲ್ಲಿ ಮಾಸ್ತಿಗಲ್ಲೊಂದು ನಿಂತಿದ್ದು, ಸ್ಥಳೀಯರು ಈ ಮಾಸ್ತಿಯನ್ನು ಕುಮಾರರಾಮನ ತಾಯಿಯೆಂದು ಹೇಳುವರು. ನಿಜವಾಗಿ ಅದು ಬೇರೊಬ್ಬ ಹೆಣ್ಣಿನ ಸ್ಮಾರಕ ಪ್ರತಿಮೆ ಅಥವಾ ಕುಮಾರರಾಮನ ಸತಿಯರ ಚಿತ್ರಗಳಿರಬೇಕೆನ್ನುವ ಊಹೆಗೆ ಎಡೆಯಿದೆ. ಕುಮಾರರಾಮ ಮಡಿದ ನಂತರ ಆತನ ಸತಿಯರು ಚಿತೆಯೇರಿ ಸಹಗಮನ ಮಾಡಿದರೆನ್ನುವ ವಿಷಯ ಕಾವ್ಯದಿಂದ ತಿಳಿದುಬರುತ್ತದೆ.

**ಶಿರಗೋಡು ಶಿಲ್ಪ :** ಹಾನುಗಲ್ಲಿನಿಂದ ಸು.೨೦ ಕಿ.ಮೀ. ಅಂತರದಲ್ಲಿರುವ ಶಿರಗೋಡು ಗ್ರಾಮದ ಊರ ಹೊರಗಿನ ಪ್ರದೇಶದಲ್ಲಿ ಈ ಶಿಲ್ಪವಿದೆ. ಮೂರ್ತಿಶಿಲ್ಪದ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಚಿತ್ರ ಅಸ್ಪಷ್ಟವಿದ್ದರೂ ಕುಮಾರರಾಮನ



ಇಬ್ಬದಿಯಲ್ಲಿ ಇಬ್ಬರು ಮಹಿಳೆಯರು ನಿಂತಿದ್ದು ಅವರು ಕುಮಾರರಾಮನ ಮಡದಿಯರಾಗಿರುವ ಸಾಧ್ಯತೆಯಿದೆ. ನಿಂತ ಭಂಗಿಯಲ್ಲಿರುವ ಈ ಮಹಿಳೆಯರ ಚಿತ್ರಗಳ ತಲೆಯ ಹಿಂಭಾಗದಲ್ಲಿ ಜ್ವಾಲೆಯ ಅಲೆಗಳನ್ನು ಕಂಡರಿಸಲಾಗಿದ್ದು ಅವು ಚಿತೆಯೇರಿದ ಸಂಕೇತಗಳೆಂದು ತೋರುತ್ತದೆ. ಇದರಿಂದ ಕುಮಾರರಾಮನ ಮಡದಿಯರು ಸಹಗಮನಗೊಂಡ ಸ್ಪಷ್ಟಚಿತ್ರಣ ದರ್ಶನ ವಾಗುವಂತಿದೆ. ಜನರ ಅಜ್ಞಾನಕ್ಕೋ ಪ್ರಕೃತಿಯ ವಿಕೋಪಕ್ಕೋ ತುತ್ತಾದ ಈ ಶಿಲ್ಪ ಮೂರು ಭಾಗವಾಗಿ ಭಗ್ನಗೊಂಡಿದ್ದರೂ ತನ್ನ ಅಸ್ತಿತ್ವನ್ನು ಕಳೆದುಕೊಂಡಿಲ್ಲ. ಸುಮಾರು ಎರಡು ಅಡಿ ಉದ್ದ, ಎರಡೂವರೆ ಅಡಿ ಅಗಲವಿರುವ ಶಿಲ್ಪವನ್ನು ಸ್ಥಳೀಯರು ತುಂಬ ಭಕ್ತಿಭಾವದಿಂದ ಆರಾಧಿಸುತ್ತಾ ಬಂದಿದ್ದಾರೆ.

**ಚಿಕ್ಕಾಂಶಿ ಶಿಲ್ಪ:** ಹಾನುಗಲ್ಲಿನಿಂದ ಸು. ೧೬ ಕಿ.ಮೀ.. ಅಂತರದಲ್ಲಿರುವ ಚಿಕ್ಕಾಂಶಿ ಗ್ರಾಮದ ಹೊರವಲಯದಲ್ಲಿ ಈ ಶಿಲ್ಪ ದೊರೆಯುತ್ತವೆ. ಇದು ಮೂಡೂರಿನ ಶಿಲ್ಪದಂತೆ ಭಲ್ಲೆಧಾರಿ ಕುಮಾರರಾಮನು ಅಶ್ವಾರೋಹಣ ಮಾಡಿದ್ದಾನೆ. ಅವನ



ಹಿಂಭಾಗದಲ್ಲಿ ಇಬ್ಬರು ಸ್ಥಾನಕ ವೀರರನ್ನು ಕಂಡರಿಸಲಾಗಿದೆ. ವಿಶಾಲವಾದ ಆಲದ ಮರದ ಕೆಳಗೆ ನಿಂತಿರುವ ಈ ಶಿಲ್ಪ ಅತ್ಯಂತ ಶುಭ್ರವಾಗಿದೆ. ಸುಮಾರು ಎರಡು ಅಡಿ ಉದ್ದ ಎರಡು ಅಡಿ ಅಗಲವಿರುವ ಶಿಲ್ಪವನ್ನು ಗ್ರಾಮಸ್ಥರು ಇಂದಿಗೂ ಕೊಮರಾಮದೇವ ರೆಂದು ಪೂಜಿಸುತ್ತಿದ್ದಾರೆ.

**ಹಿರೇಕಾಂಶಿ ಶಿಲ್ಪ:** ಹಾನುಗಲ್ಲಿನಿಂದ ಸು. ೧೪ ಕಿ.ಮೀ.. ಅಂತರದಲ್ಲಿರುವ ಹಿರೇಕಾಂಶಿ ಗ್ರಾಮದ ಮಧ್ಯದಲ್ಲಿ ಈ ಶಿಲ್ಪ ಗಮನ ಸೆಳೆಯುತ್ತದೆ. ಮೂಡೂರು ಹಾಗೂ ಚಿಕ್ಕಾಂಶಿ ಶಿಲ್ಪಗಳ ಮಾದರಿಯಲ್ಲಿಯೇ ಭಲ್ಲೇಧಾರಿ, ಅಶ್ವಾರೋಹಿ ಕುಮಾರರಾಮನ ಚಿತ್ರವನ್ನು ಕಂಡರಿಸಲಾಗಿದ್ದರೂ ತಲೆಯ ಮೇಲೆ ಮೂರು ಅಡಿ



ಉದ್ದ ಒಂದೂವರೆ ಅಡಿ ಅಗಲದ ಶಿಲ್ಪದುಬ್ಬು ಹೊಂದಿರುವ ಭಾಗ ಸುಸ್ಪಷ್ಟವಿದೆ. ಗ್ರಾಮಸ್ಥರಿಂದ ಇಂದಿಗೂ ಕೊಮರರಾಮನೆಂದು ಈ ಶಿಲ್ಪವು ಆರಾಧನೆಗೊಳ್ಳುತ್ತಿದೆ.

*ಹೀಗೆ ದೈವದಂತೆ ಆರಾಧನೆಗೊಳ್ಳುವ ಈ ವೀರನು ಪಾಮರರ ಪಾರಾಯಣದ ವಸ್ತುವಾಗಿ ನೆಲೆನಿಂತಿದ್ದು, ನಾಯಕ ಜನಾಂಗಕ್ಕೆ ಕಳಸಪ್ರಾಯನಾಗಿದ್ದಾನೆ. ಇವನ ಕುರಿತ ಆಕರಗಳನ್ನೆಲ್ಲ ಒಂದೆಡೆ ಸಂಗ್ರಹಿಸಿ ಅಧ್ಯಯನಕ್ಕೆ ಅಣಿಯಾಗುವುದು ತುಂಬ* ***ಅವಶ್ಯವಾಗಿದೆ.***

ಡಾ॥ ಚನ್ನಬಸಪ್ಪ ಎಸ್. ಪಾಟೀಲ *

# ಹೊಂಬುಜ ( ಹುಂಚ )ದಲ್ಲಿಯ ಪಂಚತಂತ್ರ ಶಿಲ್ಪಗಳು

ಪಂಚತಂತ್ರ ಕಥೆಗಳನ್ನು ನಿರೂಪಿಸುವ ಶಿಲ್ಪಗಳು ವಿಶೇಷವಾಗಿ ಕರ್ನಾಟಕದಲ್ಲಿ *೧ ಮತ್ತು ಇಂಡೋನೇಶಿಯಾದ ಜಾವಾದಲ್ಲಿ *೨ ಹೆಚ್ಚಿನ ಸಂಖ್ಯೆಯಲ್ಲಿ ಶೋಧನಗೊಂಡಿವೆ. ಇಂತಹ ಶಿಲ್ಪಗಳು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಇನ್ನೂ ಶೋಧನೆಗೊಳ್ಳುತ್ತಿವೆ. *೩ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನ ಹೊಂಬುಜ(ಹುಂಚ)ದಲ್ಲಿ ಐದು ಪಂಚತಂತ್ರ ಶಿಲ್ಪಗಳು ಇತ್ತೀಚಿಗೆ ಬೆಳಕಿಗೆ ಬಂದಿವೆ.

ಹೊಂಬುಜವು ಸಾಂತರರ ರಾಜಧಾನಿಯಾಗಿತ್ತು. ಇಲ್ಲಿ ಅನೇಕ ಬಸದಿಗಳು, ಶಿವ ದೇವಾಲಯಗಳು, ನಿಸಿದಿಗಳು ಮತ್ತು ಶಾಸನಗಳು ಇವೆ. ಊರಿನಿಂದ ದಕ್ಷಿಣಕ್ಕೆ ಸುಮಾರು ಅರ್ಧ ಕಿ. ಮೀ. ದೂರದಲ್ಲಿರುವ ಕಮಠೇಶ್ವರ ದೇವಾಲಯವು ಸುಮಾರು ೯ನೆಯ ಶತಮಾನದ್ದು. ಹೊಂಬುಜದ ಇತಿಹಾಸ, ವಾಸ್ತು-ಶಿಲ್ಪ ಮತ್ತು ಶಾಸನಗಳ ಬಗ್ಗೆ ಸಂಶೋಧನೆ ಮಾಡಿರುವ ಡಾ॥ ಹಂಪ ನಾಗರಾಜಯ್ಯ ಅವರು ಈ ದೇವಾಲಯದ ವಿವರಗಳನ್ನು ತಮ್ಮ ಗ್ರಂಥದಲ್ಲಿ ಇತ್ತೀಚೆಗೆ ಪ್ರಕಟಿಸಿದ್ದಾರೆ. *೪ ಅವರು ದೇವಾಲಯದ ಹೊರಗೋಡೆಯ ಕಪೋತದ ಕೆಳಗಿರುವ ಅನೇಕ ಶಿಲ್ಪಗಳನ್ನು **ಪಂಚತಂತ್ರದ ಕಥಾ ಮಾಲೆ - ಚಿತ್ರ ಸಂಪುಟ** ಶೀರ್ಷಿಕೆಯಡಿಯಲ್ಲಿ ಪಟ್ಟಿ ಮಾಡಿದ್ದಾರೆ. ಆದರೆ ಇಲ್ಲಿರುವುದು ಪಂಚತಂತ್ರ ಕಥೆಗಳ ಶಿಲ್ಪಗಳ ಸಂಖ್ಯೆ ಐದು ಮಾತ್ರ. ಇವುಗಳಲ್ಲಿ ಮೊಲ ಮತ್ತು ಸಿಂಹದ ಕಥೆ, ಹಂಸಗಳು ಮತ್ತು ಆಮೆಯ ಕಥೆ ಮತ್ತು ಹೆಂಗಸು ಮುಂಗುಸಿಯನ್ನು ಕೊಂದ ಕಥೆಯ ಶಿಲ್ಪಗಳನ್ನು ಅವರು ಸ್ಪಷ್ಟವಾಗಿ ಗುರುತಿಸಿದ್ದಾರೆ. ಉಳಿದೆರಡು ಕಥೆಗಳ ಶಿಲ್ಪಗಳನ್ನು ಸ್ಪಷ್ಟವಾಗಿ ಗುರುತಿಸದೆ ''(i)ಹುತ್ತದಲ್ಲಿ ಹಾವು ಮತ್ತು ಪಕ್ಕದಲ್ಲಿ ನಾಯಿ, ಪಕ್ಷಿ ಇರುವುದು; (ii) ಆನೆಯೊಂದು ದಂತಗಳಿಂದ ಮನುಷ್ಯನನ್ನು ತಿವಿಯುತ್ತಿರುವುದು ಮತ್ತು (iii) ಏಡಿಯೊಂದು ಬಕ ಪಕ್ಷಿಯನ್ನು ಕೊಲ್ಲುತ್ತಿರುವುದು; (iv) ಮಲಗಿರುವವನನ್ನು ಹಾವು ಕಚ್ಚಿದೆ, ಪಕ್ಕದಲ್ಲಿ ಒಬ್ಬ ವಾಮನ ನಿಂತಿದ್ದಾನೆ'', ಎಂದು ವಿವರಿಸುತ್ತಾರೆ. ಆದರೆ ಈ ಶಿಲ್ಪಗಳು ಅನುಕ್ರಮವಾಗಿ ಅತಿಲೋಭಿಯಾದ ನರಿಯ ಕಥೆ; ಮತ್ತು ಬ್ರಾಹ್ಮಣ, ಏಡಿ ಮತ್ತು ಕಾಗೆಯ ಕಥೆಗಳನ್ನು ನಿರೂಪಿಸುತ್ತವೆ. ಈ ದೇವಾಲಯದಲ್ಲಿಯ ಐದು ಪಂಚತಂತ್ರ ಕಥೆಗಳ ಶಿಲ್ಪಗಳನ್ನು ಪಂಚತಂತ್ರ ಸಾಹಿತ್ಯದ ಹಿನ್ನೆಲೆಯಲ್ಲಿ ಇಲ್ಲಿ ಪರಿಶೀಲಿಸಲಾಗಿದೆ.

## ಮೊಲ ಮತ್ತು ಸಿಂಹ

ವಿಷ್ಣುಶರ್ಮನ ಪಂಚತಂತ್ರ*೫ ಮತ್ತು ದುರ್ಗಸಿಂಹನ ಪಂಚತಂತ್ರದಲ್ಲಿಯ *೬ ಈ ಕಥೆಯ ಸಾರಾಂಶ ಹೀಗಿದೆ: ಸಿಂಹಕ್ಕೆ ಆಹಾರವಾಗಲು ಹೋದ ಮೊಲವು ಸಿಂಹವನ್ನು ಬಾವಿಯ ಹತ್ತಿರ ಕರೆದುಕೊಂಡು ಹೋಗಿ ಬಾವಿಯಲ್ಲಿ ಸಿಂಹದ ವೈರಿಯಿದೆ ಎಂದು ಹೇಳಿ ಸಿಂಹವನ್ನು ಬಾವಿಗೆ ಬೀಳಿಸುತ್ತದೆ.



ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಎರಡು ದೃಶ್ಯಗಳಿವೆ. ಬಲ ಭಾಗದಲ್ಲಿರುವ ಮೊದಲನೆಯ ದೃಶ್ಯದಲ್ಲಿ ಸಿಂಹವು ಎಡಕ್ಕೆ ಮುಖ ಮಾಡಿ ನಿಂತಿದೆ. ಸಿಂಹದ ಎದುರಿಗೆ ಅದಕ್ಕೆ ಅಭಿಮುಖವಾಗಿ ಮೊಲವು ನಿಂತಿದೆ. ಸಿಂಹವು ಸಿಟ್ಟಿನಿಂದ ಬಾಯಿಯನ್ನು ತೆಗೆದಿದೆ. ಹೆದರಿದ ಮೊಲವು ಹಿಂದಕ್ಕೆ ಸರಿಯುತ್ತಿರುವಂತೆ ಕಾಣುತ್ತದೆ. ಅದು ತನ್ನ ಮುಂದಿನ ಎಡಗಾಲನ್ನು ಮೇಲೆತ್ತಿದೆ. ಎಡಭಾಗದಲ್ಲಿರುವ ಎರಡನೆಯ ದೃಶ್ಯದ ಮಧ್ಯದಲ್ಲಿ

* ಉಪನಿರ್ದೇಶಕರು, ಕರ್ನಾಟಕ ಸರ್ಕಾರ ಪ್ರಾಚ್ಯ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು ೧.

ವರ್ತುಲಾಕಾರವಾಗಿ ಚಿತ್ರಿಸಿರುವ ಬಾವಿಯಿದೆ. ಬಾವಿಯ ಬಲಭಾಗದಲ್ಲಿರುವ ಸಿಂಹ ತನ್ನ ಮುಂದಿನ ಕಾಲುಗಳನ್ನು ಬಾವಿಯ ಗೋಡೆಯ ಮೇಲಿಟ್ಟು ನಿಂತಿದೆ. ಬಾವಿಯ ಎಡಭಾಗದಲ್ಲಿರುವ ಮೊಲವು ಸಹ ಅದೇ ಭಂಗಿಯಲ್ಲಿಯೇ ನಿಂತಿದೆ.

**ಹಂಸಗಳು ಮತ್ತು ಆಮೆ**

ಸಂಸ್ಕೃತ ತಂತ್ರೋಪಾಖ್ಯಾನದಲ್ಲಿಯ ಈ ಕಥೆಯ ಸಾರಾಂಶ ಹೀಗಿದೆ. ಬರಗಾಲದಿಂದ ಸರೋವರವೊಂದು ಬತ್ತಿ ಹೋಗಿ ಅಲ್ಲಿದ್ದ ಎರಡು ಹಂಸಗಳು ಮತ್ತು ಒಂದು ಆಮೆ



ಬೇರೆಡೆಗೆ ವಲಸೆ ಹೋಗಲು ನಿರ್ಣಯಿಸುತ್ತವೆ. ಹಂಸಗಳು ತಮ್ಮ ಕೊಕ್ಕಿನಲ್ಲಿ ಹಿಡಿದ ಕಡ್ಡಿಯನ್ನು ಆಮೆ ತನ್ನ ಬಾಯಿಯಲ್ಲಿ ಹಿಡಿದು ನೇತು ಬೀಳುತ್ತದೆ. ಹಂಸಗಳು ಆಕಾಶದಲ್ಲಿ ಹಾರುತ್ತವೆ. ಹಂಸಗಳು ಆಮೆಯ ಜೊತೆಗೆ ಹಾರುತ್ತಿರುವುದನ್ನು ನೋಡಿ ನರಿಗಳು ನಗುತ್ತವೆ. ನರಿಗಳನ್ನು ಬಯ್ಯಲು ಆಮೆ ಬಾಯಿ ತೆಗೆದಾಗ ಅದು ಭೂಮಿಗೆ ಬಿದ್ದು ಸಾಯುತ್ತದೆ. ನರಿಗಳು ಆಮೆಯ ಮಾಂಸವನ್ನು ತಿನ್ನುತ್ತವೆ. *೭

ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಮೂರು ದೃಶ್ಯಗಳಿವೆ. ಬಲಭಾಗದಲ್ಲಿರುವ ಮೊದಲನೆಯ ದೃಶ್ಯದಲ್ಲಿ ಎರಡು ಹಂಸಗಳು ಒಂದು ಕಡ್ಡಿಯ ತುದಿಗಳನ್ನು ತಮ್ಮ ಬಾಯಿಯಲ್ಲಿ ಹಿಡಿದುಕೊಂಡು ಹಾರುತ್ತಿವೆ. ಕಡ್ಡಿಯ ಮಧ್ಯ ಭಾಗವನ್ನು ಬಾಯಿಯಲ್ಲಿ ಹಿಡಿದು ಆಮೆಯು ನೇತಾಡುತ್ತಿದೆ. ಕೆಳಗೆ ಇರುವ ನರಿಯು ಎಡಕ್ಕೆ ಚಲಿಸುತ್ತಿದೆ. ಎಡಭಾಗದಲ್ಲಿರುವ ಎರಡನೆಯ ದೃಶ್ಯದಲ್ಲಿ ಆಮೆಯು ಒಂದು ಕಲ್ಲಿನ ಮೇಲೆ ಬಿದ್ದಿದೆ. ಮಧ್ಯದಲ್ಲಿರುವ ಮೂರನೆಯ ದೃಶ್ಯದಲ್ಲಿ ನರಿಯು ಆಮೆಯನ್ನು ತಿನ್ನುತ್ತಿದೆ.

**ಬ್ರಾಹ್ಮಣಿಯು ಮುಂಗುಸಿಯನ್ನು ಕೊಂದದ್ದು**

ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಬ್ರಾಹ್ಮಣಿಯು ನೀರು ತರಲು ಕೆರೆಗೆ ಹೋಗುತ್ತಾಳೆ. ಆಗ ಮಗುವಿನ ಹತ್ತಿರ ಬಂದ ಹಾವನ್ನು ಮುಂಗುಸಿಯು ಕೊಲ್ಲುತ್ತದೆ. ಮನೆಗೆ ಮರಳಿದ ಬ್ರಾಹ್ಮಣಿಯು ಮುಂಗುಸಿಯ ಬಾಯಿಯಲ್ಲಿ ರಕ್ತ ತೊಟ್ಟಿಕ್ಕುತ್ತಿರುವುದನ್ನು ಕಂಡು, ಮುಂಗುಸಿಯೇ ಮಗುವನ್ನು ಕೊಂದಿದೆಯೆಂದು ಭಾವಿಸಿ, ತನ್ನ ತಲೆಯ ಮೇಲಿನ ಬಿಂದಿಗೆಯನ್ನು ಮುಂಗುಸಿಯ ಮೇಲೆ ಹಾಕಿದಾಗ ಮುಂಗುಸಿ ಸಾಯುತ್ತದೆಂಬುದು ವಿಷ್ಣುಶರ್ಮನ ಪಂಚತಂತ್ರದಲ್ಲಿಯ ಈ ಕಥೆಯ ಸಾರಾಂಶ. *೮ ದುರ್ಗಸಿಂಹನ ಪಂಚತಂತ್ರದ ಪ್ರಕಾರ ಬ್ರಾಹ್ಮಣನು ಮುಂಗುಸಿಯನ್ನು ಕೊಲ್ಲುತ್ತಾನೆ. *೯ ಸಂಸ್ಕೃತ ತಂತ್ರೋಪಾಖ್ಯಾನದಲ್ಲಿ ಈ ಕಥೆಯ ಘಟನೆಗಳು ಭಿನ್ನವಾಗಿವೆ. *೧೦ ಬ್ರಾಹ್ಮಣಿಯು ಹೊರಗೆ ಹೋದ ಕಾರಣವನ್ನಿಲ್ಲಿ ತಿಳಿಸಿಲ್ಲ. ಒಬ್ಬ ವ್ಯಾಪಾರಿಯು ಆಶೀರ್ವಾದ ಪಡೆಯಲು ಬ್ರಾಹ್ಮಣನನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಹಾವನ್ನು ಕೊಂದ ಮುಂಗುಸಿಯು ಬಾಗಿಲ ಹೊಸ್ತಿಲ ಮೇಲೆ ಕಾಯುತ್ತ ಕುಳಿತಿರುತ್ತದೆ. ಒಂದು ಕಾಗೆಯು ನರಿಯ ಮಾಂಸ ಮತ್ತು ಮೂಳೆಯನ್ನು ಮನೆಯ ಬಳಿ ತಂದು ಬಾಗಿಲ ಹತ್ತಿರವಿದ್ದ ಒಂದು ಕಂಬದ ಮೇಲೆ ಕುಳಿತುಕೊಳ್ಳುತ್ತದೆ. ಆ ಮಾಂಸ ಮತ್ತು ಮೂಳೆ ಮುಂಗುಸಿಯ ಹತ್ತಿರ ಬೀಳುತ್ತವೆ. ಬ್ರಾಹ್ಮಣಿಯು ಹಿಂದಿರುಗಿ ಬಂದಾಗ ಮಾಂಸ ಮತ್ತು ಮೂಳೆಯನ್ನು ನೋಡಿ ಮಗುವನ್ನು ಮುಂಗುಸಿಯೇ ಕೊಂದಿರಬಹುದೆಂದು ಭಾವಿಸಿ ಮುಂಗುಸಿಯನ್ನು ಕೊಲ್ಲುತ್ತಾಳೆ.



ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಐದು ದೃಶ್ಯಗಳಿವೆ. ಮಧ್ಯದಲ್ಲಿರುವ ಮೊದಲನೆಯ ದೃಶ್ಯದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣಿ ಎದುರುಬದುರಾಗಿ ನಿಂತು ಮಾತಾಡುತ್ತಿದ್ದಾರೆ. ಎಡಭಾಗದಲ್ಲಿರುವ ಬ್ರಾಹ್ಮಣನು ಬಲಗೈಯಲ್ಲಿ ಕೊಡೆ ಹಿಡಿದು ಎಡಗೈಯನ್ನು ಮಾತಾಡುವ ಶೈಲಿಯಲ್ಲಿ ಮೇಲೆತ್ತಿದ್ದಾನೆ. ಬಲಭಾಗದಲ್ಲಿರುವ ಬ್ರಾಹ್ಮಣಿಯು ಎಡ ಕಂಕುಳಲ್ಲಿ ಮಗುವನ್ನು ಎತ್ತಿಕೊಂಡು ಬಲಗೈಯನ್ನು ಮಾತಾಡುವ ಶೈಲಿಯಲ್ಲಿ ಮೇಲೆತ್ತಿದ್ದಾಳೆ. ಈ ದೃಶ್ಯದ ಎಡಕ್ಕೆ ಇರುವ ಎರಡನೆಯ ದೃಶ್ಯದಲ್ಲಿ ಎಡಗೈಯಲ್ಲಿ ಕೊಡೆ ಹಿಡಿದ ಬ್ರಾಹ್ಮಣನು ಎಡಕ್ಕೆ ಹೋಗುತ್ತಿದ್ದಾನೆ. ಮೊದಲನೆಯ ದೃಶ್ಯದ ಬಲಕ್ಕಿರುವ ಮೂರನೆಯ ದೃಶ್ಯದಲ್ಲಿ ಮಗುವು ಮಂಚದ ಮೇಲೆ ಮಲಗಿದೆ. ಹೆಡೆಯನ್ನು ಬಿಚ್ಚಿದ ಹಾವು

ಮಗುವಿನ ಹತ್ತಿರವಿದೆ. ಮುಂಗುಸಿಯು ಹಾವಿನ ಮಧ್ಯಭಾಗವನ್ನು ಕಚ್ಚುತ್ತಿದೆ. ಈ ದೃಶ್ಯದ ಬಲಕ್ಕಿರುವ ನಾಲ್ಕನೆಯ ದೃಶ್ಯದಲ್ಲಿ ಎಡಕ್ಕೆ ಮುಖ ಮಾಡಿ ನಿಂತಿರುವ ಬ್ರಾಹ್ಮಣಿಯು ತನ್ನ ಕೈಯಲ್ಲಿದ್ದ ಒನಕೆಯನ್ನು ಮೇಲೆತ್ತಿದ್ದಾಳೆ. ಅವಳ ಮುಂದೆ ಒರಳು ಕಲ್ಲಿದೆ. ಒರಳಿನ ಹಿಂದೆ ಇರುವ ಮುಂಗುಸಿಯು ಬ್ರಾಹ್ಮಣಿಗೆ ಅಭಿಮುಖವಾಗಿ ನಿಂತಿದೆ. ಈ ದೃಶ್ಯವು ಬ್ರಾಹ್ಮಣಿಯು ಕಾಳನ್ನು ಕುಟ್ಟುತ್ತಿರುವುದು ಮತ್ತು ಮೇಲೆತ್ತಿದ ಒನಕೆಯಿಂದ ಮುಂಗುಸಿಯನ್ನು ಕೊಲ್ಲುತ್ತಿರುವುದನ್ನು ಸೂಚಿಸುತ್ತದೆ. ಶಿಲ್ಪದ ಎಡ ತುದಿಯಲ್ಲಿರುವ ಕೊನೆಯ ದೃಶ್ಯದಲ್ಲಿ ಪಶ್ಚಾತ್ತಾಪಗೊಂಡ ಬ್ರಾಹ್ಮಣಿಯು ಎಡಕ್ಕೆ ಮುಖ ಮಾಡಿ ನಿಂತಿದ್ದಾಳೆ. ಬಲಗೈಯಲ್ಲಿ ಒನಕೆಯನ್ನು ಹಿಡಿದ ಅವಳು ಎಡಗೈಯಿಂದ ಮುಂಗುಸಿಯನ್ನು ಮುಟ್ಟಿ ಪರೀಕ್ಷಿಸುತ್ತಿದ್ದಾಳೆ.

ಈ ಶಿಲ್ಪದಲ್ಲಿ ಅಲ್ಲದೆ ಕರ್ನಾಟಕ ಮತ್ತು ಆಂಧ್ರಪ್ರದೇಶ ದಲ್ಲಿರುವ ಈ ಕಥೆಯ ಎಲ್ಲಾ ಶಿಲ್ಪಗಳಲ್ಲಿ ಬ್ರಾಹ್ಮಣಿಯು ಮುಂಗುಸಿಯನ್ನು ಒನಕೆಯಿಂದ ಹೊಡೆದು ಕೊಲ್ಲುವ ದೃಶ್ಯವಿದೆ. ಈ ಘಟನೆಯು ಮೇಲೆ ಪರಿಶೀಲಿಸಿದ ಪಂಚತಂತ್ರ ಸಾಹಿತ್ಯ ಸಂಪ್ರದಾಯಗಳಲ್ಲಿಲ್ಲ. ಇದನ್ನೇ ನಾನು ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ ಗ್ರಂಥದ ಉಪಸಂಹಾರದಲ್ಲಿ ವಿವರಿಸಿ ಈ ಘಟನೆಯನ್ನೊಳಗೊಂಡ ಸಂಪ್ರದಾಯದ ಪಂಚತಂತ್ರದ ಹಸ್ತಪ್ರತಿ ಇನ್ನೂ ವಿದ್ವಾಂಸರಿಗೆ ಲಭ್ಯವಾಗಿಲ್ಲವೆಂದು ಹೇಳಿದ್ದೇನೆ. *೧೧ ಈ ನಿರ್ಧಾರವನ್ನು ಕೈಗೊಳ್ಳುವಾಗ ನಾನು ಪಂಚತಂತ್ರದ ವಿವಿಧ ಸಂಪ್ರದಾಯಗಳಲ್ಲಿಯ ಕಥೆಗಳ ಏಕರೂಪತೆ ಮತ್ತು ವ್ಯತ್ಯಾಸಗಳಿಗೆ ಹೆಚ್ಚಾಗಿ ಅವಲಂಬಿಸಿದ್ದು, ವರದರಾಜ ಹುಯಿಲಗೋಳರ ಎರಡು ಗ್ರಂಥಗಳನ್ನು ಮುಂದೆ ನನಗೆ ಸ್ಕಾಟ್‌ಲ್ಯಾಂಡಿನ ಎಡಿನ್‌ಬರಾ ವಿಶ್ವವಿದ್ಯಾಲಯದಲ್ಲಿ ಮೂರು ತಿಂಗಳ ಕಾಲ ಪಂಚತಂತ್ರ ಶಿಲ್ಪ ಮತ್ತು ಸಾಹಿತ್ಯದ ಮೇಲೆ ಉನ್ನತ ಸಂಶೋಧನೆ ಕೈಗೊಳ್ಳುವ ಅವಕಾಶ ದೊರೆತಾಗ ಭಾರತದಲ್ಲಿಯ ಮತ್ತು ಇಂಡೋನೇಶಿಯಾದ ಪಂಚತಂತ್ರ ಶಿಲ್ಪ ಮತ್ತು ಸಾಹಿತ್ಯ ಸಂಪ್ರದಾಯಗಳನ್ನು ಕೂಲಂಕಷವಾಗಿ ಪರಿಶೀಲಿಸುತ್ತಿರುವಾಗ ಈ ಕಥೆಯ ಬಗ್ಗೆ ಕೈಗೊಂಡ ನಿರ್ಧಾರ ಸರಿಯಾಗಿಲ್ಲವೆಂಬುದು ನನ್ನ ಗಮನಕ್ಕೆ ಬಂದುದಲ್ಲದೆ ಪ್ರಸ್ತುತ ಘಟನೆಯು ಸಂಸ್ಕೃತ ತಂತ್ರೋಪಾಖ್ಯಾನದಲ್ಲಿರುವುದು ತಿಳಿದು ಸಂತೋಷವಾಯಿತು. ಸಂಸ್ಕೃತ ತಂತ್ರೋಪಾಖ್ಯಾನದಲ್ಲಿ ಈ ಘಟನೆಯನ್ನು ಕೆಳಗಿನಂತೆ ವಿವರಿಸಿದೆ.

*"....ದುಃಖಾತ್ ಚಞ್ಚಲತ್ಸರ್ವೇಂದ್ರಿಯಾ ಕ್ರೋಧಾಂಧಾ ಭೂತ್ವಾ ದುರಾತ್ಮನಾ ತಿರ್ಯಗ್ಯೋನಿನಾನೇನ ದುಷ್ಕೃತಂ ಕೃತಮಿತಿ ಸ್ವಹಸ್ತಾವಲಮ್ಬಿತೇನ ಖದಿರಮುಸಲೇನ ಪ್ರಸುಪ್ತಂ ನಕುಲಂ ಪ್ರಾಣೈರ್ವಿಯೋಜಯಾಮಾಸ!"* *೧೨

ಇದರಿಂದ ಬ್ರಾಹ್ಮಣಿಯು ಮುಂಗುಸಿಯನ್ನು ತನ್ನ ಕೈಯಲ್ಲಿದ್ದ ಜಾಲಿಮರದ ಒನಕೆಯಿಂದ ಹೊಡೆದು ಕೊಂದಳೆಂದು ತಿಳಿಯುತ್ತದೆ.

**ಅತಿಲೋಭಿಯಾದ ನರಿ**

ಸಂಸ್ಕೃತ ತಂತ್ರೋಪಾಖ್ಯಾನದಲ್ಲಿ ಈ ಕಥೆಯು ಹೀಗಿದೆ. ಅರಣ್ಯದಲ್ಲಿ ಸಂಚರಿಸುತ್ತಿದ್ದ ಬೇಟೆಗಾರನು ಇದ್ದಕ್ಕಿದ್ದಂತೆ ಆನೆ ಬಂದುದನ್ನು ನೋಡಿ ಅವಸರದಲ್ಲಿ ಒಂದು ಹುತ್ತದ ಮೇಲೇರಿ ಆನೆಯ ತಲೆಗೆ ಬಾಣವನ್ನು ಬಿಡುತ್ತಾನೆ. ಬಾಣದ ಹೊಡೆತದಿಂದ ಆನೆಯು ನೆಲಕ್ಕೆ ಬಿದ್ದು ಸಾಯುತ್ತದೆ. ಆನೆಯ ಭಯಂಕರವಾದ ಗೀಳನ್ನು ಕೇಳಿ ಗಾಬರಿಗೊಂಡ ದೊಡ್ಡ ನಾಗರಹಾವು ಹುತ್ತದ ಮೇಲೆ ಬಂದು ಬೇಟೆಗಾರನ ಕಾಲನ್ನು ಕಚ್ಚುತ್ತದೆ. ಬೇಟೆಗಾರನು ಚೂರಿಯಿಂದ ಹಾವನ್ನು ಕತ್ತರಿಸುತ್ತಾನೆ. ಹಾವಿನ ವಿಷದಿಂದ



ತಾನೂ ಸಾಯುತ್ತಾನೆ. ಆಗ ಅಲ್ಲಿಗೆ ಬಂದ ನರಿಯು ಸತ್ತುಬಿದ್ದವರನ್ನು ನೋಡಿ ಆನೆಯನ್ನು ಆರು ತಿಂಗಳು, ಮನುಷ್ಯನನ್ನು ಏಳು ರಾತ್ರಿ, ಸರ್ಪವನ್ನು ಒಂದು ರಾತ್ರಿ ತಿನ್ನಬಹುದು, ಸದ್ಯ ಬಿಲ್ಲನ್ನು ಮಾತ್ರ ತಿಂದರಾಯಿತೆಂದು ಹೇಳಿ ಬಿಲ್ಲಿಗೆ ಕಟ್ಟಿದ ಚರ್ಮದ ಹಗ್ಗವನ್ನು ಕತ್ತರಿಸುತ್ತದೆ. ಆಗ ತನ್ನ ಗುಣವನ್ನು ಕಳೆದುಕೊಂಡ ಬಿಲ್ಲಿನ ಕೋಲು ನರಿಯ ತಲೆಗೆ ಬಡಿದು ನರಿಯು ಸಾಯುತ್ತದೆ. *೧೩

ಈ ಕಥೆಯನ್ನು ನಿರೂಪಿಸುವ ಶಿಲ್ಪದ ಬಲಭಾಗದಲ್ಲಿ ಆನೆ ಇದೆ. ಆನೆ ನೆಲದ ಮೇಲೆ ಬಿದ್ದಿದೆ. ಅದರ ಮಡಚಿದ ಕಾಲುಗಳು ಅದು ಸತ್ತಿರುವುದನ್ನು ಸೂಚಿಸುತ್ತವೆ. ಆನೆಯ ಎದುರಿಗೆ ಬೇಟೆಗಾರನು ನೆಲದ ಮೇಲೆ ಬಿದ್ದಿದ್ದಾನೆ. ಅವನ ಬಲಗೈಯಲ್ಲಿ ಚೂರಿಯಿದೆ. ಅವನ ಹಿಂದೆ ಹುತ್ತದಲ್ಲಿ ನಾಗರಹಾವಿದೆ. ಅದರ ಪಕ್ಕದಲ್ಲಿ ಹಾವು ಹೊರಗೆ ಬಂದಿರುವುದನ್ನು ಚಿತ್ರಿಸಲಾಗಿದೆ. ಇದು ಹಾವು ಹೊರಗೆ ಬಂದು ಸತ್ತು ಬಿದ್ದಿರುವುದನ್ನು ಸೂಚಿಸುತ್ತದೆ. ಶಿಲ್ಪದ ಎಡತುದಿಯಲ್ಲಿ ಎಡಕ್ಕೆ ಮುಖಮಾಡಿ ನಿಂತ ನರಿ ಬಿಲ್ಲಿನ ತುದಿಯ ಹಗ್ಗವನ್ನು ಕಚ್ಚುತ್ತಿದೆ.

**ಬ್ರಾಹ್ಮಣ, ಏಡಿ ಮತ್ತು ಕಾಗೆ**

ದುರ್ಗಸಿಂಹನ ಪಂಚತಂತ್ರದಲ್ಲಿ ಈ ಕಥೆಯು ಹೀಗಿದೆ: ಬ್ರಾಹ್ಮಣನೊಬ್ಬನು ಒಮ್ಮೆ ತೀರ್ಥಯಾತ್ರೆಗೆ ಹೊರಡುತ್ತಾನೆ.

ದಾರಿಯ ಮಧ್ಯದಲ್ಲಿ ಬತ್ತಿದ ಸರೋವರವೊಂದರಲ್ಲಿ ಒದ್ದಾಡುತ್ತಿದ್ದ ಏಡಿಯನ್ನು ಕಂಡು, ಅದರ ಮೇಲೆ ಕನಿಕರ ಪಟ್ಟು ಅದರ ಜೀವವನ್ನು ಉಳಿಸಲು ಅದನ್ನು ತನ್ನ ನೀರಿನ ಪಾತ್ರೆಯಲ್ಲಿ ಹಾಕಿಕೊಂಡು ಮುಂದೆ ಹೋಗುತ್ತಾನೆ. ದಾರಿ ಮಧ್ಯದಲ್ಲಿ ಆಯಾಸಗೊಂಡು ಒಂದು ಮರದ ಕೆಳಗೆ ಮಲಗುತ್ತಾನೆ. ಆ ಮರದ ಮೇಲೆ ಒಂದು ಕಾಗೆ ಮತ್ತು ಕೆಳಗೆ ಪೊಟರೆಯಲ್ಲಿ ಒಂದು



ಹಾವು ವಾಸವಾಗಿರುತ್ತವೆ. ಕಾಗೆಯು ಬ್ರಾಹ್ಮಣನ ಕಣ್ಣುಗಳನ್ನು ತಿನ್ನಬೇಕೆಂದು ಆಸೆಪಟ್ಟು ಅದನ್ನು ಹಾವಿಗೆ ತಿಳಿಸುತ್ತದೆ. ಕಾಗೆಗೆ ಸಹಾಯ ಮಾಡುವ ಉದ್ದೇಶದಿಂದ ಹಾವು ಬ್ರಾಹ್ಮಣನನ್ನು ಕಚ್ಚಿ ಸಾಯಿಸುತ್ತದೆ. ಮರದ ಮೇಲಿನಿಂದ ಹಾರಿದ ಕಾಗೆಯು ಕಣ್ಣುಗಳನ್ನು ತಿನ್ನುವುದಕ್ಕಿಂತ ಮೊದಲು ನೀರನ್ನು ಕುಡಿಯಲು ಪಾತ್ರೆಯ ಮೇಲೆ ಕುಳಿತು ತನ್ನ ಕತ್ತನ್ನು ಒಳಗೆ ಹಾಕುತ್ತದೆ. ಬ್ರಾಹ್ಮಣನ ಸಾವಿನಿಂದ ದುಃಖಿಯಾದ ಏಡಿಯು ಕಾಗೆಯ ಕತ್ತನ್ನು ತನ್ನ ಕೊಂಡಿಗಳಿಂದ ಬಲವಾಗಿ ಒತ್ತಿ ಹಿಡಿಯುತ್ತದೆ. ಏಡಿಯ ಹಿಡಿತದಿಂದ ತಪ್ಪಿಸಿಕೊಳ್ಳಲಾಗದ ಕಾಗೆಯು ಕೂಗಲಾರಂಭಿಸುತ್ತದೆ. ಕಾಗೆಯ ಕೂಗನ್ನು ಕೇಳಿದ ಹಾವು ಹತ್ತಿರ ಬಂದು ಏನು ನಡೆಯುತ್ತಿದೆ ಎಂದು ಕೇಳಿದಾಗ ಏಡಿಯು, ಹಾವು ಬ್ರಾಹ್ಮಣನನ್ನು ಕೊಂದಿರುವುದರಿಂದ ತಾನು ಕಾಗೆಯನ್ನು ಕೊಲ್ಲುವುದಾಗಿ ಹೇಳಿ, ಒಂದು ವೇಳೆ ಹಾವು ತನ್ನ ವಿಷವನ್ನು ಹಿಂದಕ್ಕೆ ಪಡೆದು ಬ್ರಾಹ್ಮಣನನ್ನು ಬದುಕಿಸಿದರೆ ತಾನು ಕಾಗೆಯನ್ನು ಬಿಡುವುದಾಗಿ ಹೇಳುತ್ತದೆ. ತಕ್ಷಣ ಹಾವು ಬ್ರಾಹ್ಮಣನ ದೇಹದಿಂದ ವಿಷವನ್ನು ಹೀರಿಕೊಂಡಾಗ ಬ್ರಾಹ್ಮಣನು ಜೀವವನ್ನು ಮರಳಿ ಪಡೆಯುತ್ತಾನೆ. ಏಡಿಯು ಕಾಗೆಯ ಕತ್ತನ್ನು ಬಿಡುತ್ತದೆ. *೧೪

ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಎರಡು ದೃಶ್ಯಗಳಿವೆ. ಬಲಭಾಗದಲ್ಲಿರುವ ಮೊದಲನೆಯ ದೃಶ್ಯದಲ್ಲಿ ಬ್ರಾಹ್ಮಣನು ಎಡಗೈಯಲ್ಲಿ ಕೊಡೆಯನ್ನು ಹಿಡಿದು ನಿಂತಿದ್ದಾನೆ. ಎಡಭಾಗದಲ್ಲಿರುವ ಎರಡನೆಯ ದೃಶ್ಯದಲ್ಲಿ ಬ್ರಾಹ್ಮಣನು ಮರದ ಕೆಳಗೆ ಮಲಗಿದ್ದಾನೆ. ಹಾವು ಅವನ ಎಡಗಾಲನ್ನು ಕಚ್ಚಿದೆ. ಅವನ ತಲೆಯ ಹತ್ತಿರವಿರುವ ಪಾತ್ರೆಯ ಮೇಲೆ ಕಾಗೆ ಕುಳಿತಿದೆ. ಪಾತ್ರೆಯಿಂದ ಮೇಲೆಬಂದ ಏಡಿ ತನ್ನ ಕೊಂಡಿಗಳಿಂದ ಕಾಗೆಯ ಕುತ್ತಿಗೆಯನ್ನು ಹಿಡಿದಿದೆ..

ಈ ಕಥೆಯನ್ನು ನಿರೂಪಿಸುವ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಏಡಿಯ ಕೊಂಡಿಗಳು ಮಾತ್ರ ಪಾತ್ರೆಯ ಹೊರಗೆ ಕಾಣಿಸುತ್ತವೆ. *೧೫ ಏಡಿಯ ಉಳಿದ ಭಾಗ ಪಾತ್ರೆಯೊಳಗಿರುವುದರಿಂದ ಅದು ಕಾಣುವುದಿಲ್ಲ. ಕಥೆಯ ಸಂದರ್ಭವನ್ನರಿತು ಏಡಿ ಪಾತ್ರೆಯೊಳಗಿದೆಯೆಂದು ತಿಳಿಯಬೇಕಾಗುತ್ತದೆ. ಪ್ರಸ್ತುತ ಶಿಲ್ಪದಲ್ಲಿ ಏಡಿಯನ್ನು ಸಂಪೂರ್ಣವಾಗಿ ಪಾತ್ರೆಯ ಹೊರಗೆ ಚಿತ್ರಿಸಿರುವುದು ಈ ದಿಸೆಯಲ್ಲಿ ಬಹಳ ಮಹತ್ವವನ್ನು ಪಡೆದಿದೆ. ಈ ಕಥೆಯ ಶಿಲ್ಪದಲ್ಲಿ ಏಡಿಯು ಸಂಪೂರ್ಣವಾಗಿ ಕಾಣುವ ಮತ್ತೊಂದು ಶಿಲ್ಪ ಸಿರಿವಾಳದ ಈಶ್ವರ ದೇವಾಲಯದಲ್ಲಿದೆ. ಆದರೆ ಈ ದೃಶ್ಯ ಭಿನ್ನವಾದದ್ದು. ಇಲ್ಲಿ ಏಡಿಯು ನೆಲದ ಮೇಲಿದ್ದು ಅದನ್ನು ಬ್ರಾಹ್ಮಣನು ನೋಡುತ್ತಿದ್ದಾನೆ. *೧೬

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಪಾಟೀಲ ಚನ್ನಬಸಪ್ಪ ಎಸ್ : ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೪.

*೨. ಕ್ಲಾಕ್ ಮಾರಿಕೆ ಜೆ : ದಿ ತಂತ್ರಿ ರಿಲೀಫ್ಸ್ ಆನ್ ಏನ್ಸಿಯಂಟ್ ಜವನೀಸ್ ಚಂಡಿ, ರಾಯಲ್ ಇನ್ಸ್‌ಟಿಟ್ಯೂಟ್ ಆಫ್ ಲಿಂಗ್ವಿಸ್ಟಿಕ್ಸ್ ಅಂಡ್ ಆಂಥ್ರೊಪಾಲಜಿ, ಲೀಡನ್, ದಿ ನೆದರ್‌ಲ್ಯಾಂಡ್ಸ್, ೧೯೯೩

*೩. ಪಾಟಿಲ ಚನ್ನ ಬಸಪ್ಪ ಎಸ್ : ' '*ಟೂ ಪಂಚತಂತ್ರ ರಿಲೀಫ್ಸ್ ಇನ್ ದಿ ಸೋಮೇಶ್ವರ ಟೆಂಪಲ್ ಅಟ್ ಸೋಮಶಿಲ*'', ಪ್ರೊ॥ ಎ. ವಿ. ನರಸಿಂಹಮೂರ್ತಿ ಅಭಿನಂದನಾ ಗ್ರಂಥ (ಪ್ರಕಟಣೆಗೊಳ್ಳಲಿದೆ); ''*ಪಂಚತಂತ್ರ ಸ್ಕಲ್ಪ್‌ಚರ್ಸ್ ಇನ್ ದಿ ಭೀಮೇಶ್ವರ ಟೆಂಪಲ್ ಅಟ್ ವೇಮುಲವಾಡ*, ಕೆ. ಕೃಷ್ಣಮೂರ್ತಿ ಸ್ಮಾರಕ ಗ್ರಂಥ (ಪ್ರಕಟಣೆಗೊಳ್ಳಲಿದೆ); ''*ಪಂಚತಂತ್ರ ಸ್ಕಲ್ಪ್‌ಚರ್ಸ್ ಇನ್ ಸೋಮೇಶ್ವರ ಟೆಂಪಲ್ ಅಟ್ ಅಬ್ಬಲೂರ್*'' : ಸಿ. ಟಿ. ಎಂ. ಕೊಟ್ರಯ್ಯ ಅಭಿನಂದನಾ ಗ್ರಂಥ (ಪ್ರಕಟಣೆಗೊಳ್ಳಲಿದೆ); ''*ಪಂಚತಂತ್ರ ಸ್ಕಲ್ಪ್‌ಚರ್ಸ್ ಇನ್ ನವಲಿಂಗ ಟೆಂಪಲ್ ಅಟ್ ಕುಕನೂರ್*'', ಎ. ಸುಂದರ ಅಭಿನಂದನಾ ಗ್ರಂಥ (ಪ್ರಕಟಣೆಗೊಳ್ಳಲಿದೆ).

*೪. ಡಾ॥ ಹಂಪ ನಾಗರಾಜಯ್ಯ : ಸಾಂತರರು : ಒಂದು ಅಧ್ಯಯನ, ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ, ಹೊಂಬುಜ, ೧೯೭೭, ಪು. ೨೨೮-೨೩೧.

*೫. ಶ್ರೀ ವಿಷ್ಣುಶರ್ಮ ಸಂಕಲಿತಂ ಪಂಚತಂತ್ರಕಮ್; (ಸಂ.) ಪರಬ ಕಾಶೀನಾಥ ಪಾಂಡುರಂಗ ಮತ್ತು ಪಣಶೀಕರ ವಾಸುದೇವ ಲಕ್ಷ್ಮಣ ಶಾಸ್ತ್ರಿ ನಿರ್ಣಯ ಸಾಗರ ಪ್ರೆಸ್, ಮುಂಬಯಿ, ೧೯೧೪, ಪು. ೪೮-೫೨.

*೬. **ದುರ್ಗಸಿಂಹ ವಿರಚಿತಂ ಕರ್ನಾಟಕ ಪಂಚತಂತ್ರಂ** (ಸಂ.) ಅನಂತರಂಗಾಚಾರ್. ಎನ್, ೧೯೭೩, ಪು. ೬೭-೭೦.

*೭. ಶಾಸ್ತ್ರಿ ಸಾಂಬಶಿವ ಕೆ: **ತಂತ್ರೋಪಾಖ್ಯಾನಮ್**, ೧೯೩೮, ತ್ರಿವಂದ್ರಮ್, ಪು. 6.

*೮. ಪರಬ ಮತ್ತು ಪಣಶೀಕರ, ಪೂರ್ವೋಕ್ತ, ಪು. ೨೧೩-೨೧೪.

*೯. ಅನಂತರಂಗಾಚಾರ್, ಪೂರ್ವೋಕ್ತ, ಪು. ೧೩೫-೧೩೯.

*೧೦. ಹುಯಿಲಗೊಳ ವರದರಾಜ: **ದಿ ಪಂಚತಂತ್ರ ಆಫ್ ವಸುಭಾಗ - ಎ ಕ್ರಿಟಿಕಲ್ ಸ್ಟಡಿ**, ನ್ಯೂ ಎರಾ ಪಬ್ಲಿಕೇಷನ್ಸ್, ಮದ್ರಾಸ್, ೧೯೮೭, ಪು. ೩೩, ಹುಯಿಲಗೋಳ ವರದರಾಜ: **ದುರ್ಗಸಿಂಹನ ಪಂಚತಂತ್ರ ಸಮೀಕ್ಷೆ**, ೧೯೭೬, ಪು. ೧೧9-೧೨೦.

*೧೧. ಪಾಟೀಲ, ಪೂರ್ವೋಕ್ತ, ೧೯೯೪, ಪು. ೫೭-೫೮.

*೧೨. ಶಾಸ್ತ್ರಿ, ಪೂರ್ವೋಕ್ತ, ಪು. ೬೧.

*೧೩. ಅದೇ, ಪು. ೬೮.

*೧೪. ಅನಂತರಂಗಾಚಾರ್, ಪೂರ್ವೋಕ್ತ, ಪು. ೨೧೯-೨೨೦.

*೧೫. ಪಾಟೀಲ, ಪೂರ್ವೋಕ್ತ, ೧೯೯೪, ಪು. ೫೨-೫೩, ಚಿತ್ರಗಳು ೮೦-೮೫

*೧೬. ಅದೇ, ಚಿತ್ರ ೮೩.

ಪ್ರಾ. ಲ. ಜನಾರ್ಧನ ಹಂದೆ *

# ಬೋಳಮಾನದೊಡ್ಡಿ ದೇವಾಲಯದ ಎರಡು ಅರ್ಥಪೂರ್ಣ ಶಿಲ್ಪಗಳು

ಕರ್ನಾಟಕ ಮತ್ತು ಆಂಧ್ರದ ಗಡಿ ಜಿಲ್ಲೆಯಾದ ರಾಯಚೂರು ನಗರದಿಂದ ಆರು ಕಿಲೋಮೀಟರಿನ ದೂರದಲ್ಲಿರುವ ಬೋಳಮಾನದೊಡ್ಡಿಯಲ್ಲಿರುವ ಎರಡು ಬಿಂಬಗಳು ವಿಶಿಷ್ಟವಾಗಿವೆ.

ಮೊದಲಾಗಿ ಆದಿಶೇಷ ಪೀಠದ ಮೇಲೆ ಲಕ್ಷ್ಮೀ ಸಮೇತನಾದ ನಾರಾಯಣನು ಮಂಡಿಸಿದ್ದು ಶಿರದ ಮೇಲೆ ಸರ್ಪದ ಏಳು ಹೆಡೆಗಳು ಬಿಚ್ಚಿಕೊಂಡಿದ್ದು ವಿಷ್ಣುವಿನ ಒಂದು ಅವತಾರವನ್ನು ಸೂಚಿಸುತ್ತದೆ.



ಅದೇ ಪೀಠದ ಬಲಭಾಗದಲ್ಲಿ ಈಶ್ವರ ಲಿಂಗವಿದ್ದು ನಾರಾಯಣನು ತನ್ನ ಕೈಯಿಂದ ಪೂಜೆ ಮಾಡುತ್ತಲಿರುತ್ತಾನೆ. ಲಿಂಗದ ಎದುರು ಆಂಜನೇಯನು ಮಂಡಿಯೂರಿ ಭಕ್ತಿಯ ಭಾವದಿಂದ ಕುಳಿತಿದ್ದಾನೆ. ಇದು ರಾಮಾವತಾರನ್ನು ಸೂಚಿಸುತ್ತದೆ. ಸೀತೆಯೊಂದಿಗೆ ರಾಮನು ಈಶ್ವರಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸಿದ ಶ್ರೀರಾಮಾವತಾರದ ಒಂದು ಸನ್ನಿವೇಶವಿದಾಗಿದೆ.

ಮೂರನೆಯದಾಗಿ ಪೀಠದ ಎಡಭಾಗದ ಕೆಳಗಡೆ ಪಾದದ ಹತ್ತಿರ ಹಸು (ಗೋವು) ಮತ್ತು ಕರು ಮತ್ತು ಗರುಡನು ಭಕ್ತಿಯಿಂದ ಕುಳಿತಿರುವ ಚಿತ್ರ ಮೂಡಿದೆ. ಇದು ಕೃಷ್ಣಾವತಾರದ ರೂಪವನ್ನು ಪಡೆಯುತ್ತದೆ. ಒಂದೇ ಶಿಲೆಯಲ್ಲಿ ಶಿಲ್ಪಿಯು ಒಂದೇ ಮೂರ್ತಿಯಲ್ಲಿ ಮೂರು ಅವತಾರದ ಚಿತ್ರವನ್ನು ತುಂಬಾ ಜಾಣ್ಮೆಯಿಂದ ಕಡೆದಿರುವುದು ಒಂದು ಅಪರೂಪ



* ಶಕ್ತಿನಗರ.

ಶಿಲ್ಪವೆನಿಸುತ್ತದೆ. ಈ ವಿಗ್ರಹವು ನಾಲ್ಕು ಅಡಿ ಎತ್ತರವಿದೆ. ಮೂರು ಅಡಿ ಅಗಲವಿದೆ. ಮುಖದ ಭಾವವು ಸುಂದರವಾಗಿದೆ. ಶಿಲ್ಪಿಯು ಜಾಣತನದಿಂದ ಮೂರು ಅವತಾರಗಳನ್ನು ಬಿಡಿಸಿ ಭಿನ್ನತೆಯಲ್ಲಿ ಏಕತ್ವವನ್ನೂ ತೋರಿಸಿದ್ದಾನೆ. ಶಿಲೆಯ ಮುಂಭಾಗದಲ್ಲಿ ಮಾತ್ರ ಕೆತ್ತನೆಯಿದೆ.

ಇಲ್ಲಿಯೇ ಮಹಿಷ ಮರ್ದಿನಿಯ ಇನ್ನೊಂದು ವಿಗ್ರಹವಿದೆ. ಉಗ್ರಳಾಗಿ ಮಹಿಷಾಸುರನನ್ನು ಕಾಲಿನಿಂದ ತುಳಿಯುತ್ತಾ ತನ್ನ ಎಡಗೈಯಲ್ಲಿರುವ ತ್ರಿಶೂಲದಿಂದ ತಿವಿಯುತ್ತಲಿರುವ ಈ ಮೂರ್ತಿಯನ್ನೂ ಸುತ್ತುವರಿದ ಪ್ರಭಾವಳಿಯ ಎಡಭಾಗದಲ್ಲಿ ಕೊಳಲು ಗೋಪಾಲಕೃಷ್ಣನನ್ನು ಬಿಡಿಸಲಾಗಿದೆ. ರಾಕ್ಷಸನನ್ನು ಸಂಹರಿಸಿದ ದೇವಿಯ ಕ್ರೋಧಭಾವವನ್ನೂ ಶಾಂತಗೊಳಿಸಲು, ಶಿಲ್ಪಿಯು ಈ ಕೊಳಲು ಗೋಪಾಲಕೃಷ್ಣನನ್ನು ಕಡೆದಿರಬಹುದೇ ಎಂಬ ಸಂದೇಹ ಮೂಡುತ್ತದೆ. ಇದು ಸಹ ಮೂರು ಅಡಿ ಎತ್ತರ ಎರಡು ಅಡಿ ಅಗಲವಿದ್ದು, ಯಾವುದಕ್ಕೂ ಪಾಣಿ ಪೀಠಗಳಿರುವುದಿಲ್ಲ.

ಭಿನ್ನ - ಭಿನ್ನವಾದ ಅರ್ಥಪೂರ್ಣವಾದ ಸಂಕೇತವಿರುವ ಇಂಥ ಮೂರ್ತಿ ಶಿಲ್ಪಗಳು ಕರ್ನಾಟಕದಲ್ಲಿ ಅಪರೂಪ ವೆನ್ನಬಹುದು, ಶಿಲ್ಪಿಯು ವೈಷ್ಣವ ಸಂಪ್ರದಾಯದವನಾಗಿದ್ದು, ತನ್ನ ಸಮನ್ವಯ ಧರ್ಮ ದೃಷ್ಟಿಯನ್ನು ಈ ಶಿಲ್ಪದಲ್ಲಿ ಪ್ರತಿಪಾದಿಸಿರುವಂತಿದೆ.

ತುಂಗಭದ್ರೆ ಕೃಷ್ಣೆಯ ಮಧ್ಯದ ಆಯಕಟ್ಟಿನ ಪ್ರದೇಶವು ಚಾಲುಕ್ಯ ವಿಕ್ರಮಾದಿತ್ಯನ ಆಡಳಿತಕ್ಕೊಳಪಟ್ಟ ಪ್ರದೇಶವಾಗಿದ್ದು, ಹಲವು ಧರ್ಮ ಸಂಸ್ಕೃತಿಗಳೊಂದಿಗೆ, ಕಾಳಾಮುಖ ಸಂಪ್ರದಾಯವು ಸಹ ಈ ಭಾಗದಲ್ಲಿದ್ದಿರಬಹುದಾದ ಕುರುಹುಗಳು ದೊರೆಯುತ್ತವೆ.

ಒಂದು ಬಾಗಿಲುವಾಡದ ಶಿಲೆಯ ಚೌಕಟ್ಟಿನಲ್ಲಿ ಕಾಳಾಮುಖ ಋಷಿಯು ಪದ್ಮಾಸನದಲ್ಲಿ ಮಂಡಿಸಿದ್ದು ಶಿವಲಿಂಗ-ತ್ರಿಶೂಲ ದಂಡ - ಕಮಂಡಲ- ಸೂರ್ಯ - ಚಂದ್ರ - ಸುತ್ತಲೂ ಅಲಂಕಾರದ ಬಳ್ಳಿಗಳಿದ್ದು, ಧ್ಯಾನಯೋಗದಲ್ಲಿರುವುದು ಕಾಣಬರುತ್ತದೆ. ದಟ್ಟ ಅಡವಿಯ ಈ ಭಾಗದಲ್ಲಿ ಅಂದು ಕಾಳಾಮುಖ ಸಂಪ್ರದಾಯದವರು ತಮ್ಮ ಸಾಧನೆಯನ್ನು ಮಾಡುತ್ತಲಿದ್ದರೆಂದೂ ಊಹಿಸಬಹುದು. ಶಿಲ್ಪ, ಚಿತ್ರದ ವೈಭವೀಕರಣವಿಲ್ಲದ, ಈ ಗುಡಿಯನ್ನು ಸಾಧಾರಣವಾದ ಸ್ಥಳಿಯ ಕಲ್ಲು ಮಣ್ಣಿನಿಂದ ಕಟ್ಟಲಾಗಿದೆ.

ಮೂರ್ತಿಗಳನ್ನು ಸಹ ಅಕ್ಕಪಕ್ಕದಲ್ಲಿರುವ ದೊಡ್ಡ ಪ್ರಮಾಣದ ಗ್ರೆನೈಟ್ ಕಲ್ಲಿನಿಂದಲೇ ರೂಪಿಸಲಾಗಿದೆ. ಚಾಲುಕ್ಯ ಶೈಲಿಯ ಮೂರ್ತಿಗಳಂತೆ ಕಾಣುತ್ತವೆ. ಈ ಚೌಕಟ್ಟಿನಲ್ಲಿ ಒಂದು ಗಣಪತಿ ವಿಗ್ರಹ ಹಾಗೂ ಶಿವಲಿಂಗವೂ ಇದೆ. ಗುಡಿಯ ಮುಂಭಾಗದಲ್ಲಿ ಶಿಲೆಯಲ್ಲಿಯೇ ಧ್ವಜಸ್ತಂಭವನ್ನು ಸಹ ನಿಲ್ಲಿಸಲಾಗಿದೆ. ಬಹುಶಃ ಅಪೂರ್ವವಾದ ಬೃಹತ್ ಪ್ರಮಾಣದ ಮಂದಿರವನ್ನು ನಿರ್ಮಿಸುವ ಕಲ್ಪನೆ ಈ ಶಿಲ್ಪಿಗೆ ಇದ್ದಿರಲೂ ಬಹುದು.

*ಇವುಗಳನ್ನು ಕಂಡಾಗ ಕಲ್ಯಾಣ ಚಾಲುಕ್ಯರು ಓರಂಗಲ್ಲು ಕಾಕತೀಯರು, ಬಹುಮನಿ ಸುಲ್ತಾನರು, ವಿಜಯ ನಗರದವರು - ಹೀಗೆ ಎಲ್ಲರ ಆಡಳಿತವನ್ನು ಕಂಡ ರಾಯಚೂರು ನಗರದಲ್ಲಿ ಶಿಲ್ಪ ಚಿತ್ರಗಳಿಗೆ ಕೊರತೆಯಿಲ್ಲದೆ ವಿವಿಧ ಸಂಪ್ರದಾಯದ ನೂರಾರು ವಿಗ್ರಹಗಳನ್ನು ಕಾಣಬಹುದು..*

ಡಾ॥ ಆರ್. ಎಂ. ಷಡಕ್ಷರಯ್ಯ *

# ಧಾರವಾಡ ಜಿಲ್ಲೆಯಲ್ಲಿ ಕಂಡುಬಂದ ಹೆಚ್ಚಿನ ದೇವಾಲಯ ಶಿಲ್ಪಗಳು, ಶಾಸನಗಳು

ಧಾರವಾಡ ಜಿಲ್ಲೆಯ ಹಾನಗಲ್ಲ, ಗದಗ ಇತ್ಯಾದಿ ತಾಲೂಕಿನ ಹಲವಾರು ಹಳ್ಳಿಗಳ ಕ್ರಿ. ಶ. ೧೧ನೇ ಶತಮಾನದವರೆಗಿನ ದೇವಾಲಯ ಶಿಲ್ಪ, ಶಾಸನಗಳ ಅನ್ವೇಷಣೆ ನಡೆಸಿ (೧೯೯೩ ರಿಂದ ೧೯೯೭) ಆ ಶೋಧನೆಗಳ ಅಧ್ಯಯನವನ್ನಿಲ್ಲಿ ಮಂಡಿಸಲಾಗಿದೆ.

**ಹಾನಗಲ್ ತಾಲೂಕಿನ ದೇವಾಲಯಗಳು**

ಕ್ರಿ. ಶ. ಸು. ೧೧ನೇ ಶತಮಾನದ ಹಾನಗಲ್ ತಾ॥ ನರೇಗಲ್ಲಿನ. **ಪೂರ್ವಮುಖೀ ಸರ್ವೇಶ್ವರ ದೇವಾಲಯ**: ಈ ದೇವಾಲಯವು ಈ ಗ್ರಾಮದ ಬದಿಯ ಹಳ್ಳದ ದಂಡೆಯ ಮೇಲಿದ್ದು ಗರ್ಭಗೃಹ, ಅಂತರಾಳ ಮತ್ತು ಹದಿನಾಲ್ಕು ಕಂಬಗಳುಳ್ಳ ತೆರೆದ ಸಭಾಮಂಟಪ ಹೊಂದಿದೆ; ಇಳಿಜಾರಾದ ಛತ್ತಿದೆ. ಶಿಖರವು ವೇಸರ ಶೈಲಿಯದು. ಗರ್ಭಗೃಹದಲ್ಲಿ ಶಿವಲಿಂಗವಿದ್ದು ಅದರ ಪೀಠ ಮಾತ್ರ ಪ್ರಾಚೀನದ್ದು. ಇಲ್ಲಿನ ಸರಸ್ವತಿ ವಿಗ್ರಹ ಭವ್ಯವೆನಿಸಿದೆ. ಅಂತರಾಳದ ಬದಿಗಳಲ್ಲಿ ದೇವಕೋಷ್ಠಗಳಿವೆ. **ಅಡೂರ ಕಲ್ಮೇಶ್ವರ ದೇವಾಲಯವು** ಕ್ರಿ.ಶ. ಸು. ೧೦ - ೧೧ನೇ ಶತಮಾನದ, ಬಿದ್ದುಹೋದ ಶಿಖರದ ಈ ದೇವಾಲಯ ಉತ್ತರಮುಖಿ. ಗರ್ಭಗೃಹದಲ್ಲಿ ಶಿವಲಿಂಗ, ನಂದಿ ಮತ್ತು ವೀರಭದ್ರ ವಿಗ್ರಹಗಳಿವೆ. ಅಂತರಾಳದ ಮುಂದೆ ಮಕರತೋರಣ ಪಟ್ಟಿ ಹಾಗು ಕೆಳಗೆ ಪೂರ್ಣಕುಂಭಗಳಿರುವ ಎರಡು ಕಂಬಗಳ ಮೇಲೆ ನಿಲ್ಲಿಸಿದ್ದು ಬದಿಗೆ ಎರಡು ಸೂರ್ಯ ವಿಗ್ರಹಗಳಿವೆ. ಕ್ರಿ.ಶ. ಸು ೧೧ನೇ ಶತಮಾನದ **ಹಿರೇಹುಲ್ಯಾಳದ ಈಶ್ವರ ದೇವಾಲಯ** ಹೆಚ್ಚು ಶಿಥಿಲಗೊಂಡಿದೆ. ಉತ್ತರಕ್ಕೆ ಮುಖ ಮಾಡಿದೆ. ಅದಕ್ಕೆ ನಾಲ್ಕು ಶಾಖೆಗಳಿರುವ ಗರ್ಭಗೃಹ ದ್ವಾರವಿದ್ದು ವಜ್ರ, ಲತಾಸುರುಳಿ, ಅರ್ಧಗಂಬ ಮಾದರಿ ಹಾಗು ಕೆಳಗಡೆ ಪೂರ್ಣಕುಂಭಗಳಿವೆ. ಅಂತರಾಳದಲ್ಲಿ ನಂತರದ ಕಾಲದ ನಂದಿಯಿದೆ. ಶಿಥಿಲ ಗೋಡೆಯಲ್ಲಿ ಇಟ್ಟಿಗೆಗಳಿರುವುದು ಗಮನೀಯ. ಶಿಥಿಲಗೊಂಡ **ಹಾವಣಗಿ ಈಶ್ವರ ದೇವಾಲಯದ** ಗರ್ಭಗೃಹದಲ್ಲಿ ಶಿವಲಿಂಗವಿದೆ. ಅದರ ದ್ವಾರ ಶಿಥಿಲಗೊಂಡಿದೆ. ಅಂತರಾಳವಿದೆ.

ಸುಸ್ಥಿತಿಯಲ್ಲಿರುವ **ಮಲಗುಂಡದ ಈಶ್ವರಗುಡಿಯ** ಗರ್ಭಗೃಹದಲ್ಲಿ ಶಿವಲಿಂಗವಿದೆ. ನವರಂಗ ಪಟ್ಟಿಯಲ್ಲಿ ತ್ರಿಮೂರ್ತಿಗಳಿದ್ದಾರೆ; ಅದರಲ್ಲಿ ನಂದಿಯಿದೆ. **ಗುಡಗಡ್ಡಿ ಪಾರ್ವತಿ** ದೇವಾಲಯವು ಗ್ರಾಮದ ಬಳಿ ಇದ್ದು ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹದಲ್ಲಿ (ಇತ್ತೀಚಿನ ಕಾಲದ್ದು) ಅಂತರಾಳ ದ್ವಾರಪಟ್ಟಿ ಸರಳವಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಅದರಲ್ಲಿ ಸೂರ್ಯ, ನಾಗ-ನಾಗಿಣಿ, ಭೈರವ, ಪಾರ್ವತಿ (ಮಹಿಷಾಸುರಮರ್ದಿನಿ) ಶಿಲ್ಪಗಳಿವೆ. ಈ ದೇವಾಲಯದ ಹೊರಗಡೆ ಕ್ರಿ.ಶ. ೬ನೇ ಶತಮಾನದ ಶೈಲಿಯ ರಾಮಲಿಂಗವೆಂಬ ಶಿವಲಿಂಗವಿದೆ. ಈ ಕಾಲದ ಅವಶೇಷಗಳಾದ ಇಟ್ಟಿಗೆ ಇತ್ಯಾದಿ ಫಲಕಗಳು ಬಿದ್ದಿವೆ. ಅಲ್ಲಿ ದೊರೆತ ಹೇರಳ ಪ್ರಾಚೀನ ಇಟ್ಟಿಗೆಗಳಿಂದ ಅದೊಂದು ಮೂಲತಃ ಇಟ್ಟಿಗೆ ದೇವಾಲಯವಾಗಿತ್ತೆಂದು ತರ್ಕಿಸಬಹುದು. **ಅಕ್ಕಿ ಆಲೂರು ಈಶ್ವರ ದೇವಾಲಯವು** ಗ್ರಾಮದ ಕೆರೆ ಏರಿ ಮೇಲೆ ಇರುವ, ಮೂಲತಃ ತ್ರಿಕೂಟ ದೇವಾಲಯ. ಮೂರು ಗರ್ಭಗೃಹ, ಮೂರು ಅಂತರಾಳ ಮತ್ತು ಒಂದು ನವರಂಗವಿದೆ. ಮುಂದೆ ಮುಖಮಂಟಪವಿದ್ದು ಅದು ಉತ್ತರ ಮುಖಿಯಾಗಿದೆ. ಅಲ್ಲಲ್ಲಿ ಛತ್ತು, ಗೋಡೆಗಳು ಶಿಥಿಲಗೊಂಡಿವೆ. ಗರ್ಭಗೃಹದ ಮಧ್ಯ ಶಿವಲಿಂಗವಿದ್ದು ಅದರ ಪೀಠ ಪ್ರಾಚೀನದ್ದಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಮುಖಮಂಟಪದಲ್ಲಿ ಎರಡು ಸಾಲಿನಲ್ಲಿ ಆರು ಕಂಬಗಳಿವೆ. ಅದರಲ್ಲಿ ಸಪ್ತಮಾತೃಕಾ ವಿಗ್ರಹಗಳಿವೆ.

**ಗದಗ ತಾಲೂಕಿನ ದೇವಾಲಯಗಳು**

**ಎಲೆಶಿರೂರು ದೇವಾಲಯದ** ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳದ ನಂತರ ನವರಂಗದಲ್ಲಿ ನಾಲ್ಕು ಕಂಬಗಳು ಮತ್ತು ಪಶ್ಚಿಮ ಮುಖಿ ಎರಡು ಪ್ರವೇಶ ದ್ವಾರಗಳಿವೆ. ಕ್ರಿ.ಶ. ೧೧-೧೨ ಶ.ದ. ದ್ವಿಕೂಟ ಮಾದರಿಯ **ರಾಮೇಶ್ವರ ದೇವಾಲಯವು** ಭೋಗೇಶ್ವರ ದೇಗುಲದ ಬದಿಗಿದ್ದು ಎರಡು ಗರ್ಭಗೃಹಗಳು, ಎರಡು ಅರ್ಧಮಂಟಪಗಳನ್ನು ಹೊಂದಿ ಪೂರ್ವಮುಖಿಯಾಗಿದೆ. ಒಂದರ ಗರ್ಭಗೃಹದಲ್ಲಿ ಶಿವಲಿಂಗವಿದೆ. ಶಿಖರವು ವೇಸರ ಮಾದರಿಯಲ್ಲಿದೆ. **ಸೊರಟೂರ** ಗ್ರಾಮದಲ್ಲಿರುವ ಸು. ಕ್ರಿ.ಶ.

---

* ನಿರ್ದೇಶಕರು (ಪ್ರಭಾರ), ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾರ - ೫೮೦ ೦೦೩.

೧೦ರಿಂದ ೧೨ನೇ ಶತಮಾನದವರೆಗಿನ ಮೂರು ದೇವಾಲಯಗಳಲ್ಲಿ **ಸೂರ್ಯನಾರಾಯಣ ದೇವಾಲಯಕ್ಕೆ** ಶಿವಲಿಂಗವಿರುವ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿವೆ. ಗರ್ಭಗೃಹ ಮತ್ತು ನವರಂಗ ದ್ವಾರಗಳಿಗೆ ತಲಾ ಒಂದರಂತೆ ಐದು ಸರಳ ಶಾಖೆಗಳಿವೆ. **ರಾಮೇಶ್ವರ ದೇವಾಲಯಕ್ಕೆ** ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿವೆ. ಗರ್ಭಗೃಹದಲ್ಲಿ ಕ್ರಿ. ಶ. ೮ನೇ ಶತಮಾನದ ಒಂದು ಶಿವಲಿಂಗವಿದೆ. ಅದರ ಮಧ್ಯ ಕ್ರಿ. ಶ. ೧೧-೧೨ನೇ ಶತಮಾನದ ಶಿವಲಿಂಗವಿದೆ. ಅದರ ದ್ವಾರಕ್ಕೆ ನಾಲ್ಕು ಸರಳ ಶಾಖೆಗಳಿವೆ. ನವರಂಗ ದ್ವಾರದ ಲಲಾಟಕ್ಕೆ ಗಣೇಶನಿದ್ದಾನೆ. ಅದರ ಮುಂದೆ ಸು. ಕ್ರಿ. ಶ. ೧೦ನೇ ಶತಮಾನದ ನಂದಿ ವಿಗ್ರಹವಿದೆ. **ಕಚವಿಯ ಶಿವ ದೇವಾಲಯಕ್ಕೆ** ಗರ್ಭಗೃಹ, ಅಂತರಾಳ ಮತ್ತು ಗರ್ಭಗೃಹಗಳಿವೆ. ಅದರ ಬಾಗಿಲು ಫಲಕ, ಛತ್ತಿನ ಪದ್ಮಾಲಂಕಾರ ಇತ್ಯಾದಿಗಳು ಕ್ರಿ. ಶ. ೯ನೇ ಶತಮಾನದ್ದಾಗಿವೆ. ಅದು ಹೆಚ್ಚು ಶಿಥಿಲಗೊಂಡಿದೆ. ಕೇವಲ ಗರ್ಭಗೃಹ, ಅರ್ಧಮಂಟಪಗಳಿರುವ



ಕಚವಿ ಶಿವಾಲಯ

ದೇವಾಲಯಗಳ ಜತೆಯಲ್ಲಿ ಅರ್ಧಮಂಟಪದ ಬದಲು ಮಕರತೋರಣ ಪಟ್ಟಿಯುಳ್ಳಂತಹ ದೇವಾಲಯಗಳು (ಕಚವಿ, ಅಡೂರ), ಇಟ್ಟಿಗೆ ಕಟ್ಟಡವುಳ್ಳ ದೇವಾಲಯಗಳು (ಗುಡಗುಡೆ ಇತ್ಯಾದಿ) ಕಂಬಗಳ ಕೆಳಗಡೆ ಪೂರ್ಣಕುಂಭವುಳ್ಳ ದೇವಾಲಯಗಳು ಇದ್ದು ಶೈಲಿಯ ದೃಷ್ಟಿಯಿಂದ ಇವು ಸು. ಕ್ರಿ.ಶ. ೧೦ನೇ ಶತಮಾನಕ್ಕೆ ಸೇರುತ್ತವೆ. ಉಳಿದವು ಸು. ಕ್ರಿ. ಶ. ೧೨ನೇ ಶತಮಾನಕ್ಕೆ ಸೇರಿವೆ.

**ವೈವಿಧ್ಯಮಯ ಶೈವ ಶಿಲ್ಪಗಳು :** ಕೇವಲ ಬಾಣದ ಆಕಾರವುಳ್ಳ ಕ್ರಿ. ಶ. ೨ನೇ ಶತಮಾನದ ಶಿವಲಿಂಗಗಳು ಚಿಕ್ಕೇರೂರಿನ ಮಾರುತಿ ಮಂದಿರದ ಬದಿಗೆ, ಕ್ಯಾಸನೂರಿನ ರಾಮಲಿಂಗ ಗುಡಿಯಲ್ಲಿ, ಚಿಕ್ಕಅಣಜಿ (ಹಿರೇಕೆರೂರು ತಾ.)ಯ ಕೊಲ್ಲಾಪುರ ಹೇಮಪ್ಪ ಈರಪ್ಪನ ಹೊಲದಲ್ಲಿ, ಅಡೂರಿನಲ್ಲಿ (ಹಾನಗಲ್ ತಾಲೂಕು) ಇವೆ. ೮ನೇ ಶತಮಾನದ ಬ್ರಹ್ಮಸೂತ್ರವುಳ್ಳ ಶಿವಲಿಂಗಗಳು ಅಡೂರು, ಹತ್ತಿಮತ್ತೂರು, ಸೊರಟೂರು, ಗುಡಗುಡೆ, ಇಟಗಿ ಮತ್ತು ನೀರಲಗಿಯಲ್ಲಿಲ್ಲ; ಕ್ರಿ.ಶ. ೧೨ನೇ ಶತಮಾನದ ಶಿವಲಿಂಗಗಳು ನರೇಗಲ್, ಮುನವಳ್ಳಿ, ಶಿಗ್ಗಾವ, ನೀರಲಗಿ, ಅಡೂರು, ಹೊಟ್ಟೂರು, ಶಿರುಂಜಿ ಸೊರಟೂರು, ಎಲೆಶಿರೂರು (ಗದಗ ತಾ.), ಇತ್ಯಾದಿ ಸ್ಥಳಗಳಲ್ಲಿವೆ. ಹಿರೆಹುಲ್ಯಾಳದ ಈಶ್ವರಗುಡಿಯ ಶಿವಲಿಂಗದ ಬ್ರಹ್ಮಸೂತ್ರವು ಬಳ್ಳಾರಿ ಜಿಲ್ಲೆ ಕುಡತಿನಿ ಮತ್ತು ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಲಿಂಗಗಳನ್ನು ಹೋಲುತ್ತದೆ. ಆದರೆ ನಾಗಾವಿಯ (ಗದಗ ತಾ.) ನಾಗಾರ್ಜುನ ಗುಡಿಯ ಶಿವಲಿಂಗ ಪೀಠದಲ್ಲಿ ಒಂಬತ್ತು ಕಿರು ಶಿವಲಿಂಗಗಳಿವೆ. ಅದರ ಪೀಠದಲ್ಲಿ ಮುಂದುಗಡೆ ಒಂದು ಸಾಲಿನಲ್ಲಿ ಏಳು, ಹಿಂಬದಿಯಲ್ಲಿ ಎರಡಿರುವುದು ಗಮನೀಯ. ಅಡೂರಿನ ಗುಡ್ಡದ ಮೇಲಿನ ಒಂದು ಶಿವಲಿಂಗದಲ್ಲಿ ಯಾವ ಸೂತ್ರಗಳೂ ಇರುವುದಿಲ್ಲ.

**ನಟರಾಜ:** ಮಲಗುಂದದ (ಹಾನಗಲ್ ತಾ.) ಈಶ್ವರ ಗುಡಿ ಹತ್ತಿರವಿರುವ ಸು. ಕ್ರಿ. ಶ. ೧೨ನೇ ಶತಮಾನದ ನಟರಾಜನಿಗೆ ಹತ್ತು ಭುಜಗಳಿದ್ದು ನೃತ್ಯಭಂಗಿಯಲ್ಲಿದ್ದಾನೆ. ಸಂಗೀತ, ನೃತ್ಯ ವಾದ್ಯಗಾರರು ಆತನ ಬದಿಯಲ್ಲಿದ್ದಾರೆ. ಜೊತೆಗೆ ದ್ವಿಭುಜ ಮತ್ತು ಚತುರ್ಭುಜ ಗಣೇಶ ಶಿಲ್ಪಗಳು ಕಂಡುಬಂದಿದ್ದು ಇವುಗಳಲ್ಲಿ ಕಚವಿ (ಹಿರೇಕೆರೂರು ತಾ.) ಎಲೆಶಿರೂರಿನವು ವಿಶಿಷ್ಟ.

**ದ್ವಿಭುಜಗಣೇಶ:** ಗಜಮುಖ ಮತ್ತು ಮನುಷ್ಯಾಕಾರ ದೇಹವುಳ್ಳ ಈ ಗಣೇಶನ ಸುಂದರ ಶಿಲ್ಪ ಕಚವಿ ಗ್ರಾಮದ ಗಣೇಶಗುಡಿಯ ಬದಿಗೆ ಅಗೆಯುವಾಗ ಬೆಳಕಿಗೆ ಬಂದಿತಂತೆ. ಈ ಶಿಲ್ಪ ೮೮ ಸೆಂ.ಮೀ. ಉದ್ದ ಮತ್ತು ೩೦ ಸೆಂ.ಮೀ. ಅಗಲವಿದೆ. ಈ ಗಣೇಶನ ಬಲಕಿವಿ, ಹೊಟ್ಟೆ, ಎಡಗೈ, ಬಲ ಮತ್ತು ಎಡ ಪಾದಗಳು ಹಾಗೂ ಸೊಂಟದ ಕೆಳಗಿನ ಎಡಬದಿಯ ಭಾಗ ಶಿಥಿಲಗೊಂಡಿವೆ.



ಗಣೇಶನು ಪದ್ಮಪೀಠ ಸುಖಾಸನಸ್ಥನಾಗಿ, ಬಲಗೈಯಲ್ಲಿ ಕಮಲದ ಮೊಗ್ಗು, ಎಡಗೈಯಲ್ಲಿ ಮೋದಕವನ್ನು ಹಿಡಿದಿರುವನು. ನೆತ್ತಿಯ ಮೇಲೆ ವೃತ್ತಾಕಾರದ ಸಹಸ್ರದಳ ಅಲಂಕಾರವಿದೆ. ತಲೆಯ ಹಿಂಬದಿಯಲ್ಲಿ ವೈವಿಧ್ಯಮಯ ಶಿರಚಕ್ರವಿದ್ದು ಬದಿಗಳಲ್ಲಿ ಸ್ವಲ್ಪ ಇಳಿಬಿಟ್ಟ ಮಣಿಹಾರಗಳಿವೆ. ಒಂದೆಳೆಯ ಸರಪಳಿಯನ್ನು ಹಣೆ ಮಧ್ಯದಲ್ಲಿ ಇಳಿಬಿಟ್ಟಿದ್ದು ಅದರ ತುದಿಯಲ್ಲಿ ಪದಕವಿದೆ. ಅಂದವಾದ ವಿಶಾಲ ಮತ್ತು ನೀಳಕಣ್ಣುಗಳಿವೆ. ಅಗಲ ಕಿವಿಗಳಲ್ಲಿ ಲತಾಬಳ್ಳಿಯ ಅಲಂಕಾರ ವಿಶಿಷ್ಟವೆನಿಸಿದೆ. ಕೊರಳಲ್ಲಿ ಚಿಕ್ಕ ಚಿಕ್ಕ ಉದ್ದನೆಯ ಗೆಜ್ಜೆಗಳ ಸರಕುಚ್ಚನ್ನು ಧರಿಸಲಾಗಿದೆ. ದೇಹದ ಮೇಲೆ ಧರಿಸಿದ ಯಜ್ಞೋಪವೀತಕ್ಕೆ ಅಲ್ಲಲ್ಲಿ ಅಗಲ ಪಟ್ಟಿಕೆಗಳಿವೆ ಹಾಗೂ ಅದರಲ್ಲಿ ಆರು ಎಳೆ ದಾರಗಳಿವೆ. ಉಬ್ಬಿದ ಹೊಟ್ಟೆಯ ಮೇಲೆ ಮಣಿಗಳ ಅಗಲ ಪಟ್ಟಿಯನ್ನು ಬಿಗಿಯಲಾಗಿದೆ. ಸೊಂಟಕ್ಕೆ ಹಳೇಕಚ್ಚೆಯನ್ನು ಮಂಡಿಯ ಮೇಲಿನವರೆಗೆ ಬಿಗಿಯಾಗಿ ಧರಿಸಿರುವನು. ಈ ವಸ್ತ್ರದ ನೆರಿಗೆಗಳ ಸಮಾಂತರ ಸಾಲುಗಳನ್ನು ಸೂಚಿಸಲಾಗಿದೆ. ತೋಳುಗಳಿಗೆ ಪದಕವುಳ್ಳ ಮಣಿಪಟ್ಟಿ ಮತ್ತು ಕೈಗಳಿವೆ. ದಪ್ಪನೆಯ ಸರಳ ಬಳೆಗಳನ್ನು ಧರಿಸಿರುವನು. ಸೊಂಡಿಲು ಎಡಕ್ಕೆ ತಿರುವಿ ಮೋದಕ ಪಾತ್ರೆಯಲ್ಲಿದೆ. ಈ ಮೂರ್ತಿಯು ಒಳ್ಳೆ ಜಾತಿಯ ಸಿಸ್ಟ್ ಎಂಬ ಮೃದು ಶಿಲೆಯದ್ದಾಗಿದೆ. ಅದರ ಪೀಠವು ಗಟ್ಟಿಯಾದ ಡೊಲೊರೈಟ್ ಕಲ್ಲಿನದಾಗಿದೆ. ಈ ಮಾದರಿಯ ಗಣೇಶ ಶಿಲ್ಪಗಳು ವಿರಳವಾಗಿ ಅಲ್ಲಲ್ಲಿ ಕಂಡುಬಂದಿವೆ. ದಕ್ಷಿಣ ಭಾರತದ ಈ ರೀತಿಯ ಶಿಲ್ಪಗಳಲ್ಲಿ ಕಚವಿಯಲ್ಲಿ ದೊರೆತ ಈ ಗಣೇಶ ಶಿಲ್ಪವು ಮೂರನೆಯದೆಂದು ಭಾವಿಸಲಾಗಿದೆ. ಇದರಿಂದ ಈ ನಮೂನೆಯ ಗಣೇಶ ಶಿಲ್ಪ ತಯಾರಿಸುವ ಒಂದು ಪ್ರತ್ಯೇಕ ಶಾಲೆ ಈ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ತರ್ಕಿಸಬಹುದು. ದೇಹಾಂಗ ವಸ್ತ್ರಾಭರಣಗಳ ಶೈಲಿಯಿಂದ ಈ ಗಣೇಶ ಶಿಲ್ಪವು ಸುಮಾರು ಕ್ರಿ. ಶ. ೮ನೇ ಶತಮಾನದ ಕೊನೆಯ ಭಾಗ ಇಲ್ಲವೆ ೯ನೇ ಶತಮಾನದ ಆದಿಭಾಗದ್ದೆಂದು ತರ್ಕಿಸಲಾಗಿದೆ.

ಎಲೆಶಿರೂರು ಗ್ರಾಮದ ಹಾಳು ಮಂಟಪದಲ್ಲಿರುವ ಸು. ೧೧ನೇ ಶತಮಾನದ ದ್ವಿಭುಜ ಗಣೇಶನ ಶಿಲ್ಪ ಮಹತ್ವದ್ದೆನಿಸಿದೆ. ಬಾಲಗಣೇಶನಾಕಾರವಿರುವ ಈತನು ನಿಂತ ಭಂಗಿಯಲ್ಲಿದ್ದು ಎಡಗಾಲು ಬಗ್ಗಿದಂತೆ ಚಿತ್ರಿಸಲಾಗಿರುವುದು ಗಮನೀಯ. ಕೈಗಳಲ್ಲಿ ದಂತ ಮತ್ತು ಫಲಗಳಿವೆ.

ಚತುರ್ಭುಜ ಗಣೇಶನ ಶಿಲ್ಪದಲ್ಲಿ ಸೊರಟೂರಿನ ವೀರಭದ್ರ ಗುಡಿ ಮುಂದಿನ ಶಿಲ್ಪ ಮಹತ್ವದ್ದು. ಕುಳಿತ ಭಂಗಿಯಲ್ಲಿದ್ದು ಆತನ ಮೂರು ಕೈಗಳು ಮುಕ್ಕಾಗಿವೆ. ಅದರ ಕಾಲ ಸು. ಕ್ರಿ. ಶ. ೯ನೇ ಶತಮಾನ. ಕ್ರಿ. ಶ. ೧೧-೧೨ನೇ ಶತಮಾನದ ಚತುರ್ಭುಜ ಗಣೇಶನ ಶಿಲ್ಪಗಳು ಹೆಚ್ಚಿನ ಹಳ್ಳಿಗಳಲ್ಲಿರುವುದು ಸಾಮಾನ್ಯ ಸಂಗತಿಯಾಗಿದೆ.

**ಕಾರ್ತಿಕೇಯ:** ಇವನ ಶಿಲ್ಪಗಳು ಆಡೂರು, ದೇವಗಿರಿ, ಹಿರೇಹುಲ್ಯಾಳ (ಕ್ರಿ. ಶ. ೧೧ನೇ ಶ.) ಮತ್ತು ಮಂತಗಿ (ಕ್ರಿ. ಶ. ೭ನೇ ಶತಮಾನ)ಯಲ್ಲಿದ್ದು ಅವುಗಳಲ್ಲಿ ಮಂತಗಿಯ ಶಿಲ್ಪ ಅಪರೂಪದ್ದು. ಹಿರೇಹುಲ್ಯಾಳ, ಆಡೂರು ಮತ್ತು ದೇವಗಿರಿ ಶಿಲ್ಪಗಳಲ್ಲಿ ಕಾರ್ತಿಕೇಯ ನವಿಲಿನ ಮೇಲೆ ಕುಳಿತಿದ್ದಾನೆ. ಮಂತಗಿ ಗ್ರಾಮದ ಈಶ್ವರನ ಗುಡಿ ಹತ್ತಿರ ಬಾಲಕನ ವೇಷದಲ್ಲಿ ಚಿತ್ರಿಸಿದ ಕಾರ್ತಿಕೇಯನ ದುಂಡು ವಿಗ್ರಹವಿದೆ. ಸುಮಾರು ೭೦ ಸೆಂ.ಮೀ. ಎತ್ತರ ಹಾಗೂ ೪೦ ಸೆಂ.ಮಿ. ಅಗಲವಿದೆ. ಸಮಭಂಗಿಯಲ್ಲಿದೆ. ಶರೀರ ಸ್ವಲ್ಪ ಬಲಕ್ಕೆ ಬಾಗಿದೆ. ಕುಳ್ಳು ಮತ್ತು ಸ್ಥೂಲತೆಯಿಂದ ಅದರ ಭಂಗಿ ಎದ್ದು ಕಾಣುವುದಿಲ್ಲ; ಅದರ ಕೈಗಳು ಮತ್ತು ಪಾದಗಳು ಮುರಿದಿವೆ. ಬಲಗೈಯಲ್ಲಿ ಶಕ್ತಿ ಮತ್ತು ಎಡಗೈಯಲ್ಲಿ ಕುಕ್ಕುಟ(ಹುಂಜ)ವನ್ನು ಹಿಡಿದುಕೊಂಡ ರೀತಿಯಲ್ಲಿ ಗೋಚರಿಸುವುದು ಈ ಶಿಲ್ಪದ ಮುಂಭಾಗದಲ್ಲಿ ಎದೆ, ಹೊಟ್ಟೆ ಮತ್ತು ಮುಖದಲ್ಲಿ ಕಣ್ಣು, ಮೂಗು ಬಾಯಿ ಹಾಗೂ ತಲೆ



ಭಾಗಗಳು ಮುಕ್ಕಾಗಿವೆ. ತೊಡೆ, ಕಾಲುಗಳ ವಿನ್ಯಾಸ ಅಸ್ಪಷ್ಟ ಮತ್ತು ಎಲ್ಲ ಏಕವಾಗಿದ್ದು, ಕೆಳಮುಖವಾಗಿ ಸಣ್ಣದಾಗುತ್ತ ಹೋಗಿವೆ. ತಲೆಯಲ್ಲಿ ಕೂದಲನ್ನು ಅಗಲ ಪಟ್ಟಿಕೆಗಳ ಆಕಾರದಲ್ಲಿ ಶಿರಸ್ತ್ರಾಣದಂತೆ ಕಟ್ಟಿದೆ. ಕಿವಿಗಳಲ್ಲಿ ಗಾಲಿಯಂಥ ಭಾರವಾದ ಪತ್ರಕುಂಡಲಗಳಿದ್ದು ಅವು ಭುಜಗಳ ಮೇಲೆ ಅಡ್ಡಲಾಗಿ ಬಿದ್ದಿವೆ. ಕೊರಳಲ್ಲಿ ಸರಳವಾದ ಹಲವು ಎಳೆಗಳ ದುಂಡನೆಯ ಹಾರಗಳಿವೆ. ತೋಳಿನಲ್ಲಿ ರುದ್ರಾಕ್ಷಿಯ ಎರಡು ಸುತ್ತಿನ ಬಳೆಗಳನ್ನು ತೊಡಿಸಲಾಗಿದೆ. ಮೊಣಕಾಲಿನ ಮೇಲೆ ಧೋತ್ರವನ್ನು ಕಚ್ಚೆಹಾಕಿ ಉಡಿಸಲಾಗಿದೆ. ಸೊಂಟದ ಎರಡು ಬದಿಗಳಲ್ಲಿ ದಪ್ಪನೆಯ ಉಂಗುರಾಕಾರದ ಮಡಿಕೆಗಳು ಇಳಿಬಿಡಲಾಗಿದೆ. ಈ ಶಿಲ್ಪದ

ಸರಳ, ಮಿತವಾದ ಆಭರಣ ಹಾಗೂ ದೇಹಾಂಗದ ವಿನ್ಯಾಸದಿಂದ ಈ ಶಿಲ್ಪವು ಸುಮಾರು ಕ್ರಿ. ಶ. ೪ನೇ ಶತಮಾನದ್ದೆಂದು ತರ್ಕಿಸಬಹುದು. ಈ ಕಾಲದ (ಸುಮಾರು ಕ್ರಿ.ಶ ೩ರಿಂದ ೪ನೇ ಶತಮಾನದ) ಶಿಲ್ಪಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಈ ಹಿಂದೆ ಈ ಜಿಲ್ಲೆಯ ಹಿರೇಕೆರೂರು ತಾಲೂಕಿನ ಅಬ್ಬಲೂರ (ವಿಷ್ಣು), ಶಿರಹಟ್ಟಿ ತಾಲೂಕಿನ ದೇವಿಹಾಳ (ಮಹಿಷಮರ್ದಿನಿ), ಉತ್ತರಕನ್ನಡ ಜಿಲ್ಲೆಯ ಬನವಾಸಿ (ಕಾರ್ತಿಕೇಯ?) ಕೊಂತಹಾಲ (ವಿಷ್ಣು) ಇನ್ನಿತರ ಸ್ಥಳಗಳಲ್ಲಿ ಶೋಧವಾಗಿವೆ. ಕರ್ನಾಟಕದಲ್ಲಿ ಈ ಕಾಲದ ಹೆಚ್ಚಿನ ಸಂಖ್ಯೆಯ ಶಿಲ್ಪಗಳನ್ನು ಶೋಧಿಸಿದ ಕೀರ್ತಿ ಖ್ಯಾತ ಹಿರಿಯ ಪುರಾತತ್ವ ತಜ್ಞ ಡಾ॥ ಅ. ಸುಂದರ ಅವರಿಗೆ ಸಲ್ಲುತ್ತದೆ. ಅವರು ಸುಮಾರು ಕ್ರಿ. ಶ. ೪ನೇ ಶತಮಾನದ ಒಂದು ಕಾರ್ತಿಕೇಯ ಶಿಲ್ಪವನ್ನು ಉತ್ತರಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ಹೊಡಕೇಸಿರೂರ ಗ್ರಾಮದಲ್ಲಿ ಶೋಧಿಸಿದ್ದರು. ಆ ಶಿಲ್ಪ ಈಗ ಆ ಭಾಗದ ಚಿತ್ರಾಪುರ ಮಠದಲ್ಲಿದೆ.

ಮದ್ರಾಸಿನ ಭಾರತೀಯ ಖ್ಯಾತ ಪುರಾತತ್ವ ತಜ್ಞರೆನಿಸಿದ ಡಾ॥ಕೆ. ವಿ. ಸೌಂದರರಾಜನ್ ಅವರು ಈ ಶಿಲ್ಪದ ಕೇಶಾಲಂಕಾರ ಹಾಗೂ ದೇಹಾಂಗದ ವಿನ್ಯಾಸವನ್ನು ಪರಿಶೀಲಿಸಿ ಇದೊಂದು ಇಕ್ಷ್ವಾಕುಗಳ ನಂತರದ ಕಾಲಕ್ಕೆ ಸೇರುವುದು (ಸುಮಾರು ಕ್ರಿ.ಶ. ೩ನೇ ಶತಮಾನ) ಎಂದೂ ಕಾರ್ತಿಕೇಯನನ್ನು ಶಿಲ್ಪಗಳಲ್ಲಿ ಬಾಲಕನ ರೂಪದಲ್ಲಿ ಚಿತ್ರಿಸುವುದು ಸಾಮಾನ್ಯ ಹಾಗೂ ಈ ಶಿಲ್ಪದ ಶೋಧನೆಯಿಂದ ದಕ್ಷಿಣ ಭಾರತದ ತಮಿಳುನಾಡು, ಗೋವಾ ಮತ್ತು ವಿಶೇಷವಾಗಿ ಕರ್ನಾಟಕ ಭಾಗಗಳಲ್ಲಿ ಕಾರ್ತಿಕೇಯ (ಸುಬ್ರಮಣಿ)ನ ಆರಾಧನೆ ಈ ಕಾಲದಲ್ಲಿ ಗಟ್ಟಿಯಾಗಿ ನೆಲೆಯೂರಿತ್ತೆಂದೂ ಅಭಿಪ್ರಾಯಪಟ್ಟಿದ್ದಾರೆ.

ಅರ್ಧನಾರೀಶ್ವರ : ಆಡೂರಿನ ಕಲ್ಮೇಶ್ವರಗುಡಿಯಲ್ಲಿರುವ ಸು. ಕ್ರಿ. ಶ. ೧೧ನೇ ಶ.ದ, ಈ ಶಿಲ್ಪದಲ್ಲಿ ಶಿವ-ಪಾರ್ವತಿಯರನ್ನೊಳಗೊಂಡು ಚಿತ್ರಿಸಲಾಗಿದೆ. ಚತುರ್ಭುಜರಾದ ಇವರಲ್ಲಿ ಶಿವನ ಅರ್ಧಭಾಗದ ಎರಡು ಕೈಗಳಲ್ಲಿ ಅಭಯ ಹಸ್ತ-ಡಮರುಗಳಿವೆ. ಪಾರ್ವತಿಯ ಅರ್ಧಭಾಗದ ಎರಡು ಕೈಗಳಲ್ಲಿ ಕಮಲ ಮತ್ತು ಅಭಯಹಸ್ತವಿದೆ.

ಕಿರಾತಾರ್ಜುನ ಶಿಲ್ಪಗಳು ಅಪರೂಪ. ಆದರೆ ಅಕ್ಕಿ ಆಲೂರಿನ ಕೆರೆಯ ಬದಿಗಿನ ಅಡಕೆ ತೋಟದ ಗುಡಿಯಲ್ಲಿ ಮಧ್ಯಯುಗೀನ ಕಾಲದ ಈ ಶಿಲ್ಪ ಕಂಡುಬಂದಿದೆ. ಈ ಕಿರಾತಾರ್ಜುನ ಶಿಲ್ಪವು ಸು. ೦.೬೫ ಸೆಂ.ಮೀ. ಉದ್ದ, ೦.೬೦ ಸೆಂ.ಮೀ. ಅಗಲವಿದೆ. ಸ್ಥಳೀಕರು ಇದನ್ನು ವೆಂಕಟೇಶನೆಂದು ಆರಾಧಿಸುತ್ತಾರೆ. ಈ ಶಿಲ್ಪದಲ್ಲಿ ಶಿವ-ಪಾರ್ವತಿಯರು ವಿವಿಧ ವಸ್ತ್ರಾಭರಣಗಳನ್ನು ಧರಿಸಿ ತೂಕಬದ್ಧವಾಗಿ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಜಟಾಜೂಟ ಧಾರಿ ಚತುರ್ಭುಜನಾದ ಶಿವನ ಕೈಗಳಲ್ಲಿ - ಅಭಯ ಹಸ್ತದಲ್ಲಿ ಜಪಮಾಲೆ, ಬಾಣ, ಬಿಲ್ಲು, ಬತ್ತಳಿಕೆ ಮತ್ತು ಕಾಡುಹಂದಿಗೆ ಕಟ್ಟಿದ ವಸ್ತ್ರವನ್ನು ಹಿಡಿದಿರುವುದು ಅಪರೂಪವೆನಿಸಿದೆ. ಪಾರ್ವತಿಯು ದ್ವಿಭುಜಳಾಗಿದ್ದು ಅವಳ ಒಂದು ಕೈ ಅಭಯಮುದ್ರೆಯಲ್ಲಿದೆ. ಅದರಲ್ಲಿ ಜಪಮಾಲೆಯಿದೆ. ಇನ್ನೊಂದು ಕೈಯಲ್ಲಿ ಪದ್ಮವನ್ನು ಹಿಡಿದಂತೆ ಕಾಣುತ್ತದೆ. ಪಾರ್ವತಿಯ ಬಲಗಡೆ ಬಾಗಿಸಿ ನಿಲ್ಲಿಸಿದ ಒಂದು ಗಿಡವಿದ್ದು ಅದರ ಮೇಲೆ ಎರಡು ಮಂಗಗಳಿವೆ ಮತ್ತು ಒಂದು ಪಕ್ಷಿಯಿದೆ. ಬಹುಶಃ ಇದು ಕಪಿಧ್ವಜವಿರಬಹುದು. ಶಿವನ ತಲೆಯ ಮೇಲಿನ ಅಲಂಕೃತ ಪ್ರಭಾಮಂಡಲದ ಲತಾ ಸುರುಳಿಗಳಲ್ಲಿ ಗಂಧರ್ವರಿದ್ದಾರೆ. ಶಿವನ ಬಲಕ್ಕೆ ಕೆಳಗಡೆ ಒಂದು ನವಿಲಿದೆ ಮತ್ತು ಪಾರ್ವತಿ ಎಡಕ್ಕೆ ಮೂವರು ವಾದ್ಯಸಂಗೀತಮೇಳದವರಿದ್ದಾರೆ. ಶಿವ-ಪಾರ್ವತಿಯರ ಪೀಠದ ಅಂಚಿನಲ್ಲಿ ಬಲಗಡೆ ಪಾಶುಪತಾಸ್ತ್ರವನ್ನು ಸ್ವೀಕರಿಸಿದ ಅರ್ಜುನನಿದ್ದಾನೆ ಮತ್ತು ಎಡಗಡೆ ಬೇಟೆಯಿಂದ ಮಡಿದ ಕಾಡುಹಂದಿ (ಮೂಕದಾನವ)ಯಿದೆ. ಪೀಠ ಪಟ್ಟಿಕೆಯಲ್ಲಿ ಗಾಬರಿಗೊಂಡು ಕುಳಿತ ಋಷಿ ಮತ್ತು ಓಡುತ್ತಿರುವ ವನ್ಯಪ್ರಾಣಿಗಳಿವೆ. ಇದು ಕಾಡು ದೃಶ್ಯದ ಸಂಕೇತವಾಗಿದೆ. ವಸ್ತ್ರಾಭರಣಗಳ ಮತ್ತು ದೇಹಾಂಗದ ಶೈಲಿಯಿಂದ ಈ ಶಿಲ್ಪದ ಕಾಲ ಸು. ಕ್ರಿ. ಶ. ೧೨ನೇ ಶತಮಾನ.

ವಿವಿಧ ಕಾಲದ ಕಿರಾತಾರ್ಜುನೀಯ ಕಥಾನಕ ಶಿಲ್ಪಗಳು ಬೆಳಕಿಗೆ ಬಂದಿವೆ. ಈ ಬಗ್ಗೆ ಹಿರಿಯ ಪುರಾತತ್ವ ಶಾಸ್ತ್ರಜ್ಞ ಡಾ॥ಎಂ. ಎಸ್. ನಾಗಾರಾಜರಾವ್ ಅವರು ಒಂದು ಮಹತ್ವದ ಸಂಪುಟವನ್ನೇ ಬೆಳಕಿಗೆ ತಂದಿದ್ದಾರೆ. ಆದರೆ ಈ ಮಾದರಿಯ ಲಕ್ಷಣಗಳನ್ನೊಳಗೊಂಡ ಒಂದು ಪ್ರತ್ಯೇಕ ಆರಾಧನಾ ಕಿರಾತಾರ್ಜುನೀಯ ಶಿಲ್ಪ ಈವರೆಗೆ ಬೇರೆಡೆ ಕಂಡುಬಂದಂತೆ ಕಾಣುವುದಿಲ್ಲ.

ಭೈರವ: ಕುಳಿತ ಮತ್ತು ನಿಂತ ಚತುರ್ಭುಜಧಾರಿ ಭೈರವನ ವೈವಿಧ್ಯಮಯ ಶಿಲ್ಪಗಳಲ್ಲಿ ಆಡೂರು, ಮೇದೂರು, ಹಿರೇಕೆರೂರು, ಸೊರಟೂರು ಶಿಲ್ಪಗಳು ವಿಶಿಷ್ಟವೆನಿಸಿವೆ. ಸೊರಟೂರಿನ ನಿಂತ ಭಂಗಿಯ ಭೈರವನ ಕಿವಿ ಓಲೆಗಳು ವಿಶಿಷ್ಟವಿವೆ. ಹಿರೇಕೆರೂರಿನ ಶಿಲ್ಪದಲ್ಲಿ ನಿಂತ ಭಂಗಿಯ ಭೈರವನ ಪೀಠದಲ್ಲಿ ಮೂರು ಮುಖಗಳು ಮತ್ತು ಆತನ ಬದಿಗಳಲ್ಲಿ ತನ್ನ ಪರಿವಾರದವರಿರುವುದನ್ನು (ಪ್ರೇತ ಇತ್ಯಾದಿ)ನ್ನು ಕಾಣಬಹುದು. ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರು ಮತ್ತು ರಾಕ್ಷಸರ ತಲೆಯಿಂದ ಇಳಿಯುವ ರಕ್ತವನ್ನು ಕೆಳಗಡೆ ನಾಯಿಯು ನೆಕ್ಕುತ್ತಿರುವುದಿದೆ. ಕಾಲ ಸು. ಕ್ರಿ. ಶ. ೧೨ನೇ ಶತಮಾನ. ಕುಳಿತ ಭೈರವರ ಶಿಲ್ಪಗಳು ಖಂಡೆಬಾಗೂರು, ತುಪ್ಪದ ಕುರಹಟ್ಟಿ ಮತ್ತು ಹಿರೆಮಾಗನೂರುಗಳಲ್ಲಿದ್ದು ಅವರ ಕೈಗಳಲ್ಲಿ ಕತ್ತಿ, ಡಮರು, ತ್ರಿಶೂಲ ಮತ್ತು ಕಪಾಲಗಳಿವೆ. ರುಂಡಮಾಲೆ ಧರಿಸಿದ್ದಾರೆ. ಖಂಡೆಬಾಗೂರಿನ ಭೈರವನ ತಲೆಯ ಕೂದಲನ್ನು ದಪ್ಪನೆಯಾಗಿ ಸುತ್ತಲೂ ಚಿತ್ರಿಸಿರುವುದು ವಿಶಿಷ್ಟವೆನಿಸಿದೆ ಹಾಗೂ

ಶಿಲ್ಪ ಹಾವೇರಿ ತಾಲೂಕಿನ ಹಳೆರಿತ್ತಿ, ರಾಣೆಬೆನ್ನೂರ ತಾಲೂಕಿನ ಇಟಗಿ ಇತ್ಯಾದಿ ಕಡೆಗಳಲ್ಲಿವೆ. ಅದರ ಕಾಲ ಸು. ಕ್ರಿ. ಶ. ೮ನೇ ಶತಮಾನ. ರುಂಡ, ಮೇಲಿನ ಕೈಗಳು ಮುರಿದುಹೋದ ನರೇಗಲ್ಲಿನ ದೇವಿ ಶಿಲ್ಪದಲ್ಲಿ ತನ್ನ ಕೆಳಗಿನ ಎಡಗೈಯಿಂದ ಹಿಂದಕ್ಕೆ ತಿರುಗಿಸಿ, ಕೋಣದ ಬಾಯಿಂದ ಬಂದ ನಾಲಗೆಯನ್ನು ಬಿಗಿಯಾಗಿ ಹಿಡಿದಿದ್ದಾಳೆ. ಎಡಬದಿಗೆ ನಿಂತ ಸಿಂಹವು ತನ್ನ ಒಂದು ಕಾಲನ್ನು ಕೋಣದ ಮೇಲಿಟ್ಟಿರುವುದು, ಧರಿಸಿದ ವಸ್ತ್ರವು ತೊಡೆ ಭಾಗದವರೆಗೆ ಇಳಿಬಿಟ್ಟು ಬಿಗಿಯಾಗಿ ಸೊಂಟಕ್ಕೆ ಕಟ್ಟಿರುವುದು, ಕೆಳಗಿನ ಬಲಗೈಯಲ್ಲಿ ಹಿಡಿದ ತ್ರಿಶೂಲದಿಂದ ಯಾರನ್ನೂ ಹತ್ಯೆ ಮಾಡುವುದನ್ನು ತೋರಿಸಿಲ್ಲದಿರುವುದು ಗಮನೀಯ. ಸರಳ ದುಂಡನೆಯ ಬಳೆಗಳು, ದಪ್ಪನೆಯ ಕುಂಡಲಗಳು, ಹಾರ, ಕುಚಗಳು, ಸೊಂಟಪಟ್ಟಿಗಳು ಗುಪ್ತರ ಶಿಲ್ಪದ ಲಕ್ಷಣಗಳಂತೆ ಭಾಸವಾಗುತ್ತವೆ. ಇದರಿಂದ ಈ ಶಿಲ್ಪದ ಕಾಲ ಸು. ಕ್ರಿ. ಶ. ೫ನೇ ಶತಮಾನ.(!) ಮೇದೂರಿನ ಕ್ರಿ. ಶ. ಸು. ೧೦ನೇ ಶ.ದ. ಶಿಲ್ಪದಲ್ಲಿ ಕೈಗಳೆಲ್ಲ ಮುರಿದಿದ್ದು ಕೆಳಗಡೆಯ (ಬಲಕ್ಕೆ), ಸುರ (ಎಡಕ್ಕೆ) ಮತ್ತು ಇನ್ನಿತರ ಪರಿವಾರದವರಿರುವುದು ವಿಶಿಷ್ಟವೆನಿಸಿದೆ. ಕೋಣವನ್ನು



ಮಹಿಷ ಮರ್ದಿನಿ

ಬಲಗಾಲಿನಿಂದ ಮೆಟ್ಟಿದ್ದಾಳೆ. ಕೋಣನ ಬಾಯಿಂದ ಹೊರಬಂದ ಸುರನನ್ನು ಹಿಡಿದು ಅವನ ಎದೆಗೆ ತ್ರಿಶೂಲವನ್ನು ತಿವಿಯುತ್ತಿರುವುದು ಗಮನಾರ್ಹ. ಮತ್ತಿಹಳ್ಳಿಯ ಶಿಲ್ಪದಲ್ಲಿ ಕಂಬಗಳ ಮೇಲೆ ಮಕರತೋರಣವಿದ್ದು ಇಲ್ಲಿಯೂ ತ್ರಿಶೂಲದಿಂದ ಕೋಣವನ್ನು ತಿವಿಯುತ್ತಿರುವಳು. ಬಲಗಡೆ ಕೆಳಗಡೆ ಸಿಂಹ, ಎಡಗಡೆ ಅಸುರ ನಿಂತಿದ್ದಾರೆ. ಈ ಚತುರ್ಭುಜಧಾರಿಣಿಯ ಮೇಲಿನ ಎಡಗೈ ಮುರಿದಿದೆ. ಕೆಳಗಡೆ ಸತ್ತ ಶವಗಳಿವೆ. ವಸ್ತ್ರಾಭರಣಗಳ ಶೈಲಿಯಿಂದ ಅದರ ಕಾಲ ಸು. ಕ್ರಿ. ಶ. ೧೨ನೇ ಶತಮಾನ. ಗುಡಗುಡಿ ಶಿಲ್ಪದಲ್ಲಿ ಪ್ರಭಾವಳಿ ಸರಳ ಮತ್ತು ಮೊಟ್ಟೆ ಆಕಾರ. ಕೋಣವನ್ನು ಎಡಗಾಲಿನಿಂದ ಮೆಟ್ಟಿದ್ದಾಳೆ. ಅಷ್ಟಭುಜಧಾರಿ. ಕೆಳಗಿನ ಬಲಗೈಯಲ್ಲಿ ಕೋಣನ ಮುಖವನ್ನು ತಿವಿಯುವ ತ್ರಿಶೂಲ, ೨ನೇ ಕೈಯಲ್ಲಿ ಸುರನನ್ನು ತಿವಿಯುವ ಕತ್ತಿ, ೩ನೇ ಕೈಯಲ್ಲಿ ಚಕ್ರ, ೪ನೇ ಕೈಯಲ್ಲಿ ಬತ್ತಳಿಕೆ ಇವೆ. ಎಡ ಹಸ್ತಗಳಲ್ಲಿ ಶಂಖ, ಬಿಲ್ಲು ಬಾಣಗಳಿವೆ. ಕೊನೆಯ ಕೆಳಗಿನ ಎಡಗೈಯಿಂದ ಕೋಣನ ಬಾಯಿಂದ ಹೊರಬರುತ್ತಿರುವ ಸುರನನ್ನು ಬಿಗಿಯಾಗಿ ಅದುಮಿ ಹಿಡಿದಿದ್ದಾಳೆ. ಅದರ ಕಾಲ ಸು. ಕ್ರಿ. ಶ. ೧೦ನೇ ಶತಮಾನ. ಹಿರೇಕೆರೂರು, ಹಾವೇರಿ, ರಾಣೇಬೆನ್ನೂರು ಮತ್ತು ಬ್ಯಾಡಗಿ ತಾಲೂಕ ಪ್ರದೇಶಗಳ ಕ್ರಿ. ಶ. ೧೧-೧೨ನೇ ಶತಮಾನದ ಹೆಚ್ಚಿನ ಮಹಿಷಾಸುರಮರ್ದಿನಿ ಶಿಲ್ಪಗಳಲ್ಲಿ ದೇವಿಗೆ ಅಷ್ಟಭುಜಗಳಿರುವುದು ವಿಶೇಷ.

ವೈಷ್ಣವಿ : ನೀರಲಗಿಯ ಕಲ್ಗೇರಿ ಹೊಲದಲ್ಲಿ ಈ ಪ್ರದೇಶದ ಅಪರೂಪದ ಸು. ೯ನೇ ಶ.ದ ಬೃಹದಾಕಾರದ ಚತುರ್ಭುಜೆ ಆಸೀನ ವೈಷ್ಣವಿ ಶಿಲ್ಪದ ಕೈಗಳಲ್ಲಿ ಗದೆ, ಚಕ್ರ, ಶಂಖ (ಒಡೆದಿದೆ) ಮತ್ತು ಕಪಾಲ(?)ಗಳಿವೆ. ವಿಶೇಷತಃ ಕೆಳಗಡೆ ಬಲಕ್ಕೆ ಗರುಡನಿದ್ದಾನೆ; ಮೂರು ರೀತಿಯ ಬಳೆಗಳನ್ನು ಧರಿಸಿದ್ದಾಳೆ. ಕಿರೀಟ ತುದಿಯಲ್ಲಿ ಅರಳಿದ ಕಮಲದ ಅಲಂಕಾರವಿದೆ. ಪ್ರಭಾವಳಿ ಅರ್ಧವೃತ್ತಾಕಾರದಲ್ಲಿದೆ. ಇದು ಪ್ರತ್ಯೇಕ ಸಪ್ತಮಾತೃಕೆಗಳಲ್ಲೊಂದಾದ ಶಿಲ್ಪ. ಕಾಳಿಕಾ ಶಿಲ್ಪಗಳು ಶಿಲ್ಪಗಳು ನರೇಗಲ್(೩), ಖಂಡೆಬಾಗೂರು, ಆಡೂರು, ಹತ್ತಿಮತ್ತೂರು, ಮೇದೂರು (೨), ಶಿರುಗುಂಬ ಇತ್ಯಾದಿ ಸ್ಥಳಗಳಲ್ಲಿವೆ. ಆ ಸೀನ ಚತುರ್ಭುಜಧಾರಿಣಿ ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರು ಮತ್ತು ಕಪಾಲಗಳಿವೆ. ಕುಳಿತ ಭಂಗಿ ಹತ್ತಿಮತ್ತೂರು(೨)ಶಿಲ್ಪದಲ್ಲಿ ಆ ಸೀನ ದ್ವಿಭುಜೆ ದೇವಿಯ ಕೈಗಳಲ್ಲಿ ಕತ್ತಿ ಮತ್ತು ಕಪಾಲಗಳಿವೆ. ಅನೇಕ ಆಭರಣಧಾರಿಣಿ. ಕಾಲ ಸು. ಕ್ರಿ. ಶ. ೧೨ನೇ ಶತಮಾನ. ನರೇಗಲ್ಲಿನ ಸರ್ವೇಶ್ವರ ದೇವಾಲಯದ ಬದಿಯಲ್ಲಿ ೩ ದುಂಡಾದ ಚಾಮುಂಡಿ ಶಿಲ್ಪಗಳಿವೆ. ರುಂಡಗಳು ಮೇಲಿನ ಕೈಗಳು ಮುರಿದು ಬಿದ್ದಿವೆ. ಏಕಶಿಲೆಯಲ್ಲಿ ಮನುಷ್ಯಾಕಾರದ ಪ್ರತ್ಯೇಕ ಮೂರು ದೇವತೆಯರ ಶಿಲ್ಪಗಳು ಇವಾಗಿವೆ. ಸರಳಾಭರಣ ಅಲಂಕೃತರಾದ ಇವರು ಎತ್ತರದ ಪೀಠಗಳ ಮೇಲೆ ಪ್ರಲಂಬಾಸನದಲ್ಲಿ ಕುಳಿತಿದ್ದಾರೆ. ಸೀರೆಗಳನ್ನು ಸೊಂಟದಿಂದ ಪಾದದವರೆಗೆ ಬಿಗಿಯಾಗಿ ಉಟ್ಟಿದ್ದಾರೆ. ಅವರ ದೇಹಾಂಗ ಹಿಂಭಾಗಗಳಲ್ಲಿ ಯಜ್ಞೋಪವೀತ ಪಟ್ಟಿಗಳು ಮತ್ತು ಮಡಿಕೆಗಳ ಸೀರೆಯ ಪಟ್ಟಿಕೆಗಳಿವೆ. ಕೆಳಗಿನ ಕೈಗಳಲ್ಲಿ ಕಪಾಲಗಳಿರುವಲ್ಲಿ ಇವನ್ನು ಕಾಳಿ ಶಿಲ್ಪಗಳೆಂದು ನಂಬಲಾಗಿದೆ.

ಧರಿಸಿದ ವಸ್ತ್ರಾಭರಣ ಮತ್ತು ಶಿಲ್ಪದ ಶೈಲಿಯಿಂದ ಅವುಗಳ ಕಾಲ ಸು. ೧೧ನೇ ಶತಮಾನ. ಇಂತಹ ಅಪರೂಪ ಶಿಲ್ಪಗಳು ದಕ್ಷಿಣ ಕರ್ನಾಟಕದ ಕೆಲವು ಗಂಗಶಿಲ್ಪಗಳನ್ನು ಹೋಲುವುದು ಗಮನೀಯ.

ಸು. ೧೧ನೇ ಶ.ದ **ಚಾಮುಂಡಿಯ ಶಿಲ್ಪಗಳು** ಖಿಂಡೆಬಾಗೂರು, ಲಕ್ಷ್ಮೇಶ್ವರ ಇನ್ನಿತರ ಸ್ಥಳಗಳಲ್ಲಿವೆ. ಕುಳಿತ ಭಂಗಿಯಲ್ಲಿರುವ ದೇವಿಗೆ ಚತುರ್ಭುಜಗಳಿವೆ. ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರು ಮತ್ತು ಕಪಾಲಗಳಿವೆ. ಅನೇಕ ಆಭರಣಗಳನ್ನು ಧರಿಸಿರುವುದರ ಜೊತೆಗೆ ರುಂಡಮಾಲೆ ಧರಿಸಿದ್ದಾಳೆ. ದುಂಡಾಕೃತಿಯ ಕಿವಿ ಓಲೆಗಳು ಸರಳವಾಗಿವೆ ಮತ್ತು ಗಾತ್ರದಲ್ಲಿ ದೊಡ್ಡವು. ಲಕ್ಷ್ಮೇಶ್ವರದ ಕಡಚಿಯಲ್ಲಮ್ಮನ ಗುಡಿಯಲ್ಲಿರುವ ಸು. ೧೧ನೇ ಶ.ದ ದುಂಡಾಕಾರದ ಎರಡು ವಿಶಿಷ್ಟ ಚಾಮುಂಡಿ ಶಿಲ್ಪಗಳ ದೇವತೆಯರು ಚತುರ್ಭುಜಧಾರಿಣಿಯರು. ಕೈಗಳು ಮುರಿದಿದ್ದು ಕಾಲಾಂತರದಲ್ಲಿ ಜೋಡಿಸಲಾಗಿದೆ, ಅಲ್ಲಲ್ಲಿ ತಿದ್ದಲಾಗಿದೆ. ಪೀಠದಲ್ಲಿ ಮಕರ, ಹಾವು, ಆನೆ ಮತ್ತು ಅಸುರರ ಚಿತ್ರಗಳಿರುವುದು ಗಮನೀಯ. ಖಿಂಡೆಬಾಗೂರಿನಲ್ಲಿ ದುಂಡಾಕಾರದ ದ್ವಿಭುಜ **ಪಾರ್ವತಿಯ** ಶಿಲ್ಪವಿದೆ. ಈಕೆಯ ಕೈಗಳಲ್ಲಿ ಕಮಲದ ಮೊಗ್ಗು ಮತ್ತು ಕಪಾಲ ಅಥವಾ ಲಿಂಗ(?)ಗಳಿವೆ. ಸವ್ಯಲಲಿತಾಸನದಲ್ಲಿ ಇದ್ದಾಳೆ; ಧರಿಸಿದ ವಸ್ತ್ರಾಭರಣಗಳಿಂದ ಈ ಶಿಲ್ಪದ ಕಾಲ ಸು. ಕ್ರಿ. ಶ. ೧೨ನೇ ಶತಮಾನವಾಗಿದೆ. ಲಕ್ಷ್ಮೇಶ್ವರದ ಪಾರ್ವತಿ ಶಿಲ್ಪ ವಿಜಯ ನಗರೋತ್ತರ ಕಾಲದ್ದು.

ಪ್ರಮುಖವಾಗಿ ಕೆರೆಗಳ ತೂಂಬಿನ ಹತ್ತಿರ ಇರುವ **ಗಜಲಕ್ಷ್ಮಿ** ಶಿಲ್ಪಗಳು ಶಿಗ್ಗಾವ (೨), ಚಿಕ್ಕೇರೂರ, ಕಚವಿ, ಅಕ್ಕಿಆಲೂರು(೨) ಇತ್ಯಾದಿ ಕಡೆಗಳಲ್ಲಿವೆ. ಇವುಗಳಲ್ಲಿ ಈಗ ಅಧ್ಯಯನ ಮಾಡಿರುವಂತೆ. ಕಚವಿಯ ಮಹಮದ್ ಪೀರಮನೆ ಬದಿಗೆ ನಿಲ್ಲಿಸಿದ ಶಿಲ್ಪದಲ್ಲಿ ಲಕ್ಷ್ಮಿಯು ಪದ್ಮಾಸನದಲ್ಲಿ ಮಧ್ಯ ಕುಳಿತಿದ್ದಾಳೆ. ಬದಿಯ ಆನೆಗಳು ಲಕ್ಷ್ಮಿಗೆ ತಮ್ಮ ಸೊಂಡಿಲಲ್ಲಿ ಹಿಡಿದ ಕ್ಷೀರವನ್ನು ಮಗಿಗಳಿಂದ ಬಿಡುತ್ತಿವೆ. ಅರ್ಧವೃತ್ತಾಕಾರದ ಈ ಶಿಲ್ಪ ಪಟ್ಟಿಯಲ್ಲಿ ವಜ್ರ, ಪತ್ರಗಳ ಏಕಸಾಲಿನ ಅಲಂಕಾರವಿದೆ ಹಾಗೂ ಕೆಳಗಡೆ ಮಕರಗಳಿವೆ. ಅಕ್ಕಿಆಲೂರಿನ ಕೆರೆ ಬದಿಗಿರುವ ಗಜಲಕ್ಷ್ಮಿ ಶಿಲ್ಪದಲ್ಲಿ ಎರಡು ಸಾಲಿನ ಶಾಸನವಿದೆ. ಈ ಶಿಲ್ಪದಲ್ಲಿ ಲಕ್ಷ್ಮಿ ಬದಿಗೆ ಆಳೆತ್ತರದ ಎರಡು ಆನೆಗಳು ನಿಂತು ಕ್ಷೀರಾಭಿಷೇಕ ಮಾಡುತ್ತಿವೆ. ಅವುಗಳ ಮುಂದೆ ಮತ್ತು ಲಕ್ಷ್ಮಿಯ ಬದಿಗಳಲ್ಲಿ ಚೌರಿಧಾರಿ ಸೇವಕಿಯರು ಮತ್ತು ಈ ಆನೆಗಳ ದೇಹಭಾಗದ ಮೇಲೆ ಇನ್ನೆರಡು ಆನೆಗಳ ಮುಖಭಾಗಗಳಿರುವುದು ಗಮನೀಯ. ಇವುಗಳ ಕಾಲ ಕ್ರಿ. ಶ. ೮-೯ನೇ ಶತಮಾನ.

**ಸರಸ್ವತಿಯ ಶಿಲ್ಪಗಳು** ಮೇದೂರು, ನಾಗಾವಿ, ನೀರಲಗಿ, ನರೇಗಲ್, ಹೊಟ್ಟೂರು, ಲಕ್ಷ್ಮೇಶ್ವರ ಇತ್ಯಾದಿ ಸ್ಥಳಗಳಲ್ಲಿದ್ದು, ಅಬ್ಬಲೂರು ಮುತ್ತೂರು ಇತ್ಯಾದಿ ಕಡೆಗಳಲ್ಲೂ ಸರಸ್ವತಿ ದೇವಾಲಯಗಳಿರುವುದು ಗಮನೀಯ. ಚತುರ್ಭುಜೆ ದೇವಿಯರ ಕೈಗಳಲ್ಲಿ ಅಭಯ (?), ಪಾಶ, ಅಂಕುಶ ಮತ್ತು ಪುಸ್ತಕಗಳಿದ್ದು ಈ ಪೈಕಿ ಸು. ೧೧ನೇ ಶ.ದ. ಅಬ್ಬಲೂರಿನ ಶಿಲ್ಪ ಬಹು ಸುಂದರವಾಗಿದೆ.

**ಸಪ್ತಮಾತೃಕೆಯರ ಶಿಲ್ಪಗಳು** ಸಾಮಾನ್ಯವಾಗಿ ಪ್ರತಿಯೊಂದು ಪ್ರಾಚೀನ ಗ್ರಾಮಗಳಲ್ಲಿದ್ದರೂ, ಹೇಳಿಕೊಳ್ಳುವಂತಹ ಶಿಲ್ಪಗಳು ಲಭ್ಯವಾಗಿಲ್ಲ. ಹಾವೇರಿಯಿಂದ ಕನ್ನಡ ಸಂಶೋಧನ ಸಂಸ್ಥೆಗೆ ತಂದ (ಈ ಹಿಂದೆ) ಅಪರೂಪದ **ಅಷ್ಟಮಾತೃಕೆಯರ** ಶಿಲ್ಪ ಹಾಗೂ ಆಸ್ಥಳದ ಸಿದ್ಧೇಶ್ವರ ದೇವಾಲಯದ ಛತ್ತಿನಲ್ಲೂ ಅಷ್ಟಮಾತೃಕೆಯರ ಶಿಲ್ಪಗಳಿರುವುದು ಗಮನಾರ್ಹ ಸಂಗತಿ. ಸಪ್ತಮಾತೃಕೆಯರನ್ನು ಉತ್ತರಾಂಗದಲ್ಲಿ ಬೀದರ ಜಿಲ್ಲೆಯ ನಾರಾಯಣಪುರದ ಈ ಕಾಲದ ಶಿವದೇವಾಲಯದಲ್ಲಿರುವುದನ್ನೂ ಈ ಸಂದರ್ಭದಲ್ಲಿ ಸ್ಮರಿಸಬಹುದು. ಸಪ್ತಮಾತೃಕೆಯರನ್ನು ದೇವಾಲಯದ ಛತ್ತು ಅಥವಾ ದ್ವಾರಪಟ್ಟಿಯಲ್ಲಿ ತೋರಿಸಿದ ಈ ಕಾಲದ ಕೆಲವು ದೇವಾಲಯಗಳು ಮಹಾರಾಷ್ಟ್ರದಲ್ಲಿದ್ದು ಈ ಬಗ್ಗೆ ವಿಶೇಷ ಅಧ್ಯಯನದ ಅವಶ್ಯಕತೆಯಿದೆ.

ವೈವಿಧ್ಯಮಯ **ಪಾದಪೀಠಗಳು** ಈ ಪ್ರದೇಶದಲ್ಲೂ ಇವೆ. ಈ ಪಾದಪೀಠಗಳನ್ನು ನಿರ್ಮಿಸಿ ಆರಾಧಿಸುವುದು ಹಿಂದುಗಳಲ್ಲದೆ ಜೈನರಲ್ಲೂ ಇದೆ. ಇವುಗಳು ಮಡಿದ ಯತಿಗಳ ಸ್ಮಾರಕವಾಗಿ ನಿರ್ಮಿಸಿದ ಪೀಠಗಳಾಗಿವೆ. ಹಿಂದುಗಳಿಗೆ ಸೀಮಿತವಾದ ಈ ರೀತಿಯ ಪಾದಪೀಠಗಳಲ್ಲಿ ದೇವಿಹೊಸೂರ, ಮತ್ತಿಹಳ್ಳಿ, ಹೊಟ್ಟೂರು ಪ್ರಮುಖವೆನಿಸಿವೆ. ದೇವಿಹೊಸೂರಿನ ಬನಶಂಕರಿ ಗುಡಿ ಮುಂದೆ ಅನೇಕ ಪಾದಪೀಠಗಳಿದ್ದು ಅವುಗಳ ಒಂದರಲ್ಲಿ ಜೋಡು ಪಾದ ಪೀಠಗಳು ಹಾವಿಗೆ ರೀತಿಯಲ್ಲಿವೆ. ಅದರ ಪೀಠಕ್ಕೆ ಪ್ರನಾಳವೂ ಇದೆ. ಮತ್ತಿಹಳ್ಳಿಯಲ್ಲಿ ಎರಡು ಜೋಡು ಪಾದ ಪೀಠಗಳು ರೇಖಾಚಿತ್ರದಲ್ಲಿವೆ. ಹೊಟ್ಟೂರಿನಲ್ಲಿ ಎರಡು ಜೋಡು ಪಾದ ಪೀಠಗಳ ಸುತ್ತ, ದೇವಿಹೊಸೂರಿನ ಒಂದು ಪೀಠದಲ್ಲಿ ಜೋಡುಪಾದಗಳ ಸುತ್ತ ನಾಗಸರ್ಪಗಳಿರುವುದು ಗಮನಾರ್ಹ.

**ನಾಗಶಿಲ್ಪಗಳಲ್ಲಿ** ಹಾವು ಮತ್ತು ಮನುಷ್ಯ ಮತ್ತು ಹಾವು ಮಾದರಿಯ ಶಿಲ್ಪಗಳಿವೆ. ಅವುಗಳಲ್ಲಿ ನಾಗ-ನಾಗಿಣಿಯರ ಮನುಷ್ಯ-ಹಾವಿನ ದೇಹಾಂಗವುಳ್ಳ ಶಿಲ್ಪಗಳು ಗುಡಗುಡಿ, ನೀರಲಗಿ ಮಹತ್ವವೆನಿಸಿವೆ. ನಾಗ ಖಡ್ಗವನ್ನು, ನಾಗಿಣಿ ಹಾರವನ್ನು ಹಿಡಿದ ಶಿಲ್ಪಗಳು ಗುಡಗುಡೆಯ ರಾಮಲಿಂಗನ ಗುಡಿ ಮತ್ತು ನೇರಲಗಿಯ ಬಡಕ ಬಸವಣ್ಣನ ಗುಡಿಯಲ್ಲಿವೆ. ಇವುಗಳ ಹಾವಿನ ದೇಹಾಂಗಕ್ಕೆ ನಾಲ್ಕು ಸುತ್ತಿನ ಸಿಂಬೆಗಳಿವೆ. ನಾಗನಿಗೆ ಐದು ಮತ್ತು ನಾಗಿಣಿಗೆ ಮೂರು ಹೆಡೆಗಳಿವೆ.

ಹಾವಿನಾಕಾರದ ನಾಗ-ನಾಗಿಣಿಗಳ ದೇಹಗಳು ಹಗ್ಗದಂತೆ ಏಕವಾಗಿ ಸುತ್ತಿಕೊಂಡ ಶಿಲ್ಪವೊಂದು ಮಲಗುಂದದಲ್ಲಿದೆ.



ಇನ್ನೊಂದು ಶಿಲ್ಪದಲ್ಲಿ ಹಾವುಗಳ ಮುಖಗಳು ಅಭಿಮುಖವಾಗಿವೆ. ಸುತ್ತಿದ ಅವುಗಳ ದೇಹಾಂಗಗಳಲ್ಲಿ ಹಲವಾರು ವೃತ್ತಗಳಿವೆ. ಹಳೆಹೊನ್ನತ್ತಿಯ ಶಿಲ್ಪದಲ್ಲಿ ಮೇಲಿನ ವೃತ್ತದಲ್ಲಿ ಮೂರು ಚುಕ್ಕೆಗಳು ಎರಡು ಸಾಲಿನಲ್ಲಿರುವುದು ಗಮನೀಯ. ಅವುಗಳ ಬದಿಗಳಲ್ಲಿ ನಾಗಗಳಿವೆ. ಬಂಕಾಪುರದ ಹತ್ತಿರದ ಕುಂದೂರಿನ ಗೋಡೆಯಲ್ಲಿರುವ ಶಿಲ್ಪದಲ್ಲಿ ಏಕನಾಗದ ದೇಹಾಂಗಕ್ಕೆ ಅನೇಕ ಗಂಟುಗಳಿದ್ದು, ಅದರ ಬಾಲ ಕುತ್ತಿಗೆಯಲ್ಲಿ ಗಂಟು ಹಾಕಲಾಗಿದೆ. ಅದಕ್ಕೆ ಐದು ಹೆಡೆಗಳಿರುವುದು ಗಮನೀಯ. ಖಂಡೆಬಾಗೂರಿನ ಒಂದು ಶಿಲ್ಪದಲ್ಲಿ ಇಬ್ಬರು ನಿಂತ ಹೆಂಗಸರ ಮಧ್ಯ ಹಾವಿನಾಕಾರದ ನಾಗದಂಪತಿಗಳು ಪರಸ್ಪರ ಸುತ್ತಿ ನಿಂತಿರುವುದನ್ನು ಚಿತ್ರಿಸಿರುವುದು ವಿಶೇಷ. ಇವರು ವಿಷಕನ್ನೆಯರಿರಬಹುದು (?)

**ಬ್ರಹ್ಮಕಂಬಗಳಾಗಿ** ಏಕಕಂಬದ ತುದಿಯಲ್ಲಿ ನಾಲ್ಕು ಮುಖವುಳ್ಳ ಶಿಲ್ಪಗಳು ಗ್ರಾಮಗಳ ಅಂಚಿನಲ್ಲಿ ನೆಟ್ಟಿರುವುದನ್ನು ಹಲವಾರು ಕಡೆಗಳಲ್ಲಿ ಕಾಣಬಹುದು. ಇವು ಮುನವಳ್ಳಿ, ಹೊಟ್ಟೂರು, ಹುಲಗೂರು, ಹಂಸಭಾವಿ, ಮತ್ತಿಹಳ್ಳಿ ಇತ್ಯಾದಿ ಸ್ಥಳಗಳಲ್ಲಿವೆ. **ಕೋಣನ ತಲೆಯುಳ್ಳ ಶಿಲ್ಪಗಳು** ಕಚವಿ, ಹೊಟ್ಟೂರು ಇತ್ಯಾದಿ ಕಡೆಗಳಲ್ಲಿದ್ದು, ಇವೆಲ್ಲದರ ಸಾಂಸ್ಕೃತಿಕ ಮಹತ್ವವನ್ನು ತಿಳಿಯಬೇಕಿದೆ. ಚೌರಿ ಹಿಡಿದು ಕುಳಿತ ದ್ವಾರಪಾಲಕನ ಸು. ೧೧ನೇ ಶ.ದ. ಶಿಲ್ಪ ದೇವಗಿರಿಯಲ್ಲಿದ್ದು ಅವನು ಧರಿಸಿದ ವಸ್ತ್ರಾಭರಣಗಳು ತುಂಬಾ ಆಕರ್ಷಣೀಯ.

**ಜೈನ ಶಿಲ್ಪಗಳು :** ಜೈನಧರ್ಮದ ತೀರ್ಥಂಕರ ಶಿಲ್ಪಗಳು ಲಕ್ಕುಂಡಿ, ಲಕ್ಷ್ಮೇಶ್ವರ, ದೇವಗಿರಿ ನಾವಳ್ಳಿ, ಗುಡಗೇರಿ ಇತ್ಯಾದಿ ಸ್ಥಳಗಳಲ್ಲಿ ಮತ್ತು ನಿಷಿಧಿಗಳು ಹಳೆಹೊನ್ನತ್ತಿ, ಆಡೂರು (೭) ಸಾವಿಕೇರಿ ಇತ್ಯಾದಿ ಕಡೆಗಳಲ್ಲಿವೆ. ಚೌವೀಸ್ ತೀರ್ಥಂಕರರ ಇಪ್ಪತ್ನಾಲ್ಕು ಪೀಠವುಳ್ಳ ಶಿಲೆಯು ಲಕ್ಷ್ಮೇಶ್ವರದ ಶಂಖಬಸದಿಯ ಹಿಂದೆ ಮತ್ತು ಲಕ್ಕುಂಡಿ ಬ್ರಹ್ಮಜಿನಾಲಯದ ಬದಿಯಲ್ಲಿವೆ. ಇನ್ನಿತರವು ಮಹಾವೀರ, ಶಾಂತಿನಾಥ ಇತ್ಯಾದಿ ಶಿಲ್ಪಗಳಾಗಿವೆ. ನಿಷಿಧಿಗಳಲ್ಲಿ ಸಾಮಾನ್ಯ ಲಕ್ಷಣಗಳಿವೆ.

**ಜಡೆಯುಳ್ಳ ಶಿಲ್ಪ :** ಲಕ್ಷ್ಮೇಶ್ವರದಲ್ಲಿ ಹಾಳುಬಿದ್ದ ಕಿರು ದುರುಗಮ್ಮನ ಸು. ೧೨ನೇ ಶ.ದ. ಗುಡಿಯಬದಿಯಲ್ಲಿ ಕಣ್ಣೊಂದು ಒಡೆದಿರುವ ರುಂಡಶಿಲ್ಪ ದೊರೆತಿದೆ. ತಲೆಯ ಕೇಶವು ಉಂಗುರಾಕೃತಿಯಲ್ಲಿ ಮುಂಭಾಗದಲ್ಲಿದ್ದರೆ ಹಿಂಭಾಗದಲ್ಲಿ ಕೇಶವನ್ನು ಎಳೆದು ಜಡೆಯಾಗಿ ಪರಿವರ್ತಿಸಿ ತೋರಿಸಿರುವುದು ಅಪರೂಪವೆನಿಸಿದೆ. **ಗೋಸಾಸ ಕಂಬಗಳು :** ಸೊರಟೂರಿನಲ್ಲಿ ನಾಲ್ಕು, ಖಂಡೆಬಾಗೂರಿನಲ್ಲಿ ಗುಡ್ಡದಲ್ಲಿ ಎಂಟು (ಮೂರು ಸಾಲಿನಲ್ಲಿ ೨: ೩:೩), ಕ್ಯಾಸನೂರಿನ ರಾಮಲಿಂಗ ಗುಡಿ ಮುಂದುಗಡೆ ಇರುವವು. ಅವುಗಳಲ್ಲಿ ಹೊಸ ಲಕ್ಷಣಗಳೇನು ಇರುವುದಿಲ್ಲ.

ದೇವಾಲಯಗಳಿಗೆ ಸೀಮಿತವಾದ ಕ್ರಿ. ಶ. ೧೧ನೇ ಶತಮಾನದ **ಕಂಬಗಳು** ಆಡೂರು (೧), ಸಿಡೇನೂರು (೨), ನೀರಲಗಿ (೨), ಮಾಸೂರು (೨) ಹಾಗೂ **ಮಕರ ತೋರಣಗಳು** ಆಡೂರಿನ ಮಲತೇಶನ ಗುಡಿ ಎದುರಿಗೆ (೨) ಇವೆ. ಈ ಕಂಬಗಳ ಕಾಲ ಕ್ರಿ. ಶ. ೧೨ನೇ ಶತಮಾನ. ಇನ್ನೊಂದು ಮಾದರಿಯ ಕಂಬಗಳು ದೇವಗಿರಿಯಲ್ಲಿವೆ. ಈ ಕಂಬಗಳ ಕಾಂಡಭಾಗದ ನಾಲ್ಕು ಮುಖಗಳಲ್ಲಿ ಮೂರು ಸಾಲಿನಲ್ಲಿ ವಿವಿಧ ಚಿತ್ರಗಳಿರುವುದು ಗಮನೀಯ. ಕೆಳಗಡೆ ಮಕರತೋರಣವುಳ್ಳ (ಪಂಜರ) ಮಧ್ಯ ಬ್ರಹ್ಮ, ವಿಷ್ಣು, ಶಿವ, ಸೂರ್ಯ (?), ನಟರಾಜ ಹಾಗೂ ಅವರ ಪರಿವಾರದವರಿದ್ದಾರೆ. ತಲಾ ಒಂದು ಕಂಬದ ಕೆಳಪಟ್ಟಿಯ ನಾಲ್ಕು ಮೂಲೆಗಳಲ್ಲಿ ಯಕ್ಷರಿದ್ದಾರೆ. ಮೇಲಿನ ಪಟ್ಟಿಯಲ್ಲಿ ಗಣೇಶ, ಶಿವಲಿಂಗ, ಶಿವ, ಸೂರ್ಯ, ಕುಳಿತ-ನಿಂತ ಗಣೇಶರಿದ್ದಾರೆ. ಅವರ ಬದಿಗಳಲ್ಲಿ ಅಷ್ಟದಿಕ್ಪಾಲಕರಿದ್ದಾರೆ. ಅವುಗಳ ಕಾಲ ಸು. ಕ್ರಿ. ಶ. ೧೨ನೇ ಶತಮಾನ.

**ವೀರಶೈವ ಮಠಗಳ** ಪೈಕಿ ವಿಶಾಲವಾದ ಹಾಗು ಮಹತ್ವದ ನರೇಂದ್ರದ ಗುಡ್ಡದಮಠಕ್ಕೆ ಮೂರು ಪ್ರಮುಖ ಆವರಣಗಳಿವೆ. ಗರ್ಭಗೃಹದಲ್ಲಿ ಸಂಗಮೇಶ್ವರ ಶಿವಲಿಂಗವಿದೆ. ಮುಂಬದಿಯಲ್ಲಿ ಆಯತಾಕಾರದ ವಿಶಾಲ ಆವರಣವಿದ್ದು ಮುಂದಿನ ಪಡಸಾಲೆಗೆ ತಾಗಿದ ಉಪ್ಪರಿಗೆಯುಳ್ಳ ಚೌಕಾದ ಮಧ್ಯಭಾಗದಲ್ಲಿ ತೆರೆದ ಕಟ್ಟಡವಿದೆ. ಅಲ್ಲಿಂದ ಪಡಸಾಲೆಗೆ ಹೊಂದಿ ಮೆಟ್ಟಣಿಕೆಗಳಿವೆ. ಅದರ ಬಲಗಡೆ ನಾಲ್ಕು ಸಮಾಧಿಗಳು, ಹಾಗು ವಿಶಾಲ ಉಪ್ಪರಿಗೆಗಳಿವೆ. ಹೆಂಚಿನ ಮಾಳಿಗೆ ಇದೆ. ಈ ಮಂಟಪದ ಪ್ರವೇಶದ್ವಾರ ವಿಶಾಲವಾಗಿದ್ದು ಅದರ ಛತ್ತಿನಲ್ಲಿ ಸುಂದರ ನಾಗಮಂಡಲವಿದೆ. ಈ ಮಠದ ಹಿಂಬದಿಯ ಗೋಡೆ ಮೇಲೆ ಕಂಗೂರಗಳ ಅಲಂಕರಣವಿದೆ. ಈ ಮಠವು ಉಜ್ಜಯಿನಿ ಪೀಠಕ್ಕೆ

ಸೇರಿದ ಶಾಖೆಯಾಗಿ ಈಗ ಸಂಸಾರಿ ಮಠವಾಗಿದೆ. ಈ ಪ್ರದೇಶದ ಮುಮ್ಮಡಿ ದೇಸಾಯಿ ಅವರು ಈ ಮಠದ ಪರಮ ಭಕ್ತರು. ಹಿಂದೆ ರಂಭಾಪುರಿ ಜಗದ್ಗುರುಗಳು ಮತ್ತು ಮೈಸೂರಿನ ಮಹಾರಾಜರು ಈ ಮಠಕ್ಕೆ ಭೆಟ್ಟಿ ನೀಡಿದ್ದರೆನ್ನಲಾಗಿದೆ.

**ಶಿಲಾಶಾಸನಗಳು**

ಮಂತಗಿಯಲ್ಲಿಯ ಹೊಸ ಶಾಸನಗಳಿಂತಿವೆ:

i) ರಾಷ್ಟ್ರಕೂಟ ಅಕಾಲವರ್ಷನ ಕಾಲದಲ್ಲಿ ಲೋಕಟೆ, ಬನವಾಸಿ ನಾಡನ್ನು ಆಳುವಾಗ ಗಾಮುಣ್ಣನೊಬ್ಬನು ಮನ್ತಾಗೆಯ ಅಧಿಕಾರಿಯಾಗಿದ್ದ. ಹಾಗೂ ಬಡಣ್ಣೆಯನು ಈ ಕಾಲದಲ್ಲಿ ಆಳುತ್ತಿದ್ದು ಅಲ್ಲಿಯ ಮಹಾಜನರಿಗೆ ದತ್ತಿ ನೀಡಿದಂತಿದೆ. ಈ ಶಾಸನದ ಕೆಲವು ಅಕ್ಷರಗಳ (ಶ , ನ) ಶೈಲಿಯಲ್ಲಿ ಪ್ರಾಚೀನತೆ ಇದೆ.

**ಶಾಸನ ಪಾಠ**

೧ ಸ್ವಸ್ತಿ ಕನ್ನರ ಅಕಾಲವರ್ಷ...
೨ ಜಾಧಿರಾಜ ಪರಮೇಶ್ವರ ಭಟ್ಟಾ..
೩ ಪೃಥಿವೀರಾಜ್ಯನ್ಗೆಯಿ ಲೋ [ಕಟೆ ಬ]
೪ ನವಾಸಿ ಪನ್ನಿರ್ಚ್ಛಾಸಿರಮನಾಳೆ
೫ ಗಾಮುಣ್ಣಂ ಮನ್ತಾಗೆಯನಾಗೆ
೬ ಬಣ್ಣನೆಯ ನಾಟುಬ್ಬಂ ಗಾಮು (ಣ್ಣಂ)
೭ ಯೆಳನನ್ನ...ನುನ್ ಮಣ್ಣನು
೮ ಮನ್ತಾಗೆಯ ಮಹಾಜನಕ್ಕೆ ಆರುಣವಿರಂ
೯ ಗೊ . ಣ್ಣನುಂ

ii) ಮನ್ತಗೆಯ ಈಶ್ವರ ಗುಡಿ ಎದುರಿಗಿನ ಶೈವದ್ವಾರ ಫಲಕದ ಸು. ೧೦ನೇ ಶ. ದ ಶಾಸನದಲ್ಲಿ ಅದನ್ನು ಕುಳುಗರ ಬೀರಿ ಮಾಡಿಸಿದಳೆಂದು ಉಕ್ತವಾಗಿದೆ.

**ಶಾಸನ ಪಾಠ**

೧ ಕುಳುಗರ ಬಿರಿ
೨ ಜಿ ಮಾಡಿಸಿದಳು ಮಂಗಳ

iii) ಅಕ್ಕಿ ಆಲೂರಿನ ಗಜಲಕ್ಷ್ಮಿ ಫಲಕದಲ್ಲಿರುವ ಕ್ರಿ. ಶ. ೫೪೮ರ ಶಾಸನದಲ್ಲಿ ವಿವರಗಳು ಅಸ್ಪಷ್ಟ. ಪಾಠ ಹೀಗಿದೆ.

**ಶಾಸನ ಪಾಠ.**

೧ ಸ್ವಸ್ತಿ ಶಕವರಿಷ ನೆನ್ನೂಱ ಎಪತ್ತಾರನೆಯ ನಳ ಸಂಬತ್ಸರ.. ಬಹುಳ
೨ ... ಣ್ಬರ ಸುಕ್ರವಾರ

iv) ಹಿರೆಹುಲ್ಯಾಳದ ಈಶ್ವರ ದೇವಾಲಯದ ಹತ್ತಿರದ ಕ್ರಿ. ಶ. ೯ನೇ ಶತಮಾನಾಂತ್ಯದ ಶಾಸನದಲ್ಲಿ ರಾಷ್ಟ್ರಕೂಟ ಕನ್ನರನ ಕಾಲದಲ್ಲಿ ಬಹುಶಃ ಬನವಾಸಿನಾಡನ್ನು ಕಲಿವಿಟ್ಟನು ಆಳುವಾಗ ಅಕ್ಕಣನೆಂಬವನು ಪೆರೂರಿನ ಗೋವು ಹಿಡಿದಾಗ ವೈರಿಭಯಂಕರ ದೇವನು ಹೋರಾಡಿ ಅವನನ್ನು ಸಾಯಿಸಿ ವೀರ ಸ್ವರ್ಗಸ್ಥನಾದ ಬಗ್ಗೆ ಹೇಳಿದೆ. ಚಿತ್ರವಿಲ್ಲದ ಗೋಗ್ರಹಣ ಶಾಸನವಿದು.

**ಶಾಸನ ಪಾಠ**

೧ ಸ್ವಸ್ತಿ ಶ್ರೀಟ್ಟೆಲ್ಲನ್‌ನಾಡಾಳೆ
೨ ಇರ್ಬ್ಬನ್ನಿಯರ ದೇವ ರಿಪುಲಾ
೩ ಲವಟಿ ಆ ಪೆರೂರ್ ತೊಱು
೪ ಅಕ್ಕಣ ಕೊಳೆ ಅವನ್ ಇ-
೫ ಕ್ಕಿಸಿ ಸತು ಸ್ವರ್ಗಾಲಯ-
೬ ಕ್ಕೆ ಸನ್ದರ್

**ನರೇಂದ್ರದ ಶಾಸನ:** ಧಾರವಾಡ ನಗರದಿಂದ ಸುಮಾರು ೧೦ ಕಿ. ಮೀ. ದೂರದ ನರೇಂದ್ರ ಗ್ರಾಮದಲ್ಲಿ ಮನೆ ಪಾಯ ಅಗೆಯುವಾಗ ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಪಟ್ಟದ ರಾಣಿ ಮೈಳಲದೇವಿಯ ೧೧೫ ಸಾಲಿನ ಒಂದು ಮಹತ್ವದ ಶಿಲಾಶಾಸನ ಪತ್ತೆಯಾಗಿದೆ. (ಈ ಶಾಸನದ ಪಾಠವನ್ನು ಲೇಖಕರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳಾದ ಶ್ರೀ ಎಂ. ಪಾಟೀಲ, ಶ್ರೀ ದೇಸಾಯಿ ಮತ್ತು ಕು॥ ಅಜ್ಜಣ್ಣನವರ ಓದಿದ್ದನ್ನು ಕೃತಜ್ಞತೆಯಿಂದ ಸ್ಮರಿಸಲಾಗಿದೆ.)

ಈವರೆಗೆ ಈ ರಾಣಿಯ ಒಂದೇ ಶಾಸನವು ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕನ್ನವಳ್ಳಿಯಲ್ಲಿ ದೊರೆತಿತ್ತೆಂದು ನಂಬಲಾಗಿದೆ. ಈ ಶಾಸನದಿಂದ ಈ ರಾಣಿಯ ಗುಣ, ರೂಪ, ಇತ್ಯಾದಿ ಹೆಚ್ಚಿನ ವಿವರಗಳು ಪ್ರಥಮ ಬಾರಿಗೆ ತಿಳಿಯುವಲ್ಲಿ ಈಕೆಯನ್ನು ಪಟ್ಟಮಹಾದೇವಿ, ಮೈಳಲದೇವಿ ಮತ್ತು ಮೈಳಲ ಪಟ್ಟಮಹಾದೇವಿ ಎಂದು ಕರೆಯಲಾಗಿದೆ; ಈಕೆಯ ಗೃಹಮಹತ್ತರ ಅಧಿಕಾರಿ ಅಂದರೆ ಮನೆವೆರ್ಗ್ಗಡೆ ಕಾಳಿದಾಸ ಚಮೂಪ; ಮತ್ತು ಅವನ ಹೆಂಡತಿ ರೇವಕಬ್ಬೆಯ ಸುಪುತ್ರ ನಾಭರಸ. ಈ ನಾಭರಸನನ್ನು ನಾಭಿದಂಡಾಧಿಪ, ನಾಭಣದಂಡಾಧಿಪ, ಮತ್ತು ನಾಭಿರಾಜ ಚಮೂಪನೆಂದು ಕರೆಯಲಾಗಿದೆ. ಇಲ್ಲಿ ತಂದೆ ಹಾಗು ಮಗನ ಪ್ರಭು, ಮಂತ್ರ, ಉತ್ಸಾಹ ಶಕ್ತಿಯನ್ನು ವರ್ಣಿಸಲಾಗಿದೆ; ಇಲ್ಲಿ ೧೭ ಗಾವುಂಡ ಮಹಾಪ್ರಭುಗಳಿದ್ದು ಧರ್ಮಕಾರ್ಯಾದ್ವಿತೀಯರಾಗಿದ್ದ ಬಗ್ಗೆ ಹೇಳಿದೆ. ಈ ಪಟ್ಟಣದಲ್ಲಿ ನೆಲಸಿದ ನನ್ನೇಶ್ವರ ದೇವರು ಸಕಳದೇವ ದೀಕ್ಷಾಗುರು ಎಂದು ಮತ್ತು ದೇವರ ಚಕ್ರವರ್ತಿ ಎಂದು ಖ್ಯಾತಿ ಪಡೆದಿತ್ತೆಂದಿದೆ. ದಂಡನಾಯಕ ನಾಭಿರಾಜ ಚಮೂಪನ ವಿನಂತಿ ಮೇರೆಗೆ, ಬಹುಶಃ ಈ ಭಾಗವನ್ನಾಳುತ್ತಿದ್ದ ಪಟ್ಟಮಹಾರಾಣಿ ಮೈಳಲದೇವಿಯು ಈ ದೇವರ ವಿವಿಧ ಸೇವೆಗೆ ಮತ್ತು ಆ ದೇವಾಲಯದ ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕೆ ಕ್ರಿ. ಶ. ೧೧೯೨, ಜನವರಿ ೨೪ ಶುಕ್ರವಾರದಂದು ಐದು ಕಡೆಗಳಲ್ಲಿ ತೋಟ, ನಾಲ್ಕು ಮನೆ ಮತ್ತು ೫ ಮತ್ತರ ಭೂಮಿಯನ್ನು ಸಂಪೂರ್ಣ ಕರ ವಿಮುಕ್ತಿಗೊಳಿಸಿ ಚಂದ್ರಶೇಖರ ಪಂಡಿತನಿಗೆ ದತ್ತಿ ನೀಡಿದಳೆಂದಿದೆ. ದತ್ತಿ ನೀಡಿದ ಭೂಪ್ರದೇಶಗಳ ವಿವರಣೆಯಿಂದ ಇಲ್ಲಿ ಎರಡು ಜೈನಬಸದಿಗಳಿದ್ದು, ಅದರಲ್ಲಿ ಒಂದು ಕೀರ್ತಿಜಿನಾಲಯವಾಗಿತ್ತೆಂದು ತಿಳಿಯುತ್ತದೆ. ಶೈವಧರ್ಮಕ್ಕೆ ಸೀಮಿತವಾದ ಈ ಶಾಸನದ ಪಾಠವು ವೃತ್ತ, ಕಂದ ಮತ್ತು ವಚನಗಳಿಂದ ಕೂಡಿದೆ. ಅದರ ಭಾಷೆ ಸಂಸ್ಕೃತ ಮತ್ತು ಕನ್ನಡ. ಲಿಪಿ ಕನ್ನಡ. ಅಕ್ಷರಗಳು ದುಂಡಾಗಿ ಮತ್ತು ಸುಂದರವಾಗಿವೆ. ಒಂದೆರಡು ಕಡೆ 'ಮಾ' ಮತ್ತು 'ಶೋ' ಅಕ್ಷರಗಳ ತಲೆಕಟ್ಟುಗಳ ತುದಿಗೆ ತ್ರಿಶೂಲ ಚಿಹ್ನೆಗಳನ್ನಿಟ್ಟು ಅಲಂಕೃತ ಗೊಳಿಸಲಾಗಿದೆ. ಹಲವಾರು ಮೂಲ ಅಕ್ಷರಗಳಿಗೆ 'ಉ' ಕಾರ ಶೈಲಿಯು ಈ ಕಾಲದ ಹಿಂದಿನ ಪದ್ಧತಿಯನ್ನು ಹೋಲುವುದು ಗಮನೀಯ.

ಆರನೇ ವಿಕ್ರಮಾದಿತ್ಯನ ವಂಶಾವಳಿಯಲ್ಲಿ ನೂರ್ಮಡಿ ತೈಲ, ದಶವರ್ಮ, ಜಯಸಿಂಹ ಮತ್ತು ಆಹವಮಲ್ಲರ ಹೆಸರುಗಳು ಮಾತ್ರ ಇವೆ. ನರೇಂದ್ರದ ಮೂಲ ಹೆಸರು ಕುಂದೂರು. ತಿಲಕ ಪ್ರಾಯವಾಗಿ ಶೋಭಾಯಮಾನವಾಗಿ ಅರಿಕೆಯ ಕುನ್ದೂರ ಎನಿಸಿದ್ದ ಈ ಕುಂದೂರು ಭಾಗವು ಹಲಸಿಗೆ-೧೨,೦೦೦ ಪ್ರಾಂತದಲ್ಲಿ ಸೇರಿತ್ತು.

**ನರೇಂದ್ರ ಶಾಸನದ ಪಾಠ**

೧ ನಮಸ್ತುಂಗ ಶಿರಶ್ಚುಂಬಿ ಚನ್ದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಳಸ್ತಂಭಾಯ ಶಂಭವೇ...
೨ ವಿಶುದ್ಧಜ್ಞಾನದೇಹಾಯತ್ರಿವೇದೀದಿವ್ಯಚಕ್ಷುಷೇ ಶ್ರೇಯಃಪ್ರಾಪ್ತಿನಿಮಿತ್ತಾಯನಮಸ್ಸೋಮಾದಿ ದಾರಿಣಃ

೩ ಆಕರ್ಷದಾಂಗವಂ ಬಾದ್ರಾ ಹರನಾವುಖಿಳಂ ಸಾಂಶುಮರ್ತಚಂದ್ರಭಿಂಬಂ ರಗಂದ್ಯಾಮ್ಯಂತ್ಥರಗೊನಂತಿ ವಿಜಿತಂ...

೪ ಲಯಾದಂಬರಂಚಾರಿ ವಿನಾಂತ ತೋಂ ರಂಭಾತಿಪೆಗ ಪ್ರಪಾತನಭಯ ವಿಸ್ಯಾಧಿ ಭಿತಾರ ತೀರ್ತ್ಥ

೫ ನೂಗೊತ್ಪೂತದ ಪಾರಂತ್ರ್ಯಮಿತಿಗಮಭಿಚಕ್ಕುಂದ ಕಾನ್ತಂ ಜಟನ್ತ್ಃನ್ ಓನ್ನಮಶಿವಾಯ ಗಣಪತಯೇ ನಮಃ

೬ ಶ್ರೀ ಜಳಜನಾಭಿ ನಾಭಿಸರೋಜದೊಳೊಗೆದಂ ಹಿರಣ್ಯಗರ್ಭ್ಬ ಬ್ರಹ್ಮಂರುಜಿತತದ್ರೂಹಿಣಾದ್ಯ ಪ್ರಾರ್ಜನ್ವಯ ಮೆಸೆದುದೆ ಗೆ ಚಾಳುಕ್ಯ ಕುಳಂ॥ ಆ ಚಾಳುಕ್ಯ ಕುಳೋದ್ಭವ ನಿಚತುರಂ ಭೋದಿ ಪರಿ

೭ ವೃತಾಖಿಳವಿಳಸದ್ಭೂಚಕ್ರವಲ್ಲಭಂ ಜಯಸೂಚಿತ ದೋರ್ಜ್ಜಳವಿಭಾಸಿ ನೂರ್ಮ್ಮಡಿ ತೈಲ ॥ ತಪಪತ್ಯಂ ಶ್ರೀ ದಸವರ್ಮ್ಮದೇವನಾನೃಪತನೂಭವಂಜಯಸಿಂಹಂ ವಿದಿತಯ ಶತಂ

೮ ನ್ನನ್ದನನುದಾತ್ತ ಶೌರ್ಯ್ಯವಳಪಂನಾಹವಮಲ್ಲ ॥ ಆ ಸಕಳ ಚಕ್ರವರ್ತ್ತಿಯ ಭೂಸುರಕೀರ್ತ್ತಿಯ ಮುಕುವ್ದ ಮೂರ್ತ್ತಿಯ ತನಯಂ ಶ್ರೀ ಸಾರ್ವ್ವಭೌಮನೆಸೆದಂ ತ್ರಾ

೯ ಸಿತರಿಪುನೆಗಟ್ದ ವಿಕ್ರಮಾದಿತ್ಯ ನೃಪಂ॥ ವೃತ್ತ॥ ಶ್ರೀಯುತನ್ನೂರ್ಜ್ಜಿತೋರಸ್ಥಳದೊಳ ಚಳಿತ ಮಾಡಿ ತಾಳ್ದಿಟ್ಬು ವೀರಶ್ರೀಯುಂ ದೋರ್ದ್ದಣ್ಡದೊಳ್ಸಂತತ ಮೀರಿಸಿ ಕಳಾ

೧೦ ಪ್ರೌಡೆಯುಂ ಮಿಕ್ಕವಾಣಿಶ್ರೀಯುಂ ವಕ್ತ್ರಾಬ್ಜದೊಳ್ಸಾಶ್ವತ ಮಿರಿಸೀಲಸಚ್ಚಂದ್ರಿಕಾಸ್ಪದ್ದಿ ಕೀರ್ತಿ ಶ್ರೀಯುಂದಿಕ್ಕಾಮಿನಿ ಸಂಗಮದೊಳಿರಿಸಿದಂ ವಿಕ್ರಮಾದಿತ್ಯ ದೇವಂ॥ ಕಂದ॥

೧೧ ಮಾಳವಭೂಭೃದ್ವಜ್ರಂ ಚೋಳಿಕದವದಹನ ನ ಸುಹೃದವನಿಪಕಶ್ಯಣ್ದಾಳ ವಿದಾರವೂ ಕೇಸರಿ ಚಾಳುಕ್ಯಾ ಭರಣನ ಹಿತರಾಯರುಳಪ್ಪ॥ ವೃತ್ತ॥ ಶ್ರೀಮಚಾಳುಕ್ಯವಂ

೧೨ ಶೋದಯ ಶಿಖರಿಲಸದ್ಭಾನು ಸಂಗ್ರಾಮಕೆಳಿರಾಮಂ ವಿದ್ವಿಷ್ಟರಾಯದ್ವಿಪ ವಿದಳನ ಕಣ್ಠೀರವಂ ವಾರನಾರಿ ಕಾಮಂ ಚಕ್ರೇಶ ಚೂಡಾಮಣಿ ಸಕಳದರೋಭಾಮಿನಿ ಸಂತತೋ

೧೩ ಳುತ್ಪ್ರೇಮಂದಿನಾರ್ತ್ಥಿಚಿನ್ತಾಮಣಿಯನೆನೆಗಟ್ದಂ ವಿಕ್ರಮಾದಿತ್ಯ ದೇವಂ॥. ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀ ವಲ್ಲಭ ಮಹಾರಾಜಾಧಿರಾಜಪರಮೇ

೧೪ ಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾ ಭರಣಂ ಶ್ರೀಮತ್ತ್ರಿಭುವನ ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನ

೧೫ ಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ॥ ಕನ್ದ॥ ಆ ವಿಭುವಿನ ಪಟ್ಟಮಹಾದೇವಿ ಮಹಾಸತಿ ಸರೂಪವತಿ ಸಕಳಕಳಾ ಕೋವಿದೆ ಗುಣವತಿ ಮೈಳಲದೇವಿ ವಿಳಾಸವತಿ ಭಾಗ್ಯವ

೧೬ ತಿಯೆನೆ ನೆಗಟ್ದಳ ॥ ವೃತ್ತ॥ ಸ್ವರಶರದಂದದಿಂದೆ ನೆಜೆಯುಯ್ಯೊಸರಸ್ವತಿಯುಂದದಿಂ ಕಳಾಪರಿಣತೆ ವಾಸವದ್ವೀರದದನ್ತಿರ ಖಿಣ್ಡಿತದಾನೆ ಪದ್ಮದನ್ತಿರೆ ಸಿರಿಗಿಕ್ಕಿ ದೊಣಮೆನೆ ರಾಮಕುಳಪ್ಪ

೧೭ ನೃಪೇಂದ್ರಹೃತ್ಸರೋವರ ಕಳಹಂಸಿಯುಂ ನೆಗಟ್ದಿ ಮೈಳಲದೇವಿಯುನೆನ್ತು ಬಣ್ಣಿಪ॥ ಹೃದಯ ಭವಂ ಜಗ ತ್ರಯದೊಳುಳ್ಳಭಿರಾಮತೆಯೆಲ್ಲಮಂ ಸರಾಗದೊಳೋ ದಗ್ಯದಿ ನಿರ್ಮ್ಮಿಸಿದ ಕಾ

೧೮ ನ್ತೆಗೆ ಪದ್ಮಜನಾಯುವೊಯ್ದು ತತ್ಸುದತಿಯನಟ್ಕಜಿಂ ನೆಗಟ್ದಿ ವಿಕ್ರಮ ಚಕ್ರಿಗೆ ಕೊಟ್ಟನೆಂಬೆನಲ್ಲದೆಡೆ ಬಳಿಕಂ ತಂದಂನಳವ ಮೈಳಲದೇವಿಯ ರೂಪು ಬಣ್ಣಿಸಲು॥ ಸ್ವಸ್ತ್ಯನವರತ ಪ -

೧೯ ರಮಕಲ್ಯಾಣಾಭ್ಯುದಯ ಸಹಸ್ರಫಳ ಭೋಗ ಭಾಗಿ-ನಿ ದ್ವಿತೀಯಲಕ್ಷ್ಮೀಸಮಾನೆ ಕಳಹಂಸಯಾನೆ ಕಲಿಕಾಲ ಸರಸ್ವತಿ ಪ್ರತ್ಯಕ್ಷ ಪಾರ್ವ್ವತಿ ಪರಿವಾರಚರ ಸಮುದ್ಧರಣ ಧಾತ್ರೀ

೨೦ ಪತಿವ್ರತಾಚರಣ ಗುಣಸಾವಿತ್ರಿ। ದಾವ ಚಿನ್ತಾಮಣಿ ಶರಣಾಗತ ರಕ್ಷಾಮಣಿ। ವಿಳಾಸ ವಿದ್ಯಾಧರಿ। ಸಕಳಕಳಾಧರಿ। ಶ್ರೀಮತ್ತ್ರಿಭುವಮಲ್ಲದೇವ ವಿಶಾಳ ಬಕ್ಷಸ್ಥಳ ನಿ-

೨೧ ವಾಸಿನಿಯರಪ್ಪ ಶ್ರೀಮತ್ತ್ರಿಭುವನಮಲ್ಲ ಪಟ್ಟ ಮಹಾದೇವಿ॥ ಕನ್ದ॥ ಅಮೃತಾಂಶುವದನೆ ಪುಟಕುಚೆ ಕಮಳದಳಾಯುತ ವಿಳೋಳಲೋಚನೆ ಶುಂಭದ್ರಮ

೨೨ ರಾಳಕಿ ಮೈಳಲ ಪಟ್ಟಮಹಾದೇವಿಯೆ ವಿಳಾಸಬತಿ ವಸುಮತಿಯೊಳ್॥ ಆ ಪಟ್ಟಮಹಾದೇವಿಯ ರೂಪವತಿಯ ಗೃಹಮಹಾತ್ತರಂ ಸಕಳ ಕಳೋಳಾಪ ನಿಧಿ ಕಾ

೨೩ ಳಿದಾಸ ಚಮೂಪತಿ ವಿಪ್ರಕುಳಭೂಷಣಂ ಗುಣನಿಳಯಂ॥ ವೃತ್ತ॥ ಆಭವ ಶ್ರೀಪಾದ ಪದ್ಮಾನ ತವು ನೃಕರನಾತ್ಮಾನ್ವಯಾಂಭೋದಿಶಿತ ಪ್ರಚನತ್ಥಿ ಸ್ವಾತ್ಥ್ಥಕ

೨೪ ಳ್ಪದ್ರುಮನಖಿಳ ಬುಧಾಬ್ಜಾಕರಾನನ್ದತಿಕ್ಷ ಪ್ರಭನುದ್ಭೂ ಚಾರವತ್ಯೂರ್ಜಿತನೆನೆ ನೆಗಟ್ದಂ ಧಾತ್ರಿಯೊಳ್ ರಾಜಿತೊದ್ಯತ್ಪ್ರಭುಮಂತ್ರೋತ್ಸಹ

೨೫ ಶಕ್ತಿತ್ರಯನಯ ಮಹಿಮಾಳಂಕೃತಂ ಕಾಳಿದಾಸಂ॥ ಕನ್ದ॥ ಆ ನೆಗಟ್ದ ಕಾಳಿದಾಸ ಚಮೂನಾಥನ ಪುಣ್ಯ ವಧು ಚಕೋರೆಕ್ಷಣಾಂ ಚಂದ್ರಾನನೆ ಶುಭ

೨೬ ಲಕ್ಷಣಯುತೆ ತಾನೆಸೆದಳು ರೇವಕಬ್ಬೆ ಕಾನ್ತಾರತ್ನಂ॥ ಆ ದಂಪತಿಗತ್ಯುತ್ಸವ ಮಾದಂ ಪುಟ್ಟಲ್ಕೆ ಪುಟ್ಟದಂ ಬನ್ಧು ಜನಾಹಾದಕರಂ ವಿರುಪಮನುದಿತೋಜಿತ ತೇಜಂ ತನೂಭವಂ ನಾಭರಸಂ॥ ವೃತ್ತ॥

೨೭ ಜಗದೊಳ್‌ರೂಡಟಿನೊಳಣ್ಮಿನೊಳ್ ಸುಬಗಿನೊಳ್ಪಾ ತ್ಯರ್ಯ್ಯದೊಳ್ ಶಸ್ತ್ರವಿದ್ದೆಗಳೊಳ್ ಸರ್ವ್ವ ಪ್ರವೀಣತೆ ಯೊಳತ್ಯಾದಾಯ್ಯ್ಯದೊಳ್ಸೂನೃತೋಕ್ತಿಗಳೊಳ್ ವೀರತೆಯೊಳ್ಗ ಚಿರತೆಯೊಳುದ್ಭೂ

೨೮ ಭಾರದೊಳ್ಮಳತ್ರಶಕ್ತಿಗಳೋಳ್ಪಾವಿಸಿನೊಪ್ಪದೊಗ್ಗಧಿಕ ಶ್ರೀನಾಭಿದಣ್ಣಾಧೀಪಂ॥ ಆವನಿನಾಥನನಭ್ಯುವಿಗದಿನ ಮತ್ಯವ್ಮ್ಮಂತ್ರದೊಳ್ನಿನ್ನೊಳಾಸ್ಸ್ವವನತ್ಯೂರ್ಜ್ಜಿತ ಮಂತ್ರಶಕ್ತಿಗಣೋನಿ

೨೯ ನ್ನೊಳ್ದಿಷ್ಮ್ಮ ದೇವೇಂದ್ರ ಮಂತ್ರಿವಲಂ ಪಾಸದಿ ಸನ್ದನ ನೀತಿ ಪುಣಂ ಯೋಗ ನೃರಪೊಂಜಿನವ್ಯುವ ಚಾಣಕ್ಯನೆ ಪೊಲ್ವಿಯಿಭುವನದೊಳ್ ಶ್ರೀ ನಾಭಿದಣ್ಣಾದೀಪಾ॥ ಈ ಮಹಿಯೊಳ್ ಯಶೋ

೩೦ ಮಹಿಮೆಯುಂ ತಳೆದಂ ಸಮರೈಕ ವೀರ ಚೂಡಾಮಣಿ ಶಿಷ್ಟ ವರ್ಗ್ಗ ವರಣಸುರ ವರ್ಗ್ಗ ಕವೀಂದ್ರ ವರ್ಗ್ಗ ರಕ್ಷಾಮಣಿ ನಗ್ನ ಭಗ್ನ ನಟ ವಾಂಶಿಕ ವೈಣಕ ವನ್ದಿ ಬೃದಂ ಚಿನ್ತಾಮಣಿ

೩೧ ದಣ್ಡನಾಯಕನ ಚೋಮಣನಾಭಣ ದಣ್ಡನಾಯಕಂ॥ ನಿನನಿಗೀಶ್ವರನುನ್ನತಿಕ್ಕೆಯುಶಜಂದಿಗ್ಭೂಯು ದಂ ಪದ್ಮಲೋಚನನಾನನ್ದಡೆಲಕ್ಷ್ಮಿಯುಂ ಕವುಳಮಿತ್ರಂ ತೇಜಮುಂ ಪಾಕ

೩೨ ಶಾಸನನತ್ಯೂರ್ಜ್ಜಿತ ಭೋಗವುಂಹಿವುವು ಯೂಖಿಂಕಾನ್ತಿಯುಂ ಪಾರ್ವ್ವತಿ ತನಯುಂ ಶೌರ್ಯ್ಯ ಮನುದ್ಗಮೆ ಶುಸುಬಗಂ ಶ್ರಿನಾಭಿದಣ್ಡಾಧೀಪಾ॥ ಕನ್ದ॥ ನೆಗಟ್ಟುದುಪೆಂಪಿಂದಂ ಪಲಸಿಗೆ ಪ-

೩೩ ನ್ನಿಚ್ಛಾಸಿರಕ್ಕೆ ತಲೆಯಾಗಿದ್ದು ಮೈಗೆ ತಿಳಕ ಮೆನಿಸಿ ಕುನ್ದೂರ ಗಣು ಶೋಭಾಭಿರಾಮನಾದಿಯ ನಗರಂ॥ ಆಜಿಕೆಯ ಕುನ್ದೂರ್ಗ್ಗೆ ಪದಿನೇಟು ವರ್ಗ್ಗವುಣ್ಬುಗಳ್ಮಹಾಪ್ರ-

೩೪ ಭುಗಳ್ತಾವೆ ಯರ್ಧಮ್ಮಕ್ಕಾಪ್ಪಿಂಗೆಜಿ ವರ್ವ್ವನೆ ನೆಗಟ್ದರ ವರ್ಗ್ಗ ದೊರೆವೆಐದೊಟಿರಾಂ। ಇನ್ದು ಧರಂ ತಾರಾಚಳದಿಂದಂ ಬನ್ದಿಲ್ಲಿ ನೆಲಸಿ ಸನ್ನಿದವಾದಂ ಕುಂದೂರೊಳೆಂಬತೆಐದಿಂ ನ-

೩೫ ನೇಶ್ವರದೇವರೆ ಸೆಡರಿ ಪಟ್ಟಣದೊಳು॥ ಪರಮ ಶ್ರೀಪತಿ ನಂದೇಶ್ವರದೇವಂ ಸಕಳ ದೇವ ದೀಕ್ಷಾಗುರು ದೇವರ ಚಕ್ರವರ್ತಿಯ ಭವಂ ವರದಂ ಪ್ರತ್ಯಕ್ಷಮಾದ ನೀ ಕುನ್ದೂ

೩೬ ರೊಳ್॥ ಆ ವಿದ್ಯಾಧರಗೆ ನನ್ದಾದೀವಿಗೆಗಂ ಪೂಜೆಗಂ ನಿವೇದ್ಯಕ್ಕಂ ಪೃಥ್ವೀವಲ್ಲಭ ಪಟ್ಟಮಹಾದೇವಿಗೆ ಭಿನ್ನವಿಸೆ ನಾಭಿರಾಜ ಚಮೂಪಂ॥ ವಚನ॥ ಸ್ವಸ್ತಿ ಶ್ರಿಮಚ್ಚಾಳುಕ್ಯ ವಿಕ್ರಮುವ-

೩೭ ರ್ಷದ ೨೧ನೆಯ ಧಾತು ಸಂವತ್ಸರದ ಪುಷ್ಯದಮವಾಶ್ಯೆ ಶುಕ್ರವಾರದನ್ದು ಸೂರ್ಯ್ಯಗ್ರಹಣ ಪುಣ್ಯ ತಿಥಿಯಲ್ ಶ್ರೀಮತ್ತ್ರಿಭುವನಮಲ್ಲ ಪಟ್ಟಮಹಾದೇ

೩೮ ವಿಯರ್ ಶ್ರೀ ನನ್ದೇಶ್ವರ ದೇವರ್ಗ್ಗೆ ಸ್ನಾನ ನಿವೇದ್ಯ ಪೂಜೆಗಳ್ಗಂತದ್ದೇವಾಲಯುದ ಖಣ್ಡ ಸ್ಫುಟಿತ ಜೀರ್ಣ್ನೋದ್ಧಾರಕ್ಕ। ಅ ದೇಗುಲದ ಮುನ್ದಣ ನಾಲ್ಕು ಮನೆಯು ಮಂ। ಕೀರ್ತ್ತಿ ಜಿನಾಲ

೩೯ ಯದ ತೋಂಟದಿಂ ಮೂಡಣ ಪಾಳ ತೋಂಟ ಮುಂದೆ। ಬಟಿವಿನ ಪಳ್ಳದಿಂ ಮೂಡ ಬೆಟ್ಟದ ಬಸದಿಯ ತೋಂಟದಿಂ ಬಡಗಣ ತೋಂಟಮುಮಂ। ಊರಿಂಬಡಗದ್ಯರಂಕ್ಕೆ

೪೦ ಗೆ ವೆಟ್ಟದ ಬೆಳಲ ಬೆಟ್ಟದನಡುವಣ ಕೌಂಗೆಜಿಯಿಂ ಪಡುವಲುಂ ಬಡಗಲುಂ ಮಯ್ದು ಮತ್ತರ್ಪ್ಪರಲಕೆಯ್ಯುಮಂ ಸರ್ವ್ವಭಾದಾ ಪರಿಹಾರಮಾಗಿ ಸರ್ವ್ವ ನಮಶ್ಯಂ ಮಾಡಿ ಚಂದ್ರಾಶೇಖರ ಪಂ-

೪೧ ಣ್ಡಿತರ್ಗ್ಗೆ ಧಾರಾಪೂರ್ವ್ವಕ ಮಾಡಿ ದೇವರ್ಗ್ಗೆ ಕೊಟ್ಟರ್ ವೃತ್ತ॥ ಮುದದಿಂದೀ ಧರ್ಮ್ಮಮಂಕಾದವರ್ಗ್ಗೆ ಬಿಮತ ಸಂಸಿಂದ್ಧಿ ಸಲಕ್ಷ್ಮಿ ವಂಶಾಭ್ಯುದಯುಂ ದಿಗ್ಘಾಯುಶಕ್ಕು। ಬಗೆಯುದಳಿದ ಕಷ್ಟಂನೆ ನೆ-

೪೨ ದುಷ್ಟಂಗೆ ಸನ್ತಾನದಕೆ ದಾಯು ಕ್ಷಯುಂ ಶ್ರೀಯಳಿವ ಪಡಿಯು ವಾಪಾತಕಗಕ್ಕು ವುಂತ್ರಪ್ಪದುರಾತ್ಮಂ ತಾನಿಂ ಗೊಡಕ್ಕಿಳಿದುನರಕದಾಳ್ನೂದುವುಳ್ಕಾದುತಿಕ್ಕುಂ ॥ ವಚನ॥ ಈ ಧರ್ಮ

೪೩ ಮಂ ಸ್ವಧಮ್ಮದಿ ಪ್ರತಿಪಾಳಿಸಿದ ಮಹಾ ಪುರುಷರ್ಗ್ಗೆ ಗಂಗೆ ಗಂಗಾ ಸಾಗರಂ ವಾರಣಾಂಸಿ ಕುರಕ್ಷೇತ್ರಮೆಂಬ ಪುಣ್ಯ ತೀರ್ತ್ಥಸ್ಥಾನಂಗದೊಳ್ಸಾಸಿರ ಕವಿಲೆಯುಂ ಕೋಡುಂ ಕೊಳಗುಮಂ ಪಂ

೪೪ ಚರತ್ನದೊಳ್ಕಟ್ಟಿಸಿ ವೇದಪಾರಗರಪ್ಪ ಮಹಾಬ್ರಾಹ್ಮಣರ್ಗ್ಗೆ ದಾನಂಗೆಯ್ದ ಪುಣ್ಯದ ಫಳಂ। ಈ ಧರ್ಮ್ಮಮನಳಿದ ಮಹಾಪಾತಕನಾತೀರ್ತ್ಥ ಸ್ನಾನಂಗಳೊಳ್ಸಾಸಿರ ಕವಿಲೆಯುಂ ಸಾಸಿರ್ವ್ವ

೪೫ ಬ್ರಾಹ್ಮಣರುವುನೇಟಿೊ್ಕಟಿತಪೋದವರುವುನಳಿದ ಮಹಾಪಾತಕನಕ್ಕುಂ॥

*ಇಂಗಳಗಿ ಶಾಸನ : ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಇಂಗಳಗಿ ಗ್ರಾಮದೇವತೆಯ ಗುಡಿಯ ಗೋಡೆಯ ಅಡಿಯಲ್ಲಿ ೨೨ ಸಾಲುಗಳ ವಿಜಯನಗರ ಕಾಲದ ಒಂದು ಹೊಸ ಶಿಲಾಶಾಸನವು ಇತ್ತೀಚೆಗೆ ಪತ್ತೆಯಾಗಿತ್ತು. (ಶಾಸನದ ದೊರೆತ ಬಗ್ಗೆ ವಿಷಯ ತಿಳಿಸಿದ ಕ.ವಿ.ವಿ. ಗಾಂಧಿ ಅಧ್ಯಯನ ವಿಭಾಗದ ಶ್ರೀ ಶಿವಾನಂದಶೆಟ್ಟರ, ಶಾಸನ ಪ್ರತಿಮಾಡಿದ ಶ್ರೀಮತಿ ವ್ಹಿ.ಜಿ. ಸೊಟ್ಟಮ್ಮ ಹಾಗು ಇಂಗಳಗಿ ಗ್ರಾಮಸ್ಥರ ಸಹಕಾರಕ್ಕೆ ಲೇಖಕರು ಕೃತಜ್ಞರಾಗಿದ್ದಾರೆ.) ಆದರಲ್ಲಿ ಮಹಾನಾಯಕಾಚಾರ್ಯಸ್ವಾಮಿ ಎಂಬ ಇವನ ಪಾರುಪತ್ಯಗಾರ ಬುಳಪ್ಪಣ್ಣನ ಒಪ್ಪಿಗೆ ಮೇರೆಗೆ ಹಡಗಲಿಯ ಹಂಮರಸಯ್ಯ, ಬಳಲ ಖರಸ್ತಯ್ಯಗಳ ಮಗ ಚಿಕ್ಕರಸನು ಇಂಗುಳಿಗೆಯಲ್ಲಿ ಮೈಲಾರದೇವರ ಪ್ರತಿಷ್ಠಾಪನೆ ಮಾಡಿದನೆಂದಿದೆ. ಅಲ್ಲಿಯ ಗವುಡ, ಸೇನಭೋವ ಮತ್ತು ಪ್ರಜೆಗಳು ಸೇರಿ ಆ ಸ್ಥಳದ ಚತುಸೀಮೆಯೊಳಗಿನ ಭೂಮಿಯನ್ನು ಕ್ರಿ. ಶ. ೧೫೫೩ರಲ್ಲಿ ದತ್ತಿ ನೀಡಿದ ವಿವರವಿದೆ. ಈ ಶಾಸನದ ಮೇಲೆ ತ್ರಿಶೂಲ, ಹಸು, ಸೂರ್ಯ, ಚಂದ್ರ ಮತ್ತು ಖಡ್ಗಗಳ ಚಿತ್ರಗಳನ್ನು ಕೊರೆಯಲಾಗಿದೆ. ಈ ಶಾಸನದ ಭಾಷೆ ಮತ್ತು ಲಿಪಿ ಕನ್ನಡ. ಇದರಲ್ಲಿಯ ಮೈಲಾರ ದೇವರ ನಿರ್ಮಾಣ ಮತ್ತು ಪ್ರತಿಷ್ಠಾಪನೆಯ ಸಂಗತಿಗಳು ಮಹತ್ವದ್ದೆನಿಸಿವೆ.*

*ಧಾರವಾಡ ಜಿಲ್ಲೆಯಲ್ಲಿ ವಿಜಯನಗರ ಕಾಲದ ಶಾಸನಗಳು ಕಡಿಮೆ ಪ್ರಮಾಣದಲ್ಲಿವೆ. ಪ್ರಸ್ತುತ ಶಾಸನದಲ್ಲಿ ವಿಜಯನಗರ ಅರಸರ ಹೆಸರಿನ ಬದಲು ಮಹಾನಾಯಕಾಚಾರ್ಯ ಸ್ವಾಮಿಯ ಹೆಸರಿದ್ದು, ಅವನ ಪೂರ್ಣ ಹೆಸರು ಮಹಾನಾಯಕಾಚಾರ್ಯ ಚಿಕ್ಕಯಲ್ಲಪ್ಪ ನಾಯಕನೆಂದು ತರ್ಕಿಸಬಹುದು. ಏಕೆಂದರೆ ಈ ಹೆಸರು ಕ್ರಿ. ಶ. ೧೫೫೭ರ ಹಾವೇರಿ ತಾಲೂಕಿನ ನರಸೀಪುರ ಶಾಸನದಲ್ಲಿ ಉಕ್ತವಾಗಿದೆ.*

ಶಾಸನ ಪಾಠ

೧ ೦ ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನ ಶಖ -
೨ ೦ ವರುಷ ೧೪೭೫ನೆಯ ಪ್ರಮಾವಿಭ ಸಂವ-
೩ ೪ ತ್ಸರದ ಮಾರ್ಗಶಿರ ಶು ೧೨ ಗುರುವಾರದ
೪ ಲು ಶ್ರೀಮಂನ್ಮಹಾನಾಯಕಾಚಾರ್ಯ
೫ ಸ್ವಾಮಿ ದ್ರೋಹರಗಂಡ ಗಡಿಯಂಕಬೀಮ ಮಾರ್ದ-
೬ ಕಾವಿಲಪರೊದೆಯರ ಹಾರುಪತ್ಯಗಾರ ಬುಳ-
೭ ಪಂಣವ ನಿರುಪಲಿಂದಲು ಹಡದಲೆಯ
೮ ಹಂಮರಸಯ್ಯಗಳು ಊರ ಬಳಲಿ ಖರಸ್ತ
೯ ಯ್ಯಗಳ ಮಗ ಚಿಕರಸನು ಯಿಂಗುಳಿಗ

೧೦ ಲು ಮಯಲಾರ ದೇವರನು ಪ್ರತಿಷ್ಠೆಯ
೧೧ ನು ಮಾಡಲಾಗಿ ಆ ಗಲುಂಡ ಸೇನಭೋವ
೧೨ ಪ್ರಜೆಗಳು ಕುಡಿಯರೆ ಕೊಟುಮಾ- '
೧೩ ಲನೆಂತೆಂ ಹನುಮಂತದೇವರ ( ಮು )
೧೪ ನದ ಮೂಡಲು ಬೆಳಲಕೊಪದಸೀ-
೧೫ ಮೆಯ ಬಡಗಲು ಕರಾವಿಗೆಯ ಹಡೆಂ
೧೬ ಪಡುವಲುಯಾ ಚತುಸೀಮೆಯಲೊಳ-
೧೭ ಗಣಭೂಮಿ
೧೮ ಯಮ ನಾಲು
೧೯ ಧಾರಪೂರ್ಕ್ಕವಾ
೨೦ ಗಿ ಕೊಟ್ಟು ಉ-.
೨೧ ಯಾದಕೆ ತ-
೨೨ ಪಿದವಂ-
೨೩ ಗೆ ಪಂಚಮ
೨೪ ( ಹಾ )ಪಾತಕೆ ಹೋ-
೨೫ ಹರು [I*]
೨೬ ದೇವರ ಕಡಪ
೨೭ ಮಲುರ ಮ
೨೮ ಲ್ಲಗೋಗೆಯ[I*]
೨೯ ಹೊಲನವೊ
೩೦ ಳಗೆ ಮೇಟು
೩೧ ಕೊ( ಳ )ಗ ಉ
೩೨ ಟು

( ವಿ. ಸೂ: ಹಿರೇಉಲ್ಲಾಳ ಶಾಸನಗಳ ಹೊರತಾಗಿ ಉಳಿದ ಶಾಸನಗಳ ಛಾಯಾ ಚಿತ್ರವನ್ನು ನೀಡಿಲ್ಲವಾಗಿ ಲೇಖಕರು ನೀಡಿರುವ ಶಾಸನ ಪಾಠವನ್ನೇ ಸದ್ಯ ಪ್ರಕಟಿಸಲಾಗಿದೆ- ಸಂ. )

ವೀರಗಲ್ಲುಗಳು

ಶಲವಡಿ (ಗದಗ ಜಿಲ್ಲೆ), ಕಪಿಲೇಶ್ವರ ಗುಡಿ ಆವರಣದ ಮಣ್ಣಿನಲ್ಲಿ ಹೂತ ಈ ವೀರಗಲ್ಲನ್ನು ಸ್ಥಳೀಕರು ಬಹು ಶ್ರಮ ವಹಿಸಿ ಮಣ್ಣು ಅಗೆಯುವ ಯಂತ್ರ ಬಳಸಿ ಇತ್ತೀಚೆಗೆ ಅದನ್ನು ಬೆಳಕಿಗೆ ತಂದಿರುವುದು ಸಂತಸದ ಸಂಗತಿ. ಈ ವೀರಗಲ್ಲು ದೊರೆತ ಆವರಣದಲ್ಲಿ ಈ ಮೊದಲು ಒಂದು ಬೃಹದಾಕಾರದ ಹುಡೆಯಿದ್ದಿತು. ವಿಜಾಪುರದಿಂದ ಬಂದ ಗೌಡರು ಈ ಹುಡೆಯಲ್ಲಿ ನೆಲಸಿ ಹುಡೆದಗೌಡರೆಂಬ ಹೆಸರನ್ನು ಪಡೆದರಂತೆ. ಇತ್ತೀಚಿನ ವರ್ಷಗಳಲ್ಲಿ ಈ ಹುಡೆ ಸಂಪೂರ್ಣ ಹಾಳಾಗಿದೆ. ಅಲ್ಲಿಯ ಪ್ರಾಚೀನ ಕಪಿಲೇಶ್ವರ ಗುಡಿಯನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ; ಸಾರ್ವಜನಿಕರ ಅನುಕೂಲಕ್ಕಾಗಿ ಆ ದೇವರ ಹೆಸರಿನ ಒಂದು ಕಲ್ಯಾಣಮಂಟಪವನ್ನು ನಿರ್ಮಿಸಲಾಗಿದೆ. ಈ ವೀರಗಲ್ಲಿನ ಫಲಕಗಳ ಪಟ್ಟಿಯ ಮೇಲೆ ಏಳು ಸಾಲಿನ ಕನ್ನಡ ಶಾಸನವಿದ್ದು ಆ ಶಾಸನ ಪಾಠ ಹೀಗಿದೆ:

ಭಾಗ - ೧

೧. ಸ್ವಸ್ತ್ಯಮೋಘವರ್ಷ ಶ್ರೀ ಪೃಥುವೀ ವಲ್ಲಭ ಮಹಾರಾಜಾಧಿ ರಾಜ ಪರಮೇಶ್ವರ ಪರಮಭಟ್ಟಾರ
೨. ರಾಜ್ಯ ಮುತ್ತರೋತ್ತರಾಭಿವೃದ್ಧಿಗೆ ಸಲ್ಲುತ್ತಿರೆ [1*] ಸಕನೃಪ ಕಲಾತೀತ ಸಂವತ್ಸರ ಶತಗಳೆನ್ಟುನ್ತೊ
೩. ಱಪನ್ನೆನ್ಟರ ಕೀಲಕ ಸಂವತ್ಸರ ವೈಶಾಖ ಸುದ್ಧ ಸಪ್ತಮಿಯ ಆದಿತ್ಯವಾರದನ್ದು ಸಾರೆ [ಟ್ಟಗನ]

ಭಾಗ - ೨

೪. ಕಾಳಿಗಾಮುಣ್ದರು ಬೆಟ್ಟ ಕಿಱುಸಲ್ವಾಡಿ.. ಕಾಳಿಗಾಮುಣ್ದನ ಬ್ಯಸದಿ [ಕಾದಿರಿದು] ಸತ್ತ
೫. ಕಾರಿಯರ ಸಿರಿಮೊಪ್ಪರೊ ◎.... ಪರಿಯ.. ಲ್ಪುಟ್ಟಿದನೊಕ್ಕಿಷ್ಟ ಪೆಣ್ದಗಧರೆ-

ಭಾಗ - ೩

೬. ಯಳ್ಕೊನ್ದ [ವರ] ನೆನಿಸಿರ್ದಜ್ಜಟ್ಟಿತನಂ ಪೊಗಟಿ ನೆಗಟ್ದ ಕಲಿ -
೭. ಕರಿಯಣ [I*]

ರಾಷ್ಟ್ರಕೂಟರ ಅಮೋಘವರ್ಷನು ಆಳುವಾಗ ಕ್ರಿ. ಶ. ೮೯೬ರಲ್ಲಿ ಕಾಳಿಗಾಮುಂಡನ ವಿನಂತಿಯ ಮೇರೆಗೆ ಕಲಿ ಕರಿಯಣನೆಂಬವನು ಯುದ್ಧ ಮಾಡಿ ಪ್ರಾಣ ಕಳೆದುಕೊಂಡನೆಂದಿದೆ. ಅದಕ್ಕಾಗಿ ಅವನಿಗೆ ಕಾಳಿಗಾಮುಣ್ದನು ಕಿಱುಸಲ್ವಡಿ ಗ್ರಾಮವನ್ನು ದತ್ತಿ ನೀಡಿದನೆಂದು ಭಾವಿಸಲಾಗಿದೆ. ಶಲವಡಿ ಎಂಬ ಎರಡು ಗ್ರಾಮಗಳು ಈ ಮೊದಲು ಇದ್ದು ಅದರಲ್ಲಿ ಒಂದು ಕಿಱುಸಲ್ವಡಿಯಾಗಿದ್ದಿತು. ಸುಮಾರು ಮೂರು ಮೀಟರ್ ಎತ್ತರದ ಈ ವೀರಗಲ್ಲಿನ ಮೊದಲನೇ ಫಲಕದಲ್ಲಿ ಖಡ್ಗ- ಗುರಾಣಿಯ ವೀರರು, ಸತ್ತು ಬಿದ್ದಿರುವ ವೀರ ಇದ್ದರೆ, ೨ನೇ ಫಲಕದಲ್ಲಿ, ವೀರನ ತೋಳನ್ನು ಹೆಗಲ ಮೇಲೆ ಹೊತ್ತ ಅಪ್ಸರೆಯರು, ತುತ್ತೂರಿ ವಾದನದವರು, ೪ ಮಂದಿ ಹಾರುತ್ತಿರುವ ವಿದ್ಯಾಧರರು, ೩ನೇ ಫಲಕದಲ್ಲಿ ಚೌರಿ ಹಿಡಿದ ಸೇವಕಿಯರು ಇದ್ದಾರೆ. ಮೇಲೆ ಏಕತಳ ವಿಮಾನವಿದ್ದು ಅದರ ತಳದಲ್ಲಿ ಗಣೇಶ ಮತ್ತು ನಂದಿಗಳ ಮಧ್ಯ ಶಿವಲಿಂಗದ ಚಿತ್ರಗಳಿವೆ.

ಮಲಗುಂದ ಗ್ರಾಮದ ಹೊರಗಡೆಯ ವೀರಗಲ್ ಶಾಸನದ ನಾಲ್ಕು ಭಾಗಗಳಿದ್ದು ಕ್ರಮವಾಗಿ ವೀರರ ಹೋರಾಟ, ವೀರರೊಡನೆ ಅಪ್ಸರಾಸಹಯಾನ, ವೀರನೊಡನೆ ಸತಿಯರು, ಅಪ್ಸರೆಯರು, ಸೇವಕಿಯರಿದ್ದು ಮತ್ತು ಮೂರು ಶಿಖರ ಮಾದರಿಗಳೂ ಇವೆ.

ಗುಡಗುಡೆಯ ಪಾರ್ವತಿಗುಡಿ ಬಳಿ ಇರುವ ತುದಿ ಅರ್ಧ ವೃತ್ತಾಕಾರದ ಸು. ೯ನೇ ಶ.ದ ವೀರಗಲ್ಲಿನಲ್ಲಿ ಮೂರು ದೃಶ್ಯಗಳಿದ್ದು

ಹೋರಾಟ, ವೀರನೊಡನೆ ಅಪ್ಸರಾಸಹಯಾನ, ಕುಳಿತ ವೀರನ ಬದಿಗಳಲ್ಲಿ ಕಮಲಹಿಡಿದು ನಿಂತ ಅಪ್ಸರೆಯರು ಮತ್ತು ಸೇವಕಿಯರು ಹಾಗೂ ನಿಧಿಗಳಿರುವುದು ವಿಶೇಷ. ಗುಡಗುಡಿ ಗ್ರಾಮದ ಪಾರ್ವತಿ ಗುಡಿ ಪಕ್ಕದ ಇನ್ನೊಂದು ಸು. ೧೧ನೇ ಶತಮಾನದ ವೀರಗಲ್ ಶಾಸನದಲ್ಲಿ ಮೊದಲ ದೃಶ್ಯ ಮಣ್ಣಲ್ಲಿ ಹೂತಿದೆ. ಎರಡನೆಯದರಲ್ಲಿ ಕುಂಭ ಹಿಡಿದ ನಾಲ್ವರು ಅಪ್ಸರೆಯರು ಮಡಿದ ವೀರನನ್ನು ಒಯ್ಯುತ್ತಿರುವುದು, ಪದ್ಮಾಸನದಲ್ಲಿ ಸಿಂಹಪೀಠದ ಮೇಲೆ ಕುಳಿತ ವೀರನ ಬದಿಗೆ ಚೌರಿ-ಕಮಲಗಳನ್ನು ಹಿಡಿದ ಇಬ್ಬರು ಸೇವಕಿಯರು ಮತ್ತು ಕುಳಿತ ಇಬ್ಬರು ಸೇವಕಿಯರಿದ್ದಾರೆ. ಲಕ್ಷ್ಮೀಪುರದ ಉತ್ತರಕ್ಕಿರುವ ವೀರಶಾಸನಗಲ್ಲಿನ ಮೂರನೇ ದೃಶ್ಯದಲ್ಲಿ ಕುಳಿತ ವೀರನ ಬದಿಗೆ ಚೌರಿ ಹಿಡಿದು ನಿಂತ ಸೇವಕಿಯರು ಮತ್ತು ಪೂರ್ಣ ಕುಂಭಗಳಿವೆ.

ಮಂತಗಿ ಗ್ರಾಮದ ದಕ್ಷಿಣಕ್ಕಿರುವ ಹೊಲದಲ್ಲಿ ನಾಲ್ಕು ವೀರಗಲ್ಲು ಶಾಸನಗಳ ಪೈಕಿ ಹೆಚ್ಚು ಕಡಿಮೆ ಇದೇ ರೀತಿಯ ದೃಶ್ಯವಿದೆ. ಮೂರನೇ ವೀರಗಲ್ಲಿನಲ್ಲಿ ಹೋರಾಟ, ವೀರನೊಡನೆ ಅಪ್ಸರಾಸಹಯಾನ ಮತ್ತು ಕುಳಿತ ವೀರನ ಬಲಬದಿಗೆ ದಂಪತಿಗಳು, ಎಡಗಡೆ ಒಬ್ಬ ಹೆಂಗಸು ಮತ್ತು ಯತಿ (?) ಇರುವುದು ವಿಶಿಷ್ಟವೆನಿಸಿದೆ. ಮೇಲ್ಭಾಗದಲ್ಲಿ ಶಿವಲಿಂಗವುಳ್ಳ ವಿಮಾನವಿದೆ. ಇನ್ನೊಂದು ವೀರಗಲ್ಲಿನಲ್ಲಿ ಮೊದಲ ದೃಶ್ಯದಲ್ಲಿ ಕತ್ತಿ-ಗುರಾಣಿ ಹಿಡಿದು ಮೂವರು ವೀರರ ಹೋರಾಟ, ಎರಡನೇ ದೃಶ್ಯದಲ್ಲಿ ಇಬ್ಬರು ಮಡಿದ ವೀರರು ಮೂವರು ಅಪ್ಸರೆಯರೊಡನೆ ಯಾನ ಹಾಗು ಮೇಲಿನ ದೃಶ್ಯದಲ್ಲಿ ಮಡಿದ ವೀರ ಚಟ್ಟದ (?) ಆಸನದ ಮೇಲೆ ಕುಳಿತಿದ್ದು ಅವನ ಬದಿಗಳಲ್ಲಿ ೩ ಅಪ್ಸರೆಯರು ಮತ್ತು ಚೌರಿ ಹಿಡಿದು ನಿಂತ ಸೇವಕಿಯರಿದ್ದಾರೆ. ಈ ವೀರಗಲ್ಲುಗಳ ಕಾಲ ಸು. ಕ್ರಿ.ಶ. ೯-೧೧ನೇ ಶತಮಾನ. ಕಟವಿಯ ಗಣಪತಿ ಗುಡಿ ಹತ್ತಿರ ಕಿರಿ ಶಾಸನವುಳ್ಳ ಸು. ೯ನೇ ಶ.ದ ಅಂತ್ಯಕಾಲದ ವೀರಗಲ್ಲಿನಲ್ಲಿ ವೀರರ ಹೋರಾಟ, ವೀರ - ಅಪ್ಸರಾ ಯಾನ ಮತ್ತು ಸೇವೆ ಮಾಡುವ ಸೇವಕಿಯರಿದ್ದು ಅದರ ಮೇಲ್ಭಾಗದಲ್ಲಿ ಎರಡು ಮೀನು, ಕರು, ಶಂಖ, ಚಂದ್ರ ಮತ್ತು ಚೌರಿಗಳ ಚಿಹ್ನೆಗಳಿರುವುದು ಗಮನೀಯ. ನರೇಗಲ್ಲಿನ ಸರ್ವೇಶ್ವರ ದೇವಾಲಯ ಬದಿಗಿನ ವೀರಗಲ್ಲಿನಲ್ಲಿ ಕೆಳಗಿನ ಎರಡು ದೃಶ್ಯಗಳ ಭಾಗ ಮಣ್ಣಲ್ಲಿ ಹೂತಿದೆ. ಎರಡನೇ ದೃಶ್ಯದ ಅರ್ಧಭಾಗದಲ್ಲಿ ಮಡಿದ ವೀರನ ಅಪ್ಸರೆಯರೊಡನೆಯ ಯಾನ, ಮೇಲಿನ ದೃಶ್ಯದಲ್ಲಿ ಪುಷ್ಪ ಸಿಂಹಪೀಠದ ಮೇಲೆ ಆಸೀನ ವೀರ, ಬದಿಗಳಲ್ಲಿ ಚೌರಿಯ ಸೇವಕಿಯರು ಹಾಗು ಮೇಲ್ಭಾಗದಲ್ಲಿ ಶಿವಲಿಂಗದ ಮುಂದೆ ಒಬ್ಬ ಯತಿ ಬಲಗಡೆಗೆ, ಮತ್ತು ಚಕ್ರ ಎಡಗಡೆಗಿರುವುದು ಗಮನೀಯ. ಸೊರಟೂರು - ಚಾವಡಿ ಹತ್ತಿರದ ಮಂಟಪದ ಸು. ಕ್ರಿ. ಶ. ೧೬ನೇ ಶ.ದ ವೀರಗಲ್ಲನ್ನು ಕನಕರಾಯನ ಕಲ್ಲೆಂದು ಕರೆಯುವರು. ಅದರ ೩ ಭಾಗಗಳ ಪೈಕಿ - ಎರಡು ಭಾಗಗಳಲ್ಲಿ ಕುದುರೆದಳ, ಕಾಲುದಳದ ಹೋರಾಟದ ಚಿತ್ರವಿದೆ. ತಲಾ ಒಂದರಲ್ಲಿ ಇಬ್ಬರು ಹೋರಾಡುತ್ತಿದ್ದಾರೆ. ಮೇಲಿನ ಭಾಗದಲ್ಲಿ ಕೀರ್ತಿಮುಖಗಳ ಕೆಳಗಡೆ ಮೂವರು ನಿಂತಿದ್ದಾರೆ. ಎಲಿಶಿರೂರುವಿನ ನಾಲ್ಕು ವೀರಗಲ್ಲುಗಳ ಪೈಕಿ ಸು. ೧೧ನೇ ಶ.ದ ಒಂದರಲ್ಲಿ ಕೆಲವು ಗಮನೀಯ ಲಕ್ಷಣಗಳಿವೆ. ಅದರ ಮೊದಲನೆಯ ಸ್ತರದಲ್ಲಿ ಮೂವರು ವೀರರು, ಅವರ ಬದಿಗಳಲ್ಲಿ ಸೇವಕರು ಹಾರ ಹಿಡಿದು ನಿಂತಿದ್ದಾರೆ. ೨ನೇ ಸ್ತರದಲ್ಲಿ ಹೋರಾಟದ ದೃಶ್ಯ, ೩ನೆಯದರಲ್ಲಿ ವೀರನು ಕುಳಿತಿದ್ದು ಬದಿಗೆ ಚೌರಿ ಹಿಡಿದು ನಿಂತ ಸೇವಕಿಯರಿದ್ದಾರೆ.

ಶಿರುಂಜದಲ್ಲಿ ಸು. ಕ್ರಿ. ಶ. ೧೧ನೇ ಶತಮಾನದ ನಾಲ್ಕು ವೀರಗಲ್ಲುಗಳು ಹೆಚ್ಚು ಕಡಿಮೆ ಇವೇ ಲಕ್ಷಣಗಳನ್ನು ಹೊಂದಿವೆ. ಚಿಕ್ಕ ಅಣಜಿ ಗ್ರಾಮದ ಉತ್ತರಕ್ಕೆ ಐದು ವೀರಗಲ್ಲುಗಳಿದ್ದು ಸು. ೧೧ನೇ ಶ.ದ. ಒಂದು ವೀರಗಲ್ಲಿನಲ್ಲಿ ಶಾಸನವಿದೆ. ಎರಡರಲ್ಲೂ ವೀರಗಲ್ಲುಗಳ ಚಿತ್ರ ಸಾಮಾನ್ಯವಾಗಿದೆ. ಮೂರನೇ ವೀರಗಲ್ಲಿನ ಎರಡನೇ ದೃಶ್ಯದಲ್ಲಿ ಐದು ವೀರರೊಡನೆ ಅಪ್ಸರಾಸಹಯಾನ ಗಮನೀಯ. ಮೇಲೆ ಶಿವಲಿಂಗದ ಮುಂದೆ ನಾಲ್ಕು ಮಂದಿ (ಬಹುಶಃ ಇಬ್ಬರು ದಂಪತಿಗಳು) ಕುಳಿತಿದ್ದಾರೆ. ಸು. ೧೧ನೇ ಶ.ದ ನಾಲ್ಕನೇ ಶಾಸನವುಳ್ಳ ವೀರಗಲ್ಲಿನಲ್ಲಿ ವೀರನ ಹೊಟ್ಟೆಗೆ ಬಾಣಗಳು ಚುಚ್ಚಿರುವುದನ್ನು ಕಾಣಬಹುದು. ಐದನೇ ವೀರಗಲ್ಲಿನಲ್ಲಿ ಒಬ್ಬ ವೀರನನ್ನು ಪ್ರಮುಖವಾಗಿ ಕೆಳಗಡೆ ಚಿತ್ರಿಸಲಾಗಿದೆ. ಮಧ್ಯೆ ವೀರ-ಅಪ್ಸರಾಯಾನವಿದೆ. ಮೇಲ್ಗಡೆ ಮಡಿದ ವೀರ ಎರಡು ಸಿಂಹಗಳಿರುವ ಪೀಠದಲ್ಲಿ ಕುಳಿತಿದ್ದು ಬದಿಗಳಲ್ಲಿ ಚೌರಿ ಬೀಸುವ ಇಬ್ಬರು ಸೇವಕಿಯರಿದ್ದಾರೆ. ಅದರ ಮೇಲೆ ಮೂರು ಶಿಖರ ಮಾದರಿಗಳಿವೆ. ಹಿರೇಹುಲ್ಯಾಳದ ಈಶ್ವರನ ಗುಡಿ ಹತ್ತಿರದ ಸು. ೧೧ನೇ ಶ.ದ. ಶಾಸನವುಳ್ಳ ವೀರಗಲ್ಲಿನಲ್ಲಿ ಬಿಲ್ಲು-ಬಾಣ, ಕತ್ತಿ-ಈಟಿ ಹಿಡಿದು ಹೋರಾಡುವ ವೀರರ ದೃಶ್ಯವಿದೆ. ವೀರರೊಡನೆ ಅಪ್ಸರಾಯಾನ, ಚೌರಿಧಾರಿ ಸೇವಕಿಯರು ಹಾಗು ಕೆಳಗಡೆ ನೃತ್ಯ ಮತ್ತು ಸಂಗೀತಗಾರರುಳ್ಳ ದೃಶ್ಯ ಮತ್ತು ಅದರ ಮೇಲೆ ಸ್ವಸ್ತಿಕ, ನೇಗಿಲು, ಕತ್ತಿ, ಸೂರ್ಯ, ಚಂದ್ರ ಮತ್ತು ಪೂರ್ಣಕುಂಭ ಚಿತ್ರಗಳಿವೆ.

ನೀರಲಗಿಯ ದ್ಯಾಮವ್ವನ ಗುಡಿ ಹತ್ತಿರ ಮೂರು ವೀರಗಲ್ಲುಗಳಿದ್ದು, ಸು. ೧೨ನೇ ಶ.ದ ಒಂದರಲ್ಲಿ ಒಬ್ಬ ವೀರನು ಬಹುಶಃ ಸೂರ್ಯಗ್ರಹಣ ಸಂದರ್ಭದಲ್ಲಿ ಪ್ರಾಣಾರ್ಪಣೆ ಮಾಡಿಕೊಳ್ಳುವ ದೃಶ್ಯವಿದೆ. ಅದರಲ್ಲಿ ವೀರನು ಕೈಗಳಲ್ಲಿ ಕತ್ತಿ-ಗುರಾಣಿ ಹಿಡಿದು ಮುಂದೆ ನಿಂತಿದ್ದಾನೆ. ಜ್ವಾಲೆ ಮೇಲೆದ್ದ ಚಿತೆಯನ್ನು ಒಂದು ಬುಟ್ಟಿಯಲ್ಲಿ ಚಿತ್ರಿಸಲಾಗಿದೆ. ಅದರಲ್ಲಿ ವೀರನು ಹಾರುವ ಸೂಚನೆ ಇದೆ. ಎರಡನೇ ದೃಶ್ಯದಲ್ಲಿ ಆ ವೀರನ ಅಪ್ಸರಾ ಸಹಯಾನವಿದೆ. ಮೇಲೆ ಶಿವಲಿಂಗದ ಮುಂದೆ ವೀರನು ಕುಳಿತಿದ್ದಾನೆ. ಈ ದೃಶ್ಯವು ಬಾಳೂರಿನ ಸೂರ್ಯಗ್ರಹಣದ ಸೂಚನೆಯ ಶಿಲ್ಪವನ್ನು ಹೋಲುತ್ತದೆ. ಇನ್ನೊಂದು ವೀರಗಲ್ಲಿನಲ್ಲಿ ಗೋಗ್ರಹಣದ



A

ಚಿತ್ರವಿದೆ. ಆಕ್ಕಿ ಆಲೂರಿನ ಕಲ್ಮೇಶ್ವರ ಗುಡಿ ಹತ್ತಿರದ ಒಂದು ಶಿಲಾಫಲಕದಲ್ಲಿ ತ್ರಿಶೂಲ, ಸೂರ್ಯ, ಚಂದ್ರ, ಜೋಡು ಪಾದ ಪೀಠಗಳಿವೆ. ಅದರಲ್ಲಿಯ ಅಕ್ಷರಗಳು ಸು. ಕ್ರಿ. ಶ. ೧೬ನೇ ಶತಮಾನದ್ದಾಗಿವೆ.

ಮಂತಗಿಯ ವೀರಭದ್ರ ಗುಡಿ ಹತ್ತಿರದ ಸು. ೧೬ನೇ ಶ.ದ ವೀರಗಲ್ಲಿನಲ್ಲಿ ಕಾಲ್ದಳ ಮತ್ತು ಕುದುರೆಗಳ ಹೋರಾಟ ದೃಶ್ಯವಿದೆ. ಅದರ ಮೇಲೆ ಒಂದರ ಮೇಲೆ ಒಂದರಂತೆ ವೀರರು ಕ್ರಮವಾಗಿ ಕೈಮುಗಿದು ಮೂವರು, ಇಬ್ಬರು ಮತ್ತು ಒಬ್ಬನು ಕುಳಿತಿರುವುದು ಗಮನೀಯ. **ಹಿರೇಹಳ್ಳಿ ಕೋಟೀಶ್ವರ** ಗುಡಿಬದಿಗಿನ ಶಾಸನವುಳ್ಳ ವೀರಗಲ್ಲಿನಲ್ಲಿ ಮೂರು ದೃಶ್ಯಗಳಿವೆ. ಕೆಳಗಡೆ ಸಿಂಹಾಸನ(?)ದಲ್ಲಿ ಕುಳಿತ ವೀರನಿಗೆ ಛತ್ರಿಯನ್ನು ಹಿಡಿಯಲಾಗಿದೆ. ಅವನ ಎಡಗಡೆ ಇಬ್ಬರು, ಬಲಗಡೆ ಇಬ್ಬರು ನಿಂತಿದ್ದಾರೆ. ಎರಡನೇ ದೃಶ್ಯದಲ್ಲಿ ಹೋರಾಟದ ಚಿತ್ರದಲ್ಲಿ ಈಟಿ ಹಿಡಿದ ಕುದುರೆ ಸವಾರ ಮತ್ತು ಜತೆ ಯುದ್ಧ ಮಾಡುವ ಕತ್ತಿ-ಗುರಾಣಿ ವ್ಯಕ್ತಿ ಇದ್ದಾರೆ. ಗುರಾಣಿ ದುಂಡಾಗಿದ್ದು ಅದರಲ್ಲಿ ಕಮಲದ ಹೂವಿನ ಅಲಂಕಾರ ಸುಂದರವಾಗಿದೆ. ಮೂರನೇ ದೃಶ್ಯದಲ್ಲಿ ಶಿವಲಿಂಗದ ಬಲಗಡೆ ನಿಂತ ಯತಿ, ಕುಳಿತ ದಂಪತಿಗಳು; ಎಡಗಡೆಗೆ ಮೂವರು ಹೆಂಗಸರು ನಿಂತಿದ್ದಾರೆ. ಕೆಳಗಡೆ ಕುಳಿತ ವ್ಯಕ್ತಿಗೆ ಛತ್ರಿ ಹಿಡಿದಿರುವುದರಿಂದ ಆತನೂ ಒಬ್ಬ ಅಧಿಕಾರಿ ಎಂಬುದನ್ನು ಗಮನಿಸಬಹುದು.

**ದೇವಗಿರಿ** ಗ್ರಾಮದ ದಕ್ಷಿಣಕ್ಕಿರುವ ಸು. ೧೨ನೇ ಶ.ದ ವೀರಗಲ್ಲಿನಲ್ಲಿ ಬಹುಶಃ ತನ್ನ ಇಬ್ಬರು ಹೆಂಡಂದಿರು ಸತಿ ಹೋದುದರ ಚಿತ್ರಗಳಿರುವುದು ವಿಶೇಷ. ವೀರನ ಹೋರಾಟ ದೃಶ್ಯ ಕೆಳಗಡೆಯಿದೆ. ಎರಡನೇ ದೃಶ್ಯದಲ್ಲಿ ಮಡಿದ ವೀರನ ಬದಿಗಳಲ್ಲಿ ಬರಿಗೈಗಳನ್ನು ಮೇಲಕ್ಕೆತ್ತಿ ಕುಳಿತ ಇಬ್ಬರು ಹೆಂಗಸರು ಅವನ ಹೆಂಡತಿಯರಿರಬೇಕು. ಅಂಚಿನಲ್ಲಿ ವಾದ್ಯ ಮೇಳದವರಿಬ್ಬರು ನಿಂತಿದ್ದಾರೆ. ಮೂರನೇ ದೃಶ್ಯದಲ್ಲಿ ವೀರ-ಅಪ್ಸರೆಯರ ಸಹಯಾನ, ನಾಲ್ಕನೇ ದೃಶ್ಯದಲ್ಲಿ ನಂದಿ, ವಿಮಾನದಲ್ಲಿ ಯತಿ, ಶಿವಲಿಂಗ, ಮಡಿದ ವೀರ, ಮೇಲೆ ಸೂರ್ಯ ಚಂದ್ರರಿದ್ದಾರೆ. **ಮೇವುಂಡಿಯ** ರಾಷ್ಟ್ರಕೂಟರ ಕಾಲದ ವೀರಗಲ್ಲುಗಳೆರಡರಲ್ಲಿ ಒಂದರ ಮೇಲ್ಭಾಗ ಶಾಲಾಮಾದರಿಯಲ್ಲಿದೆ. ಇನ್ನೊಂದು ದುಂಡಾಕೃತಿಯಲ್ಲಿದೆ. ಈ ಎರಡರ ಮುಕ್ಕಾಲು ಭಾಗ ನೆಲದಲ್ಲಿ ಹೂತಿವೆ. ಮೇಲ್ಭಾಗದಲ್ಲಿ ಮಡಿದ ವೀರನನ್ನು ಹಲವರು ಮೆರವಣಿಗೆ(?)ಯಲ್ಲಿ ಒಯ್ಯುತ್ತಿದ್ದು ಅದರ ಮೇಲೆ ಶಾಲ ಶಿಖರ, ಅದರ ಮಧ್ಯ ಚೈತ್ಯಾಕಾರ ಅದರಲ್ಲಿ ವೀರನು ಪೀಠದ ಮೇಲೆ ಕುಳಿತಿರುವನು. ಬದಿಗೆ ಚೌರಿ ಬೀಸುವ ಸೇವಕಿಯರಿದ್ದಾರೆ. **ಹಂಸಭಾವಿಯ ಕೆರೆದಂಡೆ** ಮೇಲೆ ಹಲವಾರು ವೀರಗಲ್ಲು ಸತಿಕಲ್ಲುಗಳಿವೆ. ಸು. ೧೨ನೇ ಶ.ದ. ಒಂದು ವೀರಗಲ್ಲಿನಲ್ಲಿ ಕೆಳಗಡೆ ವೀರನು ಕೈಗಳಲ್ಲಿ ಈಟಿ, ಗುರಾಣಿ ಹಿಡಿದಿದ್ದು ಅವನ ಎದುರಾಳಿಗಳು ಕತ್ತಿ ಗುರಾಣಿಗಳನ್ನು ಹಿಡಿದಿದ್ದಾರೆ. ಎರಡನೇ ದೃಶ್ಯದಲ್ಲಿ ಸೇವಕಿಯರ ಸಹಿತ ವೀರ ಅಪ್ಸರಾಸಹಯಾನ. ಮೂರನೇ ಫಲಕದಲ್ಲಿ ಮಡಿದ ವೀರನು ರುಮಾಲಿನಂತೆ ಕೇಶಾಲಂಕಾರ ಮಾಡಿಕೊಂಡು ಲಿಂಗದ ಮುಂದೆ ಕುಳಿತಿದ್ದಾನೆ. ಅಲ್ಲಿಯ ಇನ್ನೊಂದು ವೀರಗಲ್ಲಿನ ಮಧ್ಯಫಲಕದಲ್ಲಿ ಮಡಿದ ವೀರನು ಹಾರವನ್ನು ಮೇಲಕ್ಕೆತ್ತಿ ನಿಂತಿದ್ದಾನೆ. ಅವನನ್ನು ಅಪ್ಸರೆಯರು (ನಾಲ್ಕು) ಒಯ್ಯುತ್ತಿರುವ ದೃಶ್ಯ ಗಮನೀಯ. ಮೇಲಿನ ಫಲಕದಲ್ಲಿ ಕೇಶಾಲಂಕಾರವನ್ನು ರುಮಾಲಿನಂತೆ ಕಟ್ಟಿ ವೀರನು ಶಿವಲಿಂಗದ ಮುಂದೆ ಕುಳಿತಿದ್ದಾನೆ. ಬದಿಗೆ ನಂದಿಯಿದೆ. ಕಾಲ ಸು. ಕ್ರಿ. ಶ. ೧೨ನೇ ಶತಮಾನ. ಇನ್ನು ಮೂರನೇ ವೀರಗಲ್ಲಿಗೆ ಕ್ರಿ. ಶ. ೧೧ನೇ ಶತಮಾನದ ಲಕ್ಷಣಗಳಿವೆ. ಆದರೆ ಅದರ ಎರಡನೇ ಫಲಕದಲ್ಲಿ ಮಡಿದ ವೀರನನ್ನು ಅಪ್ಸರೆಯರು ಒಯ್ಯುತ್ತಿದ್ದು ಅವರ ಬದಿಗಳಲ್ಲಿ ವಾದ್ಯಮೇಳದವರಿದ್ದಾರೆ. ನಾಲ್ಕನೇ ವೀರಗಲ್ಲಿನ ಎರಡನೇ ಫಲಕದಲ್ಲಿ ಅಪ್ಸರೆಯರು ಒಂದು ಕೈಯಲ್ಲಿ ಕುಂಭ, ಇನ್ನೊಂದು ಕೈಯಲ್ಲಿ ಮಡಿದ ವೀರನನ್ನು ಒಯ್ಯುತ್ತಿದ್ದಾರೆ. ಕಾಲ, ಕ್ರಿ. ಶ. ೧೧ನೇ ಶತಮಾನ. ಸು. ೧೨ನೇ ಶ.ದ ಐದನೇ ವೀರಗಲ್ಲಿನ ಕೆಳಗಿನ ಭಾಗದಲ್ಲಿ ನಾಲ್ಕು ಕಂಬಗಳಿಗೆ ಹೊಂದಿಸಿದ ಪಟ್ಟಿಗಳಿವೆ. ಬದಿಗೆ ವೀರರ ಹೋರಾಟದ ದೃಶ್ಯವಿದೆ. ಮಧ್ಯ ಇಲ್ಲಿಯೂ ವೀರನು ಹಾರವನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ.

**ಆಗಡಿಯ** ಸು. ೧೩ನೇ ಶ.ದ ವೀರಗಲ್ಲಿನಲ್ಲಿ ಎರಡು ದೃಶ್ಯಗಳನ್ನು ಒಂದೇ ಫಲಕದಲ್ಲಿ ಚಿತ್ರಿಸಲಾಗಿದೆ. ಕುದುರೆ, ಕಾಲ್ದಳಗಳ ಹೋರಾಟದಿಂದ ಮಡಿದ ಇಬ್ಬರು ವೀರರನ್ನು ಅಪ್ಸರೆಯರು ಒಯ್ಯುತ್ತಿದ್ದು, ತಲಾ ಒಬ್ಬರಿಗೆ ಪೀಠಗಳನ್ನು ಅಳವಡಿಸಲಾಗಿದೆ. ಮೇಲಿನ ಫಲಕದಲ್ಲಿ ಶಿವಲಿಂಗದ ಬದಿಗಳಲ್ಲಿ ಇಬ್ಬರು ಕುಳಿತಿದ್ದಾರೆ. **ಸಿಡೇನೂರಿನ** ಸು. ೧೧ನೇ ಶ.ದ ವೀರಗಲ್ಲಿನಲ್ಲಿ ಹೋರಾಟದ ದೃಶ್ಯದಲ್ಲಿ ಸತಿಹೋದವಳ ಚಿತ್ರವಿದೆ. ಆದರೆ ಎರಡನೇ ದೃಶ್ಯದಲ್ಲಿ ಕೇವಲ ಮಡಿದ ವೀರನನ್ನು ವಿಮಾನದಲ್ಲಿ ಕೂಡಿಸಿ ಅಪ್ಸರೆಯರು ಒಯ್ಯುತ್ತಿರುವುದು ಗಮನೀಯ. **ಆಡೂರಿನ ಕಲ್ಮೇಶ್ವರ ಗುಡಿ** ಮುಂದಿನ ಸು. ೧೨ನೇ ಶ.ದ ವೀರಗಲ್ಲಿನಲ್ಲಿ ವೀರನನ್ನು ಪೂರ್ಣಪ್ರಮಾಣದಲ್ಲಿ ವಿಸ್ತರಿಸಿ ಚಿತ್ರಿಸಲಾಗಿದೆ. ಕಿರಿಪಟ್ಟಿಯ ಮೇಲೆ ಅವನ ತಲೆ ಬದಿಗಳಲ್ಲಿ, ಚೌರಿ ಬೀಸುವ ಸೇವಕಿಯರಿದ್ದಾರೆ. ಮೇಲೆ ವಿಮಾನದಲ್ಲಿ ವೀರ- ಶಿವಲಿಂಗಗಳಿವೆ. ಅದರ ಮೇಲ್ಭಾಗ ತ್ರಿಕೋನಾಕಾರದಲ್ಲಿದೆ. **ಮೇವುಂಡಿಯ** ಸು. ೧೨.ನೇ ಶ.ದ. ವೀರಗಲ್ಲಿನಲ್ಲಿ ಹೋರಾಟ ದೃಶ್ಯದಲ್ಲಿ ಮಡಿದವರ ಶವಗಳಿವೆ. ಎರಡನೇ ಫಲಕದಲ್ಲಿ ಮೂರು ಹಸುಗಳು ಮತ್ತು ಹೋರಾಡುವ ಇಬ್ಬರು ವೀರರಿದ್ದಾರೆ. ಮೂರನೇ ಫಲಕದಲ್ಲಿ ಮಡಿದ ವೀರ ಅಪ್ಸರಾಸಹಯಾನ ದೃಶ್ಯವಿದೆ. ಉಳಿದ ಭಾಗ ಮುಕ್ಕಾಗಿದೆ. **ಸಾತೇನಹಳ್ಳಿಯ ಶಾಂತೇಶ್ವರ** ಗುಡಿ ಎದುರಿಗೆ ಸು. ೧೫ನೇ ಶ.ದ ಶಾಸನವುಳ್ಳ ಒಂದು ಅಪರೂಪ ಶಿಲ್ಪದ ಸ್ಮಾರಕ ಶಿಲೆಯಿದ್ದು ಅದರಲ್ಲಿ ಎರಡು ಕುದುರೆಗಳಿವೆ. ಒಬ್ಬ ವೀರ ಬಲಗೈಯಲ್ಲಿ

ಕುದುರೆ ಹಿಡಿದಿದ್ದಾನೆ ಎಡಗೈಯಲ್ಲಿ ಬಿಲ್ಲು ಹಿಡಿದು ನಿಂತಿದ್ದಾನೆ. ಅವನು ಕಟ್ಟಿದ ಕೇಶಾಲಂಕಾರ ಗಮನೀಯ. ಬಂಡೆಬಾಗೂರಿನಲ್ಲಿ ಮೂರು ವೀರಗಲ್ಲುಗಳಿವೆ. ಅವುಗಳ ಒಂದರಲ್ಲಿ ಆರು ಹೆಂಗಸರು ಪದ್ಮಾಸನದಲ್ಲಿ ಕುಳಿತಿರುವುದು ಗಮನೀಯ. ಮೇಲ್ಗಡೆ ಲಿಂಗ, ಯತಿ, ಹಸು-ಕರು ಇತ್ಯಾದಿಗಳಿವೆ.

ಆಡೂರಿನ ಕಲ್ಲೇಶ್ವರ ದೇವಾಲಯದ ಮುಂದಿನ ಸು. ೧೬ನೇ ಶ.ದ ವೀರಗಲ್ಲಿನಲ್ಲಿ ಕೆಳಗಡೆ ಎಡಕ್ಕೆ ಇಬ್ಬರು ವ್ಯಕ್ತಿಗಳ ಮಧ್ಯ ಒಂದು ಕೊಡೆಯಿದೆ. ಅಲ್ಲಿ ಒಬ್ಬ ನಿಂತ ವೀರನನ್ನು ಪ್ರಮುಖವಾಗಿ ತೋರಿಸಲಾಗಿದೆ. ಅವನು ಬಲಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ಎಡಗೈಯನ್ನು ಎದೆ ಮೇಲಿಟ್ಟಿದ್ದಾನೆ. ತಲೆ ಬದಿಗೆ ಚೌರಿ ಬೀಸುವ ಸೇವಕಿಯರಿದ್ದಾರೆ. ಮೇಲೆ ಕುಡುಗೋಲಿದೆ. ಅದರ ಮೇಲ್ಭಾಗದಲ್ಲಿ ಶಿವಲಿಂಗ, ಮುಂದೆ ಒಬ್ಬ ವ್ಯಕ್ತಿ (ಮಡಿದ ವೀರ)ನಿದ್ದಾನೆ. ಬಾಳಂಬೀಡಿನ ಸು. ೧೬ನೇ ಶ.ದ ವೀರಗಲ್ಲಿನಲ್ಲಿ ಗಡ್ಡಧಾರಿ ವೀರನಿರುವುದು ಗಮನೀಯ.

ಕುಮಾರರಾಮನದೆಂದು ಹೇಳುವ ಶಿಲ್ಪವೊಂದು ಶಿರುಂಜಿ (ಗದಗ ತಾ.)ಯಲ್ಲಿದೆ. ಈ ಶಿಲ್ಪದಲ್ಲಿ ಕುದುರೆ ಮೇಲೆ ಕುಮಾರರಾಮ ಕುಳಿತಿದ್ದಾನೆ. ಅಲ್ಲಿಯ ಇನ್ನೊಂದು ಶಿಲ್ಪದಲ್ಲಿ ಒಬ್ಬ ವೀರನು ವೇಷಭೂಷಿತನಾಗಿ ಕೈಯಲ್ಲಿ ಕತ್ತಿ-ಗುರಾಣಿ ಹಿಡಿದು ನಿಂತಿದ್ದಾನೆ ಹಾಗೂ ದಂಪತಿಗಳು ಇದೇ ರೀತಿ ನಿಂತಿದ್ದಾರೆ. ಇವುಗಳ ಕಾಲ ಸು. ಕ್ರಿ. ಶ. ೧೬ನೇ ಶತಮಾನ. ಈ ಕಾಲದ ಕುದುರೆಯನ್ನೇರಿದ ಕುಮಾರರಾಮನ ಶಿಲ್ಪಗಳು ಸಂಗೂರು, ಕಚವಿಯಲ್ಲಿರುವುದು ಈಗಾಗಲೇ ತಿಳಿದುಬಂದಿದೆ.

ಉಯ್ಯಾಲೆ ಸ್ಮಾರಕಶಿಲ್ಪವೊಂದು ಸು. ೧೧ನೇ ಶ.ದ ಧಾರವಾಡ ತಾಲೂಕಿನ ಮುಗದದಲ್ಲಿದೆ. ಮಡಿದ ವೀರನು ಉಯ್ಯಾಲೆ (ಜೋಕಾಲಿ)ಯಲ್ಲಿ ಕುಳಿತಿದ್ದಾನೆ. ಇಂತಹ ಶಿಲ್ಪ ಧಾರವಾಡ ತಾಲೂಕಿನ ನರೇಂದ್ರದಲ್ಲೂ ಇದೆ. ಈ ಶಿಲ್ಪದಲ್ಲಿ ಬಲಗಡೆ ಒಬ್ಬ ವ್ಯಕ್ತಿ ನಿಂತಿದ್ದಾನೆ.



ಗುತ್ತಲದ ಚಂದ್ರಮೌಳೀಶ್ವರ ಗುಡಿ ಬದಿಗಿನ ಒಂದು ಶಿಲ್ಪದಲ್ಲಿ ಒಬ್ಬ ವ್ಯಕ್ತಿ ಮಣೆ(ಪುಟ್ಟಿ)ಯಲ್ಲಿ ಒಂದು ಮಗುವನ್ನು ಗಾದೆಯ ಮೇಲೆ ಹಾಕಿ ತಲೆ ಮೇಲೆ ಹೊತ್ತು ಒಯ್ಯುತ್ತಿರುವನು. ಒಂದು ಕೈಯಲ್ಲಿ ಮಣೆಯನ್ನು, ಇನ್ನೊಂದು ಕೈಯಲ್ಲಿ ಕಮಲದ ದಂಟನ್ನು ಹಿಡಿದು ನಡೆದಿದ್ದಾನೆ. ಎಡಗಡೆ ಶಿವಲಿಂಗ, ಸೂರ್ಯ ಚಂದ್ರರಿದ್ದಾರೆ. ಸಾಂಸ್ಕೃತಿಕ ಚರಿತ್ರೆಯಲ್ಲಿ ಇದೊಂದು ಅಪರೂಪ ಮಾದರಿ ಶಿಲ್ಪ. ಕಾಲ ಸು. ಕ್ರಿ. ಶ. ೧೬ನೇ ಶತಮಾನ.

ಶಿರುಂಜಿಯ ಇನ್ನೆರಡು ವೀರಗಲ್ಲುಗಳಲ್ಲಿ ಸಾಮಾನ್ಯ ಲಕ್ಷಣಗಳ ಸಂಗಡ ಹೋರಾಟದ ಸ್ತರದಲ್ಲಿ ಹಸು-ಕರುಗಳಿದ್ದು, ಇವು ಗೋಗ್ರಹಣದ ಸಂಕೇತಗಳಾಗಿವೆ. ಶಿರುಂಜಿಯ ಒಂದು ಶಿಲ್ಪದಲ್ಲಿ ದಂಪತಿಗಳು ನಿಂತಿದ್ದು ಗಂಡನು ಕತ್ತಿಹಿಡಿದಿದ್ದಾನೆ. ಹೆಂಡತಿ ಲಿಂಗ ಹಿಡಿದಿದ್ದಾಳೆ. ಕಾಲ ಕ್ರಿ. ಶ. ೧೬ನೇ ಶತಮಾನ.

ಮಾಸ್ತಿಕಲ್ಲುಗಳು : ಹಾವೇರಿಯಲ್ಲಿ ದೊರೆತ ಒಂದು ಮಾಸ್ತಿ ಶಿಲ್ಪದ ಎರಡು ಸ್ತರಗಳ ಪೈಕಿ ಮೊದಲನೇ ಸ್ತರದಲ್ಲಿ ಆರು ಮಂದಿ ಕಾಲ್ದಳ, ಇಬ್ಬರು ಕುದುರೆದಳಗಳ ಹೋರಾಟದ ದೃಶ್ಯವಿದೆ. ಕಾಲ್ದಳದ ಒಂದು ಗುಂಪಿನವರು ಬಿಲ್ಲು ಹಿಡಿದು ಬಾಣ ಬಿಡುತ್ತಿದ್ದಾರೆ. ಸರ್ಪ, ಚಾಟಿ ಹಿಡಿದಿದ್ದಾರೆ. ಇನ್ನೊಂದು ಗುಂಪಿನವರು ಬಿಲ್ಲು-ಬಾಣ, ಕತ್ತಿ-ಗುರಾಣಿ, ಈಟಿ ಹಿಡಿದಿದ್ದಾರೆ. ಮಡಿದ ವೀರನನ್ನು ಮಧ್ಯಪ್ರಮುಖವಾಗಿ ಚಿತ್ರಿಸಲಾಗಿದೆ. ಕುದುರೆ ದಳದ ಕುದುರೆಗಳು ಝೂಲಿನಿಂದ ಅಲಂಕೃತಗೊಂಡಿವೆ. ಎರಡನೇ ಸ್ತರದಲ್ಲಿ ಮಡಿದ ವೀರನ ಬದಿಗಳಲ್ಲಿ ಇಬ್ಬರು ಪತ್ನಿಯರು ಕೈಮುಗಿದು ಕುಳಿತಿದ್ದಾರೆ. ಈ ವೀರನ ಬದಿಗೆ ಕತ್ತಿಯಿದೆ. ಬಲಗೈ-ಎಡಗೈ ಎತ್ತಿದ ತೋಳುಳ್ಳ ಕೈಗಳ ಮಧ್ಯ ಈ ಮೂವರನ್ನು ಪ್ರಮಾಣಬದ್ಧವಾಗಿ ಚಿತ್ರಿಸಿರುವುದು ಗಮನೀಯ. ಈ ಎರಡು ತೋಳುಗಳು ಸಂಧಿಸುವಲ್ಲಿ ಹೂವಿನ ಚಿತ್ರವಿದೆ. ತೋಳಲ್ಲಿ, ಕೈಯಲ್ಲಿ ಬಳೆ ಕಂಕಣಗಳಿವೆ. ಇದು ಮುತ್ತೈದೆಯ ಸಂಕೇತ. ಒಂದು ಕೈಯಲ್ಲಿ ಕನ್ನಡಿ, ಹೆಬ್ಬೆರಳು ಮತ್ತು ಕಿರುಬೆರಳು ಮಧ್ಯ ನಿಂಬೆಹಣ್ಣನ್ನು ಹಿಡಿದಿರುವಳು. ಮುಕ್ಕಾಗಿರುವ ಮೇಲಿನ ಸ್ತರದಲ್ಲಿ ಚಂದ್ರ, ಕುಳಿತ ನಂದಿಗಳಿವೆ. ಆದರೆ ಪ್ರಸಕ್ತ ಶಿಲ್ಪದಲ್ಲಿ ಮೃತನ ಇಬ್ಬರು ಪತ್ನಿಯರು ಸತಿ ಹೋಗಿದ್ದು ಒಬ್ಬಳ ಎಡತೋಳು ಇನ್ನೊಬ್ಬಳ ಬಲತೋಳು ಚಿತ್ರಿಸಿರುವುದು ಅಪರೂಪವೆನಿಸಿದೆ. ಮಹಾಸತಿ ಶಿಲ್ಪ ಪದ್ಧತಿ ಪ್ರಕಾರ ಎಡಗೈ ಎತ್ತಿದ್ದನ್ನು ಚಿತ್ರಿಸಿರುವುದಿಲ್ಲ. ಎಡಗೈ ಎತ್ತಿರುವುದನ್ನು ಉದ್ದೇಶಪೂರ್ವಕವಾಗಿ ನಾಶಗೊಳಿಸಿರಬೇಕು. ಕಾಲ ಸು. ಕ್ರಿ. ಶ. ೧೬ನೇ ಶತಮಾನ (ಸಂ. ಕ. ೧೭.೫.೯೨).

ನಿಡಗುಂದಿಯ : ಸು. ೧೪ನೇ ಶ.ದ ಮಹಾಸತಿಕಲ್ಲಿನಲ್ಲಿ ಸತಿ ಆದವಳು ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ಸುಂದರ ವೇಷಭೂಷಣದಿಂದ ನಿಂತಿದ್ದಾಳೆ. ಅವಳ ಬಲಗಡೆ ಇನ್ನೊಬ್ಬಳು ನಿಂತಿದ್ದಾಳೆ. ಅವಳ ಕೆಳಗಡೆ ಚಿಕ್ಕ ಕಟ್ಟೆ ಮೇಲೆ ಕಿರಿದಾಗಿ ಅವಳ

ಗಂಡನು ಕುಳಿತಿರುವುದನ್ನು ಚಿತ್ರಿಸಲಾಗಿದೆ. ಎರಡನೇ ಸ್ತರದಲ್ಲಿ ಬಿಲ್ಲು ಬಾಣ ಹಿಡಿದ ವೀರನ ಹಾಗು ವೈರಿಗಳ ಹೋರಾಟವಿದ್ದರೆ, ಕೊನೆಯ ಸ್ತರದಲ್ಲಿ ಮಡಿದ ವೀರ ಕೈಮುಗಿದು ಕುಳಿತಿದ್ದಾನೆ. ಬದಿಗೆ ಯತಿ, ಶಿವಲಿಂಗ, ನಂದಿ ಚಿತ್ರಿಗಳಿವೆ. ಅಲ್ಲಿಯ ಸು. ೧೪ನೇ ಶ.ದ ಮಹಾಸತಿ ಕಲ್ಲಿನಲ್ಲಿ ಕೇವಲ ಇಬ್ಬರು ಸತಿಯರ (ತಲೆಗೆ ಕೇದಿಗೆ ಧರಿಸಿ) ಮಧ್ಯ ವೀರನು ಬಿಲ್ಲು ಹಿಡಿದು ನಿಂತಿರುವುದನ್ನು ಪ್ರಮುಖವಾಗಿ ಚಿತ್ರಿಸಲಾಗಿದೆ. ಸತಿಯರು ಬಲಗೈಯನ್ನು ಎತ್ತಿಹಿಡಿದು ನಿಂತಿದ್ದಾರೆ. ಅಲ್ಲಿಯ ಸು. ೧೫ನೇ ಶ.ದ ಇನ್ನೊಂದು ಶಿಲ್ಪದಲ್ಲಿ ದಂಪತಿಗಳಿಬ್ಬರ ಚಿತ್ರಗಳಿದ್ದು ಸತಿಯು ಬಲಗೈಯಲ್ಲಿ ಹೂವನ್ನು ಎತ್ತಿಹಿಡಿದು ನಿಂತಿರುವುದು ಗಮನೀಯ. ಮೇಲಿನ ಸ್ತರದಲ್ಲಿ ಯತಿ, ಶಿವಲಿಂಗ, ನಂದಿ, ಹೂವು, ದಜಪತಿಗಳು ಕೈ ಮುಗಿದು ಕುಳಿತ ಚಿತ್ರಗಳಿವೆ.

*ಈ ರೀತಿ ಶಿಲ್ಪಗಳಲ್ಲಿ ಸತಿಯು ತನ್ನ ಬಲಗೈಯನ್ನು ಎತ್ತಿ ಹಿಡಿದು ಎಡಗೈಯನ್ನು ಕೆಳಗೆ ಇಳಿಬಿಟ್ಟು, ನಿಂತಿರುತ್ತಾಳೆ. ಕೈಗಳಲ್ಲಿ ನಿಂಬೆಹಣ್ಣು, ಎಲೆ, ಕನ್ನಡಿ, ಹೂವು ಇತ್ಯಾದಿ ಮಂಗಳ ವಸ್ತುಗಳಿರುತ್ತವೆ. ಸೌಭಾಗ್ಯ ಚಿಹ್ನೆಗಳಾದ ಕಂಕಣ, ಬಳೆ, ತಾಳಿ, ಹಾರ, ಕಡಗ ಇತ್ಯಾದಿ ಆಭರಣಗಳನ್ನು ಧರಿಸಿರುತ್ತಾಳೆ. ಟೊಂಕದಿಂದ ಪಾದದವರೆಗೆ ಸೀರೆಯನ್ನು ಲಂಗದಂತೆ ಸುತ್ತಿ ಕಲಾತ್ಮಕದಾಗಿ ಉಟ್ಟಿರುತ್ತಾಳೆ. ತಲೆಗೂದಲನ್ನು ಸುಂದರವಾಗಿ ಬಿಡಿಸಿಕೊಂಡು ಹೂವಿನ ದಂಡೆಯನ್ನು ಕಟ್ಟಿರುತ್ತಾಳೆ. ಹೆರಳಿಗೆ ತುರುಬಿಗೆ ಕೇದಿಗೆಯನ್ನು ಹೆಣೆದು ಕುಚವನ್ನು ಕಟ್ಟಿ ಮನಮೋಹಕವಾಗಿ ಶೃಂಗರಿಸಿರುತ್ತಾಳೆ. ಮೂಗು, ಬಾಯಿ, ಕಣ್ಣು, ಹಣೆ, ಕುಚ, ಎದೆ ಕೈ ಕಾಲುಗಳನ್ನು ನಯವಾಗಿಸಿರುತ್ತದೆ. ಆಳೆತ್ತರದಲ್ಲಿ ಈ ವಸ್ತ್ರಾಭರಣಗಳನ್ನು ಧರಿಸಿ ನಿಂತ ಈಕೆಯ ಬದಿಗಳಲ್ಲಿ ದಂಪತಿಗಳು, ಶಿವಲಿಂಗ, ಯತಿ, ಸೂರ್ಯ-ಚಂದ್ರ ಮುಂತಾದ ಚಿಕ್ಕ ಚಿತ್ರಗಳಿರುತ್ತವೆ. ಈ ಲಕ್ಷಣಗಳುಳ್ಳ ಮಾಸ್ತಿ ಶಿಲ್ಪಗಳು ಸುಮಾರು ಕ್ರಿ. ಶ. ೧೬ ರಿಂದ ೧೭ನೇ ಶತಮಾನದವೆಂದು ತರ್ಕಿಸಬಹುದು. ಇಂತಹ ಶಿಲ್ಪಗಳಲ್ಲಿ ಕೆಲವೊಮ್ಮೆ ಅಪೂರ್ವವಾದ ಅಂಶಗಳಿರುವುದು ಗಮನಾರ್ಹ.*

ಕದರಮಂಡಲಗಿ ಗ್ರಾಮದಲ್ಲಿ ಪ್ರಸಿದ್ಧ ಮಾರುತಿ ಮಂದಿರದ ಹತ್ತಿರ ಕೆಲವು ಮಹತ್ತರ ಮಾಸ್ತಿಶಿಲ್ಪಗಳಿವೆ. ಒಂದು ಶಿಲ್ಪದಲ್ಲಿ ನಿಂತ ಇಬ್ಬರು ಹೆಂಗಸರಿದ್ದಾರೆ. ಒಬ್ಬಳ ಚಿತ್ರ ದೊಡ್ಡದಿದೆ. ತನ್ನ ಬಲಗೈಯನ್ನು ಎತ್ತಿ ಹಿಡಿದು ಆ ಕೈಯಲ್ಲಿ ನಿಂಬೆಹಣ್ಣು, ಕಮಲದ ಹೂವನ್ನು ಮತ್ತು ಕೆಳಗೆ ಇಳಿಬಿಟ್ಟ ಎಡಗೈಯಲ್ಲಿ ವೀಳೆದೆಲೆಯನ್ನು ಹಿಡಿದಿದ್ದಾಳೆ. ಈ ಲಕ್ಷಣ ಸತಿ ಆಗಿರುವುದನ್ನು ಅಭಿವ್ಯಕ್ತಿಸುತ್ತದೆ. ಆದರೆ ಈಕೆಯ ಬದಿಗಿರುವವಳು ಕೈಮುಗಿದುಕೊಂಡು ನಿಂತಿರುವಳು. ಇದರಿಂದ ಈಕೆಯ ಸತಿ ಆದವಳಲ್ಲವೆಂದು ಸ್ಪಷ್ಟಪಡಿಸುವ ಅಪೂರ್ವ ಮಾಹಿತಿಯಾಗಿದೆ. ಬಹುಶಃ ಈಕೆಯು ಸತಿಯ ಸವತಿ ಅಥವಾ ಸೇವಕಿಯಿರಬೇಕು. ಅಲ್ಲಿಯ ಇನ್ನೊಂದು ಮಾಸ್ತಿ ಶಿಲ್ಪದಲ್ಲಿ ಸತಿಯ ಆಳೆತ್ತರದ ಮಹತ್ವದ ಶಿಲ್ಪವಿದೆ. ಇಲ್ಲಿ ಸತಿಯು ಎತ್ತಿ ಹಿಡಿದ ತನ್ನ ಬಲಗೈಯಲ್ಲಿ ನಿಂಬೆಹಣ್ಣಿದೆ. ಕೆಳಗೆ ಇಳಿಬಿಟ್ಟ ಎಡಗೈಯಲ್ಲಿ ಕಮಂಡಲವಿದೆ. ಈಕೆಯ ಬಲಗಡೆ ಬಿಲ್ಲು ಬಾಣ ಹಿಡಿದು ನಿಂತು ಬಹುಶಃ ಯುದ್ಧದಲ್ಲಿ ಸತ್ತ ಆಕೆಯ ಗಂಡನ ಚಿಕ್ಕ ಚಿತ್ರವಿದೆ. ಆತನ ತಲೆಯ ಮೇಲುಬದಿಯಲ್ಲಿ ನಿಂತ ಬಹುಶಃ ಆಕೆಯ ಮಗನಾದ ಒಂದು ಹುಡುಗನ ಚಿಕ್ಕ ಚಿತ್ರವಿದೆ. ಹಿರೇಬೂದಿಹಾಳ ಗ್ರಾಮದ ಕೆರೆ ದಂಡೆಯ ಮೇಲೆ ಹಲವಾರು ಆಳೆತ್ತರದ ವಿಶಿಷ್ಟ ಮಾಸ್ತಿ ಶಿಲ್ಪಗಳ ಪೈಕಿ ಒಂದರ ಶಿಲ್ಪವು ಸುಮಾರು ಏಳು ಅಡಿ ಎತ್ತರವಿದೆ. ಅದರಲ್ಲಿ ಸತಿಯನ್ನು ಆಳೆತ್ತರದಲ್ಲಿ ಚಿತ್ರಿಸಲಾಗಿದೆ. ಈಕೆ ಎತ್ತಿ ಹಿಡಿದ ಬಲಗೈಯಲ್ಲಿ ನಿಂಬೆಹಣ್ಣು ಮತ್ತು ಇಳಿಬಿಟ್ಟ ಎಡಗೈಯಲ್ಲಿ ಕನ್ನಡಿ(?)ಯನ್ನು ಹಿಡಿದು ನಿಂತಿದ್ದಾಳೆ. ಆದರೆ ಉದ್ದ ಎಲೆಯುಳ್ಳ ಕೆಲ ಸಸ್ಯಗಳನ್ನು ಈಕೆಯ ಬಲ ತೋಳಿನ ಬದಿಯಲ್ಲಿ ಚಿತ್ರಿಸಿದೆ. ತೆನೆ ಬೇರುಳ್ಳ ಒಂದು ಜೋಳದ ಗಿಡ ಎಡಬದಿಯಲ್ಲಿದೆ. ಈ ಗಿಡವನ್ನು ಒಂದು ಕಮಂಡಲದ ಮೇಲೆ ಇಡಲಾಗಿದೆ. ಈ ಕಮಂಡಲ ಒಂದರ ಮೇಲೆ ಒಂದಿಟ್ಟು ಎರಡು ಚೌಕ ಪೀಠದ ಮೇಲಿದೆ. ಈ ಸತಿಯ ಮುಖದ ಎಡಬದಿಗೆ ಪತಿ ಪತ್ನಿಯವರ ಮತ್ತು ಯತಿ ಶಿವಲಿಂಗಗಳ ಚಿತ್ರಗಳಿವೆ. **ಈ ಶಿಲ್ಪದಲ್ಲಿ ತೋರಿಸಿದ ಜೋಳದ ಗಿಡ ಮತ್ತು ಸಸ್ಯಗಳ ಚಿತ್ರ ಬಹುಶಃ ಕರ್ನಾಟಕದ ಮಾಸ್ತಿ ಶಿಲ್ಪದಲ್ಲೇ ಅಪರೂಪದ್ದೆನಿಸಿದೆ ಮತ್ತು ಈ ಗಿಡ ಸಸಿಗಳನ್ನು ಯಾವ ಕಾರಣಕ್ಕಾಗಿ ಇಲ್ಲಿ ಸಾಂಕೇತಿಕವಾಗಿ ತೋರಿಸಲಾಗಿದೆ** ಎಂಬುದನ್ನು ಅರಿಯಬೇಕಾಗಿದೆ. ಅಲ್ಲಿಯ ಇನ್ನೊಂದು ಮಾಸ್ತಿ ಶಿಲ್ಪದಲ್ಲಿ ಸತಿಯು ಎತ್ತಿ ಹಿಡಿದ ಬಲಗೈಯಲ್ಲಿ ನಿಂಬೆಹಣ್ಣನ್ನು ಮತ್ತು ಇಳಿಬಿಟ್ಟ ಎಡಗೈಯಲ್ಲಿ ಕಮಂಡಲವನ್ನು ಹಿಡಿದು ನಿಂತಿದ್ದಾಳೆ. ಸೂರ್ಯ ಚಂದ್ರರ ಚಿಕ್ಕ ಚಿತ್ರಗಳು ಈಕೆಯ ತಲೆಯ ಬದಿಗಿವೆ. ಈ ಶಿಲ್ಪದಲ್ಲೂ ಸತಿಯು ಕಮಂಡಲವನ್ನು ಹಿಡಿದಿರುವುದು ಮಹತ್ವವೆನಿಸಿದೆ. ಹೀಗೆಯೇ ಹಿರೇಕೆರೂರ ಗ್ರಾಮದ ಕೆರೆಯ ದಂಡೆಯಲ್ಲಿ ಬ್ಯಾಡಗಿ ತಾಲೂಕಿನ ಹಿರೇಹಳ್ಳಿ ಗ್ರಾಮದ ಕೋಟೇಶ್ವರ ದೇವಾಲಯದ ಬದಿಯಲ್ಲಿ ಮತ್ತು ಹಾವೇರಿ ತಾಲೂಕಿನ ದೇವಗಿರಿ ಊರಿನ ಹೊರಗಡೆ ನಿಲ್ಲಿಸಿದ ಇಂತಹ ಮಾಸ್ತಿಶಿಲ್ಪಗಳು ಸುಂದರವಾಗಿವೆ. ಮತ್ತಿಹಳ್ಳಿಯ ಸು. ೧೬ನೇ ಶ.ದ ಶಿಲ್ಪದಲ್ಲಿ ಸತಿಯು ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾಳೆ; ಆಕೆಯ ಗಂಡ ಪ್ರಾಣಿ ಬೇಟೆ ಆಡಿದ ಕಿರು ದೃಶ್ಯವಿದೆ. ಬಲಗೈ ತೋಳುಳ್ಳ ಕಂಬಗಳ ಮಾಸ್ತಿಶಿಲ್ಪಗಳು ಹಲವಾರು ಕಡೆಗಳಲ್ಲಿವೆ. (ಹಂಸಭಾವಿ ಇತ್ಯಾದಿ). ಕೆಲವೊಮ್ಮೆ ತೋಳಿನ ಕೆಳಗಡೆ ಮಡಿದ ವೀರನನ್ನು ಚಿತ್ರಿಸಿದ ಉದಾಹರಣೆಗಳಿವೆ (ಆಡೂರು, ನಿಡಗುಂದಿ ಇತ್ಯಾದಿ). ನಿಡಗುಂದಿ ಶಿಲ್ಪದಲ್ಲಿ ವೀರನು ಬಿಲ್ಲು-ಬಾಣಗಳನ್ನು ಹಿಡಿದು ನಿಂತಿದ್ದನ್ನು ಚಿತ್ರಿಸಲಾಗಿದೆ. ಅವುಗಳ ಕಾಲ ಸು. ೧೬-೧೭ನೇ ಶತಮಾನ. **ಸತಿಯರುಳ್ಳ ವೀರಗಲ್ಲುಗಳು ಅನೇಕ ಕಡೆ ಇವೆ.** ದೇವಿಹೊಸೂರಿನ ಶಿಲ್ಪದಲ್ಲಿ ಸತಿ ಹೋದ ಮೂವರು ತಮ್ಮ ಬಲಗೈ ಎತ್ತಿ ನಿಂಬೆಹಣ್ಣನ್ನು ಹಿಡಿದು ನಿಂತಿದ್ದಾರೆ. ಅವರ ಪತಿಯು ಕಿರಿದಾಗಿ ಅವರ ಎಡಗಡೆ ವಣೆಯ ಮೇಲೆ ಕುಳಿತಿದ್ದಾನೆ. ಎರಡನೇ ಸ್ತರದಲ್ಲಿ ಮಡಿದ ವೀರನನ್ನು ಅಪ್ಸರೆಯರು ಒಯ್ಯುತ್ತಿದ್ದಾರೆ.



ಹಿರೇಉಲ್ಲಾಳದ ಶಾಸನಗಳು  ಹಿರೇಉಲ್ಲಾಳದ ವೀರಗಲ್ಲು  ಹಾವೇರಿಯ ಸತಿಗಲ್ಲು

ಮೂರನೇ ಸ್ತರದಲ್ಲಿ ಮಡಿದ ವೀರ ಕೈಮುಗಿದು ಕುಳಿತಿದ್ದಾನೆ. ಬದಿಗೆ ಯತಿ, ಶಿವಲಿಂಗ, ನಂದಿ ಮೇಲೆ ಸೂರ್ಯ ಚಂದ್ರರಿದ್ದಾರೆ. ಕಾಲ ಸು. ಕ್ರಿ. ಶ. ೧೪ನೇ ಶತಮಾನ. ಇದೇ ಮಾದರಿಯ ಸು. ೧೬ನೇ ಶ.ದ. ಶಿಲ್ಪವೊಂದು ದೇವಗಿರಿಯಲ್ಲಿದೆ. ಅದರಲ್ಲಿ ಇಬ್ಬರು ಸತಿಯರು ಬಲಗೈ ಎತ್ತಿ ನಿಂಬೆಹಣ್ಣು ಹಿಡಿದು ನಿಂತಿದ್ದಾರೆ. ಅವರ ಪತಿಯನ್ನು ವಿಮಾನದಲ್ಲಿ ಕೂಡಿಸಿಕೊಂಡು ಅಪ್ಸರೆಯರು ಒಯ್ಯುತ್ತಿದ್ದಾರೆ. ಮೇಲ್ಗಡೆ ನಂದಿ, ಯತಿ, ಶಿವಲಿಂಗ ಇವೆ. ವೀರನ ಬದಿಗಳಲ್ಲಿ ಇಬ್ಬರು ಸತಿಯರು ಕೈಮುಗಿದುಕೊಂಡು ಕುಳಿತಿದ್ದಾರೆ ಹಾಗೂ ಸೂರ್ಯ ಚಂದ್ರರಿದ್ದಾರೆ.

*ಕರ್ನಾಟಕ ವಿ.ವಿ. ಯ ಕನ್ನಡ ಸಂಶೋಧನ ಸಂಶೋಧನ ಸಂಸ್ಥೆಯ ವತಿಯಿಂದ ಮಾಡಲಾಗಿರುವ. ಈ ಹೊಸ ಶೋಧಗಳಲ್ಲಿ ಕಂಡ ದೇವಾಲಯಗಳು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ್ದು ಅವುಗಳಲ್ಲಿನ ಶಿಲ್ಪಗಳಲ್ಲಿ ಮಂತಗಿಯ ಕಾರ್ತಿಕೇಯ, ಕಚವಿಯ ಗಣೇಶ, ನಾಗಾವಿಯ ಮಹಿಷಾಸುರಮರ್ದಿನಿ ತುಪ್ಪದ ಕಿರುಹಟ್ಟಿಯ ಭೈರವ, ಶಲವಡಿಯ ವೀರಗಲ್ಲು, ಕೆಲವು ಸ್ಥಳಗಳ ಶಾಸನಗಳು- ವೀರಗಲ್ಲು, ಸತಿಕಲ್ಲುಗಳು ಕಲಾ ಇತಿಹಾಸ ಅಧ್ಯಯನಕ್ಕೆ ಅಮೂಲ್ಯ ಆಕರ ಸಾಮಗ್ರಿಗಳಾಗಿವೆ.*

ಮಾಡಲಗೇರಿ ಕೊಟ್ರೇಶ್ *

# ಗಿರಿದುರ್ಗ ಉಚ್ಚಂಗಿ ಪ್ರದೇಶ - ಒಂದು ಪರಿಶೀಲನೆ

ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಹೊಂದಿದ ಉಚ್ಚಂಗಿ ದುರ್ಗ ರಾಜಸಂತತಿಯವರಿಂದ, ಮಾಂಡಳೀಕರಿಂದ, ಪಾಳೇಗಾರರಿಂದ ಆಳ್ವಿಕೆಗೆ ಒಳಪಟ್ಟದ್ದಲ್ಲದೆ ಬ್ರಿಟಿಷರ ಆಡಳಿತಕ್ಕೂ ಒಳಗಾಗಿತ್ತು. ಇಲ್ಲೊಂದು ಅಪೂರ್ವ ಮತ್ತು ಅಭೇದ್ಯವಾದ ಕೋಟೆ ನಿರ್ಮಾಣವಾಗಿತ್ತು. ಇದನ್ನು ಚೋಳ ಅರಸರೂ ಗೆಲ್ಲಲಾಗಲಿಲ್ಲ. ಆದರೆ ಹೊಯ್ಸಳರು ಗೆದ್ದಿದ್ದರು. ಹಾಗಾಗಿ ಅವರಿಗೆ ಗಿರಿದುರ್ಗಮಲ್ಲ, ಶನಿವಾರಸಿದ್ಧಿ ಎಂಬ ಬಿರುದುಗಳು ಪ್ರಾಪ್ತವಾಗಿದ್ದವು. ಪ್ರಸ್ತುತ ಈ ಲೇಖನದಲ್ಲಿ ಕೋಟೆಯ ನಿರ್ಮಾಣದ ಕಾಲ, ಕೋಟೆಯ ಲಕ್ಷಣಗಳನ್ನು; ಜನಪದರ ಅಭಿಪ್ರಾಯ, ಲಭ್ಯವಾದ ಶಾಸನಾಧಾರಗಳು ಮತ್ತು ಸಾಹಿತ್ಯಾಧಾರಗಳಿಂದ ತಿಳಿಯಲು ಪ್ರಯತ್ನಿಸಿದೆ.

**ಕೋಟೆಯ ನಿರ್ಮಾಣದ ಕಾಲ:** ಪ್ರಾಚೀನ ಕಾಲದ ದೇವಾಲಯ ಮತ್ತು ಕೋಟೆಯ ಕಾಲವನ್ನು ನಿರ್ಣಯಿಸುವುದು ಕಠಿಣವಾದುದು. ಆಧಾರಗಳ ಕೊರತೆಯೇ ಇದಕ್ಕೆ ಕಾರಣ. ಬನವಾಸಿ ಕದಂಬರ ಒಂದು ಶಾಖೆ ಉಚ್ಚಂಗಿಯಿಂದ ಆಳ್ವಿಕೆ ನಡೆಸಿತು. ಆದರೆ ಅವರ ಕಾಲದಲ್ಲಿ ಇಲ್ಲಿ ಕೋಟೆ ಇದ್ದಿರಬಹುದಾದರೂ ಸ್ಪಷ್ಟವಾದ ಆಧಾರಗಳು ಲಭ್ಯವಿಲ್ಲ. ಕದಂಬರ ಆಳ್ವಿಕೆಯ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಬಾದಾಮಿಯ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದ ಯಾವುದೇ ಶಾಸನಗಳಾಗಲೀ ಅವಶೇಷಗಳಾಗಲೀ ಇಲ್ಲಿ ಕಂಡುಬಂದಿರುವುದಿಲ್ಲ. ಮುಂದೆ ಕಲ್ಯಾಣ ಚಾಳುಕ್ಯರ ಕಾಲದ ಶಾಸನಗಳಲ್ಲಿ ಉಚ್ಚಂಗಿಕೋಟೆಯ ಕೆಲ ಉಲ್ಲೇಖಗಳಿಂತಿವೆ.

*ಶ್ರೀಮತ್ರಿಭುವನಮಲ್ಲ ಪಾಂಡ್ಯದೇವ ಪಾದಾರಾಧಕಂ ವೈರಿಬಳಸಾಧಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಮನ್ಮಹಾಸಾಮನ್ತಯಂ ಒಳನಡಾಳ್ವರು ಶ್ರೀ ಪಾಂಡ್ಯ ದೇವರ್ಗೆ ಬಿನ್ನಪಮ ಗೈಯಲು ಅನಾದಿ ಸಂಸಿದ್ಧಿಯ ಪಟ್ಟಣಂ ಉಚ್ಚಂಗಿ ಕೋಟೆಯ.*

ಉಚ್ಚಂಗಿ ಕೋಟೆ ಉಲ್ಲೇಖವಾದ ಇನ್ನೊಂದು ಶಾಸನದಲ್ಲಿ ಹೀಗಿದೆ: *ವಂಗೀಯ ಮಂಡಳೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯ ದೇವರು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಆಳುವಾಗ ಮಾರೇಶ್ವರ ದೇವರ್ಗೆ ಉಚ್ಚಂಗಿ ಕೋಟೆಯ ನೈರುತ್ಯದ ದೆಸೆಯಂ.*

ಚಾಲುಕ್ಯರ ಚೂಡಾಮಣಿಯೆಂದು ಕರೆಯಿಸಿಕೊಂಡ ರಾಜಾದಿತ್ಯನು ಆಳುತ್ತಿದ್ದಾಗ ಗಂಗವಂಶದ ಎರಡನೆಯ ಮಾರಸಿಂಹನು ಕ್ರಿ.ಶ. ೯೭೧ರಲ್ಲಿ ಕೋಟೆಯನ್ನು ಮುತ್ತಿ ವಶಪಡಿಸಿಕೊಂಡನು. ಉಚ್ಚಂಗಿದುರ್ಗದ ಕೋಟೆಯು ಈ ಮೇಲಿನ ಆಧಾರಗಳ ಹಿನ್ನೆಲೆಯಲ್ಲಿ ಕ್ರಿ.ಶ. ೯೭೧ ಕ್ಕಿಂತ ಮೊದಲೇ ನಿರ್ಮಾಣವಾಗಿರುವುದು ಕಂಡು ಬರುತ್ತದೆ.

**ಕೋಟೆಯ ಸುತ್ತುಗಳು:** ಶತ್ರುಗಳಿಂದ ರಕ್ಷಣೆಯನ್ನು ಪಡೆಯುವುದೇ ಕೋಟೆಗಳ ನಿರ್ಮಾಣದ ಮೂಲ ಉದ್ದೇಶ. ಶತ್ರುಗಳ ಹಾವಳಿ, ಅವಶ್ಯಕತೆಗಳ ಹೆಚ್ಚಳ, ಮತ್ತು ರಾಜ್ಯವು ವಿಸ್ತಾರವಾಗುತ್ತಾ ಹೋದಂತೆ ಕೋಟೆಯ ಸುತ್ತುಗಳು ಬೆಳೆದಿವೆ. ಆಡಳಿತದ ಪ್ರಮುಖ ಕೇಂದ್ರವಾಗಿದ್ದ ಉಚ್ಚಂಗಿ ಕೋಟೆಯು ಹಲವು ಬಾರಿ ದುರಸ್ಥಿಯೊಂದಿಗೆ, ಹೊಸ ಸುತ್ತುಗಳನ್ನು ಹೊಂದಿದೆ. ಪಾಳೇಗಾರರ ಅವಧಿಯಲ್ಲಿ ದಾದಯ್ಯನಾಯಕನು ಉಚ್ಚಂಗಿದುರ್ಗದ ಕೋಟೆಯನ್ನು ಬಲಪಡಿಸಿಕೊಂಡು ಪ್ರಬಲನಾಗಿದ್ದನು. ಸ್ಥಳೀಯರು ಇದು ಏಳುಸುತ್ತಿನ ಕೋಟೆ ಎಂದು ಅಭಿಪ್ರಾಯಪಟ್ಟರೆ ಡಾ. ಸಿ. ಎಸ್. ಪಾಟೀಲರ ರೀತ್ಯಾ ಇದು, ಹಲವು ಸುತ್ತುಗಳನ್ನು ಒಳಗೊಂಡಿತ್ತು. ಕದಂಬರಿಂದ ಮೊದಲು ಮಾಡಿ ವಿಜಯನಗರದ ಅರಸರವರಿಗೆ, ಕೋಟೆಯನ್ನು ಭದ್ರಪಡಿಸಿಕೊಂಡಿರುವುದಕ್ಕೆ ಆಧಾರಗಳು ಲಭ್ಯವಾಗಿಲ್ಲ. ಉಚ್ಚಂಗಿ ಕೋಟೆಯು ವಿಸ್ತಾರವಾಗಿದ್ದು, ಹಲವು ಸುತ್ತುಗಳನ್ನು ಒಳಗೊಂಡಿರಬಹುದಾದುದಕ್ಕೆ ಈ ಕೆಳಗಿನ ಅಂಶಗಳು ಗಮನಾರ್ಹ.

**ಒಂದನೆಯದಾಗಿ ಜನಸಾಮಾನ್ಯರಿಗಾಗಿ ಕೋಟೆಯ ಪಕ್ಕದಲ್ಲಿ ಊರುಗಳು ನಿರ್ಮಾಣವಾಗುತ್ತಿದ್ದವು. ರಾಜಸಂತತಿ ಮತ್ತು ಪ್ರಮುಖ**

* ಸಂಶೋಧನ ಸಹಾಯಕರು, ವಸ್ತು ಸಂಗ್ರಹಾಲಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ವರ್ಗದವರು ಕೋಟೆಯೊಳಗಿರುತ್ತಿದ್ದರು. ಉಚ್ಚಂಗಿದುರ್ಗದ ಆಗ್ನೇಯ ಭಾಗಕ್ಕೆ ಊರಿದ್ದಿರಬಹುದು. ಆದರ ಅವಶೇಷಗಳೂ ಇಂದಿಗೂ ಇದ್ದು, ಪಕ್ಕದಲ್ಲಿ ಹರಕಲು ಗೋಡೆಗಳಿರುವುದರಿಂದ ಹೊರಕೋಟೆಯ ವಿಸ್ತಾರ ಈಗಿರುವದಕ್ಕಿಂತಲೂ ದೊಡ್ಡದಾಗಿತ್ತು. ಕೋಟೆಯ ಒಳಗೆ ಪ್ರವೇಶಿಸಲು ಮೂರು ಬಾಗಿಲುಗಳನ್ನು ದಾಟಬೇಕಾಗಿದ್ದು, ಕ್ಷೇತ್ರ ವೀಕ್ಷಣೆಯ ಅವಧಿಯಲ್ಲಿ ಗಮನಿಸಿದಂತೆ, ಉಚ್ಚಂಗಿಕೋಟೆಯು ಸದ್ಯದಲ್ಲಿ ಹರಿದ, ಮುರುಕಲಾದ ಮೂರು ಸುತ್ತುಗಳನ್ನು ಒಳಗೊಂಡಿದ್ದು ಈ ಸುತ್ತುಗಳು ದಕ್ಷಿಣಭಾಗಕ್ಕೆ ವಿಸ್ತರಿಸಿವೆ.

**ಕೋಟೆಯ ಲಕ್ಷಣಗಳು :** *ದಕ್ಷಿಣೋತ್ತರವಾಗಿ ಹಬ್ಬಿರುವ ಎರಡು ಬೆಟ್ಟಗಳನ್ನು ಬಳಸಿ ಹೊರಕೋಟೆಯನ್ನು ಕಟ್ಟಿದ್ದು ಇದೊಂದು ಗಿರಿ ದುರ್ಗವಾಗಿದೆ. ಇದನ್ನು ತಳಪಾಯದ ಆಧಾರವಿಲ್ಲದೆ ಹಾಸು ಬಂಡೆಯ ಮೇಲೆ ನಿರ್ಮಿಸಿದಂತಿದೆ. ಬೆಟ್ಟದ ತುದಿಯನ್ನು ತಲುಪಲು ಶತ್ರುಗಳಿಗೆ ಸಾಧ್ಯವಾಗದಂತೆ ಕೋಟೆ ಭದ್ರವಾಗಿದೆ. ಕೋಟೆಯ ಗೋಡೆಯು ೧೦ ಅಡಿ ಎತ್ತರವಾಗಿದ್ದು ಕೆಲವು ಕಡೆ ಹೆಚ್ಚು ಕಡಿಮೆ ಇದೆ. ಇದರ ಅಗಲ ಸುಮಾರು ೫ ಅಡಿಗಳಾಗಿದ್ದು ಕೆಲವು ಸ್ಥಳಗಳಲ್ಲಿ ೧೦ ಅಡಿಯವರೆಗೂ ಇದೆ. ಕೋಟೆ ಗೋಡೆಯ ಕೆಳಭಾಗದಲ್ಲಿ ಆಯಾತಾಕಾರದ ಕಲ್ಲುಗಳನ್ನು ಬಳಸಿದ್ದು ಮೇಲ್ಭಾಗದಲ್ಲಿ ಮಧ್ಯಮ ಗಾತ್ರದ ಕಲ್ಲುಗಳ ಬಳಕೆಯಾಗಿದೆ. ಸೂಕ್ಷ್ಮವಾಗಿ ಇದನ್ನು ಅವಲೋಕಿಸಿದರೆ ೩ ವಿಧದ ಹಂತಗಳನ್ನು ಗುರುತಿಸಬಹುದು ಮತ್ತು ಮೇಲ್ಭಾಗದ ಗೋಡೆಯಲ್ಲಿ ಗಾರೆಯ ಉಪಯೋಗವಿದ್ದು ಬಂದೂಕನ್ನು ಬಳಸಲು ಕಿಂಡಿಗಳನ್ನು ಅಳವಡಿಸಲಾಗಿದೆ. ಕೋಟೆಯ ಆಯಾಕಟ್ಟಿನ ಸ್ಥಳಗಳಲ್ಲಿ (ಬತೇರಿ) ಕೊತ್ತಳಗಳಿದ್ದು, ಅವು ೧೨೦ಕ್ಕೂ ಹೆಚ್ಚಿವೆ ಎಂದು ಊರಿನವರು ಅಭಿಪ್ರಾಯಪಟ್ಟರೂ, ಪ್ರಸ್ತುತ ಸುಮಾರು ೩೦ ಕೊತ್ತಳಗಳು ಮಾತ್ರ ಗೋಚರಿಸುತ್ತವೆ. ಇವುಗಳನ್ನು ಶಸ್ತ್ರಗಳ ಸಹಿತ ಮೇಲೇರಲು ಅನುಕೂಲವಾಗದಂತೆ ಚೌಕಾಕಾರ ಮತ್ತು ವರ್ತುಲಾಕಾರದಲ್ಲಿ ನಿರ್ಮಿಸಲಾಗಿದೆ.*

*ಶತ್ರುಗಳ ಬರುವಿಕೆಯನ್ನು ಗ್ರಹಿಸುವುದು ಮತ್ತು ಕೋಟೆ ರಕ್ಷಣೆ ಮಾಡಿಕೊಳ್ಳುವುದು ಇವುಗಳ ನಿರ್ಮಾಣದ ಮೂಲ ಉದ್ದೇಶವಾಗಿದೆ. ಉಚ್ಚಂಗಿ ಕೋಟೆಗೆ ಆರು ಪ್ರಮುಖ ಬಾಗಿಲುಗಳಿದ್ದು, ದಿಡ್ಡಿ ಮತ್ತು ಉಪಬಾಗಿಲುಗಳೂ ಇವೆ. ಕೋಟೆಯ ಪೂರ್ವದಿಂದ ಒಳಪ್ರವೇಶಿಸಲು ಇರುವುದೇ ಮಳಿಬಾಗಿಲಾಗಿದ್ದು ದೂರದಿಂದ ಇದು ಗೋಚರಿಸುವುದಿಲ್ಲ. ಇದರ ಬಾಗಿಲವಾಡದಲ್ಲಿ ಲಿಂಗವನ್ನು ಕೆತ್ತಿದ್ದು, ಅದಕ್ಕೆ ಎರಡು ಆನೆಗಳು ನೀರನ್ನು ಸುರಿಯುವ ದೃಶ್ಯವಿದೆ. ಇದರ ಪಾರ್ಶ್ವಗಳಲ್ಲಿ ಬೃಹದಾಕಾರದ ಗೋಡೆಗಳಿದ್ದು ಇದಕ್ಕೆ ೨೦ ಮೀಟರ್ ಅಂತರದಲ್ಲಿ ಎರಡನೆಯ ಬಾಗಿಲಿದೆ. ಇದು ಉತ್ತರಾಭಿಮುಖವಾಗಿರುವುದಲ್ಲದೆ ಇದರ ಮೇಲ್ಭಾಗದಲ್ಲಿ ಗಣೇಶನ ಶಿಲ್ಪವನ್ನು ಕೆತ್ತಲಾಗಿದ್ದು, ಪಾರ್ಶ್ವಗೋಡೆಯಲ್ಲಿ ದೊಡ್ಡಗಾತ್ರದ ತನೆಗಳನ್ನು ಕಾಣಬಹುದಾಗಿದೆ. ಮೂರನೆಯ ಬಾಗಿಲು, ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದ್ದು ಕಂಬಗಳ ಕಟ್ಟೆಯ ಮೇಲಿರುವುದು ಕಾಣುವುದು. ಇದರ ಎಡಬಲಕ್ಕೆ ಒಳಗೋಡೆಯಲ್ಲಿ ೧೨ನೇ ಶತಮಾನಕ್ಕೂ ಮೊದಲೇ ನಿರ್ಮಾಣಗೊಂಡಿರಬಹುದಾದ ಕಂಬಗಳ, ಶಿಲ್ಪಗಳ ಅವಶೇಷಗಳನ್ನು ಕಾಣಬಹುದಾಗಿದೆ.*

ನಾಲ್ಕನೆಯದು ಹರಿಹರದ ದಿಕ್ಕಿಗೆ ಮುಖವಾಗಿರುವುದರಿಂದ ಹರಿಹರದ ಬಾಗಿಲೆಂದು ಕರೆಯಲ್ಪಟ್ಟಿದ್ದು, ಇದು ವೈರಿಗಳಿಗೆ ಗೋಚರಿಸದಂತಿರಲು ಇಂಗ್ಲೀಷಿನ 'C' ಅಕ್ಷರದಾಕಾರದಲ್ಲಿ ಗೋಡೆಯನ್ನು ಕಟ್ಟಲಾಗಿದೆ. ಪಶ್ಚಿಮ ಭಾಗದಿಂದ ಉಚ್ಚಂಗಿ ಕೋಟೆಯನ್ನು ಪ್ರವೇಶಿಸಲು ಈ ಬಾಗಿಲನ್ನು ಬಿಟ್ಟರೆ ಬೇರೆ ಯಾವ ಮಾರ್ಗವೂ ಇಲ್ಲ. ಐದನೆಯದು ತುಂಬಾ ಇಕ್ಕಟ್ಟಾದ ಬಾಗಿಲಾಗಿದ್ದು ೮ ಅಡಿ ಎತ್ತರವಾಗಿದೆ. ಈ ಬಾಗಿಲಿಗೆ ಇಂದಿಗೂ ಬಾಳೇಹಣ್ಣನ್ನು ತಿಕ್ಕುವ ಪದ್ಧತಿ ರೂಢಿಯಲ್ಲಿದೆ. ಮತ್ತು ಉಚ್ಚಂಗೆಮ್ಮ ದೇವಿಯ ದರ್ಶನಕ್ಕೆ ಈ ಮಾರ್ಗವನ್ನು ಬಳಸಲೇಬೇಕು. ಆರನೆಯದು ಮುಖ್ಯವಾದುದು; ಈ ಬಾಗಿಲು ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದ್ದು ಬಾಗಿಲಿನ ಮೇಲೆ ಗಣೇಶನನ್ನು ಕೆತ್ತಲಾಗಿದೆ. ಇದು ಆರು ಅಂಕಣಗಳನ್ನು ಮತ್ತು ಪಾರ್ಶ್ವಗಳಲ್ಲಿ ಕಟ್ಟೆಗಳನ್ನು ಹೊಂದಿದೆ. ಬಾಗಿಲಿನ ಒಳಮೈಯನ್ನು ಕಮಾನಿನಿಂದ ಅಲಂಕರಿಸಲಾಗಿದ್ದು, ಕಮಾನಿನ ಕಲ್ಲುಗಳನ್ನು ಮುಂದೆ ಚಾಚಿ ಸ್ವಲ್ಪ ಭಾಗ ತುಂಡರಿಸಿದಂತಿದೆ.

ಮೂರನೆಯ ಬಾಗಿಲಿನ ದಕ್ಷಿಣದ ಗೋಡೆಯ ಪೂರ್ವ ಭಾಗಕ್ಕೆ ದಿಡ್ಡಿಯ ಬಾಗಿಲಿದ್ದು, ಇದು ಸುಮಾರು ೫ ಅಡಿ ಎತ್ತರ ೪ ಅಡಿ ಅಗಲವಾಗಿದ್ದು ಬೇರೆ ಬಾಗಿಲುಗಳಿಗಿಂತ ಭಿನ್ನವಾಗಿದೆ. ಇಲ್ಲಿಂದ ಕೋಟೆಯ ದಕ್ಷಿಣ ಭಾಗಕ್ಕೆ ಹೋಗಲು ಇದು ಹತ್ತಿರದ ಮಾರ್ಗವಾಗಿದೆ. ಇದು ಗುಪ್ತದ್ವಾರವೆಂತಲೂ ಸ್ಥಳೀಯರಿಂದ ಗುರುತಿಸಲ್ಪಟ್ಟಿದೆ.

ಎರಡನೆಯ ಬಾಗಿಲಿನ ಬಲಕ್ಕಿರುವುದೇ ಅದರ ಉಪಬಾಗಿಲು. ಇದನ್ನು ದೊಡ್ಡ ಬಾಗಿಲನ್ನು ಮುಚ್ಚಿದಾಗ ಉಪಯೋಗಿಸುತ್ತಿದ್ದರು. ಉಚ್ಚಂಗಿಕೋಟೆಯ ದಕ್ಷಿಣ ಭಾಗದ ಹಿರೇಹೊಂಡದಿಂದ ಮಾರ್ಗವೊಂದು ಅದೇ ದಿಕ್ಕಿನಿಂದ ಕೋಟೆಯ ಒಳ ಪ್ರವೇಶಿಸುತ್ತದೆ. ಮತ್ತು ಮಾರ್ಗದ ಉದ್ದಕ್ಕೂ ಹಾಕಿರುವ ಕಲ್ಲುಗಳು ತುಂಬಾ ಸವೆದಿರುವುದು, ಕಂಡು ಬರುತ್ತದೆ. ಪ್ರಾಚೀನ ಕಾಲದಿಂದಲೂ ಈ ಕೋಟೆಗೆ ನೀರಿನ ಸರಬರಾಜು ಇಲ್ಲಿಂದ ಆಗಿರಬಹುದು. ಈ ಭಾಗದಲ್ಲಿ ಪ್ರಾಚೀನ ದೇವಾಲಯವಿದ್ದಿರಬಹುದಾದ ಕುರುಹುಗಳನ್ನು ಕಾಣಬಹುದು.

**ಉಚ್ಚಂಗಿ ದುರ್ಗದ ಕೋಟೆಯ ಮಹತ್ವ :** ಒಂದು ರಾಜ್ಯದ ಅಳಿವು ಉಳಿವಿಗೆ ರಾಜನ ಪಾತ್ರ ಎಷ್ಟು ಮುಖ್ಯವೋ ಅಷ್ಟೇ ಕೋಟೆಗಳ ಪಾತ್ರವು ಮುಖ್ಯವಾದುದು. ಕೋಟೆ ನೀರನ್ನು ಸಂಗ್ರಹಿಸುವ ಕೊಡ ಇದ್ದಹಾಗೆ, ಕೊಡಕ್ಕೆ ತೂತು ಬಿದ್ದರೆ ನೀರು ಉಳಿಯಲಾರದು. ಹಾಗೆಯೇ ಕೋಟೆಯು ಸಡಿಲವಾದರೆ ರಾಜ್ಯ ಉಳಿಯಲಾರದು. ಕೋಟೆಯನ್ನು ಗೆದ್ದುದಾದರೆ ಇಡೀ ರಾಜ್ಯವೇ ಸಿಕ್ಕಂತೆ. ಅಂದು ಕೋಟೆಯನ್ನು ಕಟ್ಟಿಸುವುದು ಮತ್ತು ಗೆಲ್ಲುವುದು ಪ್ರತಿಷ್ಠೆಯ ವಿಷಯವಾಗಿತ್ತು.

ಉಚ್ಚಂಗಿಕೋಟೆಯು, ಮಹತ್ವದ ಮತ್ತು ಅಭೇದ್ಯವಾದ ಕೋಟೆಯಾಗಿದ್ದು, ಕಾಡುವೆಟ್ಟಿ ಎಂಬ ಪಲ್ಲವ ದೊರೆಯು ಇದನ್ನು

ದೀರ್ಘಕಾಲದವರೆಗೆ ಮುತ್ತಿ ತನ್ನ ಶೌರ್ಯದಿಂದ ಸ್ಥಳೀಯರನ್ನು ದಂಗುಬಡಿಸಿದರೂ ಅವನಿಂದ ಕೋಟೆಯನ್ನು ಗೆಲ್ಲಲಾಗಲಿಲ್ಲ. ಗಂಗವಂಶದ ೨ನೇ ಮಾರಸಿಂಹನು ಕ್ರಿ.ಶ. ೯೭೧ರಲ್ಲಿ ಚಾಲುಕ್ಯರಿಂದ ಇದನ್ನು ವಶಪಡಿಸಿಕೊಂಡನಲ್ಲದೆ ಈ ಕೋಟೆಯನ್ನು ಜಯಿಸುವುದರಲ್ಲಿ ಚಾವುಂಡರಾಯನ ಪಾತ್ರ ಮಹತ್ವದ್ದಾಗಿದ್ದು ದರಿಂದ ಅವನಿಗೆ ರಣರಂಗ 'ಸಿಂಹ' ಎಂಬ ಬಿರುದು ಬಂದಿದೆ. ಹೊಯ್ಸಳ ಬಲ್ಲಾಳನು ಉಚ್ಚಂಗಿಯ ಅಭೇಧ್ಯವಾದ ಕೋಟೆಯನ್ನು ಭೇದಿಸಲು ತಂಡೋಪತಂಡ ಆನೆಗಳನ್ನು ಉಪಯೋಗಿಸಿದನು. ಇವು ಕ್ರೂರವಾಗಿ ಕೋರೆಗಳಿಂದ ಅಗೆದು ಕೋಟೆಯ ಗೋಡೆಗಳನ್ನು ಕೆಡಹಿದ ನಂತರ ಸೈನ್ಯವು ಒಳಹೊಕ್ಕು - ಸ್ತ್ರೀಯರು, ಕುದುರೆ ಸವಾರ, ಸೈನ್ಯವನ್ನು ಮತ್ತು ಖಜಾನೆಯನ್ನು ಸುಲಿಗೆ ಮಾಡಲಾಯಿತು.

ಈ ಹಿನ್ನೆಲೆಯಲ್ಲಿ ಕೆಲವು ಪ್ರಶ್ನೆಗಳನ್ನೆತ್ತಿ ಸದ್ಯ ಚರ್ಚಿಸಲಾಗಿದೆ.

*೧. ಉಚ್ಚಂಗಿ ದುರ್ಗವನ್ನು ಗೆಲ್ಲಲು ಕಷ್ಟಕರವಾಗಿರಬಹುದೇಕೆ?*
*೨. ಇದನ್ನು ಗೆಲ್ಲುವುದರ ಮಹತ್ವವೇನು? ಗದ್ದವರ ಪ್ರತಿಷ್ಠೆ ಏಕೆ ಹೆಚ್ಚುತ್ತಿತ್ತು?*

ಒಂದನೆಯ ಪ್ರಶ್ನೆಗೆ ಪೂರಕವಾದಂತೆ ಉಚ್ಚಂಗಿದುರ್ಗವು ಭೌಗೋಳಿಕವಾಗಿ ಇದರ ಸುತ್ತ ಮುತ್ತಲಿನ ಪ್ರದೇಶಗಳಿಗಿಂತಲೂ ಎತ್ತರವಾಗಿದ್ದು, ಸುತ್ತಲೂ ಆಳವಾದ ಕಂದಕಗಳು ಮತ್ತು ಕಡಿದಾದ ಬೆಟ್ಟವನ್ನು ಹೊಂದಿದ್ದು ಕೋಟೆಯೊಳಗೆ ಪ್ರವೇಶಿಸಲು ಸುಲಭವಾಗಿರಲಿಲ್ಲ. ಎರಡನೆಯದಾಗಿ ಈ ಕೋಟೆಯು ೨೫ ಕಿ.ಮೀ. ಉದ್ದವಾಗಿದ್ದು ಉತ್ತರದಿಂದ ದಕ್ಷಿಣಭಾಗದ ಮಧ್ಯಭಾಗಕ್ಕೆ ಇಳಿಮುಖವಾಗಿದ್ದು ಮತ್ತೆ ಇದೇ ಇಳಿಮುಖವನ್ನು ಪುನಃ ದಕ್ಷಿಣ ಭಾಗಕ್ಕೆ ಕಾಣಲಾಗುವುದು. ತುಂಬಾ ಅಗಲ ಮತ್ತು ಎತ್ತರವಾದ ಗೋಡೆಗಳ ರಚನೆಯಿದ್ದು ಗಾರೆಯನ್ನು ಬಳಸಿ ಭದ್ರಪಡಿಸಲಾಗಿದೆ. ಕೋಟೆಯ ಬಾಗಿಲುಗಳನ್ನು ಪತ್ತೆ ಹಚ್ಚಿ ಮೊದಲ ಐದು ಬಾಗಿಲುಗಳನ್ನು ದಾಟಿ ಒಳಬರುವುದು ಕಠಿಣತರ ಕೆಲಸವೇ ಸರಿ. ಬೆಟ್ಟದ ಮೇಲಿನ ಕೋಟೆಗೆ ಆನೆಗಳಾಗಲಿ ಕುದುರೆ ಮತ್ತು ಶಸ್ತ್ರಗಳನ್ನು ತೆಗೆದುಕೊಂಡು ಹೋಗಲು ಸಶಕ್ತವಾದ ಸೈನ್ಯವಿರಲೇಬೇಕಾಗುವುದು. ಮೂರನೆಯದಾಗಿ ಕೋಟೆಯ ಒಳಗಡೆ ನೀರಿನ ಸೌಲಭ್ಯವಿದ್ದುದರ ಗುರುತುಗಳು ಕಂಡು ಬರುತ್ತವೆ. ಮತ್ತು ಪೂರ್ವದ ಬಾಗಿಲು ಆಕ್ರಮಿಸಲ್ಪಟ್ಟರೂ ಪಶ್ಚಿಮದ ಹರಿಹರದ ಬಾಗಿಲಿನಿಂದ ಹೊರಬರುವ ಸೌಲಭ್ಯ ವಿರುವುದು ಕಾಣಬಹುದಾಗಿದೆ. ಎರಡನೆಯ ಪ್ರಶ್ನೆಯನ್ನು ಗಮನಿಸಿದರೆ - ಉಚ್ಚಂಗಿ ದುರ್ಗ ಒಂದು ಪಟ್ಟಣವಾಗಿದ್ದು ವಿಶಾಲ ಪ್ರದೇಶಗಳನ್ನು ಒಳಗೊಂಡಿತ್ತು; ನೊಳಂಬವಾಡಿ ಮುವತ್ತೆರಡು ಸಾವಿರವನ್ನು ವೆಂಗಿ ಮಂಡಳೇಶ್ವರ ವಿಷ್ಣುವರ್ಧನ ವಿನಯಾದಿತ್ಯದೇವನು ಆಳುವಾಗ ಉಚ್ಚಂಗಿ ದುರ್ಗ ಪ್ರಮುಖ ಕೇಂದ್ರವಾಗಿದ್ದಿರಬೇಕು; ಆಗ ಉಚ್ಚಂಗಿ ಮುವತ್ತನ್ನು ದೇವಪಯ್ಯ ಆಳುತ್ತಿದ್ದ. ಮುವತ್ತು ಗ್ರಾಮಗಳಿಗೆ ಉಚ್ಚಂಗಿ ಕೇಂದ್ರವಾಗಿರ ಬಹುದು. ಮತ್ತು ಅದು ನೊಳಂಬವಾಡಿ ಮುವತ್ತೆರಡು ಸಾವಿರಕ್ಕೆ ಪಾಂಡ್ಯರ ಕಾಲದಲ್ಲಿ ರಾಜಧಾನಿಯಾಗಿತ್ತು; ಮತ್ತು ದಕ್ಷಿಣದಿಂದ ಗಂಗ, ಹೊಯ್ಸಳರಿಗೆ, ಉತ್ತರದಿಂದ ರಾಷ್ಟ್ರಕೂಟ, ಚಾಳುಕ್ಯರಿಗೆ ಗಡಿಭಾಗವಾಗಿರಲಿಕ್ಕೂ ಸಾಧ್ಯತೆಯಿರುವುದರಿಂದ ಉಚ್ಚಂಗಿ ಕೋಟೆಯನ್ನು ಗೆಲ್ಲುವುದು. ಒಂದು ಪ್ರತಿಷ್ಠೆಯ ವಿಷಯವಾಗಿದ್ದುದಲ್ಲದೆ ಮಹತ್ವದ ಭಾಗವೂ ಆಗಿತ್ತು, ಎಂದೆಲ್ಲ ಹೇಳಬಹುದು.

ಪಾಳೇಗಾರರ ಅವಧಿಯಲ್ಲಿ ಈ ಕೋಟೆಯ ಪ್ರಮುಖ ವಾದ ದುರಸ್ತಿ ಕಾರ್ಯ ನಡೆದಿರುವುದು ಕಂಡುಬರುತ್ತದೆ. ಟಿಪ್ಪುವಿನ ನಂತರ ಬ್ರಿಟಿಷರ ಆಡಳಿತದಲ್ಲಿ ಬಳ್ಳಾರಿ ಜಿಲ್ಲೆ ಯಲ್ಲಿಯೇ, ಸೇರಿದ್ದು. ಇದು ಈಗ ಚಿತ್ರದುರ್ಗ - ದಾವಣಗೇರಿ ಜಿಲ್ಲೆಗಳ ಗಡಿ ಪ್ರದೇಶವಾಗಿದೆ. ಉಚ್ಚಂಗಿ ದುರ್ಗವು ನೂತನ ದಾವಣಗೇರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನಲ್ಲಿದ್ದು, ದಾವಣಗೇರಿ ಹರಪನಹಳ್ಳಿಗಳ ಮಧ್ಯೆ ಸಮನಾಂತರ ೨೬. ಕಿ.ಮೀ. ದೂರದಲ್ಲಿದೆ.

## ಆಧಾರ ಸೂಚಿ ಮತ್ತು ಅಡಿಟಿಪ್ಪಣಿಗಳು

*೧. ಡಾ॥ ಸಿ.ಎಸ್. ಪಾಟೀಲ, ಇತಿಹಾಸ ದರ್ಶನ, ಸಂ. ೧೦/೧೯೯೫, ಪುಟ ೧೫೯
*೨. ಅದೇ
*೩. ಹಾಲಮ್ಮನ ಗುಡಿ ಮುಂದಿರುವ ಶಾಸನ
*೪. ಚಿಕ್ಕಹೊಂಡದ ಆವರಣದಲ್ಲಿರುವ ಶಾಸನ
*೫. ಎ.ಕ. ಸಂ. ii ಶ್ರವಣಬೆಳಗೊಳ ೫೯, ಎಂ.ಎ.ಆರ್. ೧೯೧೦-೧೧, ಪುಟ ೨೨
*೬. ವೈಡ್. ರಿ. ಡಾಕ್ಯುಮೆಂಟ್ ನಂ. ೯೨, ದಿ. ೧೪-೨-೭೬
*೭. ಶ್ರೀಮತಿ ಬಳ್ಳಾರಿ ನೀಲಮ್ಮ, ಹಚ್. ಕೆ. ಎಲ್.
*೮. ದಿಕ್ಸೂಚಿ ೧೯೯೪
*೯. ಬಿ. ಷೇಕ್ ಅಲಿ., ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್, ಪು. ೧೪೨
*೧೦. ಉಚ್ಚಂಗಿ ದುರ್ಗದ ಬಡಗಿಮಟ್ಟೆ ಶಾಸನ
*೧೧. ಎಸ್.ಐ.ಐ, ಸಂ. ix ಭಾಗ ೧, ನಂ. ೧೨೬

ಕು. ಸುಜಾತಾ ಮಲ್ಲನಗೌಡ *

# ರಾಯಚೂರು ಕೋಟೆಯಲ್ಲಿನ ಕೊತ್ತಳಗಳು

## ಐತಿಹಾಸಿಕ ಹಿನ್ನೆಲೆ

ಮಾನವನ ನಾಗರಿಕತೆಯೊಂದಿಗೆ ಹುಟ್ಟಿ ಬೆಳೆದುಕೊಂಡು ಬಂದ ಕೋಟೆ ಕೊತ್ತಳಗಳ ಇತಿಹಾಸವು ತುಂಬಾ ಪ್ರಾಚೀನತಮವಾದದ್ದು ಹಾಗೂ ಮಹತ್ವದ್ದು. ಭಾರತದ ಪ್ರಾಚೀನತಮವೆನಿಸಿದ ವೇದ ಸಾಹಿತ್ಯದಲ್ಲಿಯೂ, ಕೌಟಿಲ್ಯನ ಅರ್ಥಶಾಸ್ತ್ರವನ್ನು ಒಳಗೊಂಡಂತೆ ಅನೇಕ ಗ್ರಂಥಗಳಲ್ಲಿ ಇವುಗಳ ಉಲ್ಲೇಖಗಳಿವೆ. ಕರ್ನಾಟಕದ ಕೋಟೆ ಕೊತ್ತಲಗಳ ಇತಿಹಾಸವೂ ಈ ದಿಸೆಯಲ್ಲಿ ಹಿಂದೆ ಬಿದ್ದಿಲ್ಲ. ಈ ಹಿನ್ನೆಲೆಯಲ್ಲಿ ರಾಯಚೂರು ಪಟ್ಟಣದಲ್ಲಿ ಎದ್ದು ನಿಂತಿರುವ ಬಲಿಷ್ಠವಾದ ಕೋಟೆಯಲ್ಲಿನ ಕೊತ್ತಳಗಳ ಬಗ್ಗೆ ಅಲ್ಪ ಮಾಹಿತಿಯನ್ನು ಇಲ್ಲಿ ಮಂಡಿಸಲಾಗಿದೆ.

## ಉದ್ದೇಶ

ಇಲ್ಲಿ ಕೊತ್ತಳಗಳನ್ನು ಉರ್ದುವಿನಲ್ಲಿ "ಬುರುಜು" ಅಂತ ಕರೆಯಲಾಗುತ್ತದೆ. ಈ ಕೊತ್ತಳಗಳನ್ನು ಯಾವಾಗಲೂ ಕೋಟೆ ಜೊತೆ ಕೂಡಿಸಿ ಕರೆಯಲಾಗುತ್ತದೆ. ಅಂದರೆ ಕೋಟೆ- ಕೊತ್ತಳ ಅಂತನೇ ಸಾಮಾನ್ಯವಾಗಿ ಕರೆಯುತ್ತಾರೆ. ಕಾರಣ ಈ ಕೋಟೆಯ ಸಂರಕ್ಷಣೆಯಲ್ಲಿ ಕೊತ್ತಳಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ಕೊತ್ತಳಗಳು ಕೋಟೆ-ಗೋಡೆಗೆ ಆಸರೆಯನ್ನು ಒದಗಿಸುತ್ತವೆ. ಯುದ್ಧ ಸಂದರ್ಭದಲ್ಲಿ ಸೈನಿಕರು ಇವುಗಳ ಮೇಲೆ ನಿಂತು ಕಾದಾಡಿ ತಮ್ಮ ಕೋಟೆಯನ್ನು ರಕ್ಷಿಸಿಕೊಳ್ಳುತ್ತಿದ್ದರು. ಅಲ್ಲದೇ ಈ ಕೊತ್ತಳಗಳಲ್ಲಿ ತೋಪುಗಳನ್ನು ಇಟ್ಟು ಶತ್ರು ಪಡೆಯನ್ನು ನಾಶಪಡಿಸಲಾಗುತ್ತಿತ್ತು. ಕೆಲವು ಕೊತ್ತಳಗಳಿಗೆ ಅಲಂಕಾರಿಕ ಕೆತ್ತನೆ ಮಾಡಲಾಗಿದೆ. ಅಂದರೆ ಈ ಕೊತ್ತಳಗಳ ಮೇಲ್ಭಾಗದಲ್ಲಿ ಮುಂಚಾಚಿದ ಕಿಡಿಕಿಗಳನ್ನು ಮಾಡಲಾಗಿದ್ದು, ಅಲ್ಲದೆ ಬೋಧನೆಗಳ ಮೇಲೆ ಆನೆ, ಸಿಂಹ, ಕುದುರೆ, ವ್ಯಕ್ತಿಶಿಲ್ಪಗಳ ಕೆತ್ತನೆ ಕಂಡುಬರುತ್ತದೆ. ಇಲ್ಲಿ ಮುಂಚಾಚಿದ ಕಿಡಿಕಿಗಳ ನೆರವಿನಿಂದ ತೋಪುಗಳನ್ನು ಇಟ್ಟು ನಮಗೆ ಯಾವ ದಿಕ್ಕಿಗೆ ಬೇಕು ಆ ದಿಕ್ಕಿಗೆ ಹೊರಳಿಸಿ ಶತ್ರು ಪಡೆಯನ್ನು ನಾಶಪಡಿಸಬಹುದು. ಅಲ್ಲದೆ ಶತ್ರು ಆಕಸ್ಮಿಕ ಕೊತ್ತಳದ ಪೂರ್ಣ ಹತ್ತಿರಕ್ಕೆ ಇದ್ದರೂ ಈ ಕಿಡಿಕಿಗಳ ಸಹಾಯದಿಂದ ಸ್ಥಳದಲ್ಲಿಯೇ ಶತ್ರು ಸೈನ್ಯ ಮೇಲೆ ಆಕ್ರಮಣ ಮಾಡಲು ಸುಲಭವಾಗುತ್ತಿತ್ತು.

## ಪ್ರಕಾರಗಳು

ಕೊತ್ತಳಗಳಲ್ಲಿ ವೃತ್ತಾಕಾರ, ಅರ್ಧವೃತ್ತಾಕಾರ ಹಾಗೂ ಚೌಕಾಕಾರದ ಕೊತ್ತಳಗಳು ಇವೆ. ರಾಯಚೂರಿನ ಕೋಟೆಯಲ್ಲಿ ನಾವು ಚೌಕಾಕಾರ ಹಾಗೂ ವೃತ್ತಾಕಾರ ಅರ್ಧವೃತ್ತಾಕಾರದ ಕೊತ್ತಳಗಳನ್ನು ನೋಡಬಹುದಾಗಿದೆ. ಒಳಕೋಟೆಯಲ್ಲಿ ೨೧ ಕೊತ್ತಳಗಳು ಹೊರಕೋಟೆಯಲ್ಲಿ ೫೩ ಕೊತ್ತಳಗಳನ್ನು ಕಾಣ ಬಹುದಾಗಿದೆ.

## ಶಾಸನಗಳಲ್ಲಿ ಉಲ್ಲೇಖಗೊಂಡ ಕೆಲವು ಕೊತ್ತಳಗಳು

ಫತೇ ಬುರುಜು : ಕ್ರಿ. ಶ. ೧೫೩೫ರಲ್ಲಿ ಬಹುಮನಿಯ ಇಸ್ಮಾಯಿಲ್ ಅದಿಲ್‌ಖಾನನ ನೇತೃತ್ವದಲ್ಲಿ ಅವನ ಅಧಿಕಾರಿಯಾದ



* ಆಶ್ರಯ: ಬಿ. ಹಂಪನಗೌಡ, ಮಾಜಿ ಶಾಸಕರು, ಸಿಂಧನೂರು, ರಾಯಚೂರು ಜಿಲ್ಲೆ

ಮಲಿಕ್-ಮುಕರಮನು ನಿರ್ಮಿಸಿದನು. ಪುನಃ ಕ್ರಿ.ಶ. ೧೬೫೦ರಲ್ಲಿ ದುರಸ್ತಿ ಮಾಡಲಾಯಿತು. ಇದು ನವರಂಗ ದರವಾಜದ ಕೋಟೆ-ಗೋಡೆ ಉತ್ತರ ಭಾಗಕ್ಕೆ ಇದೆ.

**ತಾಲೀಮ ಬುರುಜು:** ಕ್ರಿ. ಶ. ೧೫೩೨ರಲ್ಲಿ ಅಹಮದ್ ಹಾಜಿ ಎಂಬ ಅಧಿಕಾರಿ ನೇತೃತ್ವದಲ್ಲಿ ನಿರ್ಮಿತಗೊಂಡ ಈ ಬುರುಜು ಸದ್ಯದ ಪರಿಸ್ಥಿತಿಯಲ್ಲಿ ಕಂಡುಬರುವುದಿಲ್ಲ. ಕಂದಕ ದರವಾಜದ ಹತ್ತಿರದಲ್ಲೇ ಈ ಬುರುಜು ಇತ್ತು.

**ರಕ್ಷಿ ಬುರುಜು :** ಕ್ರಿ. ಶ. ೧೫೩೪ರಲ್ಲಿ ಎರಡನೇ ಆದಿಲ್‌ಶಾನ ಕಾಲದಲ್ಲಿ ನಿರ್ಮಾಣವಾದ ಈ ಬುರುಜಿನ ಒಳಭಾಗ ಬಿದ್ದು ಹೋಗಿದ್ದು, ಹೊರಭಾಗ ಉಳಿದಿದೆ. ಕೋಟೆ ದರವಾಜದ ಎದುರಿನ ಗಲ್ಲಿಯಲ್ಲಿದೆ.

**ಶಾತು ಬುರುಜು :** ಕ್ರಿ. ಶ. ೧೫೫೭ರಲ್ಲಿ ೨ನೇ ಅದಿಲ್‌ಶಾನ ಕಾಲದಲ್ಲಿ ಇಕ್ಲಾಸ್‌ಖಾನ ಎಂಬ ಅಮೀರನು ನಿರ್ಮಿಸಿದ. ಈ ಬುರುಜು ಇಂದು ನಾಶಗೊಂಡಿದೆ.

**ಬಂಡಾ ಜೋಲಿ ಬುರುಜು :** ಕ್ರಿ. ಶ. ೧೫೬೯ರಲ್ಲಿ ಎರಡನೇ ಅದಿಲ್‌ಶಾನ ಕಾಲದಲ್ಲಿ ಬುನಾದಿ ಹಾಕಿ ಯುಸುಫಲಿ ಖಿಂದಿಲಿದಾರ್ ಕಾಲದಲ್ಲಿ ಪೂರ್ಣಗೊಂಡಿತು. ಈ ಬುರುಜು ಪಿರಕೋಟೆ ದರವಾಜ ಹಾಗೂ ದಿಡ್ಡದರವಾಜದ ಮಧ್ಯಭಾಗದಲ್ಲಿ ಇದೆ.

**ಅಲಿ ಬುರುಜು :** ಕ್ರಿ. ಶ. ೧೫೬೯ರಲ್ಲಿ ಕಾವಾಸಖಾನ್ ಎಂಬ ಅಧಿಕಾರಿಯು ಇಬ್ರಾಹಿಂ ಅದಿಲ್‌ಷಾ ಕಾಲದಲ್ಲಿ ನಿರ್ಮಿಸಿದ. ಈ ಕೊತ್ತಳ ನಿರ್ಮಾಣ ಮಾಡಲು ೬ ತಿಂಗಳು ಹಿಡಿದವು ಎಂದು ಶಾಸನದಲ್ಲಿ ಉಲ್ಲೇಖ ಮಾಡಲಾಗಿದೆ. ಈಗ ಇದು ಟ್ಯಾಗೋರ ಕಾಲೇಜಿನ ಹಿಂಭಾಗದಲ್ಲಿದೆ.

**ಬಾದಷಾಯಾ ಬುರುಜು :** ಕ್ರಿ. ಶ. ೧೫೯೭ರಲ್ಲಿ ಮಲ್ಲಿಕ್ ರೈಹಾನ್ ಎಂಬುವವನು ನಿರ್ಮಿಸಿದ. ಇಂದು ಬಸ್‌ಸ್ಟ್ಯಾಂಡಿನ ಬಲ ಪಶ್ಚಿಮಕ್ಕಿರುವ ಈ ಬುರುಜಿಗೆ ಉದಾಹರಣೆಯಾಗಿ ನೋಡಲು ಇನ್ನೊಂದು ಬುರುಜು ಇಲ್ಲ. ಕಾರಣ ಅಷ್ಟೊಂದು ಸುಂದರವು ಆಕರ್ಷಕವೂ ಅಲ್ಲದೆ ಬಲಿಷ್ಠವಾಗಿದೆ ಎಂದು ಇಲ್ಲಿನ ಶಾಸನವು ಉಲ್ಲೇಖ ಮಾಡಿದೆ.

**ನಿಯಬತ್ ಬುರುಜನ್ನು** ಕ್ರಿ. ಶ. ೧೫೯೭ರಲ್ಲಿ ನಿರ್ಮಾಣ ಮಾಡಲಾಯಿತು. ಈ ಬುರುಜಿನ ಶಾಸನವು ಗುಲಬರ್ಗಾದ ಪಬ್ಲಿಕ್ ಗಾರ್ಡನ್‌ನಲ್ಲಿದೆ. ಇದು ದಿಡ್ಡಿದರವಾಜದ ಪಕ್ಕದಲ್ಲಿದೆ.

**ಖಾದರಿಯಾ ಬುರುಜು :** ಈ ಬುರುಜು ಇಬ್ರಾಹಿಂ ಆದಿಲ್‌ಶಾಹನ ಕಾಲದಲ್ಲಿ ಪ್ರಾರಂಭವಾಗಿ ಮಹಮ್ಮದ್ ಆದಿಲ್‌ಶಾನ ಕಾಲದಲ್ಲಿ ಮುಕ್ತಾಯಗೊಂಡಿತು. ಇಲ್ಲಿನ ಶಾಸನವು ಉಲ್ಲೇಖಿಸುವಂತೆ ಈ ಕೊತ್ತಳ ನಿರ್ಮಾಣಕ್ಕೆ ೧೧ ವರ್ಷಗಳು ಹಿಡಿದವು. ಕ್ರಿ. ಶ. ೧೬೨೯-೩೦ರಲ್ಲಿ ಪೂರ್ಣಗೊಂಡಿತೆಂದು ಶಾಸನವು ತಿಳಿಸಿದೆ. ಈ ಬುರುಜು ಇಂದು ಕಾಯಿಪಲ್ಲೆ ಮಾರ್ಕೆಟಿನ ಹಿಂಬದಿಯಲ್ಲಿ ಕಂಡು ಬರುತ್ತದೆ.

**ಖುಸ್ರು ಬುರುಜು :** ಕ್ರಿ. ಶ. ೧೬೬೦ರಲ್ಲಿ ಅಂದಿನ ಕಿಲ್ಲೇದುರಸಾಗಿದ್ದ ಖುಸ್ರು ಎಂಬ ಅಧಿಕಾರಿಯು ನಿರ್ಮಿಸಿದ ಈ ಬುರುಜು ಸಹ ಸದ್ಯದ ಪರಿಸ್ಥಿತಿಯಲ್ಲಿ ಕಂಡುಬರುತ್ತಿಲ್ಲ. ಕಾರಣ ಈ ಬುರುಜನ್ನು ನಾಶಪಡಿಸಿ ಒಂದು ದೊಡ್ಡ ಕಾಂಪ್ಲೆಕ್ಸ್ ಕಟ್ಟಿಸಲಾಗಿದೆ. ಈ ಬುರುಜನ್ನು ಸ್ಥಳೀಕರು ಪೇಟ್ಲಾ ಬುರುಜು ಅಂತಲೂ ಕರೆಯುತ್ತಿದ್ದರು. ಇದರ ವ್ಯಾಸ ೨೬೦ ಅಡಿ, ಅಗಲ ೯೦ ಅಡಿ, ಎತ್ತರ ೫೦ ಅಡಿ ಇತ್ತು, ಇದು ಕಾಟೇದರವಾಜದ ಎದುರಿಗೆ ಇತ್ತು.

**ಬಸವನ ಕೋಟಾ ಬುರುಜು :** ಕ್ರಿ. ಶ. ೧೬೪೩ರಲ್ಲಿ ನವಾಬ ಸಾದುಲ್ಲಾಖಾನ್ ಕಾಲದಲ್ಲಿ ಮುಜಾಫರ್‌ಜಂಗನ ನೇತೃತ್ವದಲ್ಲಿ ನಿರ್ಮಾಣವಾದ ಈ ಬುರುಜು ಕಾಟೇದರವಾಜದ ಎದುರಿಗಿನ ಇಂದಿನ ಉಮರನಗರದಲ್ಲಿದೆ.

**ತಾಹೀರಖಾನ್ ನಕಟಾ ಬುರುಜುವಿನ** ನಿರ್ಮಾಣ ಮಾಡಿದ ಕಾಲ ಗೊತ್ತಾಗಿಲ್ಲ. ಸ್ಥಳೀಕರು ಈ ಹೆಸರಿನಿಂದ ಈಗಲೂ ಕರೆಯುತ್ತಾರೆ. ಇದು ನವರಂಗ ದರವಾಜದ ಉತ್ತರ ಕೋಟೆ ಗೋಡೆಯಲ್ಲಿದೆ.

## ಉಪಸಂಹಾರ

ಮೇಲಿನ ಎಲ್ಲಾ ಸಂಗತಿಗಳನ್ನು ಗಮನಿಸಿದಾಗ ಕೋಟೆಯಷ್ಟೇ ಪ್ರಮುಖವಾಗಿರುವ ಕೊತ್ತಲಗಳು ರಕ್ಷಣಾ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಕೋಟೆ ಬಿಟ್ಟು ಕೊತ್ತಳ ಇಲ್ಲ. ಕೊತ್ತಳ ಬಿಟ್ಟು ಕೋಟೆಯಿಲ್ಲ. ಆದ್ದರಿಂದ ಯಾವಾಗಲೂ ಕೋಟೆ ಕೊತ್ತಳಗಳನ್ನು ಜೊತೆ ಜೊತೆಯಾಗಿ ಕೇಳುತ್ತೇವೆ, ಕರೆಯುತ್ತೇವೆ. ಕೆಲವೊಂದು ಕೊತ್ತಳಗಳು ಬಹಳ ಸುಂದರ ಕೆತ್ತನೆಗಳಿಂದ ತುಂಬಾ ಆಕರ್ಷಕವಾಗಿ ಕಂಡು ಬರುತ್ತವೆ. ಈ ಕೊತ್ತಳಗಳನ್ನು ಉಲ್ಲೇಖಿಸುವಲ್ಲಿ ಶಾಸನಗಳ ಆಧಾರವು ಮಹತ್ವದ್ದಾಗಿದ್ದು ಒಂದು ವಿಶೇಷ ಸಂಗತಿ ಎನಿಸಿದೆ. ಇನ್ನು ಹೆಚ್ಚಿನ ಶಾಸನಗಳ ಅಧ್ಯಯನ ನಡೆಸಿದಲ್ಲಿ ಮೇಲ್ಕಾತಿ ಕೊತ್ತಳಗಳ ಇತಿಹಾಸ ಬರಬಹುದು. ಆದರೆ ಇಂತ ಕೋಟೆ ಕೊತ್ತಳಗಳನ್ನು ರಕ್ಷಿಸುವಲ್ಲಿ ಪ್ರಜೆಗಳಷ್ಟೇ ಅಲ್ಲ, ಸಂಬಂಧ ಪಟ್ಟವರೆಲ್ಲ ಸೂಕ್ತ ಗಮನ ಕೊಡಬೇಕಾದುದು ಅತ್ಯಗತ್ಯ.

## ಆಧಾರ ಗ್ರಂಥಗಳು


೧.) ಬಷಿರುದ್ದೀನ್ ಅಹಮದ್ : ವಾಕಿಯಿತ್-ಎ ಮುಮಲಿಕತ್ ಎ-ತಾರೀಕೆ, ಬಿಜಾಪುರ

೨) ರಾಯಚೂರು ಗೆಜಿಟಿಯರ್


೩.) ಈ ಮೇಲಿನ ಪುಸ್ತಕಗಳಿಂದ ಹಾಗೂ ನಾನು ಕ್ಷೇತ್ರ ಕಾರ್ಯ ಕೈಗೊಂಡು ಕೆಲವು ಕೊತ್ತಳಗಳನ್ನು ಗುರುತಿಸುವಲ್ಲಿ ರಾಯಚೂರಿನ ಕೆಲವು ನಾಗರಿಕರು ನನಗೆ ಸಹಕರಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.

ಆರ್. ಎಚ್. ಕುಲಕರ್ಣಿ *

# ಬನವಾಸಿಯಲ್ಲಿ ಇತ್ತೀಚಿಗೆ ದೊರೆತ ಎರಡು ಅಪೂರ್ವ ಶಿಲ್ಪಗಳು

ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಕಲೆಯು ಬೆಳವಣಿಗೆ ಯನ್ನು ಕ್ರಿಸ್ತಶಕದ ಪ್ರಾರಂಭದ ಕಾಲದಿಂದ ಗುರುತಿಸಬಹುದು. ಇದುವರೆಗೂ ನಡೆದ ಪುರಾತತ್ವ ಉತ್ಖನನಗಳಿಂದ ದೊರೆತಿರುವ ಶಿಲ್ಪಗಳಿಂದ ಮತ್ತು ಶಾಸನಗಳಲ್ಲಿನ ಉಲ್ಲೇಖಗಳಿಂದ ಇದು ಸ್ಪಷ್ಟವಾಗುತ್ತದೆ. ಪ್ರಾಚೀನ ಕಾಲದ ಶಿಲ್ಪಗಳು ಉತ್ಖನನಗಳಿಂದ ಅಲ್ಲದೆ ಬಿಡಿ ಬಿಡಿಯಾಗಿ ಅಲ್ಲಲ್ಲಿ ಈಗಲೂ ದೊರೆಯುತ್ತಿವೆ.

ಪ್ರಾಚೀನ ಕರ್ನಾಟಕದಲ್ಲಿ ಸನ್ನತಿ ಮತ್ತು ಬನವಾಸಿಗಳು ಕಲಾ ಚಟುವಟಿಕೆಗಳ ಪ್ರಮುಖ ಕೇಂದ್ರಸ್ಥಳಗಳಾಗಿದ್ದುದು ಅಲ್ಲಿ ಇದುವರೆಗೂ ದೊರೆತ ಶಿಲ್ಪಗಳಿಂದ, ಸುಡಾವೆಮಣ್ಣಿನ ಗೊಂಬೆ ಗಳಿಂದ ಮತ್ತು ವಾಸ್ತುಕಲೆಯ ಅವಶೇಷಗಳಿಂದ ಸ್ಪಷ್ಟವಾಗಿದೆ. ಬನವಾಸಿ ಪರಿಸರದಲ್ಲಿ ಮತ್ತು ಬನವಾಸಿಯಲ್ಲೇ ಆ ಕಾಲಕ್ಕೆ ಸೇರಿಸಬಹುದಾದ ಶಿಲ್ಪಗಳೂ ಈಗಲೂ ಬಿಡಿಬಿಡಿಯಾಗಿ ಆಗಾಗ ದೊರೆಯುತ್ತಿವೆ. ಪ್ರಸ್ತುತ ಲೇಖನದಲ್ಲಿ ಅಂತಹವೇ ಆದ ಎರಡು ಶಿಲ್ಪಗಳ ಬಗ್ಗೆ ಚರ್ಚಿಸಲಾಗಿದೆ.

ಚರ್ಚಿಸಲಿರುವ ಶಿಲ್ಪಗಳು; ನಾಗಪ್ರತಿಮೆ ಮತ್ತು ಅಪೂರ್ಣವಾಗಿ ಕೆತ್ತಿದ ದ್ವಿಬಾಹು ಪುರುಷ ವಿಗ್ರಹಗಳು. ಎರಡೂ ಶಿಲ್ಪಗಳನ್ನು ಕಳೆದ ೧೯೯೬ರ ಡಿಸೆಂಬರ್ ತಿಂಗಳಲ್ಲಿ ಬನವಾಸಿ ಯಲ್ಲಿ ಶೋಧಿಸಿದೆ.*೧ ನಾಗಪ್ರತಿಮೆ ಮತ್ತು ಪುರುಷವಿಗ್ರಹ ಎರಡೂ ಶಿಲ್ಪಗಳೂ ಶೈಲಿಯ ಮತ್ತು ಕಾಲದ ದೃಷ್ಟಿಯಿಂದ ಗಮನಾರ್ಹವಾದ ಶಿಲ್ಪಗಳಾಗಿವೆ. ಮೊದಲನೆಯದು ಚುಟು ಸಾತಕರ್ಣಿಗಳ ಕಾಲಕ್ಕೆ ಸೇರಿದರೆ, ಎರಡನೆಯ ಶಿಲ್ಪ ಆದಿ ಕದಂಬರ ಕಾಲಕ್ಕೆ ಸೇರುತ್ತದೆ. ಬನವಾಸಿಯಲ್ಲಿ ಇದುವರೆಗೂ ಆ ಕಾಲಗಳಿಗೆ ಸೇರಿದ ಹಲವಾರು ಶಿಲ್ಪಗಳು ದೊರೆತಿವೆ. ಉದಾಹರಣೆಗೆ, ಶಾಸನ ಸಹಿತ ನಾಗಪ್ರತಿಮ, ಹಾರೀತ (ತಾಯಿ-ಮಗು) ಯಕ್ಷ ವಿಷ್ಣು, ಸ್ಕಂದ ಇತ್ಯಾದಿ, ಪ್ರಸ್ತುತವಾಗಿ ಶೋಧಿಸಿದ ಶಿಲ್ಪವೂ ಈಗ ಇರುವ ಶಿಲ್ಪಗಳ ಗುಂಪಿಗೆ ಸೇರುತ್ತವೆ.

ನಾಗಪ್ರತಿಮ ಶಿಲ್ಪ : ಬನವಾಸಿಯಲ್ಲಿ ನಮಗೆ ಇದುವರೆಗೆ ಒಂದೇ ನಾಗಶಿಲ್ಪ ಇದ್ದ ಬಗ್ಗೆ ತಿಳಿದಿತ್ತು. ಆದರೆ ಈಗ ನಾವು ಶೋಧಿಸಿರುವ ಪ್ರಸ್ತುತ ಶಿಲ್ಪ ಎರಡನೆಯ ಉದಾಹರಣೆ ಯಾಗುತ್ತದೆ. ಈ ಶಿಲ್ಪ ಬನವಾಸಿಯಿಂದ 'ಭಾಸಿ'ಗೆ ಹೋಗುವ ರಸ್ತೆಯಲ್ಲಿನ ಸೇತುವೆಗೆ ಹೊಂದಿಕೊಂಡಂತೆ ಇರುವ 'ಹೊಸ ಮಠಕ್ಕೆ' ಸೇರಿದ ಜಮೀನಿನಲ್ಲಿ ಇದೆ. ಸುಮಾರು ೧೧೫ ಸೆಂ. ಮೀ.



ಎತ್ತರ ೮೫ ಸೆಂ. ಮೀ. ಅಗಲ ಮತ್ತು ೧೦ ಸೆಂ. ಮೀ. ದಪ್ಪ ಇರುವ ಈ ಶಿಲ್ಪ ಅಗಲವಾದ ಹಾಸುಗಲ್ಲಿನ ಮೇಲೆ ಕೆತ್ತಲ್ಪಟ್ಟಿದೆ.

ಶಿಲ್ಪದಲ್ಲಿ ನಾಗವು ಒಂದೇ ಇದ್ದು ತನ್ನ ಮೈಯನ್ನು ನಾಲ್ಕು ಸುರುಳಿಗಳನ್ನಾಗಿ ಸುತ್ತಿ ಬಾಲವನ್ನು ತನ್ನ ಬಲಗಡೆಗೆ-ಕೆಳಬದಿಯಲ್ಲಿನ ಸುರುಳಿಗೆ ಹೊಂದಿಕೊಂಡಂತೆ ಮಡಿಚಿದೆ. ತಲೆಯ ಭಾಗಗಳು ಒಡೆದು ಹೋಗಿವೆ. ಆದರೆ-ಬಲಭಾಗದ ಕೆಳಗಿನ ಹೆಡೆಯ ಭಾಗವು ಮಾತ್ರ ಕಾಣುತ್ತದೆ. ಇದನ್ನು

* ಯು.ಜಿ.ಸಿ. ಕಿರಿಯ ಸಂಶೋಧನ ವಿದ್ಯಾರ್ಥಿ, ಪ್ರಾ.ಇ. ಮತ್ತು ಪು. ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

ಗಮನಿಸಿದರೆ ನಾಗಶಿಲ್ಪವು ಐದು ಹೆಡೆಗಳನ್ನುಳ್ಳ ಶಿಲ್ಪವೆಂದು ಸ್ಪಷ್ಟವಾಗುತ್ತದೆ. ಕಂಠದಲ್ಲಿ ಮಣಿಹಾರವನ್ನು ಸೂಚಿಸುವ ಅರ್ಧ ಕೆತ್ತಿದ ರೇಖಾ ಹಾರವಿದೆ. ಇದನ್ನು, ಕೇವಲ ರೇಖೆಗಳಿಂದ ತೋರಿಸಿದ್ದಾರೆ. ಪ್ರಸ್ತುತ ಶಿಲ್ಪವನ್ನು ಗಮನಿಸಿದಾಗ, ಇದನ್ನು ಕೆತ್ತಿದ ರೀತಿ ಹೆಡೆಯ ನೈಜತೆ ಅಲ್ಲದೇ ದೇಹದ ಸುರುಳಿಗಳ ಪ್ರಮಾಣಬದ್ಧ ಅಳತೆ ಎಲ್ಲವೂ ನೋಡುಗನನ್ನು ಆಕರ್ಷಿಸುತ್ತವೆ.

ಪ್ರಸ್ತುತ ನಾಗಪ್ರತಿಮವನ್ನು - ಬನವಾಸಿಯಲ್ಲಿ ಈ ಮೊದಲೇ ದೊರೆತಿರುವ ಚುಟು ಶಿವಸ್ಕಂದನಾಗಶ್ರೀಯ*೨ ದಾನಶಾಸನ ಇರುವ ನಾಗಪ್ರತಿಮೆಗೆ ಹೋಲಿಸಬಹುದು. ದೇಹದ ಸುರುಳಿಗಳು, ಬಾಲವನ್ನು ಬಲಕ್ಕೆ ಮಡಿಸಿರುವ ರೀತಿ, ಮೇಲಿನ ಹೆಡೆಗೆ ಮತ್ತು ದೇಹದ ಸುರುಳಿಗೆ ಇರುವ ಅಂತರ, ಕಂಠಕ್ಕೆ ಹಾಕಿರುವ ಮಣಿಹಾರ ಮತ್ತು ಅದನ್ನು ಕಟ್ಟಿದ ರೀತಿ, ಎರಡರಲ್ಲೂ ಒಂದೇ ರೀತಿ ಇದೆ. ಆದರೆ ಶೈಲಿಯಲ್ಲಿ ಎರಡೂ ಶಿಲ್ಪಗಳು ಕೊಂಚ ಬೇರೆ ಬೇರೆ ಎನಿಸುತ್ತವೆ. ಪ್ರಸ್ತುತ ಶಿಲ್ಪದ ದೇಹವು ಶಾಸನ ಸಹಿತ ಶಿಲ್ಪದ ಹಾಗೆ ನೀಳವಾಗಿರದೆ ದಪ್ಪವಾಗಿ, ಅಗಲವಾಗಿ ಮೈಯನ್ನು ಹರಡಿಕೊಂಡಂತೆ ಇದೆ. ಹೊಸದಾಗಿ ಶೋಧಿಸಿದ ನಾಗಶಿಲ್ಪವನ್ನು ಶೈಲಿಯಲ್ಲಿ ಸನ್ನತಿಯಲ್ಲಿ ದೊರೆತಿರುವ ನಾಗಪ್ರತಿಮೆಗೆ ಹೋಲಿಸಬಹುದು. ಸುರುಳಿಗಳನ್ನು ಸುತ್ತಿರುವ ರೀತಿಯಲ್ಲಿ ವಿಭಿನ್ನತೆ ಇದ್ದರೂ, ದೇಹದ ಆಕೃತಿಗಳಲ್ಲಿ ಸೌಮ್ಯತೆ ಇದೆ. ಬಾಲವನ್ನು ಮಡಿಚಿರುವ ರೀತಿ ಸನ್ನತಿಯ ಶಿಲ್ಪದಲ್ಲೂ ಬಲಕ್ಕೆ ಇದೆ. ಆದರೆ ಅದು ಬನವಾಸಿಯ ನಾಗಪ್ರತಿಮ ಶಿಲ್ಪಗಳಲ್ಲಿ ಇರುವ ಹಾಗೂ ಸುರುಳಿಯ ಹಿಂಭಾಗದಿಂದ ಚಾಚಿಕೊಳ್ಳದೆ ಮೇಲ್ಭಾಗದಿಂದ ಹೊರಚಾಚಿದೆ. ಇಲ್ಲಿ ದೇಹವನ್ನು ಹರಡಿರುವ ರೀತಿ ಹೊಸ ನಾಗಶಿಲ್ಪಕ್ಕೆ ಹೆಚ್ಚು ಸಾಮ್ಯಗೊಳ್ಳುತ್ತದೆ.

ಪ್ರಸ್ತುತ ನಾಗಪ್ರತಿಮವು ಬೌದ್ಧಧರ್ಮದ ಚೌಕಟ್ಟಿನಲ್ಲಿಯೇ ನಿರ್ಮಾಣವಾಗಿದೆ. ನಾಗ - ನಾಗಮುಚ್ಚಲಿಂದವು ಬೌದ್ಧಧರ್ಮದ ಅವಿಭಾಜ್ಯ ಅಂಗವಾಗಿದೆ. ಸ್ತೂಪಗಳ ಮೇಧಿಯ ಕೆಳಕಟ್ಟೆಗೆ - ಅಥವಾ ಆಯಕಕಟ್ಟೆಗೆ ಅದನ್ನು ಧಾರ್ಮಿಕ ಅಲಂಕರಣವಾಗಿ ಕಟ್ಟಿರುವ ಬಗೆಯು ಆಂಧ್ರದ ಅಮರಾವತಿ, ನಾಗಾರ್ಜುನಕೊಂಡದಲ್ಲಿ ಈ ಮೊದಲೇ ಮತ್ತು ಸನ್ನತಿಯಲ್ಲಿ ಇತ್ತೀಚಿನ ಉತ್ಖನನದಲ್ಲಿ ದೊರೆತಿದೆ. ಇದರಿಂದ ನಾಗಪ್ರತಿಮವು ಬೌದ್ಧಧರ್ಮದಲ್ಲಿ ಅತ್ಯಂತ ಅಮೂಲ್ಯವಾದ ಮತ್ತು ಪೂಜನೀಯವಾದ ಸಾಂಕೇತಿಕ ಆಕೃತಿಯಾಗಿದೆ. ಸಾಂಕೇತಿಕವಾಗಿ ಹಾಗೂ ಕಲಾತ್ಮಕವಾಗಿ ಇದನ್ನು ಬುದ್ಧನಿಗೆ ಹೋಲಿಸಲಾಗಿದೆ. ಬೌದ್ಧ ಕಥೆಗಳ ಪ್ರಕಾರ, ಸಿದ್ಧಾರ್ಥನು ತಪಸ್ಸನ್ನು ಮಾಡುತ್ತಿದ್ದಾಗ ಅತ್ಯಂತ ಭಯಾನಕ ಬಿರುಗಾಳಿ ಬೀಸಲಾಗಿ ಅವನನ್ನು ಸಂರಕ್ಷಿಸಲು ನಾಗಮುಚ್ಚಲಿಂದವು ತನ್ನ ಹೆಡೆಗಳನ್ನು ಅಗಲಿಸಿ ಅದರಡಿಯಲ್ಲಿ ಸಿದ್ಧಾರ್ಥನ ತಪಸ್ಸನ್ನು ಯಾವ ಅಡ್ಡಿಯೂ ಇರದೆ ಮುಂದುವರಿಸುವಲ್ಲಿ ಸಹಾಯ ಮಾಡಿತು. ಮತ್ತು ಅವನನ್ನು ಏಳು ದಿನ ತನ್ನ ಹೆಡೆಗಳಡಿಯಲ್ಲಿ ಸಂರಕ್ಷಿಸಿತು.ಬನವಾಸಿಯ ಶಾಸನ ಸಹಿತ ನಾಗಪ್ರತಿಮದ ಶಾಸನದ ಅಂಶಗಳನ್ನು ಗಮನಿಸಿದರೆ, ಅದರಲ್ಲಿ ಶಿವಸ್ಕಂದನಾಗಶ್ರೀಯು ವಿಹಾರ ಮತ್ತು ತಟಾಕಕ್ಕೆ (ಕೆರೆಗೆ) ದಾನ ನೀಡಿದ ವಿವರಗಳು ದೊರೆಯುತ್ತವೆ. *೩ ಅಲ್ಲದೆ ನಾಗಪ್ರತಿಮವನ್ನು ಮಾಡಿಸಿದ ಅಂಶ ಇದರಿಂದ ಸ್ಪಷ್ಟವಾಗುತ್ತದೆ. ಇಲ್ಲಿ ವಿಹಾರವೆಂದರೆ ಬೌದ್ಧಧರ್ಮದ ಭಿಕ್ಕುಗಳ ವಿಹಾರವೆಂದೇ ನಾವು ತಿಳಿಯಬೇಕು. ಬೌದ್ಧಧರ್ಮದೊಂದಿಗೆ ಬನವಾಸಿಯ ಸಂಬಂಧ ಮೌರ್ಯ ಸಾಮ್ರಾಟ ಅಶೋಕನ ಕಾಲದಿಂದಲೂ ಇದೆ. *೪ ಶ್ರೀಲಂಕಾದ ಬೌದ್ಧಧರ್ಮದ ಗ್ರಂಥವಾದ ಮಹಾವಂಶವು, ಥೇರಮಹಾದೇವ ಮತ್ತು ಥೇರರಕ್ಷಿತರು ಕ್ರಮವಾಗಿ ವನವಾಸ (ಬನವಾಸಿ) ಮತ್ತು ಮಹಿಷಮಂಡಲಕ್ಕೆ ಬಂದಿದ್ದು ಹಲವಾರು ಸಾವಿರ ಜನರನ್ನು ಬೌದ್ಧಧರ್ಮಕ್ಕೆ ಸೇರಿಸಿಕೊಂಡರೆಂದು ತಿಳಿಸುತ್ತದೆ. ಅಲ್ಲದೇ ಥೇರ ಚಂದ್ರಗುಪ್ತನು ಶ್ರೀಲಂಕಾದ ಅನುರಾಧಪುರದಲ್ಲಿ ದೊರೆ ದತ್ತಗಾಮಿಯು ನಿರ್ಮಿಸಿದ ಸ್ತೂಪದ ಉದ್ಘಾಟನೆಗೆ ಬನವಾಸಿಯಿಂದ ಹಲವು ಸಾವಿರಜನ ಬೌದ್ಧ ಅನುಯಾಯಿಗಳನ್ನು ಕರೆದುಕೊಂಡು ಹೋದ ಬಗ್ಗೆ ದಾಖಲೆ ಇದೆ. ಈ ಮೇಲಿನ ದಾಖಲೆಗಳು ಬನವಾಸಿ ಮತ್ತು ಬನವಾಸಿ ಪರಿಸರದಲ್ಲಿ ಬೌದ್ಧಧರ್ಮವು ಆದಿಕದಂಬರ ಪೂರ್ವ ಕಾಲದಲ್ಲಿ ಪ್ರಚಲಿತದಲ್ಲಿದ್ದುದನ್ನು ರುಜುವಾತುಪಡಿಸುತ್ತವೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗಲೂ - ಸನ್ನತಿಯಲ್ಲಿದ್ದ ಹಾಗೆ ತೀವ್ರವಾದ ಕಲಾಚಟುವಟಿಕೆ ಬನವಾಸಿಯಲ್ಲಿ ಕಂಡುಬರುವುದಿಲ್ಲ, ಕೆಲವೇ ಶಿಲ್ಪಗಳು ನಮಗೆ ಇದುವರೆಗೆ ದೊರೆತಿವೆ. ಬನವಾಸಿ ಮತ್ತು ಬನವಾಸಿಯ ಪರಿಸರದಲ್ಲಿನ ಉತ್ಖನನ ಮತ್ತು ಸರಿಯಾದ ಕ್ಷೇತ್ರಕಾರ್ಯ ನಡೆದರೆ ಪ್ರಸ್ತುತ ಶಿಲ್ಪದಂತಹ ಹಲವಾರು ವಿಶಿಷ್ಟ ಶಿಲ್ಪಗಳನ್ನು ಹೊರಗೆಡಹಲು ಸಾಧ್ಯವಾದೀತು. ಪ್ರಸ್ತುತ, ಶಾಸನ ರಹಿತ ನಾಗಶಿಲ್ಪವನ್ನು ಕೂಡಾ ಅದರ ಶೈಲಿ ಮತ್ತು ಕೆತ್ತನೆಯ ಅಂಶಗಳನ್ನು ಗಮನಿಸಿ ಚುಟುಸಾತಕರ್ಣಿಗಳ ಕಾಲಕ್ಕೆ ಅಂದರೆ ಸುಮಾರು ಕ್ರಿ. ಶ. ೨-ನೇ ಶತಮಾನಕ್ಕೆ ಸೇರಿಸ ಬಹುದಾಗಿದೆ. ಮತ್ತು ಬನವಾಸಿಯಲ್ಲಿನ ಎರಡನೇ ನಾಗಶಿಲ್ಪ ಇದಾಗುತ್ತದೆ.

**ದ್ವಿಬಾಹು ಪುರುಷ ವಿಗ್ರಹ :** *೫ ಬನವಾಸಿಯಲ್ಲೇ ದೊರೆತ ಈ ಶಿಲ್ಪವನ್ನೂ ಹತ್ತಿರಕ್ಕೆ ಹಾಯ್ದು ಹೋಗುವ ಸೊರಬ ರಸ್ತೆಯ ದೊಡ್ಡ ಆಲದ ಮರದ ಕೆಳಗೆ ಇಡಲಾಗಿತ್ತು.

ಈ ಶಿಲ್ಪವು ಅಪೂರ್ಣವಾದ ದುಂಡುಶಿಲ್ಪ. ಹಿಂಭಾಗ ಕೂಡಾ ಕೆತ್ತಲ್ಪಟ್ಟಿದೆ. ಸುಮಾರು ೭೨ ಸೆಂ. ಮೀ. ಎತ್ತರ ಇರುವ ಈ ಶಿಲ್ಪದ ಕೆಳಭಾಗದಲ್ಲಿ ಕಾಲುಗಳು ಒಡೆದಿವೆ ಎರಡು ಕೈಗಳಿರುವ ವಿಗ್ರಹ ಸಮಭಂಗದಲ್ಲಿ ಸ್ಥಾನಕ ಭಂಗಿಯಲ್ಲಿದೆ. ಎಡಗೈ ಕಟಿಹಸ್ತ ಮುದ್ರೆಯಲ್ಲಿದೆ ಮತ್ತು ಬಲಗೈಭಾಗ ಸ್ವಲ್ಪ ಭಗ್ನವಾಗಿದ್ದು ಬಹುಶಃ ಅದು ವರದ ಅಥವಾ ಅಭಯ ಮುದ್ರೆಯಲ್ಲಿ ಇದ್ದಿರಬಹುದು.





ಆಕರ್ಷಕವಾದ ಮೈಮಾಟ ಹೊಂದಿರುವ ಈ ಶಿಲ್ಪದಲ್ಲಿ ಘನ ತ್ರಿಕೋನಾಕೃತಿಯ ಕಿರೀಟ, ಅದಕ್ಕೆ ಹೊಂದಿಕೊಂಡ ಶಿರಶ್ಚಕ್ರ ಮತ್ತು ಕರ್ಣಕುಂಡಲಗಳು ಇವೆ. ಅವು ಭಾರದಿಂದ ಭುಜದ ಮೇಲೆ ಕುಳಿತಂತೆ ಇದ್ದು, ಅವುಗಳ ಅಡಿಯಿಂದ ಹಾಕಿರುವ ಅರ್ಧಚಂದ್ರಾ ಕೃತಿಯಲ್ಲಿರುವ ಚಪ್ಪಟೆ ಹಾರದ ಆಲಂಕರಣವಿದೆ. ಶಿಲ್ಪಕ್ಕೆ ಯಜ್ಞೋಪವೀತವಿಲ್ಲ. ಕಟಿವಸ್ತ್ರ ಎರಡು ಬದಿಗಳಲ್ಲಿ ಕೆಳಕ್ಕೆ ಇಳಿಬಿದ್ದಿದ್ದು, ಅದರ ಒಂದು ಭಾಗ ಮೊಳಕಾಲುಗಳ ಮೇಲೆ ಅರ್ಧವೃತ್ತಕಾರವಾಗಿ ಕಟ್ಟಿದೆ. ಇದು ಒಂದುಕ್ಷಣ ವಿಷ್ಣುಶಿಲ್ಪಗಳ ವೈಜಯಂತಿ ಹಾರದ ಜ್ಞಾಪಕ ತರುತ್ತದೆ. ಪ್ರಸ್ತುತ ಶಿಲ್ಪವು ಅಪೂರ್ಣಶಿಲ್ಪವಾಗಿದೆ ಎಂದು ಈ ಮೊದಲೇ ಹೇಳಿದ್ದೇವೆ. ಇದರ ಕೆತ್ತದೇ ಉಳಿದಿರುವ ಈ ಹಂತದ ರೀತಿಯನ್ನು ಗಮನಿಸಿದರೆ ಬಹುಶಃ ಕೊನೆಯ ಹಂತದ ಕೆತ್ತನೆಯ ಪೂರ್ವಹಂತ ಇದೆಂದು ತೋರುತ್ತದೆ. ಅಂದರೆ – ನೈಜತೆ, ಹೊಳಪು ಕೊಡುವ ಕೆಲಸ ಇನ್ನೂ ಆಗಬೇಕಿದೆ, ಅಂದಾಗ ಮಾತ್ರ ಶಿಲ್ಪದ ಕೆತ್ತನೆ ಪೂರ್ಣವಾಗಬಹುದಾಗಿದೆ.

ಮುಖ ಭಾಗವನ್ನು ಸಂಪೂರ್ಣವಾಗಿ ಹಾಗೇ ಬಿಡಲಾಗಿದೆ. ಮುಖವನ್ನು ಸೂಕ್ಷ್ಮವಾಗಿ ಗಮನಿಸಿದರೆ ಶಿಲೆಯ ಎಳೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಬಹುಶಃ ಈ ಎಳೆಗಳಿಂದಲೇ ಕೆತ್ತುವಾಗ ಒಡೆದು ಹೋಗುವ ಸಾಧ್ಯತೆಯು ಇರುವುದರಿಂದ ಶಿಲ್ಪದ ಕೆತ್ತನೆಯನ್ನು ಅಷ್ಟಕ್ಕೆ ಶಿಲ್ಪಿಯು ಬಿಟ್ಟಿರಬಹುದೆಂದು ತೋರುತ್ತದೆ. ಅಥವಾ ಶಿಲ್ಪವನ್ನು ಕೆತ್ತುವಾಗ ಆಕಸ್ಮಿಕ ತಾಂತ್ರಿಕ ತೊಂದರೆಗಳಿಂದಾಗಿ ಕೆತ್ತನೆ ಪ್ರಸ್ತುತ ಹಂತಕ್ಕೆ ನಿಂತಿರುವ ಸಾಧ್ಯತೆಯೂ ಇದೆ. ಅಲ್ಲದೇ ಶಿಲ್ಪದ ಕಟಿಹಸ್ತದಲ್ಲಿನ ಭಾಗದಲ್ಲಿ ಸಾಕಷ್ಟು ಶಿಲೆ ದಪ್ಪನಾಗಿ ಹಾಗೆ ಉಳಿದಿದೆ. ಬಹುಶಃ ಆ ಕೈಯಲ್ಲಿ ವಿಷ್ಣುವಿನ ಶಂಖವನ್ನು ಕಡೆಯುವ ಹಾಗೆ ಏನನ್ನಾದರೂ ಕೆತ್ತಲು ಬಿಟ್ಟಿರಬಹುದು ಎಂದು ತೋರುತ್ತದೆ. ಇದರ ಹಾಗೆ ಕಿರೀಟದ ಭಾಗವೂ ಕೂಡಾ ಹಾಗೆ ಉಳಿದಿದೆ. ಆದರೆ – ಒಟ್ಟಾರೆಯಾಗಿ – ದೇಹ ಮತ್ತು ಸಂಪೂರ್ಣ ಆಕೃತಿಯು ಪ್ರಮಾಣಬದ್ಧವಾಗಿ ಆಕರ್ಷಕವಾಗಿ ಕೆತ್ತಲ್ಪಟ್ಟಿದೆ. ಶಿಲ್ಪದ ಹಿಂಭಾಗದ ಕೆತ್ತನೆಯೂ ಕೂಡ ಅಷ್ಟೆ ಆಕರ್ಷಕವಾಗಿದೆ.

ದ್ವಿಬಾಹು ಪುರುಷವಿಗ್ರಹವು, ಶೈಲಿಯಲ್ಲಿ ಮತ್ತು ಲಕ್ಷಣದಲ್ಲಿ ಬನವಾಸಿಯಲ್ಲಿನ ಮತ್ತು ಆ ಕಾಲದ ಕೆಲವು ಶಿಲ್ಪಗಳೊಂದಿಗೆ ಅತ್ಯಂತ ಸಾಮ್ಯವನ್ನು ಹೊಂದಿದೆ. ಬನವಾಸಿಯ ಚತುರ್ಬಾಹು ವಿಷ್ಣು,*೬ ಕೊಂತಪಾಲದ ವಿಷ್ಣು ಮತ್ತು ಗೋಕರ್ಣದ ಹರಿಹರ ಶಿಲ್ಪಗಳು ಇದಕ್ಕೆ ಮುಖ್ಯ ಉದಾಹರಣೆ ಗಳು. ನಾವು ಶೋಧಿಸಿದ ಈ ಪುರುಷಶಿಲ್ಪವೂ ಕೂಡಾ ಈ ಮೇಲಿನ ಉದಾಹರಣೆಗಳಿಗೆ ಹೋಲಿಸಿದಾಗ, ಆಕೃತಿ, ಭಂಗಿ ಮತ್ತು ಶೈಲಿಗಳಿಂದ ಇದೂ ಕೂಡಾ ವಿಷ್ಣುಶಿಲ್ಪವಾಗಿರಬಹುದು ಎಂದು ಅನಿಸುತ್ತದೆ. ಪ್ರಸ್ತುತ ಶಿಲ್ಪದ ಮೈಮಾಟ ಮತ್ತು ಹಾವಭಾವಗಳು ಬನವಾಸಿಯದೇ ಆದ ಚತುರ್ಬಾಹು ವಿಷ್ಣುವಿಗೆ

ಹೆಚ್ಚು ಹೋಲುತ್ತದೆ. ಈ ಶಿಲ್ಪಗಳ ಕಾಲವನ್ನು ಆದಿಕದಂಬರ ಕಾಲಕ್ಕೆ ಅವುಗಳ ಶೈಲಿಯ ಆಧಾರದ ಮೇಲಿಂದ ನಿರ್ಧರಿಸಲಾಗಿದೆ. ನಾವು ಶೋಧಿಸಿದ ಶಿಲ್ಪವೂ ಕೂಡ ಇವುಗಳ ಶೈಲಿ ಮತ್ತು ಲಕ್ಷಣಗಳಿಗೆ ಸರಿಹೋಗುತ್ತದೆ. ಆದುದರಿಂದ ಇದನ್ನು ಕೂಡ ಕ್ರಿ. ಶ. ಸುಮಾರು ೫-೬ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಆ ಕಾಲದ ಶಿಲ್ಪಗಳು ಹೆಚ್ಚು ಕಡಿಮೆ ಒಂದೇ ಶೈಲಿಯ ಮೇಲೆ ಬೆಳೆದು ನಂತರ ಸ್ಥಳೀಯ ಅಂಶಗಳನ್ನು ಮೈಗೂಡಿಸಿ ಕೊಂಡವು. ಈ ಸಂದರ್ಭದಲ್ಲಿ ಗುಪ್ತರ ಮತ್ತು ವಾಕಾಟಕರ ಕಾಲದ ಶಿಲ್ಪಗಳನ್ನು ನಾವು ಗಮನಿಸಿದಾಗ, ಅವುಗಳಲ್ಲಿಯೂ ಶೈಲಿಯ ಮತ್ತು ಲಕ್ಷಣಗಳ ಆಂತರಿಕ ಸಂಬಂಧ, ಎದ್ದು ಕಾಣುತ್ತದೆ. ಅಲ್ಲದೇ ಹಲವಾರು ಸಾಮ್ಯದ ಅಂಶಗಳು ಆ ಕಾಲದ ಶಿಲ್ಪಗಳಲ್ಲಿ ವ್ಯಾಪಕವಾಗಿ ಇವೆ. ಯಜ್ಞೋಪವೀತವಿಲ್ಲದೇ ಇರುವುದು - ಹೆಚ್ಚು ಅಲಂಕರಣಗಳಿಲ್ಲದ, ಅತ್ಯಂತ ಸರಳವಾದ, ಮತ್ತು ದೇಹದ ನೈಜ ಕೆತ್ತನೆಯು ಆ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಅದೇ ರೀತಿ ಆದಿಕದಂಬರ ಕಾಲಕ್ಕೆ ಸೇರಿಸ ಬಹುದಾದ ಈ ಭಾಗದ ಶಿಲ್ಪಗಳಲ್ಲೂ ಇಂತಹದೇ ಅಂಶಗಳು ವ್ಯಕ್ತವಾಗಿವೆ. *೭ *ಬಹುಶಃ ಆ ಕಾಲದಲ್ಲಿ ಆಗತಾನೇ ಪ್ರಬಲ ಗೊಳ್ಳುತ್ತಿದ್ದ ವೈದಿಕ ಧರ್ಮದ ಕಲೆಯ ಪರಿಣಾಮ ಮತ್ತು ಕಲಾಚಟುವಟಿಕೆಗಳ ಮುಖ್ಯವಾಹಿನಿ ದೇಶದ ಪ್ರಮುಖ ಸ್ಥಳಗಳಲ್ಲಿ* ಹರಡಿರಬೇಕು. ಕದಂಬರು, ಗುಪ್ತ ಮತ್ತು ವಾಕಾಟಕ ರಾಜಮನೆತನ ಗಳೊಂದಿಗೆ ರಾಜಕೀಯ ಸಂಬಂಧ ಹೊಂದಿದ್ದರೆಂಬುದು ಅವರ ಕೆಲವು ಶಾಸನಗಳಲ್ಲಿ ವ್ಯಕ್ತವಾಗಿದೆ. *೮ ಬಹುಶಃ ಈ ಸಂಬಂಧ ರಾಜಕೀಯಕ್ಕಷ್ಟೆ ಅಲ್ಲದೇ ಸಾಂಸ್ಕೃತಿಕ ಮತ್ತು ಕಲಾತ್ಮಕ ಚಟುವಟಿಕೆಗಳಿಗೂ ವಿಸ್ತೃತವಾಗಿದ್ದಿರಬಹುದೆಂದು ಊಹಿಸ ಬಹುದು. ಕಲಾಚಟುವಟಿಕೆಗಳು ವಿವಿಧ ಕಡೆಗಳಲ್ಲಿ ಅಂದು ತೀವ್ರವಾಗಿ ನಂತರ ಉತ್ಕೃಷ್ಟ ಕಲಾ ಪರಂಪರೆಗೆ ನಾಂದಿಯಾದವು. *ಆದಿಕದಂಬರ ಕಾಲವು, ಕರ್ನಾಟಕದಲ್ಲಿ ಬಾದಾಮಿಚಾಲುಕ್ಯ ಪೂರ್ವ ಕಾಲದಲ್ಲಿ ಅಂತಹ ಒಂದು ಪರಂಪರೆಗೆ ಭದ್ರಬುನಾದಿಯನ್ನು ಹಾಕಿತು.* ಅದರ ಪರಿಣಾಮ ಪ್ರಸ್ತುತ ಶಿಲ್ಪದಂತಹ ಶಿಲ್ಪಗಳು ಆಗಾಗ ಅಲ್ಲಲ್ಲಿ ದೊರೆಯುತ್ತಿರುವುದು. ತೀರ ಇತ್ತೀಚಿಗೆ ಡಾ॥ ರಘುನಾಥಭಟ್ಟರು ಕೂಡಾ ಬನವಾಸಿಯ ಹತ್ತಿರದ ಬಸೂರಲ್ಲಿ ದ್ವಿಬಾಹು ಕೇವಲ ನರಸಿಂಹ ವಿಗ್ರಹವನ್ನು ಶೋಧಿಸಿದ್ದಾರೆ. *೯ ಹೀಗೆ ಹಲವು ಶಿಲ್ಪಗಳು ಸಂಶೋಧಕರ ಮತ್ತು ಆಸಕ್ತರ ಗಮನ ಸೆಳೆಯುತ್ತಿವೆ ಮತ್ತು ಬೆಳಕಿಗೆ ಬರುತ್ತಿವೆ.

ಚಾಲುಕ್ಯ ಪೂರ್ವಕಾಲದ ಕಲೆಯನ್ನೂ ಕುರಿತು ಕ್ರಿಸ್ತಶಕದ ಪ್ರಾರಂಭದಿಂದ ೬ನೇ ಶತಮಾನದ ಮೊದಲ ಅರ್ಧಭಾಗದವರೆಗೆ ಬನವಾಸಿ ಪರಿಸರದಲ್ಲಿ ಯಾವ ರೀತಿಯ ಬೆಳವಣಿಗೆ ಆಯಿತು ಎನ್ನುವುದನ್ನು ತಿಳಿಯುವ ಪ್ರಯತ್ನ ತೀವ್ರವಾಗಬೇಕು. *೧೦ ಮತ್ತು ಈಗ ದೊರಕಿದ ನಾಗಪ್ರತಿಮ ಮತ್ತು ದ್ವಿಬಾಹು ಪುರುಷ ಶಿಲ್ಪಗಳು ಇದಕ್ಕೆ ಉತ್ತಮ ಉದಾಹರಣೆಯಾಗಿವೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧. ಈ ಎರಡೂ ಶಿಲ್ಪಗಳನ್ನು ನಾನು ಕಳೆದ ಡಿಸೆಂಬರ್(೧೯೯೬)ನಲ್ಲಿ ಶ್ರೀ ಎಸ್. ವಿ. ಜೋಷಿ, (ಕ್ಯುರೇಟರ್ ಈಗ ಸಹಾಯಕ ನಿರ್ದೇಶಕರು) ರಾಜ್ಯ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಮತ್ತು ಬನವಾಸಿಯವರೇ ಆದ ಶ್ರೀ ಮಹೇಶ ಡಿ. ಶಾಸ್ತ್ರೀ ಇವರ ಸಹಾಯದಿಂದ ಶೋಧಿಸಲಾಯಿತು. ಇವರ ಜೊತೆಯಲ್ಲಿ ಸಹಕರಿಸಿದ ನನ್ನ ವಿದ್ಯಾರ್ಥಿ ಶ್ರೀಪಾದಪುರೋಹಿತ, ಬನವಾಸಿ - ಈ ಎಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

*೨. ಕೃಷ್ಣನ್. ಕೆ.ಜಿ. ೧೯೮೯, ''ನಾಗಾ ಸ್ಟೋನ್ ಇನ್‌ಸ್ಕ್ರಿಪ್ಶನ್ ಆಫ್ ವಿಷ್ಣು ಖಡ ಸಾತಕರ್ಣಿ'', ಉತ್ಕಾಂಕಿತ, ವಿದ್ಯಾರಣ್ಯ - ಸಂ. ೧೮೪, ಮೈಸೂರು, ಪು. ೩೯೨-೯೩.

*೩. ಕೃಷ್ಣನ್ ಕೆ.ಜಿ. ೧೯೮೯. ಪೂರ್ವೋಕ್ತ

*೪. ಭೌಗೋಳಿಕವಾಗಿ ಅಶೋಕನ ಶಾಸನಗಳು ಬನವಾಸಿಗೆ ಹತ್ತಿರದಲ್ಲೇ ಇವೆ. ಆ ಕಾಲದಲ್ಲಿ ಬನವಾಸಿ ಅತ್ಯಂತ ಪ್ರಮುಖ ಧಾರ್ಮಿಕ ಕೇಂದ್ರವೂ ಆಗಿತ್ತು. ಆದುದರಿಂದ ಮೌರ್ಯರ ಕಾಲದಲ್ಲಿ ಬನವಾಸಿ ಧಾರ್ಮಿಕವಾಗಿ ಅವರ ರಾಜ್ಯ ಪರಿವ್ಯಾಪ್ತಿಯಲ್ಲೇ ಬರುತ್ತದೆ.

*೫. ಈ ಶಿಲ್ಪವನ್ನು ಕುರಿತು ನನ್ನ ಒಂದು ದೀರ್ಘಲೇಖನ ಪ್ರಕಟವಾಗುತ್ತಿದೆ. (ಆನ್ ಅನ್‌ಫಿನಿಷಡ್ ಅರ್ಲಿಕದಂಬಾ ವಿಷ್ಣು ಸ್ಕಲ್ಪಚರ್ ಫ್ರಂ ಬನವಾಸಿ) ಕುಲಕರ್ಣಿ ಆರ್. ಎಚ್. (೧೯೯೭ ಅಚ್ಚಿನಲ್ಲಿ) ಲೇಟ್. ಡಾ॥ ಕೆ. ಕೃಷ್ಣಮೂರ್ತಿ, ಕಮ್‌ಮೆಮೋರೇಶನ್ ವಾಲ್ಯೂಮ್ ಹೈದ್ರಾಬಾದ್, (ಸಂ.) ಡಾ॥ ಕೆ. ಪದ್ಮನಾಭ.

*೬. ಚಿತ್ರಗಳಿಗೆ ನೋಡಿ, ಕುಲಕರ್ಣಿ ಆರ್. ಎಚ್. . ''ಕದಂಬರ ಕಾಲದ ಶಿಲ್ಪಕಲೆ'' (ಕದಂಬೋತ್ಸವ ೧೯೯೬, ಬನವಾಸಿ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)೧೯೯೭, ''ಕದಂಬ ಅಧ್ಯಯನ'' : (ಸಂ) ಎಂ. ಎಲ್. ಶಿವಶಂಕರ, ಮತ್ತು ಡಾ॥ ಸಿ. ಎಸ್. ಪಾಟೀಲ್, ಪುಟ . ೧೮ - ೩೪, ಮೈಸೂರು.

*೭. ಕುಲಕರ್ಣಿ ಆರ್. ಎಚ್.,೧೯೯೭ ಪೂರ್ವೋಕ್ತ

*೮. ಗೋಪಾಲ್. ಬಿ. ಆರ್ : ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್‌ಷನ್ಸ್. ೧೯೮೫, ಶಾಸನ ಸಂಖ್ಯೆ. ೪, ಪು. ೧೦-೨೧. ಮತ್ತು ಶಾಸನ ಸಂಖ್ಯೆ. ೩೮ ಪು. ೧೩೯-೧೪೩.

*೯. ಡಾ॥ ರಘುನಾಥಭಟ್. ಎಚ್. ಆರ್. ಧಾರವಾಡ - ಇವರು ಇತ್ತೀಚಿಗೆ ದ್ವಿಬಾಹು ಕೇವಲ ನರಸಿಂಹ ವಿಗ್ರಹವನ್ನು ಬನವಾಸಿಯ ಹತ್ತಿರ ಇರುವ ಬಸೂರಲ್ಲಿ ಶೋಧಿಸಿದ್ದಾರೆ. ಆ ಶಿಲ್ಪ ಈಗ ಪ್ರಸ್ತುತ ಪ್ರಾಚೀನ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿದೆ.

*೧೦. ಕುಲಕರ್ಣಿ ಆರ್. ಎಚ್.,೧೯೯೭, ಪೂರ್ವೋಕ್ತ - ಇದರಲ್ಲಿ ಕದಂಬರ ಕಲೆಯ ಕುರಿತು ಒಂದು ದೀರ್ಘಾವಲೋಕನವಿದೆ.

ಕೂ.ಸ. ಅಪರ್ಣ*

# ವಾಸ್ತುಶಿಲ್ಪಶಾಸ್ತ್ರದ ಹಿನ್ನೆಲೆಯಲ್ಲಿ ದೇವಾಲಯದ ಮಂಟಪಗಳು

ಶಾಸನಗಳಲ್ಲಿ ಮುಕ್ತಿಮಂಟಪ, ಸಮಸ್ತಭುವನ ಭವನ ಮಂಟಪ ಇತ್ಯಾದಿ ಉಲ್ಲೇಖಗಳು ನಮಗೆ ದೊರೆಯುತ್ತವೆ. ದೇವಾಲಯದಲ್ಲಿರುವ ವಿವಿಧ ರೀತಿಯ ಮಂಟಪಗಳನ್ನೂ ಶಾಸನಗಳು ಉಲ್ಲೇಖಿಸಿವೆ. ದೇವಾಲಯ ರಚನೆಯ ಪ್ರಾಚೀನ ಹೆಜ್ಜೆಗಳನ್ನು 'ಮಂಟಪ'ದಲ್ಲಿ ಗುರುತಿಸಬಹುದಾಗಿದೆ. ವಾಸ್ತುಶಿಲ್ಪಶಾಸ್ತ್ರದ ದೃಷ್ಟಿಯಿಂದ ಮಂಟಪ ಶಬ್ದ ಒಂದು ಪಾರಿಭಾಷಿಕ ಪದ. ದೇವಾಲಯದ ಸಂದರ್ಭದಲ್ಲಿ ಇದರ ರಚನೆಯೂ, ಆ ಸಂಬಂಧದ ವಿವರಗಳೂ ಅಧ್ಯಯನ ದೃಷ್ಟಿಯಿಂದ ಮಹತ್ವ ಪೂರ್ಣದ್ದೆನಿಸುತ್ತವೆ. *೧

ವಾಸ ಅಥವಾ ಆಶ್ರಯಯೋಗ್ಯವಾಗಿದ್ದು, ಒಂದು ಕಾರ್ಯೋದ್ದೇಶದಿಂದ ರಚಿಸಲ್ಪಟ್ಟ ಗುಡಾರ ಅಥವಾ ಚಪ್ಪರದಂತಹ ನಿರ್ದಿಷ್ಟ ಸ್ವರೂಪದ ವಾಸ್ತುರಚನೆಯನ್ನು 'ಮಂಟಪ' ಎನ್ನಬಹುದು. ಅಮರಕೋಶವು 'ಮಂಡಪೋ ಸ್ತ್ರೀ ಜನಾಶ್ರಯ:' ಎಂದು ಹೇಳಿ, ಅದೊಂದು ಆಶ್ರಯ ಸ್ಥಾನವೆಂದು ಸ್ಪಷ್ಟಪಡಿಸಿದೆ. ಅಜಿತಾಗಮ ಮತ್ತು ಮಯಮತಗಳಲ್ಲೂ ಇದೇ ರೀತಿ, ವಾಸಾರ್ಥವಾಗಿಯೂ ಮಂಟಪವಿರುವುದೆಂಬ ಹೇಳಿಕೆ ಇದೆ. ಅಲ್ಲದೆ, (ದೇವಾಲಯದ) 'ಸೌಂದರ್ಯ ಅಥವಾ ಅಲಂಕಾರವನ್ನು ರಕ್ಷಿಸುವುದರಿಂದ ಅದಕ್ಕೆ 'ಮಂಟಪ' ಎಂಬ ಹೆಸರು ಬಂದಿದೆ. *೨

ಊರೊಳಗಿನ ಮನೆ, ನದೀ-ಸಮುದ್ರ ತೀರದಲ್ಲಿರುವ ಮನೆ, ಪ್ರಾಕಾರದೊಳಗಿರುವ ಬಿಡಿ ಬಿಡಿ ರಚನೆಗಳು, ದೇವಾಲಯ ಅಥವಾ ವಾಸಕ್ಕಾಗಿ ರಚಿಸಿದ ಸ್ಥಳಗಳಲ್ಲಿರುವ ವಿಭಿನ್ನ ಕೋಣೆಗಳು-ಇವೆಲ್ಲವನ್ನೂ 'ಮಂಟಪ' ಎಂದೇ ಗುರುತಿಸ ಬಹುದಾಗಿದ್ದರೂ, ಇದು ಪ್ರಮುಖವಾಗಿ ದೇವಾಲಯದ ಕೋಣೆಗಳನ್ನು ಮತ್ತು ಅದರ ಸುತ್ತಲಿರುವ ಇತರ ರಚನೆಗಳನ್ನು ಸೂಚಿಸುತ್ತದೆ. 'ದೇವಾಲಯ' ಎಂಬ ಅರ್ಥದಲ್ಲಿಯೂ 'ಮಂಟಪ' ಎಂಬ ಪದವನ್ನು ಬಳಸುವುದುಂಟು. * ೩

ಮಂಟಪಗಳನ್ನು ಎಲ್ಲೆಲ್ಲಿ ರಚಿಸಬಹುದೆಂಬುದರ ಬಗ್ಗೆ ಹೇಳುತ್ತ ದೇವಾಲಯದ ಮುಂದೆ, ಪುಣ್ಯಕ್ಷೇತ್ರಗಳಲ್ಲಿ, ಆರಾಮಗಳಲ್ಲಿ ಶುಭದಾಯಕ ಸ್ಥಳಗಳಲ್ಲಿ, ಗ್ರಾಮದ ಮಧ್ಯದಲ್ಲಿ, ನಾಲ್ಕು ದಿಕ್ಕುಗಳಲ್ಲಿ ಮತ್ತು ವಿದಿಕ್ಕುಗಳಲ್ಲಿ ಮತ್ತು ಮನೆಯ ಹೊರಗೆ, ಒಳಗೆ ಮಧ್ಯೆ ಅಥವಾ ಮುಂಭಾಗದಲ್ಲಿ ರಚಿಸ ಬಹುದೆಂದು ಗ್ರಂಥಗಳು ಹೇಳಿವೆ. ಪ್ರಾಸಾದದ ಮುಂದೆ ಮಂಟಪವನ್ನು ರಚಿಸಬೇಕೆಂದು ಅಜಿತಾಗಮವೂ ಪ್ರಾಸಾದದ ಮುಂದೆ ಉತ್ತರ ಅಥವಾ ಪೂರ್ವದಲ್ಲಿ ಮಂಟಪ ಇರಬೇಕೆಂದು ಮತ್ಸ್ಯಪುರಾಣವೂ ಹೇಳಿದೆ. ಹೇಗಿದ್ದರೂ, ದೇವಾಲಯಕ್ಕೆ ಹೊಂದಿಕೊಂಡಂತಿರುವ ಮಂಟಪಗಳಿಗೇ ಹೆಚ್ಚು ಪ್ರಾಧಾನ್ಯತೆ ಇರುವುದು ಕಂಡುಬರುತ್ತದೆ.

ಆಧಾರರೂಪವಾಗಿರುವ ಅಧಿಷ್ಠಾನ, ಅದರ ಮೇಲೆ ವ್ಯವಸ್ಥಿತವಾಗಿ ನಿಂತಿರುವ ಕಂಬಗಳು, ಅದರ ಮೇಲೆ ಪ್ರಸ್ತರ (ಮತ್ತು ಮೇಲ್ಛಾವಣಿ)-ಇದು ಮಂಟಪದ ರಚನೆ. ಇದನ್ನು ತ್ರಿವರ್ಗ ರಚನೆ ಎಂದು ಗ್ರಂಥಗಳು ಗುರುತಿಸಿವೆ. ಕಪೋತದ ಮೇಲೆ 'ಪ್ರತೀ' ಯೂ ಇರಬೇಕೆಂದು ಮಯಮತವು ಸ್ಪಷ್ಟಪಡಿಸಿದೆ. ಮೂಲಪ್ರಾಸಾದಕ್ಕೆ ಉಪಪೀಠವಿದ್ದರೆ, ಬಲವರ್ಧನೆಯ ದೃಷ್ಟಿಯಿಂದ ಮಂಟಪಕ್ಕೂ ಉಪಪೀಠ ವಿರಬೇಕೆಂದು ಮಾನಸಾರವು ಹೇಳಿದೆ; ಮಯಮತವು ಇದನ್ನು ಕಡ್ಡಾಯವಾಗಿ ಹೇಳಿಲ್ಲ. ಮಾನಸಾರವು, ಇದರ ಮೇಲೆ ಕಲಶ, ಕರ್ಣಹರ್ಮ್ಯ ಇರಬೇಕೆಂದು ಸೂಚಿಸಿದೆ. ಕಾಮಿಕಾಗಮದಲ್ಲಿ, ಮಂಟಪಕ್ಕೆ ಒಂದರಿಂದ ಐದು ತಲಗಳಿರಬಹುದು ಎಂದಿದ್ದರೆ, ಮಯಮತವು, ಮೇಲೆ ಒಂದು ಹಂತವಿರುವ ಮಂಟಪವನ್ನು ಮಾಲಿಕಾ ಮಂಟಪ ಎಂದಿದೆ. ಈ ಮಂಟಪದ ಮೇಲೆ ಎರಡು ಹಂತವಿದ್ದರೆ, ಅದಕ್ಕೆ ಶಿಖರವಿರಬೇಕೆಂದೂ ಮಯಮತವು ಗುರುತಿಸಿದೆ. ಈ ಮಯಮತದ ಪ್ರಕಾರ, ಮಂಟಪದ ಮಧ್ಯವು ದೇವಾಲಯದ ಗರ್ಭಗೃಹದಂತಿದ್ದು, ಅಲಿಂದ್ರವಿದ್ದು,

* ೧೬೪೩, ೧೭ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ಬೆಂಗಳೂರು-೫೬೦ ೦೫೦

ಷಡ್ವರ್ಗಗಳಿದ್ದರೆ ಅದಕ್ಕೆ ಪ್ರಾಸಾದಾಕಾರ ಮಂಟಪ ಎಂದು ಹೆಸರು. ಮಂಟಪದ ಮಧ್ಯದಲ್ಲಿ 'ವೇದಿಕೆ' ಇದ್ದು, ಅದರ ಮಧ್ಯೆ 'ರಂಗ'ವನ್ನು ರಚಿಸಬೇಕೆಂದೂ, ಅದರ ಮೇಲೆ ೪ ಅಥವಾ ೮ ಕಂಬಗಳಿರಬೇಕೆಂದೂ ಇದೇ ಗ್ರಂಥವು ಹೇಳಿದೆ. *೪ ಅಜಿತಾಗಮದಲ್ಲಿ ೧೬ ಅಥವಾ ೧೨ ಕಂಬಗಳಿರಬೇಕೆಂದು ಹೇಳಲಾಗಿದೆಯಲ್ಲದೆ, ಮಧ್ಯೆ ವೇದಿಕೆ ಇದ್ದು, ವೇದಿಕೆಯ ನಾಲ್ಕು ದಿಕ್ಕುಗಳಲ್ಲಿ ಕುಂಡ/ಸ್ಥಂಡಿಲ (?) ಇರಬೇಕೆಂದೂ, ಮೇಲೆ ವಿತಾನವನ್ನು*೫ ರಚಿಸಬೇಕೆಂದೂ ಹೇಳಿದೆ. ನಾಲ್ಕು ತೋರಣಗಳೂ, ಅಷ್ಟಮಂಗಲಗಳಿಂದ ಕೂಡಿದ ನಾಲ್ಕು ದ್ವಾರಗಳೂ ಇರಬೇಕೆಂದು ಇದರಲ್ಲಿದೆ. ಇದರೊಂದಿಗೆ ಮಂಟಪಕ್ಕೆ 'ಉಪಪೀಠ' ವಿರಬೇಕೆಂದು ಹೇಳಿರುವ ಕಾಶ್ಯಪಶಿಲ್ಪವು, ಮಂಟಪದಲ್ಲಿ ಅಲ್ಪನಾಸಿಕಗಳೂ, ಮಧ್ಯೆ ಕೂಟವೂ, ಜಾಲಕೋಷ್ಠಕಗಳೂ ಇರಬೇಕೆಂದಿದೆ. ಗ್ರಂಥಗಳ ಒಟ್ಟಾರೆ ವಿವರಗಳನ್ನು ಗಮನಿಸಿದಾಗ, ಮಂಟಪದ ಮುಂಭಾಗದಲ್ಲಿ ಭದ್ರ/ಮುಖಭದ್ರವಿದ್ದು, ಸುತ್ತ ಆವೃತ ಮಂಟಪವೂ, ಮಧ್ಯೆ ಓಡಾಡಲು 'ಅಲಿಂದ'ವೂ ಇರುವುದಾಗಿ ತಿಳಿದುಬರುತ್ತದೆ. ಅಲ್ಲದೆ, ಮೂಲೆಗಳಲ್ಲಿ ಲಾಂಗುಲಭಿತ್ತಿಯೂ, ಜಾಲಕಗಳೂ, 'ಕುಂಭಲತಾ'ಗಳೂ, ದ್ವಾರದ ಮುಂದೆ ಸೋಪಾನವೂ ಇರಬೇಕು . ಅಧಿಷ್ಠಾನಾದಿಗಳನ್ನು ಮೂಲ ದೇವಾಲಯಕ್ಕೆ ಸಮನಾಗಿ ರಚಿಸಬೇಕೆಂದೂ, ಇದನ್ನು ಪ್ರಾಸಾದದಂತೇ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಅಲಂಕರಿಸಬೇಕೆಂದೂ ಹೇಳುವಲ್ಲಿ ಗ್ರಂಥಗಳು ಮಂಟಪಕ್ಕೆ ನೀಡಿರುವ ಪ್ರಾಶಸ್ತ್ಯವನ್ನು ಗುರುತಿಸಬಹುದು.

ಮಂಟಪಗಳಲ್ಲಿ ಜಾತಿ, ಛಂದ ಇತ್ಯಾದಿ ರೀತಿಗಳಿರುವುದು ಗ್ರಂಥಗಳಿಂದ ತಿಳಿದುಬರುತ್ತದೆ. ಅಂತೆಯೇ, ಮಂಟಪಗಳು ೩ ಮೂಲೆ, ೪ ಮೂಲೆ ೮ ಮೂಲೆ, ೧೬ ಮೂಲೆ, ಅಥವಾ ಅರ್ಧಚಂದ್ರ ಅಥವಾ ವೃತ್ತಾಕಾರದಲ್ಲಿರಬಹುದೆಂದು ಮತ್ಸ್ಯಪುರಾಣವು ಹೇಳಿದೆ; ಚೌಕ ಅಥವಾ ಆಯತಾಕಾರವಾಗಿರಬಹುದೆಂಬ ಸೂಚನೆಯೂ ಗ್ರಂಥಗಳಲ್ಲಿದೆ. ಎರಡು ಮುಖವಿರುವ ಮಂಟಪವನ್ನು ದಂಡಕ ಎಂದೂ, ೩ ಮುಖವಿರುವ ಮಂಟಪವನ್ನು



ನೃತ್ಯಮಂಟಪ-ರೀತಿ (ಮಾನಸಾರ)

'ಸ್ವಸ್ತಿಕ' ಎಂದೂ ೪,೬ ಮತ್ತು ೮ ಮುಖವಿರುವ ಮಂಟಪವನ್ನು ಕ್ರಮವಾಗಿ 'ನಂದ್ಯಾವರ್ತ', 'ಮೌಳಿಕ' ಮತ್ತು 'ಸರ್ವತೋಭದ್ರ' ಎಂದೂ, ಮಾನಸಾರವು ಗುರುತಿಸಿದೆ.

ಮಾನಸಾರದಲ್ಲಿ ಇಂಕ್ಕೂ ಹೆಚ್ಚು ರೀತಿಯ ಮಂಟಪಗಳನ್ನು ಹೇಳಿದ್ದರೂ, ಅವುಗಳ ಆಕಾರವನ್ನು ಎಲ್ಲಿಡೆ ಸ್ಪಷ್ಟವಾಗಿ ಹೇಳಿಲ್ಲ. ಮಯಮತದಲ್ಲಿ ೧೬ ರೀತಿಯ ಚೌಕಾಕಾರದ ಮಂಟಪಗಳನ್ನು ಹೇಳಲಾಗಿದೆ. ಅವುಗಳೆಂದರೆ ಮೇರುಕ, ವಿಜಯ, ಸಿದ್ಧ, ಪದ್ಮಕ, ಭದ್ರಕ, ಶಿವ, ವೇದ, ಅಲಂಕೃತ, ದರ್ಭ, ಕೌಶಿಕ, ಕುಲಧಾರಿಣಿ, ಸುಖಾಂಗ, ಸೌಖ್ಯಕ, ಗರ್ಭ, ಮಾಲ್ಯ ಮತ್ತು ಮಾಲ್ಯಾದ್ಭುತ. ಮಾನಸಾರದಲ್ಲಿ, ಇದೇ ಮೇರುಕವನ್ನು 'ಮೇರುಜ', ಸಿದ್ಧವನ್ನು 'ಸಿದ್ಧಯೋಗ', ಭದ್ರಕವನ್ನು 'ಭದ್ರ', ಮಾಲ್ಯವನ್ನು 'ಮಾಲಿಕಾ', ಮಾಲ್ಯಾದ್ಭುತವನ್ನು 'ಮಾಲ್ಯಾಕೃತಿ' ಎಂದು ಹೇಳಲಾಗಿದೆ. ಇದರಲ್ಲಿ ಹಿಂದೆ ಹೇಳಿದ 'ವೇದ', 'ಅಲಂಕೃತ' ಮತ್ತು 'ಗರ್ಭ'ವನ್ನು ಹೇಳಿಲ್ಲ; ಆದರೆ, ಸಿಚ, ಪುಷ್ಪ, ನೃತ್ತ, ಆಸ್ಥಾನ, ಜಾಲಕ, ದೇವ, ಶಾಲಾ, ಕೃತ ಇವುಗಳನ್ನು ಹೇಳಿದೆ.

ಮಯಮತದಲ್ಲಿ ಹೇಳಿರುವ ಆಯತಾಕಾರದ ೮ ಮಂಟಪಗಳೆಂದರೆ: ಧನ, ಸುಭೂಷಣ, ಆಹಲ್ಯ, ಶೃಗಕ, ಕೋಣ(?), ಖರ್ವಟ, ಶ್ರೀರೂಪ ಮತ್ತು ಮಂಗಲ. ಮಾನಸಾರದಲ್ಲಿ ಈ ಆಹಲ್ಯ, ಶೃಗಕ, ಶ್ರೀರೂಪಗಳನ್ನು ಹೇಳಿಲ್ಲ ಮತ್ತು 'ಧನ'ವನ್ನು 'ಧನದ' ಎಂದಿದೆ. ಇದರೊಂದಿಗೆ, ಧನಾಧಿಪ, ಶೃಂಗಾರ, ಸೋಮಾರ್ಕ, ಕಾಂತ, ಪ್ರಾಗತ ಮತ್ತು ೩ ರೀತಿಯ 'ಭೂಷಣ'ಗಳನ್ನು ಹೇಳಿದೆ. ಹಾಗೆ ನೋಡಿದರೆ, ಮಾನಸಾರದಲ್ಲಿ ಚೌಕಾಕಾರ ಮತ್ತು ಆಯತಾಕಾರದ ಮಂಟಪಗಳನ್ನು ವಿಂಗಡಿಸಿ ಸ್ಪಷ್ಟವಾಗಿ ಹೇಳಿಲ್ಲವಾದರೂ, ಹೆಸರಿನ ಸಾಮ್ಯದಿಂದ ಮಯಮತದ ಹಿನ್ನೆಲೆಯಲ್ಲಿ ಅವುಗಳನ್ನು ಈ ರೀತಿ ಗುರುತಿಸಬಹುದಾಗಿದೆ ( ಆದರೂ, ಅದರಲ್ಲಿ ನೀಡಿರುವ ಚಿತ್ರಗಳ ಹಿನ್ನೆಲೆಯಲ್ಲಿ ನೋಡಿದಾಗ ಕೆಲವು ವ್ಯತ್ಯಾಸಗಳೂ ಕಂಡುಬರುತ್ತವೆ). ಕಾಶ್ಯಪಶಿಲ್ಪದಲ್ಲಿ ೧೪ ರೀತಿಯ ಚೌಕಾಕಾರದ ಮಂಟಪಗಳನ್ನೂ ೧೦ ರೀತಿಯ ಆಯತಾಕಾರದ ಮಂಟಪಗಳನ್ನೂ ಹೇಳಲಾಗಿದೆಯಾದರೂ, ಅವುಗಳನ್ನು ಹೆಸರಿಸಿಲ್ಲ ಮತ್ತು ಯಾವುದೇ ರೀತಿಯ ಮಂಟಪದ ಕಾರ್ಯೋದ್ದೇಶವನ್ನು ತಿಳಿಸಿಲ್ಲ.

ಗ್ರಂಥಗಳು, ಮಂಟಪದಲ್ಲಿರುವ ಕಂಬಗಳ ಸಂಖ್ಯೆಯನ್ನು ಸೂಚಿಸಿ, ಅವುಗಳಿಗೆ ಬೇರೆ ಬೇರೆ ಹೆಸರನ್ನು ನೀಡಿವೆ. ಮಯಮತದಲ್ಲಿ ೪ ಕಂಬಗಳಿಂದ (=ಮೇರುಕ) ೨೩೨ ವರೆಗೆ ವಿವಿಧ ಸಂಖ್ಯೆಯ ಸ್ತಂಭಗಳಿರುವ (=ಮಾಲ್ಯ) ವಿವಿಧ ಮಂಟಪಗಳನ್ನು ಹೇಳಿದ್ದರೆ, ಮಾನಸಾರದಲ್ಲಿ ೧೬ ರಿಂದ ೧೦೮ ಕಂಬಗಳ (=ಭದ್ರ) ಮಂಟಪವನ್ನು ಹೇಳಲಾಗಿದೆ. ಅಲ್ಲದೆ, ಮಾನಸಾರದಲ್ಲಿ 'ದೇವ' ರೀತಿಯ ಮಂಟಪದ ಬಗ್ಗೆ ಹೇಳುವಾಗ

ಅದರಲ್ಲಿ ೧೦೦ರಿಂದ ೧೦೦೦ ಕಂಬದವರೆಗೂ ಇರಬಹುದೆಂದು ಸೂಚಿಸಲಾಗಿದೆ. ಸುಪ್ರಭೇದಾಗಮದಲ್ಲಿ ೪ ರಿಂದ ೧೦೦ ಕಂಬದವರೆಗೂ ಹೇಳಿದ್ದರೆ ಮತ್ಸ್ಯ ಪುರಾಣದಲ್ಲಿ ಕನಿಷ್ಠ ೧೨ ಸ್ತಂಭಗಳ ಉಲ್ಲೇಖವಿದ್ದು, ಎರಡೆರಡು ಸ್ತಂಭಗಳನ್ನು ಹೆಚ್ಚಿಸುತ್ತಾ ಅದಕ್ಕೆ ಬೇರೆ ಬೇರೆ ಹೆಸರನ್ನು ನೀಡಲಾಗಿದೆ. ಕಾಶ್ಯಪಶಿಲ್ಪದಲ್ಲಿ ೧೬ ರಿಂದ ೨೦೦ ಕಂಬದವರೆಗೆ ಹೇಳಿದ್ದರೂ, ಅವುಗಳನ್ನು ಹೆಸರಿಸಿಲ್ಲ.

ಹೀಗೆ ಮಂಟಪಗಳ ವೈವಿಧ್ಯ, ರಚನೆ, ಕಂಬಗಳಸಂಖ್ಯೆ, ಆಕಾರ -ಈ ಎಲ್ಲ ವಿವರಗಳನ್ನು ಮಯಮತ ಮತ್ತು ಮಾನಸಾರ ಗ್ರಂಥಗಳು ನೀಡಿವೆ. *೬ ಇಲ್ಲಿ, ದೇವಾಲಯಗಳಲ್ಲಿ ಪ್ರಮುಖವಾಗಿ ಕಾಣಬರುವ ನೃತ್ಯಮಂಟಪದ ಬಗ್ಗೆ ಮಾತ್ರ ಗಮನಿಸಲಾಗಿದೆ.

ದೇವರಿಗಾಗಿ ಸಂಗೀತ ಹಾಡಿ, ನೃತ್ಯ ಮಾಡಲು ಇರುವ ಮಂಟಪಕ್ಕೆ 'ನೃತ್ಯಮಂಟಪ'ವೆಂದು ಹೆಸರು. ಈ ಉದ್ದೇಶಕ್ಕಾಗಿ 'ನೃತ್ತಮಂಟಪರೀತಿ'ಯ ಮಂಟಪವನ್ನು ರಚಿಸಬೇಕೆಂದು ಮಾನಸಾರವು ಹೇಳಿದೆಯಲ್ಲದೆ, ಇದನ್ನು ದೇವಾಲಯದ ಕೊನೆಯ ಮಂಟಪವೆಂದು ಗುರುತಿಸಿದೆ. *೭ ಈ ಮಂಟಪವನ್ನು ವಾಯುವ್ಯ ಮತ್ತು ಪಶ್ಚಿಮ ದಿಕ್ಕುಗಳ ನಡುವೆ ರಚಿಸಬೇಕೆಂದಿರುವ ಈ ಗ್ರಂಥವು, ಈ ರೀತಿಯ ಮಂಟಪದ ಬಗ್ಗೆ ನೀಡುವ ವಿವರವೆಂದರೆ: ಇದು ಚೌಕ ಅಥವಾ ಆಯತಾಕಾರವಾಗಿದ್ದು, ಮಧ್ಯ 'ಅಂಗಣ'ವಿದ್ದು, ಮಂಟಪವಿರಬೇಕು; ವಾತಾಯನದಿಂದ ಕೂಡಿದ್ದು, ಅನುಕೂಲವಾದ ದಿಕ್ಕಿನಲ್ಲಿ ದ್ವಾರವಿರಬೇಕು; ಮಧ್ಯೆ ಪ್ರಚ್ಛಾದನ/ಪ್ರಪಾಂಗವು ಇರಬೇಕು; ಸುತ್ತ ಓಡಾಡಲು 'ಅಲಿಂದ'ವು ಇರಬೇಕು. ಮತ್ತು ಹೊರಗೆ ಆವೃತ ಮಂಟಪ ವಿರಬೇಕು; ಸೋಪಾನಯುಕ್ತವಾಗಿರಬೇಕು. ಈ ಆಧಾರದಿಂದ ಪಿ.ಕೆ. ಆಚಾರ್ಯರವರು ನೀಡಿರುವ ಚಿತ್ರವನ್ನು (ಸಂ.೫) ಗಮನಿಸಿದರೆ, ಈ ಮಂಟಪದಲ್ಲಿ ಒಟ್ಟು ೪೮ ಕಂಬಗಳಿದ್ದು, ವೇದಿಕೆಯ ಮೇಲೆ ೪ ಪ್ರಧಾನ ಕಂಬಗಳೂ, ಅದರ ಸುತ್ತ ಪ್ರತ್ಯೇಕವಾಗಿ ೧೨ ಕಂಬಗಳೂ ಇದ್ದು, ಹೊರಗೆ ೩೨ ಕಂಬಗಳಿರಬೇಕು, ಎಂಬುದೂ ತಿಳಿದುಬರುತ್ತದೆ. ಇದು 'ನೃತ್ತಮಂಟಪರೀತಿ'ಯ ರಚನಾಕ್ರಮವಾಗಿದ್ದು, ಈ ರೀತಿಯ ದನ್ನು ನೃತ್ತಮಂಟಪದ ರಚನೆಗೆ ಬಳಸಬಹುದಾಗಿದೆ. ಇದನ್ನು 'ನೃತ್ತಶ್ರವಣಯೋಗ್ಯ'ವೆಂದು ಹೇಳಿ, ನೃತ್ಯ ಮತ್ತು ಸಂಗೀತ ಕೇಳುವ ಜನರಿಗಾಗಿ ರಚಿಸಬಹುದೆಂದು ತಿಳಿಸಿದೆ. *೮

ಹಂಪೆಯ ವಿಠಲ ದೇವಾಲಯದ ಆವರಣದಲ್ಲಿ ಆಗ್ನೇಯ ದಿಕ್ಕಿನಲ್ಲಿರುವ ಮಂಟಪವನ್ನು ಇಲ್ಲಿ ಗಮನಿಸಬಹುದು. ಈ ಮಂಟಪವು ಪೂರ್ಣ ಚೌಕಾಕಾರವಾಗಿದ್ದರೂ, ಭದ್ರ-ಕರ್ಣಗಳ ಹಿಂಚಾಚು-ಮುಂಚಾಚುಗಳಿಂದ ಕೂಡಿದ್ದು, ಅದಕ್ಕೆ ತಕ್ಕಂತೆ ಕಂಬಗಳನ್ನು ನಿಲ್ಲಿಸಲಾಗಿದೆ. ಮೂರು ಕಡೆ ಪ್ರವೇಶವಿದ್ದು, ಸೋಪಾನಯುಕ್ತವಾಗಿದೆ; ಮಧ್ಯದ 'ಅಂಗಣ'ವು ಕಂಬರಹಿತ ವಾಗಿದ್ದು, ವೇದಿಕೆಯ ಮೇಲೆ ಸುತ್ತ ೧೨ ಕಂಬಗಳಿವೆ. ಅದರ ಸುತ್ತ ಇದಕ್ಕೆ ಹೊಂದಿಕೊಂಡಂತೆ ೨೦ ಕಂಬಗಳಿವೆ; ನಾಲ್ಕು ಕಡೆಯಲ್ಲೂ



ನೃತ್ಯ ಮಂಟಪ (ವಿಠಲ ದೇವಾಲಯ)

ಮುಂಚಾಚಿದ ಭದ್ರಕ್ಕೆ ಸೇರಿದಂತೆ ೪-೪ ಕಂಬಗಳು ಸಾಲಾಗಿವೆ; ಸುತ್ತ 'ಅಲಿಂದ'ವೂ ಇದೆ. ಈ ಮಂಟಪದ ರಚನೆಯು, ಮಾನಸಾರವು ಹೇಳುವ 'ನೃತ್ಯಮಂಟಪರೀತಿ'ಯನ್ನು ಕೆಲಮಟ್ಟಿಗೆ ಹೋಲುತ್ತಿರುವುದು ಕಂಡುಬರುತ್ತದೆ. ವ್ಯತ್ಯಾಸವೆಂದರೆ, ಮಾನಸಾರವು ಇದನ್ನು ಕೊನೆಯ ಮಂಟಪವೆಂದು ಗುರುತಿಸಿದ್ದರೂ, ಅಲ್ಲಿನ ಮಂಟಪಗಳ ತಿರ್ಯಙ್ಮುಖ ರಚನೆಯಲ್ಲಿ ಇದು ನೇರವಾಗಿರದೆ ಪ್ರತ್ಯೇಕವಾಗಿದ್ದು, ಕೊನೆಯ ಮಂಟಪಗಳ ಸಾಲಿಗೆ ಮಾತ್ರ ಸೇರಬಹುದಾಗಿದೆ. ಗ್ರಂಥದಲ್ಲಿ ಹೇಳಿರುವಂತೆ ಇದರಲ್ಲಿ ಮಧ್ಯದ ಕಂಬಗಳಿಲ್ಲ. ಆದರೂ ಒಟ್ಟು ೪೮ ಕಂಬಗಳೇ ಇವೆ. ಸುತ್ತ ವಾತಾಯನವಿಲ್ಲ. ಗ್ರಂಥದಲ್ಲಿರುವಂತೆ ಮೂಲತಃ ಚೌಕಾಕಾರವಾಗಿದ್ದರೂ ನೇರವಾಗಿರದೆ ಭದ್ರ-ಕರ್ಣಗಳ ಹಿಂಚಾಚು-ಮುಂಚಾಚುಗಳನ್ನು ಹೊಂದಿದೆ. ಬಹುಶಃ ನೃತ್ಯವೀಕ್ಷಣೆಯ ಅನುಕೂಲದ ದೃಷ್ಟಿಯಿಂದ ಈ ವ್ಯತ್ಯಾಸಗಳನ್ನು ಮಾಡಿರಬೇಕು. ಒಟ್ಟಾರೆ, ರಚನಾರೀತಿ, ಉದ್ದೇಶ-ಎರಡೂ ದೃಷ್ಟಿಯಿಂದ ಇದು ನೃತ್ತಮಂಟಪವೇ ಆಗಿದ್ದು, ಈಗಲೂ ಅದನ್ನು **ಸಂಗೀತಮಂಟಪ** ಎಂದೇ ಕರೆಯುತ್ತಿರುವುದು ಗಮನಾರ್ಹವಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, 'ನೃತ್ತಮಂಟಪರೀತಿ' ರಚನೆಯ ಮಧ್ಯದ ರಚನೆಯು ದೇವಾಲಯಗಳಲ್ಲಿ ಅಂತರಾಳದ ನಂತರ ಸಾಮಾನ್ಯವಾಗಿರುವ 'ನವರಂಗ' ರಚನೆಯನ್ನು ಹೋಲುತ್ತಿರು ವುದು. ಮಧ್ಯೆ ವೇದಿಕೆಯ ಮೇಲೆ ನಾಲ್ಕು ಪ್ರಧಾನ ಕಂಬಗಳೂ,

ಸುತ್ತ ಭಿತ್ತಿಗೆ ಸೇರಿದಂತೆ ೧೨ ಕಂಬಗಳಿರುವ ನವರಂಗದ ರಚನೆಯನ್ನು ಗಮನಿಸಿದರೆ, ರಚನಾತ್ಮಕ ದೃಷ್ಟಿಯಿಂದ ನೃತ್ತಮಂಟಪದ ಸಂಕ್ಷಿಪ್ತರೂಪವೇ 'ನವರಂಗ' ಎನ್ನುವಂತಿದೆ. (ಈ ನವರಂಗದ ಮಧ್ಯದಲ್ಲಿ ವೇದಿಕೆಯ ಮೇಲೆ ನಾಲ್ಕು ಪ್ರಧಾನ ಕಂಬಗಳಿರುವ ರಚನೆಯನ್ನು ಮಯ ಮತವು 'ರಂಗ' ಎಂದು ಗುರುತಿಸಿರುವುದನ್ನೂ ಇಲ್ಲಿ ನೆನೆಯಬಹುದು). ನವರಂಗದ ಇಂತಹ ರಚನೆಯೇ ಅವಶ್ಯಕತೆಗನುಗುಣವಾಗಿ ವಿಸ್ತೃತಗೊಂಡು, ಕಾಲಾನುಕ್ರಮದಲ್ಲಿ ಸಂಗೀತ ಮತ್ತು ನೃತ್ಯಕ್ಕೆಂದು ಪ್ರತ್ಯೇಕ ಮಂಟಪದ ರಚನೆಗೆ ಅನುವು ಮಾಡಿಕೊಟ್ಟಿದೆಯೆಂದು ಇಲ್ಲಿ ಹೇಳಬಹುದಾಗಿದೆ.

ಹೀಗೆ, ಒಂದು ಕಾರ್ಯೋದ್ದೇಶದಿಂದ ರಚಿಸಲ್ಪಟ್ಟ ಮಂಟಪಗಳ ಹೆಸರುಗಳೇ ಅವು ಯಾವ ಬಗೆಯ ಮಂಟಪಗಳೆಂದು ಹೇಳುವುವಾದರೂ, ವಾಸ್ತುಶಿಲ್ಪಶಾಸ್ತ್ರದ ಹಿನ್ನೆಲೆಯಲ್ಲಿ ನೋಡಿದಾಗ, ಅವುಗಳ ಉದ್ದೇಶ ಮತ್ತು ರಚನಾತ್ಮಕ ವಿವರಗಳು ಹೆಚ್ಚು ಸ್ಪಷ್ಟವಾಗುತ್ತವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಮಂಟಪಗಳ ಬಗ್ಗೆ ವಿವರಗಳನ್ನು, ಮಾನಸಾರ (=ನ)ದ ೩೪ನೇ ಅಧ್ಯಾಯ, ಮಯಮತದ ೨೫ನೇ ಅಧ್ಯಾಯ; ರೌರವಾಗಮದ ಕ್ರಿಯಾಪಾದ-೪೦ನೇ ಅಧ್ಯಾಯ, ಅಜಿತಾಗಮದ ೧೫ನೇ ಅಧ್ಯಾಯ, ಕಾಮಿಕಾಗಮದ ೭೦ನೇ ಅಧ್ಯಾಯ, ಕಾಶ್ಯಪಶಿಲ್ಪದ ೪೪ನೇ ಅಧ್ಯಾಯ, ಸುಪ್ರಭೇದಾಗಮ ಮತ್ತು ಮತ್ಸ್ಯಪುರಾಣ (ಉದ್ಧೃತ-ಪಿಕೆ ಆಚಾರ್ಯ-ಸಂ VII ). ಗಳಲ್ಲಿ ನೋಡಬಹುದು.

*೨. 'ಮಂಡಂ ಸುಭೂಷಣಂ ತಂ ಪಾತೀತಿ ಮಂಡಪಮಿಷ್ಯತೆ (ಮಯ-೨೫.೨೬೨)

*೩. 'ಸ್ವಯಂಭುನಾಥದೇವರ ವಿಕ್ರಮೇಶ್ವರ ಗುತ್ತೇಶ್ವರ ದೇವತಾ ಪ್ರತಿಷ್ಠಾತಿಶಯ ತ್ರಿಕೂಟ ಮಂಟಪಂ' (ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್--VI. ೩೯-೧೧೮೮)

*೪. 'ವೇದಿಕೋಚ್ಛ್ರಂತು ಭಾಗೇನ ಮಧ್ಯೇ ರಂಗಂ ಪ್ರಯೋಜಯೇತ್'- ಮಂಟಪದೊಳಗಿರುವ ಮಂಟಪದಂತಹ ಈ ರಚನೆಯನ್ನು 'ರಂಗ' ಎಂದು ಕಾಮಿಕಾಗಮವೂ ಗುರುತಿಸಿದೆ (೫೦.೯೪).

*೫. ಇದನ್ನು, ಚೌಕಾಕಾರವಾಗಿದ್ದಾಗ 'ಊರ್ಧ್ವಕೂಟ', ಆಯತಾಕಾರವಾಗಿದ್ದಾಗ 'ಊರ್ಧ್ವಶಾಲಾ' ಎಂದು ಮಯಮತವು ಹೇಳಿದೆ (ಅ.೨೫ ಅಡಿ ಟಿಪ್ಪಣಿ-೨೪).

*೬. ಮಾನಸಾರದಲ್ಲಿ ಮಂಟಪಗಳ ರಚನಾಸ್ವರೂಪ ಮತ್ತು ಅವುಗಳ ಉದ್ದೇಶದ ಬಗ್ಗೆ ವಿವರಿಸುವಾಗ, ಅವುಗಳಿಗೆ ಹೊಂದಾಣಿಕೆಯಾಗಬಹುದಾದ ಕಂಬಗಳ ಸಂಖ್ಯೆಯನ್ನು ಬೇರೆಡೆ ಹೇಳಿ, ಅಲ್ಲಿ ಅದರ ಹೆಸರನ್ನು ಹೇಳಿಲ್ಲದಿರುವುದರಿಂದ ವಿಷಯವು ಪೂರ್ಣ ಸ್ಪಷ್ಟವಾಗುವುದಿಲ್ಲ.

*೭. ಇದನ್ನು ಕೊನೆಯ ಮಂಟಪವೆಂದು ಕಾಶ್ಯಪಶಿಲ್ಪ ಮುಂತಾದ ಗ್ರಂಥಗಳೂ ಗುರುತಿಸಿವೆ (ಕಾಶ್ಯಪ ೪೪.೫; ಕಾಮಿ-೭೦.೧೫).

*೮. ನೃತ್ಯಾರ್ಥವಾಗಿ 'ಭದ್ರಕರೀತಿ'ಯ ಮಂಟಪವನ್ನು ಕಟ್ಟಬೇಕೆಂದು ಮಯಮತವು ಹೇಳಿದ್ದು, ಅದರ ರಚನಾಕ್ರಮವನ್ನು ಈ ರೀತಿ ವಿವರಿಸಿದೆ: ಇದು ಚೌಕಾಕಾರವಾಗಿದ್ದು, ಮಧ್ಯೆ ಕೂಟವಿರಬೇಕು(?); ಸುತ್ತ (ಆವೃತ) ಮಂಟಪವಿರಬೇಕು; ೩೨ ಕಂಬಗಳೂ, ೨೪ ಅಲ್ಪನಾಸಿಗಳೂ, ೮ ಪಂಜರಗಳೂ, ಭಿತ್ತಿಯಲ್ಲಿ 'ಕುಂಭಲತಾ'ಗಳೂ ಇರಬೇಕು; ೪ ದಿಕ್ಕುಗಳಲ್ಲಿ ೪ ದ್ವಾರಗಳಲ್ಲಿ ಮೂಲೆಯಲ್ಲಿ ಲಾಂಗುಲಭಿತ್ತಿಯಿರಬೇಕು; ಇದು ಪ್ರಧಾನ ದೇವಾಲಯದ ಸಮತಟ್ಟಿನಲ್ಲಿರಬಹುದು, ಇಲ್ಲವೇ ಸ್ವಲ್ಪ ಕೆಳಗಿರಬಹುದು. ಇದು 'ಭದ್ರಕರೀತಿ'ಯಾಗಿದ್ದು, ಇದನ್ನು ಈ ಗ್ರಂಥದ ಪ್ರಕಾರ ನೃತ್ಯಕ್ಕಾಗಿ ಮತ್ತು ದೇವತಾಬಿಂಬಗಳ ಸ್ನಪನಾರ್ಥವಾಗಿ ರಚಿಸಬಹುದಾಗಿದೆ.


ಮಯಮತ: (ಸಂ) ಬ್ರೂನೋ ಡಗೆನ್ಸ್, ಪಾಂಡಿಚೆರಿ, ೧೯೭೦

ಮಾನಸಾರ ಸೀರೀಸ್-ಸಂ. III, IV, V ಮತ್ತು VII : (ಸಂ) ಆಚಾರ್ಯ, ಪಿ.ಕೆ. ನವದೆಹಲಿ, ೧೯೭೮, ೧೯೮೦, ೧೯೮೦ ಮತ್ತು ೧೯೭೮

ರೌರವಾಗಮ: (ಸಂ) ಭಟ್, ಎನ್.ಆರ್, ಪಾಂಡಿಚೆರಿ,-೧೯೭೨, ಅಜಿತಾಗಮ, ಪಾಂಡಿಚೆರಿ, ೧೯೭೪

ಕಾಶ್ಯಪಶಿಲ್ಪ : (ಸಂ) ಕೃಷ್ಣರಾಯ ಡಿ. ಮತ್ತು ವಿನಾಯಕ ಗಣೇಶಆಪ್ಟೆ, ೧೯೨೬

ಕಾಮಿಕಾಗಮ (ಪೂರ್ವಭಾಗ) : (ಸಂ) ಸ್ವಾಮಿನಾಥ ಶಿವಾಚಾರ್ಯ, ಸಿ. ಮದ್ರಾಸು, ೧೯೭೫

ವಸುಂಧರಾ ಫಿಲಿಯೋಜ : ಅಳಿದುಳಿದ ಹಂಪೆ

Vasundhara Filliozat and Pierre-sylvain Filliozat: **Hampi-Vijayanagar The temple of Vithala**, New Delhi,1988

Bruno Dagens (Tr) : **Mayamata: An Indian Treatise on Housing Architecture and Iconography**, New Delhi, 1985

ಹರಿಹರ ಶ್ರೀನಿವಾಸರಾವ್ *

# ನಾರಣಪ್ಪನು ಕಂಡ ಅರಗಿನ ಮನೆ : ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ

ಕುಮಾರವ್ಯಾಸ ಭಾರತ ಬೃಹತ್ತಿನಲ್ಲಿ, ಮಹತ್ತಿನಲ್ಲಿ ತೂಗುವ ಕನ್ನಡ ಭಾರತ. ಆ ಕಾವ್ಯ ಊರ್ಧ್ವಗಾಮಿಯಾಗಿರುವಂತೆಯೇ ಮರ್ತ್ಯಕ್ಕೂ ನಿಷ್ಠವಾಗಿರುವುದನ್ನು ಆತನೇ ಹೇಳುವಂತೆ 'ಕೃತ್ರಿಮ ರಚನೆಯಲಿ' ಮಾಡಿದ್ದ ಅರಗಿನ ಮನೆಯ ಪ್ರಕರಣದಲ್ಲಿ ಕಾಣಬಹುದು. (ಆದಿಪರ್ವ ೮ನೇ ಸಂಧಿ).

ವಾಸ್ತುಶಿಲ್ಪದ ದೃಷ್ಟಿಯಿಂದ ವ್ಯಾಸರಲ್ಲಿ ಮತ್ತು ಪಂಪ ಭಾರತದಲ್ಲಿರುವ ಫ಼ಿವರಗಳಿಗಿಂತ ಹೆಚ್ಚಿನ ವಿವರಗಳು ಕುಮಾರವ್ಯಾಸನಲ್ಲಿವೆ ಎನ್ನಲು ಆತ ಬಳಸಿರುವ ೧೨ ಷಟ್ಪದಿ ಪದ್ಯಗಳಲ್ಲಿಯ ೨೬ಕ್ಕೂ ಹೆಚ್ಚು ಪಾರಿಭಾಷಿಕ ಶಬ್ದಗಳಲ್ಲಿ ಕಾಣುತ್ತೇವೆ.

'ನಸುದೀಪತಾಗಿದೊಡೇಕ ರೂಪವಹ ರಾಜ ಭವನ'ದ ನಿರ್ಮಾಣ, ಆಯ ವ್ಯಯ ತಾರಾದಿಗಳ ರಾಶಿ ಗ್ರಹಬಲ ವಿಪರೀತ ಯೋಗದಲ್ಲಿ ಕಟ್ಟಲು ಪಾಪಿ, ಕಾಪುರುಷನೇ ಆದ ಪುರೋಚನನನ್ನೇ ಆರಿಸುತ್ತಾನೆ ಕುರುಪತಿ ದುರ್ಯೋಧನ.

*ಆ ಪುರೋಚನನೆಂಬುವನು ಬಲು*
*ಪಾಪಕರ್ಮನು ಕುರುಪತಿಗೆ ಬಲಿ*
*ಕಾಪು ಕಾಂತರದಿಂದ ಬಂದನು ವಾರಣಾವತಿಗೆ*
*ಆ ಪುರದ ಜನವರಿಯದಂತಿರೆ*
*ಕಾಪುರುಷನಳವಡಿಸಿದನು ನಸು*
*ದೀಪ ತಾಗಿದೊಡೇಕ ರೂಪಹ ರಾಜ ಭವನವನು ॥ ೬೭ ॥*

'ವಿಪರೀತ ಯೋಗ'ದಲ್ಲಿ ಬರುವ ತಾರಾದಿಗಳ ಬಗ್ಗೆ ಚಾವುಂಡರಾಯನ ಲೋಕೋಪಕಾರ ಹೀಗೆ ಹೇಳುತ್ತದೆ: ಭರಣಿ, ಸ್ವಾತಿ, ಅನುರಾಧ, ಜ್ಯೇಷ್ಠ, ಪೂರ್ವಭಾದ್ರ, ಉತ್ತರಾಭಾದ್ರ – ಈ ನಕ್ಷತ್ರಗಳಲ್ಲಿ ಶನಿ ಇರುವ ಶನಿವಾರ ಗೃಹ ನಿರ್ಮಾಣಕ್ಕೆ ಸೂಕ್ತವಲ್ಲ. ಇಂಥ ವೇಳೆಯಲ್ಲಿ ಗೃಹ ಹಾಗೂ ದೇವಾಲಯ ನಿರ್ಮಾಣ ಅಥವಾ ಪ್ರತಿಷ್ಠಾಪನೆಯಾದರೆ 'ಅಗ್ನಿಬಾಧೆ' ಮತ್ತು ಇತರ ವಿಪತ್ತುಗಳುಂಟಾಗುತ್ತವೆ. ಇದನ್ನು ವರಾಹಮಿಹಿರನೂ ಪುಷ್ಟೀಕರಿಸುತ್ತಾನೆ.

''ಆಯವ್ಯಯ''ಗಳ ಬಗ್ಗೆ ಚಾವುಂಡರಾಯನ ಅಭಿಪ್ರಾಯ ಹೀಗಿದೆ : *ಗೃಹ ನಿರ್ಮಾಣದ ಸ್ಥಳ ಆಯಾಕಾರದಲ್ಲಿರಬೇಕು. ಗೃಹನಿವೇಶನದ ಎರಡೂ ಪಾರ್ಶ್ವಗಳ ಉದ್ದ ಅಗಲಗಳನ್ನು ಮೇಳ ಕೋಲಿನಿಂದ ಅಳತೆ ಮಾಡಿ ಗುಣಿಸಬೇಕು. ಆಗ ಬರುವ ಮೊತ್ತವು ''ಪದ''ವೆನಿಸಿಕೊಳ್ಳುವುದು. ಉದ್ದ × ಅಗಲ = ಪದ. ಆ ಪದವನ್ನು ಕ್ರಮವಾಗಿ ೩,೯,೭,೮,೪,೯ರಿಂದ ಗುಣಾಕಾರ ಮಾಡಬೇಕು. ಇದರಿಂದ ಬಂದ ಮೊತ್ತವನ್ನು ಬಳಿಕ ಅದೇ ೮,೮,೮,೨೭,೧೩,೩೦,೭ರ ಕ್ರಮದಲ್ಲಿ ಭಾಗಾಕಾರ ಮಾಡಬೇಕು. ಆಗ ಉಳಿವ ಶೇಷದಿಂದ ಧ್ವಜಾದಿ ಆಯ, ಧನ, ಋಣ, ಆಯುಸ್ಸು, ನಕ್ಷತ್ರ, ರಾಶಿ, ತಿಥಿ, ವಾರಗಳನ್ನು ಅನುಕ್ರಮವಾಗಿ ತಿಳಿದುಕೊಳ್ಳಬೇಕು.*

ಒಂದೇ ಷಟ್ಪದಿಯ ೧೦ ಪಾರಿಭಾಷಿಕ ಶಬ್ದಗಳಲ್ಲಿ ಅರಗಿನಮನೆ ನಿರ್ಮಿಸಲು ಉಪಯೋಗಿಸಿದ ವಸ್ತುಗಳ ಬಗ್ಗೆಯೂ ಹೀಗೆ ತಿಳಿಸುತ್ತಾನೆ.

*ಅರಗಿನಲಿ ಭಿತ್ತಿಗಳ ನವಸ*
*ಜ್ಜರಸ ಗುಡ ಮಿಶ್ರದಲಿ ನೆಲೆಯು*
*ಪ್ಪರಿಗೆಗಳ ನವರಲಿ ಕವಾಟಸ್ತಂಭ ವೇದಿಗಳ*
*ವಿರಚಿಸಿದ ನವಸೌಧ ಭದ್ರಾ*
*ಸ್ತರಣ ನಂದ್ಯಾವರ್ತದಲಿ ಪರಿ*
*ಪರಿಯ ಬಿನ್ನಾಣದೊಳಗರಗಿನ ಮನೆಯ ಮಾಡಿಸಿದ ॥ ೬೯ ॥*

ವಾಸ್ತು ಪುರುಷನ ತ್ಯಾಜ್ಯ ಸ್ಥಾನಗಳಲ್ಲಿ 'ಕಂಭ' ಪ್ರತಿಷ್ಠೆ ಮಾಡಿದರೆ ಆಗುವ ಫಲ ವಿವೇಚನೆಯ ವಿವರದ ಬಗ್ಗೆ ವಿದ್ಯಾಮಾಧವೀಯ ಗ್ರಂಥದಲ್ಲಿ. :

ಪಾದೇ ಯದ್ಯರ್ಥೆ ನಾಶಃ ಶಿರಶಿಚ ಮರಣಂ ತಸ್ಯ ಪೃಷ್ಠೇ ವಿಪತ್ತಿ ವಕ್ಷ
ಸ್ಯೂತಾಚ ನಾಶ ಶ್ಶುಭಫಲಮ್ ಉದರೇ ಸ್ತಂಭಮಾದ್ಯಂ ವಿಪದ್ಯತ್

---

* ೭೫/೧೫, ಹೊಸ ವಿಕಾಸ್ ಶಾಲೆ ಎದುರು, ೨ನೇ ಅಡ್ಡರಸ್ತೆ, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫.

-ಎಂದರೆ ವಾಸ್ತುಪುರುಷನ ಪಾದಸ್ಥಾನದಲ್ಲಿ ಆದ್ಯ ಶಿಲಾಸ್ತಂಭ ಸ್ಥಾಪಿಸಿದರೆ ಧನ ಹಾನಿ; ಶಿರ ಸ್ಥಾನದಲ್ಲಿ ಸ್ಥಾಪಿಸಿದರೆ ಮರಣ; ಪುಷ್ಟಭಾಗದಲ್ಲಿ ಸ್ಥಾಪಿಸಿದರೆ ರೋಗಾದಿ ಪೀಡೆ; ಎದೆ ಮತ್ತು ತೊಡೆಯ ಸ್ಥಾನದಲ್ಲಿ ಸ್ಥಾಪಿಸಿದರೆ ಸ್ವಜನ ಧನಾದಿ ನಾಶ ಸೂಚಕವೆಂದಿದೆ.

ನವಸೌಧ: ಹಿಂದೂ ಆರ್ಕಿಟೆಕ್ಚರ್ ಪುಟ ೧೧೬ (ಪಿ. ಕೆ. ಆಚಾರ್ಯ)ರಲ್ಲಿ ಒಂಬತ್ತು ಮಹಡಿಗಳಿರುವ ಮನೆಗಳಲ್ಲಿ ೨ ರೀತಿಯ ಕಟ್ಟಡಗಳನ್ನೂ ಹಾಗೂ ಸೋಪಾನಗಳ (staircases) ವಿಸ್ತಾರವಾದ ವಿವರಣೆಗಳನ್ನೂ ಹೇಳಲಾಗಿದ್ದು ಅವುಗಳ ಪ್ರಭೇದಗಳಿಂತಿವೆ :

**೧. ಸೌರಕಾಂತ ೨. ರೌರವ ೩. ಚಂದಿತ ೪. ಭೂಷಣ**
**೫. ವಿವೃತ ೬. ಸುಪ್ರತಿಕಾಂತ ಮತ್ತು ೭. ವಿಶ್ವಕಾಂತ**

ಇವುಗಳಲ್ಲಿಯ ಮೊದಲ ೪ ರೀತಿಯ ಕಟ್ಟಡಗಳು ನವಸೌಧಗಳಾಗಿದ್ದರೂ ಅವು ಸಣ್ಣವು. ವಿವೃತ ಮತ್ತು ಸುಪ್ರತಿಕಾಂತಗಳು ಮಧ್ಯಮ ದರ್ಜೆಯವು ಮತ್ತು ಕೊನೆಯದಾದ ವಿಶ್ವಕಾಂತವು ಇವೆಲ್ಲಕ್ಕಿಂತ ದೊಡ್ಡ ಕಟ್ಟಡವಾಗಿದೆ.

ನಂದ್ಯಾವರ್ತ ವೆನ್ನುವ ಪಾರಿಭಾಷಿಕ ಶಬ್ದಕ್ಕೆ 'ಮಾನಸಾರ' (ಪು. ೧೧೫, ೧೪೪) ಗ್ರಂಥದಲ್ಲಿಯ ವಿವರ:

**೬ ಮಹಡಿಗಳುಳ್ಳ ಕಟ್ಟಡ, ಒಂದು ರೀತಿಯ ಶಾಲ.**

ಸುಪ್ರಭೇದಾಗಮದಲ್ಲಿ (ಪು. ೧೯೫) ನಂದ್ಯಾವರ್ತವನ್ನು ಒಂದು ರೀತಿಯ ಮಂಟಪವೆಂದೂ, ಜಾಮಿತಿಯ ವಿನ್ಯಾಸವುಳ್ಳ ಜಾಲಂಧರವೆಂದೂ ಗುರುತಿಸಿದೆ.

ಹಿಂದೂ ಆರ್ಕಿಟೆಕ್ಚರ್ ಇಂಡಿಯಾ ಅಂಡ್ ಅಬ್ರಾಡ್ (ಪು. ೧೧೫)ನಲ್ಲಿ ೬ ಮಹಡಿಯ ಸೌಧಗಳಲ್ಲಿ ೧೩ ಮಾದರಿಯ ಪ್ರಭೇದಗಳನ್ನು ಹೇಳಿದ್ದು, ಅವುಗಳಲ್ಲಿ 'ನಂದ್ಯಾವರ್ತವೂ' ಒಂದು ವಿಧವಾದ ವಿನ್ಯಾಸದ ಕಟ್ಟಡವಾಗಿದೆ.

**೧. ಪದ್ಮಕಾಂತ ೨. ಕಾಂತಾರ ೩. ಸುಂದರ ೪. ಉಪಕಾಂತ ೫. ಕಮಲ ಅಥವಾ ಕಮಲೇಕ್ಷ ೬. ರತ್ನಕಾಂತ ೭. ವಿಪುಲಕಾಂತ ೮. ಜ್ಯೋತಿಷ್ಕಾಂತ ೯. ಸರೋರುಹ ೧೦. ವಿಪುಲಕೃತಿ ೧೧. ಸ್ವಸ್ತಿಕಾಂತ ಹಾಗೂ ೧೨. ಇಕ್ಷುಕಾಂತ.**

ಈ ಮೇಲೆ ಹೇಳಿದ ೨ ರೀತಿಯ ಉಪ್ಪರಿಗೆ ಮನೆಗಳಲ್ಲಿ ನವಸೌಧ ಎಂದರೆ ೯ ಮಹಡಿ ಮತ್ತು 'ನಂದ್ಯಾವರ್ತ' ೬ ಮಹಡಿ ಕಟ್ಟಡಗಳೆಂದು ಹೇಳುತ್ತಾ ಇಂಥ ಪರಿಪರಿಯ ಬಿನ್ನಾಣದ ಅರಮನೆಗಳು ರಾಜಭವನದ ಸುತ್ತಲೂ ಇದ್ದು ಅದರಲ್ಲಿ ಮಂತ್ರಿ ಸಾಮಂತರು ವಾಸಿಸುತ್ತಿದ್ದ ಕಟ್ಟಡಗಳ ಸಮುಚ್ಚಯವೇ ಆಗಿದ್ದಿತೆನ್ನಲು ೭ನೇ ಪದ್ಯದಲ್ಲಿ ಸುಳಿವು ಸಿಗುತ್ತದೆ:

*ಹಿರಿಯ ಭವನದ ಸುತ್ತುವಳರಿಯದ*
*ಮರುಹಿನಲಿ ಮನಮನಗಳಾ ಮಂ*
*ದಿರಕೆ ನಿಕಾಯಕೆ ಬಾಗಿಲೊಂದರ ದ್ವಾರ ದೇಶದಲಿ*
*ಇರವು ತನ್ನದು ಬಾಗಿಲಿಕ್ಕಿದು*
*ಹೊರಗೆ ಮುದ್ರಿಸಿ ಕಿಚ್ಚ ಚುಚ್ಚುವ*
*ಪರುಠಣೆಯಲಿ ಖಳ ಪುರೋಚನನಂದು ನಿರ್ಮಿಸಿದ*

ಪಾಂಡವರು ಸಜ್ಜೆಮನೆಯಿಂದ ಗುಪ್ತದ್ವಾರದ ಮೂಲಕ ಹೊರಬೀಳುವುದನ್ನೂ ವಿವರಿಸುವ ರೀತಿ ಇದು:

*ಜನಪ ಕೇಳೈ ವಿದುರನಟ್ಟಿದ*
*ಖನಕ ಬಂದನು ಯಿವರ ಸಜ್ಜೆಯ*
*ಮನೆಯಲತಿ ಗುಪ್ತದಲಿ ನೆಲದೊಳು ಸವೆಸಿದನು ಪಥವ*
*ಅನುದಿನದೊಳಾ ಬಾಹಿರನು ಕೆ*
*ಚ್ಚಿನಲಿ ಚುಚ್ಚುವ ಸಂದುಗಟ್ಟನು*
*ನೆನೆವುತಿರ್ದನು ಖಳಪುರೋಚನನೊಡೆಯನಾಜ್ಞೆಯಲಿ*

'ಹೀಗೆ ಪುರೋಚನನಿಗೆ ತಿಳಿಯದಂತೆಯೇ' ಕಿಚ್ಚನೊಟ್ಟಿಸೆ ಪವನಸುತ ಸಹಿತಿವರು ಹಾಯ್ದರು ಬಲದ ಮಾರ್ಗದಲಿ'. ಆದ್ದರಿಂದಲೇ ಅಷ್ಟು ವೈಭವ ಪೂರ್ಣವಾಗಿ ನಿರ್ಮಿಸಿದ್ದ ಲಕ್ಷ್ಯಾಗೃಹವು 'ನಸು ದೀಪ ತಾಗಿದೋಡೇಕ ರೂಪ'ವಾಗುವಂಥ ರಾಜ ಭವನ ಎಂದಿದ್ದಾನೆ ನಾರಣಪ್ಪ.

## ಮುಖ್ಯಾಂಶಗಳು

ಈ ಅರಗಿನ ಮನೆಯ ಪ್ರಕರಣದಲ್ಲಿ ಕವಿ ನಾರಣಪ್ಪನು ತನಗಿದ್ದ ಜ್ಯೋತಿಷ್ಯಶಾಸ್ತ್ರ ಕುರಿತ, ಸೂಕ್ಷ್ಮಜ್ಞಾನವನ್ನನುಸರಿಸಿ, ಗೃಹದ ನಿರ್ಮಿತಿಗೆ ಬೇಕಾದ ಸಾಮಾನುಗಳು, ರಾಜಭವನದ ವಾಸ್ತುಶಿಲ್ಪದ ವಿವರಗಳನ್ನು ಹೀಗೆ ಪಟ್ಟಿಮಾಡಿದ್ದಾನೆ :

ಅರಮನೆಯನ್ನು ಅಪ ಆಯವ್ಯಯ ಮತ್ತು ಗ್ರಹ, ರಾಶಿ, ನಕ್ಷತ್ರಗಳ ''ವಿಪರೀತಯೋಗ''ದಲ್ಲೇ ಕಟ್ಟಬೇಕೆಂದು ದುರ್ಯೋಧನನು ಆಜ್ಞೆಮಾಡುವುದು ಪಾಪಕರ್ಮ ನಿಷ್ಣಾತನಾದ ಪುರೋಚನನಿಗೆ.

*ಇಡೀ ಭವನದ ನಿರ್ಮಾಣಸಾಮಗ್ರಿ ಅರಗಿನಿಂದಲೇ ಆಗಬೇಕು ಮತ್ತು ಅದರ ಭಿತ್ತಿ ಹಾಗೂ ಅವುಗಳ ಅಲಂಕರಣ ಬೆಲ್ಲದ ಮಿಶ್ರಣದಿಂದ ಮಾಡಲ್ಪಟ್ಟಿರಬೇಕು. ಆ ಅರಗಿನಮನೆಯ ಸುತ್ತು ಸಮುಚ್ಚಯವು ನವಸೌಧ, ನಂದ್ಯಾವರ್ತ, ಭದ್ರಾಸ್ಥರಣಗಳೆಂದ ಎಂದರೆ, ೯ ಮಹಡಿಗಳುಳ್ಳ ೭ ರೀತಿಯ ಮತ್ತು ೬ ಮಹಡಿಗಳುಳ್ಳ ೧೩ ಮಾದರಿಯ ಕಟ್ಟಡಗಳನ್ನೊಳಗೊಂಡಿರಬೇಕು.*

**'ಭದ್ರಾಸ್ತರಣ' ಎಂಬ ಕಟ್ಟಡದ ಪ್ರಭೇದ ನಾರಣಪ್ಪನ ಕಾಲದ ವಿಶೇಷ ರೀತಿಯ ಕಟ್ಟಡವಾಗಿದ್ದಿರಬಹುದೆನ್ನಲು ಅವಕಾಶಗಳಿವೆ. ಏಕೆಂದರೆ ಈ ರೀತಿಯ ಪ್ರಭೇದ ಈಗ ಲಭ್ಯವಿರುವ ವಾಸ್ತುಶಾಸ್ತ್ರ**

**ಗ್ರಂಥಗಳಾದ ಮಾನಸಾರ, ಸುಪ್ರಭೇದಾಗಮ, ಚಾವುಂಡರಾಯಪುರಾಣ, ಹಿಂದೂ ಆರ್ಕಿಟೆಕ್ಚರ್ ಇತ್ಯಾದಿ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಈಗ ನಿರ್ಧಾರಿತ ಕವಿಯ ಕಾಲ ಎಂದರೆ ಕ್ರಿ. ಶ ೧೩೫೦ರಿಂದ ಕ್ರಿ. ಶ ೧೪೫೦ರ ವರೆಗಿನ ಪ್ರಾಕ್ತನ ವಾಸ್ತು ಶಿಲ್ಪಗಳ ಅಧ್ಯಯನ ನಡೆದಾಗ ಮಾತ್ರ ಈ ಬಗ್ಗೆ ನಿರ್ಧರಿಸಲು ಸಹಾಯವಾಗುತ್ತದೆ. ಅಷ್ಟೇ ಅಲ್ಲದೆ ಈ ಒಂದು ಶತಮಾನದ ಅಂತರದಲ್ಲಿ ಹೊಯ್ದಾಡುತ್ತಿರುವ ನಿರ್ದಿಷ್ಟ ಕವಿಕಾಲ ನಿರ್ಣಯಕ್ಕೂ ಸಹಾಯವಾಗುತ್ತದೆ.**

ಈ ಲೇಖನವನ್ನು ವಿದ್ವಾಂಸರೆದುರು ಮಂಡಿಸಿದಾಗ್ಯೆ ಅರಗಿನಮನೆಯ ಪ್ರಕರಣವು ಕವಿ ಕಲ್ಪನೆ ಮತ್ತು ಇಲ್ಲಿ ವಾಸ್ತು ಶಾಸ್ತ್ರ ಶಬ್ದಗಳನ್ನು ಕೇವಲ ಪ್ರಾಸಂಗಿಕವಾಗಿ ಬಳಸಲಾಗಿದೆ; ಅಲ್ಲದೇ ನವಸೌಧ, ನಂದ್ಯಾವರ್ತ ಇತ್ಯಾದಿ ಶಬ್ದಗಳಿಗೆ ಬೇರೆ ಬೇರೆ ಗೋಜಲು, ಗೋಜಲಾದ ಅರ್ಥಗಳಿಂದ ಇತರ ಕಾವ್ಯಗಳಲ್ಲೂ ಬಳಸಲಾಗಿದೆ ಎಂಬ ಅಭಿಪ್ರಾಯ ಕೇಳಿ ಬಂದಿತು. ಆದರೆ ಕವಿಯು, ಆದಿಪರ್ವದ ೮ನೇ ಸಂಧಿಯ ೮೧, ೮೨ನೇ ಪದ್ಯಗಳಲ್ಲಿ ಅರಗಿನಮನೆಯಿಂದ ತಪ್ಪಿಸಿಕೊಂಡು ಪಾಂಡವರು ಹೊರಬೀಳುವ ಉಪಾಯವನ್ನು 'ಸಾಂಕೇತಿಕ'ವಾಗಿಯೇ 'ಸೂಚಿಸಿ'ದ್ದಾನೆ ಎಂಬುದನ್ನೂ ಗಮನಿಸಬೇಕು. ಅಲ್ಲದೇ ಇದ್ದಕ್ಕಿದ್ದಂತೇ ಧರ್ಮರಾಯನ ವಯಸ್ಸನ್ನೂ ಪ್ರಸ್ತಾಪಿಸುತ್ತಾ 'ಲೆಕ್ಕವ ನೋಡಿಕೊಯೆಂದ' ಎಂದು ನಾವೇ 'ಮೂಗಿನಲಿ ಬೆರಳಿಟ್ಟು ಕೊಳ್ಳು'ವಷ್ಟರ ಮಟ್ಟಿಗೆ ನಿಖರವಾದ ಗದುಗಿನ ಗಂಡು ಭಾಷೆಯಲ್ಲೇ ಉತ್ತರಿಸಿದ್ದಾನೆ ಜನಮನದ ಕವಿಚಕ್ರವರ್ತಿ !

ವಿದುರನೊಡನೈತರುತ ಸಂಕೇ
ತದಲಿ ಸೂಚಿಸಿ ಮರಳಿದನು ನೃಪ
ಸುದತಿ ವರ ಗಾಂಧಾರಿ ಮೊದಲಾದಖಿಳ ರಾಣಿಯರು ॥ ೮೧ ॥

ಅರಸ ಕೇಳೈ ಹಸ್ತಿನಾಪುರ
ವರವ ಹೊರವಡುವಾ ಮುಹೂರ್ತಕೆ
ವರುಷವಿಪ್ಪತ್ತೊಂಬತಾದುದು ಧರ್ಮನಂದನಗೆ
ವರುಷ ಹದಿಮೂರರಲಿ ಹಸ್ತಿನ
ಪುರದೊಳಿದ್ದರು ಹಿಂದೆ ಷೋಡಶ
ವರುಷವನದೊಳಗಿಂತು ಲೆಕ್ಕವ ನೋಡಿಕೋಯೆಂದ ॥ ೮೨ ॥

ಡಾ॥ ದೇವರ ಕೊಂಡಾರೆಡ್ಡಿ *

# ತುಂಗಭದ್ರಾ ಪ್ರದೇಶದ ವಿರೂಪಾಕ್ಷ ದೇವಾಲಯಗಳು

ತುಂಗ ಮತ್ತು ಭದ್ರಾ ನದಿಗಳು ಸಹ್ಯಾದ್ರಿ ಪರ್ವತ ಶ್ರೇಣಿಯಲ್ಲಿ ಹುಟ್ಟಿ ಉತ್ತರಾಭಿಮುಖವಾಗಿ ಹರಿದು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಒಂದಾಗಿ ತುಂಗಭದ್ರೆಯಾಗಿ ಈಶಾನ್ಯ ದಿಕ್ಕಿಗೆ ತಿರುಗಿ ಮುಂದೆ ಆಂಧ್ರಪ್ರದೇಶದ ಆಲಂಪುರದ ಬಳಿಯಲ್ಲಿನ ಸಂಗಮದಲ್ಲಿ ಕೃಷ್ಣಾನದಿಯನ್ನು ಸೇರುತ್ತದೆ. ತಾನು ಪ್ರವಹಿಸುವ ಪಾತ್ರದುದ್ದಕ್ಕೂ ತೀರ್ಥಕ್ಷೇತ್ರಗಳನ್ನು ಸೃಷ್ಟಿಸಿ, ನಾಡುಗಳನ್ನು ವಿಭಜಿಸಿ, ಅನೇಕ ವಾಸ್ತುರಚನೆಗಳನ್ನು ಬೆಳೆಸಿದೆ. ಅನೇಕ ಚಕ್ರಾದಿಪತ್ಯಗಳ ಏಳು-ಬೀಳುಗಳನ್ನು ಈ ನದಿ ಕಂಡಿರುವುದಲ್ಲದೆ ಅನೇಕ ಧಾರ್ಮಿಕ ಸಂಘರ್ಷಗಳನ್ನೂ, ಬದಲಾವಣೆಗಳನ್ನೂ ಕಂಡಿದೆ. ಇಂತಹವುಗಳಲ್ಲಿ ಒಂದಾದ ವಿರೂಪಾಕ್ಷಾಲಯಗಳ ರಚನೆ, ಆರಾಧನೆ ಮತ್ತು ಏಳು-ಬೀಳುಗಳನ್ನು ವಿವರಿಸುವುದೇ ಈ ಲೇಖನದ ಉದ್ದೇಶ.

ವಿರೂಪಾಕ್ಷ ಎಂದರೆ ನಿಘಂಟುಕಾರರು ಈಶ್ವರ, ಪರಶಿವ ಎಂಬರ್ಥ ನೀಡಿ ವಿಕಾರವಾದ ಕಣ್ಣುಳ್ಳವನು ಎಂದಿದ್ದಾರೆ. ವಿರೂಪ + ಅಕ್ಷಿ ಎಂದಾದರೂ ತ್ರಿಯಂಬಕ, ಮುಕ್ಕಣ್ಣ ಇವು ಇವನಿಗೆ ಸಮಾನಾರ್ಥಕ ಪದಗಳು, ತ್ರಿನೇತ್ರವುಳ್ಳವನು ಎಂಬುದು ಇದರ ಅರ್ಥ. ವಿರೂಪಾಕ್ಷ ಪದದ ನಿಷ್ಪತ್ತಿಯ ಬಗ್ಗೆ ಡಾ॥ ಎಂ. ಎಂ. ಕಲ್ಬುರ್ಗಿಯವರು ಬರೆಯುತ್ತಾ '**ಹಂಪೆಯಲ್ಲಿ ಸುಮಾರು ೫೦ ರಷ್ಟು ವೀರಭದ್ರನ ವಿಗ್ರಹಗಳಿವೆ. ಬೇರೆ ಯಾವುದೇ ಗ್ರಾಮದಲ್ಲಿಯೂ ಇರದೆ ಈ ಒಂದು ಸ್ಥಳದಲ್ಲಿ ಮಾತ್ರ ಇಷ್ಟು ವಿಗ್ರಹಗಳಿರುವುದರಿಂದ ಹಂಪೆ ವಿರೂಪಾಕ್ಷನ ಉಪಾಸನೆಯ ಕೇಂದ್ರ ಭೂಮಿಯಾಗಿದ್ದು, ಅವನೇ ಆ ಪ್ರದೇಶದ ಅಧಿದೈವನೆಂದು ಸ್ಪಷ್ಟವಾಗುತ್ತದೆ. ಹೀಗಾಗಿ ರೌದ್ರಭಾವದ ವೀರಭದ್ರನ ಇನ್ನೊಂದು ರೂಪವೇ ಇಲ್ಲಿಯ ರೌದ್ರಭಾವದ ವಿರೂಪಾಕ್ಷನಾಗಿರಬಹುದೇ? ಎಂಬ ಸಂದೇಹ ಹುಟ್ಟುತ್ತದೆ**'; ಮುಂದುವರಿದು ಅವರು ವೀರಪಚ್ಚ ಎಂಬ ಪದದ ಸಂಸ್ಕೃತೀಕರಣವೇ ವಿರೂಪಾಕ್ಷ ಎಂದಿರುತ್ತಾರೆ. ಹಂಪೆಯಲ್ಲಿಯ ಲಿಂಗರೂಪದ ವೀರಭದ್ರನೇ ಮುಂದೆ ವಿರೂಪಾಕ್ಷನೆಂಬ ಹೆಸರು ಪಡೆದನೆಂದು ಹೇಳಬಹುದಾಗಿದೆ' ಎಂದು ಊಹಿಸಿರುತ್ತಾರೆ (ಮಾರ್ಗ III).

ಹಂಪೆಯಲ್ಲಿ ವೀರಭದ್ರನ ಶಿಲ್ಪದಷ್ಟೇ ಹನುಮಂತನ ಶಿಲ್ಪಗಳೂ ದೊರೆಯುತ್ತವೆ. ಹಾಗಾದರೆ ಅದು ಹನುಮಂತನ ಉಪಾಸನ ಕ್ಷೇತ್ರವೂ ಏಕಾಗಿರಬಾರದು? ಎರಡನೆಯದಾಗಿ ವೀರಭದ್ರ ಕ್ಷೇತ್ರವೂ ಇದಾಗಿರದೆ, ಹನುಮನ ಕ್ಷೇತ್ರವೂ ಇದಾಗಿರದೆ ಶುದ್ಧ ವಿರೂಪಾಕ್ಷ ಕ್ಷೇತ್ರವಾಗಿ ಇಂದಿಗೂ ಮುಂದುವರಿದಿದೆ. 'ವೀರಪಚ್ಚ'ದ ರೂಪ ವಿರೂಪಾಕ್ಷ ಅಲ್ಲ. 'ವೀರಪಚ್ಚ' ಕಲ್ಬುರ್ಗಿ ಯವರ ಉಹಾ ಪಾಠ. ಮೂರನೆಯದಾಗಿ ವೀರಭದ್ರ ಹಾಗೂ ವಿರೂಪಾಕ್ಷರಿಬ್ಬರೂ ವಿಭಿನ್ನರು. ನಾಲ್ಕನೆಯದಾಗಿ ವೀರಭದ್ರೋಪಾಸನೆ ಬಲಗೊಂಡಿದ್ದು ೧೪ನೆಯ ಶತಮಾನದ ನಂತರ. ಇದಕ್ಕೂ ಮೊದಲೇ ಇದ್ದದ್ದು ವಿರೂಪಾಕ್ಷಾರಾಧನೆ. ವಿರೂಪಾಕ್ಷಾರಾಧನೆ ಸ್ಮಾರ್ತಬ್ರಾಹ್ಮಣರ ಸೃಷ್ಟಿ. ವೀರಭದ್ರಾರಾಧನೆ-೧೪ನೆಯ ಶತಮಾನದ ನಂತರದ ವೀರಶೈವರಿಂದ ಇವನ ಆರಾಧನೆ ಹೆಚ್ಚಾಯಿತು. ಬ್ರಾಹ್ಮಣರಲ್ಲಿ ಕೆಲವರು ತಮ್ಮನ್ನು ತ್ರ್ಯಂಬಕಪಾದಾರವಿಂದರೆಂದು ೧೨ನೆಯ ಶತಮಾನದಲ್ಲಿ ಹೇಳಿಕೊಂಡಿದ್ದಾರೆ. ಹರಿಹರ, ರಾಘವಾಂಕರು ಮೂಲತಃ ಶೈವ ಸ್ಮಾರ್ತಸಂಪ್ರದಾಯದ ಬ್ರಾಹ್ಮಣರಾಗಿದ್ದರು. ಇವರ ಉಪಾಸನಾ ದೈವ ತಮ್ಮ ಊರಾಗಿರಬಹುದಾದ ಹಂಪೆಯ ವಿರೂಪಾಕ್ಷ. ಈ ಕಾಲಕ್ಕೆ ಹರಿಹರ ಶುದ್ಧಶೈವನಾಗಿ ಮತಾಂತರಗೊಂಡಿದ್ದ. ಹೊಸದಾಗಿ ಮತಾಂತರಗೊಂಡವರಿಗೆ ಹೊಸದಾಗಿ ಸ್ವೀಕರಿಸಿದ ಮತದಲ್ಲಿ ಬಹು ಗಾಢನಂಬಿಕೆ ಶ್ರದ್ಧೆ. ಹೀಗಾಗಿ ಏಕೋದೇವೋಪಾಸಕನಾಗಿ ವಿರೂಪಾಕ್ಷನನ್ನು ಇಷ್ಟದೈವವಾಗಿ ಪಡೆದು ಅವನ ಮೇಲೆ ಅವನ ಅಂಕಿತದಲ್ಲಿ ಕಾವ್ಯರಚನೆ ಮಾಡಿದ. ಅದೇ ರಾಘವಾಂಕ ಇವನ ತಂಗಿಯ ಮಗನಾದರೂ ಹೊಸಧರ್ಮದ ಬಗ್ಗೆ ಅಷ್ಟಾಗಿ ತಲೆಕೆಡಿಸಿಕೊಳ್ಳಲಿಲ್ಲ.

* ಪ್ರವಾಚಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪೆ, ಕಮಲಾಪುರ - ೫೮೩ ೨೭೬.

ಇನ್ನು ಕರ್ನಾಟಕದಲ್ಲಿ ವಿರೂಪಾಕ್ಷನ ಆರಾಧನೆ ಎಂದಿನಿಂದ ಆರಂಭವಾಯಿತು ಎಂಬುದು ನಮ್ಮ ಮುಂದಿನ ಪ್ರಶ್ನೆ. ಇಂತಹ ಸನ್ನಿವೇಶ ಬಂದಾಗ ನಾವು ಶಾಸನಗಳ ಮೊರೆಹೋಗುತ್ತೇವೆ. ಒಟ್ಟಾರೆ ಶಾಸನಗಳನ್ನು ಗಮನಿಸಿದಾಗ ನಮಗೆ ೧೧ನೆಯ ಶತಮಾನಕ್ಕಿಂತ ಹಿಂದೆ ವಿರೂಪಾಕ್ಷ ದೇವಾಲಯಗಳ ಉಲ್ಲೇಖ ದೊರೆಯುವುದಿಲ್ಲ. ಇಂದಿನ ವಿರೂಪಾಕ್ಷ ಕ್ಷೇತ್ರಗಳಲ್ಲಿ ೧೧ನೆಯ ಶತಮಾನಕ್ಕಿಂತ ಹಿಂದೆ ಬೇರೆ ಹೆಸರಿನ ಶಿವದೇವಾಲಯಗಳು ಕಾಣಬರುತ್ತವೆ. ಹಾಗಾದಲ್ಲಿ ಶಿವನನ್ನು 'ವಿರೂಪಾಕ್ಷ' ಎಂದು ಕರೆದು ದೇವಾಲಯಗಳನ್ನು ಸ್ಥಾಪಿಸಿ ಆರಾಧಿಸುವ ಪದ್ಧತಿ ೧೧ನೆಯ ಶತಮಾನದ ನಂತರದಲ್ಲಿ ಆರಂಭವಾಗಿರಬೇಕು. ಈಗ ವಿರೂಪಾಕ್ಷ ದೇವಾಲಯಗಳೆಂದು ಕರೆಯುವ ದೇವಾಲಯಗಳಲ್ಲಿ ನಾವು ಕಾಣುವುದು ಸ್ಥಾಪಿತಲಿಂಗಗಳು. ಎಲ್ಲವೂ ಲಿಂಗ ರೂಪದಲ್ಲಿವೆ. ಯಾವುವೂ ಮೂರ್ತಿರೂಪಗಳಲ್ಲಿಲ್ಲ. ಇವನ್ನು ಶಾಸನಗಳು ಮಾತ್ರ 'ಸ್ವಯಂಭೂ' ಎಂದಿವೆ.

ವಿರೂಪಾಕ್ಷನೆಂದರೆ ಅವನ ರೂಪವೆಂತಹದು? ವಿರೂಪಾಕ್ಷ, ವಿಷ್ಕಂಭ, ಪತ್ರತಾಪಕ ಇವು ಮೂರು ಹರನ ರೂಪಾಂತರಗಳು (ಜಗನ್ನಾಥ ದಾಸರ ಕೃತಿಗಳು ಪು. ೧೮). ಜಗನ್ನಾಥದಾಸರ ಪ್ರಕಾರ ವಿರೂಪಾಕ್ಷನೆಂದರೆ, ತ್ರಿಪುರಾರಿ, ತ್ರಿನೇತ್ರವುಳ್ಳವನು, ನೀಲಕಂಠ, ಸುರನದೀಧರ. ಬಸವಣ್ಣನವರ ಪ್ರಕಾರ ನಾಲ್ಕು ಯುಗಗಳಲ್ಲಿ ಶಿವನು ಒಂದೊಂದೆಡೆಯಿದ್ದ. ಕೃತಯುಗದಲ್ಲಿ ಕೇದಾರವೆಂಬ ಮೂಲಸ್ಥಾನ, ತ್ರೇತಾಯುಗದಲ್ಲಿ ವಾರಣಾಸಿ ಮೂಲಸ್ಥಾನ, ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ, ಕಲಿಯುಗದಲ್ಲಿ ಪರ್ವತಮೂಲಸ್ಥಾನ. ಹೀಗೆ ಹೇಳುವುದರ ಮೂಲಕ ಬಸವಣ್ಣ ಆ ಕಾಲಕ್ಕೆ ಇದ್ದ ನಾಲ್ಕು ಅಂದರೆ ಕಾಶಿ, ಕೇದಾರ, ಹಂಪೆ, ಶ್ರೀಶೈಲ ಈ ಜಂಗಮ ಪೀಠಗಳನ್ನು ಗುರುತಿಸಿದ್ದಾನೆ. ಆದರೆ ವಿರೂಪಾಕ್ಷಸ್ಥಾನ ಒಂದು ಪೀಠಸ್ಥಾನವಾಗಿತ್ತೆ? ಎಂಬುದು ಪ್ರಶ್ನೆ (ಬ. ವ. ನ ೯೩).

ರಾಘವಾಂಕನು ಸೋಮನಾಥ ಚರಿತ್ರದಲ್ಲಿ ವಿರೂಪಾಕ್ಷನನ್ನು ಶ್ರೀಮಾಯಾವರನಿಂದುಧರನುಗ್ರ। ನಭಯಕರ

ಮಾಯಾರಿ ಭಕ್ತ ಭಯಹಾರಿ ಗಂಗಾವಾರಿ ।ಮಾಯುಭೂಗ್ಭೂಷ ನುತ್ತಮವೇಶನ। ಘ ತಿಮಿರಪೂಷನತಿವಿಗತದೋಷ ॥

ಸ್ವಾಯುತಾಖಿಳ ಲೋಕದಾನತ ವಜ್ರಪುಣ್ಯ। ದಾಯಕಂಹರಿ ವಿರಂಚ್ಯಾದಿ ಪ್ರಮುಖದೇವರಾಯ ಪಂಪಾವಿರೂಪಾಕ್ಷ ನೆಮಗೀಗ.... ॥ ೬ ॥

–ಎಂದು ಸ್ತುತಿಸಿದ್ದಾನೆ.

ಹರಿಶ್ಚಂದ್ರಕಾವ್ಯದಲ್ಲಿ ರಾಘವಾಂಕನು ಹೀಗೆ ಸ್ತುತಿಸಿದ್ದಾನೆ:

ತ್ರಾಹಿಮಾಂ ಜಗದುದಯ ರಕ್ಷ ಶಿಕ್ಷಾದ್ಯಕಕ್ಷ।
ತ್ರಾಹಿಮಾಂ ಶರಣ ಜನದಘುಜ್ವಲಿತ ಭಾಳಾಕ್ಷ।
ತ್ರಾಹಿಮಾಂ ಸಕಲ ಧರ್ಮಾಕಾರ ಪುಂಗವೇಂದ್ರಾಕ್ಷಪಕ್ಷ ॥
ಸುರಪಶಿಖಿಮರುತ..... ॥ ೫: ೭೯ ॥

ಮುಂದೆ ಹರಿಶ್ಚಂದ್ರನು ಪಂಪಾಂಬಿಕಾಪತಿಯನ್ನು 'ನಾನಾ ಸ್ನಪನ ಯಕ್ಷಕರ್ದಮ ಪುಷ್ಪ।ಗಾಡಿವಡೆಯಲು ಮಹಾರುದ್ರಾಭಿ ಷೇಚನದಜೋಡಿಯಿಂ' ಪಂಪಾಂಬಿಕಾಪತಿಯ ಪೂಜೆ ಮಾಡಿದ ನಂತೆ. ರಾಘವಾಂಕ ಒಂದೆಡೆ ಶಿವನನ್ನು (ವಿರೂಪಾಕ್ಷನನ್ನು) ಕಾಪಾಲಿ ಎಂದು ಕರೆದಿದ್ದಾನೆ. (ಹ. ಕಾವ್ಯ. ೫:೮೧). ಇದೇ ರಾಘವಾಂಕನು ವೀರೇಶ ಚರಿತೆಯಲ್ಲಿ ಶಿವನನ್ನು ವರ್ಣಿಸುತ್ತಾ:

ನಿಡುಜಡೆಯಕುಱಮಡಲೆಡೆಯೊಳ್ ಬಿಡದಡಿ।
ಯಿಡುವೋಲ್ ಕಡಲಿನ ತಡಿವಿಡಿದುಗಣಪತಿ।
ಯೊಡಲೊಡಕಿನ ಕಡು ಹಿಮಮಡಿಗಡಿ।
ಗಿಡದಡಸಲ್ ಕುಡಿದುಱೆ ದಣ್ಣನೆದಣಿದು ॥
ಘುಡುಘುಡಿಸುವ ಕೋಪದ ಕಡುಹೆಡೆಗಿಡೆ ಶಾಂತಿಯ।
ಮಡುವೆನಿಸುವ ನಡುಗಣ್ಣಿನ ಕುಳಿನೆಳಗಿಂಪಡೆ।
ವಿಡಿದೂಪ್ಪುವನಗೆ ಮೊಗದೊಡೆಯಂ ಗುರು ಹಂಪೆಯ
ಮೃಡನೆಮ್ಮ ರಕ್ಷಿಸುಗೆ ॥ ೨ ॥

ಇಲ್ಲಿ ನಡುಗಣ್ಣನವನೆಂದಿದ್ದಾನೆ. ಒಂದೆಡೆ ಸುಜ್ಞಾನ ಚಿಂತಾಮಣಿ ಗ್ರಂಥದಲ್ಲಿ ಕರದಶೂಲದಲಿಜಿದ ಹೆಣ ಕೆಂಪೊರದ ಹಣೆಯುಂದುರಿನ ಲೇಪಾಂಬರದ ಮಯ್ಯಲಿ ಮುರಿದ ಹಾರದ ಸರದ ಕೊರಳಿಂಗೆ॥ ಎಂದಿದ್ದು ಶಿವನು ಕೈಯಲ್ಲಿದ್ದ ಶೂಲಕ್ಕೆ ಹೆಣವನ್ನು ಚುಚ್ಚಿಕೊಂಡಿದ್ದನೆಂದು ಹೇಳಿದ್ದಾನೆ. (ಸು. ಚಿಂತಾಮಣಿ ೧:೨), ವಿರೂಪಾಕ್ಷಾಷ್ಟಕವೊಂದರಲ್ಲಿ ವಿರೂಪಾಕ್ಷನ ವರ್ಣನೆ ಹೀಗೆ ಬರುತ್ತದೆ:

ಅವನಚರಣದೊಳಂಬಕ।
ಅವನ ನಯನದೊಳು ಹವಿ।
ತ್ರಿಶೂಲದ ಪೆಣ।
ಮತ್ತವನ ಶಿರದೊಳ್ಸುರನದಿ। ದೇವ ವಿರೂಪಾಕ್ಷನಲ್ಲ......। ೧।
ಅವನದು ಸುರರಾಶ್ರಾಯ ಅವನ ಬಿಲ್ಲವರಿಪುರ್ವ್ವಿಯಿಂ ದದಿಸಿರಿರ್ಪ್ಪುದು ।
ಅವನ ಗರಳಿಂವಿಷವು। ದೇವ....... । ೩ । ಆವಂಗೆ ಪಂಚಮುಖ
ಮತ್ತಾವಂಗೀರೈದುಭುಜವು ನೊಸಲೊಳುಗೇಳು।.......... ॥ ೬ ॥

ಹೀಗೆ ಸಾಹಿತ್ಯದಲ್ಲಿನ ಉಲ್ಲೇಖಗಳಲ್ಲಿ ವಿರೂಪಾಕ್ಷನ ರೂಪು ಸ್ಪಷ್ಟವಾಗುವುದು ಹೀಗೆ. ತ್ರಿಪುರಾರಿ, ತ್ರಿನೇತ್ರವುಳ್ಳವನು, ನೀಲಕಂಠ, ಗಂಗಾಧರ, ಕಾಪಾಲಿ, ಪಂಚವಕ್ತ್ರ, ದಶಭುಜ. ತ್ರಿಶೂಲ ದಲ್ಲಿ ಹೆಣವನ್ನು ತಿವಿದು ಹಿಡಿದಿರುವವನು. ಈ ಲಕ್ಷಣಗಳು ಶಿವನ ಉಗ್ರ ರೂಪವನ್ನು ಸೂಚಿಸುತ್ತಿವೆಯೇ ವಿನಹ ಸೌಮ್ಯ ರೂಪವನ್ನಲ್ಲ. ಜೊತೆಗೆ ಇಲ್ಲಿ ವರ್ಣಿತವಾಗಿರುವ ವಿರೂಪಾಕ್ಷನ ರೂಪಗಳು ಹಂಪೆಯ ವಿರೂಪಾಕ್ಷನಿಗೆ ಸಂಬಂಧಿಸಿದವು.

ಕವಿಗಳಿಂದ, ರಾಜರಿಂದ ಈ ದೇವರು ಪ್ರಸಿದ್ಧನಾದ ಕಾರಣ ಉಳಿದ ಸ್ಥಳಗಳ ದೇವರ ಮಹಿಮೆಗಳು ತಿಳಿಯುವುದಿಲ್ಲ.

ಹಂಪೆಯು ಮುಖ್ಯವಾಗಿ ಶಕ್ತಿಪೀಠ. ಇಲ್ಲಿ ಶಕ್ತಿಗೆ ಹೆಚ್ಚಿನ ಪ್ರಾಧಾನ್ಯತೆ. ಚಕ್ರದಿಂದ ವಿರಾಜಿತಳಾದ ಇಲ್ಲಿನ ದೇವಿಯು ಸೌಮ್ಯರೂಪದವಳಾದರೂ ಸೌಮ್ಯರೀತಿಯ ವಾಮಾಚಾರದ ಪೂಜೆ ಇಲ್ಲಿ ನಡೆಯುತ್ತಿತ್ತೆಂದು ಗ್ರಂಥಗಳಿಂದ ತಿಳಿದು ಬರುತ್ತದೆ. ಹಂಪೆಯಲ್ಲಿ ವಿರೂಪಾಕ್ಷನಿಗಿಂತ ಮೊದಲು ಮಹಾಬಲದೇವರ ಪೂಜೆಯಿದ್ದು, ಮುಂದೆ ವಿರೂಪಾಕ್ಷನರೂಪಕ್ಕೆ ಹೆಚ್ಚಿನ ಆದ್ಯತೆ ಬಂದ ಮೇಲೆ ಮಹಾಬಳ ಎಂಬ ಹೆಸರು ಮರೆಯಾಗಿರಬೇಕು. ಇಂತಹ ಸ್ಥಳದಲ್ಲಿ ಉಗ್ರರೂಪನ ಹೆಸರಿನ ಅಂದರೆ ತ್ರಿನೇತ್ರನ ಹೆಸರಿನಲ್ಲಿ ಶಿವಲಿಂಗ ಸ್ಥಾಪನೆಯಾಗುತ್ತದೆ.ಭಾಗಶಃ ಶಿವನ ಈ ರೂಪವನ್ನು ಪೂಜಿಸುವ ಒಂದುವರ್ಗದ ಜನ ಆ ಕಾಲದಲ್ಲಿದ್ದು ಇಂತಹ ಹೆಸರಿನ ಲಿಂಗಗಳನ್ನು ಅಲ್ಲಲ್ಲಿ ಸ್ಥಾಪಿಸಿರಬಹುದು. ಬಸವಣ್ಣನ ಕಾಲಕ್ಕಾಗಲೇ ಈ ಹೆಸರಿನ ಲಿಂಗಗಳು ಸ್ಥಾಪಿತವಾಗಿ ಪ್ರಭಾವಬೀರಿದ್ದವು.

ಈಗ ಬಹಳಷ್ಟು ಕಡೆ ವಿರೂಪಾಕ್ಷ ದೇವಾಲಯಗಳು ಕಂಡು ಬಂದರೂ ಕೆಲವು ದೇವಾಲಯಗಳು ೧೭ನೆಯ ಶತಮಾನದಿಂ ದೀಚೆಗೆ ವಿರೂಪಾಕ್ಷ ದೇಗುಲಯೆಂಬ ಹೆಸರನ್ನು ಪಡೆದುಕೊಂಡಿವೆ. ವಿಜಯನಗರದ ಪ್ರಾಬಲ್ಯದ ಕಾಲದಲ್ಲಿ ಹಂಪೆಯ ವಿರೂಪಾಕ್ಷನ ಗುಡಿಗಳನ್ನು ಅನೇಕ ಕಡೆ ಭಕ್ತರು ಕಟ್ಟಿಸುತ್ತಾರೆ. ಸ್ವತಃ ಲಕ್ಕಣ ದಂಡೇಶನು ತನ್ನ ಜನ್ಮಸ್ಥಳಕ್ಕೆ ವಿರೂಪಾಕ್ಷಿಯೆಂದು ಹೆಸರಿಟ್ಟು ವಿರೂಪಾಕ್ಷದೇವಾಲಯ ಕಟ್ಟಿಸಿರುತ್ತಾನೆ. ಹಾಗೆಯೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿರೂಪಾಕ್ಷಪುರವಿದ್ದು ಅಲ್ಲಿಯೂ ವಿರೂಪಾಕ್ಷ ದೇವಾಲಯವಿದೆ.

ಮುಖ್ಯವಾಗಿ ವಿರೂಪಾಕ್ಷನ ಮೂಲಸ್ಥಳವಾದ ತುಂಗ ಭದ್ರಾನದಿಗೆ ಎರಡೂ ಕಡೆಗಳಲ್ಲಿ ಕಾಣುವ ವಿರೂಪಾಕ್ಷ ದೇವಾಲಯಗಳನ್ನು ಪರಿಶೀಲಿಸಿದಾಗ ಶಾಸನೋಕ್ತವಾಗಿ ರಾಣಿ ಬೆನ್ನೂರು ತಾಲೂಕಿನ ಇಟಗಿ, ಹರಪನಹಳ್ಳಿ ತಾಲೂಕಿನ ಬೆಣ್ಣೆಹಳ್ಳಿ, ಬಳ್ಳಾರಿ ತಾಲೂಕಿನ ಒರುವಾಯಿ, ಹೊಸಪೇಟೆ ತಾಲೂಕಿನ ಹಂಪೆ, ಕಂಪಿಲಿ, ಸೊಂಡೂರು ತಾಲೂಕಿನ ಕುರಿಕುಪ್ಪೆಗಳಲ್ಲಿ ಕಾಣಬಹುದಾಗಿದೆ. ಈ ಸ್ಥಳಗಳಲ್ಲಿ ಕುರಿಕುಪ್ಪೆ ಮತ್ತು ಕಂಪಲಿಯಲ್ಲಿಯವು ಕ್ರಿ. ಶ. ೧೬ನೆಯ ಶತಮಾನದವು. ಉಳಿದವು ೧೩ನೆಯ ಶತಮಾನಕ್ಕೆ ಹಿಂದಿನವಾಗಿವೆ.

ತುಂಗಭದ್ರಾ ತಡಿಯ ಶಾಸನಗಳನ್ನು ಅವಲೋಕಿಸಿದಾಗ ನಮಗೆ ತಿಳಿದುಬರುವ ಪ್ರಾಚೀನ ವಿರೂಪಾಕ್ಷ ದೇವಾಲಯವೆಂದರೆ ಇಟ್ಟಗೆಯ ವಿರೂಪಾಕ್ಷ ದೇವಾಲಯ. ಇದರ ಪ್ರಥಮ ದಾಖಲೆಯು ಶಕ ೯೯೧ನೆಯ ಸೌಮ್ಯ ಸಂವತ್ಸರದ ಚೈತ್ರ ಅಮಾವಾಸ್ಯೆ ಬೃಹಸ್ಪತಿವಾರ ಅಂದರೆ ಕ್ರಿ. ಶ. ೨೫.೩.೧೦೬೯ ಬುಧವಾರಕ್ಕೆ ಸರಿಹೊಂದುತ್ತದೆ. ಇಲ್ಲಿ ನೊಳಂಬವಾಡದ ಮನ್ನೆಯತನವನ್ನು ಮಾಡುತ್ತಿದ್ದ ವ್ಯಕ್ತಿಯೊಬ್ಬ ಇಟ್ಟಗೆಯ ವಿರೂಪಾಕ್ಷ ದೇವರಿಗೆ ಸ್ನಾನ ನಿವೇದ್ಯಕ್ಕೆ ಭೂದಾನ ನೀಡುತ್ತಾನೆ. ಕಾಲ ನಿರ್ದೇಶನ ವಿದ್ದರೂ ರಾಜನ ಉಲ್ಲೇಖದ ಭಾಗ ಹಾಳಾಗಿದೆ. ಮುಂದೆ ಈ ದೇವಾಲಯಕ್ಕೆ ಬಿಜ್ಜಳನ ಮಗ ರಾಯಮುರಾರಿಸೋವಿದೇವನ ಕಾಲದಲ್ಲಿ ಅರಸ ಸಾಮಂತ, ಗರುಡಪಾಂಡ್ಯನ ಕಾಲದಲ್ಲಿ ದಾನ ನೀಡಿದ ಉಲ್ಲೇಖವಿದೆ. ಮುಂದೆ ಶಾಸನೋಲ್ಲೇಖಗಳಿಲ್ಲ. ಈ ದೇವಾಲಯ ಬಹುಶಃ ಕ್ರಿ.ಶ. ೧೦೬೯ರ ಕಾಲಕ್ಕಾಗಲೇ ನಿರ್ಮಿತವಾಗಿರಬೇಕು. ಯಾರು ನಿರ್ಮಿಸಿದರೆಂಬ ಬಗ್ಗೆ ಸ್ಪಷ್ಟ ದಾಖಲೆಗಳಿಲ್ಲ.

ಮುಂದೆ ಬಳ್ಳಾರಿ ತಾಲೂಕಿನ ಓರವಾಯಿಯ ಶಕ ೧೦೭೧ರ (ಕ್ರಿ. ಶ. ೧೧೪೯ರ) ಶಾಸನದಲ್ಲಿ ಚಾಳುಕ್ಯ ಇಮ್ಮಡಿ ಜಗದೇಕ ಮಲ್ಲನ ಕಾಲದಲ್ಲಿ ದೊರವದಿನಾಡಿನ ಕಾಚರಸ, ಗಂಗಸರಲ್ಲದೆ ಇಮ್ಮಡಿ ರಾಚಮಲ್ಲನ ಮಹಾಪ್ರಧಾನನಾದ ಕಪ್ಪೆಯರಾಹಾರ ದಾನವಿನೋದಿಯಾದ ಲಖ್ಖೆಯನಾಯಕ ಮತ್ತವನ ತಮ್ಮಂದಿ ರಾದ ಮಾದೆಯನಾಯಕ, ವಿರುಪೆಯನಾಯಕ, ಆಚೆಯನಾಯಕರು ದೊರವದಿನಾಡಿನ ಎಪ್ಪತ್ತರ ಪ್ರಭುಗಾವುಂಡಗಳು, ಮೂಲಿಗರು, ಎಂಟುಹಿಟ್ಟುಗಳು ಸೇರಿ ಕುತ್ತುಕನೂರಲ್ಲಿ ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿ ಓರುವಾಯಿಯ ಚಳೇಶ್ವರ ಪಂಡಿತನ ಮಗ ಭೀಮರಾಶಿಪಂಡಿತನ ಕಾಲು ತೊಳೆದು ದಾನನೀಡುತ್ತಾರೆ. ಮುಂದೆ ಯಾವ ಶಾಸನದಲ್ಲೂ ಈ ದೇವಾಲಯದ ಬಗ್ಗೆ ಉಲ್ಲೇಖಗಳಿಲ್ಲ. ಈ ಸಮಯದಲ್ಲಿ ಈ ದೇವಾಲಯದ ಜೊತೆಗೆ ಬೇರೆಬೇರೆ ಕಡೆಗೆ ಅನೇಕ ದೇವಾಲಯಗಳು ನಿರ್ಮಾಣವಾಗುತ್ತವೆ.

ಬೆಣ್ಣೆಹಳ್ಳಿಯ ಪಂಪಾಪತಿ ಅಥವಾ ವಿರೂಪಾಕ್ಷ ದೇವಾಲಯವು ಚಾಳುಕ್ಯ ಇಮ್ಮಡಿ ಜಗದೇಕಮಲ್ಲನ ಕಾಲದ ಶಾಸನದಲ್ಲಿ ಉಲ್ಲೇಖಗೊಂಡಿದ್ದು ಕ್ರಿ. ಶ. ೧೧೪೪ಕ್ಕೆ ಸೇರಿದ್ದು ಅದರಲ್ಲಿ ಸ್ವಯಂಭೂದೇವರ ಉಲ್ಲೇಖವಿದೆ. ಆದರೆ ಶಾಸನದ ಆರಂಭದಲ್ಲಿ ವಿರೂಪಾಕ್ಷನು ಧರ್ಮವನ್ನು ಕಾಪಾಡಲೆಂದು ಪ್ರಾರ್ಥಿಸಿರುವುದರಿಂದ ಈ ಸ್ವಯಂಭೂದೇವರು ವಿರೂಪಾಕ್ಷನೇ ಯೆಂಬುದರಲ್ಲಿ ವಿವಾದವಿಲ್ಲ. ಬಹುಶಃ ಈ ದೇವರನ್ನು ಹಾಗೂ ದೇವಾಲಯವನ್ನು ಕ್ರಿ. ಶ. ೧೧೪೪ರಲ್ಲಿಯೇ ರಚಿಸಿರಬೇಕು. ಇದನ್ನು ಈಗ ಪಂಪಾಪತಿ ದೇವಾಲಯವೆಂದು ಕರೆದರೂ ಯಾವ ಶಾಸನದಲ್ಲಿಯೂ ಇದನ್ನು ಈ ಹೆಸರಿನಿಂದ ಕರೆದಿಲ್ಲ ಹಾಗೂ ಇದನ್ನು ಸ್ವಯಂಭೂವಿರೂಪಾಕ್ಷನೆಂದೇ ಕರೆದಿದೆ.

ಹಂಪೆಯಲ್ಲಿರುವ ಪ್ರಸಿದ್ಧವಾದ ವಿರೂಪಾಕ್ಷ ದೇವಾಲಯವು ಎಂದು ರಚಿತವಾಯಿತೆಂದು ಹೇಳುವುದು ಕಷ್ಟ, ಆದರೂ ಹಿಂದೆಯೇ ತಿಳಿಸಿದಂತೆ ಈ ಕ್ಷೇತ್ರವು ಮುಖ್ಯವಾಗಿ ಶಕ್ತಿ ಕೇಂದ್ರ. ಮುಂದೆ ಕಾಲಗತಿಸಿದಂತೆ ಇದು ಶಿವಕ್ಷೇತ್ರವಾಗಿ

ಮಾರ್ಪಾಟಾಯಿತು. ನೊಳಂಬ ಉದಯಾದಿತ್ಯನು ಪಂಪಾತೀರ್ಥಕ್ಕೆ ಬಂದಿದ್ದಾಗ ಬಾಗಳಿಯ ಕಲ್ಲೇಶ್ವರ ದೇವಾಲಯಕ್ಕೆ ದಾನ ನೀಡಿದ. ಈ ಶಾಸನದಲ್ಲಿ ವಿರೂಪಾಕ್ಷನ ಉಲ್ಲೇಖವಿಲ್ಲ. ಈ ಕಾಲಕ್ಕೆ ಬಾಗಳಿಯ ಈಗಿನ ಕಲ್ಲೇಶ್ವರ ದೇವಾಲಯ ನಿರ್ಮಾಣವಾಗಿತ್ತು. ಗೊನಹಾಳಿನ ಕ್ರಿ. ಶ. ೧೦೨೦ರ ನೊಳಂಬ ಅರಸನಕಾಲದ ಶಾಸನದಲ್ಲಿ ಇಲ್ಲಿ ಇದ್ದ ದೇವಾಲಯ ಮಹಾಬಳದೇವರದ್ದು. ವಿರೂಪಾಕ್ಷ ಅಲ್ಲ. ಈ ಕಾಲಕ್ಕೆ ಹಂಪೆಯಲ್ಲಿನ ಬೆಟ್ಟಗಳು ಅಷ್ಟು ಪ್ರಾಮುಖ್ಯವನ್ನು ಪಡೆದಿರಲಿಲ್ಲ. ಶಕ ೧೧೨೧ (ಕ್ರಿ. ಶ. ೧೧೯೯) ರ ದುರ್ಗಾದೇವಾಲಯದ ಶಾಸನದಲ್ಲಿ ಪ್ರಥಮಬಾರಿಗೆ ವಿರೂಪಾಕ್ಷನ ಉಲ್ಲೇಖ ಬರುತ್ತದೆ. ಈ ಶಾಸನದ ಕಾಲಕ್ಕೆ ಇಲ್ಲಿನ ಹೇಮಕೂಟದಲ್ಲಿ ವಿರೂಪಾಕ್ಷನ ದೇವಾಲಯ ಇತ್ತು. ಹೇಮಕೂಟದಲ್ಲಿದ್ದ ವಿರೂಪಾಕ್ಷನನ್ನೇ ಶಾಸನ ಕವಿ ಪ್ರಾರ್ಥಿಸಿದ್ದಾನೆ. ಇಮ್ಮಡಿ ರಾಚಮಲ್ಲನ ಅಮಾತ್ಯನಾದ ವೀರ ಕಲಿದೇವರಸ ಕುರುಗೋಡಿನಲ್ಲಿದ್ದಾಗ ವಿರೂಪಾಕ್ಷತೀರ್ಥ ರಕ್ಷಣಾರ್ಥವಾಗಿ (ಪಂಪಾತೀರ್ಥವಲ್ಲ) ಸಾಮಂತ ಮಾದೆಯ ನಾಯಕ ಮತಂಗಪರ್ವದಿಂದ ಆಳುತ್ತಿದ್ದ. ಇವನ ಮೈದುನ ಚೌಡಯ್ಯನೆಂಬುವನು ವಿರೂಪಾಕ್ಷ ದೇವಾಲಯಕ್ಕೆ ಸೇರಿದಂತೆ ಪಂಪಾದೇವಿ ದೇವಾಲಯವನ್ನು ಕಟ್ಟಿಸಿ ಪೂಜೆಯ ಪರಿಕರಗಳನ್ನು ತೆಗೆದುಕೊಟ್ಟ. ಅಂದರೆ ಈ ಮೊದಲೇ ವಿರೂಪಾಕ್ಷ ದೇವಾಲಯ ನಿರ್ಮಾಣವಾಗಿತ್ತು. ಎಷ್ಟು ಮೊದಲು ಎಂದಾಗ ಬಹುಶಃ ಕ್ರಿ. ಶ. ೧೧೫೦ ಎನ್ನಬಹುದು.

ಹಂಪೆಯ ವಿರೂಪಾಕ್ಷ ದೇವಾಲಯ, ದೇವರು ಮತ್ತು ಕ್ಷೇತ್ರ ಅನೇಕ ರಾಜರ ಹಾಗೂ ಕವಿಗಳ ಆಶ್ರಯಕ್ಕೆ ಸಿಕ್ಕಿ ಹೆಚ್ಚಿನ ಪ್ರಚಾರ ಪಡೆಯಿತು. ಹರಿಹರನಂತಹ ಕವಿ ಈ ಕ್ಷೇತ್ರವನ್ನು ಸಾಹಿತ್ಯ ಲೋಕದಲ್ಲಿ ಪ್ರಸಿದ್ಧಿ ಮಾಡಿದರೆ, ಹೊಯ್ಸಳ ರಾಜ್ಯ ಹಾಗೂ ವಿಜಯನಗರ ರಾಜ್ಯಗಳಿಂದ ರಾಜಕೀಯವಾಗಿ ಪ್ರೋತ್ಸಾಹವನ್ನು ಪಡೆಯಿತು. ಅನೇಕರು ತಮ್ಮ ಮಕ್ಕಳಿಗೆ ವಿರೂಪಾಕ್ಷನ ಹೆಸರನ್ನಿಟ್ಟಿರುವುದೂ ತಮ್ಮ ಗ್ರಾಮಗಳಲ್ಲಿ ಹಂಪೆಯ ಅಧಿದೈವವಾದ ವಿರೂಪಾಕ್ಷನ ಗುಡಿಗಳನ್ನು ಸ್ಥಾಪಿಸಿರುವುದು ತಿಳಿದುಬರುತ್ತದೆ.

ಕುರಿಕುಪ್ಪೆಯಲ್ಲಿ ಕ್ರಿ.ಶ. ೧೫೨೩ರಲ್ಲಿ ಸಂಗಮೇಶ್ವರದ ಹೆಗ್ಗರಸನ ಮಗ ಘಳಿಯಾರದ ಬಾಗಿಲ ಬೆನಕರಸನು ವಿರೂಪಾಕ್ಷ ದೇವರ ದೇವಾಲಯ ಕಟ್ಟಿಸಿ ದೇವರ ಪ್ರತಿಷ್ಠೆ ಮಾಡಿಸುತ್ತಾನೆ. ಕಂಪಿಲಿಯಲ್ಲಿ ವಿರೂಪಾಕ್ಷ ದೇವರ ಗುಡಿಯನ್ನು ಯಾವಾಗ ಕಟ್ಟಿಸಿದರೆಂಬ ಬಗ್ಗೆ ಸ್ಪಷ್ಟ ಉಲ್ಲೇಖವಿಲ್ಲದಿದ್ದರೂ ಕ್ರಿ. ಶ. ೧೫೫೨ರ ಹೊತ್ತಿಗೆ ಅಲ್ಲಿ ವಿರೂಪಾಕ್ಷ ದೇವಾಲಯವಿತ್ತು. ಸುಂಕದ ಬನದರಸನ ಮಕ್ಕಳು ಕರಿಬೇಡ ಯಜಮಾನ ಸಂಕರಸನು ಕಂಪಿಲಿಯ ವಿರೂಪಾಕ್ಷ ದೇವರ ಗುಡಿಯಲ್ಲಿ ಒಂದು ಅಂಕಣದ ಕಲ್ಲುಮಾಳಿಗೆ ಕಟ್ಟಿಸಿ ಪಂಪಾದೇವಿಯನ್ನು ಪ್ರತಿಷ್ಠಾಪಿಸಿದ. ಹೀಗೆ ೧೧೮೯ರಲ್ಲಿ ಉಲ್ಲೇಖಗೊಂಡ ವಿರೂಪಾಕ್ಷ ದೇವಾಲಯಗಳ ರಚನೆ ನಿಧಾನವಾಗಿ ಪಸರಿಸುತ್ತಾ ವಿಜಯನಗರದ ಅಂತ್ಯದ ವೇಳೆಗೆ ನಿಂತು ಹೋಗುತ್ತವೆ. ಬಹು ಹಿಂದಿನ (ಅಂದರೆ ಕ್ರಿ. ಶ. ೧೧೮೯ರ) ಉಲ್ಲೇಖವಿರುವ ಇಟ್ಟಿಗೆಯ ವಿರೂಪಾಕ್ಷ ದೇವಾಲಯವು ಈಗ ತೀರಾ ಸಾಮಾನ್ಯ ದೇವಾಲಯವಾಗಿದ್ದು ಒರುವಾಯ ಶಾಸನದ ಉಲ್ಲೇಖಿತ ಕುತ್ತುಕನೂರು ಗುರುತಿಸಲಾಗಿಲ್ಲ. ಬೆಣ್ಣೆಹಳ್ಳಿಯ ವಿರೂಪಾಕ್ಷ ದೇವಾಲಯವನ್ನು ಈಗ ಪಂಪಾಪತಿ ದೇವಾಲಯವೆಂದೇ ಕರೆಯುತ್ತಿದ್ದು ಹಂಪೆಯ ಛಾಯೆ ಈ ಹೆಸರಿನ ಮೇಲೆ ಬಿದ್ದಿದೆ. ಕಲ್ಯಾಣದ ಚಾಳುಕ್ಯರ ಕಾಲದ ಈ ದೇವಾಲಯ ಇಂದಿಗೂ ಪೂಜೆಗೊಳ್ಳುತ್ತಿದೆ. ಇನ್ನು ಹಂಪೆಯ ವಿರೂಪಾಕ್ಷ ದೇವಾಲಯವು ಸುಮಾರು ಕ್ರಿ. ಶ. ೧೧೫೦ರಲ್ಲಿ ಆರಂಭವಾದರೂ ಮುಂದೆ ಪ್ರಾಮುಖ್ಯವನ್ನು ಪಡೆದು ಎಲ್ಲ ದೇವಾಲಯಗಳನ್ನು ಹಿಂದೆ ಸರಿಯುವಂತೆ ಮಾಡಿತು.

ಈ ದೇವಾಲಯಗಳನ್ನು ಕಟ್ಟಿಸಿದ ಅಥವಾ ದಾನ ನೀಡಿದ ಅರಸರು ಸಾಮಂತರು, ಅಧಿಕಾರಿಗಳೆಂದರೆ ಇಟ್ಟಿಗೆಯ ವಿರೂಪಾಕ್ಷನಿಗೆ ದಾನ ನೀಡಿದಾಗ ಉಲ್ಲೇಖಿತ ರಾಜ *ಕಳಚುರ್ಯ ರಾಯಮುರಾರಿ ಸೋವಿದೇವ ಅವನ ಸಾಮಂತ ಗರುಡಪಾಂಡ್ಯ; ದಾನನೀಡಿದವರು ಹೆಗ್ಗಡೆಜನ್ನಯ್ಯ, ಸಾಂತಗೌಡ, ಕಾಳಗೌಡ. ಇನ್ನೊಂದರಲ್ಲಿಯೂ ರಾಯಮುರಾರಿ ಸೋವಿದೇವ ಹಾಗೂ ಗರುಡ ಪಾಂಡ್ಯನ ಉಲ್ಲೇಖವಿದ್ದು ಇವನ ಸಾಮಂತ ಕಾಶ್ಯಪಗೋತ್ರದ ಹೆಗಡೆ ಕೇಶಿರಾಜಯ್ಯ, ಜಂನ್ನ, ಬೆಣ್ಣೆಹಳ್ಳಿ ವಿರೂಪಾಕ್ಷನಿಗೆ ಸಂಬಂಧಿಸಿದಂತೆ ಕ್ರಿ.ಶ. ೧೧೮೮ ರಿಂದ ೧೨೮೨ರ ವರೆಗೆ ಶಾಸನಗಳು ದೊರೆಯುತ್ತವೆ. ಚಾಳುಕ್ಯ ಇಮ್ಮಡಿ ಜಗದೇಕಮಲ್ಲ ಅವನ ಸಾಮಂತ ಜಗದೇಕಮಲ್ಲ ವೀರಪಾಂಡ್ಯ, ಶ್ರೀವೈಷ್ಣವ ಜನನಯನೋತ್ಪಳಸುಧಾಂಶು ವತ್ಸಚಮಾಪ, ಕದಂಬ ಘಟ್ಟಿದೇವ, ನಾಬಿದೇವರಸ, ಅಲ್ಲಮರಸ, ಕಲಿಂಗರಸ, ಮಲ್ಲರಸರ ಉಲ್ಲೇಖವಿದ್ದು ಅಲ್ಲಿ ಲಾಕುಲೀಶ ಪಂಥದ ಹೂಲಿಯ ಶ್ರೀ ಪಂಚಲಿಂಗ ದೇವಪಾದಾಬ್ಜ ಭ್ರಿಂಗರೂ, ಶ್ರೀಸಿಂಹಪರ್ಷೆ ಅಭಿನವಪಾಶುಪತಮಠದ ಶ್ರೀ ವಿದ್ಯಾರಾಶಿಪಂಡಿತನ ಶಿಷ್ಯ ಧರ್ಮರಾಶಿ ಪಂಡಿತನು ಗುರುವಾಗಿದ್ದ. ಊರಿನ ಹನ್ನೆರಡು ಜನ ಬ್ರಾಹ್ಮಣರು, ಶಿವದೇವರು, ಗೋವಿಂದಭಟ್ಟ, ಬಸವಣ್ಣಭಟ್ಟ, ದೇವಣಭಟ್ಟ, ನಾಚ್ಯಣಭಟ್ಟ, ಪಟ್ಟವರ್ಧನಕೇಶವಘೈಸ, ಶ್ರೀಧರಭಟ್ಟ, ಈಶ್ವರಘೈಸ, ಪದ್ಮಣಘೈಸ, ಆದಿತ್ಯಭಟ್ಟ, ದಾಶ್ಯಣಭಟ್ಟ, ಲಕ್ಷ್ಮೀಧರಭಟ್ಟರನ್ನು ಶಾಸನ ಹೆಸರಿಸುತ್ತದೆ. ವೀರಬಲ್ಲಾಳನ ಕಾಲದಲ್ಲಿ ಉತ್ತರಾಕ್ಕ ಹೆಗಡೆ, ಜಿನಯ್ಯ ಹೆಗಡೆ ಹೊಯ್ಸಳ ನಾರಸಿಂಹನ ಕಾಲದಲ್ಲಿ ನಾರಣವೆಗ್ಗಡೆ, ಗಿರಿಪಯ್ಯಪರಿಯಣ, ಸೂರಬೋವ, ಮಯರಬೋವ, ಸಾದರೆ ಬಿರಬೋವ, ನಂನಬೋವನಮಗ ಆಯಬೋವ, ಚಿಗಟೇರ*

ಚಂದಬೋವ, ಕುತ್ತುಂಗಿಯ ರಾಯಬೋವ ಹೊಳಗುಂದಿಯ ಗುಂಡಬೋವ, ಕೋಗಳಿಯ ನಂದಿಬೋವ ಮಾರಯಸಾವಂತನ ತಮ್ಮ ಮಸಣಯ ಸಾವಂತ ಹಾಗೂ ವೀರರಾಮಚಂದ್ರನ ಕಾಲದಲ್ಲಿ ರಾಜಗುರು ವುಭಣಯಿತವಾಹಿದೇವರಾಣಿ ಮುಂತಾದವರು ಬೆಣ್ಣೆಹಳ್ಳಿಯಲ್ಲಿ ಆ ಕಾಲಕ್ಕೆ ಇದ್ದವರು.

ಒಟ್ಟಿನಲ್ಲಿ ವಿರೂಪಾಕ್ಷದೇವಾಲಯಗಳನ್ನು ಕಟ್ಟಿಸಿರುವರು ಬ್ರಾಹ್ಮಣ ಅಧಿಕಾರಿಗಳು. ೧೦ನೆಯ ಶತಮಾನದ ನಂತರ ಈ ಪ್ರದೇಶದಲ್ಲಿ ವಿರೂಪಾಕ್ಷನ ಆರಾಧನೆ ಸ್ಮಾರ್ತಶೈವರ ಆರಾಧನಾ ರೂಪವಾಗಿ ಪ್ರಚಲಿತವಾಯಿತು. ವಿರೂಪಾಕ್ಷ ಲಿಂಗಗಳನ್ನು 'ಸ್ವಯಂಭೂ' ಎಂದು ಕರೆದಿದ್ದರೂ ಅವುಗಳ ಪಾಣಿಪೀಠಗಳು ಕಲ್ಯಾಣದ ಚಾಲುಕ್ಯರ ಕಾಲದವು. ಬೆಣ್ಣೆಹಳ್ಳಿ, ಒರುವಾಯಿ, ಹಂಪೆ ಈ ಮೂರು ಸ್ಥಳಗಳಲ್ಲಿ ಕ್ರಿ.ಶ. ೧೧೪೮ ರಿಂದ ಕ್ರಿ. ಶ. ಸುಮಾರು ೧೧೫೦ರೊಳಗೆ ವಿರೂಪಾಕ್ಷ ದೇವಾಲಯಗಳ ನಿರ್ಮಾಣವಾಗಿದೆ.

ವಿಜಯನಗರದ ಅರಸರು ತಮ್ಮ ತಾಮ್ರಶಾಸನಗಳಲ್ಲಿ ಬಳಸಿರುವ ಒಪ್ಪ ಶ್ರೀ ವಿರೂಪಾಕ್ಷ ಎಂಬುದು ಅವರಿಗಿಂತ ಮೊದಲೇ ಬೆಣ್ಣೆಹಳ್ಳಿ ಶಿಲಾಶಾಸನದಲ್ಲಿ ಬಂದಿದೆ. ವಿಜಯನಗರದ ಸಂಗಮ ಶಾಖೆಯ ಅರಸರ ಮೇಲೆ ಈ ದೈವ ಬಹುಪ್ರಭಾವವನ್ನು ಬೀರಿತ್ತು. ಶಾಸನಗಳಲ್ಲಿ ಆಗಮೋಕ್ತವಾದ ಪೂಜೆಗೆ ಹೆಚ್ಚಿನ ಒತ್ತುನೀಡಿರುತ್ತಾರೆ. ಲಕ್ಷಗಡುಗೆ ನೈವೇದ್ಯ ಇತ್ಯಾದಿ ಪದಗಳಿಂದ ಇವಕ್ಕೆ ಕುಂಭಾಭೀಷೇಕವಿದ್ದದು ತಿಳಿಯುತ್ತದೆ..

ಹೀಗೆ ವಿರೂಪಾಕ್ಷ ದೇವಾಲಯಗಳು ೧೧ನೆಯ ಶತಮಾನದಲ್ಲಿ ಆರಂಭವಾಗಿ ೧೨ನೆಯ ಶತಮಾನದಲ್ಲಿ ಉಚ್ಛ್ರಾಯಕ್ಕೇರಿ ಮುಂದೆ ಹಂಪಿಯೊಂದನ್ನುಳಿದು ಉಳಿದವು ಮೂಲೆ ಪಾಲಾದವು.

ಪ್ರೊ॥ ಕೆ. ಸಿ. ಮಲ್ಲಿಗವಾಡ*

# ಅಪೂರ್ವ ಶಿಲ್ಪಕಲೆಯ ಶ್ರೀ ಕಲ್ಮೇಶ್ವರ ದೇವಾಲಯ

ಧಾರವಾಡ ಜಿಲ್ಲೆಯಲ್ಲಿ ಕಾಮಧೇನುವಿನ ಶ್ರೀ ಕಲ್ಮೇಶ್ವರ ದೇವಾಲಯವು ಹುಬ್ಬಳ್ಳಿ ಕಾರವಾರ ಹೆದ್ದಾರಿಗೆ ಸುಮಾರು ೨ ಕಿ. ಮೀ. ಅಥವಾ ಕಲಘಟಗಿಯಿಂದ ೧೦ ಕಿ. ಮೀ. ಅಂತರದಲ್ಲಿದೆ. ಈ ದೇಗುಲ ಮಣ್ಣಿನ ಮಡ್ಡಿ ಅಥವಾ ಬೆಟ್ಟಗಳ ನಡುವೆ ಇರುವ ಕಾರಣ ದೂರದಿಂದ ಕಾಣುವುದೇ ಇಲ್ಲ; ಹೀಗಾಗಿ ರಕ್ಷಣಾತ್ಮಕ ನೆಲೆಯಲ್ಲಿದೆ ಎನಿಸುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಈ ದೇಗುಲವು ಪ್ರವೇಶ ದ್ವಾರವನ್ನು ಹೊರತುಪಡಿಸಿ ಉಳಿದೆಲ್ಲ ಭಾಗವು ಸುತ್ತಲೂ ಮಣ್ಣಿನಿಂದ ಮುಚ್ಚಲ್ಪಟ್ಟಿದ್ದುದು, ಮೇಲಿಂದ ಮೇಲೆ ಬರುತ್ತಿದ್ದ, ವೈರಿಪಡೆಗಳಿಂದ ದೇಗುಲನಾಶ ತಪ್ಪಿಸಲೆಂದಿರಬಹುದು. ಆದರೆ ಈಗ ಅದನ್ನು ಸಂಪೂರ್ಣವಾಗಿ ಮಣ್ಣಿನಿಂದ ಹೊರತೆಗೆದು ಸ್ವಚ್ಛವಾಗಿ ಇಡಲಾಗಿದೆ. ಅಲ್ಲದೇ ಈ ದೇವಾಲಯಕ್ಕೆ ಹೋಗಲು ಮಡ್ಡಿಯನ್ನು ಅಲ್ಲಿನ ಗ್ರಾಮದ ಜನರು ಅಗೆದು ತೆಗೆದು ರಸ್ತೆ ನಿರ್ಮಿಸಿದ್ದಾರೆ.

ಶ್ರೀ ಕಲ್ಮೇಶ್ವರ ದೇವಾಲಯದ ವಿವಿಧ ಮುಖಗಳನ್ನು ಪರಿಶೀಲಿಸಿದಾಗ ಇದೊಂದು ಕಲೆ ಮತ್ತು ವಾಸ್ತುಶಿಲ್ಪದ ಅಭೂತ ಪೂರ್ವ ಮಾದರಿ ಎನಿಸಿತು. ಅತ್ಯುತ್ತಮವಾಗಿ ಕಲ್ಲನ್ನು ಕೆತ್ತಿ ನಯಗೊಳಿಸಿ ಅಳತೆಗೆ ತಕ್ಕಂತೆ ಹಸಿರುಮಿಶ್ರಿತ ಕರಿಯ ಕಲ್ಲು ಹಾಗೂ ಉಸುಕು ಮಿಶ್ರಿತ ಬಿಳಿಗೆಂಪು ಕಲ್ಲನ್ನು ಕಂಡರಿಸಿ ಬೃಹದಾಕಾರವಾದ ದೇಗುಲ ನಿರ್ಮಿಸಲಾಗಿದೆ. ಅಲ್ಲಲ್ಲಿ ಇನ್ನೂ ಕೆಲ ಖಾಲಿ ಇರುವ ಗೂಡುಗಳನ್ನು ಶಿಲ್ಪಿಯು ಹಾಗೆಯೇ ಬಿಟ್ಟಿರುವದರಿಂದ ಈ ದೇಗುಲ ಇನ್ನೂ ಅಪೂರ್ಣಗೊಂಡಂತೆ ಕಾಣುತ್ತದೆ. ಪೂರ್ವ ಪಶ್ಚಿಮವಾಗಿ ೫೨' ಉದ್ದ ದಕ್ಷಿಣ ಉತ್ತರವಾಗಿ ೪೨' ಅಗಲ ಹಾಗೂ ೧೪' ಎತ್ತರವಾಗಿರುವ ಈ ದೇವಸ್ಥಾನವು ನಯನಮನೋಹರವಾಗಿದೆ. ದೇವಾಲಯದ ಸುತ್ತಲೂ ವಿಶಾಲವಾದ ಜಾಗೆ ಇದ್ದು ಪ್ರದಕ್ಷಿಣಾ ಪಥವನ್ನು ನಿರ್ಮಿಸಲಾಗಿದೆ. ಈ ಕಲ್ಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು ಒಟ್ಟು ೩ ಪ್ರವೇಶ ದ್ವಾರಗಳನ್ನು ಹೊಂದಿದೆ. ಪೂರ್ವ, ದಕ್ಷಿಣ, ಉತ್ತರ ದಿಕ್ಕುಗಳಲ್ಲಿದ್ದು ಇವೆಲ್ಲವುಗಳು ಸುಂದರವಾದ ಶಿಲಾಸ್ತಂಭ ಮಂಟಪಗಳಿಂದ ಕೂಡಿವೆ. ೩ ದ್ವಾರಗಳು ಸಮಾನಾಂತರದಲ್ಲಿದ್ದು ಇವೆಲ್ಲವುಗಳ ಮಧ್ಯದಲ್ಲಿಯೇ ಚಿಕ್ಕದಾದ ಸಭಾಮಂಟಪವಿದೆ. ಇದರಿಂದ ಮುಂದೆ ಪ್ರವೇಶಿಸಿದರೆ ಒಟ್ಟು ೩ ಪ್ರವೇಶದ್ವಾರಗಳಿವೆ. ಇವೆಲ್ಲವೂ ಸುಂದರವಾದ ಕೆತ್ತನೆಯಿಂದ ಕೂಡಿವೆ. ಮಧ್ಯದಲ್ಲಿರುವ ಬಾಗಿಲು ಅಲಂಕೃತಗೊಂಡಿದ್ದು ಬಾಗಿಲ ಮೇಲ್ಭಾಗದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರ ವಿಗ್ರಹಗಳಿವೆ. ಇದರ ಜೊತೆಗೆ ಸುಂದರವಾಗಿ ಕೆತ್ತಲ್ಪಟ್ಟ ಮಕರ ತೋರಣವು ದೇಗುಲಕ್ಕೆ ವಿಶೇಷ ಮೆರಗು ತರುವಂತಾಗಿದೆ.

ಶ್ರೀ ಕಲ್ಮೇಶ್ವರ ದೇವಾಲಯದ ನಿರ್ಮಾಣ ಹಾಗೂ ಕಾಲ ನಿರ್ಣಯಕ್ಕೆ ದೇಗುಲದ ಶೈಲಿ ಹಾಗೂ ಲಭ್ಯಶಾಸನಗಳೇ ಆಧಾರ. ಶಾಸನಗಳಲ್ಲಿ ಶ್ರೀ ಕಲ್ಮೇಶ್ವರನ ದೇವಾಲಯವನ್ನು ಮೊದಲು **ಕಲಿದೇವಸ್ವಾಮಿ** ಗುಡಿ ಎಂತಲೂ ಮತ್ತೊಂದು ಶಾಸನದಲ್ಲಿ **ಸ್ವಯಂಭು ಕಲಿದೇವರಗುಡಿ** ಎಂತಲೂ ಕರೆಯಲಾಗಿದೆ. ದೇವಾಲಯದ ಆವರಣ ದಲ್ಲಿರುವ ಶಾಸನಗಳಲ್ಲಿ ಒಂದು ಕ್ರಿ. ಶ. ೧೧೪೯ರದ್ದಾಗಿದ್ದು ಚಾಲುಕ್ಯರ ೩ನೇ ಸೋಮೇಶ್ವರನ ಕಾಲಕ್ಕೆ ಸೇರಿದೆ. ಇದರಲ್ಲಿ ಗೋವಾ ಕದಂಬರ ಅರಸನ ಕ್ರಿ. ಶ. ೧೧೪೯ರಲ್ಲಿಯ ಹಲಸಿಗ ನಾಡಿನ ಸಾಸಲು ಗ್ರಾಮದ ಸೌಂದರ್ಯ, ಸಂಪತ್ತು, ಸಮೃದ್ಧಿಯನ್ನು ತಿಳಿಸುತ್ತಾ ಇಲ್ಲಿ ಭತ್ತ, ಎಲೆವಳ್ಳಿ, ಹೂಬಳ್ಳಿಗಳು ಬೆಳೆದು ಸಿರಿ ನಾಡಾಗಿತ್ತೆಂದು ವರ್ಣಿಸಲಾಗಿದೆ. ಈ ಗ್ರಾಮದ ತೆಂಕಣದಲ್ಲಿ ಬಂದು ನೆಲೆಸಿದ ಅರಸ **ಕಪಾಲಿ ಕಲಿದೇವೇಶನು**, ತನ್ನ ಆರಾಧ್ಯ ದೇವನಾದ ಶ್ರೀ ಕಲಿದೇವಸ್ವಾಮಿಯ ಗುಡಿಗೆ ಮತ್ತು ಇಲ್ಲಿರುವ ದೇವರ ಸತ್ರಕ್ಕೆಂದು **ಹುಲಿವರದಮಲ್ಲಿಶೆಟ್ಟಿಯು** ಅಪಾರವಾದ ಭೂದಾನ ಹಾಗೂ ಧನದಾನ ಮಾಡಿದನೆಂದು ತಿಳಿಸಿ ನಿರಂತರವಾಗಿ ದೇವರ ಎಣ್ಣೆದೀವಿಗೆಗಾಗಿ ದಾನಗೈದ ವಿಷಯವನ್ನು ರಸವತ್ತಾಗಿ ಶಾಸನವು ವರ್ಣಿಸುತ್ತದೆ. ಆದರೆ ಇದೇ ದೇವಾಲಯದ ಆವರಣದಲ್ಲಿರುವ ಮತ್ತೊಂದು ಶಾಸನದ ಪ್ರಕಾರ ಅದೇ ವಂಶದ ಮಾಂಡಲಿಕ

* ಜಿ. ಇ. ಸಿ. ಸಂಯುಕ್ತ ಪದವಿ ಪೂರ್ವ ಕಾಲೇಜ, ರೊಟ್ಟಿಗವಾಡ, ಕುಂದಗೋಳ ತಾ, ಧಾರವಾಡ ಜಿ.

ಕುಮಾರ ಮಲ್ಲಯ್ಯನು ಕ್ರಿ. ಶ. ೧೧೭೧ರ ಶಾಸನದಲ್ಲಿ ತನ್ನ ಆರಾಧ್ಯದೇವನಾದ ಕಲಿದೇವನಿಗೆ ಭೂದಾನ ನೀಡಿದ ವಿವರವನ್ನು ತಿಳಿಸಿ ಇದೊಂದು ಅಪೂರ್ವವಾದ ದೇಗುಲ, ಇದರ ಪೂಜಾವಿಧಿಯು ಸೂರ್ಯ ಚಂದ್ರರಿರುವವರೆಗೂ ನಡೆಯುತ್ತಿರಲೆಂದು ಈ ದಾನ ಮಾಡಿರುವುದಾಗಿ ತಿಳಿಸಿ ದಾನ ನೀಡಿರುವುದು ವಿದಿತವಾಗಿದೆ.

ಇದೇ ದೇವಾಲಯದ ಆವರಣದಲ್ಲಿರುವ ತ್ರುಟಿತ ಶಾಸನದಲ್ಲಿ ಕ್ರಿ. ಶ. ೧೩ನೇ ಶತಮಾನದ ಮಾಂಡಲಿಕ ಅರಸನಾದ ಮಾದಿಗನನ್ನು ಉಲ್ಲೇಖಿಸಲಾಗಿದೆ. ಸಾಸಲು ಗ್ರಾಮದ ಸ್ವಯಂಭೋ ಕಲಿದೇವಸ್ವಾಮಿ ದೇಗುಲದ ಜೀರ್ಣೋದ್ಧಾರಕ್ಕೆಂದು ಒಂದು ಗಾವುದಭೂಮಿಯನ್ನು ದಾನ ನೀಡಿದ ವರ್ಣನೆ ಇದೆ. ಇದರಿಂದ ದೇವಾಲಯವು ಸುಮಾರು ೧೧ನೇ ಶತಮಾನದ ಪ್ರಾರಂಭ ದಲ್ಲಿಯೇ ನಿರ್ಮಾಣವಾಗಿರಬಹುದೆನ್ನಲಾಗಿದೆ. ಅಂದಿನ ಕಲಿದೇವರ ದೇಗುಲವೇ ಇಂದಿನ ಶ್ರೀ ಕಲ್ಮೇಶ್ವರ ದೇವಾಲಯವೆಂದು ಖ್ಯಾತಿಯನ್ನು ಪಡೆದಿದೆ.

ಈ ದೇವಾಲಯವು ಕಲ್ಯಾಣದ ಚಾಲುಕ್ಯ ಶೈಲಿಯ ಮಾದರಿಯಲ್ಲಿ ನಿರ್ಮಾಣವಾಗಿದ್ದರೂ ಸಹ ತಳಪಾಯವು ಗರ್ಭಗೃಹದಡಿಯಲ್ಲಿ ನಕ್ಷತ್ರದಾಕಾರದ ಜಗುಲಿಯ ಮೇಲೆ ನಿರ್ಮಾಣಗೊಂಡಿರುವುದು ವಿದಿತವಾಗುತ್ತದೆ. ದೇವಾಲಯವನ್ನು ಹಸಿರು ಮಿಶ್ರಿತ ಕರಿಯ ಕಲ್ಲು ಹಾಗೂ ಉಸುಕು ಮಿಶ್ರಿತ ಬಿಳಿಗೆಂಪು ಕಲ್ಲಿನಲ್ಲಿ ಅಚ್ಚುಕಟ್ಟಾಗಿ ನಿರ್ಮಿಸಲಾಗಿದೆ. ತಳಪಾಯಕ್ಕೆ ಸ್ಥಳೀಯವಾಗಿ ಲಭ್ಯವಾಗಿರುವ ಒರಟಾದ ಕರಿಯ ಕಲ್ಲನ್ನು ಬಳಸಿ ಬಿಗಿಬಂಧ ಮಾಡಲಾಗಿದೆ. ದೇವಾಲಯದ ತಲವಿನ್ಯಾಸವು ೪ ಅಡಿ ಎತ್ತರವಾದ ನಕ್ಷತ್ರದಾಕಾರದ ಜಗುಲಿಯ ಮೇಲೆ ನಿರ್ಮಾಣಗೊಂಡಿದ್ದು, ಗರ್ಭಗೃಹದ ನಿರ್ಮಾಣಕ್ಕೆ ಮಾತ್ರ ಶಿಲ್ಪಿಯು ಉಸುಕು ಮಿಶ್ರಿತ ಬಿಳಿಗೆಂಪುಕಲ್ಲನ್ನು ಬಳಸಿ ಉಳಿದ ಭಾಗವನ್ನು ಹಸಿರು ಮಿಶ್ರಿತ ಕಪ್ಪುಕಲ್ಲಿನಲ್ಲಿಯೇ ನಿರ್ಮಿಸಿದ್ದಾನೆ. ದೇವಾಲಯವು ವಿಶಾಲ ವಾಗಿದ್ದು ಒಳಭಾಗವು ಆಕರ್ಷಕವಾಗಿದೆ. ದೇಗುಲದ ಪೂರ್ವ ದ್ವಾರದ ಬಳಿ ಮೊದಲು ಎರಡು ಅಲಂಕೃತ ಕಂಬಗಳು, ನಂತರ ನಾಲ್ಕು, ನಂತರ ಆರು ಕಂಬಗಳನ್ನು ಹೊಂದಿದ ಮಂಟಪವಿದೆ. ಒಟ್ಟು ೪೦ ಕಂಬಗಳನ್ನೊಳಗೊಂಡ ಶಿಲಾ ಮಂಟಪವು ವಿಭಿನ್ನ ರೀತಿಯಲ್ಲಿ ರಚನೆಗೊಂಡಿದೆ. ಪ್ರವೇಶದ್ವಾರದ ನಂತರ ಸುಖನಾಸಿ, ಅಂತರಾಳ, ಇದಕ್ಕೂ ಮುಂದೆ ವಿಶಾಲವಾದ ತೆರೆದ ಮಂಟಪದ ಮಧ್ಯದಲ್ಲಿಯೇ ಸುಂದರವಾದ ೪ ಅಲಂಕೃತ ಕಂಬಗಳ ಮಧ್ಯದಲ್ಲಿ ಸಭಾಮಂಟಪವು ಕಂಗೊಳಿಸುತ್ತಿದೆ. ಇದಕ್ಕೆ ವಿಶೇಷವಾಗಿ ಅಲಂಕಾರಗೊಳಿಸಿರುವ ಕಂಬಗಳನ್ನು ಜೋಡಿಸ ಲಾಗಿದೆ. ಸ್ತಂಭಗಳು ಗಾಡಕ್ಕೆ ಹಚ್ಚಿ ತೆರೆದಂತಿವೆ. ಕೆಳಭಾಗದಲ್ಲಿ ಚೌಕಾಗಿದ್ದ ಮಧ್ಯ ಹಾಗೂ ಮೇಲ್ಭಾಗದಲ್ಲಿ ವೃತ್ತಾಕಾರವಾದ



ಗಗ್ಗರಿಗಳನ್ನು ಗುಮರಿಗಳನ್ನು ಕೆತ್ತಲಾಗಿದೆ. ನಡುನಡುವೆ ಪುಷ್ಪ ಬಳ್ಳಿಗಳ ಸುಳಿವನ್ನು ಬಿಡಿಸಲಾಗಿದೆ. ಕಂಬಗಳ ಮೇಲ್ಭಾಗದಲ್ಲಿರುವ ತೊಲೆ ಬೋದುಗೆಗಳೂ ಸಹ ಅಲಂಕೃತವಾಗಿವೆ. ಬೋದುಗೆಗಳು ವೃತ್ತಾಕಾರವಾಗಿ ಕುದುರೆಮುಖದ ಭಂಗಿಯಲ್ಲಿದ್ದು ಇಲ್ಲಿಯೂ ಕಂಬಗಳ ಮೇಲ್ಭಾಗದ ಮೂಲೆಗಳನ್ನು ನಕ್ಷತ್ರದಾಕಾರದಲ್ಲಿ ಬಿಡಿಸಲಾಗಿದೆ. ಸಭಾಮಂಟಪದ ಮೇಲ್ಛತ್ತಿನಲ್ಲಿ ೯ ಕಮಲದ ಹೂಗಳ ಪಟ್ಟಿಕೆಗಳನ್ನು ಅತಿ ಸುಂದರವಾಗಿ ಹಾಗೂ ಸೂಕ್ಷ್ಮವಾಗಿ ಬಿಡಿಸಲಾಗಿದೆ. ಇಲ್ಲಿ ಸುರುಳಿ ಗೆತ್ತನೆಯನ್ನು ಬಳಸಿ ನಯನಾಜೂಕಿ ನಿಂದ ಚಿತ್ರಗಳನ್ನು ಕಡೆಯಲಾಗಿದೆ. ಅಲ್ಲದೇ ಸಭಾಮಂಟಪದ ಎಡ ಬಲ ಅಂಕಣಗಳ ಮೇಲ್ಛತ್ತಿನಲ್ಲಿಯೂ ಸಹ ಆರು ಕಮಲದ ಹೂವಿನ ಪಟ್ಟಿಕೆಯನ್ನು ನಿರ್ಮಿಸಲಾಗಿದೆ. ಪ್ರವೇಶದ್ವಾರವು ತ್ರಿಶಾಖಾಲಂಕಾರವಾಗಿದೆ. ಸಭಾಮಂಟಪದ ಸುತ್ತಲೂ ಸುಖನಾಸಿ ಕಕ್ಷಾಸನವಿದ್ದು ಇಲ್ಲಿ ಕುಳಿತುಕೊಳ್ಳಲು ಅನುಕೂಲ ಕಲ್ಪಿಸಲಾಗಿದೆ. ಇವುಗಳ ಮೇಲೆಯೆ ಹತ್ತು ಕಂಬಗಳನ್ನು ನಿಲ್ಲಿಸಿ ಮೇಲ್ಛತ್ತಿಗೆ ಆಧಾರವಾಗಿಸಲಾಗಿದೆ. ಇದನ್ನು ಈಗ ಟೈಲ್ಸ್‌ಗಳಿಂದ ಜೀರ್ಣೋದ್ಧಾರಗೊಳಿಸಲಾಗಿದೆ. ಇದರ ಎಡಬಲಗಳಲ್ಲಿ ಕಮಲದಾಕಾರದ ಕಿಂಡಿಗಳುಳ್ಳ ಜಾಲಂದ್ರಗಳನ್ನು ನಿರ್ಮಿಸಿ ದೇವಾಲಯಕ್ಕೆ ಬೆಳಕುಗಾಳಿ ಬರುವಂತೆ ಮಾಡಲಾಗಿದೆ. ಪ್ರತಿಯುಗಾದಿಯ ದಿನ ಸೂರ್ಯೋದಯದ ಕಿರಣಗಳು ಗರ್ಭಗೃಹದಲ್ಲಿರುವ ಸ್ವಯಂಭು ಶ್ರೀ ಕಲ್ಮೇಶ್ವರಸ್ವಾಮಿಯ ಲಿಂಗದ ಮೇಲೆ ಬೀಳುತ್ತಿರುವುದು ವೈಜ್ಞಾನಿಕ ರೀತಿಯ ಕುರುಹಾಗಿ ಪರಿಣಮಿಸಿದೆ. ಬಾಗಿಲುವಾಡವನ್ನು ಚಿಕ್ಕಶಿಲಾಸ್ತಂಭ ಗಳು ಹಾಗೂ ಕಮಲದಾಕಾರದ ಹೂವಿಲೆ ಹೊತ್ತು ನಿಂತಂತೆ ಕಾಣುತ್ತದೆ. ದ್ವಾರಪಾಲಕರು ಹಾಗೂ ಬ್ರಹ್ಮ, ವಿಷ್ಣುವಿನ ವಿಗ್ರಹಗಳೂ ಇವೆ. ಬಾಗಿಲ ಮೇಲೆ ಕಮಾನು ಕಳಸಗಳಿವೆ. ಎಡಬಲದ ಪಟ್ಟಿಗಳು ವಿವಿಧ ಮೂಲೆಗಳನ್ನೊಳಗೊಂಡಿವೆ. ಮುಂದೆ ನಡೆದರೆ ಶ್ರೀ ನಂದಿ ವಿಗ್ರಹ ಕಾಣುತ್ತದೆ. ಮಲಗಿದ ಭಂಗಿಯಲ್ಲಿರುವ ಈ ಬಸವನ ಕೊರಳಲ್ಲಿ ಗೆಜ್ಜೆ ಗಂಟೆ ಗುವರಿ ಲಗಾಮು ಧರಿಸಲಾಗಿದೆ. ಬಲಗಾಲು ಮುಂದೆ ಮಾಡಿದೆ. ಈ

ಅಂಕಣದಲ್ಲಿ ಕಲಾಕೌಶಲ್ಯಗಳ ಕೂಟವೇ ಕಣ್ಣಿಗೆ ಬೀಳುತ್ತದೆ. ಇದು ೨ನೇ ಪ್ರವೇಶದ್ವಾರವಾಗಿದ್ದು ಇಲ್ಲಿ ಬಾಗಿಲು ದಾಟುವ ಎಡಬಲಗಳಲ್ಲಿ ದ್ವಾರಪಾಲಕರು, ಬ್ರಹ್ಮ, ಶಿವನ ವಿಗ್ರಹಗಳನ್ನು ಕೆತ್ತಲಾಗಿದೆ. ಹೊಸ್ತಿಲ ಕೆಳಗೆ ೨ ಆನೆಗಳು ದಕ್ಷಿಣೋತ್ತರ ಮುಖಮಾಡಿ ಈ ದೇಗುಲವನ್ನು ಹೊತ್ತು ನಿಂತಂತೆ ಕಾಣುತ್ತವೆ. ಬಾಗಿಲ ಚೌಕಟ್ಟುಗಳು ಚಿತ್ತಾರದ ಕೂಟವನ್ನೇ ಹೊಂದಿವೆ. ಬಾಗಿಲ ಮೇಲ್ಭಾಗದಲ್ಲಿ ಬ್ರಹ್ಮ ಶಿವ ವಿಷ್ಣುವಿನ ವಿಗ್ರಹಗಳು ಹಾಗೂ ಎಡಬಲಗಳಲ್ಲಿ ಮಕರತೋರಣವಿದ್ದು ಮೊಸಳೆಯ ಮೇಲೆ ಉಮಾಮಹೇಶ್ವರರು ಆಸೀನರಿದ್ದಂತೆ ಕಾಣುತ್ತದೆ. ಬಾಗಿಲದ ಬಲಗಡೆ ೨ ಗೋಡೆಗಳಿವೆ. ಇವು ದೇವಕೋಷ್ಠವನ್ನು



ಹೊಂದಿವೆ. ಒಂದರಲ್ಲಿ ಶ್ರೀ ಗಣೇಶನ ವಿಗ್ರಹವು ಕುಳಿತ ಭಂಗಿಯಲ್ಲಿದೆ. ಮತ್ತೊಂದು ದಕ್ಷಿಣದ ಗೋಡೆಯಲ್ಲಿ ಸಪ್ತಮಾತೃಕೆಯರ ವಿಗ್ರಹಗಳು ಪ್ರತಿಷ್ಠಾಪಿಸಲ್ಪಟ್ಟಿವೆ. ಇದರಲ್ಲಿ ಒಂದು ತ್ರುಟಿತಗೊಂಡಿದೆ. ಬಾಗಿಲ ಎಡಭಾಗದಲ್ಲಿ ಮಹಿಷ ಮರ್ದಿನಿ ವಿಗ್ರಹವಿದ್ದು ಅಷ್ಟಭುಜಗಳನ್ನು ಹೊಂದಿದೆ. ಡಾಲು, ಖಡ್ಗ, ಗದೆ, ಚಕ್ರಗಳನ್ನು ಹಿಡಿದು ರಾಕ್ಷಸರನ್ನು ಸಂಹರಿಸುವ ಬಹು ಸುಂದರವಾದ ಸಿಂಹವಾಹಿನಿ ವಿಗ್ರಹವಿದಾಗಿದೆ. ಎಡಭಾಗದ ಉತ್ತರದ ಗೋಡೆಯಲ್ಲಿ ಕೇಶವನ ವಿಗ್ರಹವು ಚತುರ್ಭುಜಗಳನ್ನು ಹೊಂದಿದ್ದು ಶಂಖ, ಚಕ್ರ, ಗದೆಗಳನ್ನು ಹಿಡಿದು ಸ್ಥಾನಕ ಭಂಗಿಯಲ್ಲಿದೆ. ಅಲಂಕೃತ ಸುಂದರ ಕಿರೀಟವನ್ನು ಹೊಂದಿದೆ. ಪಾದದ ಹತ್ತಿರ ೮ ಜನ ಸೇವಕರು ಮದನಿಕೆಯರು ಎಡಬಲ ಭಾಗದಲ್ಲಿದ್ದು ಕೈಯಲ್ಲಿ ಚಾಮರ ಛತ್ರಿ ಬೀಸಣಿಕೆ ಧ್ವಜಗಳನ್ನು ಹಿಡಿದು ಸೇವೆಗೈಯುತ್ತಿದ್ದಾರೆ. ಇದರ ಪಕ್ಕದಲ್ಲಿ ಚತುರ್ಭುಜ ಆಸೀನ ಭೈರವ ಇದ್ದಾನೆ. ಇವನು ಮೇಲ್ಮೊಗ ಮಾಡಿ ಎಡಗೈಯಲ್ಲಿ ಪಾತ್ರ ಬಲಗೈಯಲ್ಲಿ ಖಡ್ಗ, ಬ್ರಹ್ಮಾಸ್ತ್ರ, ಶಂಖಗಳನ್ನು ಹಿಡಿದಿದ್ದಾನೆ. ಇದು ಅತ್ಯಾಕರ್ಷಕವಾದ ವಿಗ್ರಹವಾಗಿದೆ. ಬಾಗಿಲಿನ ಆಜು ಬಾಜಿನಲ್ಲಿ ಜಾಲಂಧ್ರಗಳನ್ನು ಜೋಡಿಸಿ ದ್ವಾರಬಂಧವನ್ನು ಮಾಡಿದ್ದಾರೆ. ಇವು ಶಿಥಿಲಗೊಂಡಿವೆ. ಮೇಲ್ಭಾಗದಲ್ಲಿ ಯಾವುದೇ ಕೆತ್ತನೆಗಳ ಸುಳಿವು ಕಂಡುಬರುವುದಿಲ್ಲ ಮಧ್ಯದಲ್ಲಿರವ ಕಂಬಗಳು ಸಂಪೂರ್ಣ ಅಲಂಕಾರಗೊಂಡಿದ್ದು ಗಗ್ಗರಿ ಗುಮರಿಯಾಕಾರದಲ್ಲಿ ಕೆತ್ತಲ್ಪಟ್ಟಿವೆ. ಇದನ್ನು ದಾಟಿ ಒಳ ಪ್ರವೇಶಿಸಿದರೆ ಮತ್ತೊಂದು ಅಂತರಾಳ ಕಂಡುಬರುತ್ತದೆ. ಮೇಲ್ಭಾಗದಲ್ಲಿ ಅಷ್ಟಕೋನಾಕೃತಿಯಲ್ಲಿ ಸಲೀಸಾಗಿ ಕೆತ್ತಲಾಗಿರುವ ಸುಂದರ ಕಮಲದ ಸುತ್ತಲೂ ೮ ಮೂಲೆಗೂ ಒಂದೊಂದರಂತೆ ಕಮಲದ ಹೂಗಳನ್ನು ಬಿಡಿಸಲಾಗಿದೆ. ತಾವರೆ ಹೂವಿನಂತಿರುವ ಈ ಪುಷ್ಪವು ಮನಾಕರ್ಷಕವಾಗಿದೆ. ಮೇಲ್ಛತ್ತಿನ ಕಲ್ಲಿನ ಜೋಡಣೆಯಲ್ಲಿ ಇದನ್ನು ಅತೀ ಸೂಕ್ಷ್ಮ ಹಾಗೂ ಚಾಣ್ಮೆಯಿಂದ ಕಡಿದು ಕೂಡ್ರಿಸಿರುವುದು ಶಿಲ್ಪಿಯ ಕಲಾ ಕೌಶಲ್ಯತೆಗೆ ಸಾಕ್ಷಿಯಾಗಿದೆ. ಈ ಕೆತ್ತನೆಯ ಕೆಳಭಾಗದ ನೆಲದಲ್ಲಿ ಅಥವಾ ಆಜೂಬಾಜೂ ಗೋಡೆಯಲ್ಲಿಯೂ ಸಹ ಒಂದು ಗೆರೆಯ ಯಾವುದೇ ಕೆತ್ತನೆಯ ಚಿತ್ತಾರಗಳಿರುವುದಿಲ್ಲ. ಇದನ್ನು ದಾಟಿ ಅತಿ ಮುಖ್ಯವಾದ ಗರ್ಭ ಗೃಹವನ್ನು ಪ್ರವೇಶಿಸಿದರೆ ಬಾಗಿಲುವಾಡಗಳನ್ನು ಸುಂದರವಾಗಿ ಎಡಬಲಗಳಲ್ಲಿ ಅಲಂಕಾರಗೊಳಿಸಲಾಗಿದೆ. ಹೊಸ್ತಿಲ ಕೆಳಗೆ ಗಜಗಳು ಪೂರ್ವಕ್ಕೆ ಮುಖವಮಾಡಿ ಕಾಲನ್ನು ಮಡಿಚಿ ಗರ್ಭಗೃಹ ವನ್ನು ಹೊತ್ತಂತೆ ಕಾಣುತ್ತದೆ. ಹಣೆಪಟ್ಟಿಯಲ್ಲಿ ಚಿಕ್ಕ ಚಿಕ್ಕ ಗೋಪುರವನ್ನು ಅಂದರೆ ಪಂಚಗೋಪುರಗಳನ್ನು ನಿರ್ಮಿಸಿದ್ದು ಬಾಗಿಲಿಗೆ ವಿಶೇಷ ಮೆರಗು ತರುವಂತಾಗಿದೆ. ಗರ್ಭಗೃಹವನ್ನು ಒಳ ಪ್ರವೇಶಿಸಿದರೆ ಅದು ೪ ಮಜಭೂತಾದ ಬೃಹತ್ ಕಂಬಗಳ ಮಧ್ಯೆ ನಿರ್ಮಿತವಾಗಿರುವುದು ಕಾಣುತ್ತದೆ. ಒಳಗಡೆ ಎಡಭಾಗದ ಗೋಡೆಯಲ್ಲಿ ೪ ಚಿಕ್ಕ ಚಿಕ್ಕ ಕಲ್ಲಿನ ಮಾಡುಗಳನ್ನು ನಿರ್ಮಿಸಲಾಗಿದೆ. ಹಾಗೂ ಪಶ್ಚಿಮದ ಗೋಡೆಯಲ್ಲಿಯೂ ಸಹ ಒಂದು ಮಾಡನ್ನು ನಿರ್ಮಿಸಲಾಗಿದೆ.

ಈ ರೀತಿಯಾದ ಮಾಡುಗಳು ಕಂಡುಬರುವುದು ಅಪರೂಪ. ಬಹುತೇಕವಾಗಿ ಇವುಗಳನ್ನು ಕಾರ್ತಿಕ, ಶ್ರಾವಣ ಮಾಸಗಳಲ್ಲಿ ಶ್ರೀ ಕಲ್ಮೇಶ್ವರ ದೇವರಿಗೆ ಕಾರ್ತಿಕ ದೀಪ ಹಚ್ಚಿಡಲು ಮಾಡಲಾಗಿದೆ ಎನ್ನಬಹುದು. ಪಶ್ಚಿಮದ ಗೂಡಿನಲ್ಲಿ ಸಹ ಒಂದು, ದೇವಕೋಷ್ಠವಿದ್ದು ವಿಗ್ರಹರಹಿತವಾಗಿದೆ.

ಗರ್ಭಗೃಹದಲ್ಲಿ ಸುಂದರ ಶಿವಲಿಂಗವಿದೆ. ಅತಿ ಸೂಕ್ಷ್ಮವಾದ ಸಾಧನಗಳನ್ನು ಬಳಸಿ, ಪ್ರಮಾಣಬದ್ಧವಾಗಿ ನಿರ್ಮಿಸಿರುವ, ಈ ಶಿವಲಿಂಗವೇ ಅಂದಿನ ಸ್ವಯಂಭು ಶ್ರೀ ಕಲಿದೇವಸ್ವಾಮಿ ಅಥವಾ ಕಲಿದೇವರೇ ಇಂದಿನ ಶ್ರೀ ಕಲ್ಮೇಶ್ವರ ದೇವರಾಗಿದ್ದಾನೆ. ಶಿವಲಿಂಗದ ಕೆತ್ತನೆಯಲ್ಲಿ ಕೇವಲ ಜಲಹರಿಯು ನಕ್ಷತ್ರದಾಕಾರದ ವೇದಿಕೆ ಹಾಗೂ ಸೋಮ ಸೂತ್ರ ಸಹಿತವಾದ ಲಿಂಗಬಾಣವನ್ನು ಮಾತ್ರ ಕಾಣುತ್ತೇವೆ. ಬೇರೆ ಮಾದರಿಗಳಲ್ಲಿರುವಂತೆ ಶಿವಲಿಂಗಕ್ಕೆ ಪೀಠ ಮಧ್ಯಭಾಗಗಳು ಕಂಡುಬರುವುದಿಲ್ಲ. ಜಲಹರಿಯು ವಿಶಾಲವಾಗಿದ್ದು ಅಭಿಷೇಕದ ಜಲವು ಸಾಗಲನುಕೂಲವಾಗಿದೆ. ಆದರೆ ಬಾಣವು ಮಾತ್ರ ಅಳತೆಗಿಂತ ದೊಡ್ಡದಾಗಿದೆ. ಸುಮಾರು ೧.೫ ಅಡಿ ಎತ್ತರ ಹಾಗೂ ೨ ಅಡಿ ಸುತ್ತಳತೆಯನ್ನು ಹೊಂದಿದೆ. ಗರ್ಭಗೃಹದ ಮೇಲ್ಛತ್ತಿನಲ್ಲಿ ಹೊರ ಅಂಕಣದಲ್ಲಿರುವಂತೆ ಅಷ್ಟಕೋನಾಕೃತಿಯ ಮಧ್ಯಭಾಗದಲ್ಲಿ ತಾವರೆ ಹೂವನ್ನು ಬಿಡಿಸಿ ಅಲ್ಲಿಯೂ ಮೂಲೆಗೊಂದರಂತೆ ಕಮಲವನ್ನು ಕೊರೆದಿದ್ದಾರೆ. ಈ ಮೇಲ್ಛತ್ತಿನ ಅಂಕಣವು ಪ್ರತಿಷ್ಠಿತವಾದ ಕಲಾಕೌಶಲ್ಯವನ್ನು ಹೊಂದಿದೆ. ಇನ್ನೂ ದೇವಾಲಯದ ಮೇಲ್ಛತ್ತು ಸಂಪೂರ್ಣ ಶಿಥಿಲಗೊಂಡು ಜಖಂಗೊಂಡಿದೆ. ಆದರೆ ಈಗಿನ ಟ್ರಸ್ಟ್ ಕಮಿಟಿಯವರು ಸರಕಾರದ ಧನಸಹಾಯದಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರ ಗೊಳಿಸಿದ್ದರಿಂದ ದೇಗುಲಕ್ಕೆ ಕಳೆ ಬರುವಂತಾಗಿದೆ. ಮೊದಲು ಮೇಲ್ಛತ್ತಿಗಿದ್ದ ಮಣ್ಣಿನ ಮೇಲ್ಮುದ್ದೆಯನ್ನು ತೆಗೆದು ಈಗ ಸಿಮೆಂಟಿನ ಹೊದಿಕೆಯನ್ನು ಹೊಂದಿಸಿದೆ.



ದೇವಾಲಯದ ಸುತ್ತಲೂ ಕಲೆ ವಾಸ್ತುಶಿಲ್ಪದ ವೈಖರಿ ಕಾಣುತ್ತದೆ. ಒಳಗಿರುವ ಕಕ್ಷಾಸನದ (ಕಟ್ಟೆ) ಸುತ್ತಲೂ ಹೊರಗೆ ಸ್ತಂಭ ಹಾಗೂ ಶಿಖರಗಳನ್ನು ಅತೀ ಅಚ್ಚುಕಟ್ಟಿನಿಂದ ನಿರ್ಮಿಸಿದ್ದಾರೆ. ಎರಡು ಶಿಖರಗಳ ಮಧ್ಯೆ ವೀರ ಕ್ರಿಯಾಭಂಗಿಯ ಸಿಂಹವನ್ನು ಕೆತ್ತಿರುವುದರಿಂದ ಕಳೆ ಇನ್ನೂ ಹೆಚ್ಚಿದೆ. ದೇಗುಲ ನಕ್ಷತ್ರದಾಕಾರದಲ್ಲಿದ್ದ ಕಾರಣ ಮೂಲೆಗೊಂದರಂತೆ ಗೋಡೆಯ ಮೇಲ್ಭಾಗದಲ್ಲಿ ಚಿಕ್ಕದೇವಾಲಯವನ್ನು ನಿರ್ಮಿಸಿದ್ದಾರೆ. ಗರ್ಭಗೃಹದ ಸುತ್ತಲೂ ವಿಶೇಷ ಕೆತ್ತನೆಗಳಿಲ್ಲದಿದ್ದರೂ ಗೋಡೆಗಳ ಮೂಲೆಗಳನ್ನು ಅಲಂಕಾರಿಕವಾಗಿ ಕಡೆದಿದ್ದಾರೆ. ಗರ್ಭಗೃಹದ ಉತ್ತರ ದಕ್ಷಿಣ ಪಶ್ಚಿಮ ದಿಕ್ಕುಗಳಲ್ಲಿ ದೇವಕೋಷ್ಠದ ಗೂಡುಗಳನ್ನು ಬಿಟ್ಟಿದ್ದಾರೆ. ಆದರೆ ಇಲ್ಲಿಯೂ ಸಹ ಯಾವುದೇ ವಿಗ್ರಹಗಳಿಲ್ಲ. ಗರ್ಭಗೃಹವು ೪ ಅಡಿ ಎತ್ತರವಾದ ನಕ್ಷತ್ರದಾಕಾರದ ಮೂಲೆಗಳನ್ನೊಳಗೊಂಡ ಪೀಠದ ಮೇಲೆಯೇ ನಿರ್ಮಾಣವಾಗಿದೆ. ತಳಪಾಯವು ಕರಿಯ ಕಲ್ಲಿನದಾಗಿದ್ದು ಗೋಡೆ ಹಾಗೂ ಕಂಬಗಳು ಮಾತ್ರ ಉಸುಕು ಮಿಶ್ರಿತ ಬಿಳಿಕಲ್ಲಿನಿಂದ ಕೆತ್ತಲ್ಪಟ್ಟಿವೆ. ಈಗ ಮಳೆ ಗಾಳಿಗೆ ಸಿಲುಕಿ ಕಪ್ಪಾಗಿ ಕಾಣುತ್ತಿದೆ. ಇದ್ದುದರಲ್ಲಿಯೇ ಕಲ್ಲನ್ನು ನುಣುಪಾಗಿ ಕೆತ್ತಿ ವಿವಿಧ ಕಮಾನುಗಳಿಂದ ಅಲಂಕರಿಸಿ ಸಿಂಗರಿಸಲಾಗಿದೆ. ಇದು ಬಹುತೇಕವಾಗಿ ಬಾದಾಮಿ ಚಾಲುಕ್ಯರು



ನಿರ್ಮಿಸಿದ ಬಾದಾಮಿ ಗುಹಾದೇವಾಲಯಗಳ ಕಲ್ಲಿನ ಮಾದರಿಯನ್ನೇ ಹೋಲುತ್ತದೆ.

ಈ ದೇವಾಲಯದ ಕಕ್ಷಾಸನದ ಸುತ್ತಲಿರುವ ಶಿಖರಗಳು ಪ್ರಾಚೀನವಾದ ದ್ರಾವಿಡ ಶೈಲಿಯಲ್ಲಿರುವುದು ಕಂಡುಬರುತ್ತದೆ. ಗರ್ಭಗೃಹದ ಹಿಂಭಾಗ ಎಡಬಲಗಳ ಮೇಲ್ಭಾಗದಲ್ಲಿ ಸುಂದರವಾದ ದೇವಾಲಯದ ಗೋಪುರ ಮಾದರಿಯನ್ನು ಕೆತ್ತಿದ್ದಾರೆ. ದೇವಾಲಯದ ಗೋಡೆಯ ಸುತ್ತಲೂ ೪ ಪಕಳೆಗಳ ಕಮಲದ ಹೂವನ್ನು ಬಿಡಿಸಿರುವುದು ಸಾಲು ಬಳ್ಳಿಗಳ ನೆನಪನ್ನು ತರವಂತಿದ್ದು ದೇವಾಲಯವನ್ನು ಸುಂದರಗೊಳಿಸಿದ ಕೀರ್ತಿ ಶಿಲ್ಪಿಗೆ ಸಲ್ಲುತ್ತದೆ.

ಸಭಾಮಂಟಪದ ಮೇಲ್ಛಾವಣಿಯಲ್ಲಿ ಚಿತ್ತಾಕರ್ಷಕ ಕೆತ್ತನೆಯನ್ನು ಕೆತ್ತಿದ್ದ ಪಟ್ಟಿಕೆಗಳಲ್ಲಿ ಅತಿ ಸೂಕ್ಷ್ಮವಾದ ಪ್ರತ್ಯೇಕ ೯ ಹಾಗೂ ೬ ಪುಷ್ಪಗಳನ್ನು ಬಿಡಿಸಿ ಸುತ್ತಲೂ ಮತ್ತೊಂದು ಸಾಲು ಲತಾಗುಚ್ಛಗಳನ್ನು ನಿರ್ಮಿಸಿರುವುದು ದೇವಾಲಯದ ಮೇಲ್ಪತ್ತಿಗೆ ವಿಶೇಷ ಕಳೆತರುವಂತಾಗಿದೆ.

ಪುರಾತನ ಕಾಲದ ದೇವಾಲಯ ಇದಾಗಿದ್ದರಿಂದಲೇ ಇಲ್ಲಿ ಕಲ್ಯಾಣ ಚಾಲುಕ್ಯರು ಗೋವಾ ಕದಂಬರು ಕೊಂಕಣದ ಅರಸರು ಆಳಿಕೆ ನಡೆಸಿದರೆನ್ನಲಾಗುವುದು ನಿಸ್ಸಂದೇಹವಾದ ಮಾತಾಗಿದೆ. ದೇವಾಲಯವನ್ನು ಒಳ ಪ್ರವೇಶಿಸಿದರೆ ದೀಪ ಸ್ತಂಭ, ಸೌಂದರ್ಯ ಪೂರ್ಣ ವಾಸ್ತುಶಿಲ್ಪ ಕುಸುರಿ ಕೆತ್ತನೆಗಳು ಮನಸೆಳೆಯುತ್ತವೆ. ಇದು ಕಲಾವಿದರ ಕಲಾಕೌಶಲ್ಯವನ್ನು ಪ್ರತಿಬಿಂಬಿಸುವಂತಿದೆ. ಕಾಮಧೇನುವಿನ ಈ ದೇವಾಲಯವು ಕೂಡಾ ಬೇಲೂರು, ಹಳೇಬೀಡುಗಳಂತೆ ಶಿಲ್ಪಕಲೆಗೆ ಹೆಸರಾಗಿದೆ. ಎಲೆಮರೆಯ ಕಾಯಿಯಂತೆ ಹಲವಾರು ದೃಷ್ಟಿಗೆ ಗೋಚರಿಸದ ಕೆಲವಾರು ಕೆತ್ತನೆಗಳು ಸಹ ಇಲ್ಲಿ ಗೋಚರಿಸುತ್ತಿವೆ. ಇಲ್ಲಿರುವ ಸೂಕ್ಷ್ಮ ಕೆತ್ತನೆಗಳು ಮನದುಂಬುತ್ತವೆ. ದೇಗುಲದ ಸುತ್ತಲೂ ಗೋಡೆಯ ಮೇಲೆ ಗೋಪುರಗಳನ್ನು ನಿರ್ಮಿಸಿದ್ದು ಇದರ ಕೆಳಭಾಗದಲ್ಲಿ ಸಪಾತಾದ ಕಲ್ಲು ಇದ್ದು ಇನ್ನೂ ವಿಗ್ರಹವನ್ನು ಕೆತ್ತಲು ಅನುಕೂಲವಾಗಲೆಂದು ಬಿಟ್ಟಿರುವಂತೆ ತೋರುತ್ತದೆ.

**ನಿರ್ಲಕ್ಷಿತ ಶಿಲ್ಪಾವಶೇಷಗಳು**

ಈ ದೇವಾಲಯದ ಎಡಭಾಗದಲ್ಲಿ ಉತ್ತರ ದಿಕ್ಕಿನಲ್ಲಿ ಭಿನ್ನಗೊಂಡಿರುವ ಶಿವಲಿಂಗವು ಇದ್ದು ಇದರ ಬಾಣವು ಮಾಯವಾಗಿದೆ. ಎಡಕ್ಕಿರುವ ಉದ್ದವಾದ ಜಲಹರಿಯೂ ಸಹ ಅರ್ಧ ಸೀಳಿದೆ. ಬಹುತೇಕವಾಗಿ ಮೊದಲು ಇದನ್ನು ಈ ದೇವಾಲಯದಲ್ಲಿ ನಿರ್ಮಿಸಿರಬಹುದು. ಆದರೆ ಕಾರಣಾಂತರದಿಂದ ಭಿನ್ನಗೊಂಡಿದ್ದರಿಂದ ಈಗಿರುವ ಬೃಹತ್ ಶಿವಲಿಂಗವನ್ನು ಪ್ರತಿಷ್ಠಾಪಿಸಿರಬಹುದು ಇದರ ಎಡಭಾಗದಲ್ಲಿರುವ ಇನ್ನೊಂದು ವಿಷ್ಣುವಿನ ವಿಗ್ರಹ ಹಾಗೂ ಸಪ್ತಮಾತೃಕೆಯರ ತ್ರುಟಿತ ವಿಗ್ರಹಗಳು ಒಡೆದ ಗೋಪುರಗಳು ನಮ್ಮ ಕಣ್ಣಿಗೆ ಗೋಚರಿಸುತ್ತವೆ. ಬಹುಶಃ ಇವು ವೈರಿಗಳ ದಾಳಿಗೆ ಸಿಲುಕಿ ಒಡೆದು ಹಾಳಾಗಿ ಹೋಗಿರಬಹುದು. ಇವುಗಳು ಬನ್ನಿಗಿಡದ ಕಟ್ಟೆಯ ಮೇಲೆ ಇವೆ.

ದೇವಾಲಯದ ಎದುರಿಗಿರುವ ಮಡಿನೀರಿನ ಹೊಂಡವು, ಹಿಂದೆ ಸ್ವಯಂಭು ಶ್ರೀ ಕಲಿದೇವರ ಪೂಜೆಗೆ ನೀರನ್ನು ಒದಗಿಸುತ್ತಿತ್ತೆನ್ನಬಹುದು. ಇದು ಕೂಡಾ ಸುಸಜ್ಜಿತವಾಗಿ ನಿರ್ಮಾಣಗೊಂಡಿದ್ದು ಇಂದೂ ನೀರಿನಿಂದ ಸದಾ ತುಂಬಿರುತ್ತದೆಯಾದರೂ ನೀರಿನ ಮೇಲೆ ಬಳ್ಳಿ, ಹುಲ್ಲು ಬೆಳೆದು ಅಶುದ್ಧವಾಗಿದೆ. ಸದ್ಯ ಈ ದೇವರ ಪೂಜೆಗೆಂದೇ ದೇಗುಲದ ಎದುರಿಗೆ ಒಂದು ಕೊಳವೆಬಾವಿ ಸರ್ಕಾರದ ವತಿಯಾದ ತೋಡಿಸಲಾಗಿದೆ.

ಶ್ರೀ ಕಲ್ಮೇಶ್ವರ ದೇವಾಲಯದ ಎಡಭಾಗದಲ್ಲಿಯೇ ೨ ಬೃಹತ್ ಶಾಸನಗಳಿದ್ದು ಇದರಲ್ಲಿ ಒಂದು ಭಾಗ ತ್ರುಟಿತಗೊಂಡಿದ್ದು ಉಳಿದ ಭಾಗದ ಅಕ್ಷರಗಳು ಮಳೆ ಗಾಳಿಗೆ ಸವೆದಂತಿವೆ. ಇದರ ಪಕ್ಕದಲ್ಲಿರುವ ಇನ್ನೊಂದು ಶಾಸನ ಗೋವಾ ಕದಂಬರ ಕಾಲದ ಶಾಸನ - ಇದು ಸ್ಪುಟವಾಗಿದ್ದು ಯಾವುದೇ ಭಾಗವು ಹಾನಿಗೊಳಗಾಗಿಲ್ಲ. ಇದರ ಮೇಲೆ ಭಕ್ತರು ಎಣ್ಣೆ ಕುಂಕುಮಗಳನ್ನು ಸುರಿದು ಮಧ್ಯಭಾಗವನ್ನು ಜಿಡ್ಡುಗಟ್ಟಿಸಿದ್ದಾರೆ. ಆದರೂ ಶಾಸನಗಳನ್ನು ಓದಲು ಅರ್ಥೈಸಲು ಯಾವುದೇ ತೊಂದರೆ ಇಲ್ಲ. ದೇವಾಲಯದ ಬಲಭಾಗದಲ್ಲಿ ಇರುವ ಬಿಲ್ವವೃಕ್ಷದ ಕೆಳಗೆ ದೇವರ ಪಾದ, ಒಡೆದು ಹೋದ ವೀರನ ವಿಗ್ರಹ, ಇನ್ನೊಂದು ಅಪೂರ್ಣವಾಗಿ ಕಡೆದ ಕಲ್ಲುಗಳ ಅವಶೇಷಗಳು ಬಿದ್ದಿವೆ.

*ಒಟ್ಟಿನಲ್ಲಿ ಹೇಳುವುದಾದರೆ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯಗಳು ಇದೇ ತಾಲೂಕಿನ ತಂಬೂರು, ಮಾವಳ್ಳಿ, ಸಮೀಪದ ಕಿರುವತ್ತಿ, ಬೀರವಳ್ಳಿ, ಗ್ರಾಮಗಳಲ್ಲಿಯೂ ಸಹ ನಿರ್ಮಾಣಗೊಂಡಿವೆ. ಆದ್ದರಿಂದ ೧೧ನೇ ಶತಮಾನದ ಆರಂಭದ ಕಾಲದಲ್ಲಿ ವಾಸ್ತುಶಿಲ್ಪ ಕಲಾಕೌಶಲ್ಯದ ದೇಗುಲಗಳನ್ನು ನಿರ್ಮಿಸಿ ಆ ಕುರುಹುಗಳನ್ನೂ ಉಳಿಸಲು ಶ್ರಮಿಸಿದ ಚಾಲುಕ್ಯ ಅರಸರು ಹಾಗೂ ಆ ಅರಸರ, ಶಿಲ್ಪಿಗಳ ಸೇವೆ ಚಿರಸ್ಮರಣೀಯವಾಗಿದೆ.*

ಶ್ರೀಮತಿ ಪಿ. ಆರ್. ಶ್ಯಾಮಲ *

# ಚಳ್ಳಕೇರಮ್ಮನ ದೇವಾಲಯ

ಚಳ್ಳಕೆರೆ ಚಿತ್ರದುರ್ಗ ಜಿಲ್ಲೆಯ ಒಂದು ಇತಿಹಾಸ ಪ್ರಸಿದ್ಧ ಊರು ಹಾಗೂ ತಾಲ್ಲೂಕು ಕೇಂದ್ರ. ಈ ಊರಿಗೆ 'ಚಳ್ಳಕೆರೆ' ಎಂದು ಹೆಸರು ಬರಲು ಕಾರಣ ಎರಡು ರೀತಿಯಾಗಿ ಕಂಡು ಬರುತ್ತದೆ. ನಿಷ್ಪತ್ತಿ ರೀತ್ಯಾ ಚಲುವೆಕೆರೆ – ಚಳ್ಳಕೇರಿ – ಚಳ್ಳಕೆರೆ ಎಂದಾಗಿದೆ. ಈ ಊರಿನಲ್ಲಿ ಒಂದು ವಿಶಾಲವಾದ ಕೆರೆಯಿದ್ದು, ಚಳ್ಳೇ ಹಣ್ಣಿನ ಮರಗಳು ವಿಶೇಷವಾಗಿ ಬೆಳೆಯುತ್ತಿದ್ದುದರಿಂದ ಚಳ್ಳೆ ಮತ್ತು ಕೆರೆ ಎರಡನ್ನೂ ಪ್ರತಿನಿಧಿಸುವ **ಚಳ್ಳಕೆರೆ** ಅನ್ವರ್ಥನಾಮ ಆಗಿದೆ. ಐತಿಹ್ಯಗಳ ಪ್ರಕಾರ ಈ ಊರಿಗೆ ಮೊದಲು ಓರಗಲ್ಲು ಗ್ರಾಮ ಎಂಬ ಹೆಸರಿದ್ದಿತೆಂದು ತಿಳಿದು ಬಂದರೂ ಹೊಯ್ಸಳ ಕಾಲದಿಂದಲೇ ಈ ಗ್ರಾಮವು **ಚಳ್ಳಕೆರೆ** ಎಂದೇ ಶಾಸನಗಳಲ್ಲಿ ಉಲ್ಲೇಖಗೊಂಡಿದೆ.

ಚಳ್ಳಕೆರೆ – ಬಳ್ಳಾರಿ ಮಾರ್ಗದ ಎಡಬದಿಗೆ ಚಳ್ಳಕೇರಮ್ಮನ ದೇವಾಲಯವಿದೆ. ಚಳ್ಳಕೇರಮ್ಮ ಚಳ್ಳಕೆರೆಯ ಗ್ರಾಮದೇವತೆ. ಮೂಲತಃ ಚಿತ್ರದುರ್ಗದಿಂದ ಬಿಳಿಚೋಡು ವಂಶದ ಪಾಳೆಯ ಗಾರನಾದ ದೊಡ್ಡ ಮದಕರಿನಾಯಕನು (ಚಿತ್ರದುರ್ಗದ ಕೊನೆಯ ಪಾಳೆಯಗಾರನಾದ ರಾಜಾ ವೀರ ಮದಕರಿನಾಯಕನ ಮಲ ಅಣ್ಣ) ಚಳ್ಳಕೆರೆಗೆ ಬಂದು ನೆಲಸಿ ಚಳ್ಳಕೇರಮ್ಮನನ್ನು ಪ್ರತಿಷ್ಠಾಪಿಸಿದನೆಂದು ಪ್ರತೀತಿಯಿದ್ದರೂ ಈ ದೇವತೆಯ ಪ್ರಸಿದ್ಧಿ ಎಷ್ಟು ಹರಡಿತ್ತೆಂದರೆ, ಸುತ್ತಮುತ್ತಲ ೩೦-೩೫ ಕಿ. ಮೀ. ದೂರದಲ್ಲಿನ ಚಿತ್ರದುರ್ಗ ಹಾಗೂ ದೇವರಮರಿಕುಂಟೆ ಗ್ರಾಮಗಳಲ್ಲೂ ಚಳ್ಳಕೇರಮ್ಮನ ದೇವಸ್ಥಾನಗಳಿರುವುದೇ ಸಾಕ್ಷಿ. ಚಳ್ಳಕೆರೆಯಲ್ಲಿ ದೇವತೆಯ ರುಂಡಾಕಾರದ ಮೂರ್ತಿ ಯಿದ್ದು ನಿತ್ಯಪೂಜೆ, ಅಲಂಕಾರ, ವರ್ಷಕ್ಕೊಮ್ಮೆ ಜಾತ್ರೆ ಹಾಗೂ ಬಲಿಗಳು ನಡೆದು ಬರುತ್ತಿವೆ. ಆದರೆ ಚಿತ್ರದುರ್ಗ ಮತ್ತು ದೇವರಮರಿಕುಂಟೆ ಗ್ರಾಮಗಳಲ್ಲಿ ಕೇವಲ ಗುಂಡುಕಲ್ಲುಗಳನ್ನು ಚಳ್ಳಕೇರಮ್ಮನ ಪ್ರತೀಕವಾಗಿ ಭಾವಿಸಿ ಪೂಜಿಸುತ್ತಾರೆ. ಇದರಿಂದ ಸ್ಪಷ್ಟವಾಗಿ ಕಂಡುಬರುವ ಅಂಶವೆಂದರೆ ಚಳ್ಳಕೆರೆಯ ದೇವತೆ ಚಳ್ಳಕೇರಮ್ಮ, ಅಲ್ಲಿನ ಮೂಲದೇವತೆಯಾಗಿದ್ದು ಪ್ರಸಿದ್ಧಿ ಪ್ರಭಾವಗಳು ಬೆಳೆದಂತೆಲ್ಲ ಇತರ ಕಡೆಗಳಲ್ಲಿ ಚಳ್ಳಕೇರಮ್ಮ ದೇವಸ್ಥಾನಗಳಲ್ಲಿ ಪ್ರತಿಷ್ಠೆಗೊಂಡು ಪೂಜೆಗೊಳ್ಳತೊಡಗಿದಳು.

**ಚಳ್ಳಕೆರೆಯ ಚಳ್ಳಕೇರಮ್ಮನ ಕಥೆ :** ದೇವಿ ಬ್ರಾಹ್ಮಣಳು. ಕೀಳು ಜಾತಿಯವನು ಈಕೆಗೆ ಮೋಸಮಾಡಿ ಮದುವೆ ಯಾಗುತ್ತಾನೆ. ಈ ವಿಷಯವನ್ನು ತಿಳಿದಾಗ ದೇವಿಯು ತನ್ನ ಮೋಸಗಾರ ಗಂಡನನ್ನು ಕೋಣವನ್ನಾಗಿ ಮಾಡಿ ಬಲಿ ತೆಗೆದು ಕೊಳ್ಳುತ್ತಾಳೆ. ಈ ಕಥೆಯು ಮಾರಮ್ಮನ ಕಥೆಯನ್ನು ಹೋಲುತ್ತದೆ.

ರುಂಡದ ರೂಪದಲ್ಲಿಯ ಈ ದೇವಿಯ ಆರಾಧನೆಯ ಮೂಲವು ಜಮದಗ್ನಿ ರೇಣುಕೆಯರ ಕಥೆಗೂ ಸಂಬಂಧಿಸಿದಂತಿದೆ. ತಂದೆಯ ಆಜ್ಞೆಯಂತೆ ಪರಶುರಾಮನು ತಾಯಿಯ ತಲೆಯನ್ನು ಕೊಡಲಿಯಿಂದ ತುಂಡರಿಸುತ್ತಾನೆ. ಮಗನ ಪಿತೃವಾಕ್ಯ ಪರಿಪಾಲನಾ ಭಕ್ತಿಯಿಂದ ಸಂತೋಷಗೊಂಡ ಜಮದಗ್ನಿಯು ಪರಶುರಾಮನಿಗೆ ವರ ಕೇಳೆನ್ನಲು ತನ್ನ ತಾಯಿಯು ಪುನಃ ಜೀವಂತಳಾಗಬೇಕೆಂದು ಕೇಳುತ್ತಾನೆ. ಅಷ್ಟರಲ್ಲೇ ಮಾತಂಗ ಹೆಣ್ಣೊಬ್ಬಳು ಸತ್ತು ಅವಳ ಶಿರವು ರೇಣುಕೆಯ ದೇಹದ ಬಳಿ ಕಂಡುಬಂದು ಆ ಶಿರವನ್ನೇ ಪರಶುರಾಮನು ತಾಯಿಯ ದೇಹಕ್ಕೆ ಜೋಡಿಸಿದಾಗ ರೇಣುಕೆ ಜೀವಂತಗೊಂಡರೂ ಜಮದಗ್ನಿಯು ಅವಳನ್ನು ರೇಣುಕೆಯೆಂದು ಸ್ವೀಕರಿಸುವುದಿಲ್ಲ. ಹೀಗಾಗಿ ರೇಣುಕೆಯ ರುಂಡ ಹಾಗೆಯೇ ಉಳಿಯುತ್ತದೆ. ಅಂತೆಯೇ ಇಂದಿಗೂ ರೇಣುಕೆಯ ರುಂಡವನ್ನೇ ಪೂಜೆ ಮಾಡುವ ಪದ್ಧತಿ ಹಲವಾರು ಜನಾಂಗಗಳಲ್ಲಿ ಬೆಳೆದು ಬಂದಿದೆ. ಚಳ್ಳಕೇರಮ್ಮನ ದೇವಸ್ಥಾನದಲ್ಲಿಯೂ ಹೀಗೆಯೆ ರುಂಡ ರೂಪದಲ್ಲಿ ದೇವಿಗೆ ಪೂಜೆ ಸಲ್ಲುತ್ತಿದೆ.

ಚಳ್ಳಕೇರಮ್ಮ ದೇವಿಯ ವಿಗ್ರಹದ ಅಲಂಕರಣ, ಪೂಜಾ ವಿಧಾನ ಮತ್ತು ದೇವಾಲಯದ ನವರಂಗದಲ್ಲಿನ ಭುವನೇಶ್ವರಿಯ ಶಿಲ್ಪಗಳು ಬಹಳ ಅಪೂರ್ವವಾದವುಗಳು ಹಾಗೂ ಎಲ್ಲೂ ಕಂಡುಬರದ ವೈಶಿಷ್ಟ್ಯಗಳನ್ನು ಹೊಂದಿವೆ.

* ಸೀತಾನಿವಾಸ್, ವಲ್ಲಭಾಯಿ ರಸ್ತೆ, ವೈಲೆಪಾರ್ಲೆ (ಡಬ್ಲ್ಯು), ಮುಂಬಯಿ – ೪೦೦ ೦೫೬.

ಚಳ್ಳಕೇರಮ್ಮನ ಮೂರ್ತಿಯ ಲಕ್ಷಣಗಳು ಇಂತಿವೆ: ಮುಖವು ಅತ್ಯಂತ ಸುಂದರವಾಗಿದೆ. ಕಿವಿಗಳಲ್ಲಿ ಬಿಚ್ಚೋಲೆ ಯಂತಹ ಆಭರಣ, ಮೂಗುತಿ, ಕೊರಳಲ್ಲಿ ಹಾರ, ಸರ್ಪದ ಏಳು ಹೆಡೆಗಳೇ ಶಿರೋಮುಕುಟವಾಗಿ ಶೋಭಿಸುತ್ತವೆ. ದೇವಿಯ ದೇಹವು ಭೂಮಿಯಲ್ಲಿದೆಯೆಂದು ಪೂಜಾರಿಗಳು ಹೇಳುತ್ತಾರೆ. ಕೋರೆ ಹಲ್ಲುಗಳಿರುವ ಮುಖವಾಡವನ್ನು ಅಳವಡಿಸಲಾಗುತ್ತದೆ. ದೇವಿಗೆ ಒಂದರ ಮೇಲೊಂದರಂತೆ ಹತ್ತೊಂಬತ್ತು ಸೀರೆಗಳನ್ನು ಉಡಿಸುತ್ತಾರೆ. ಕೈಗಳಲ್ಲಿ ಕತ್ತಿ ಗುರಾಣಿಗಳನ್ನೂ ಅಳವಡಿಸ ಲಾಗುತ್ತದೆ. ದೇವಿಯ ಪಾದಗಳ ಮುಂಭಾಗದ ಕವಚಗಳ ನಡುವೆ ಸಿಂಹಮುಖವೂ ಕಂಡುಬರುತ್ತದೆ. ದೇವತೆಯನ್ನು ಸಿಂಹವಾಹಿನಿಯನ್ನಾಗಿ ಮಾಡಿರುತ್ತಾರೆ.



ಚಳ್ಳಕೇರಮ್ಮನ ಉತ್ಸವವು ಪ್ರತಿ ವರ್ಷ ವೈಶಾಖ ಮಾಸದಲ್ಲಿ ನಡೆಯುತ್ತದೆ. ಆ ಸಂದರ್ಭದಲ್ಲಿ ಜಾತ್ರೆ ಮತ್ತು ಸಿಡಿ ಸಂಪ್ರದಾಯಯುಗಳನ್ನೂ ನಡೆಸುತ್ತಾರೆ. ದೇವಿಯು ಬ್ರಾಹ್ಮಣಿ ಯಾದ್ದರಿಂದ ಊರ ಬ್ರಾಹ್ಮಣರು ಜಾತ್ರೆಗೆ ಎರಡು ದಿನ ಮುಂಚೆಯೇ ದೇವಿಗೆ ಪೂಜೆ ಸಲ್ಲಿಸುತ್ತಾರೆ. ಕೀಳುಜಾತಿಯವನು ದೇವಿಯನ್ನು ಮದುವೆಯಾದ್ದರಿಂದ ಊರಿನ ಬ್ರಾಹ್ಮಣೇತರರು ಜಾತ್ರೆಯ ದಿನ ದೇವಿಗೆ ಕೋಣದ ಬಲಿ ಅರ್ಪಿಸಿ, ಕಡಿದ ಕೋಣನ ಕೊಬ್ಬಿನಿಂದ ಜ್ಯೋತಿರ್ಗಂಬದ ಮೇಲೆ ಜ್ಯೋತಿಯನ್ನು ಬೆಳಗಿಸುತ್ತಾರೆ. ಇದರಿಂದ ಮೋಸ ಮಾಡಿ ತನ್ನನ್ನು ಮದುವೆಯಾದ ಗಂಡನಿಗೆ ತಕ್ಕ ಶಿಕ್ಷೆಯಾಯಿತೆಂದು ದೇವಿಗೆ ತೃಪ್ತಿಯಾಗುತ್ತದಂತೆ. ಜಾತ್ರೆಯ ದಿನ ದೇವಿಯ ಮಾಂಗಲ್ಯ ತೆಗೆಯುತ್ತಾರೆ. ಆಗ ಚಳ್ಳಕೆರೆಯ ಪಾಳೆಯಗಾರರ ವಂಶಸ್ಥರು ಮನೆತನದ ದೇವತೆ ಚಳ್ಳಕೇರಮ್ಮನನ್ನು ತಮ್ಮ ಕುಲದ ಮಗಳೆಂದು ಭಾವಿಸಿ, ತಾಳಿ ಕಳಿಸಿ, ಕಟ್ಟಿಸುವ ತಾಳಿ ಭಾಗ್ಯ ಸಂಪ್ರದಾಯವನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಬಿಡಾರದಮ್ಮ : ಗರ್ಭಗುಡಿಯೊಳಗೆ ಚಳ್ಳಕೇರಮ್ಮನ



ಮೂರ್ತಿಯ ಎಡಬದಿಗೆ ಇರುವ ಮತ್ತೊಂದು ಸ್ತ್ರೀ ರುಂಡ ಮೂರ್ತಿಯೆ ಬಿಡಾರದಮ್ಮ. ಬಿಡಾರ ಎಂದರೆ ವಾಸಸ್ಥಳ. ಜನರು ಇಲ್ಲಿ ಸ್ಥಿರವಾಗಿ ನೆಲೆಸುವ ಮೊದಲು ಮುಂದಿನ ಸುಖಜೀವನಕ್ಕಾಗಿ ಈ ದೇವತೆಗೆ ಪೂಜೆ ಸಲ್ಲಿಸುತ್ತಿದ್ದುದರಿಂದ ದೇವತೆಗೆ ಈ ಹೆಸರು ಬಂದಿರಬಹುದು. ಈ ವಾದಕ್ಕೆ ಪುಷ್ಟಿ ಕೊಡುವ ಅಂಶವೆಂದರೆ ಏಳನೆಯ ಪಾಳೆಯಗಾರನಾದ ಭರಮಪ್ಪನಾಯಕನು ಚಿತ್ರದುರ್ಗದಲ್ಲಿ ಅಧಿಕಾರ ನಡೆಸುತ್ತಿರಲು ಆ ಪ್ರದೇಶದಲ್ಲಿ ಭಾರಿ ಪ್ಲೇಗ್‌ರೋಗ ಬಾಧೆಯನ್ನು ಸಹಿಸಲಾರದೆ ಚಿತ್ರದುರ್ಗದ ಊರನ್ನು ಬಿಟ್ಟು ಹೊರಗಿರ ಬೇಕಾಯಿತು. ಅಲ್ಲದೇ ಕ್ಷಾಮವನ್ನೂ ಅನುಭವಿಸ ಬೇಕಾಯಿತು. ಈ ಭರಮಪ್ಪನಾಯಕನ ವಂಶಜರೇ ಚಳ್ಳಕೆರೆಯಲ್ಲಿ ಬಂದು ನೆಲಸಿದಾಗ ಈ ದೇವತೆಯ ಪೂಜೆಯನ್ನು ಕೈಗೊಂಡು ಬಿಡಾರದಮ್ಮನ ಪ್ರಖ್ಯಾತಿಗೆ ಕಾರಣರಾದರು. ಬಿಡಾರದಮ್ಮನು ಚಳ್ಳಕೇರಮ್ಮನಂತೆಯೇ ರುಂಡಮೂರ್ತಿಯಾಗಿದ್ದು ಸರ್ಪ

ಶಿರೋಭೂಷಣೆಯಾಗಿದ್ದರೂ ಸೌಂದರ್ಯದಿಂದ ಕೂಡಿದ್ದರೂ ವಿಶೇಷ ಅಲಂಕರಣವನ್ನಾಗಲೀ ಪೂಜೆಯನ್ನಾಗಲೀ ಪಡೆದಿಲ್ಲ.

**ದೇಗುಲ ಶಿಲ್ಪ :** ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ ಮುಖಮಂಟಪವಿದ್ದು ವಿಜಯನಗರ ಶೈಲಿಯಲ್ಲಿ ಹನ್ನೆರಡು ಕಂಬಗಳಿದ್ದು ಮುಂದಿನ ಎರಡು ಕಂಬಗಳು ವೀರರನ್ನು ಹೊತ್ತ ವ್ಯಾಳಿಸ್ತಂಭಗಳಾಗಿವೆ. ಈ ಮುಖಮಂಟಪದ ಭುವನೇಶ್ವರಿಗಳು ಪ್ರೇಕ್ಷಕರ ಗಮನ ಸೆಳೆಯುವಂತಿವೆ. ಎಡಗಡೆಯ ಭುವನೇಶ್ವರಿಯಲ್ಲಿ ಒಂದು ಕಮಲವನ್ನು ನಾಲ್ಕು ಜನ ಕುಬ್ಜರು ತಮ್ಮ ಕೈಗಳಲ್ಲಿ ಎತ್ತಿ ಹಿಡಿದಿದ್ದಾರೆ. ಹೊರಪಾರ್ಶ್ವದಲ್ಲಿ ನಾಲ್ಕು ಸಿಂಹ ಮುಖಗಳಿದ್ದು, ಸಿಂಹಗಳ ಎಡಬಲಗಳಲ್ಲಿ ಒಟ್ಟು ಎಂಟು ಗಿಳಿಗಳಿವೆ. ಬಲಗಡೆಯ ಭುವನೇಶ್ವರಿಯಲ್ಲಿ ಕಮಲದ ಸುತ್ತಲೂ ನಾಲ್ಕು ಕಡೆಗಳಿಂದ ನಾಲ್ಕು ಮೊಸಳೆಗಳು ಒಳಕ್ಕೆ ಪ್ರವೇಶಿಸುತ್ತಿರುವಂತಿವೆ. ಇವುಗಳ ಮಧ್ಯದಲ್ಲಿ ನಾಲ್ಕು ಕುಂಭಗಳಿವೆ.

ನವರಂಗದ ಪ್ರವೇಶದ್ವಾರದ ದ್ವಾರಶಾಖೆಗಳಲ್ಲಿ ಲತಾ ಸುರುಳಿಗಳಲ್ಲಿ ನೃತ್ಯಗಾತಿಯರ ಹಾಗೂ ವಾದ್ಯವಾದಕರ ಉಬ್ಬುಶಿಲ್ಪಗಳಿವೆ. ನವರಂಗದ ಕಂಬಗಳ ಮೇಲೆ ಪುರುಷಾಮೃಗ,



ತ್ರಿಮುಖಿ ಹಾಗೂ ಪಂಚಮುಖಿ ಗೋವುಗಳು, ವಿವಿಧ ಮಲ್ಲಯುದ್ಧ ಭಂಗಿಗಳಲ್ಲಿರುವ ನಾಮಧಾರಿ ವ್ಯಕ್ತಿಗಳು, ಮನುಷ್ಯಾಕಾರದ ನವಿಲು, ಪರಶುರಾಮ, ಒಂದೇ ಮುಖದ ಎರಡು ಸಿಂಹಗಳು, ಭದ್ರಕಾಳಿ, ಜಮದಗ್ನಿ, ಕಾಳಿಂಗಮರ್ದನ ಕೃಷ್ಣ, ಕೊಳಲುಕೃಷ್ಣ, ಗಜಲಕ್ಷ್ಮಿ, ಇತ್ಯಾದಿಗಳಿವೆ. ನವರಂಗದ ಎಡಗೋಡೆಯ ಕಡೆಗೆ ವೀರಭದ್ರನ ವಿಗ್ರಹವಿದೆ.

ಇಡೀ ದೇವಾಲಯದಲ್ಲಿ ಅತ್ಯಂತ ಅಪೂರ್ವವಾದ ಶಿಲ್ಪಗಳು ನವರಂಗದ ಭುವನೇಶ್ವರಿಯಲ್ಲಿ ಕಂಡುಬರುತ್ತವೆ. ಭುವನೇಶ್ವರಿಯ ಮಧ್ಯದಲ್ಲಿ ಕಮಲವೊಂದಿದ್ದು ಅದರ ಸುತ್ತಲೂ ಹಂಸಗಳಿವೆ. ಅದರ ಹೊರಭಾಗದಲ್ಲಿ ಎರಡು ಚೌಕಗಳು ಒಂದರೊಳಗೊಂದಿದ್ದು ಅವುಗಳಿಂದುಂಟಾದ ಅಷ್ಟದಿಕ್ಕೋನಗಳಲ್ಲಿ ಅಷ್ಟ ಮಾನವಶಿಲ್ಪಗಳು ಯೋಗ ಭಂಗಿಗಳಲ್ಲಿ ವಿವಿಧ ವಾಹನಗಳ ಮೇಲೆ ಆಸೀನರಾದಂತೆ ಕಂಡರಿಸಲ್ಪಟ್ಟಿವೆ. ವಾಹನಗಳು, ಅವುಗಳ ದಿಗ್ಭಾಗಗಳು ಇಂತಿವೆ: **ಉತ್ತರ – ಆಮೆ, ಈಶಾನ್ಯ – ಮೀನು, ಪೂರ್ವ – ಮೊಲ, ಆಗ್ನೇಯ – ಹಾವು, ದಕ್ಷಿಣ – ನವಿಲು, ನೈಋತ್ಯ – ವೃಷಭ, ಪಶ್ಚಿಮ – ಸಿಂಹ ಮತ್ತು ವಾಯವ್ಯ – ಇಲಿ.** ಪ್ರತಿಯೊಂದು ಮೂರ್ತಿಗೂ ಕರ್ಣಕುಂಡಲಗಳು; ಹಾರಗಳೂ, ಬಳೆಗಳೂ, ವೈವಿಧ್ಯಮಯ ಕೇಶವಿನ್ಯಾಸಗಳಿವೆ. ಈ ಮಾನವ ಶಿಲ್ಪಗಳ ಮುಖಭಾವ, ಮುದ್ರೆ ಹಾಗೂ ಅವರು ಆಸೀನರಾಗಿರುವ ವಾಹನಗಳು ದಿಕ್ಪಾಲಕರಿಗೆ ಸಂಬಂಧಿಸಿದಂತೆ ತೋರುವುದಿಲ್ಲವಾದುದರಿಂದ ಕುತೂಹಲ ಕೆರಳಿಸಿ ವಿಚಾರ ಪರರನ್ನಾಗಿ ಮಾಡುತ್ತವೆ. ***ಈ ಅಷ್ಟಮಾನವ ಮತ್ತು ವಾಹನಗಳ ಶಿಲ್ಪವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಯೋಗಿಸಿದ್ಧ ನಾಥರ ಸಾಮ್ಯತೆ ಕಂಡುಬರುತ್ತದೆ.*** ಆದ್ದರಿಂದ ನಾಥಪಂಥಕ್ಕೂ ಈ ಶಿಲ್ಪಗಳಿಗೂ ಇರುವ ಸಂಬಂಧವನ್ನು ಗಮನಿಸುವುದು ಅವಶ್ಯಕವಾಗಿದೆ.

ಭಾರತದ ಪ್ರಸಿದ್ಧ ಮತಪಂಥಗಳಲ್ಲಿ ನಾಥಪಂಥವೂ ಒಂದು. ನಾಥಸಂಪ್ರದಾಯವು ದಕ್ಷಿಣ ಭಾರತದ ಆಂಧ್ರಪ್ರದೇಶದ ಶ್ರೀ ಶೈಲದ ಕದಳೀವನದಲ್ಲಿ ಉಗಮವಾಯಿತೆಂದು ಹೇಳಲ್ಪಟ್ಟಿದೆ. ಕ್ರಿ. ಶ. ೭ನೆಯ ಶತಮಾನದಿಂದ ಈ ಪರಂಪರೆಯ ಕೆಲವು ವ್ಯಕ್ತಿಗಳು ಇತಿಹಾಸ ಪಟಲದ ಮೇಲೆ ಕಾಣಿಸಿಕೊಳ್ಳುತ್ತಾರೆ. ಈ ಪಂಥದ ಮೂಲ ಪುರುಷರನ್ನು ನವನಾಥರೆಂದು ಕರೆಯಲಾಗುತ್ತದೆ. ನವನಾಥರ ಹೆಸರುಗಳು ವಿಭಿನ್ನ ಪ್ರಕಾರವಾಗಿ ಬೇರೆ ಬೇರೆ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ- **೧) ಸ್ಕಾಂದ ಪುರಾಣದ ಕೇದಾರ ಖಂಡದಲ್ಲಿ ನವನಾಥರ ಹೆಸರುಗಳು ಇಂತಿವೆ: ಆದಿನಾಥ, ಅನಾದಿನಾಥ, ಕೂರ್ಮನಾಥ, ಭವನಾಥ, ಸತ್ಯನಾಥ, ಸಂತೋಷನಾಥ, ಮತ್ಸ್ಯೇಂದ್ರನಾಥ, ಗೋಪೀನಾಥ ಮತ್ತು ಗೋರಕ್ಷನಾಥ. ೨) ಮಹಾರ್ಣವ ತಂತ್ರದಲ್ಲಿ:** ***ಗೋರಕ್ಷನಾಥ, ಜಾಲಂಧರನಾಥ, ನಾಗಾರ್ಜುನನಾಥ, ಸಹಸ್ರಾರ್ಜುನನಾಥ, ದತ್ತಾತ್ರಯನಾಥ, ದೇವದತ್ತನಾಥ, ಜಡಭರತನಾಥ, ಆದಿನಾಥ ಮತ್ತು ಮತ್ಸ್ಯೇಂದ್ರನಾಥ*** **ಎಂದು ಉಲ್ಲೇಖವಿದೆ.**

'ನಾಥಸಂಪ್ರದಾಯ'ವನ್ನು ನಾಥಪಂಥ, ಸಿದ್ಧಮಾರ್ಗ,





ಸಿದ್ಧಿ ಪಂಥ, ಸಿದ್ಧ ಪಥ, ಯೋಗ ಸಂಪ್ರದಾಯ, ಗೋರಖಮತ, ಕಾನ್‌ಫಟ್ ಸಂಪ್ರದಾಯ, ಅವಧೂತ ಮತ, ಗುರುಮಾರ್ಗ ಮುಂತಾದ ಹೆಸರುಗಳಿಂದ ಕರೆಯುವರು. ಗೋರಖನಾಥನಿಂದ ಪರಿವರ್ತನೆಗೊಂಡ **ಬಾರಹಪಂಥೀಮಾರ್ಗ**ಗಳು ನಾಥ ಸಂಪ್ರದಾಯವೆಂದು ಪ್ರಸಿದ್ಧವಾದವು. ಈ ಮತದ ಅನುಯಾಯಿಗಳು ಕಿವಿ ಚುಚ್ಚಿಸಿಕೊಳ್ಳುವುದರಿಂದ **ಕಾನಫಟಾ** ಎಂದೂ, **ದರ್ಶನ್** ಎಂದರೆ ಪವಿತ್ರ ಉಂಗುರವನ್ನು ಧರಿಸುವುದರಿಂದ 'ದರ್ಶನಿ ಸಾಧು' ಎಂದೂ ಕರೆಯಲ್ಪಡುತ್ತಾರೆ.

ಚಿತ್ರದುರ್ಗ ಪ್ರದೇಶದಲ್ಲಿ ನಾಥಪಂಥವು ಸಹಜಯಾನ ಎಂಬ ಹೆಸರಿನಿಂದ ಪ್ರಸಿದ್ಧ ಪೀಠವನ್ನು ಹೊಂದಿತ್ತು. ಈಗಿನ ಮುರುಘಾಮಠವೇ ಸಿದ್ಧಾಯತನವಾಗಿದ್ದು ಸಮೀಪವೇ ಸಿದ್ಧನಾಥ ದೇವಾಲಯವಿತ್ತೆಂದೂ ಹೇಳಲಾಗುತ್ತದೆ. ಚಿತ್ರದುರ್ಗದಲ್ಲಿರುವ ಈಗಿನ ಏಕನಾಥೇಶ್ವರೀ ದೇವಾಲಯವೂ ನಾಥಪಂಥದ ಅಸ್ತಿತ್ವದ ಕುರುಹಾಗಿ ನಿಂತಿದೆ. ಈ ದೇವಾಲಯಗಳನ್ನು ವೀರಮಲ್ಲಣ್ಣಒಡೆಯನೆಂಬುವವನು ಬಕ್ಕರಾಯನ ಕಾಲದ ಮೊದಲೇ ಕಟ್ಟಿಸಿದ್ದನು. ಇಲ್ಲಿ ರಸಸಿದ್ಧರು ಇದ್ದರೆಂದು ಜನ ಹೇಳಿಕೊಳ್ಳುತ್ತಾರೆ. ಚಿತ್ರದುರ್ಗದ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ ನಾಥಪಂಥವು ಉಪಕೇಂದ್ರಗಳನ್ನು ಹೊಂದಿತ್ತು. ಉದಾರಹಣೆಗಾಗಿ ನೂಂಕುಮಲೆ, ಸಿದ್ಧಾಪುರಗಳನ್ನು ಹೆಸರಿಸಬಹುದು.

ಗೋರಕ್ಷನಾಥನ ಶಿಷ್ಯ ಕರ್ಪಡಿ(ಕಪರ್ದಿ) ನಾಥನು ಚಿತ್ರದುರ್ಗದಲ್ಲಿಯೇ ೧೦-೧೧ನೇ ಶತಮಾನಗಳಲ್ಲಿ ಜೀವಿಸಿದ್ದನು. ೧೨ನೆಯ ಶತಮಾನದಲ್ಲಿ ಸಹಜಯಾನ ಪಂಥದ ಮುಂದೆ ಶೈವಪಂಥಕ್ಕೆ ಸೇರಬೇಕೋ ವೈದಿಕ ಪಂಥಕ್ಕೆ ಸೇರಬೇಕೋ ಎಂಬ ಸಮಸ್ಯೆ ಉದ್ಭವಿಸಿತು. ನಾಥಪಂಥವು ಶುಷ್ಕವಾದುದರಿಂದ ವೀರಶೈವ ಪಂಥದ ಮುಂದೆ ಸ್ವತಂತ್ರವಾಗಿ ನಿಲ್ಲಲಾರದೇ ಹೋಯಿತು. ನಾಥಪಂಥಕ್ಕೆ ಬರುವ ಮೊದಲು ಬೌದ್ಧಸಿದ್ಧರಾಗಿದ್ದ ಬಗ್ಗೆ ಈ ಪಂಥೀಯರನ್ನು ಕುರಿತು ಹೇಳುವುದಿದೆ. ಈ ಬೌದ್ಧ ಸಿದ್ಧರು ಶೈವ ಅವಧೂತರಾಗಿ ನಂತರ ವೀರಶೈವದಲ್ಲಿಯೂ ಅಂತರ್ಗತರಾದರೆನ್ನುವುದಿದೆ. ಅಂತಾಗಿ ನಾಥಪಂಥೀಯರು ವೀರಶೈವದಲ್ಲೂ ಮಿಳಿತರಾದರೆನ್ನಿಸುತ್ತದೆ. **ಆದುದರಿಂದ ಮೂಲತಃ ಕಾಪಾಲಿಕಾ ಭೈರವ ಸಂಪ್ರದಾಯವಾದ ನಾಥಪಂಥವು ಶಾಕ್ತ, ವೀರಶೈವ,**

ವೈದಿಕ ಸಂಪ್ರದಾಯಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ಹೊಸರೂಪ ತಳೆಯಿತು ಈ ವಿಭಿನ್ನ ಪಂಥಗಳ ಸಮಾವೇಶವನ್ನೇ ಪ್ರಾಯಶಃ ಚಳ್ಳಕೆರೆಯ ದೇವಾಲಯದ ಯೋಗಪುರುಷರ ವಾಹನಗಳಲ್ಲಿ ಕಾಣಬಹುದೇನೋ! ಶಾಕ್ತಕ್ಕೆ ಸಂಬಂಧಿಸಿದಂತೆ ಸಿಂಹ, ಶೈವಕ್ಕೆ ಸಂಬಂಧಿಸಿದಂತೆ ಸ್ಕಂದನ ನವಿಲು, ಗಣಪತಿಯ ಮೂಷಕ, ಶಿವನ ವೃಷಭ, ಭೈರವ ಸಂಕೇತದ ಸರ್ಪ, ವೈದಿಕ ಮತ ಸಂಕೇತವಾಗಿ ಮತ್ಸ್ಯ, ಕೂರ್ಮ ಹಾಗೂ ಚಂದ್ರನ ( ಶಶಾಂಕ ) ಸಂಕೇತವಾಗಿ ಮೊಲವನ್ನೂ ಪ್ರತಿನಿಧಿಸಿದಂತೆ ತೋರುತ್ತದೆ.

ಈ ಮೇಲಿನ ವಿವರಣೆಯಿಂದ ಪ್ರಸ್ತುತ ಚಳ್ಳಕೇರಮ್ಮನ ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ನಾಥಪಂಥವು ವೀರಶೈವ, ವೈದಿಕ ಪಂಥಗಳ ಸಮಾವೇಶದ ಸಂದಿಗ್ಧ ಕಾಲದಲ್ಲಿ ನಿರ್ಮಾಣಗೊಂಡಿತೆಂದು ಹೇಳಬಹುದು.

( ಈ ಪ್ರಬಂಧವನ್ನು ಬರೆಯಲು ಸಹಾಯಕರಾದ ಶ್ರೀಮತಿ ಡಾ॥ ಶ್ಯಾಮಲಾ ರತ್ನಕುಮಾರಿಯವರಿಗೆ ವಂದನೆಗಳು. )

## ಆಧಾರ ಸೂಚಿ

೧. ಆರ್. ಸಿ. ಢೇರೆ : ಮರಾಠೀ ಭಕ್ತಿ ಪರಂಪರಾ.
೨. ಮ. ಸು. ಕೃಷ್ಣಮೂರ್ತಿ : ಸಿದ್ಧಸಾಹಿತ್ಯ.
೩. ಎಂ. ಜಿ. ನಂಜುಂಡಾರಾಧ್ಯ : 'ನಾಥಪಂಥ', ಸಿದ್ಧಗಂಗಾಶ್ರೀ, ಕಾತ್ಯಂದ್ರ, ೧೯೮೧
೪. **Cultural Heritage of India** - Vol IV, ರಾಮಕೃಷ್ಣಾಶ್ರಮ ಪ್ರಕಟಣೆ.

ಡಾ॥ ಜ್ಯೋತ್ಸ್ನಾ ಕಾಮತ್*

# ಶತಕಗಳಲ್ಲಿ ಕನ್ನಡಿಗರ ಸ್ನಾನ

ನಮ್ಮ ಪೂರ್ವಜರು, ಬರೆದಿಟ್ಟ ಶಾಸ್ತ್ರ, ಪುರಾಣ, ಸಾಹಿತ್ಯ, ಕೊರೆದಿಟ್ಟ ಶಿಲ್ಪ, ಬಿಡಿಸಿಟ್ಟ ಚಿತ್ರಗಳನ್ನು ಅವಲೋಕಿಸಿದಾಗ, ಕನ್ನಡಿಗರು ಪರಿಶುದ್ಧ ಮನಸ್ಸಿನೊಂದಿಗೆ ದೇಹಶುದ್ಧಿಗೂ ವಿಶೇಷಗಮನ ನೀಡುತ್ತಿದ್ದ ವಿಚಾರ ಸ್ಪಷ್ಟವಾಗುತ್ತದೆ. ಅಗ್ನಿಪುರಾಣವು (೧೦ನೇ ಶತಕ) ದೇಹಶುದ್ಧತೆಯ ಅಷ್ಟಸೂತ್ರಗಳನ್ನು ಉಲ್ಲೇಖಿಸುತ್ತದೆ : ನೀರಿನಿಂದ ತೊಳೆಯುವದು, ಕಾಸಿಕೊಳ್ಳುವದು, ಬಾಯಿಯನ್ನು ಔಷಧಿಯುಕ್ತ ನೀರಿನಿಂದ ಮುಕ್ಕಳಿಸುತ್ತ ಇರುವದು, ಕಕ್ಕುವದು, ಧೂಪ ಸಂಸ್ಕಾರ, ಬಟ್ಟೆ-ಬರೆಗಳಿಗೆ ಮನೆಗಳಲ್ಲಿ ಸುಗಂಧಯುಕ್ತ ಹೊಗೆ ಹಾಕುವದು, ಸುಗಂಧಾದಿಲೇಪನ ಹಾಗೂ ಹೂಮಾಲೆಗಳನ್ನು ಧರಿಸುವದು ಇತ್ಯಾದಿ. ಕಲ್ಯಾಣಚಾಲುಕ್ಯರ ಮುಮ್ಮಡಿ ಸೋಮೇಶ್ವರ ಭೂಲೋಕ ಮಲ್ಲನು (ಕ್ರಿ. ಶ. ೧೧೨೬-೧೧೩೮) ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿಯು' ಅರಸು ಮಕ್ಕಳೆಲ್ಲ ಅಭ್ಯಸಿಸಲೇಬೇಕಾಗಿದ್ದ ಸಂಸ್ಕೃತ ಭಾಷೆಯ ಕೈಪಿಡಿಯಾಗಿದ್ದು ದೇಹ ಶುದ್ಧಿಯ ಎಲ್ಲ ಕ್ರಮಗಳನ್ನು ಒಳಗೊಂಡಿದೆ. ಸ್ನಾನ ಸಂಸ್ಕೃತಿಯು, ರೋಮನ್, ಟರ್ಕಿಶ್ ಮೊಗಲರಿಗಷ್ಟೆ ಮಿಾಸಲೆನಿಸದೆ, ಕನ್ನಡನಾಡೂ ಹಿಂದೊಮ್ಮೆ ಕ್ರಮಬದ್ಧವಾಗಿ. ಬೆಳೆಸಿಕೊಂಡ ಅಭ್ಯಂಜನ ಅಭಿರುಚಿಯ ಇಣುಕು ನೋಟಗಳನ್ನು ಒಳಗೊಂಡಿದೆ ಎಂಬುದನ್ನು ಇವುಗಳಿಂದ ತಿಳಿಯಬಹುದು.

ಅರಮನೆಯ ಈಶಾನ್ಯ ದಿಕ್ಕಿನಲ್ಲಿ ಸ್ನಾನಗೃಹವನ್ನು ಪ್ರಶಸ್ತವಾಗಿ ಬೆಳಕು ಬರುವಂತೆ ಕಟ್ಟಲಾಗುತ್ತಿತ್ತು. ಸ್ಫಟಿಕದ ಆಸನಗಳು, ಕಲಾತ್ಮಕವಾದ ಬಣ್ಣಬಣ್ಣದ ಗಾಜಿನ ಹಂಚುಗಳು (ಕಾಚಕುಟ್ಟಿಮ)ಸ್ನಾನಗೃಹಕ್ಕೆ ಜೋಡಿಸಲ್ಪಡುತ್ತಿದ್ದವು. ರಂಗಾದ ಚಿತ್ರಗಳು ಸ್ತಂಭ-ಗೋಡೆಗಳ ಮೇಲಿದ್ದರೆ, ಆಕರ್ಷಕವಾದ ರೇಶ್ಮೆಪರದೆಗಳನ್ನು ಇಳಿ ಬಿಡಲಾಗಿರುತ್ತಿತ್ತು. ಪುಣ್ಯನದಿಗಳ ಶುಭ್ರವಾದ ಝರಿ ನೀರನ್ನು ಗಿಡಮೂಲಿಕೆಗಳನ್ನು ಹಾಕಿ ಕಾಯಿಸಲಾಗುತ್ತಿತ್ತು. ಔಷಧೀಯ ಹಾಗೂ ಸುಗಂಧದ ಅಂಶಗಳನ್ನು ಈ ಬೇರುಗಳು ಹೊಂದಿರುತ್ತಿದ್ದವು. *೧

ಶಸ್ತ್ರಾಭ್ಯಾಸ, ಅಶ್ವಾರೋಹಣ, ಮಲ್ಲಯುದ್ಧಾದಿ ದೇಹಶ್ರಮ, ಅರಸು ಮಕ್ಕಳಿಗೆ , ಸೇನಾಧಿಕಾರಿಗಳಿಗೆ ಕಡ್ಡಾಯವಾಗಿದ್ದ ಯುಗದಲ್ಲಿ ಬೆಳಕು ಹರಿಯುತ್ತಿದ್ದಂತೆ ಇಂಥ ವ್ಯಾಯಾಮಗಳನ್ನು ಕೈಗೊಂಡು ಮೈ,ಕೈನೋವು ಕಾಣಿಸಿಕೊಳ್ಳುತ್ತಿತ್ತು. ಹೀಗಾಗಿ ಸ್ನಾನಕ್ಕೆ ಪೂರ್ವಭಾವಿಯಾಗಿ ತೈಲಮರ್ದನ ಅಥವಾ ಎಣ್ಣೆ ತಿಕ್ಕಿಕೊಳ್ಳುತ್ತಿದ್ದರು. ಮರ್ದನ ಕಲೆಯನ್ನು ಶಾಸ್ತ್ರೋಕ್ತವಾಗಿ ರೂಢಿಸಿಕೊಂಡ (ಸಂವಾಹವೇದಿ) ಮಲ್ಲರು ಅಂಗೈಯಿಂದಲೇ ಕ್ರಮವಾಗಿ ಮೈಗೆಲ್ಲ ಎಣ್ಣೆ ಪೂಸಿ, ತಿಕ್ಕಿ, ತೀಡಿ, ಒತ್ತಿ ಇಂಗಿಸುತ್ತಿದ್ದರು. *೨ ಪೋರ್ಚುಗೀಸ್ ಪ್ರವಾಸಿ ಡುಮಿಂಗೋ ಪ್ಯಾಸ್ (ಕ್ರಿ. ಶ. ಸು ೧೫೨೦-೨೧)ನು ಕೃಷ್ಣದೇವರಾಯನ ದೈನಂದಿನ ಶಾರೀರಿಕ ಶ್ರಮ ತೈಲಮರ್ದನ, ಸ್ನಾನದ ದಿನಚರಿಯನ್ನು ಉಲ್ಲೇಖಿಸಿದ್ದನ್ನು ನೆನಪಿಸಿಕೊಳ್ಳಬಹುದು. *೩ ಚಾವುಂಡರಾಯನ *ಲೋಕೋಪಕಾರಂ* (ಕ್ರಿ. ಶ. ೧೦೫೦)ಕೃತಿಯು ಸಹ ಅನೇಕ ಬಗೆಯ ತೈಲಗಳ ತಯಾರಿಕೆಯನ್ನು ಹೇಳುತ್ತದೆ. *೪ ಮುಖ್ಯವಾಗಿ ಕೋಷ್ಠ, ಪಟೋಲಕ, ಭದ್ರಮುಸ್ತೆ, ವಾಜಿಗಂಧ ತಗರ, ಪುಷ್ಕಲಗಳ ಬೇರು, ಬಾಕುಚಿ, ಚಕ್ರಮರ್ದನಗಳ ಬೀಜ, ಬೇವಿನೆಲೆ, ತುಲಸಿ, ಏಲಗಳನ್ನು ಒಣಗಿಸಿ ಪುಡಿ ಮಾಡಿ ಸಾಸಿವೆ ಇಲ್ಲವೆ ಎಳ್ಳೆಣ್ಣೆಗಳೊಂದಿಗೆ ಸೇರಿಸಿ, ಪುನ್ನಾಗ, ಚಂಪಕ ಶ್ರೀಗಂಧಾದಿಗಳಿಂದ ಸುವಾಸಿತಗೊಳಿಸುತ್ತಿದ್ದರು. ಜೊತೆಗೆ ಗುಗ್ಗುಳ, ಸೈಂಧಲವಣ, ಸರ್ಜರಸಗಳನ್ನು ಹಾಲಿನಲ್ಲಿ ಅರೆದು, ತೈಲಗಳೊಂದಿಗೆ ಸೇರಿಸಲಾಗುತ್ತಿತ್ತು.

ಬಡವರು, ಉಳ್ಳವರೆಂಬ ಭೇದವಿಲ್ಲದೇ ಸ್ನಾನ-ಪದ್ಧತಿ ಪ್ರಚಲಿತವಿತ್ತು. ಸಕಲವರ್ಗದವರಿಗೆ ಲಭ್ಯವಾಗುವ ನೀರು, ಉರುವಲಗಳಿಗಂತೂ ಹಿಂದೆ ಕೊರತೆಯಿರಲಿಲ್ಲ. ಸುಖೋಷ್ಣ

* ೧೧೦, ಶಶಿಕಿರಣ ಅಪಾರ್ಟ್‌ಮೆಂಟ್ಸ್, ೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-೫೬೦ ೦೫೫

ವಾದ ನೀರನ್ನು ಹೊಯ್ದುಕೊಂಡು, ಹೊಯ್ಯಿಸಿಕೊಂಡು, ಅಂಗಾಂಗಗಳನ್ನು ಹಗುರ ಮಾಡಿಕೊಳ್ಳುವ ಕ್ರಮ ಜಾರಿಯಲ್ಲಿತ್ತು. ಜಿಡ್ಡನ್ನು ಹೋಗಲಾಡಿಸಲು 'ಖಲೀ' ಎಂಬ ಸೋಪು ಬಳಕೆಯಲ್ಲಿತ್ತು. *ಹೆಸರು, ಕಡಲೆ, ಗೋದಿಗಳ ಹಿಟ್ಟಿಗೆ, ಮದನದ ಬೇರಿನ ಪುಡಿ ಹಾಗೂ ಕರ್ಪೂರವನ್ನು ಸೇರಿಸಿ* 'ಖಲೀ'ಯನ್ನು ತಯಾರಿಸುತ್ತಿದ್ದರು. ತಲೆಕೂದಲ ಜಿಡ್ಡಿಗೆ ನೆಲ್ಲಿಕಾಯಿಲೇಪ ಹೇಳಿದೆ. ಇಷ್ಟಾಗಿಯೂ ಜಿಡ್ಡು ಹೋಗದಿದ್ದರೆ 'ಆರನಾಲ' ಎಂಬ ಒಗರಾದ ಗಂಜಿಯನ್ನು ಬಳಸುತ್ತಿದ್ದರು. *೫

ಕೆಳದಿಯ ಬಸವಪ್ಪನಾಯಕನ 'ಶಿವತತ್ವರತ್ನಾಕರದಲ್ಲಿ (ಕ್ರಿ.ಶ. ೧೬೮೪- ೧೭೧೦) ಹೆಚ್ಚುಕಡಿಮೆ, ಮಾನಸೋಲ್ಲಾಸದ ಸ್ನಾನಕ್ರಮವನ್ನೆ ಹೇಳಿದ್ದರೂ ಸೋಮ, ಬುಧ, ಶನಿವಾರಗಳಿಗೆ ಅಭ್ಯಂಗಸ್ನಾನ ಸೀಮಿತಗೊಳಿಸಲಾಗಿದೆ. *೬ ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ' (ಕ್ರಿ. ಶ. ೧೬೪೮)ದಲ್ಲಿ ಕಾವೇರಿ ನದಿಯ ಘಟ್ಟದ ಸುಂದರ ವರ್ಣನೆ ಇದೆ. ಹೆಂಗಸರಿಗೆ ವಿಶೇಷ ಮೀಸಲಾತಿಯನ್ನು ಸಾರಿ ಹೇಳದಿದ್ದರೂ, ಗಂಡಸರು ಹೆಂಗಸರು ಸ್ನಾನ ಮಾಡುವ ಸ್ಥಾನಗಳು ಬೇರ್ಪಟ್ಟು ಇರುತ್ತಿದ್ದಂತೆ ಭಾಸವಾಗುತ್ತದೆ! ಶರೀರಕ್ಕೆ ಶೀತ, ನಂಜಿನ ಬಾಧೆ ಆಗದಂತೆ, ಅರಿಸಿನದ ಲೇಪ ಮಾಡಿಕೊಂಡು ಹೆಂಗಳೆಯರು ನೀರಿಗೆ ಇಳಿಯುತ್ತಿದ್ದರು. ನೀರು ಸಿಂಪಡಿಸುತ್ತ, ಕಸರತ್ತು, ಮುಟ್ಟಾಟವಾಡುತ್ತ, ಮನದಣಿ ನೀರಾಟವಾಡಿ, ಮನಸ್ಸಿಲ್ಲದ ಮನಸ್ಸಿನಿಂದ ಅಂತೂ ಜಳಕ ಮುಗಿಸಿ, ಒದ್ದೆಬಟ್ಟೆ ಕಳೆದು, ಒಣ ಬಟ್ಟೆ ಧರಿಸಿ, ಕುಂಕುಮವಿಟ್ಟು, ಕಾಡಿಗೆ ತೀಡಿ, ಕೂದಲ ಸಿಕ್ಕು ಬಿಡಿಸಿ, ಎಣ್ಣೆಗಂಟು ಹಾಕಿ, ಬೆಳಗಿದ ಬಿಂದಿಗೆಗಳಲ್ಲಿ ನೀರು ತುಂಬಿಕೊಂಡು ಗೃಹಾಭಿಮುಖವಾಗುತ್ತಿದ್ದರು. ಘಟ್ಟದಲ್ಲಿ ಸಂಧ್ಯಾವಂದನೆಯಲ್ಲಿ ಮೈಮರೆತವರು, ಶಿವಭಕ್ತರು, ಹರಿದಾಸರು ಇತ್ಯಾದಿ ಜನ ಕಂಡು ಬರುತ್ತಿದ್ದರು. *೭

**ಜೀವನದ ಅತ್ಯಾವಶ್ಯಕತೆಗಳಲ್ಲಿ ಒಂದಾದ ನೀರಿನ ಪೂರೈಕೆ, ಧಾರ್ಮಿಕ ಹಾಗೂ ಪುಣ್ಯದ ಕೆಲಸವೆಂದು ಪರಿಗಣಿಸಲಾಗುತ್ತಿತ್ತು.** ಅಂತೆಯೇ ದಾನಿಗಳು ಬಾವಿ, ಕೆರೆ, ತಟಾಕಗಳನ್ನು ನಿರ್ಮಿಸುವದು, ಹಳೆಯವನ್ನು ದುರಸ್ತಿಗೊಳಿಸುವದು, ಹೂಳೆತ್ತಿಸುವದು ಮುಂತಾದ ಕೆಲಸ ಕಾರ್ಯಗಳನ್ನು ಕೈಕೊಂಡರೆ, ಸ್ಥಳೀಯ ಜನ ಅವುಗಳ ಸ್ವಚ್ಛತೆ, ತಮ್ಮ ಹೊಣೆ, ಎಂಬುದನ್ನು ಅರಿತಿರುತ್ತಿದ್ದರು. ಗ್ರಾಮಕ್ಕೊಂದು ಕೆರೆ, ಊರಿಗೊಂದು ತಟಾಕ, ನದಿ ಇದ್ದಲ್ಲಿ ನಗರ, ಇರುವದು ಸಾಮಾನ್ಯವಾಗಿತ್ತು. ಕನ್ನಡ ಕಾವ್ಯಗಳಲ್ಲಿ ಹೊಳೆ, ಕೊಳ, ಬಗರಗೆ, ದೀರ್ಘಿಕೆ, ಹೊಕ್ಕರಣೆ ಬಾವಿಗಳ ಉಲ್ಲೇಖ ಬರುತ್ತದೆ. *೮ ಕನಕದಾಸರು, ವರ್ಷದುದ್ದಕ್ಕೂ ಏಕಪ್ರಕಾರವಾಗಿ ಹರಿಯುವ ಕಾಲುವೆಗಳಿಂದ, ತೊರೆ - ಕೆರೆಗಳಿಂದ ರಾಜಧಾನಿಗೆ ಸತತವಾದ ನೀರಿನ ಪೂರೈಕೆಯಾಗುತ್ತಿದ್ದ ವಿಚಾರವನ್ನು 'ಮೋಹನ ತರಂಗಿಣಿ'ಯಲ್ಲಿ ಉಲ್ಲೇಖಿಸಿದ್ದಾರೆ. *೯ ನದಿಯ ಶುಚಿತ್ವವನ್ನು ಕಾಯ್ದುಕೊಂಡು ಹೋಗುವದು ಸಾರ್ವಜನಿಕರ ಕರ್ತವ್ಯವಾಗಿದ್ದು, ಬಾಯಿ ಮುಕ್ಕಳಿಸಿದ ನೀರನ್ನು, ನೀರು ಹರಿಯುವಲ್ಲಿಂದ ಹನ್ನೆರಡು ಬಾಣಗಳಷ್ಟು ದೂರ ಉಗುಳಬೇಕಾಗಿತ್ತು. ಬಟ್ಟೆ ಒಗೆಯುವದು, ಮಲ ಮೂತ್ರ ವಿಸರ್ಜನೆ ಮುಂತಾದವುಗಳಿಂದ ನೀರು ಕಲುಷಿತಗೊಳಿಸುವವರಿಗೆ ಶಿಕ್ಷೆಯಾಗುತ್ತಿತ್ತು. *೧೦

ಸ್ನಾನ-ಅಭ್ಯಂಜನಗಳು ಕೇವಲ ರಾಜ ಮಹಾರಾಜರಿಗೆ, ಸಿರಿವಂತರಿಗಷ್ಟೆ ಸೀಮಿತವಾಗಿರಲಿಲ್ಲ ಬಡವರು, ದೀನದಲಿತ ಪಂಥಭೇದವಿಲ್ಲದೇ ದೇಹಶುದ್ಧಿಯತ್ತ ಗಮನಕೊಡುತ್ತಿದ್ದರು. ಬೆಲೆಬಾಳುವ ಸುಗಂಧ ತೈಲವಿಲ್ಲದಿದ್ದರೂ-ಕಾಡು ಪೂರೈಸುತ್ತಿದ್ದ ಬೇರು ತೊಗಟೆ, ಹೊನ್ನೆ ಹೂ ಬೀಜಗಳನ್ನು ಒಣಗಿಸಿ ತೈಲವನ್ನು ಪಡೆಯುತ್ತಿದ್ದರು. ತಾಮ್ರ, ಹಿತ್ತಾಳೆ ಪಾತ್ರ-ಪಡಗ ಇಲ್ಲದಿದ್ದರೆ ಮಣ್ಣಿನ ಹಂಡೆಯಲ್ಲೇ ನೀರು ಕಾಯಿಸುವರು. ತರಗೆಲೆ, ಒಣಗಿದ ಮುಳ್ಳು, ಗಂಟಿಗಳಿಗೆ, ಬೆರಣಿಗೆ ಬರಗಾಲವಿರಲಿಲ್ಲ! ತೊಟ್ಟು ಕೊಬರಿಎಣ್ಣೆ ಆಗೀಗ ಮೈಗೆ ಸವರಿಕೊಂಡಾರು! ಅಂಟವಾಳ ಅಥವಾ ಸೀಗೆಪುಡಿಗಳನ್ನು ಕಾಡು-ಬೆಟ್ಟಗಳಿಂದ ಒಟ್ಟುಮಾಡಿ, ಕುಟ್ಟಿ ಪಡೆಯಬಹುದಿತ್ತು. ಬಡತನ ಶುಚಿತ್ವಗಳಿಗೆ ತಾಳೆ ಹಾಕುವ ಆಧುನಿಕತೆ ಆಗ ಹಣಿಕಿರಲಿಲ್ಲ! ತಾಳಗುಂದದ ಅಗ್ರಹಾರದಲ್ಲಿ ವಿದ್ಯಾರ್ಥಿಗಳಿಗೆ ಎಣ್ಣೆ-ನೀರಿನ ಸರಬರಾಜಿಗೆ ವ್ಯವಸ್ಥೆ ಇತ್ತು. *೧೧ ಮಹಾಮಂಡಲೇಶ್ವರ ಚಾವುಂಡರಾಯನು ಸಮ್ಯಾನದ ಮಠಿಕೆಯಲ್ಲಿ ದೀಪದ ವ್ಯವಸ್ಥೆಯೊಂದಿಗೆ ಸ್ವಾಧ್ಯಾಯಿಕರ ತೈಲಲೇಪಕ್ಕೆ ಕೊಟ್ಟ ದಾನವನ್ನು ಕ್ರಿ. ಶ ೧೦೩೪ರ ಶಾಸನ ವೊಂದು ಪ್ರಸ್ತಾಪಿಸುತ್ತದೆ. *೧೨

ಕರ್ನಾಟಕದ ಶಿಲ್ಪಿ ಮತ್ತು ಚಿತ್ರಕಾರರು ಸ್ನಾನದ ವಿವಿಧ ಹಂತಗಳನ್ನು ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರದಿಂದ ಎಂಟು ಕಿಲೋಮಿಟರ್ ದೂರದ ಸೊರಬ ರಸ್ತೆಯಲ್ಲಿ, ನಾಡಕಲಸಿ ಗ್ರಾಮದಲ್ಲಿ ಕ್ರಿ. ಶ. ೧೨೭೮ರ ಮಲ್ಲಿಕಾರ್ಜುನ ದೇವಾಲಯವಿದೆ. ಅದರ ಹೊರಗೋಡೆಯ ಮೇಲೆ ಅನೇಕ ಭಂಗಿಗಳಲ್ಲಿ ಮಿಥುನ ಶಿಲ್ಪಗಳಿವೆ. ಇವು ಉಬ್ಬುಶಿಲ್ಪಗಳು. ಹಲವು ಅಂದಿನ ಸಾಮಾಜಿಕ ಜೀವನವನ್ನು ಚಿತ್ರಿಸುತ್ತವೆ. ಹೆಣ್ಣುಮಕ್ಕಳು ಎರೆದುಕೊಳ್ಳುವಾಗ ಮನೆಯ ಇತರ ಹೆಂಗಳೆಯರು ನೆರವಿಗೆ ಬರುತ್ತಾರಲ್ಲವೇ? ಕಾಲುಮಣೆಯ ಮೇಲೆ ಕುಳಿತ, ದಟ್ಟ ತಲೆಗೂದಲು ಹೊಂದಿದ ಹೆಣ್ಣಿಗೆ ನೀರೆರೆಯುತ್ತಿರುವ ಸೊಗಸಾದ ಶಿಲ್ಪವೊಂದಿದೆ. ಅಂದಿನ ಗಂಡಸರೂ ಕೂದಲು ಬೆಳೆಸಿ ಬಾಚಿ ಮುಡಿಕಟ್ಟಿ ಹೂಮುಡಿಯುವದು ಸಾಮಾನ್ಯವಾಗಿತ್ತಲ್ಲವೇ? ಹೀಗಾಗಿ ಅವರ ತಲೆಸ್ನಾನಕ್ಕೂ ಸಹಾಯ ನೀಡುವದು ಹೆಂಗಳೆಯರ ಪ್ರಮುಖ ಜವಾಬ್ದಾರಿ ಇರಲು ಸಾಕು! ಕಲ್ಲಿನ ಆಸನದಲ್ಲಿ ಕುಳಿತವನಿಗೆ ಒಬ್ಬಾಕೆ ನೀರೆರೆದರೆ, ಇನ್ನೊಬ್ಬಳು ಕೂದಲ ಸಿಕ್ಕು ಬಿಡಿಸುತ್ತಿರುವ ಚಿತ್ರವಿದೆ. ಉತ್ತರಕನ್ನಡ ಜಿಲ್ಲೆಯ ಭಟಕಳದಲ್ಲಿರುವ

## ಶತಕಗಳಲ್ಲಿ ಕನ್ನಡಿಗರ ಸ್ನಾನ

### ರೇಖಾಚಿತ್ರಗಳ ವಿವರಗಳು

1. ಗೃಹಿಣಿಯ ಸ್ನಾನಕ್ಕೆ ನೆರವು
2. ಪುರುಷರಿಗೆ ಸ್ತ್ರೀಯರಿಂದ ಸ್ನಾನ
3. ನೀರು ಝಾಡಿಸಲು ಅಂಗವಸ್ತ್ರ
4. ಅಭ್ಯಂಗಸ್ನಾನದಲ್ಲಿ ಮೈ ಮರೆತಾಗ
5. ಸ್ನಾನದ ಸರಂಜಾಮುಗಳು
6. ನಾರಿಯ ನೌಕಾವಿಹಾರ
7. ಮೀನನ್ನು ನಾಚಿಸುವ ನಾರಿ
8. ರಮಣೀಯ ನೀರಾಟ
9. ನೀರ ರಂಭೆಯರಿಗೆ ಬೋಧನೆ
10. ನೀರ ಡೊಂಬರಾಟ





























ಚೀತಪ್ಪೆ ನಾರಾಯಣ ದೇವಾಲಯ (ಕ್ರಿ. ಶ. ೧೫೪೬)ವು, ಊರ ಮೋಟಾರ ನಿಲ್ದಾಣದ ಸನಿಹದಲ್ಲೇ ಇದೆ. ದೇವಾಲಯದ ಹೊರಪೌಳಿಗಳನ್ನು ಸಾಮಾಜಿಕ ಜೀವನದ ಉಬ್ಬುಚಿತ್ರಗಳಿಂದ ತುಂಬಿಸಲಾಗಿದೆ. ಅವುಗಳಲ್ಲಿ ಎರಡು, ಸ್ನಾನದ ವಿಧಿಯನ್ನು ಪ್ರತಿನಿಧಿಸುತ್ತವೆ. ಹೆಣ್ಣೋರ್ವಳು ಸ್ನಾನ ಮುಗಿಸಿ ಕೂದಲ ನೀರನ್ನು ಹಿಂಡುತ್ತಿದ್ದಾಗ, ಇನ್ನೊಬ್ಬಾಕೆ ಕೈಯಲ್ಲಿ ಬೈರಾಸು ಹಿಡಿದು ಅವಳಿಗೆ ಕೊಡಲು ಧಾವಿಸುತ್ತಿದ್ದಾಳೆ. ಇನ್ನೊಂದು ಶಿಲ್ಪದಲ್ಲಿ ಪುರುಷನೋರ್ವನು ನೀರುಹಾಕುವದು ಹೆಂಗಸರ ಕೆಲಸ, ಆದರ ಸುಖವಷ್ಟೆ ತನಗೆ ಮೀಸಲು, ಎನ್ನುವಂತೆ ಸ್ಥಿತಪ್ರಜ್ಞನಾಗಿ ಕುಳಿತೇ ಬಿಟ್ಟಿದ್ದಾನೆ! ಒಬ್ಬಾಕೆ ಚೊಂಬಿನಿಂದ ನೀರು ಅಥವಾ ಅಂಟಾಳದ ಅರ್ಕವನ್ನು ಸುರಿದರೆ, ಇನ್ನೊಬ್ಬಾಕೆ ತಲೆ ತಿಕ್ಕುತ್ತಿದ್ದಾಳೆ.

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವಿಯ ತ್ರಿಪುರಾಂತಕೇಶ್ವರ ದೇವಾಲಯದ ಹೊರಗೋಡೆಯ ಮೇಲೆ ಪಂಚತಂತ್ರದ ಕಥೆಗಳನ್ನು ಕಟೆದಿರುವದು ಎಲ್ಲರಿಗೂ ಪರಿಚಿತ. ಅವುಗಳ ಭಾಗವಾಗಿ ಸ್ನಾನಮಾಡುವ ಸ್ತ್ರೀವಿಗ್ರಹವೂ ಇದೆ. ಆದರೆ ಬಿಸಿಲು ಝಳ, ಜಡಿಮಳೆಗಳಿಂದಾಗಿ, ಶಿಲ್ಪ ತುಂಬ ಸವೆದಿದೆ. ಇದರಂತೆ ಹರಿಹರದಲ್ಲಿರುವ ಹರಿಹರೇಶ್ವರ ದೇವಾಲಯದ ಹೊರಗೋಡೆಯ ಮೇಲೆ ಮಗುವಿಗೆ ಸ್ನಾನ ಹಾಕುವ ಉಬ್ಬು ಶಿಲ್ಪವೂ ತುಂಬಾ ಸವೆದು ಹೋಗಿ ವಿವರಗಳು ಕಾಣದಾಗಿವೆ.

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಕ್ರಿ. ಶ. ಸುಮಾರು ೧೮೨೫ರಲ್ಲಿ **ಸೌಗಂಧಿಕಾ ಪರಿಣಯ** ಎಂಬ ಕಲ್ಲಚ್ಚಿನ ಕೃತಿಯನ್ನು ಪ್ರಕಟಿಸಿದರು. ಇದು ಸಚಿತ್ರವಾಗಿದ್ದು ಅಂದಿನ ಸ್ನಾನ ವಿಹಾರಗಳ ಕೆಲವು ರೇಖಾಚಿತ್ರಗಳನ್ನು ಹೊಂದಿದೆ. ಅರಸನು ಪರಿವಾರದೊಂದಿಗೆ ವನವಿಹಾರಕ್ಕೆ ಹೋದಾಗ ಶಿಬಿರ ಹೂಡಿದೆಡೆ ಸ್ನಾನದ ವ್ಯವಸ್ಥೆ ಮಾಡಿದ ಚಿತ್ರವನ್ನೂ ಸೇರಿಸಲಾಗಿದೆ. ಕಲ್ಲಿನ ಅಥವಾ ಇಟ್ಟಿಗೆಯ ಒಲೆ ಹೂಡಿ ದೊಡ್ಡ ಪಾತ್ರೆಯಲ್ಲಿ ನೀರಿಡಲಾಗಿದೆ. ಜೊತೆಗೆ ಬಂದ ಹೆಂಗಳೆಯರು ಅಲ್ಲಿಯ ಸರೋವರದಲ್ಲಿ ನಿಶ್ಚಿಂತೆಯಿಂದ ನೀರಿಗೆ ಇಳಿದು ಜಲಕ್ರೀಡೆಯಾಡಿದ ಸುಂದರ ದೃಶ್ಯವಿದೆ. ಒಂದರಲ್ಲಿ ಪುಟ್ಟನಾವೆಯನ್ನು ನಾರಿಯರು ನಡೆಸುತ್ತ ನೀರಾಟಕ್ಕೆ ಹೊರಟರೆ ಇನ್ನೊಬ್ಬಳು ನೀರಿನಲ್ಲಿಯ ಜಲಸಸ್ಯ ಕಿತ್ತು ಕೇಕೆ ಹಾಕುತ್ತಿದ್ದಾಳೆ. ಮೀನಿನಂತೆ ಕೈಕಾಲು ಬಡಿದು ಈಜಲು ಮತ್ತೊಬ್ಬಳು ಯತ್ನಿಸಿದರೆ, ಮಗುದೋರ್ವಳು ಗೆಳತಿಯ; ಭುಜವೇರಿ ಆಲಾಪ ಮಾಡುತ್ತಿದ್ದಾಳೆ. ಇನ್ನೋರ್ವಳಂತೂ ಧನುಷ್ಯಾಕಾರದಲ್ಲಿ ಬಗ್ಗಿ ಕಸರತ್ತು ಮಾಡುತ್ತಲೇ ನೀರಿಗಿಳಿಯುವ ಸಾಹಸ ನಡೆಸಿದ್ದಾಳೆ!

ಶ್ರಮವಹಿಸಿದಲ್ಲಿ ಇನ್ನೆಷ್ಟೋ ಶಿಲ್ಪಗಳಲ್ಲಿ ಹಳೆಯ ದೇವಸ್ಥಾನಗಳಲ್ಲಿ ಈ ಮೊದಲು ಗಮನಿಸದ ಎಡೆಗಳಲ್ಲಿ ಸ್ನಾನ-ಅಭ್ಯಂಜನದ ಜಲಕೇಳಿಯ ದೃಶ್ಯಗಳು ಕಾಣಬಹುದಾದ ಸಂಭವವಿದೆ! ದೈನಂದಿನ ಜೀವನದ ಅತ್ಯವಶ್ಯ ಕ್ರಮವನ್ನು ನಮ್ಮ ಶಿಲ್ಪಿವರ್ಯರು ಗಮನಿಸಿಯೇ ಇದ್ದಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಮಾನಸೋಲ್ಲಾಸ ಆಫ್ ಕಿಂಗ್ ಸೋಮೇಶ್ವರ** (ಸಂಸ್ಕೃತ. ಸಂಪುಟ II ) : (ಸಂ.) ಜಿ.ಕೆ. ಶ್ರೀ ಗೊಂದೆಕರ್, ಬಡೋದಾ, ೧೯೩೯, ಸ್ನಾನ ಭೋಗ-ಪದ್ಯ ೯೨೭-೯೫೩, ಪುಟ ೮೧-೮೩

*೨. ಉಪರೋಕ್ತ - ಪದ್ಯ - ೯೩೩-೪೪

*೩. **ಮರೆತು ಹೋಗಿರುವ ಸಾಮ್ರಾಜ್ಯ - ವಿಜಯನಗರ** (ರಾಬರ್ಟ ಸಿವೆಲ್:) ಕನ್ನಡ ಅನುವಾದ: ಡಾ॥ ಸದಾನಂದ ಕನವಳ್ಳಿ, ಹಂಪಿ, ೧೯೯೨, ಪು ೨೬೯-೭೦

*೪. **ಲೋಕೋಪಕಾರಂ** (ಚಾವುಂಡರಾಯ): (ಸಂ.) ಎಚ್. ಶೇಷಅಯ್ಯಂಗಾರ್, ಮದ್ರಾಸ, ೧೯೫೦, ಅಧ್ಯಾಯ ಏಳು, ಪದ್ಯ ೭-೨೭

*೫. **ಮಾನಸೋಲ್ಲಾಸ**, ಪದ್ಯ: ೯೪೧

*೬. **ಶಿವತತ್ವರತ್ನಾಕರ**, ಎರಡನೆಯ ಸಂಪುಟ, ಮೈಸೂರು ೧೯೬೯ (ಸಂಸ್ಕೃತ): ಕಲ್ಲೋಲ ಆರು, ತರಂಗ ಆರು, ಪದ್ಯ. ೧೮-೫೨ ಪುಟ ೩-೭

*೭. **ತಿರುಮಲಾರ್ಯ ಮತ್ತು ಚಿಕ್ಕದೇವರಾಜ ಒಡೆಯರು**: ಡಾ॥ ಎಲ್. ಬಸವರಾಜು, ಕ. ವಿ. ಧಾರವಾಡ, ೧೯೭೨, ಪು. ೧೫

*೮. ದೇವಪ್ಪಕವಿ ವಿರಚಿತ **ರಾಮವಿಜಯಕಾವ್ಯ** : (ಸಂ.) ಟಿ. ಕೇಶವಭಟ್ಟ, ಬೆಂಗಳೂರು, ೧೯೬೯, ಅಧ್ಯಾಯ ೨, ಪದ್ಯ. ೨೭, ಪುಟ. ೨೭

*೯. **ಮೋಹನತರಂಗಿಣಿ** (ಕನಕದಾಸರು): (ಸಂ.) ಡಾ॥ ಆರ್. ಸಿ. ಹಿರೇಮಠ, ಧಾರವಾಡ, ೧೯೭೩. ಅಧ್ಯಾಯ ೧, ಪದ್ಯಗಳು. ೩೫-೩೯,

*೧೦. **ಮಿತಾಕ್ಷರ ಸಂಹಿತೆ** : ಪದ್ಯ. ೫, ಶಿವ - ಕಲ್ಲೋಲ ಆರು, ತರಂಗ ಆರು

*೧೧. **ಎಪಿಗ್ರಾಫಿಯ ಕರ್ನಾಟಕ**, ಸಂ. VII, ಶಿಕಾಪುರ ೧೮೫,

*೧೨. **Epigraphia Indica** Vol. XXXII, p 63, ff 1034 A.D

ಶೀಲಾಕಾಂತ ಪತ್ತಾರ*

# ಮತ್ತೆರಡು ಚಲುಕ್ಯ ವರ್ಣ-ಚಿತ್ರಗಳ ಶೋಧ

ಕ್ರಿಸ್ತಶಕ ೬-೮ ಶತಮಾನಗಳಲ್ಲಿ ರಾಜ್ಯವಾಳಿದ ಬಾದಾಮಿಯ ಚಲುಕ್ಯ ಅರಸರು ಐಹೊಳೆ, ಬಾದಾಮಿ, ಪಟ್ಟದಕಲ್ಲು ಎಂಬ ತ್ರಿಪಾದಿಯ ಮೇಲೆ ಕರ್ನಾಟಕದ ಕಲಾಪಾಕವನ್ನು ಸಿದ್ಧಗೊಳಿಸಿದ್ದಾರೆ. ಏಕಶಿಲಾ ನಿರ್ಮಿತ ದೇವಾಲಯಗಳ ಮತ್ತು ರಾಚನಿಕ ದೇವಾಲಯಗಳ ಮೂಲಕ ಚಲುಕ್ಯ ಶಿಲ್ಪಿಗಳು ತಮ್ಮದೇ ಆದ ಕಲಾ ಪರಂಪರೆಯನ್ನು ನಾಡಿಗೆ ಕಾಣಿಕೆಯಾಗಿ ನೀಡಿದ್ದಾರೆ. ಇಲ್ಲಿಯ ಶಿಲ್ಪಗಳು ಸಂಗೀತ, ನೃತ್ಯ ಕಲೆಗಳನ್ನು ಚೆನ್ನಾಗಿ ಪರಿಚಯಿಸುತ್ತವೆ. ಕರ್ನಾಟಕದ ಪ್ರಪ್ರಥಮ ಶಾಸನೋಕ್ತ ನರ್ತಕನಾದ ಅಚಲನು ಭರತನಾಟ್ಯ ಕಲೆಯಲ್ಲಿ ನಿಷ್ಣಾತನಾಗಿದ್ದನೆಂಬುದನ್ನು ಪಟ್ಟದಕಲ್ಲಿನ ಶಾಸನಗಳು ತಿಳಿಸುತ್ತವೆ.*೧ ಇಮ್ಮಡಿ ಪೊಲೆಕೇಶಿಯ ಸೊಸೆ ವಿಜಯ ಭಟ್ಟಾರಿಕೆಯು 'ಕೌಮುದೀ ಮಹೋತ್ಸವ' ಎಂಬ ಸಂಸ್ಕೃತ ನಾಟಕದ ಕರ್ತೃವೆನಿಸಿದ್ದಾಳೆ. ಇಂತಿರುವಲ್ಲಿ ಚಲುಕ್ಯ ಅರಸರು ಕಲೆಗಳಿಗೆ ತಾಯಿಯೆನಿಸಿರುವ ಚಿತ್ರಕಲೆಯನ್ನು ಮರೆತಿರಲು ಸಾಧ್ಯವೇ?

ಸಿತ್ತನವಾಸಲದಲ್ಲಿ ವಾಕಾಟಕರು ಜೈನ ಸಂಪ್ರದಾಯಕ್ಕೆ ಸಂಬಂಧಿಸಿದ ವರ್ಣಚಿತ್ರಗಳನ್ನು ಚಿತ್ರಿಸಿದಂತೆ ಬಾದಾಮಿಯಲ್ಲಿ ಮಂಗಲೇಶನು ಕೊರೆಯಿಸಿದ ಸುಪ್ರಸಿದ್ಧ ಮೂರನೆಯ ಮಹಾವಿಷ್ಣುಗುಹಾಲಯ (ಕ್ರಿ. ಶ. ೫೭೮)ದ ಮುಂಚಾವಣಿಯ ಒಳಮೈಯಲ್ಲಿ ಹಿಂದೂ ಸಂಪ್ರದಾಯಕ್ಕೆ ಸಂಬಂಧಿಸಿದ ವರ್ಣ ಚಿತ್ರಗಳನ್ನು ಚಿತ್ರಿಸಿರುವುದು ಸರ್ವವಿದಿತ; ೧೮೭೪ರಷ್ಟು ಹಿಂದೆಯೇ ಜೇಮ್ಸ ಬರ್ಜೆಸ್ ಎಂಬವರು ಈ ಚಿತ್ರಗಳ ಅಸ್ತಿತ್ವವನ್ನು ಗುರುತಿಸಿದ್ದರಾದರೂ.*೨ ಅವನ್ನು ಅಧ್ಯಯನ ಮಾಡಿದ ಶ್ರೇಯಸ್ಸು ಅಮೇರಿಕೆಯ ಪ್ರಾಧ್ಯಾಪಿಕೆ ಸ್ಟೆಲಾ ಕ್ರಾಮರಿಶರಿಗೆ ಸಲ್ಲುತ್ತದೆ (೧೯೫೭). ನಂತರ ಸಿ. ಶಿವರಾಮ ಮೂರ್ತಿ ಅವರು ಇವನ್ನು ಮರು ಪರಿಶೀಲಿಸಿದರು.*೩

ನಾಡಿನ ಖ್ಯಾತ ಪುರಾತತ್ವ ವಿದ್ವಾಂಸರಾದ ಡಾ॥ಅ. ಸುಂದರ ಅವರು ಬಾದಾಮಿಯ ಪೊಲೆಕೇಶಿ (ಪುಲಕೇಶಿ) ಕೋಟೆಯ ಉತ್ತರಕ್ಕೆ ಚಾಚಿಕೊಂಡಿರುವ ಬೆಟ್ಟದ ಶ್ರೇಣಿಯ ಕಲ್ಲಾಸರೆಯಲ್ಲಿ ಬಾದಾಮಿ ಚಲುಕ್ಯರ ಕಾಲದ ವರ್ಣಚಿತ್ರವನ್ನು ಸುಮಾರು ಕಾಲು ಶತಕದ ಹಿಂದೆಯೇ ಶೋಧಿಸಿದರು.*೪ ಗಣ್ಯಸ್ತ್ರೀಯೊಬ್ಬಳು ಸಖಿಯರೊಂದಿಗೆ ಸಲ್ಲಾಪದಲ್ಲಿರುವ ದೃಶ್ಯವದು. ಇತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ಇದು ಕರ್ನಾಟಕದ ಅತಿ ಪ್ರಾಚೀನ ವರ್ಣಚಿತ್ರವಾಗಿದೆ. ಚಲುಕ್ಯರ ವರ್ಣಚಿತ್ರಕಲೆಯ ಬಗ್ಗೆ ಇದುವರೆಗೆ ಇವಿಷ್ಟು ಪುರಾವೆಗಳಾಗಿದ್ದವು.

ಇತ್ತೀಚೆಗೆ (೧೯೯೬) ಐಹೊಳೆಯಲ್ಲಿ ನಾನು ಕ್ಷೇತ್ರಕಾರ್ಯವನ್ನು ಕೈಕೊಂಡಾಗ 'ರಾವಣಫಡಿ'ಯಲ್ಲಿ ಚಲುಕ್ಯರ ಕಾಲದ ವರ್ಣಚಿತ್ರವೊಂದು ಕಣ್ಣಿಗೆ ಬಿದ್ದಿತು. ಲಕ್ಷ್ಯಗೊಟ್ಟು ಅದನ್ನು ವೀಕ್ಷಿಸಿದಾಗ ನಟರಾಜ ಶಿಲ್ಪವಿರುವ ಉಪಗುಹೆಯ ಮೇಲ್ಗಂಡು (ಚತ್ತು) ಅಂಚಿನ ಗುಂಟ ನಕ್ಷೆಯ ಪಟ್ಟಿಗಳಿಂದ ಅಲಂಕೃತವಾದದ್ದು ಕಂಡು ಬಂದಿತು. ನಡುವಿನ ಅವಕಾಶದಲ್ಲಿ ಮಾನವಾಕೃತಿಗಳು ಗೋಚರಿಸಿದವು.

ರಾವಣಫಡಿಯ ಉಪಗುಹೆಯಲ್ಲಿ ನಾಟ್ಯನಿರತ ನಟರಾಜನ ಶಿಲ್ಪವು ಅತ್ಯಂತ ಮನಮೋಹಕವಾಗಿದ್ದು ಆತನ ಎಡಬಲಗಳಲ್ಲಿ ಚೆಲುವಿನ ಸಪ್ತಮಾತೃಕೆಯರನ್ನು ವೀಕ್ಷಿಸುವಲ್ಲಿ ಮಗ್ನನಾದ ಸಹೃದಯನ ಕಣ್ಣುಗಳು ಮಬ್ಬು ಮಬ್ಬಾದ ವರ್ಣಚಿತ್ರಗಳತ್ತ ಹೊರಳಲಾರವು. ಸಾಲದ್ದಕ್ಕೆ ಮಂದವಾದ ಪ್ರಕಾಶ ಕಿರಣಗಳು ನಮ್ಮ ಕಣ್ಣಿಗೆ ಮಂಕುಬೂದಿಯನ್ನು ಎರಚುತ್ತವೆ. ಕೆಲಕಾಲ ಆ ಮಬ್ಬು ಕತ್ತಲೆಯ ನಟರಾಜನ ಉಪಗುಹೆಯಲ್ಲಿ ನಿಂತು ಕತ್ತೆತ್ತಿ ದೃಷ್ಟಿಸಿದರೆ ಹಾಳಾಗಿ ಹೋಗಿರುವ ವರ್ಣಚಿತ್ರಗಳ ಅವಶೇಷಗಳನ್ನು ಗುರುತಿಸಬಹುದು. ೦.೮೧ x ೨.೧ ಮೀಟರ ಅಳತೆಯ ಮೇಲ್ಗಂಡು ಪೂರ್ಣವಾಗಿ ಹಿಂದೊಮ್ಮೆ ವರ್ಣಾಲಂಕೃತವಾಗಿ

* ಆಂಗ್ಲಭಾಷಾ ಉಪನ್ಯಾಸಕರು, ಶ್ರೀ ಜಿ. ಎಂ. ಕಲ್ಯಾಣಶೆಟ್ಟಿ ಪದವಿ ಪೂರ್ವ ಕಾಲೇಜ, ಬಾದಾಮಿ, ಬಾಗಲಕೋಟ ಜಿಲ್ಲೆ.



ತ್ತೆಂಬುದು ಸ್ಪಷ್ಟವಾಗಿ ಕಾಣುತ್ತದೆ. ವರ್ಣಚಿತ್ರವನ್ನು ದಪ್ಪನಾದ ಹೀರು ಪದರಿನ (absorbent ground) ಮೇಲೆ ರಚಿಸಲಾಗಿದೆ. ಮೇಲ್ಗಂಡಿನ ಪಶ್ಚಿಮ ಅಂಚಿನ ಬಳಿ ಮಾತ್ರ ಮಾನವಾಕೃತಿಗಳು ಗೋಚರಿಸುತ್ತವೆ. ಅದೊಂದು ಯುದ್ಧದ ಸನ್ನಿವೇಶವೆಂದು ಗುರುತಿಸಬಹುದಾಗಿದೆ. ನಡುವೆ ಕಂಡುಬರುವ ಯೋಧನು ಕಠಾರಿಯೊಂದನ್ನು ಎದುರು ಬರುತ್ತಿರುವವನನ್ನು ತಿವಿಯುತ್ತಿರುವಂತೆ ಕಂಡುಬತುತ್ತದೆ. ಆತನ ಮೇಲ್ಭಾಗದಲ್ಲಿ ಇನ್ನೊಬ್ಬ ಯೋಧನು ಉದ್ದವಾದ ಈಟಿಯನ್ನು ಅಡ್ಡವಾಗಿ ಹಿಡಿದಂತಿದೆ. ಮಧ್ಯದಲ್ಲಿರುವ ಯೋಧನ ಎಡಕ್ಕೆ ಇನ್ನೊಬ್ಬ ಯೋಧನು ತೀರ ಅಸ್ಪಷ್ಟವಾಗಿ ಕಂಡು ಬಂದರೂ ಆತನು ಲೋಹದ ಕವಚವನ್ನು ತೊಟ್ಟಿರುವುದನ್ನು ಗುರುತಿಸಲು ಕಷ್ಟವಾಗುವುದಿಲ್ಲ. ಆತನ ಎಡಗೈಯಲ್ಲಿ ಗೋಲಾಕಾರದ ಗುರಾಣಿ ಇದೆ. ಒಟ್ಟಿನಲ್ಲಿ ಇದು ರಣರಂಗದ ದೃಶ್ಯವೆಂದು ಹೇಳಬಹುದಾಗಿದೆ.

ಈ ನಟರಾಜ ಉಪಗುಹೆಯ ಹೊಸ್ತಿಲ ಭಾಗದಲ್ಲಿ 'ಶ್ರೀರಣವಿ' ಎಂಬ ೬ನೆಯ ಶತಮಾನದ ಅಕ್ಷರಗಳ ಶಾಸನವು ಇಲ್ಲಿ ಗಮನಾರ್ಹವಾದುದು. ಐದನೆಯ ಅಕ್ಷರವು 'ಕ್ರ' ಅಥವಾ 'ಕ್ರಾ' ಆಗಿರಬಹುದಾಗಿದೆ. *ರಣವಿಕ್ರ (ಮ)* ಎಂಬುದು ಮೊದಲನೆಯ ಪೊಲೆಕೇಶಿಯ ಬಿರುದಾಗಿದ್ದರೆ *ರಣವಿಕ್ರಾ(ಂತ)* ಎಂಬುದು ಮಂಗಲೇಶನ ಬಿರುದಾಗಿತ್ತು. ಆದ್ದರಿಂದ *ಶಾಸನವು ಒಂದನೆಯ ಪೊಲೆಕೇಶಿ ಇಲ್ಲವೆ ಮಂಗಲೇಶನದಾಗಿರಬಹುದು.* ಪ್ರಸ್ತುತ ರಾವಣಫಡಿ ಗುಹಾಲಯವನ್ನು ಸು. ಕ್ರಿ. ಶ. ೫೫೦ರ ವೇಳೆಗೆ ಕೊರೆಯಲಾಯಿತೆಂದು ಅನೇಕ ವಿದ್ವಾಂಸರ ಅಭಿಪ್ರಾಯ. ಇದನ್ನು ಸ್ವೀಕರಿಸುವುದಾದರೆ ಈ ವರ್ಣಚಿತ್ರದ ಕಾಲವನ್ನು ಕೂಡ ಕ್ರಿ. ಶ. ೫೫೦ ಎಂದು ತೀರ್ಮಾನಿಸಬಹುದು. ಏಕೆಂದರೆ ಗುಹಾಲಯದ ಕೊರೆತದ ಕಾರ್ಯ ಮುಗಿಯುತ್ತಲೆ ಅದನ್ನು ವರ್ಣದಿಂದ ಅಲಂಕರಿಸುವುದು ರೂಢಿಯಾಗಿತ್ತೆಂದು ತಿಳಿದುಬರುತ್ತದೆ. ಹಾಗಿದ್ದಲ್ಲಿ ಚರ್ಚೆಗೆ ಒಳಪಟ್ಟ ಈ ವರ್ಣಚಿತ್ರದಲ್ಲಿ ಕಾಣಿಸಿಕೊಂಡ ಯೋಧನು ಮೊದಲನೆಯ ಪೊಲೆಕೇಶಿಯಾಗಿರಬಹುದೇ? 'ರಣವಿಕ್ರಮನ ಫಡಿ' ಕಾಲಕ್ರಮದಲ್ಲಿ 'ರಣವೀರನ ಫಡಿ'ಯೆಂದು, ಅನಂತರದಲ್ಲಿ, 'ರಾವಣನ ಫಡಿ' ಯೆಂದು ಅಪಭ್ರಂಶವಾಗಿರಬಹುದೆಂದು ತರ್ಕಿಸಲು ಅವಕಾಶವಿದೆ.

ಬಾದಾಮಿಯ ಮೂಲೆಗಿತ್ತಿ ಶಿವಾಲಯದ ಉತ್ತರಕ್ಕಿರುವ ಬೆಟ್ಟದ ಶ್ರೇಣಿಯಲ್ಲಿ ಡಾ॥ ಅ. ಸುಂದರ ಅವರು ಶೋಧಿಸಿದ ವರ್ಣಚಿತ್ರದ ಕಲ್ಲಾಸರೆಯಿಂದ ಸ್ವಲ್ಪ ದೂರದಲ್ಲಿ ಇನ್ನೊಂದು ಕಲ್ಲಾಸರೆಯಲ್ಲಿ ಮತ್ತೊಂದು ವರ್ಣಚಿತ್ರವು ಇತ್ತೀಚೆಗೆ ನನ್ನ



ಕಣ್ಣಿಗೆ ಬಿದ್ದಿತು. ಡಾ॥ ಸುಂದರ ಅವರು ಶೋಧಿಸಿದ ವರ್ಣಚಿತ್ರದಲ್ಲಿರುವ ಸ್ತ್ರೀಯರಂತೆ ಈ ವರ್ಣಚಿತ್ರದ ಮಹಿಳೆ ಇದ್ದಾಳೆ. ಈ ಎರಡೂ ಚಿತ್ರಗಳ ಸರಳತೆ, ಶೈಲಿ ಮತ್ತು ನಿರೂಪಣೆಗಳಲ್ಲಿಯ ಸಾಮ್ಯಗಳನ್ನು ಆಧರಿಸಿ ಇವೆರಡೂ ಒಬ್ಬ ಕಲಾವಿದನ ಕಲಾಕೃತಿಗಳಾಗಿರಬಹುದೆಂದು ತಿಳಿಯಬಹುದು.

ಪ್ರಸ್ತುತ ವರ್ಣಚಿತ್ರವು ಮೂಲತಃ ದೊಡ್ಡದಾಗಿರಬಹುದು. ಕೆಳಭಾಗ ನೀರಿನ ಹೊಡೆತಕ್ಕೆ ಸಿಕ್ಕಿ ಅಳಿದುಹೋಗಿದೆ. ಉಳಿದ ಚಿತ್ರದಲ್ಲಿ ನಮಗೆ ಕಾಣಸಿಗುವುದು ಕೇವಲ ಒಬ್ಬ ಸುಂದರಿಯ ಚಿತ್ರ. ಮಂಗಲೇಶನ ಗುಹಾಲಯದ ಚಿತ್ರಗಳಿಗಿರುವಂತೆ ದಪ್ಪನಾದ ಹೀರು ಪದರು ಇದಕ್ಕಿಲ್ಲ. ಕಲ್ಲಿನ ಮೈವಳಿಕೆಯ ಒರಟುತನ ಕಾಣಿಸುತ್ತದೆ. ಇದರಿಂದ ತಿಳಿ ಹಳದಿ ಬಣ್ಣದ ಲೇಪನ ಮಾಡಿ ಮೇಲೆ ಕೆಂಪು ರೇಖೆಗಳನ್ನು ಎಳೆದು ಚಿತ್ರವನ್ನು ಬಿಡಿಸಲಾಗಿದೆ. ಸುಂದರಿಯು ಕೈಯಲ್ಲಿ ಹಿಡಿದ ಕಮಲವು ಅವಳ ಮುಖಕ್ಕಿಂತ ದೊಡ್ಡದಾಗಿದ್ದು, ಅವಳು **ಕಮಲ ಮುಖಿ** ಎಂದು ಹೊಗಳು ವಂತಿದೆ. ಕಿವಿಯಲ್ಲಿಯ ಪತ್ರಕುಂಡಲವು ಕಿವಿಗಿಂತ ಬಲು ದೊಡ್ಡದಾಗಿದ್ದು ನೇತಾಡುತ್ತಿರುವಂತೆ ಅದನ್ನು ಚಿತ್ರಿಸಲಾಗಿದೆ. ಕೈಯಲ್ಲಿ ಐದಾರು ಬಳೆಗಳನ್ನು ಧರಿಸಿದ್ದಾಳೆ. ಮಣಿಯಿಂದ ಕೂಡಿದ ಕೊರಳ ಹಾರದಿಂದ ಅಲಂಕೃತಳಾಗಿದ್ದಾಳೆ. ನಡುಪಟ್ಟಿಯು ಬಾದಾಮಿಯ ಗುಹಾದೇವಾಲಯಗಳಲ್ಲಿಯ ಸ್ತ್ರೀಶಿಲ್ಪಗಳ 'ಮೇಖಲೆ'ಯನ್ನು ಹೋಲುತ್ತದೆ. ಈ ಚೆಲುವೆಯು ಗೋಣನ್ನು ನಸು ವೈಯ್ಯಾರದಿಂದ ಬಾಗಿಸಿದ್ದಾಳೆ. ಅರಳಿದ ಕಣ್ಣುಗಳಿಂದ ಮುಗುಳು ನಗೆಯನ್ನು ಚೆಲ್ಲಿದ್ದಾಳೆ.

ಆಕೆಯ ಕೈಬೆರಳುಗಳು ಇರಬೇಕಾದ ಪ್ರಮಾಣಕ್ಕಿಂತ ದೊಡ್ಡದಾಗಿವೆ. ವೈಷ್ಣವ ದೇವಾಲಯದ ವರ್ಣ-ಶ್ರೀಮಂತಿಕೆ, ಇದರಲ್ಲಿಲ್ಲ. ಸಂಯೋಜನೆಯಲ್ಲಿ ಸಂಕೀರ್ಣತೆ ಇಲ್ಲದೆ ಸರಳವಾಗಿದೆ. ಹಿನ್ನೆಲೆಯಲ್ಲಿ ತಿಳಿ ಹಳದಿ ಬಣ್ಣವಿದೆ. ಅದು ಹೀರು ಪದರಾಗಿಲ್ಲ. ಕೆಂಪು ರೇಖೆಗಳಿಗೆ ಅದು ತಕ್ಕ ವರ್ಣ ಸಂಯೋಜನೆ ಒದಗಿಸಿದೆ ಎನ್ನಬಹುದು. ಅರಳಿದ ಕಣ್ಣು, ಮಂದಹಾಸದ ತುಟಿಗಳನ್ನು ರೂಪಿಸುವಲ್ಲಿ ಕಲಾವಿದ ಯಶಸ್ವಿಯಾಗಿದ್ದಾನೆ. ತಂತ್ರ ಹಾಗೂ ನಿರೂಪಣೆಯ ಸರಳತೆಯನ್ನು ಗಮನಿಸಿದಾಗ ಇದು ವಿಷ್ಣುಗೃಹದ (ಕ್ರಿ. ಶ. ೫೭೮) ವರ್ಣಚಿತ್ರಗಳಿಗಿಂತ ಪ್ರಾಚೀನವಾದವುಗಳೆಂಬುದು ಸ್ಪಷ್ಟ. ಡಾ॥ ಅ. ಸುಂದರ ಅವರು ಶೋಧಿಸಿದ ಸಖಿಯರೊಂದಿಗಿರುವ ಗಣ್ಯಸ್ತ್ರೀಯ ವರ್ಣಚಿತ್ರ ಮತ್ತು ಪ್ರಸ್ತುತ ಚೆಲುವೆಯ ವರ್ಣಚಿತ್ರ - ಇವೆರಡು ಕರ್ನಾಟಕದ ಅತೀ ಪ್ರಾಚೀನ ವರ್ಣಚಿತ್ರಗಳು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಅಣ್ಣಿಗೇರಿ, ಎ.ಎಂ. ***ಪಟ್ಟದಕಲ್ಲ ಗುಡಿಗಳು***, ಧಾರವಾಡ, ೧೯೬೦, ಪುಟ ೮೧, ೮೨.

*೨. ಈ ಚಿತ್ರಗಳನ್ನು ಸ್ಟೆಲಾ ಕ್ರಾಮರಿಶರೇ ಮೊದಲು ಗುರುತಿಸಿದರೆಂದು ಶಿವರಾಮ ಕಾರಂತರು ***'ಕರ್ನಾಟಕದಲ್ಲಿ ಚಿತ್ರಕಲೆ'*** ಎಂಬ ಕೃತಿಯಲ್ಲಿ (ಪು.33) ತಪ್ಪಾಗಿ ದಾಖಲಿಸಿದ್ದಾರೆ. ಶಿವರಾಮಮೂರ್ತಿಯವರ ಹೇಳಿಕೆಯನ್ನು ಕಾರಂತರು ಪುನರುಚ್ಚರಿಸಿದಂತಿದೆ. ೧೮೭೪ರಷ್ಟು ಹಿಂದೆಯೇ ಜೇಮ್ಸ್ ಬರ್ಜೆಸರು ಬಾದಾಮಿಯ ಎರಡೂ ವೈಷ್ಣವ ಗುಹಾಲಯಗಳ ವರ್ಣಚಿತ್ರಗಳನ್ನು ಪ್ರಸ್ತಾಪಿಸಿದ್ದಾರೆ. ನೋಡಿ - ***Antiquities of the Belgaum and Kaladagi*** (Vol. I), Page 20.

*೩. C. Sivaramamurti, *'Western Chalukya paintings at Badami'*, 1959, ***Lalitkala,*** No.5, P. 49.

*೪. ಸುಂದರ, ಅ. ***'ವಿಶಿಷ್ಟ ವರ್ಣಚಿತ್ರಕಲೆಯ ಆಗರ: ಬಾದಾಮಿ', ಚಾಲುಕ್ಯ ಶ್ರೀ,*** ಬಾದಾಮಿ ೧೯೮೨, ಪು. ೧೧೮

ವಿ. ಟಿ. ಎಸ್. ರಾವ್ *

# ಕರ್ನಾಟಕ ಭಿತ್ತಿ ಚಿತ್ರಗಳಲ್ಲಿ ವಿಶಿಷ್ಟವಾದ ಲೇಪಾಕ್ಷಿಯ ಚಿತ್ರಗಳು

ಭಿತ್ತಿ ಚಿತ್ರಣದ ಇತಿಹಾಸ ಶಿಲ್ಪಕಲೆಯಷ್ಟೇ ಪುರಾತನವಾದುದೆಂಬುಕ್ಕೆ ಸಾಕಷ್ಟು ಆಧಾರಗಳಿವೆ. ಕನ್ನಡ ನಾಡಿನಲ್ಲಿ ಭಿತ್ತಿ ಚಿತ್ರಗಳ ಪರಂಪರೆ ಆರನೇ ಶತಮಾನದ ಕೊನೆಗೆ ಕಾಣಸಿಗುತ್ತದೆ. ಅದಕ್ಕಿಂತಲೂ ಮುಂಚಿನ ಚಿತ್ರಶಾಲೆಗಳ ವರ್ಣನೆ ಕಾವ್ಯಗಳಲ್ಲಿ ಮಾತ್ರ ಸಿಗುತ್ತವೆ. ಚಾಲುಕ್ಯ ಚಕ್ರವರ್ತಿ ಮಂಗಳೇಶನಿಂದ ಕ್ರಿ. ಶ. ೫೭೦ರಿಂದ ೫೭೯ರ ನಡುವೆ ನಿರ್ಮಾಣಗೊಂಡ ಬಾದಾಮಿಯ ಮೂರನೆಯ ಗುಹೆಯ ಭಾವಣೆಯಲ್ಲಿ ಚಿತ್ರಗಳು ಇತ್ತೆಂಬುದಕ್ಕೆ ನಿದರ್ಶನಗಳಿವೆ. ಚಾಲುಕ್ಯರ ಕಾಲದಿಂದ ಮೊದಲುಗೊಂಡ ಈ ಭಿತ್ತಿಚಿತ್ರ ಪರಂಪರೆ ನಮಗೆ ಹೆಚ್ಚು ಸಮೀಪದ ೧೭,೧೮ನೆಯ ಶತಮಾನಗಳವರೆಗೂ ನಿರಂತರವಾಗಿ ಮುಂದುವರೆದಿದೆ. ಈ ಸಾಂಪ್ರದಾಯಿಕ ಕಲೆಯು ಕರ್ನಾಟಕದಲ್ಲಿ ಹೇಗೆ ಭದ್ರವಾಗಿ ನೆಲೆಯೂರಿತ್ತು ಮತ್ತು ರಾಜಮನೆತನಗಳ ಪ್ರೋತ್ಸಾಹಕ್ಕೆ ಹೇಗೆ ಪಾತ್ರವಾಗಿತ್ತು ಎಂಬುದನ್ನು ಈಗ ಉಳಿದಿರುವ ಮಾಸಲು ಚಿತ್ರಗಳಿಂದ ಗ್ರಹಿಸಬಹುದು. ಹಾಗೆಯೇ ಚಿತ್ರಗಾರರ ರಚನಾ ಚಾತುರ್ಯ, ಸೌಂದರ್ಯಪ್ರಜ್ಞೆ, ಅವರ ವಸ್ತುನಿಷ್ಠೆಯ ಅನುಭವವೂ ಈ ಚಿತ್ರಗಳ ವೀಕ್ಷಣೆಯಿಂದ ದೊರೆಯುತ್ತದೆ.

ಚಿತ್ರಕಲೆಯ ಹಲವು ಗ್ರಂಥಗಳಲ್ಲಿ ಉಲ್ಲೇಖವಾಗಿರುವಂತೆ ಚಿತ್ರ ರಚನೆಗೆ ಭಿತ್ತಿಯನ್ನು ತಯಾರಿಸಲು ಜೇಡಿಮಣ್ಣು, ಜೇನು ಮೇಣ, ಗುಗ್ಗಳ, ಕಪ್ಪೆ ಚಿಪ್ಪು, ಎಣ್ಣೆ, ಬಿಲ್ವಪತ್ರೆ ಕಾಯಿಯ ತಿರುಳು, ಶಂಖಚೂರ್ಣ ಮೊದಲಾದವುಗಳನ್ನು ಬೆಲ್ಲದ ನೀರಿನಲ್ಲಿ ನೆನೆಸಿಟ್ಟು ಸುಣ್ಣದೊಂದಿಗೆ ನುಣುಪಾಗಿ ಅರೆದು ತಯಾರಿಸಿದ ಮಿಶ್ರಣವನ್ನು ಭಾವಣಿ ಅಥವ ಗೋಡೆಗೆ ಏರುಪೇರುಗಳಿಲ್ಲದಂತೆ ನಯವಾಗಿ ಲೇಪಿಸಿ, ಸ್ಪಟಿಕದಂತೆ ಹೊಳೆಯುವ ಈ ಭಾವಣಿ ಅಥವಾ ಗೋಡೆಯ ಮೇಲ್ಮೈಯನ್ನು ಮಣಿಭೂಮಿ ಅಥವಾ ಭಿತ್ತಿ ಎಂದು ವರ್ಣಿಸಿರುವರು. ಇದರ ಮೇಲೆ ಚಿತ್ರಕಾರನ ಕಲ್ಪನೆಯಂತೆ ರೇಖೆಗಳಿಂದ ಖಚಿತ ರೂಪಗಳನ್ನು ಗುರ್ತಿಸಿಕೊಂಡು ಎರಡೇ ಆಯಾಮಗಳಲ್ಲಿ ಹೆಚ್ಚೆಂದರೆ ಮೂರು ಮೂಲವರ್ಣಗಳ ಸಂಯೋಜನೆಯಿಂದ ಚಿತ್ರಗಳನ್ನು ರಚಿಸಲಾಗುತ್ತದೆ.

ಈ ಬಣ್ಣಗಳಾದರೆ ನಿಸರ್ಗದಲ್ಲಿ ದೊರೆಯುವ ನೀಲಗಲ್ಲು, ಕೆಂಗಾವಿ, ಗೋಪಿಗಳಂತಹ ಹಾಗೂ ಸಸ್ಯಜನ್ಯ ವರ್ಣಗಳು ಹೀಗೆ ರಚಿಸಿದ ಚಿತ್ರಗಳು ದೀರ್ಘಕಾಲ ಉಳಿಯುತ್ತವೆ.

ಮುಂದೆ ೮-೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ರಚಿತವಾದ ಎಲ್ಲೋರದ ೩೨ ಗುಹಾ ದೇವಾಲಯಗಳಲ್ಲಿರುವ ವಿನ್ಯಾಸದಲ್ಲಿ ನೈಜತೆಗೆ ಸಮೀಪವಿರುವ ಚಿತ್ರಗಳ ಪ್ರಭಾವ ತುಂಬಾ ವಿಶೇಷವಾದುದು. ಜಟಾಮಕುಟಧಾರಿ ನಟರಾಜ, ಗರುಡಾರೂಢ, ಲಕ್ಷ್ಮೀನಾರಾಯಣ, ವಿದ್ಯಾಧರ ದಂಪತಿಗಳು ಹೀಗೆ ಎಲ್ಲೋರದಲ್ಲಿ ಉಳಿದಿರುವ ಚಿತ್ರಗಳು ಗಮನಾರ್ಹವಾದುವು. ಈ ಚಿತ್ರಗಳು ರೇಖಾ ನೈಪುಣ್ಯದಲ್ಲಿ ಪ್ರತಿಮಾಶಾಸ್ತ್ರ (ಐಕ್ನೋಗ್ರಫಿ)ದ ತಾಲ ಪ್ರಮಾಣಗಳ ಸೂಚಿಗಳಾಗಿರುವುದಲ್ಲದೆ ನಾನಾ ವಿಧವಾದ ಹೂಬಳ್ಳಿಗಳು, ಮೃಗ, ಪಕ್ಷಿ ಮುಂತಾದ ಸುಂದರ ಸಂಯೋಜನೆಗಳಿಂದ ಕೂಡಿವೆ.

ರಾಷ್ಟ್ರಕೂಟರ ಶೈಲಿಯನ್ನು ರೂಢಿಸಿಕೊಂಡು ತಮ್ಮದೇ ವೈಶಿಷ್ಟ್ಯವನ್ನು ಮೆರೆಸಿ ಶಿಲ್ಪಕಲಾ ವೈಭವದ ಅದ್ವಿತೀಯ ಸೌಂದರ್ಯದ ದೇವಾಲಯಗಳನ್ನು ನಿರ್ಮಿಸಿದ ಹೊಯ್ಸಳರ ಕಾಲದಲ್ಲಿ ಶಿಲ್ಪಕಲೆಗೆ ಮೂಲ ಸಾಮಗ್ರಿಯಾದ ಚಿತ್ರಕಲೆ ಅನೂರ್ಜಿತವಾಗಿತ್ತೆಂದು ತಿಳಿಯಲಾಗದು. ಆದರೂ ಭಿತ್ತಿಚಿತ್ರಗಳು ನೋಡಲು ಸಿಗದಿರುವುದು ದುರ್ದೈವ. ವಿಜಯನಗರದ ಮತ್ತು ಅನಂತರದ ಕಾಲ, ಭಿತ್ತಿಚಿತ್ರಗಳ ರಚನೆಯ ಸ್ವರ್ಣಯುಗ. ಹಂಪಿಯ ವಿರೂಪಾಕ್ಷ ದೇವಾಲಯ, ಕಂಚಿಯ ವರದರಾಜ, ವೇಲೂರಿನ ಜಲಕಂಠೇಶ್ವರ, ಶ್ರೀರಂಗ, ಕಾಳಹಸ್ತಿ, ತಾಡಪತ್ರಿ, ದೇವಾಲಯಗಳು ಹಿರಿಯೂರಿನ ತೇರುಮಲ್ಲೇಶ್ವರ, ಸಿರಾದ ರೇವಣಸಿದ್ದೇಶ್ವರ, ಯಡಿಯೂರಿನ ಸಿದ್ಧಲಿಂಗೇಶ್ವರ ಮತ್ತು ವಿಶೇಷವಾಗಿ ಲೇಪಾಕ್ಷಿಯ ಪಾಪನಾಥೇಶ್ವರ, ದುರ್ಗಾ ದೇವಾಲಯಗಳಲ್ಲಿ ವಿಜಯನಗರ ಕಾಲದ ಭಿತ್ತಿಚಿತ್ರಗಳನ್ನು ವೀಕ್ಷಿಸಬಹುದು. ಹಂಪೆಯ ವಿರೂಪಾಕ್ಷ ದೇವಾಲಯದ

* 'ಸುನಂದ', ನಂ. ೨೪, ೬ನೇ ಮುಖ್ಯರಸ್ತೆ, ನಾರಾಯಣಪ್ಪ ಬ್ಲಾಕ್, ಆರ್. ಟಿ. ನಗರ, ಬೆಂಗಳೂರು - ೫೬೦ ೦೩೨

ಭಿತ್ತಿಗಳಲ್ಲಿ ರಾಮಾಯಣ ಮಹಾಭಾರತದ ಕಥಾನಕಗಳೂ ವಿದ್ಯಾರಣ್ಯ ಸ್ವಾಮಿಗಳ ಪಲ್ಲಕ್ಕಿ ಮೆರವಣಿಗೆ, ಮುಂತಾದ ಸುಂದರ ಚಿತ್ರಗಳಿವೆ.

ಬಿಜಾಪುರದ ಆದಿಲ್‌ಶಾಹಿ ಅರಸರೂ ಭಿತ್ತಿಚಿತ್ರಕಲೆಯನ್ನು ಪ್ರೋತ್ಸಾಹಿಸಿದರು. ಈಗ ಅಲ್ಲಿ ಉಳಿದಿರುವ ಭಿತ್ತಿಚಿತ್ರಗಳ ಗುರುತುಗಳೆಂದರೆ ಬಿಜಾಪುರ ಪಟ್ಟಣದ ಅಸರಮಹಲ್ ಎಂಬ ಕಟ್ಟಡದಲ್ಲಿ ಮತ್ತು ಅಲ್ಲಿಗೆ ಹನ್ನೊಂದು ಮೈಲಿ ದೂರದ ಕಮ್ಮತಗಿಯ ಸ್ನಾನಗೃಹದ ಗೋಡೆಗಳ ಮೇಲಿರುವ ಚಿತ್ರಗಳು. ಅಸರ್‌ಮಹಲ್ ಕಟ್ಟಡದ ಮಹಡಿಯ ಮೂರು ಕೋಣೆಗಳಲ್ಲಿ ಅವುಗಳ ಗೋಡೆಗಳು ನೀಲವರ್ಣಪ್ರಧಾನ ಚಿತ್ರಗಳಾದ ಹೂಜಿ ಹೂಬಳ್ಳಿಗಳೂ ಮತ್ತು ವ್ಯಕ್ತಿ ಚಿತ್ರಗಳಿಂದ ಅಲಂಕೃತವಾಗಿವೆ. ಅವುಗಳಲ್ಲೊಂದು ಚಿತ್ರವು ಮಹಮದ್ ಶಹಾ ಮತ್ತು ಅವನ ಪ್ರೇಯಸಿ ರಂಭಾಳದು. ಕಮ್ಮತಗಿಯ ಚಿತ್ರಗಳು ಬಹುಮಟ್ಟಿಗೆ ಅಳಿಸಿ ಹೋಗಿವೆ. ಕಂದು, ಬೂದು, ಕಪ್ಪು ಬಣ್ಣಗಳೇ ಪ್ರಧಾನವಾಗಿರುವ ಈ ಚಿತ್ರಗಳಲ್ಲಿ ರೇಖೆಗಳ ಪ್ರಾಧಾನ್ಯತೆ ಕಾಣದೆ ಯೂರೋಪಿನ ಛಾಯಾಕರಣದ ರೀತಿಯಲ್ಲಿದೆ. ಇಲ್ಲಿನ ಭಿತ್ತಿ ಚಿತ್ರದ ಪ್ರತಿಯೊಂದು ದಿನಾಂಕ ೨೭-೧೧-೧೯೩೮ರ ಇಲ್ಲಸ್ಟ್ರೇಟೆಡ್ ವೀಕ್ಲಿ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅರಸುಕುವರಿ ಹಾಗೂ ಅವಳ ಸಖಿ ಹಿನ್ನೆಲೆಯಲ್ಲಿ ಹೂಬಿಟ್ಟ ಗಿಡಗಳು, ಹರಿಣಗಳು ಹೀಗಿರುವ ಈ ಚಿತ್ರ ಅದಿಲ್‌ಶಾಹಿ ಸುಲ್ತಾನರ ದರ್ಬಾರಿಗೆ ಬಂದಿದ್ದ ಯಾವನೋ ಪಾಶ್ಚಿಮಾತ್ಯ ಚಿತ್ರಗಾರ ಬರೆದಿರಬೇಕು. ಏಕೆಂದರೆ ಇಲ್ಲಿ ಪೋರ್ಚುಗೀಸ್ ಪ್ರಜೆಯೊಬ್ಬನ ಜೀರ್ಣವಾದ ಚಿತ್ರವೂ ಇಲ್ಲಿದೆ. ಅಥಣಿಯ ವೀರಶೈವ ಮಠದ ಗೋಡೆಗಳ ಮೇಲೆ ಕೈಗೆ ನಿಲುಕದ ಎತ್ತರಕ್ಕೆ ೪ x ೬ ಅಡಿ ಗಾತ್ರದ ಕಾಲ್ಪನಿಕ ಪ್ರಾಣಿ ಹಾಗೂ ವ್ಯಕ್ತಿಗಳ ಚಿತ್ರಗಳಿವೆ. ನಿಪ್ಪಾಣಿಯಲ್ಲಿ ಅಂಬಾಜಿರಾವ್ ದೇಸಾಯರ ಪುರಾತನ ವಾಡೆಯಲ್ಲಿ ಅದಿಲ್‌ಶಾಹಿ ಸುಲ್ತಾನರ ಕಾಲದಲ್ಲಿದ್ದ ಸರದಾರನೊಬ್ಬನ ವಾಸ್ತವ್ಯವಾಗಿದ್ದ ಈ ವಾಡೆಯ ಶಯನಗೃಹದ ಗೋಡೆಗಳ ತುಂಬಾ ಭಿತ್ತಿಚಿತ್ರಗಳಿವೆ. ಕೃಷ್ಣ ಕಥಾನಕಕ್ಕೆ ಸಂಬಂಧಿಸಿದ ಚಿತ್ರಗಳಿವು. ಕೃಷ್ಣನ ಉಡುಪು, ರಜಪೂತರ ಮಾದರಿಯ ದಾದರೆ ಸತ್ಯಭಾಮೆಯ ಉಡುಪು ಮಹಾರಾಷ್ಟ್ರದ ಹೆಂಗಸರು ಈಗಲೂ ತೊಡುವಂತಹುದು. ಗೋಪಕನ್ಯೆಯರ ಓಕುಳಿ ಪಿಚಕಾರಿಗಳ ನಡುವಿನ ಕೃಷ್ಣ, ಗೋಪಾಲರು, ದಾಸದಾಸಿಯರು, ಅಂತಃಪುರದ ಮಹಿಳೆಯರು ಹೀಗೆ ಚಿತ್ರಗಳಲ್ಲಿ ವೈವಿಧ್ಯತೆ ಇದೆ. ಇನ್ನುಳಿದ ಕಡೆಗಳಲ್ಲಿ ಪಟ್ಟಿಕಾ ಚಿತ್ರಗಳಿವೆ. ನರಗುಂದದ ದೊರೆ ಬಾಬಾ ಸಾಹೇಬರ ಹಳೆಯ ಅರಮನೆಯ ಭಿತ್ತಿಗಳಲ್ಲಿ ಪೌರಾಣಿಕ ಮತ್ತು ಚಾರಿತ್ರಿಕ ಘಟನೆಗಳನ್ನು ನಿರೂಪಿಸುವ ಚಿತ್ರಗಳಿವೆ. ಚಿತ್ರಗಳ ಉಡಿಗೆ - ತೊಡಿಗೆಗಳಿಂದ ಅವರು, ಹಿಂದೂ, ಮುಸ್ಲಿಂ ಮತ್ತು ಯೂರೋಪಿಯನ್ನರೆಂಬುದನ್ನು ಗುರುತಿಸಬಹುದು. ಗದುಗಿನ ಗುಂಡಪ್ಪ ಹಸಬಿಯವರ ಮನೆಯಲ್ಲಿರುವ ರಾಮರಾವಣರ ಯುದ್ಧದ ಚಿತ್ರ, ಕೃಷ್ಣ ಮತ್ತು ಆತನ ಮಡದಿಯರ ಚಿತ್ರ ಇವು ಗ್ರಾಮೀಣ ಶೈಲಿಯಲ್ಲಿ ಸ್ಥಳೀಯ ಚಿತ್ರಗಾರರು ಬರೆದ ಚಿತ್ರಗಳು.

ಶ್ರವಣಬೆಳುಗೊಳದ ಭಿತ್ತಿಚಿತ್ರಗಳಲ್ಲಿ ಜಿನಪುರಾಣಗಳಿಗೆ ಸಂಬಂಧಿಸಿದ ಘಟನೆಗಳ ನಿರೂಪಣೆಯಿದೆ. ಇಲ್ಲಿನ ಚಿತ್ರಗಳ ರಾಜರಾಣಿಯರು, ಗಾಯಕರು, ನರ್ತಕಿಯರು, ಶ್ರಮಣರು ಮತ್ತು ಸಾಮಾನ್ಯ ಜನರ ರುಮಾಲು, ನಿಲುವಂಗಿ, ನಡುಕಟ್ಟುಗಳು ಇವೆಲ್ಲಾ ಸಮಕಾಲೀನ ಜೀವನ ಚಿತ್ರವು ಹೇಗಿತ್ತೆಂಬುದನ್ನು ತೋರಿಸುತ್ತದೆ. ಹಿರಿಯೂರಿನ ತೇರುಮಲ್ಲೇಶ ಮತ್ತು ಸಿರಾದ ರೇವಣ ಸಿದ್ಧೇಶ್ವರ ಮತ್ತು ಯಡಿಯೂರು ಸಿದ್ಧಲಿಂಗೇಶ್ವರ ಹಾಗೂ ಕೆರೆಗೊಡಿಯ ಶಂಕರಲಿಂಗ ದೇವಾಲಯದ ಚಿತ್ರಗಳು ಶಿವಲೀಲಾ ವಿಲಾಸಕ್ಕೆ ಸಂಬಂಧಿಸಿದವು. ತುಮಕೂರು ಸಿರಾ ರಸ್ತೆಯಲ್ಲಿರುವ ಸೀಬಿ ಲಕ್ಷ್ಮೀ ನರಸಿಂಹ ದೇವಾಲಯದ ಚಿತ್ರಗಳು ಹೈದರ್ - ಟಿಪ್ಪೂ ಸುಲ್ತಾನರ ಕಾಲದವು. ನವಾಬರ ಸಮೀಪವರ್ತಿ ನಲ್ಲಪ್ಪನೆಂಬುವವನಿಂದ ನಿರ್ಮಿತವಾದವು. ಈ ಚಿತ್ರಗಳು ಶುದ್ಧ ಗ್ರಾಮೀಣ ಶೈಲಿಗೆ ನಿದರ್ಶನಗಳಾಗಿವೆ. ಶ್ರೀರಂಗಪಟ್ಟಣದ ದರಿಯಾದೌಲತ್ ವಿಶಾಲವಾದ ಹೊರ ಚಾವಡಿಗಳನ್ನೂ ಒಳಗೆ ವಿಶಾಲ ಕೊಠಡಿಗಳನ್ನು ಹೊಂದಿರುವ ಅರಮನೆ. ಮೂಡಣ ಮತ್ತು ಪಡುವಣ ಚಾವಡಿಗಳ ಗೋಡೆಗಳಲ್ಲಿರುವ ಚಿತ್ರಗಳಲ್ಲಿ ಟಿಪ್ಪು ಬ್ರಿಟಿಷರೊಡನೆ ನಡೆಸಿದ ಯುದ್ಧಗಳು ಮತ್ತು ಅಂದಿನ ಬೇರೆ ಬೇರೆ ಅರಸರ, ಸಾಮಂತರ, ರಾಯಭಾರಿಗಳ ಮತ್ತು ಐತಿಹಾಸಿಕ ವ್ಯಕ್ತಿಗಳ ಚಿತ್ರಗಳಿವೆ. ವರ್ಣಲೇಪದಲ್ಲಿ ವಿದೇಶೀ ಪ್ರಭಾವ ಇದೆ. ಬೆಳಕು ನೆರಳುಗಳ ವಾಸ್ತವಿಕತೆಯನ್ನು ತೋರಿಸುವ ಸಂದಿಗ್ಧತೆಯಲ್ಲಿ ದೇಶೀ ಚಿತ್ರಕಾರನ ಸೋಲನ್ನಿಲ್ಲಿ ಕಾಣಬಹುದು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಜಗನ್ಮೋಹನ ಚಿತ್ರ ಶಾಲೆಯದು ಸಂತಾನಾಂಬುಧಿ ಚಿತ್ರ ಹಾಗೂ ಅಂದಿನ ಅರಮನೆಯ ಅಧಿಕಾರಿಗಳ ಚಿತ್ರಗಳು ಮತ್ತು ಮುಡುಕುತೊರೆಯ ಮಲ್ಲಿಕಾರ್ಜುನ ದೇವಾಲಯದ ಶಿವಪುರಾಣ ದೃಶ್ಯಗಳು ಮೈಸೂರಿನ ಅರಮನೆಯ ವರಾಹಸ್ವಾಮಿ ದೇವಾಲಯದ ಚಿತ್ರಗಳು, ಕೊಳ್ಳೆಗಾಲ ಮತ್ತು ಚಾಮರಾಜನಗರದ ಚಾಮರಾಜೇಶ್ವರ ದೇವಾಲಯದ ಚಿತ್ರಗಳು ಅವರ ಕಾಲದವು. ಹರದನಹಳ್ಳಿ, ಬೆಟ್ಟದಪುರ, ಸಾಲಿಗ್ರಾಮ, ಮುಳುಬಾಗಿಲು, ಚನ್ನಪಟ್ಟಣ, ತುಮಕೂರುಗಳಲ್ಲಿನ ಚಿತ್ರಗಳು ಇತ್ತೀಚಿನವು.

**ಲೇಪಾಕ್ಷಿಯ ಭಿತ್ತಿ ಚಿತ್ರಗಳು :** ನಾನು ಈಚೆಗೆ ಸಂಶೋಧಿಸಿದ ಲೇಪಾಕ್ಷಿಯ ಎರಡು ವಿಶಿಷ್ಟ ಚಿತ್ರಗಳು-(೧) ಹೊಯ್ಸಳ ಕಥಾನಕದ ಚಿತ್ರ, (೨) ಇದುವರೆಗೂ ದಂತಕಥೆ ಎಂದು ಪರಿಗಣಿತವಾಗಿ ಆಧಾರಗಳಿಲ್ಲದ ವಿರುಪಣ್ಣನು ಕುರುಡ ನಾದುದೇಕೆಂಬುದನ್ನು ಸಾಕ್ಷ್ಯಾಧಾರದಿಂದ ನಿರೂಪಿಸುವ ಚಿತ್ರ (ವಿಜಯನಗರದ ಅಂದಿನ ಚಕ್ರವರ್ತಿ ವಿರುಪಣ್ಣ, ರಾಜ ಬೊಕ್ಕಸದ ಹಣವನ್ನು ದೇವಾಲಯದ ನಿರ್ಮಾಣಕ್ಕೆ ಖರ್ಚು ಮಾಡಿದನೆಂಬ

ಚಾಡಿಮಾತನ್ನು ನಂಬಿ ಆತನ ಕಣ್ಣುಗಳೆರಡನ್ನೂ ಕೀಳಿಸಲು ಇತ್ತ ಆಜ್ಞೆಯಂತೆ ತನ್ನ ಕಣ್ಣುಗಳನ್ನು ವಿರುಪಣ್ಣ ತಾನೇ ಕಿತ್ತು ಕೊಂಡು ಕುರುಡನಾಗಿರುವ ಚಿತ್ರ).

ಲೇಪಾಕ್ಷಿ ಕರ್ನಾಟಕದ ಅಂಚಿನಲ್ಲಿ ಹಿಂದೂಪುರ - ಬಾಗೇಪಲ್ಲಿ ರಸ್ತೆಯಲ್ಲಿ, ಹಿಂದೂಪುರದಿಂದ ೯ ಮೈಲಿಗಳ ಅಂತರದಲ್ಲಿರುವ ರಸ್ತೆಯಂಚಿನ ಗ್ರಾಮ ಆಂಧ್ರ ಪ್ರದೇಶದಲ್ಲಿದೆ. ಇಲ್ಲಿನ ಗುಡ್ಡವು ವಿಶಾಲವಾದ ಎತ್ತರ ತಗ್ಗುಗಳಿಂದ ಕೂಡಿದ ಒಂದೇ ಬಂಡೆಯನ್ನು ಹೊಂದಿ ಕೂರ್ಮವು ಮಲಗಿ ವಿಶ್ರಾಂತಿ ಪಡೆಯುವ ಭಂಗಿಯಲ್ಲಿದ್ದುದರಿಂದ ಕೂರ್ಮಶೈಲವೆಂಬ ಹೆಸರನ್ನು ಪಡೆದಿರಬೇಕು. ಈ ಕೂರ್ಮಶೈಲವು ಪುರಾಣ ಪ್ರಸಿದ್ಧವಾದುದು. ಆಗಸ್ತ್ಯ ಋಷಿಯು ಇಲ್ಲಿ ಪಾಪನಾಥೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದನೆಂದು ಸ್ಕಾಂದ ಪುರಾಣದಲ್ಲಿ ಹೇಳಿದೆ. ಅನಂತರ ಇಲ್ಲಿ ರಘುನಾಥ, ವಿಷ್ಣು, ಪಾರ್ವತಿ, ಕಾಳಿ, ರಾಮಲಿಂಗ, ಹನುಮಲಿಂಗ ಮುಂತಾದ ದೇವತೆಗಳ ಚಿಕ್ಕ ಚಿಕ್ಕ ಗುಡಿಗಳು ನಿರ್ಮಾಣವಾದುವು. ಕೂರ್ಮಾಕಾರದ ಬಂಡೆಯನ್ನು ಕಂಡು ಪ್ರಭಾವಿತರಾದ ಪೆನುಗೊಂಡೆಯಲ್ಲಿದ್ದ ನಂದಿಲಕ್ಕಿ ಶೆಟ್ಟಿಯ ಪುತ್ರರೂ ವಿಜಯನಗರದರಸರ ಈ ವಿಭಾಗದ ಕೋಶಾಧಿಕಾರಿಗಳೂ ಆಗಿದ್ದ ವಿರುಪಣ್ಣ, ವೀರಣ್ಣ ಎಂಬ ಇಬ್ಬರು ಸಹೋದರರು ಈ ಗುಡ್ಡದ ಮೇಲೆ ಬೃಹತ್ ದೇವಾಲಯ ನಿರ್ಮಾಣಕ್ಕೆ ಸಂಕಲ್ಪಿಸಿರಬಹುದು. ಈ ದೇವಾಲಯದ ಹೊರವಲಯದ ಪ್ರಥಮ ಪ್ರಾಕಾರದ ಒಳ ಮಂಟಪಗಳು ಈಗ ಈ ಹಳ್ಳಿಯ ಅನೇಕ ಜನರ ನಿವಾಸಗಳಾಗಿವೆ. ಎರಡನೆಯ ಪ್ರಾಕಾರವು ಬೃಹತ್ ಬಂಡೆಗಳಿಂದ ಕೂಡಿ, ಎತ್ತರದ ಕಲ್ಲುಗೋಡೆಯಾಗಿ ದೇವಾಲಯವನ್ನು ರಕ್ಷಿಸುತ್ತಿದೆ. ಈ ಪ್ರಾಕಾರದ ಮಹಾದ್ವಾರ, ಬೃಹತ್ ಶಿಲೆಗಳನ್ನು ಅಚ್ಚುಕಟ್ಟಾಗಿ ಜೋಡಿಸಿರುವ ನಿರ್ಮಾಣ; ಗಾರೆಗಚ್ಚುಗಳನ್ನು ಬಳಸಿಲ್ಲ. ೧೯೦೩ರಲ್ಲಿ ಈ ಮಹಾದ್ವಾರದ ಗೋಪುರ ಬಿದ್ದು ಹೋಯಿತಂತೆ, ಮೂರನೆಯ ಪ್ರಾಕಾರ ಎತ್ತರದಲ್ಲಿದೆ. ಗೋಡೆಗಳು ಮುಖ್ಯ ದೇವಾಲಯವನ್ನು ಸುತ್ತಿವೆ. ಈ ಪ್ರಾಕಾರದ ಮಹಾದ್ವಾರ ಅಲಂಕೃತಗೊಂಡು ವಿಜಯನಗರ ಶೈಲಿಯ ಉತ್ತಮ ಶಿಲ್ಪ ವೈಭವದಿಂದ ಮೆರೆದಿದೆ. ಪಶ್ಚಿಮ ಮತ್ತು ದಕ್ಷಿಣದ ದ್ವಾರಗಳು ಸಾಧಾರಣವಾಗಿದೆ. ದೇವಾಲಯವು ಪ್ರಮುಖವಾಗಿ ಮೂರು ಭಾಗಗಳಲ್ಲಿದೆ. ವೀರಭದ್ರಮೂರ್ತಿಯ ದೊಡ್ಡ ಗರ್ಭಗೃಹ, ಮುಂಚಿನಿಂದಲೂ ಇದ್ದ ಚಿಕ್ಕ ಚಿಕ್ಕ ಗುಡಿಗಳನ್ನಾವರಿಸಿರುವ ವಿಶಾಲ ಸುಖನಾಸಿ ಅಥವ ಅರ್ಧ ಮಂಟಪ.ಮುಖ ಮಂಟಪ ಅಥವ ನಾಟ್ಯ ಮಂಟಪ ಇದರ ಭಾವಣಿಯು ಸುಂದರ ಕೆತ್ತನೆಯ ಸ್ತಂಭಗಳ ಮೇಲೆ ನಿಂತಿದೆ. ಪಶ್ಚಿಮದ ಕಡೆ ಪ್ರತ್ಯೇಕವಾಗಿರುವ ಕಲ್ಯಾಣ ಮಂಟಪ ಪೂರ್ಣಗೊಂಡಿಲ್ಲ. ಪೀಠದ ಮೇಲೆ ಶಿಲ್ಪ ಕೃತಿಗಳಿಂದ ಅಲಂಕೃತಗೊಂಡ ಸ್ತಂಭಗಳನ್ನು ನಿಲ್ಲಿಸಿದ್ದಾರೆ.

ನಾಟ್ಯ ಮಂಟಪದಲ್ಲಿ ಭಾವಣಿಯ ಕಂಬ ಬೋದಿಗೆಗಳ ನಡುವಿನ ಅಂಕಣಗಳನ್ನು ಮತ್ತು ಬೋದಿಗೆಗಳನ್ನು ಭಿತ್ತಿಗಳಾಗಿ ರಚಿಸಿಕೊಂಡು ಚಿತ್ರಗಳನ್ನೂ ಬರೆದಿರುವರು. ಹೀಗೆ ಚಿತ್ರಿತವಾದ ಅಂಕಣಗಳು ಹದಿನಾರು. ಇದರಲ್ಲಿ ನಾಲ್ಕು, ಕೇಂದ್ರ ಗೋಪುರದ ಭುವನೇಶ್ವರಿಯ ಸುತ್ತಲೂ ಇವೆ, ಆರು ಅಂಕಣಗಳು ಉತ್ತರ ಮತ್ತು ದಕ್ಷಿಣದ ಕಡೆಗಿವೆ. ಮೂರು ಮೂರು ಕೇಂದ್ರ ಗೋಪುರದ ಭುವನೇಶ್ವರಿಯಿಂದ ಪೂರ್ವ ಮತ್ತು ಪಶ್ಚಿಮದ ಕಡೆಗಿವೆ. ಮತ್ತೊಂದು ಅಂಕಣವು ಮಹಾದ್ವಾರದ ಹತ್ತಿರ ಪೂರ್ವಕ್ಕೆ ಅರವತ್ತೂವರೆ ಅಡಿ ಉದ್ದವೂ ಮೂರೂವರೆ ಅಡಿ ಅಗಲವೂ ಇದೆ. ಇದೇ ಅತ್ಯಂತ ದೊಡ್ಡ ಅಂಕಣ. ಮಿಕ್ಕ ಅಂಕಣಗಳು ಮೂವತ್ತೇಳು ಅಡಿಗಳಿಗಿಂತ ಹೆಚ್ಚು ಉದ್ದವಿಲ್ಲ. ಆದರೆ ಹೆಚ್ಚು ಅಗಲವಾಗಿವೆ. ವೀರಭದ್ರನ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದೆ. ಈ ಭಾಗದಲ್ಲಿಯೂ ಚಿತ್ರಗಳಿವೆ. ಕೆಲವು ಚಿತ್ರಗಳು ಈಗಲೂ ಸುಂದರವಾಗಿವೆ. ರಘುನಾಥಾಲಯದ ಗರ್ಭಗೃಹಕ್ಕೆ ಹೊಂದಿದಂತೆ ಆರು ಸ್ತಂಭಗಳ ಮಂಟಪವಿದೆ. ಇಲ್ಲಿಯೂ ಅಂಕಣಗಳನ್ನು ನಿರ್ಮಿಸಿಕೊಂಡು ವಿಷ್ಣುವಿನ ದಶಾವತಾರಗಳ ಚಿತ್ರಗಳನ್ನು ರಚಿಸಿರುವರು. ಹದಿನೈದೂವರೆ ಅಡಿ ಎತ್ತರದ ಮೇಲೆ ಗರ್ಭಗೃಹವನ್ನೂ ಮತ್ತು ಇತರೆ ಚಿಕ್ಕ ಗುಡಿಗಳನ್ನೂ ಸೇರಿಸಿ ನಿರ್ಮಿಸಿರುವ ಸುಖನಾಸಿಯಲ್ಲಿ ನಮ್ಮ ಗಮನ ಸೆಳೆಯುವುದು ಬೃಹತ್ ವೀರಭದ್ರಮೂರ್ತಿಯ ಚಿತ್ರ. ೨೫ x ೧೪ ಚ. ಅಡಿಗಳ ಬೃಹತ್ ಭಾವಣಿಯಲ್ಲಿ ರಚಿಸಿರುವ ಈ ಒಂದೇ ಚಿತ್ರವು ಬಹುಶಃ ಏಷ್ಯಾ ಖಂಡದಲ್ಲಿರುವ ಅತಿ ದೊಡ್ಡ ಭಿತ್ತಿಚಿತ್ರ. ಚಿತ್ರದ ಮೇಲೆ ಉತ್ತರದ ಕಡೆಗೆ ಶಿವಪಾರ್ವತಿಯರ ದೇವದೇವಿಯರನ್ನು ಚಿತ್ರಿಸಿರುವರು. ಕೆಳಗಿನ ಚಿಕ್ಕ ಅಂಕಣದಲ್ಲಿ ದಿಕ್ಪಾಲಕರ ಚಿತ್ರಗಳನ್ನು ವಾಹನಗಳೊಂದಿಗೆ ರಚಿಸಿರುವರು. ಸರಿಯಾದ ಬೆಳಕು ಇಲ್ಲದಿರುವುದರಿಂದಲೂ ಅತಿ ಎತ್ತರದಲ್ಲಿ ಇರುವುದರಿಂದಲೂ ಈ ಚಿತ್ರಗಳನ್ನು ನೋಡಲು ಶ್ರಮ ಪಡಬೇಕು. ವೀರಭದ್ರನ ಚಿತ್ರ ಗಾತ್ರದಲ್ಲಿಯೇ ಅಲ್ಲದೆ ಆ ಕಾಲದಲ್ಲಿನ ಎಲ್ಲ ಭಿತ್ತಿ ಚಿತ್ರಗಳಿಗಿಂತಲೂ ಭಿನ್ನವಾಗಿ ಪರಿಣಾಮಕಾರಿಯಾಗಿದೆ. ಆಂಗ್ಲ ಕಲಾ ವಿಮರ್ಶಕ ವಿಸ್ಪರ್ ಹೇಳುವಂತೆ ಇದೊಂದು ಅತ್ಯುತ್ತಮ ಕೌಶಲ್ಯದ ಕೃತಿ ( ಮಾಸ್ಟರ್ ಪೀಸ್ ). ಭಾರತೀಯ ಚಿತ್ರ ಕಲೆಗೇ ಮಾದರಿಯಾಗಿದೆ.

ಈ ವೀರಭದ್ರನ ಚಿತ್ರದ ಪಕ್ಕದಲ್ಲಿ ಎರಡು ಕಡೆಗಳಲ್ಲಿ ವಿರುಪಣ್ಣ ಮತ್ತು ಆತನ ಪತ್ನಿಯನ್ನು ಚಿತ್ರಿಸಿರುವರು. ಈ ಸುಂದರ ಚಿತ್ರದ ಸುತ್ತಲೂ ಚೌಕಟ್ಟನ್ನು ನಿರ್ಮಿಸಿ ವಸ್ತ್ರ ವಿನ್ಯಾಸಗಳಿಂದ ಅಂಚುಗಳನ್ನು ಅಲಂಕರಣಗೊಳಿಸಿರುವರು. ಹೀಗೆ ವಿರುಪಣ್ಣ ಮತ್ತು ಆತನ ಕುಟುಂಬದವರ ಮೂರು ಚಿತ್ರಗಳು ಚಿತ್ರಿತವಾಗಿವೆ. ಎರಡನೆಯ ಚಿತ್ರವು ನಾಟ್ಯಮಂಟಪದ

ಪೂರ್ವಭಾಗದ ಭಾವಣಿಯಲ್ಲಿದೆ. ವಿರುಪಣ್ಣನು, ತಮ್ಮ ವೀರಣ್ಣ ಮತ್ತು ಕುಟುಂಬದವರೊಂದಿಗೆ ಕೈಜೋಡಿಸಿಕೊಂಡು ವಿನೀತಭಾವದಿಂದ ನಿಂತಿರುವ ಚಿತ್ರಗಳಿವು. ವಿಶೇಷವಾಗಿರುವ ಮತ್ತೊಂದು ಚಿತ್ರ ವಿರುಪಣ್ಣನು ಕುರುಡನಾಗಿ ವೀರಭದ್ರನ ಮುಂದೆ ನಿಂತಿರುವ ಚಿತ್ರ. ಈ ಚಿತ್ರ ಈವರೆಗೂ ಯಾರ ಗಮನವನ್ನೂ ಸೆಳೆದಿಲ್ಲ.

ಲೇಪಾಕ್ಷಿಯ ಚಿತ್ರಗಳು ವಿವರಣಾತ್ಮಕವಾದುವು. ಚಪ್ಪಟೆಯಾಗಿ ಒಂದೇ ಮಗ್ಗುಲಿಗೆ ಬರೆದ ಚಿತ್ರಗಳಲ್ಲಿ ಕೆನ್ನೆಗಳನ್ನು ಮುಂದೆ ಚಾಚಿ ಎರಡೂ ಕಣ್ಣುಗಳನ್ನೂ ತೋರಿಸಿರುವರು. ಈ ಚಿತ್ರಗಳ ಪ್ರಭಾವ ಜಾನಪದ ಕಲೆಯಾದ ತೊಗಲುಬೊಂಬೆಗಳ ಮೇಲೆ ಬಿದ್ದಿರುವುದನ್ನು ಕಾಣಬಹುದು. ಚಿತ್ರದಲ್ಲಿ ಉಬ್ಬು ತಗ್ಗುಗಳ ಆಳಮೇಳಗಳನ್ನು ಚಿತ್ರಕಾರ ತಂದಿಲ್ಲ. ವಿನ್ಯಾಸವು ಗೆರೆಗಳಿಂದಲೇ ಮೂಡಿದೆ. ಅಲಂಕಾರಿಕ ವಸ್ತು ವಿಶೇಷಣೆಯೂ ರೇಖೆಗಳಲ್ಲಿಯೇ ಮೂಡಿದೆ. ಹಾಗಾಗಿ ಈ ಚಿತ್ರಗಳು ಬಣ್ಣ ಹಚ್ಚಿದ ರೇಖಾ ಚಿತ್ರಗಳು; ಮುಕ್ತವಾಗಿ ಬರೆದ ವರ್ಣ ಚಿತ್ರಗಳಲ್ಲ. ಒಂದು ಕಥಾನಕವನ್ನಾಗಲಿ ಪ್ರಸಂಗವನ್ನಾಗಲಿ ದೈವೀಕತೆಯಿಂದ ಪ್ರತಿಮಾಶಾಸ್ತ್ರ (ಐಕ್ನೋಗ್ರಫಿ) ಲಕ್ಷಣಗಳನ್ನೂ ವಿವರಗಳನ್ನೂ ವಿವಿಧ ಭಂಗಿಗಳಲ್ಲಿ ಚಿತ್ರಿಸಲಾಗಿದೆ. ಇಲ್ಲಿನ ಮಾನವ ಚಿತ್ರಗಳು ಶಕ್ತಿಯುತವಾಗಿ ಕಾರ್ಯ ಪ್ರವೃತ್ತವಾಗಿವೆ. ಕುತೂಹಲಕಾರಿಯಾದ ಕಣ್ನೋಟಗಳನ್ನು ಹೊಂದಿವೆ. ಅವರು ಉಟ್ಟಿರುವ ಬಟ್ಟೆಗಳು ಸುಂದರ ವಿನ್ಯಾಸದ ವರ್ಣಗಳಿಂದ ಶೋಭಿಸುತ್ತಿವೆ. ಅವರು ತಲೆಯ ಮೇಲಿರಿಸಿರುವ ಶಿರೋಭೂಷಣ ವಿಜಯನಗರದ ಅಂದಿನ ಪ್ರತಿಷ್ಠಿತರು ಇಟ್ಟು ಕೊಳ್ಳುತ್ತಿದ್ದ ಕುಳ್ಳಾಯಿ ವಿವಿಧಾಕೃತಿಗಳಿಂದ ಮುತ್ತಿನ ಕುಚ್ಚುಗಳಿಂದ ಅಲಂಕೃತವಾಗಿದೆ. ಅವರು ತೊಟ್ಟಿರುವ ಕಡೆ ಅಂಗಿ ನಡುವಿಗೆ ಬಿಗಿದಿರುವ ವಸ್ತ್ರ ಲುಂಗಿಯ ರೀತಿಯ ಉಟ್ಟ ಪಂಚೆ ಅಲ್ಲದೆ ಸ್ತ್ರೀಯರು ಧರಿಸಿರುವ ಆಭರಣಗಳು ವೈವಿಧ್ಯಮಯ ವಿನ್ಯಾಸಗಳಿಂದ ಕೂಡಿದ ಸೀರೆಗಳು, ಅವರ ಕೇಶ ವಿನ್ಯಾಸ ವಿನೂತನವಾದವು; ಈಗಲೂ ಅನುಕರಣೀಯವಾದವು. ಹಾಗೆಯೇ ಋಷಿಗಳ ಜಟಾಮುಗುಟಗಳೂ ಪರಶಿವನ ಜಟಾಜೂಟವೂ, ಒಂದು ವಿಶಿಷ್ಟ ರೀತಿಯ ಕಿರೀಟದಂತೆ ಅಂದಿನ ಬೇರಾವ ಶಿಲ್ಪಗಳಲ್ಲಿಯೂ ಚಿತ್ರಗಳಲ್ಲಿಯೂ ಕಾಣದ ಅಪರೂಪ ಸೃಷ್ಠಿ. ಮೃಗಗಳಾದ ಜಿಂಕೆ, ಮೊಲ, ಹಂದಿ, ಹಸು, ಎತ್ತು ಇವೆಲ್ಲವೂ ನೈಜತೆಗೆ ಹತ್ತಿರವಾಗಿವೆ. ಈ ಪ್ರಾಣಿಗಳ ಕಣ್ಣುಗಳನ್ನು ಮಾನವರ ಕಣ್ಣುಗಳಂತೆಯೇ ಚಿತ್ರಿಸಲಾಗಿದೆ. ಕಣ್ಣಿನ ಮೇಲೆ ಹುಬ್ಬು ಮತ್ತು ಸುತ್ತಲೂ ರೇಖೆಗಳನ್ನು ಚಿತ್ರಿಸಿರುವರು. ಇದರಿಂದ ಅವು ಮಾನವಾಕೃತಿಗಳೊಡನೆ ಬೆರೆತು ಆಯಾ ಪ್ರಕರಣಗಳಲ್ಲಿ ಒಂದಾಗಿವೆ. ಅಚಲ ವಸ್ತುಗಳಾದ ಕಲ್ಲು, ಮರ, ಬಳ್ಳಿ ಇವೆಲ್ಲವನ್ನೂ ಸೂಚ್ಯವಾಗಿ ಸುಂದರ ಹಿನ್ನೆಲೆಯನ್ನು ತೋರಿಸಲು ಕಲಾತ್ಮಕವಾಗಿ ರಚಿಸಲಾಗಿದೆ. ಬಹುತೇಕ ಎಲ್ಲ ಚಿತ್ರಗಳಿಗೂ ಅಂಚುಗಳನ್ನು ಚಿತ್ರಿಸಿ ಅಂದಿನ ವಸ್ತ್ರಗಳ ವಿನ್ಯಾಸದ ರೇಖೆಗಳಿಂದ ಅಲಂಕರಣಗೊಳಿಸಿರುವರು. ಈ ರೀತಿಯ ಅಂಚುಗಳ ಚಿತ್ರಣವು ಬೇರೆಲ್ಲಿಯೂ ಕಾಣಸಿಗದು. ಬೋದಿಗೆಗಳೂ ಚಿತ್ರಿತವಾಗಿರು ವುದರಿಂದ ಅತಿ ಸುಂದರ ಚಿತ್ರಿತ ಜಮಖಾನೆಯನ್ನು ಭಾವಣಿಗೆ ಹೊದಿಸಿದಂತಿದೆ.

ಚಿತ್ರಕಾರರು ಮೂಲವರ್ಣ ಗಳಾದ ಹಳದಿ, ಕೆಂಪು, ನೀಲ ಇವುಗಳ ಸಂಯೋಜನೆ, ಹಾಗು ಕಂದು ಬಣ್ಣವನ್ನು ಹೆಚ್ಚಾಗಿ ಉಪಯೋಗಿಸಿರುವರು. ನೀಲವರ್ಣವು ಕಾಣುತ್ತಿಲ್ಲ. ಹಸಿರು ವರ್ಣ ಎಲ್ಲಿಬೇಕೋ ಅಲ್ಲಿ ಮಾತ್ರ ಉಪಯೋಗಿಸಿರುವರು. ನುಣುಪಾದ ಭಿತ್ತಿಯ ಮೇಲೆ ಪ್ರಕೃತಿ ಜನ್ಯ, ಸಸ್ಯಜನ್ಯ ವರ್ಣಗಳನ್ನು ಉಪಯೋಗಿಸಿರುವುದರಿಂದ ಇಂದಿಗೂ ಅವು ಪ್ರಕಾಶಮಾನ ವಾಗಿವೆ. ಪೂರ್ವದಿಂದ ಪಶ್ಚಿಮಕ್ಕೆ ಮುಖ್ಯದ್ವಾರದ ಬಳಿ ಇರುವ ಪಟ್ಟಿಕೆಯಲ್ಲಿ ಪ್ರಸಿದ್ಧ ದೊರೆ ಮಾನುಚೋಳನ ಕಾಲದ ಘಟನೆಯೊಂದು ಚಿತ್ರಿತವಾಗಿದೆ. ದಕ್ಷಿಣದಿಂದ ಉತ್ತರಕ್ಕೆ ಹರಡಿರುವ ಪೂರ್ವಭಾಗದ ಪಟ್ಟಿಕೆಯಲ್ಲಿ ಮತ್ಸ್ಯಯಂತ್ರ ಭೇದನ, ದ್ರೌಪದಿ ವಿವಾಹದ ಚಿತ್ರಣವಿದೆ. ದ್ರೌಪದಿಯನ್ನು ಕಪ್ಪು ಬಣ್ಣದಲ್ಲಿ ಚಿತ್ರಿಸಿರುವ ಕಾರಣ ಅವಳನ್ನು ಕೃಷ್ಣೆ ಎಂದು ಕರೆದುದಿರಬೇಕು. ಮುಂದಿನ ವಟಪತ್ರಶಾಯಿ ಕೃಷ್ಣನ ಚಿತ್ರವನ್ನು ಯಾವ ಕೋನದಿಂದ ನೋಡಿದರೂ ನಮ್ಮತ್ತಲೇ ನೋಡುತ್ತಿರುವಂತೆ ಭಾಸವಾಗುತ್ತದೆ. ಮುಂದಿನ ದಕ್ಷಯಜ್ಞದ ಚಿತ್ರ ವೀರಭದ್ರನ ಜನನ ಮುಂತಾದ ವಿವರಗಳಿವೆ. ಮುಂದಿನ ಪಟ್ಟಿಕೆಯು ಶಿವ ಪಾರ್ವತಿಯರ ವಿವಾಹದ್ದು. ಬ್ರಹ್ಮನ ಪೌರೋಹಿತ್ಯದಲ್ಲಿ ಅಷ್ಟ ದಿಕ್ಪಾಲಕರು, ವಿಷ್ಣು ತನ್ನ ಪರಿವಾರದೊಂದಿಗೆ ಆಗಮಿಸಿರು ವಂತಿದೆ. ಅರಮನೆಯಕಟ್ಟಡಗಳು ಗಿಡಮರಗಳು ಸುಂದರವಾಗಿ ಚಿತ್ರಿತವಾಗಿವೆ. ಲಜ್ಜಾನ್ವಿತಳಾದ ಪಾರ್ವತಿ ಒಂದು ಕೈಯಲ್ಲಿ ಶಿವನನ್ನು ಮತ್ತೊಂದು ಕೈಯಿಂದ ಕಮಲದ ಮೊಗ್ಗನ್ನೂ ಹಿಡಿದಿರುವಂತಿದೆ. ಹಿಮವಂತನು ಪಾತ್ರೆಯಿಂದ ನೀರು ಬಿಡುತ್ತಾ ಕನ್ಯಾದಾನ ಮಾಡುತ್ತಿರುವ ಹಾಗೆ ಆತನ ಪತ್ನಿ ಮೇನೆ ವಧೂವರರ ಸಮೀಪ ನಿಂತಿರುವಂತೆ ಚಿತ್ರಿಸಲಾಗಿದೆ. ಐದು ಮುಖಗಳು ಎಂಟು ಹಸ್ತಗಳ ವಿಸ್ವಂಭರನ ಚಿತ್ರ ಶಿವನ ಕಲ್ಯಾಣಕ್ಕೆ ಬಂದಿರುವ ದೇವರ್ಷಿಗಳು ಮತ್ತು ರಾಜರ್ಷಿಗಳು ದಾಸದಾಸಿಯರು ಇವರೆಲ್ಲರ ಚಿತ್ರಗಳಿವೆ. ಮಧ್ಯಮಂಟಪದ ಸುತ್ತಲೂ ಇರುವ ಅಂಕಣಗಳಲ್ಲಿ ಕಿರಾತಾರ್ಜುನೀಯ ಕಥಾನಕದ ಚಿತ್ರಗಳಿವೆ. ಭೂಕೈಲಾಸದ ಕಥಾನಕ ನಂತರ ರಾಮಾಯಣದ ಚಿತ್ರಗಳಿವೆ. ಈ ಚಿತ್ರಗಳು ಅಸ್ಪಷ್ಟವಾಗಿವೆ.

ಶಿವನ ವಿಶಿಷ್ಟವಾದ ಹದಿನಾಲ್ಕು ವಿವಿಧ ರೂಪಗಳ ಚಿತ್ರಗಳು ಇಲ್ಲಿನ ವೈಶಿಷ್ಟ್ಯ. ಆಯಾ ಕಥಾನಕಗಳಿಗನುಗುಣವಾಗಿ ಸುಂದರವಾಗಿ ಚಿತ್ರಿತವಾಗಿವೆ. ಅರ್ಧನಾರೀಶ್ವರಮೂರ್ತಿ,

ಲಿಂಗೋದ್ಭವಮೂರ್ತಿ, ಉಮಾಮಹೇಶ್ವರಮೂರ್ತಿ, ಅಂಧಕಾಸುರ ಧ್ವಂಸ ಮೂರ್ತಿ, ಹರಿಹರಮೂರ್ತಿ, ಕಲ್ಯಾಣಸುಂದರಮೂರ್ತಿ, ತ್ರಿಪುರಾಂತಕಮೂರ್ತಿ, ಗೌರೀಪ್ರಸಾದಕಮೂರ್ತಿ, ನಟರಾಜ ಮೂರ್ತಿ, ವಿಷವಾಹನಮೂರ್ತಿ, ಸಂಧ್ಯಾತಾಂಡವ ಮೂರ್ತಿ ಹೀಗೆ ಈ ಸುಂದರ ಚಿತ್ರಗಳಲ್ಲಿ ಶಿವ ಪಾರ್ವತಿಯರ ಲೀಲಾ ವಿನೋದಗಳನ್ನು ನಿರೂಪಿಸುವಾಗ ಲಿಂಗೋದ್ಭವ ಶಿವ ಮಾರ್ಕಂಡೇಯ, ಯಮ, ಈ ಕಥಾನಕವೂ ನಟರಾಜನ ಭಂಗಿಯಲ್ಲಿ ಜಟಾಸುರನನ್ನು ಸಂಹರಿಸುತ್ತಿರುವುದೂ, ಪಾರ್ವತಿಯಿಂದ ಭಿಕ್ಷೆ ಪಡೆಯುತ್ತಿರುವ ಶಿವ, ಸೂರ್ಯ ಚಂದ್ರರನ್ನು ರಥದಗಾಲಿಗಳಾಗಿ ಚಿತ್ರಿಸಿರುವ ರಥದಲ್ಲಿ ನಿಂತ ಪಿನಾಕಪಾಣಿ ಶಿವ, ಅಭಯ ವರದ ಹಸ್ತಗಳಲ್ಲಿ ಕುಳಿತಿರುವ ದಕ್ಷಿಣಮೂರ್ತಿ ಕಷ್ಯಪ – ದಿತಿಯರ ಮಗ ಅಂಧಕನನ್ನು ಶಿವ ಸಂಹರಿಸುತ್ತಿರುವುದು, ಚಂಡೇಶನು ಶಿವಗಣವಾದ ಕಥೆ ತಾರಕಾಸುರ ಸಂಹಾರ ತ್ರಿಪುರಗಳ ನಾಶ ಹೀಗೆ ಕಥಾನಕಗಳ ಚಿತ್ರಣವಿದೆ. ತ್ರಿಮೂರ್ತಿಗಳಿಂದೊಡಗೂಡಿರುವ ಪಂಚಮುಖ ಪರಮೇಶ್ವರ, ಕಿರೀಟಧಾರಿಗಳಾದ ದೇವದೇವಿಯರು, ದಿಕ್ಪಾಲ ಕರು, ದ್ವಿಮುಖ ಬ್ರಹ್ಮ, ಚತುರ್ಬಾಹು ವಿಷ್ಣು, ಜಟಾಮಕುಟ ಗಳಿಂದ ಅಲಂಕೃತಗೊಂಡು ಕೈಜೋಡಿಸಿ ನಿಂತಿರುವ ಋಷಿಗಳು, ಶಿವಗಣಗಳು, ಛತ್ರಿ ಹಿಡಿದ ಸೇವಕ ಸೇವಕಿಯರು, ಹೀಗೆ ಶಿವಲೀಲೆಯ ಸುಂದರ ಲೋಕವನ್ನೇ ಕಣ್ಣಿಗೆ ಹಬ್ಬವಾಗಿ ನಮ್ಮ ಮುಂದೆ ತೆರೆದಿಟ್ಟಿರುವ ಚಿತ್ರಕಾರರ ನೈಪುಣ್ಯ ಅವರ್ಣನೀಯ.

ಒಂದು ಚಿತ್ರದಲ್ಲಿ ವಿಜಯನಗರದ ಆಸ್ಥಾನ ವೈಭವವೂ ಚಿತ್ರಿತವಾಗಿದೆ. ಸಿಂಹಾಸನದಲ್ಲಿ ವಿರಾಜಮಾನನಾಗಿರುವ ವಿಜಯನಗರದ ಚಕ್ರವರ್ತಿಯ ಮುಂದೆ ಕೈ ಜೋಡಿಸಿ ನಿಂತಿರುವ ಸಾಮಂತರು, ಹಿಂದೆ ಛತ್ರಿ ಚಾಮರ ಹಿಡಿದ ದಾಸದಾಸಿಯರು, ಶಾಲು ಹೊದೆದಿರುವ ಕೃಷ್ಣ ವರ್ಣದ ಪಂಡಿತರು ರಾಜನ ಮುಂದೆ ಕುಳಿತು ತಮ್ಮ ವಾಗ್ವೈಭವದಿಂದ ಸಂಭಾಷಿಸುತ್ತಿರುವ ದೃಶ್ಯ ಮನೋಜ್ಞವಾಗಿದೆ. ಸುಖನಾಸಿಯ ಬಲಭಾಗದಲ್ಲಿ ಕಂಬದಲ್ಲಿ ರಚಿಸಿರುವ ದುರ್ಗಾಪ್ರತಿಮೆಯ ಮುಂದೆ **ಹೊಯ್ಸಳ ಕಥಾನಕ** ಚಿತ್ರಿತವಾಗಿದೆ. ಗುರುಗಳ ಆಜ್ಞೆಯಂತೆ ಸಳನು ಸರಳನ್ನು ಹಿಡಿದು ಏರಿಬರುತ್ತಿರುವ ಹುಲಿಯನ್ನು ತಿವಿಯುತ್ತಿರುವ ದೃಶ್ಯ, ಪಕ್ಕದಲ್ಲಿ ಗುರು ಶಿಷ್ಯರು, ನಂತರ ಸಳನಿಗೆ ಗುರುಗಳಿಂದ ಸನ್ಮಾನ ಆ ಪ್ರಾಂತ್ಯದ ರಾಜನಾಗಿ ನಿಯುಕ್ತಿ, ಈ ಎಲ್ಲಾ ದೃಶ್ಯಗಳೂ ನಿರೂಪಿತವಾಗಿವೆ. ಬಹುಶಃ ಪೂಜೆಗಳ್ಳುತ್ತಿರುವ ದುರ್ಗಾ ಪ್ರತಿಮೆಗೆ ಪ್ರತಿಸಲವೂ ನಿವೇದಿಸುವ ಕರ್ಪೂರದಾರತಿಯ ಹೊಗೆ ಮೇಲ್ಪಾವಣಿಯ ಈ ಚಿತ್ರಗಳನ್ನು ಮುಸುಕು ಮುಸುಕಾಗಿ ಕಾಣುವಂತೆ ಮಾಡಿದೆ. ಇಲ್ಲಿಯೇ ಚಿತ್ರಿತವಾದ ಗಂಡಭೇರುಂಡ ಪಕ್ಷಿಯ ಸುಂದರ ಚಿತ್ರವೂ ಇದೆ. ಅಗಸ್ತ್ಯ ಲಿಂಗದ ಎದುರಲ್ಲಿರುವ ವಿಷ್ಣು ದೇವಾಲಯದ ಛಾವಣಿಯಲ್ಲಿ ವಿಷ್ಣುವಿನ ಆರು ಅವತಾರಗಳ ಚಿತ್ರಗಳೊಂದಿಗೆ ವೈವಸ್ವತಮನುವಿನ ಕಥೆಯೂ ಚಿತ್ರಿತವಾಗಿದೆ. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ ಮತ್ತು ರಾಮನ ಚಿತ್ರಗಳು ಅಸ್ಪಷ್ಟವಾಗಿವೆ.

ಲೇಪಾಕ್ಷಿಯ ದೇವಾಲಯವು ವಿಜಯನಗರ ಕಲೆಯ ಮೂಲಕ ಭಾರತೀಯ ಚಿತ್ರಕಲಾ ಪ್ರಪಂಚಕ್ಕೆ ನೀಡಿರುವ ಅಪೂರ್ವ ಕೊಡುಗೆ. ಪ್ರತಿ ಚಿತ್ರಕಲಾವಿದನೂ ಅವಶ್ಯಕವಾಗಿ ನೋಡಲೇ ಬೇಕಾದ ಕಲಾಕಾಶಿ. ಕಾವಿ ಬಣ್ಣದ ಶರೀರಗಳ ವೈಭವ ಮುಂದೆ ಚಾಚಿ ತೋರಿಸಿರುವ ಎರಡೂ ಕಣ್ಣುಗಳ ಸೊಬಗು ಹಣೆಗಳನ್ನ ಲಂಕರಿಸಿರುವ ಶ್ರೀಗಂಧ, ವಿಭೂತಿ, ಪುರಾಣದ ಕಥೆಗಳ ಸುಂದರ ನಿರೂಪಣಾ ಚಿತ್ರಗಳು, ಜೈನಕಲೆಯ ಅಂಶಗಳನ್ನು ಹೊಂದಿ ಜಾನಪದ ಪ್ರಾಕಾರಕ್ಕೆ ಸಮೀಪವಾಗಿರುವ ಅಜಂತೆಯ ಕಲೆಗಿಂತ ಭಿನ್ನವಾದ ಈ ವಿಶಿಷ್ಟ ಚಿತ್ರಕಲೆ ವಿಜಯನಗರದ ಅಂತ್ಯ ಕಾಲದಲ್ಲಿ ನಮ್ಮ ಪೂರ್ವಜರು ನಮಗಾಗಿ ಬಿಟ್ಟು ಹೋಗಿರುವ ಸಾಂಸ್ಕೃತಿಕ ಆಸ್ತಿ. ಅಂತೆಯೇ ಈ ದೇವಾಲಯವೂ ಅಪೂರ್ಣವಾಗಿದೆ. ಇಲ್ಲಿನ ಅನೇಕ ಕನ್ನಡ ಶಾಸನಗಳಲ್ಲಿ ಒಂದರಲ್ಲಿಯೂ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದ ದಿನ – ವರ್ಷ ಸೂಚಿತವಾಗಿಲ್ಲ. ಎಲ್ಲ ಶಾಸನಗಳೂ ಶಾಲೀವಾಹನ ಶಕೆಯ ೧೪೫೩ ರಿಂದ ೧೪೭೧ ರ ಅವಧಿಯವು ಅಂದರೆ ಕ್ರಿ. ಶ. ೧೫೩೦ ರಿಂದ ೧೫೪೮ರ ಮಧ್ಯದಲ್ಲಿ ಬರೆದವು. ಇದರಿಂದ ಈ ದೇವಾಲಯ ೧೮ ವರ್ಷಗಳ ಅವಧಿಯಲ್ಲಿ ನಿರ್ಮಾಣಗೊಂಡಿರಬಹುದೆಂದು ಊಹಿಸಬಹುದು. ಈ ಶಾಸನಗಳಲ್ಲಿ ವೀರಭದ್ರ ದೇವಾಲಯಕ್ಕೆ ಉಂಬಳಿ ಬಿಟ್ಟ ಗ್ರಾಮಗಳ ಮತ್ತು ಭೂಮಿಗಳ ವಿವರಗಳಿವೆ. ಒಂದು ಶಾಸನ ೧೫೩೧ರಲ್ಲಿ ಬರೆಸಿದ್ದು, ಅಚ್ಯುತದೇವರಾಯರು ಪಟ್ಟಾಭಿಷಿಕ್ತರಾದ ಈ ವರ್ಷ ದಲ್ಲಿ ರಾಜಾಜ್ಞೆಯಂತೆ ಕುಮಾರ ವೆಂಕಟಾದ್ರಿಪುರವನ್ನು ಸುತ್ತುವರೆದ ಚಲವಿಂದಲ ಗ್ರಾಮವನ್ನು ಮತ್ತು ಗಣಪತಿಯ ಹಳ್ಳಿಯನ್ನು ಪೆನುಗೊಂಡೆಯವರು ವಿರುಪಣ್ಣನಿಗೆ ವೀರಭದ್ರ ದೇವಾಲಯಕ್ಕಾಗಿ ಉಂಬಳಿಯಾಗಿ ಬಿಟ್ಟ ನಿರೂಪವಿದೆ. ಇದರಿಂದ ಗೊತ್ತಾಗುವುದೆಂದರೆ ೧೫೩೧ ರಿಂದ ೧೫೪೨ ಅವಧಿಯ ಅಚ್ಯುತ ರಾಯರ ರಾಜ್ಯಾಡಳಿತದಲ್ಲಿ ವಿಜಯನಗರದ ಚಕ್ರವರ್ತಿಗಳು ಈ ದೇವಾಲಯ ನಿರ್ಮಾಣಕ್ಕೆ ಪೋಷಕರಾಗಿದ್ದರೆಂಬುದು. ಬಹುಶಃ ಈ ದೇವಾಲಯ ರಚನೆ ಅಚ್ಯುತದೇವರಾಯರ ಅನಂತರ ಪಟ್ಟವೇರಿದ ಸದಾಶಿವರಾಯರ ಕಾಲದಲ್ಲೂ ಮುಂದುವರೆದು ಕ್ರಿ. ಶ. ೧೫೪೮ರ ವೇಳೆಗೆ ಈ ಚಕ್ರವರ್ತಿಗೆ ವಿರುಪಣ್ಣನು ರಾಜ ಬೊಕ್ಕಸದ ಹಣವನ್ನು ದೇವಾಲಯ ನಿರ್ಮಾಣಕ್ಕೆ ದುರುಪಯೋಗ ಪಡಿಸುತ್ತಿರುವನೆಂಬ ಚಾಡಿ ಮಾತನ್ನು ಯಾರೋ ಹೇಳಿರಬಹುದು. ಅಂದಿನ ರಾಜಸ್ವ ದುರುಪಯೋಗದ ಶಿಕ್ಷೆಯಾದ ಅಪರಾಧಿಯ ಎರಡೂ ಕಣ್ಣುಗಳನ್ನು ಕೀಳಿಸುವ ಶಿಕ್ಷೆಯನ್ನು ಕಲಾಪ್ರೇಮಿ ವಿರುಪಣ್ಣನಿಗೆ ಚಕ್ರವರ್ತಿಯು ಕೊಟ್ಟನೆಂದೂ, ರಾಜಾಜ್ಞೆಯನ್ನರಿತ ವಿರುಪಣ್ಣ ತನ್ನ ಎರಡೂ ಕಣ್ಣುಗಳನ್ನೂ ತಾನೇ ಕಿತ್ತುಕೊಂಡು

ದೇವಾಲಯದ ಹಿಂದಿನ ಗೋಡೆಗೆ ಎಸೆದನೆಂದು ಕಲ್ಲಿನ ಮೇಲೆ ಗುರುತಾಗಿರುವ ಎರಡು ಕೆಂಪು ಚುಕ್ಕೆಗಳು ವಿರುಪಣ್ಣನ ಕಣ್ಣಿನ ರಕ್ತದ್ದೆಂದೂ ಹೇಳುವ ದಂತ ಕಥೆ ಇದೆ. ಈಗ ಅನ್ವೇಷಿಸಿರುವ ಕುರುಡ ವಿರುಪಣ್ಣನ ಚಿತ್ರದಿಂದ ಈ ದಂತಕಥೆಗೆ ಆಧಾರ ದೊರೆತು ಆ ಕಥೆ ನಿಜವೆಂದು ನಿರೂಪಿತವಾಗಿದೆ.

ದೇವಾಲಯ ನಿರ್ಮಾಣವು ಅರ್ಧಕ್ಕೇ ನಿಂತಿರುವುದು ಈ ಕಥೆಗೆ ಪುಷ್ಠಿ ಕೊಡುತ್ತದೆ. ಅಲ್ಲದೆ ಕುರಡನಾಗಿರುವ ವಿರುಪಣ್ಣನ ಚಿತ್ರವನ್ನು ನೋಡಿದಾಗ ಬಹುಶಃ ಚಕ್ರವರ್ತಿಯು ತನ್ನ ದುಡುಕಿನ ಆಜ್ಞೆಗೆ ಪಶ್ಚಾತ್ತಾಪಪಟ್ಟು ದೇವಾಲಯ ನಿರ್ಮಾಣ ವನ್ನು ಮುಂದುವರೆಸಿರಲೂಬಹುದು. ನಂತರದ ೧೫೬೫ರಲ್ಲಿ ನಡೆದ ತಾಳೀಕೋಟೆಯ ನಿರ್ಣಾಯಕ ಯುದ್ಧದ ನಂತರ ದೇವಾಲಯ ನಿರ್ಮಾಣ ಸಂಪೂರ್ಣ ನಿಂತಿರಬಹುದು. ಈ ದೇವಾಲಯವು ಈಗ ಕರ್ನಾಟಕದ ಅಂಚಿನ ಆಂಧ್ರ ಪ್ರದೇಶದ ರಾಯಲ ಸೀಮೆಯಲ್ಲಿದ್ದರೂ ಈ ದೇವಾಲಯ ನಿರ್ಮಾಣ ಕರ್ನಾಟಕ ರಾಜ್ಯ ರಮಾರಮಣರಾದ ವಿಜಯನಗರದ ಚಕ್ರವರ್ತಿ ಗಳ ಕಾಲದ್ದು. ನಿರ್ಮಾತೃಗಳು ಅಚ್ಚಕನ್ನಡಿಗರಾದ ನಂದಿ ಲಕ್ಷ್ಮಿ ಶೆಟ್ಟಿಯ ಪುತ್ರರಾದ ವಿರುಪಣ್ಣ, ವೀರಣ್ಣ ಸಹೋದರರು. ಮತ್ತು ದೇವಾಲಯದಲ್ಲಿರುವ ಎಲ್ಲಾ ಶಾಸನಗಳೂ ಕನ್ನಡ ಭಾಷೆ ಮತ್ತು ಲಿಪಿಯಲ್ಲಿವೆ. ಕನ್ನಡಿಗರಾದ ನಾವು ಅಭಿಮಾನ ಪಡಬೇಕಾದ ಈ ಕಲಾ ಮಂದಿರವನ್ನು ಈಗ ಆಂಧ್ರದ ಮಹಾ ಜನತೆ ತಮ್ಮ ಸಂಸ್ಕೃತಿಯ ಪ್ರತೀಕವೆಂದು ಪ್ರಚಾರಗೊಳಿಸಿ ಇಲ್ಲಿನ ಕಲೆಯನ್ನು ಕುರಿತಾದ ಅನೇಕ ಪುಸ್ತಕಗಳನ್ನು ತೆಲುಗಿನಲ್ಲಿ ಪ್ರಕಟಿಸಿರುವರು. ಆಂಧ್ರ ಪ್ರದೇಶದ ಲಲಿತಕಲಾ ಅಕಾಡೆಮಿಯು ಈ ದೇವಾಲಯದ ಬಗೆಗೆ ಬೃಹತ್ ಚಿತ್ರಮಯ ಹೊತ್ತಿಗೆ ಯೊಂದನ್ನು ಹೊರತಂದಿದೆ. ಆದರೆ ಎಲ್ಲಿಯೂ ಕನ್ನಡಿಗರ ಕನ್ನಡದ ಬಗೆಗೆ ಪ್ರಸ್ತಾಪವಿಲ್ಲ.

ಡಾ॥ ಎನ್. ಹವಳಯ್ಯ *

# ಮುಮ್ಮಡಿ ಕೃಷ್ಣರಾಜ ಒಡೆಯರ ಎರಡು ಹೊಸ ನಾಣ್ಯಗಳು

ಮೈಸೂರು ರಾಜವಂಶದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ತಮ್ಮ ಆಳ್ವಿಕೆಯ ಕಾಲದಲ್ಲಿ ಅನೇಕ ನಾಣ್ಯಗಳನ್ನು ಹೊರಡಿಸಿ ನಾಣ್ಯಗಳ ಚಲಾವಣೆಯ ಮಹಾನ್ ಹರಿಕಾರ ಎಂದು ಪ್ರಸಿದ್ಧರಾಗಿದ್ದಾರೆ. ಅವರ ವಂಶದಲ್ಲಿನ ಇನ್ಯಾವ ದೊರೆಗಳೂ ಇವರಷ್ಟು ವೈವಿಧ್ಯಮಯವಾದ ನಾಣ್ಯಗಳನ್ನು ಅಚ್ಚುಹಾಕಿಸಲಿಲ್ಲ(ಹೊರಡಿಸಲಿಲ್ಲ). ಚಿನ್ನ, ಬೆಳ್ಳಿ, ಮತ್ತು ತಾಮ್ರದ ನಾಣ್ಯಗಳನ್ನು ಇವರು ಚಲಾವಣೆಗೆ ತಂದು ನಾಣ್ಯಶಾಸ್ತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ವಾಸ್ತವವಾಗಿ ಅವರ ನಾಣ್ಯಗಳು ಮೂರು ಭಾಷೆಯಲ್ಲಿ ಅಂದರೆ ರೋಮನ್, ಕನ್ನಡ ಮತ್ತು ಪರ್ಶಿಯನ್ ಲಿಪಿಗಳನ್ನೊಳಗೊಂಡಿವೆ. ಇತ್ತೀಚಿಗೆ ಕನ್ನಡ ಸಂಖ್ಯೆಗಳನ್ನು ಹೊಂದಿರುವ ನಾಣ್ಯಗಳು ಕಂಡುಬಂದಿದ್ದು ಅವನ್ನು ಪ್ರೊ॥ ಎ. ವಿ. ನರಸಿಂಹಮೂರ್ತಿಯವರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ನಾಣ್ಯವೆಂದು ಪ್ರತಿಪಾದಿಸಿದ್ದಾರೆ. *೧ ಇವುಗಳು ನಿಜಕ್ಕೂ ಮಹತ್ತರವಾದ ಹಾಗೂ ಅಪೂರ್ವವಾದ ನಾಣ್ಯಗಳ ಸರಣಿಯಾಗಿದ್ದು ಮುಂಭಾಗದಲ್ಲಿ ೧ ರಿಂದ ೪೪ರ ವರೆಗಿನ ಕನ್ನಡ ಸಂಖ್ಯೆಗಳನ್ನು ಹೊಂದಿದ್ದು ಅದರ ಹಿಂಭಾಗದಲ್ಲಿ ಚೌಕಳಿಯ ಮಾದರಿಯನ್ನು ಹೊಂದಿವೆ. ಕಳೆದ ವರ್ಷ ನನಗೊಂದು ತಾಮ್ರದ ನಾಣ್ಯ ದೊರಕಿದ್ದು ಅದರ ಮುಂಭಾಗದಲ್ಲಿ ಒಂದು ಖಡ್ಗವನ್ನು, ಹಿಂಭಾಗದಲ್ಲಿ ಚೌಕಳಿಯ ಮಾದರಿಯನ್ನು ಹೊಂದಿದೆ.ಕನ್ನಡ ಅಂಕಿಗಳನ್ನು ಹೊಂದಿರುವ ನಾಣ್ಯಗಳಲ್ಲಿರುವ ಚೌಕಳಿಯ ನಮೂನೆ ಮಾದರಿ ಆಧಾರದ ಮೇಲೆ ನಾನು ಆ ನಾಣ್ಯ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸೇರಿದ್ದೆಂದು ಪ್ರತಿಪಾದಿಸಿದ್ದೇನೆ. ಈ ನಮೂನೆ ಮಾದರಿಯ ನಾಣ್ಯವು ಈ ದೊರೆಗೆ ಸಂಬಂಧಿಸಿದ್ದೆಂದು, ಕನ್ನಡ ಸಂಖ್ಯೆ ನಾಣ್ಯಗಳ ಮೇಲಿರುವ ಮಾದರಿ ಮತ್ತು ನಮೂನೆ ಆಧಾರದ ಮೇಲೆ ಯಾವ ಸಂಶಯಕ್ಕೂ ಆಸ್ಪದವಿಲ್ಲದ ಹಾಗೆ ಈ ದೊರೆಗೆ ಸೇರಿದ್ದೆಂದು ನಿರೂಪಿಸಬಹುದಾಗಿದೆ. ಕೆಲವು ಕನ್ನಡ ಅಂಕಿಗಳ ನಾಣ್ಯಗಳು ಚೌಕಳಿಯ ನಮೂನೆ ಜೊತೆಗೆ ನಾಗರಿಯಲ್ಲಿ 'ಕೃಷ್ಣ' ಎನ್ನುವ ಹೆಸರನ್ನು ಹೊಂದಿವೆ. ಆದ್ದರಿಂದ ಈ ನಾಣ್ಯಗಳು ಕ್ರಿ. ಶ. ೧೭೯೯-೧೮೬೮ರ ವರೆಗೆ ಆಳಿದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸೇರಿದ್ದೆಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ.

ಈ ಹೊಸ ವಿಷಯಗಳ ಹಿನ್ನೆಲೆಯಲ್ಲಿ ಎರಡು ತಾಮ್ರದ ನಾಣ್ಯಗಳನ್ನು ಗಮನಿಸಬಹುದು. ಮೊದಲನೆಯದು ಚೌಕಳಿ ನಮೂನೆಯ ನಾಣ್ಯ. ಐವತ್ತಕ್ಕೂ ಹೆಚ್ಚು ವರ್ಷಗಳಿಂದ ಮೈಸೂರಿನ ಸುತ್ತಮುತ್ತಲಿನಿಂದ ಹೆಚ್ಚಿನ ಸಂಖ್ಯೆಯಲ್ಲಿ ತಾಮ್ರದ ನಾಣ್ಯಗಳು ಲಭ್ಯವಾಗುವ ಬಗ್ಗೆ ವರದಿ ದೊರೆಯುತ್ತಲೇ ಇದೆ. ನಾಣ್ಯ ಸಂಗ್ರಹಕಾರರು ಈ ನಾಣ್ಯಗಳನ್ನು ವಿಜಯನಗರ ನಾಣ್ಯಗಳೆಂದೋ, ಮೈಸೂರು ಒಡೆಯರ ನಾಣ್ಯಗಳೆಂದೋ ಅಥವಾ ಪಾಳೇಗಾರರ ನಾಣ್ಯಗಳೆಂದೋ ವಿಕ್ರಯಿಸುತ್ತಿದ್ದಾರೆ. ಆದರೆ ಅವುಗಳ ಕರ್ತೃವಿನ ಬಗ್ಗೆ ಖಚಿತವಾದ ಮಾಹಿತಿಯಿಲ್ಲ. ಪ್ರೊ॥ ಎ. ವಿ. ನರಸಿಂಹ ಮೂರ್ತಿಯವರು ಈ ನಾಣ್ಯಗಳನ್ನು ವಿಜಯನಗರ ರಾಜರ ನಾಣ್ಯಗಳೆಂದೋ ಅಥವಾ ಮೈಸೂರು ಒಡೆಯರ ನಾಣ್ಯಗಳೆಂದೋ ಹೆಸರಿಸಿಲ್ಲ. *೨

ಸದ್ಯ ಈ ನಾಣ್ಯಗಳ ಲಕ್ಷಣಗಳನ್ನು ನೋಡುವ. ಅವೆಲ್ಲವೂ ವೃತ್ತಾಕಾರದ ತಾಮ್ರದ ನಾಣ್ಯಗಳು. ಹೊರಗಿನ ಲಕ್ಷಣಗಳಿಂದ ಎರಡು ವಿಧಗಳನ್ನು ಗುರುತಿಸಬಹುದು.

*ಮೊದಲನೇ ವಿಧದ ನಾಣ್ಯದ ವ್ಯಾಸವು ೧೪ ಮಿ. ಮೀ. ತೂಕ ೪೫ ಗ್ರಾಂ. ಮಂದ ೩.೨ ಮಿ.ಮಿ.*

*ಎರಡನೇ ವಿಧದ ನಾಣ್ಯದ ವ್ಯಾಸವು ೧೮ ಮಿ. ಮೀ. ತೂಕ ೪೫ಗ್ರಾಂ. ಮಂದ ೨.೨ ಮಿ. ಮೀ.*

ಎರಡೂ ವಿಧದ ನಾಣ್ಯಗಳ ನಡುವಿನ ಮುಖ್ಯ ವ್ಯತ್ಯಾಸ ಅವುಗಳ ವ್ಯಾಸ ಮತ್ತು ಮಂದ (ದಪ್ಪ). ಆದರೆ ಅವುಗಳ ತೂಕ ಮಾತ್ರ ಒಂದೇ. ಈ ವ್ಯತ್ಯಾಸವನ್ನು ನೋಡಿದ ಕೂಡಲೇ

* ಪ್ರಾಚೀನ ಇತಿಹಾಸ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

ಸುಲಭವಾಗಿ ಗುರುತಿಸಬಹುದು. ಅವುಗಳ ಮುಮ್ಮುಖ, ಹಿಮ್ಮುಖಗಳ ಮಟ್ಟಿಗೆ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಆದ್ದರಿಂದ ಎರಡೂ ವಿಧದ ನಾಣ್ಯಗಳೂ ಒಂದೇ.

ಈ ನಾಣ್ಯಗಳ ಮುಮ್ಮುಖವು ಚುಕ್ಕೆಗಳ ವೃತ್ತದಲ್ಲಿ ಅಂಕುಶ, ಖಡ್ಗ, ಹನುಮಾನ್ ಮುಂತಾದ ಅನೇಕ ಚಿಹ್ನೆಗಳನ್ನೊಳಗೊಂಡಿದೆ. ಕೆಲವು ಸಂದರ್ಭದಲ್ಲಿ ಸೂರ್ಯ ಚಂದ್ರರ ಚಿತ್ರಗಳೂ ಸಹ ಕಂಡುಬರುತ್ತವೆ. ಹಿಮ್ಮುಖದಲ್ಲಿ ಚೌಕಳಿಯ ನಮೂನೆಯಿದ್ದು, ಎರಡು ಅಥವಾ ನಾಲ್ಕು ನೆಟ್ಟನೆಯ ಗೆರೆಗಳು ಲಂಬವಾಗಿ ಸಮತಟ್ಟಾಗಿ ಎಳೆಯಲ್ಪಟ್ಟಿವೆ. ಹೀಗೆ ಎಳೆದಿರುವುದರಿಂದ ಈ ಗೆರೆಗಳು ಒಂದನ್ನೊಂದು ಛೇದಿಸಿಕೊಂಡು ಸಣ್ಣ ಸಣ್ಣ ಚೌಕಳಿ ಮತ್ತು ಸಮಚತುಷ್ಕೋನಾಕೃತಿಗಳನ್ನು ಮೂಡಿಸಿವೆ. ಕೆಲವು ಚಿಕ್ಕ ಚಿಕ್ಕ ಚಿಹ್ನೆಗಳು ಇದರ ಮೇಲೆ ಇದ್ದರೂ ಅವುಗಳನ್ನು ಗುರುತಿಸಲು ಅಸಾಧ್ಯವಾಗಿದೆ. ಈ ನಾಣ್ಯಗಳ ಮುಮ್ಮುಖದಲ್ಲಾಗಲಿ, ಹಿಮ್ಮುಖದಲ್ಲಾಗಲಿ ಯಾವ ಬರಹಗಳೂ ಕಂಡುಬರುವುದಿಲ್ಲ.

ಇಲ್ಲಿಯವರೆಗೆ ಸಿಕ್ಕಿರುವ ವಿಜಯನಗರ ನಾಣ್ಯಗಳು ತಮ್ಮ ಮುಮ್ಮುಖದಲ್ಲಿ ದೇವ, ದೇವಿಯರನ್ನು ಮತ್ತು ಅವರ ವಾಹನಗಳನ್ನು ಹೊಂದಿವೆ. ಹಿಮ್ಮುಖದ ಸ್ಥಳವನ್ನು, ನಾಣ್ಯಗಳನ್ನು ಟಂಕಿಸಿದ ರಾಜನ ಹೆಸರನ್ನು ಮುದ್ರಿಸಲು ಉಪಯೋಗಿಸುತ್ತಿದ್ದರು. ರಾಜನ ಹೆಸರನ್ನು ನಾಗರಿ, ಕನ್ನಡ ಅಥವಾ ತೆಲುಗು ಲಿಪಿಗಳಲ್ಲಿ ಬರೆದಿರುತ್ತಾರೆ. ಹೀಗೆ ಇಲ್ಲಿಯವರೆಗೂ (ಯಾವುದೇ ಒಂದು ನಾಣ್ಯದ ಮೇಲಾಗಲಿ) ವಿಜಯನಗರ ಅರಸರ ಹೆಸರಿಲ್ಲದ ಯಾವುದೇ ಒಂದು ನಾಣ್ಯವೂ ದೊರೆತಿಲ್ಲ. ಆದುದರಿಂದ, ಪ್ರಸ್ತುತ ನಾಣ್ಯಗಳು ವಿಜಯನಗರ ವಂಶಕ್ಕೆ ಸೇರಿದ್ದೆಂಬ ಅಂಶವನ್ನು ತಳ್ಳಿಹಾಕಬಹುದು.

ಮೈಸೂರು ಒಡೆಯರ ಮನೆತನದ ವಿಷಯವೂ ಸಹ ಇದೇ ರೀತಿಯಿದೆ. ಮೈಸೂರಿನ ಎಲ್ಲಾ ದೊರೆಗಳು ಹೊರಡಿಸಿದ ತಾಮ್ರದ ನಾಣ್ಯಗಳ ಹಿಮ್ಮುಖದ ಮೇಲೆ ಬರಹಗಳಿದ್ದು,




ಅದನ್ನು ಟಂಕಿಸಿದ ರಾಜನ ಹೆಸರು, ಕೆಲವು ಸಂದರ್ಭದಲ್ಲಿ ನಾಣ್ಯಗಳು ಹೆಸರು, ಮೊತ್ತ ಮತ್ತು ಇನ್ನಿತರ ವಿವರಗಳನ್ನೊಳಗೊಂಡಿವೆ.

ವೀರರಾಯಿ ಪಣಂ ಎಂಬ ಇನ್ನೊಂದು ವಿಧದ ನಾಣ್ಯಗಳಿವೆ. ಆದರೆ ಶಾಸ್ತ್ರಜ್ಞರು, ವೀರರಾಯಿ, ಅವರ ವಂಶ ಮತ್ತು ಕಾಲವನ್ನು ಗುರುತಿಸುವಲ್ಲಿ ವಿಫಲರಾಗಿದ್ದಾರೆ. ಈ ನಾಣ್ಯಗಳ ಮುಮ್ಮುಖದಲ್ಲಿ ಕನ್ನಡ ಅಂಕಿಗಳಿರುವುದರಿಂದ ಪ್ರೊ॥ಎ. ವಿ. ನರಸಿಂಹಮೂರ್ತಿಯವರು ಅದನ್ನು ಕನ್ನಡ ಅಂಕಿಗಳುಳ್ಳ ನಾಣ್ಯವೆಂದು ಕರೆದು, ಅದು ಮೈಸೂರು ಒಡೆಯರ ರಾಜನಾದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ (೧೭೯೯-೧೮೩೧) ಸೇರಿದ್ದೆಂದು ಗುರುತಿಸಿದ್ದಾರೆ. ಇಲ್ಲಿ ಮುಖ್ಯವಾಗುವ ಅಂಶವೇನೆಂದರೆ, ಈ ನಾಣ್ಯಗಳ ಹಿಮ್ಮುಖವು ಮತ್ತು ಪ್ರಸ್ತುತ ಪ್ರಶ್ನೆಯಲ್ಲಿರುವ ನಾಣ್ಯಗಳ ಹಿಮ್ಮುಖವು ಒಂದೇ ತರವಾಗಿವೆ. ಹೀಗೆ ಹಿಮ್ಮುಖವನ್ನು ಗಣನೆಗೆ ತೆಗೆದುಕೊಂಡರೆ ಈ ನಾಣ್ಯಗಳನ್ನು ಮುಮ್ಮಡಿ, ಕೃಷ್ಣರಾಜ ಒಡೆಯರಿಗೆ ಸೇರಬೇಕೆಂದು ಹೇಳಬಹುದು. ಅದರ ವಿನ್ಯಾಸ ಮತ್ತು ಬಾಹ್ಯಚಹರೆಯಿಂದ ಈ ಊಹೆ ಸಾಧ್ಯವಾಗಿರುವ ಅಂಶವನ್ನು ಗಮನಿಸಬೇಕು. ಉತ್ತಮವಾದ ಪುರಾವೆಗಳು ದೊರಕುವವರೆಗೆ ಈ ತಾಮ್ರದ ನಾಣ್ಯಗಳನ್ನು ಮೈಸೂರು ರಾಜವಂಶದ ದೊರೆಯಾದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸೇರಿದ್ದೆಂದು ಆರೋಪಿಸಬಹುದು. ಮೈಸೂರು ನಾಣ್ಯಗಳನ್ನು ಟಂಕಿಸಿದವರಲ್ಲಿ ಇವರು ಕೊನೆಯವರು.

ಈಗ ಎರಡನೆಯ ನಾಣ್ಯವನ್ನು ಗಮನಿಸಬಹುದು. ಇದನ್ನು **ಗಂಟೆ ಮಾದರಿಯ ನಾಣ್ಯ** ಎಂದು ಕರೆಯಬಹುದು. 'ಮೈಸೂರಿನಲ್ಲಿ ನಾಣ್ಯಸಂಗ್ರಹಣೆ' ಎಂಬ ಜಾಕ್‌ಸನ್‌ರವರ ಪುಸ್ತಕದಲ್ಲಿ ಮಹಮದೀಯರ ಪ್ರಕಟಣೆ ಎಂಬ ಸಾಮಾನ್ಯ ಶಿರೋನಾಮೆಯಲ್ಲಿ ತಾಮ್ರದ ನಾಣ್ಯಗಳ ಒಂದು ಪಟ್ಟಿಯನ್ನೇ ಮಾಡಿದ್ದಾರೆ. *೪ ಅವರು ಈ ನಾಣ್ಯಗಳನ್ನು ಗುರುತಿಸದೆ ಯಾವ ರಾಜನದೆಂದು ಪ್ರತಿಪಾದಿಸಲಾಗದಿದ್ದುದರಿಂದ ಅವುಗಳ ಪಟ್ಟಿಯನ್ನು ಮಾತ್ರ ಮಾಡಿದರು. ಅವರು ಮಾಡಿರುವ ಅನೇಕ ತಾಮ್ರದ ನಾಣ್ಯಗಳಲ್ಲಿ ಒಂದು ನಾಣ್ಯ ಮಾತ್ರ ನನ್ನ ಗಮನ ಸೆಳೆಯಿತು. ಅದೇ ಈ ಟಿಪ್ಪಣಿಯ ವಿಷಯವಾಗಿದೆ.

ಅದೊಂದು ತಾಮ್ರದ ನಾಣ್ಯ. ಅದರ ತೂಕವು ೪೮ ಗ್ರೇನ್ಸ್ (೩.೨ಗ್ರಾಂ). ಅದರ ವ್ಯಾಸ ೦.೬ ಅಂಗುಲ, ಮತ್ತು ಅದು ೧. ೫ ಮಿಲಿಮೀಟರ್ (ಎಂ. ಎಂ.) ದಪ್ಪವಾಗಿದೆ (ಮಂದ).

ಮುಮ್ಮುಖ : ನಾಣ್ಯದ ವೃತ್ತಾಕಾರದ ತುದಿಯನ್ನು ಮುಟ್ಟುವ ಚುಕ್ಕೆಗಳ ಒಂದು ವೃತ್ತ; ವೃತ್ತದ ಮಧ್ಯದಲ್ಲಿ ಒಂದು ದೊಡ್ಡ ಗಂಟೆ. ಅದರ ಬಲಕ್ಕೆ ಚಂದ್ರನ ಚಿತ್ರ.




ಹಿಮ್ಮುಖ : ಅಡ್ಡಲಾಗಿ ಎಳೆದ ಎರಡು ಸಮನಾಂತರ ಗೆರೆಗಳು ಮತ್ತು V,X ಮುಂತಾದ ಆಂಗ್ಲ ಅಕ್ಷರಗಳನ್ನು ಹೋಲುವ ಕೆಲವು ಚಿಹ್ನೆಗಳು.

ಹಿಮ್ಮುಖವನ್ನು ಮೊದಲು ಪರಿಶೀಲಿಸೋಣ. ಈ ರೀತಿಯಾದ ಎರಡು ಅಡ್ಡಲಾಗಿ ಎಳೆದ ಸಮಾನಾಂತರ ಗೆರೆಗಳು ಮತ್ತು ಕೆಲವು ಚಿಹ್ನೆಗಳನ್ನುಳ್ಳ (ಕನ್ನಡ ಅಂಕಿಗಳನ್ನುಳ್ಳ ನಾಣ್ಯಗಳ ಮೇಲೆ) ನಮೂನೆ ನಾಣ್ಯಗಳು ಕರ್ನಾಟಕದಲ್ಲಿ ಹೇರಳವಾಗಿ ಕಂಡುಬಂದಿವೆ. ಈ ನಾಣ್ಯಗಳು ಆರ್. ನರಸಿಂಹಾಚಾರ್, ಥರ್‌ಸ್ಟನ್ ಅವರ ಕಾಲದಿಂದಲೂ ಇದ್ದು, ಅವುಗಳ ಕಾಲ ಕಳೆದ ಶತಮಾನದ ಕೊನೆಯ ಕಾಲುಭಾಗವಾಗಿದೆ. ಇತ್ತೀಚಿನವರೆಗೂ ಈ ಎಲ್ಲರಿಗೂ ಒಂದು ಒಗಟಾಗಿ ಉಳಿದಿದ್ದವು. ಈಗ ಪ್ರೊ॥ಎ. ವಿ. ನರಸಿಂಹಮೂರ್ತಿಯವರು ಈ ಕನ್ನಡ ಅಂಕಿಗಳ ನಾಣ್ಯಗಳು ಮುಮ್ಮಡಿ ಕೃಷ್ಣರಾಜ ಒಡೆಯರು ಹೊರಡಿಸಿದ್ದೆಂದು ತಮ್ಮ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. ಮುಕುಂದ ಪ್ರಭುರವರ ಸಂಗ್ರದಲ್ಲಿರುವ ಕೆಲವು ಕನ್ನಡ ಅಂಕಿಗಳ ನಾಣ್ಯಗಳ ಹಿಮ್ಮುಖದಲ್ಲಿರುವ 'ಕ್ರಿ' ಅಥವಾ ಕೃಷ್ಣ ಎಂದು ಅಕ್ಷರವಿರುವ ಇದು ಮುಮ್ಮಡಿ ಕಷ್ಣರಾಜರಿಗೇ ಸೇರಿದ್ದೆಂಬ ಅಂಶವನ್ನು ದೃಢಪಡಿಸು ತ್ತದೆ. *೫ ಅದೇ ರೀತಿ ಪ್ರಸ್ತುತ ನಾಣ್ಯವು ಹಿಮ್ಮುಖದಲ್ಲಿ ಕೆಲವು ಕನ್ನಡ ಅಂಕಿಗಳ ನಾಣ್ಯಗಳಂತೆಯೇ ಇದೆ. ಆದ್ದರಿಂದ ಈ ನಾಣ್ಯವು ಮುಮ್ಮಡಿ ಕೃಷ್ಣರಾಜ ಒಡೆಯರಿಗೇ ಸೇರಿದ್ದೆಂದು ಸ್ಪಷ್ಟವಾಗಿ ಹೇಳಬಹುದು.

ಇದರ ಮುಮ್ಮುಖವು ಒಂದು ಗಂಟೆಯನ್ನು ಹೊಂದಿದ್ದು ಬಹಳಷ್ಟು ಆಸಕ್ತಿದಾಯಕವಾಗಿದೆ. ಇಷ್ಟರವರೆಗೆ ಯಾವುದೇ ಭಾರತೀಯ ನಾಣ್ಯದ ಮೇಲೆ ಗಂಟೆಯ ಚಿತ್ರವು ಮುದ್ರಿತವಾಗಿದ್ದುದು ಕಂಡುಬಂದಿಲ್ಲ. ಇಂತಹ ಗಂಟೆಗಳು ಭಾರತೀಯ ದೇವಸ್ಥಾನಗಳಲ್ಲಿ ಕಂಡುಬಂದರೂ ಸಹಾ ಕ್ರೈಸ್ತ ದೇವಾಲಯಗಳೊಡನೆ ಅವುಗಳ ಸಂಯೋಜನೆ ಹೆಚ್ಚು ಜನಪ್ರಿಯವಾಗಿದೆ. ಈ ಅಂಶ ಬಹಳ ಕುತೂಹಲಕಾರಿಯೂ, ಆಸಕ್ತಿದಾಯಕವೂ ಹಾಗೂ ನಿಗೂಢವೂ ಆಗಿದೆ. ಈ ಗಂಟೆಯ ಚಿತ್ರ ಹೇಗೆ? ಮತ್ತು ಏಕೆ? ಈ ನಾಣ್ಯದ ಮೇಲೆ ಮುದ್ರಿತವಾಯಿತೆಂದು ಊಹಿಸುವುದು ಬಹಳ ಕಷ್ಟಕರವಾಗಿದೆ. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಬ್ರಿಟಿಷ್ ಪ್ರಭಾವವು ಕನ್ನಡ ಸಂಸ್ಕೃತಿಯ ಮೇಲೆ ಸಾಕಷ್ಟು ಪರಿಣಾಮವನ್ನು ಮಾಡಿರುವ ಅಂಶವನ್ನು ನಾವಿಲ್ಲಿ ಗಮನಿಸಬೇಕಾಗಿದೆ. ಆದ್ದರಿಂದ ಈ ಗಂಟೆಯನ್ನು ಚರ್ಚ್ ಪ್ರಭಾವವೆಂದು ಪರಿಗಣಿಸಿದರೆ, ಇದನ್ನು ಬಹಳ ಸುಲಭವಾಗಿ ಸಮರ್ಥಿಸಬಹುದು. ಏಕೆಂದರೆ ಯಾವುದೋ ನೆಪದಲ್ಲಿ ಬ್ರಿಟಿಷರು ಈ ಕಾಲದಲ್ಲಿ ಮೈಸೂರು ದೇಶದ ಆಡಳಿತವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರೂ ಗಂಟೆಯು ಹಿಂದೂ ಧಾರ್ಮಿಕ ಚಿಹ್ನೆ ಎಂದು ಒಪ್ಪಿಕೊಳ್ಳುವಲ್ಲಿ ಯಾವ ಕಷ್ಟವೂ ಇಲ್ಲ. ಇದರ ಹಿಂದಿರುವ ನಿಜವಾದ ಪ್ರಾಮುಖ್ಯತೆ ಏನೇ ಇದ್ದರೂ ನಮಗೆ ಮುಖ್ಯವಾಗಿರುವ ಅಂಶವೆಂದರೆ ಬಹಳ ಅಪರೂಪವಾದ ಹಾಗೂ ಅನನ್ಯವಾಗಿರುವ ಈ ನಾಣ್ಯದ ಮೇಲಿರುವ ಗಂಟೆಯ ಚಿತ್ರ.

ಇತ್ತೀಚೆಗೆ ಆರ್. ವಸಂತ ಅವರು ಇನ್ನೊಂದು ಸಲಹೆಯನ್ನೂ ಮಾಡಿದ್ದಾರೆ. ಇದು ಗಂಟೆಯಲ್ಲ, ಇದು ಪಗಡೆಕಾಯಿ; ಹಿಂದಿನ ಚೌಕಳಿ ನಮೂನೆ ಪಗಡೆ ಹಾಸನ್ನು ಸೂಚಿಸುತ್ತದೆ. ಆದುದರಿಂದ ಇದು ಪಗಡೆ ಆಟಕ್ಕೆ ಸಂಬಂಧಿಸಿದ ವಿನ್ಯಾಸ ಎಂದು ಅಭಿಪ್ರಾಯಪಟ್ಟಿದ್ದಾರೆ. *೬ ಆ ಕಾಲದಲ್ಲಿ ಅರಮನೆಯಲ್ಲಿ ಮಾತ್ರವಲ್ಲದೆ ಜನಸಾಮಾನ್ಯರಲ್ಲೂ ಪಗಡೆ ಆಟ ಒಂದು ಜನಪ್ರಿಯ ಮನರಂಜನೆಯಾಗಿತ್ತು. ಆದುದರಿಂದ ಇದನ್ನು ಮುಮ್ಮಡಿಯವರು ಟಂಕಿಸಿರಬಹುದು ಎಂದು ಊಹಿಸಬಹುದು. ಅದು ಏನೇ ಇರಲಿ, ಇದೊಂದು ಆಸಕ್ತಿಕರ ನಾಣ್ಯ. ಒಟ್ಟಿನಲ್ಲಿ ಈ ಎರಡು ನಾಣ್ಯಗಳು ಇತ್ತೀಚೆಗೆ ದೊರೆತ ಹೊಸ ನಾಣ್ಯಗಳು ಎಂಬುದನ್ನು ಗಮನಿಸಬೇಕು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎ. ವಿ. ನರಸಿಂಹಮೂರ್ತಿ : **Journal of the Numismatic Society of India, Vol, III, pp.** 36-39.

*೨. ಎ. ವಿ. ನರಸಿಂಹಮೂರ್ತಿ : **Coins and Currency System in Karnataka, p.**396.

*೩. ಅದೇ,

*೪. ಆರ್. ಪಿ. ಜಾಕ್‌ಸನ್ : **Coin collecting in Mysore, page - 14**

*೫. ಅವರ ಲೇಖನ ಪ್ರಕಟಣೆಯಲ್ಲಿದೆ.

*೬. ಖಾಸಗಿ ಪತ್ರವ್ಯವಹಾರದಲ್ಲಿ ಈ ವಿಷಯ ತಿಳಿಸಿದ್ದಾರೆ.

ಡಾ॥ ಬೆಂ. ಶಾ. ಶ್ಯಾಮಲಾರತ್ನಕುಮಾರಿ *

# ಗೇರುಸೊಪ್ಪಾದಲ್ಲಿನ ಕಾವಿಚಿತ್ರಗಳು - ಒಂದು ಹೊಸ ಶೋಧ

ಗೇರುಸೊಪ್ಪ ನಗರದ ಬಸ್ತಿಕೇರಿಯ ಬಳಿ ಶರಾವತಿನದಿಯ ಆಚೆಯ ದಂಡೆಯ ಮೇಲೆ ಮಾರುತಿ ಮತ್ತು ಲಕ್ಷ್ಮೀವೆಂಕಟೇಶ ದೇವಾಲಯಗಳಿವೆ. ಲಕ್ಷ್ಮೀವೆಂಕಟೇಶ ದೇವಾಲಯದ ಪಾಳಿ ಗೋಡೆಯ ಒಳಹೊರ ಮೈಮೇಲಿನ ಅಂಕಣಗಳಲ್ಲಿ ಗೋಡೆಯ ಸುಣ್ಣಬಣ್ಣಕಾರಣೆಗಳೊಳಗಿಂದಲೂ ಕೆಲವು ರೇಖಾಚಿತ್ರಗಳು ಮಸಕುಮಸಕಾಗಿ ಗೋಚರಿಸುತ್ತವೆ. ಒಳಗೋಡೆಯ ಚಿತ್ರವೊಂದರಲ್ಲಿ ಒಂದೆಡೆ ಹಸಿಮಣ್ಣಿನ ಕಲೆಯಿದ್ದಂತೆ ಕಾಣಬರುತ್ತದೆ. ಈಚೆಗೆ ಅದನ್ನು ಬೆರಳಿನಿಂದ ಸ್ವಲ್ಪ ಬಲವಾಗಿ ಉಜ್ಜಿತೆಗೆಯಲು ನಾವು ಪ್ರಯತ್ನಿಸಿದಾಗ ಒಳಗಿನ ಕಾವಿಬಣ್ಣವು ನಿಚ್ಚಳಗೊಂಡಿತು. ಆದ್ದರಿಂದ ಆ ಚಿತ್ರಗಳು ಕಾವಿಕಲೆಯ ಚಿತ್ರಗಳೆಂದು ಸ್ಪಷ್ಟಗೊಂಡಿತು. ದೇವಾಲಯವು ಗೌಡ ಸಾರಸ್ವತ ಸಮಾಜಕ್ಕೆ ಸೇರಿದ್ದು, ದೇವಾಲಯದ ಆಡಳಿತವನ್ನು ಧರ್ಮದರ್ಶಿ ಮಂಡಳಿ ನಿರ್ವಹಿಸುತ್ತಿದೆ.

ದೇವಾಲಯದ ಒಳ ಹೊರ ಮತ್ತು ಒಳಪಾರ್ಶ್ವ ಗೋಡೆಗಳಲ್ಲಿ ಒಟ್ಟು ೨೦ ಕಾವಿಚಿತ್ರಗಳಿವೆ. ಅದರಲ್ಲಿ ಒಳಭಾಗದ ಎಡಪಾರ್ಶ್ವದ ಮೂಲೆಯಲ್ಲಿ ಮೇಲಿನ ಮಹಡಿಗೆ ಹೋಗಲು ಮರದ ಪಾವಟಿಗೆಗಳನ್ನು ಅಳವಡಿಸಲಾಗಿದೆ. ಆ ಭಾಗದಲ್ಲಿದ್ದ ಎರಡು ಚಿತ್ರಗಳು ಪಾವಟಿಗೆಗಳಲ್ಲೇ ಅಡಕಗೊಂಡಿವೆ. ಈ ಚಿತ್ರಗಳು ರಾಮಾಯಣ ಮಹಾಭಾರತ ಪುರಾಣಗಳಿಗೆ ಸಂಬಂಧಿಸಿದ ದೃಶ್ಯಗಳಾಗಿವೆ. ಒಂದೆರಡು ರಾಜಕೀಯ ಚಿತ್ರಗಳೆಂದು ಹೇಳಬಹುದಾಗಿದೆ.

ಚಿತ್ರಗಳನ್ನು ಪರಿಶೀಲಿಸಿದರೆ ಹೊರಭಿತ್ತಿಯಲ್ಲಿ ದ್ವಾರದ ಇಕ್ಕೆಡೆ ದ್ವಾರಪಾಲಕರಾದ ಜಯ ವಿಜಯರು ಕಾಣಬರುತ್ತಾರೆ. ಎಡಗಡೆಯ ದ್ವಾರಪಾಲಕನ ಚಿತ್ರದ ಪಕ್ಕದಲ್ಲಿ ಕಂಡು ಬರುವ ಚಿತ್ರಗಳೆಂದರೆ ಕ್ರಮವಾಗಿ ಕುರುಕ್ಷೇತ್ರ ಯುದ್ಧದಲ್ಲಿ ಕರ್ಣನು ಶಲ್ಯನ ಸಾರಥ್ಯದಲ್ಲಿ ತನ್ನ ಶತ್ರುವಾದ ಅರ್ಜುನನ ಮೇಲೆ ಸರ್ಪಾಸ್ತ್ರ ಪ್ರಯೋಗಿಸುತ್ತಿರುವುದು; ನರಸಿಂಹನು ದಾನವರಾಜ ಹಿರಣ್ಯಕಶಿಪುವಿನ ಕರುಳನ್ನು ಬಗಿಯುತ್ತಿರುವುದು, ಸುಧನ್ವ-ಅರ್ಜುನರ ಕಾಳಗ, ದಾನವ ರಾಜನೊಬ್ಬನು ತನ್ನ ಧನುರ್ವಿದ್ಯಾ ಗುರುವಿನಿಂದ ಆಶೀರ್ವಾದ ಪಡೆಯುತ್ತಿರುವುದು; ಬಲಗಡೆಯ ದ್ವಾರಪಾಲಕನ ಚಿತ್ರದ ಪಕ್ಕದಲ್ಲಿ ಶ್ರೀ ಕೃಷ್ಣನ ಸಾರಥ್ಯದಲ್ಲಿ ಕಪಿಧ್ವಜನಾದ ಅರ್ಜುನನು ಕರ್ಣನು ತನ್ನ ಮೇಲೆ ಪ್ರಯೋಗಿಸಿದ ಸರ್ಪಾಸ್ತ್ರವನ್ನು ತನ್ನ ಪ್ರತ್ಯಸ್ತ್ರದಿಂದ ನಿವಾರಿಸುತ್ತಿರುವುದು ಇತ್ಯಾದಿ ಚಿತ್ರಗಳಿವೆ. ಅದರ ಪಕ್ಕದ ಅಂಕಣದಲ್ಲಿ ಅರಳಿದ ಕಮಲಪುಷ್ಪದ ಚಿತ್ರವಿದ್ದು ಉಳಿದ ಭಾಗದಲ್ಲಿ ಚಿತ್ರಗಳೇನೂ ಇರುವುದಿಲ್ಲ. ದೇವಾಲಯದ ಒಳಗೋಡೆಯ ಚಿತ್ರಗಳು ಕ್ರಮವಾಗಿ ಇಂತಿವೆ; ಬಾಗಿಲಿನ ಎಡಗಡೆಯ ಗೋಡೆಯ ಮೇಲೆ ಪೀಠದ ಮೇಲೆ ಆಸೀನನಾದ ಮುಕುಟಧಾರಿಯಾದ ರಾಜ ಅವನ ಸಮ್ಮುಖದಲ್ಲಿ ದಂಡಧಾರಿ ಸೇವಕನೊಬ್ಬನು ಏನನ್ನೋ ನಿವೇದಿಸುತ್ತಿರುವಂತಿದೆ; ಅದರ ಪಕ್ಕದಲ್ಲಿನ ಚಿತ್ರದಲ್ಲಿ ರಾಜರಾಣಿಯರು ಶೃಂಗಾರ ಭಾವದಲ್ಲಿರುವಂತೆ ತೋರಿಸಲಾಗಿದೆ.

ಇಲ್ಲಿನ ಎಲ್ಲಾ ಚಿತ್ರಗಳಲ್ಲಿಯೂ ಮೇಲಿನ ಭಾಗದಲ್ಲಿ ಒಂದೆಡೆ ಚಿತ್ರದ ಹೆಸರನ್ನು ನಮೂದಿಸಲು ಒಂದು ಚಿಕ್ಕ ಆಯತಾಂಕಣವನ್ನು ಕಾಣಬಹುದಾದರೂ ಅದರೊಳಗಿನ ಅಕ್ಷರಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಆದರೆ ರಾಜ ರಾಣಿಯರ ಚಿತ್ರದಲ್ಲಿನ ನಾಮಾಂಕಣದಲ್ಲಿ ಪ್ರಭಾವತಿ-ಸುಧನ್ವ ಎಂಬ ಹೆಸರುಗಳನ್ನು ನಾಗರೀಲಿಪಿಯಲ್ಲಿ ಬರೆದಿರುವುದನ್ನು ಸ್ಫುಟವಾಗಿ ಓದಬಹುದಾಗಿದೆ. ಇದರ ಪಕ್ಕದ ಚಿತ್ರದಲ್ಲಿ ಭೀಮ ಮತ್ತು ದ್ರೌಪದಿಯರು ಕೈಯಲ್ಲಿ ಪುಷ್ಪವೊಂದನ್ನು ಹಿಡಿದ ಚಿತ್ರವಿದೆ. ಇದು ಮಹಾಭಾರತದ ಸೌಗಂಧಿಕಾ ಪುಷ್ಪ ಪ್ರಸಂಗವೇ ಆಗಿದೆ. ಭೀಮನನ್ನು ಭೀಮಾಕಾರ(ತುಂಬಾ ದೊಡ್ಡದು)ವಾಗಿಯೂ ದ್ರೌಪದಿಯನ್ನು ಸ್ತ್ರೀಸಹಜ ಗಾತ್ರದಲ್ಲೂ ಬಿಡಿಸಲಾಗಿದೆ. ನಂತರದ ಚಿತ್ರ ದಾನ ಬೇಡಲು ಬಲಿರಾಜನ ಬಳಿಗೆ ಬಂದಿರುವ ವಾಮನ. ಬ್ರಾಹ್ಮಣ ವಟು ವಾಮನನನ್ನು ಪೀಠದ ಮೇಲೆ ಕುಳ್ಳಿರಿಸಿ ಬಲಿ ಮಹಾರಾಜನು ಭಕ್ತಿಭಾವದಿಂದ ವಂದಿಸುತ್ತ ನಿಂತಿರುವಂತೆ ಮೂಡಿಸಲಾಗಿದೆ. ವಾಮನನ ಜಟೆಯು ವೈಶಿಷ್ಟ್ಯಪೂರ್ಣವಾಗಿದೆ.

* ರೀಡರ್, ಬಸವೇಶ್ವರ ಪ್ರಥಮದರ್ಜೆ ಕಾಲೇಜು, ರಾಜಾಜಿನಗರ, ಬೆಂಗಳೂರು - ೫೬೦ ೦೧೦

## ದೇವಾಲಯದ ಹೊರಗೋಡೆಯಲ್ಲಿರುವ ಚಿತ್ರಗಳು


ಲಕ್ಷ್ಮೀವೆಂಕಟರಮಣಸ್ವಾಮಿ ದೇವಾಲಯ, ಗೇರುಸೊಪ್ಪ


ದ್ವಾರಪಾಲಕ


ಶಲ್ಯನ ಸಾರಥ್ಯದಲ್ಲಿ ಕರ್ಣ


ಪಾರ್ಥಸಾರಥಿ


ಅರ್ಜುನ-ತಾಮ್ರಧ್ವಜ ಯುದ್ಧ


ದಾನವರಾಜ, ರಾಜಗುರುವಿನ ಆಶೀರ್ವಾದ ಪಡೆಯುತ್ತಿರುವುದು


**ದಾನವರಾಜ**


ನರಸಿಂಹ-ಹಿರಣ್ಯ ಕಶಿಪು ವಧ

## ಒಳಗೋಡೆಯಲ್ಲಿರುವ ಚಿತ್ರಗಳು


ವಿಷ್ಣುವನ್ನು ಹೊತ್ತಿರುವ ಗರುಡ


ರಾಮನನ್ನು ಹೊತ್ತ ಆಂಜನೇಯ


ಬೃಹನ್ನಳೆ


ಹಂಸಧ್ವಜ ತನ್ನ ಪುತ್ರನೊಂದಿಗೆ


ಭೀಮ-ದ್ರೌಪದಿ, ಸೌಗಂಧಿಕ ಪುಷ್ಪದೊಂದಿಗೆ


ಪ್ರಭಾವತಿ-ಸುಧನ್ವ


ಕಾಳಿಂಗ ಮರ್ದನ ಕೃಷ್ಣ


ವಾಮನ-ಬಲಿ


ಮಯೂರ ವಾಹನೆ ಸರಸ್ವತಿ

ಕುಲಾವಿಯಂತೆ ಇರುವ ಟೊಪ್ಪಿಗೆಯನ್ನು ಅಳವಡಿಸಲಾಗಿದೆ. ಈ ಚಿತ್ರದಲ್ಲಿ ಕಂಡು ಬರುವ ಗುಳಾಪು ದೀಪ ವ್ಯವಸ್ಥೆಯು ಗಮನಾರ್ಹವಾಗಿದೆ. ಕುಲಾವಿ ಹಾಗೂ ಗುಳಾಪು ಯೂರೋಪಿಯನ್ ಶೈಲಿಯುಳ್ಳದ್ದಿರುವಂತಿದೆ. ಈ ಚಿತ್ರದ ಪಕ್ಕದಲ್ಲಿ ಕಾಳಿಂಗ ಮರ್ದನನಾಗಿರುವ ಶ್ರೀ ಕೃಷ್ಣನ ಚಿತ್ರವಿದೆ. ಈ ಚಿತ್ರದ ಎಡ ಪಾರ್ಶ್ವದಲ್ಲೇ ಮಹಡಿಗೆ ಮೆಟ್ಟಿಲುಗಳಿದ್ದು ಅದರ ಪಕ್ಕದ ಗೋಡೆಯ ಮೇಲೆ ಗಣೇಶನ ಚಿತ್ರವಿದ್ದು ಅದರ ಮೇಲ್ಭಾಗ ಮಾತ್ರ ಕಾಣಬಹುದಾಗಿದೆ. ಅದರ ಪಕ್ಕದ ಚಿತ್ರದಲ್ಲಿ ವರ್ತುಲಾಕಾರವಾಗಿ ಗರಿಗೆದರಿ ನಿಂತ ನವಿಲಿನ ಮೇಲೆ ಆಸೀನಳಾದ ಸರಸ್ವತಿಯು ವೀಣಾವಾದನದಲ್ಲಿ ತೊಡಗಿದ್ದಾಳೆ. ಸರಸ್ವತಿಯ ಪಕ್ಕದಲ್ಲಿ ಗಣೇಶನಿರುವುದರಿಂದ ಮೆಟ್ಟಿಲುಗಳ ಸ್ಥಳದಲ್ಲಿ ಸೇರಿಹೋಗಿ ಕಣ್ಮರೆಯಾಗಿರುವ ಚಿತ್ರವು ಲಕ್ಷ್ಮಿಯದೆಂದು ಹೇಳಬಹುದಾಗಿದೆ. ಇನ್ನು ದ್ವಾರದ ಬಲಗೋಡೆಯ ಮೇಲೆ ಧನುರ್ಧಾರಿಗಳಾದ ಹಂಸಧ್ವಜ, ಸುಧನ್ವ, ನಂತರ ಅರ್ಜುನ, ಆನಂತರ ಧನುರ್ಧಾರಿಯಾಗಿ ಸ್ತ್ರೀಪುರುಷಸಂಯೋಜಿತ ಚಿತ್ರವಿದೆ. ಇದು ಬೃಹನ್ನಳೆ ಅರ್ಜುನನ ಚಿತ್ರವೆಂದು ಹೇಳಬಹುದು. ಅದರ ಪಕ್ಕದಲ್ಲಿ ಅರಳಿದ ಪದ್ಮದ ಚಿತ್ರವಿದೆ. ಪಾರ್ಶ್ವಗೋಡೆಗೆ ಹೊಂದಿಕೊಂಡು ಒಂದು ಕೊಠಡಿಯಿದೆ. ಕೊಠಡಿಯ ಬಾಗಿಲಿನ ಇಕ್ಕೆಡೆಯ ಗೋಡೆಗಳಲ್ಲಿ ವಿಷ್ಣುವನ್ನು ಹೊತ್ತುನಿಂತ ಪುರುಷರೂಪಿ ಗರುಡ ಹಾಗೂ ರಾಮನನ್ನು ಹೊತ್ತುನಿಂತ ಹನುಮಂತನ ಚಿತ್ರಗಳೂ ಕಂಡುಬರುತ್ತವೆ. ಈ ಚಿತ್ರಗಳಲ್ಲಿ ಕಂಡುಬರುವ ಉಡುಗೆ ತೊಡುಗೆಗಳು ಮುಖ್ಯವಾಗಿ ಕಿರೀಟಗಳು, ಅಂಗಿ ಚಲ್ಲಣ ಆಭರಣಗಳು ಕರಾವಳಿ ಪ್ರದೇಶದ ವಿಶಿಷ್ಟಕಲಾಪ್ರಕಾರಗಳಾದ ಯಕ್ಷಗಾನ ಮತ್ತು ಕೇರಳೀಯ ಕಥಕ್ಕಳಿಗಳ ಪ್ರಭಾವವನ್ನು ಎತ್ತಿತೋರಿಸುತ್ತವೆ. ಕರ್ಣನನ್ನು ಮುಖ್ಯವಾಗಿ ಚಿತ್ರಿಸಿರುವುದು ಆ ಪ್ರದೇಶದಲ್ಲಿನ ಚೆಸ್ತ್ರರ ಪ್ರಾಮುಖ್ಯವನ್ನು ಪ್ರತಿನಿಧಿಸುತ್ತದೆ.

ಕಾವಿ ಚಿತ್ರಕಲೆಯು ಯೂರೋಪಿನಲ್ಲಿನ ಪುನರುಜ್ಜೀವನ (ರಿನೈಸಾನ್ಸ್) ಕಾಲದ *ಗ್ರಿಫ್ಫಿಟೋ (Griffito)* ಚಿತ್ರಕಲಾ ಶೈಲಿಯನ್ನು ಪ್ರತಿನಿಧಿಸುತ್ತದೆ. *ಒಂದು ಬಣ್ಣದ ಪದರವನ್ನು ಕೆರೆದು ತೆಗೆದು ಅದರೊಳಂತರ್ಗತವಾದ ಇನ್ನೊಂದು ಬಣ್ಣದ ರೇಖಾಚಿತ್ರಗಳನ್ನು ರಚಿಸುವ ಕಲೆಯೇ ಗ್ರಿಫ್ಫಿಟೋ ಕಲೆ. 'ಫ್ರೆಸ್ಕೊ' ಭಿತ್ತಿ ಚಿತ್ರಗಳಂತೆ ಗಿಲಾಯಿ ಹಸಿಯಿದ್ದಾಗಲೇ ಈ ಚಿತ್ರಗಳ ನಿರ್ಮಾಣ ಕಾರ್ಯವನ್ನು ಮುಗಿಸಿಬಿಡಬೇಕಾಗುತ್ತದೆ. ಗೋಡೆಗಾಗಿ ಬಳಸಿದ ಮುರಗಲ್ಲು ಗಳನ್ನು ಜೋಡಿಸುವ ಗಚ್ಚನ್ನೇ ಗಿಲಾಯಿಗಾಗಿ ಬಳಸಲಾಗುತ್ತದೆ. ಬೆಣ್ಣೆಯಂತೆ ನಯವಾದ ಹಿಮದಷ್ಟು ಬಿಳಿಯಾದ ಸುಣ್ಣದಲ್ಲಿ ಹೊನ್ನಾವರದಿಂದ ಎರಡು ಕಿ.ಮೀ. ದೂರದಲ್ಲಿರುವ ಬಸವರಾಜ ದುರ್ಗ ದ್ವೀಪದಲ್ಲಿ ವಿಪುಲವಾಗಿ ಸಿಕ್ಕುವ 'ಹುರಮುಂಜೆ' (ಕಾವಿಮಣ್ಣು) ಹುಡಿಯನ್ನು ಸೇರಿಸಿ ಪಾಯಸದಂತ ಮಂದವಾದ ಮಿಶ್ರಣವನ್ನು ಸಿದ್ಧಪಡಿಸಿ ಅದನ್ನು ಚಿತ್ರ ನಿರ್ಮಾಣ ಅಂಕಣಗಳಲ್ಲಿ ಏಕಪ್ರಕಾರವಾಗಿ ಲೇಪಿಸಲಾಗುತ್ತದೆ. ಒಂದು ಗಳಿಗೆಯ ನಂತರ ತಾಪಿ ಅಥವಾ ದಬ್ಬಳದಿಂದ ಅನವಶ್ಯಕ ಮಿಶ್ರಣವನ್ನು ಚಿತ್ರಕ್ಕನುಗುಣವಾಗಿ ಕೆರೆದು ಬೇರ್ಪಡಿಸಿದಾಗ ಬಿಳಿಗೋಡೆಯ ಮೇಲೆ ರಕ್ತವರ್ಣದ ಚಿತ್ರಗಳು ರಚನೆಗೊಳ್ಳುತ್ತವೆ. ಒಂದು ದಿನದ ನಂತರ ಪ್ರತಿನಾಲ್ಕು ಗಂಟೆಗೊಮ್ಮೆ ಒಂದು ವಾರದ ಕಾಲ ನೀರು ಸಿಂಪಡಿಸುತ್ತಿದ್ದು ಬಿರುಕುಬಿಡದಂತೆ ಮಾಡಲಾಗುವುದು.*

ಹೀಗೆ ಸಿದ್ಧಗೊಂಡ ಚಿತ್ರಗಳು ಚಪ್ಪಟೆಯಾಗಿ ಏಕವರ್ಣೀಯವಾಗಿದ್ದರೂ ಸರಳ ಸೂಕ್ಷ್ಮ ಭಾವಾಭಿವ್ಯಕ್ತಿಗಳಿಂದ ಬಹುಸುಂದರವೆನಿಸುತ್ತವೆ. ಪ್ರತಿ ಚಿತ್ರದಲ್ಲಿ ಸೇರಿಸಿರುವ ಸೂಕ್ಷ್ಮ ವಿವರಗಳು, ನಯನಾಜೂಕುಗಳು ಚಿತ್ರಕಾರನ ಅಭಿರುಚಿಯ ದ್ಯೋತಕವಾಗಿರುತ್ತವೆ. ಈ ಶೈಲಿಯ ಚಿತ್ರಗಳಲ್ಲಿ ಕಲಾಕಾರನ ರೇಖಾಚಿತ್ರ ನಿರ್ಮಿತಿಯ ಸ್ಪಷ್ಟಕಲ್ಪನೆ ಹಾಗೂ ಕೈಚಳಕ ಎರಡೂ ಅತ್ಯಗತ್ಯವಾಗಿರುತ್ತವೆ. ಈ ದೃಷ್ಟಿಯಿಂದ ಕಾವಿಚಿತ್ರಕಲೆ ಒಂದು ವಿಶಿಷ್ಟ ರೀತಿಯ ಚಿತ್ರಕಲೆಯಾಗಿ ನೋಟಕರ ಕಣ್ಮನ ಸೆಳೆಯುತ್ತವೆ.

ಪೋರ್ಚುಗೀಸರು ಪಶ್ಚಿಮ ಕರಾವಳಿಯ ತಮ್ಮ ನೆಲೆಗಳಾದ ಗೋವಾ, ಕೊಚ್ಚಿನ್, ಕಲ್ಲಿಕೋಟೆ ಮುಂತಾದೆಡೆ ಈ ಗ್ರಿಫ್ಫಿಟೋ ಕಲೆಯನ್ನು ಪ್ರಚುರಪಡಿಸಿದರು. ಪೋರ್ಚುಗೀಸರ ಧಾರ್ಮಿಕ ಮತಾಂತರ ನೀತಿಗೆ ಹೆದರಿ ಗೌಡಸಾರಸ್ವತರು ಆ ಪ್ರದೇಶಗಳಿಂದ ಕರ್ನಾಟಕದ ಉತ್ತರ ಕರಾವಳಿಯ ಪ್ರದೇಶಗಳಲ್ಲಿ ನೆಲೆಸಿ ತಮ್ಮ ಮನೆ ಮತ್ತು ದೇವಾಲಯದ ಭಿತ್ತಿಗಳ ಮೇಲೆ ಕಾವಿ ಚಿತ್ರಗಳನ್ನು ರಚಿಸಿದರು. ಇತ್ತೀಚೆಗೆ ಈ ಕಾವಿಚಿತ್ರಗಳು ಮಾಸಲುಗೊಂಡಾಗ ಗೋಡೆಗಳಿಗೆ ಬಣ್ಣ ಹಚ್ಚಲಾಗುತ್ತಿದೆ. ಕಾವಿಚಿತ್ರಗಳು ಕಣ್ಮರೆಯಾಗುತ್ತಿವೆ. ಇನ್ನು ಕಾವಿಚಿತ್ರಕಲೆಯ ಕೇಂದ್ರಗಳಾದ ಹೊಸಾಡು ಮಾವಿನಕುರ್ವೆ, ಹೊನ್ನಾವರ, ಶಿರಸಿ(ಉ.ಕ. ಜಿಲ್ಲೆ) ಹಾಗೂ ಕೊಲ್ಲೂರು (ದ.ಕ.ಜಿಲ್ಲೆ)ಗಳಲ್ಲಿನ ಕಾವಿಚಿತ್ರಗಳನ್ನು ಪರಿಶೀಲಿಸಿದರೆ ಕೆಲವು ವಿಶಿಷ್ಟತೆಗಳು ಕಂಡುಬರುತ್ತವೆ. ಹೊಸಾಡು ಗೇರುಸೊಪ್ಪ ಮತ್ತು ಹೊನ್ನಾವರದ ಕಾವಿಚಿತ್ರಗಳು ಒಂದೇ ಶೈಲಿಗೆ ಸೇರಿದವೆಂದು ಹೇಳಬಹುದಾಗಿದೆ. ಡಾ॥ ಕೃಷ್ಣಾನಂದ ಕಾಮತರು 'ಕಾವಿ ಕಲೆ' ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ಹೊಸಾಡಿನ ಕಾವಿಕಲಾಶೈಲಿ ಪ್ರತ್ಯೇಕವಾಗಿ ಗುರುತಿಸಿದ್ದಾರೆ. ಹೊಸಾಡು ಹಾಗೂ ಗೇರುಸೊಪ್ಪಾದ ಕಾವಿ ಚಿತ್ರಗಳು ಪರಸ್ಪರ ಬಹಳಷ್ಟು ಹೋಲುತ್ತವೆ. ಈ ಎರಡೂ ಕಡೆಯಲ್ಲಿ ಚಿತ್ರಗಳು ಲಕ್ಷ್ಮೀವೆಂಕಟೇಶ ಮತ್ತು ಮುಖ್ಯಪ್ರಾಣ ವೆಂಕಟೇಶ ದೇವಾಲಯಗಳ ಭಿತ್ತಿಗಳ ಮೇಲೆ ಕಂಡುಬರುತ್ತವೆ. ಚಿತ್ರಗಳು ವಿಷ್ಣುವಿಗೆ ಸಂಬಂಧಿಸಿದುದಾಗಿವೆ. ದೇವಾಲಯಗಳ ಅರ್ಚಕರು ಪರಸ್ಪರ ಸೋದರ ಸಂಬಂಧಿಗಳಾಗಿದ್ದು ಮೂಲತಃ ಕೊಚ್ಚಿನ್ ಕಡೆಯಿಂದ ಬಂದವರೆಂದು ತಿಳಿದುಬಂದಿತು. ಹೊಸಾಡಿನ ಚಿತ್ರಗಳು ಹೆಚ್ಚು ಹಳೆಯದಾಗಿವೆ. ಕೆಲವು ಚಿತ್ರಗಳು ಭಾಗಶಃ ಹಾಳಾಗಿವೆ. ಶಿರಸಿ ಮಾವಿನಕುರ್ವೆ ಹಾಗೂ ಕೊಲ್ಲೂರುಗಳಲ್ಲಿ ಕಾವಿಚಿತ್ರಗಳು ಪುನರ್ರಚಿಸಲ್ಪಟ್ಟಿವೆಯಾದ್ದರಿಂದ ನಯ ನಾಜೂಕುಗಳಿಂದ ಕೂಡಿದ್ದರೂ ಮೂಲಸ್ವರೂಪ ಸ್ಪಷ್ಟವಾಗಿ ತಿಳಿಯಲಾಗುವುದಿಲ್ಲ.

ಗೇರಸೊಪ್ಪಾದ ಕಾವಿಚಿತ್ರಗಳು ಗೋಡೆಗಳ ಇತ್ತೀಚಿನ ಸುಣ್ಣ ಕಾರಣೆಯಿಂದ ಸಂರಕ್ಷಿಸಲ್ಪಟ್ಟಿರುವುದರಿಂದ ಮೂಲ ಸ್ವರೂಪ ದಲ್ಲಿ ಉಳಿದುಕೊಂಡು ಬಂದಿವೆ. ಸುಣ್ಣಬಣ್ಣಗಳಿಂದ ಕೂಡಿದ್ದರಿಂದ ಆ ಚಿತ್ರಗಳು ಇನ್ನೂ ಯಾರ ಕಣ್ಣಿಗೂ ಬಿದ್ದಿಲ್ಲ. ಡಾ॥ಕೃಷ್ಣಾನಂದ ಕಾಮತರ ಗ್ರಂಥದಲ್ಲೂ ಗೇರಸೊಪ್ಪಾದ ಈ ಚಿತ್ರಗಳು ಈ ಕಾರಣದಿಂದಲೇ ಉಲ್ಲೇಖಗೊಂಡಿಲ್ಲ. ಆದ್ದರಿಂದ ಇದೊಂದು ಹೊಸಶೋಧವಾಗಿದೆ. ಆದರೆ ಗೇರಸೊಪ್ಪದ ಎಲ್ಲ ೧೭ ಕಾವಿಚಿತ್ರಗಳು ಕಣ್ಮರೆಯಾಗುವ ಹಂತವನ್ನು ಇಷ್ಟರಲ್ಲೇ ತಲುಪಲಿವೆ. ಕಾರಣ ದೇವಾಲಯದ ಹೊರ ಗೋಡೆಗಳನ್ನು ಕೆಡವಿ ದೇವಾಲಯದ ಮುಂಭಾಗದ ಅಂಗಳವನ್ನೂ ಸೇರಿಸಿ ಕಲ್ಯಾಣ ಮಂಟಪವನ್ನು ನಿರ್ಮಿಸುವ ಯೋಜನೆಯೊಂದು ರೂಪುಗೊಂಡಿದೆ. ಇಂತಹ ಅತ್ಯಮೂಲ್ಯ ಕಾವಿ ಚಿತ್ರಕಲಾ ನೆಲೆಯನ್ನು ನೋಡಿದರೆ ಚಿತ್ರಕಲಾವಿದರ ಆಸಕ್ತಿ ಕೆರಳಿಸುವಂತಿದೆ.

(ಬೆಂಗಳೂರಿನ ಮಂಚೇನಹಳ್ಳಿಯ ಅಭಿರುಚಿ ಅಡ್ವೆಂಚರರ್ಸ್ ಕ್ಲಬ್‌ನವರು ೧೯೯೭ರ ಮೇ ತಿಂಗಳಲ್ಲಿ ಸಾಗರದಿಂದ ಗೇರುಸೊಪ್ಪಾದವರೆಗೆ ಏರ್ಪಡಿಸಿದ್ದ ಚಾರಣ ಹಾಗು ಐತಿಹಾಸಿಕ ಸ್ಥಳಗಳ ಸಂದರ್ಶನ ಸಮಯದಲ್ಲಿ ಬಸ್ತಿಕೇರಿಯ ದೇಗುಲದಲ್ಲಿ ಕಂಡ ಶೋಧವಿದು. ದೇಗುಲದ ಧರ್ಮದರ್ಶಿ ಮಂಡಳಿಯವರು ಕಾವಿಕಲೆಯ ಛಾಯಾಚಿತ್ರ ತೆಗೆದುಕೊಳ್ಳಲು ಅವಕಾಶ ನೀಡಿದುದಕ್ಕೆ ಹಾಗು ಚಿತ್ರೀಕರಣದ ಶುದ್ಧೀಕರಣದಲ್ಲಿ ನೆರವು ನೀಡಿದ ವಿದ್ಯಾರ್ಥಿಗಳಾದ ಚಿ॥ ರಾಜೇಶ್, ಬಾಬು, ವೆಂಕಟೇಶ್, ಚಂದ್ರಶೇಖರ, ಮೋಹನ್ ಕುಮಾರ್, ಹನುಮಂತರಾಜು ಅವರುಗಳಿಗೂ ಕೃತಜ್ಞತೆಗಳು.)

ಪಿ. ವಿ. ಕೃಷ್ಣಮೂರ್ತಿ*

# ಸಿಗಲ್ ನಾಡು - ಒಂದು ನೈಜ ಭೌಗೋಳಿಕ ಪ್ರಾದೇಶಿಕ ವಿಭಾಗ

ಮಹಾಭಾರತದ ಆದಿಪರ್ವದ ಅವತರಣಿಕಾ ಭಾಗದ ಶ್ಲೋಕವೊಂದು:

*ಯೇನ ಲಿಙ್ಗೇನ ಯೋ ದೇಶೋ ಯುಕ್ತಃ ಸಮುಪಲಕ್ಷತೇ।*
*ತೇನೈವ ನಾಮ್ನಾ ತಂ ದೇಶಂ ವಾಚ್ಯಮಾಹುರ್ಮನೀಷಿಣಃ॥*

ಅಂದರೆ 'ಯಾವ ಒಂದು ಚಿಹ್ನೆಯಿಂದ ಯಾವ ಒಂದು ದೇಶವು ಕೂಡಿರುವುದೋ ಆ ಚಿಹ್ನೆಯ ಹೆಸರಿನಿಂದಲೇ ಆ ದೇಶವನ್ನೂ ಅಥವಾ ಪ್ರದೇಶವನ್ನು ಕರೆಯಬೇಕೆಂಬುದು ವಿದ್ವಾಂಸರ ಅಭಿಪ್ರಾಯ' ಎಂದು ಸಾರುತ್ತದೆ.

ದಕ್ಷಿಣ ಕರ್ನಾಟಕದ, ಗಂಗರ ಆಳಿಕೆಗೆ ಒಳಪಟ್ಟಿದ್ದ ಪ್ರದೇಶಗಳಲ್ಲಿನ ಶಾಸನಗಳನ್ನು ಅವಲೋಕಿಸಿದರೆ; ವಿಶಿಷ್ಟವಾದ, ಆದರೆ ಈಗ ಪ್ರಚಲಿತವಿಲ್ಲದ ಅನೇಕ ಪ್ರಾದೇಶಿಕ ವಿಭಾಗಗಳ ಹೆಸರುಗಳು ಗಮನ ಸೆಳೆಯುತ್ತವೆ. ಅಂತಹ ಕೆಲವು ಪ್ರಾದೇಶಿಕ ವಿಭಾಗಗಳಲ್ಲಿ ಎಡೆತೊರೆನಾಡು, ಕಿಟಲೆ-ಕೆಳ್ಗಲಿನಾಡುಗಳು, ಕುಕ್ಕಲನಾಡು, ಹೊಮ್ಮಳಿಗೆನಾಡು ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಈ ಪ್ರಾದೇಶಿಕ ವಿಭಾಗಗಳು ಮೇಲೆ ಉಲ್ಲೇಖಿಸಿದ ಮಹಾಭಾರತದ ಶ್ಲೋಕದ ಅರ್ಥವ್ಯಾಪ್ತಿಯ ಹಿನ್ನೆಲೆಯನ್ನು ಪಡೆದಿವೆ. ಅಂದರೆ ಆಯಾ ಪ್ರದೇಶದ ಪ್ರಧಾನ ಚಿಹ್ನೆಗಳನ್ನು ಅನುಸರಿಸಿಯೇ ನಾಮಾಂಕಿತಗೊಂಡಿರುವುದು ಗಮನಾರ್ಹ ಸಂಗತಿಯಾಗಿದೆ. ಪ್ರಸ್ತುತ ಅಂತಹುದೇ ಮತ್ತೊಂದು ನೈಜ ಭೌಗೋಳಿಕ ಪ್ರಾದೇಶಿಕ ವಿಭಾಗ **ಸಿಗಲ್ ನಾಡನ್ನು** ಕುರಿತು; ಆ ಪ್ರದೇಶದ ಭೂವಿವರಣೆ ಮತ್ತು ಶಾಸನೋಕ್ತ ವಿವರಗಳನ್ನು ಅನುಲಕ್ಷಿಸಿ ಆ ನಾಡಿನ ನಾಮನಿಷ್ಪತ್ತಿ ಮತ್ತು ಪ್ರಾದೇಶಿಕ ವ್ಯಾಪ್ತಿಯನ್ನು ನಿರ್ಧರಿಸುವ ಒಂದು ಕಿರು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಾಗೆ ಆ ನಾಡಿನ ಶಾಸನಗಳಿಂದ ವ್ಯಕ್ತವಾಗುವ ಸ್ಥಳೀಯ ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳ ಸ್ಥೂಲ ವಿವರವನ್ನು ನೀಡಲಾಗಿದೆ.

ಸಾಮಾನ್ಯ ಅರ್ಥದಲ್ಲಿ ಕರ್ನಾಟಕವನ್ನು ಪ್ರಸ್ಥಭೂಮಿಯೆಂದು ಕರೆದಿದ್ದರೂ ಅದರ ಭೂಮಿಯ ಮೇಲ್ಮೈ ಸಮತಟ್ಟಾಗಿಲ್ಲ. ಈ ಪ್ರಸ್ಥಭೂಮಿಯ ಬೇರೆ ಬೇರೆ ಪ್ರದೇಶಗಳಲ್ಲಿ ಹರಿಯುವ ಹೊಳೆ-ಹಳ್ಳಕೊಳ್ಳಗಳು, ಆಳವಾಗಿರುವ ಕಣಿವೆಗಳು, ಮಹಾ ಕಂದರಗಳು ಅಚ್ಚರಿಯನ್ನುಂಟುಮಾಡುವಷ್ಟು ಒರಟೊರಟಾಗಿರುವ ಶಿಲಾಶೈಲಮಾಲೆಗಳಿಂದ ಕೂಡಿದೆ. ಅದರಲ್ಲೂ ದಕ್ಷಿಣ ಕರ್ನಾಟಕದ ಬಯಲುನಾಡಿನ ದಕ್ಷಿಣದ ಮೈದಾನವು ಹೆಚ್ಚಿನ ಪ್ರಮಾಣದ ಇಳಕಲುಗಳಿಂದ ಕೂಡಿದೆ.

ದಕ್ಷಿಣ ಕರ್ನಾಟಕದ ದಕ್ಷಿಣ ಗಡಿ ನೀಲಗಿರಿ ಶ್ರೇಣಿಯಿಂದ ಒಂದು ಬೆಟ್ಟ ಸಾಲು ಉತ್ತರಕ್ಕೆ ಹಬ್ಬಿದೆ. ಇದು ಬಿಳಿಗಿರಿರಂಗನ ಬೆಟ್ಟದಲ್ಲಿ ಎದ್ದು ಕಾಣುವಂತಿದ್ದು, ಪಾವಗಡದವರಿಗೂ ಹಬ್ಬಿದೆ. ಈ ಬೆಟ್ಟಗುಡ್ಡಗಳು ಎರಡು ತೊರೆಗಳ ನಡುವಿನ ಶಿಖರ ರಾಜಿಗಳಾಗಿವೆ. ಉತ್ತರ ದಕ್ಷಿಣವಾಗಿ ಹರಡಿರುವ ಗುಂಡಾದ ಉಬ್ಬುಗಳ ಮತ್ತು ಅರ್ಧಗೋಳಗಳ ಕಿರುವಯಸ್ಸಿನ ಒರಟು ಹರಳಿನ ಪೊಟ್ಯಾಸಿಕ್ ಗ್ರಾನೈಟುಗಳ ಸರಣಿಗೆ ಸೇರಿದ ಇವನ್ನು ಬೈಯೋ ಟೈಟ್ ಮೈಕ ಹಾಗು ಫೆಲ್ಸ್‌ಪಾರ್ ಖನಿಜಗಳನ್ನೂ ಹೊಂದಿರುವ **ಕ್ಲೋಸ್‌ಪೇಟ್ ಗ್ರಾನೈಟುಗಳು** ಎಂದು ಹೆಸರಿಸಲಾಗಿದೆ. ಈ ಒರಟು ಹರಳಿನ ಗ್ರಾನೈಟುಗಳು ಸುಮಾರು ೧೬-೨೨ ಕಿ.ಮೀ. ಅಗಲದ ಪಟ್ಟಿಕೆಗೆ ವಿಶೇಷವಾಗಿ ಸೀಮಿತವಾಗಿದೆ. ಈ ಪಟ್ಟಿಕೆಯ ಪ್ರದೇಶದಲ್ಲೇ ಪ್ರಸ್ತುತ **ಸಿಗಲ್‌ನಾಡು** ಪ್ರಸ್ಥಾನಗೊಂಡಿದೆ. ಈ ಗ್ರಾನೈಟುಗಳು ಭಾರತದ ಭೂತಲದಲ್ಲಿರುವಂಥ ಅತ್ಯಂತ ರಮ್ಯವಾದ ದೃಶ್ಯಗಳನ್ನು ರೂಪಿಸಿರುವ ಶಿಲಾಪುಂಜಗಳೆಂದು ಲೂಯಿರೈಸ್‌ರವರು ತಾವು ಸಂಪಾದಿಸಿದ ಮೈಸೂರು ಗ್ಯಾಸೆಟಿಯರನ ಮೊದಲ ಆವೃತ್ತಿಯಲ್ಲಿ ಬಣ್ಣಿಸಿರುವುದಲ್ಲದೆ ಅವು ತಳೆದಿರುವ ವಿಲಕ್ಷಣ ಸ್ವರೂಪಗಳಿಂದ ಅಮೇರಿಕಾದ **ಡಾರ್ಟ್‌ಮೂರ್‌ನ** ದೃಶ್ಯಗಳನ್ನು ಮೀರಿಸುವಂತಿವೆ. ಎಂದಿದ್ದಾರೆ- **ಜೋಡಣೆ ತೀರ ಎದ್ದು ಕಾಣುವಂತಿದೆ. ಅದ್ದ ಮತ್ತು ಉದ್ದವಾಗಿರುವ ಜೋಡಣೆಗಳು ಒಂದನ್ನೊಂದು ಛೇದಿಸಿ ದೈತ್ಯಾಕಾರದ ಗಾರೆಯ ಗೋಡೆಯ ಹಾಗೆ ಅವು ಕಾಣಿಸುತ್ತವೆ.**

* ಜಿ ಬಿ ಜಿ- ೫೧೦, ೧೨ನೇ ತಿರುವು, ಜವಾಹರ್‌ನಗರ ೩ನೇ ಸೆಕ್ಟರ್, ಮಾರತ್ತಹಳ್ಳಿ, ಬೆಂಗಳೂರು - ೫೬೦ ೦೩೭

ಈ ಶಿಲಾಶೈಲ ಮಾಲೆಯಲ್ಲಿ ಸಿಗಲನಾಡಿನ ಬಾಣತಿಮಾರಿ ಬೆಟ್ಟ (೧೦೪೩ ಮೀ), ಪಿಟ್ಟನಕೆರೆಬೆಟ್ಟ (೯೮೯ ಮೀ), ಮುದವಾಡಿಬೆಟ್ಟ (೯೫೩ ಮೀ), ಶಿವಾಲದಪ್ಪನ ಬೆಟ್ಟ (೧೧೦೦ ಮೀ. ), ಮಲ್ಲದೇವರ ಬೆಟ್ಟ (೯೫೪ ಮೀ), ಮತ್ತು ಕೊಪ್ಪಬೆಟ್ಟ (೮೫೯ ಮೀ), ಇವು ಇಳಕಲುಗಳಾದ ಕಡಿದಾದ ಮುಖಗಳುಳ್ಳ ವಿಶಿಷ್ಟ ಶಿಲಾಶೈಲಗಳಾಗಿವೆ. ಮಿಗ್ಮಟೈಟಿಕ್ ನೈಸ್‌ಗಳಿಂದ ಕೂಡಿರುವ ಚಾರ್ನೊಕೈಟ್‌ಗಳಾಗಿರುವ ಇವು ಬಹಳ ಪುರಾತನವಾದುವು. ಎಷ್ಟು ಪುರಾತನವೆಂದರೆ; ಭೂಮಿಯ ತಳದಲ್ಲಿ ಪ್ರಪ್ರಥಮವಾಗಿ ಶಿಲೆಗಳು ರೂಪುತಾಳಿದ ದಾಖಲೆಯಿರುವ ಕಾಲದಷ್ಟು ! ( ಅಂದರೆ ಇವು ಪ್ರಾರಂಭ ನಿರ್ಜೀವ ಕಲ್ಪದ ಕಾಲಕ್ಕೆ ಸೇರಿದ್ದು ಸು. ೨,೩೦೦ ಮಿಲಿಯ ವರ್ಷಗಳಷ್ಟು ಪ್ರಾಚೀನ ) ಈ ಗ್ರಾನೈಟುಗಳು ಸಾಮಾನ್ಯವಾಗಿ ದಪ್ಪ ಕಣರಚನೆಯುಳ್ಳವು. ಅಲ್ಲಲ್ಲಿ ಪಾರಿಫಿರಿಟಿಕ್ ಒಳರಚನೆ ಇರುವ ಭಾಗಗಳಿವೆ. ಫೆಲ್ಸ್ಪಾಂನ ಬೃಹತ್ ಸ್ಪಟಿಕಗಳು ೫ರಿಂದ ೭½ ಸೆಂ.ಮೀ ವರೆಗೆ ಉದ್ದವಾಗಿವೆ. ಫೆಲ್ಸ್‌ಫಾರ್ ಕಣಗಳ ಬಣ್ಣವು ತಿಳಿಗುಲಾಬಿ ಬಣ್ಣದಿಂದ ಮಾಂಸಖಂಡದ ಕೆಂಪು ಬಣ್ಣದವರೆಗೂ, ಬಿಳಿಯ ಬಣ್ಣದಿಂದ ಬೂದುಬಣ್ಣದವರೆಗೂ ಇರುವುದರಿಂದ, ಗುಲಾಬಿ ಬಣ್ಣದ ಮತ್ತು ಬೂದು ಬಣ್ಣದ ಶಿಲಾವಿಧಗಳು ಉಂಟಾಗಿವೆ. ಇವೆಲ್ಲ ಬಯೋಟೈಟ್ ಗ್ರಾನೈಟ್ ವಿಧಗಳು. ಇವುಗಳಲ್ಲಿ ಅನೇಕ ವಿಧದ ಹಿರಿಯ ಪದರು ಶಿಲೆಗಳು ಮತ್ತು ಗ್ರಾನೈಟುಗಳ ತುಂಡುಗಳು ಅಂತರ್ಗತವಾಗಿವೆ. ಇವುಗಳಲ್ಲಿ ಕೆಲವು ಡಯೊರೈಟ್ ಶಿಲೆಗೆ ಬದಲಾವಣೆಯಾಗಿವೆ.

ಈ ಸರಣಿಯ ಶಿಲೆಗಳು ಹಲವು ಕಡೆ ಕಪ್ಪು ಜೇಡಿಮಣ್ಣಿನ ಹೊದಿಕೆಗಳಿಂದ ಕೂಡಿದೆ. ಇಂತಹ ಶಿಲಾರೂಪಿಕೆಗಳಲ್ಲಿ ಚಿನ್ನ, ಕಬ್ಬಿಣ, ತಾಮ್ರ ಮುಂತಾದ ಖನಿಜಗಳ ಕುರುಹುಗಳು ಕಂಡುಬರುವುದುಂಟು. ಅಂತೆಯೇ ಈ ಪ್ರದೇಶಗಳಲ್ಲಿ ಚಿನ್ನ ಮತ್ತು ಇತರ ಲೋಹಗಳ ಕೈಗಾರಿಕೆ ಅಸ್ತಿತ್ವದಲ್ಲಿದ್ದ ಬಗ್ಗೆ ಅಲ್ಲಲ್ಲೆ ಕುರುಹುಗಳು ದೊರೆಯುತ್ತವೆ.

ಬೆಂಗಳೂರು ಜಿಲ್ಲೆಯಲ್ಲಿ ಹರಿಯುವ ಒಂದು ಮುಖ್ಯ ನದಿ ಅರ್ಕಾವತಿ. ಇದು ಬೆಂಗಳೂರು ಜಿಲ್ಲೆಗೆ ಉತ್ತರದ ಗಡಿಯಲ್ಲಿರುವ ಪ್ರಸಿದ್ಧ ನಂದೀದುರ್ಗದ ನೈರುತ್ಯ ಬೆಟ್ಟಗಳಲ್ಲಿ ೧,೪೮೦ ಮೀ. ಎತ್ತರದಲ್ಲಿ ಹುಟ್ಟಿ ದೊಡ್ಡಬಳ್ಳಾಪುರ, ಬೆಂಗಳೂರು ಉತ್ತರ, ನೆಲಮಂಗಲ ತಾಲೂಕಿನ ಪೂರ್ವಗಡಿ, ಮಾಗಡಿ, ರಾಮನಗರ ತಾಲೂಕುಗಳಲ್ಲಿ ಹಾದು ಕನಕಪುರ ತಾಲೂಕಿನ ಮೂಲಕ ಒಟ್ಟು ೧೬೧ ಕಿ.ಮೀ. ಉದ್ದಕ್ಕೆ ಹರಿದು ಕಾವೇರಿಯನ್ನು ಕೂಡಿಕೊಳ್ಳುತ್ತದೆ. ಅರ್ಕಾವತಿ ಹಾಗೂ ಅದಕ್ಕೆ ನೀರೊದಗಿಸುವ ಇಕ್ಕೆಡೆಗಳ ಪ್ರದೇಶಗಳಲ್ಲಿನ ಕುಟ್ಟೆಹೊಳೆ, ವೃಷಭಾವತಿ, ಕುಮುದ್ವತಿ, ಮಾರಿಹಳ್ಳ, ಮಡಿವಾಳ, ಬಾನಹಳ್ಳ, ಸುವರ್ಣಮುಖಿ, ಕುನಂದಾವತಿ ಮುಂತಾದ ಉಪಕಣಿವೆ/ಹಳ್ಳಕೊಳ್ಳಗಳ ಪ್ರದೇಶಗಳು, ಪ್ರಾಗೈತಿಹಾಸಿಕ ದೃಷ್ಟಿಯಿಂದಲು ಪ್ರಾಮುಖ್ಯವೆನಿಸಿವೆ. ಅನೇಕ ಪ್ರಾಗೈತಿಹಾಸಿಕ ನೆಲೆಗಳು ಬೆಳಕಿಗೆ ಬಂದಿದ್ದು, ಆದರಲ್ಲೂ ಈ ಪ್ರದೇಶದ ನೂತನ ಶಿಲಾಯುಗದ ಸಂಸ್ಕೃತಿ ಸುಮಾರು ಕ್ರಿ. ಪೂ. ೧೯೦೦ರಿಂದ ೮೦೦ವರ್ಷಗಳಷ್ಟು ಪ್ರಾಚೀನವೆಂದು ಹೇಳಲಾಗಿದೆ. ಪ್ರಾಯಶಃ ಈ ಪ್ರದೇಶದ ಮೂಲ ನಿವಾಸಿಗಳು ಪ್ರೊಟೊದ್ರವಿಡಾಯಿಡ್ ಮತ್ತು ಆಸ್ಟ್ರಾಯಿಡ್ ಜನಾಂಗದವರಾಗಿದ್ದರೆಂದು ಹೇಳಲಾಗಿದೆ.

ಕಾವೇರಿನದಿಯ ಉತ್ತರಕ್ಕೆ ಅಂದರೆ ಎಡದಂಡೆಯಲ್ಲಿರುವ ಅರ್ಕಾವತಿ ನದಿಯ ಕಣಿವೆ ಪ್ರದೇಶದಲ್ಲಿ ಮೇಲೆ ವಿವರಿಸಿರುವ ರೀತಿಯಲ್ಲಿ ಚದುರಿದಂತೆ ಹರಡಿಕೊಂಡಿರುವ ಬೆಟ್ಟಗುಡ್ಡಗಳಿಂದ ಕೂಡಿರುವ ಈ ಪ್ರದೇಶವನ್ನು ಶಾಸನಗಳು ಸಿಗಲ್‌ನಾಡು ಎಂದು ಕರೆದಿರುವುದು ಕಂಡುಬರುತ್ತದೆ. ಈ ನಾಡಿನ ಪೂರ್ವ ಹಾಗೂ ಉತ್ತರಕ್ಕೆ ಆನೇಕಲ್ ತಾಲೂಕಿನ ಭಾಗವಾದ ಹೊಮ್ಮಳಿಗೆನಾಡು ಹಾಗೂ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ತಾಲೂಕು ಪ್ರದೇಶ, ಪಶ್ಚಿಮ ಹಾಗೂ ನೈಋತ್ಯಕ್ಕೆ ರಾಮನಗರ ಮತ್ತು ಚನ್ನಪಟ್ಟಣ, ಮಳವಳ್ಳಿ ತಾಲೂಕುಗಳಲ್ಲಿ ಅಂತರಗತವಾಗಿದ್ದ ಕೆಟ್ಗಲಿ-ಕಿಟಲಿ ನಾಡುಗಳ ಪ್ರದೇಶ, ದಕ್ಷಿಣಕ್ಕೆ ಕಾವೇರಿ ನದಿಯು, ಎಲ್ಲೆಗಳಾಗಿವೆ.




ಸ್ವಾಭಾವಿಕ ಗಿರಿಕಂದರವನಗಳಿಂದ ಕೂಡಿರುವ ಈ ಪ್ರದೇಶವನ್ನು ಶಾಸನಗಳಲ್ಲಿ ಸಿಯಲ್‌ನಾಡು, ಚಿಗಲ್‌ನಾಡು, ಸಿಗಲನಾಡು ಎಂದು ಕಾಲಾನುಕ್ರಮದಲ್ಲಿ ಉಲ್ಲೇಖಿಸಲಾಗಿದೆ.

ಸೀ + ಆಲ್, ಚಿ/ಸಿ + ಕಲ್ ಎಂದು ಇವನ್ನು ಬಿಡಿಸಿಕೊಳ್ಳ ಬಹುದಾಗಿದೆ. ಸೀ > ಚಿ/ಸಿ ಗಳಿಗೆ ದ್ರಾವಿಡ ಭಾಷೆಗಳಲ್ಲಿ ಸೀವು, ಹರಿ, ವಿಂಗಡಿಸು, ಬೇರೆಮಾಡು (DED 2601) ಎಂಬ ಅರ್ಥಗಳಿವೆ. 'ಆಲ್' ಎಂಬುದು ಪ್ರಸಿದ್ಧ ಜಲಸೂಚಿ* (ದ್ರಾವಿಡ) ವಾಚಕವಾಗಿದೆ, ಹಾಗೇ 'ಕಲ್' ಎಂಬುದು ಶಿಲಾಸೂಚಿ ವಾಚಕವಾಗಿದೆ. ಶಾಸನೋಕ್ತ ಸಿಯಲ್‌ನಾಡು ಎಂಬುದು ಪ್ರಧಾನತಃ ಜಲಸೂಚಿ ವಾಚಕವಾಗಿದ್ದರೆ; ಸಿಗಲ್ ಎಂಬುದು ಪ್ರಧಾನತಃ ಶಿಲಾಸೂಚಿ ವಾಚಕವಾಗಿರುತ್ತದೆ. ವಾಸ್ತವವಾಗಿ ಈ ಎರಡೂ ಅರ್ಥಗಳಲ್ಲಿ ಈ ಪ್ರದೇಶ ಪ್ರಾಮುಖ್ಯತೆಯನ್ನು ಪಡೆದಿರುವ ಅಂಶ ಮೇಲೆ ವಿವರಿಸಿದ ಭೌಗೋಳಿಕ ವಿವರಣೆಯಿಂದ ಮನಗಾಣಬಹುದಾಗಿದೆ. ಲಭ್ಯ ಶಾಸನಾಧಾರಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಈ ನಾಡು ಮೊದಲಿಗೆ ಜಲಸೂಚಿಯಾದ 'ಸಿಯಲ್‌ನಾಡು' ಎಂದಿದ್ದುದು ನಂತರದಲ್ಲಿ ಶಿಲಾಸೂಚಿಯಾದ ಸಿಗಲ್‌ನಾಡಾಗಿ ಪ್ರಸಿದ್ಧಿ ಪಡೆಯಿತೆನ್ನಬಹುದು. ಆದರೆ ಈ ಎರಡೂ ಹೆಸರುಗಳು ತೀರ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದಿರಬೇಕು, ಎಂದು ಅನುಮಾನ ಪಡುವುದರಲ್ಲಿ ತಪ್ಪಿಲ್ಲವೆನಿಸುತ್ತದೆ. 'ಚೀಕ್' ಎಂಬ ಪದಕ್ಕೆ ತುಂಡುಮಾಡು, ನುಣುಪು, ನಯ, ಸಣ್ಣದಾಗಿ ಕತ್ತರಿಸು, ಸಿಪ್ಪೆ ಸುಲಿ (DED 2600) ಎಂಬ ಅರ್ಥಗಳಿವೆ. ಅಂದರೆ ನುಣುಪಾದ, ತುಂಡು ತುಂಡಾದ, ಹರಿದಿರುವ ಕಲ್ಲುಗಳನ್ನೇ ಪ್ರಧಾನವಾಗಿ ಹೊಂದಿರುವ ನಾಡೇ ಸಿಗಲನಾಡು ಎಂದೂ ಅರ್ಥೈಸಬಹುದು.

ಕ್ರಿಸ್ತಶಕ ೧೩೩೭ರ ಚಿಕ್ಕಕೊಪ್ಪ ಗ್ರಾಮದ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ "ಸ್ವಸ್ತಿ ಶ್ರೀ....ಲನಾಡ ಸಾವಿರಮುಂ...." ಎಂಬ ತ್ರುಟಿತ ಉಲ್ಲೇಖವಿದೆ. ತ್ರುಟಿತವಾಗಿರುವ ಭಾಗವನ್ನು 'ಸಿಗ' ಎಂದು ಸೇರಿಸಿ ಪೂರ್ಣಗೊಳಿಸಿಕೊಂಡರೆ, ಆಗ ಸಿಗಲನಾಡು ಒಂದು ಸಾವಿರ ಪ್ರಮಾಣದ ವ್ಯಾಪ್ತಿಯುಳ್ಳ ಪ್ರದೇಶವಾಗುತ್ತದೆ. ಅಂದರೆ ಕಿಟಲೆನಾಡಿನಂತೆ ಈನಾಡೂ ಕೂಡ ಒಂದು ಸಾವಿರ ಪ್ರಮಾಣದ ಪ್ರಾದೇಶಿಕ ವಿಭಾಗವಾಗಿದ್ದಿತೆಂದು ಹೇಳಬಹುದಾಗಿದೆ. ಒಟ್ಟಾರೆ, ಸಿಗಲ್‌ನಾಡು 'ಕ್ಲೋಸ್‌ಪೇಟೆ ಗ್ರಾನೈಟ್' ವಲಯದ, ವೈಶಿಷ್ಟ್ಯಪೂರ್ಣ ಗಿರಿಕಂದರಗಳಿಂದ ಕೂಡಿ, ಸರಿಸುಮಾರು ಇಂದಿನ ಕನಕಪುರ ತಾಲೂಕಿನ ಉತ್ತರ ಹಾಗೂ ವಾಯುವ್ಯ ಭಾಗಗಳನ್ನು ಹೊರತುಪಡಿಸಿ, ಉಳಿದ ಮುಕ್ಕಾಲು ಭಾಗದಷ್ಟು ಪ್ರದೇಶದಲ್ಲಿ ಅಂತರಗತವಾಗಿದ್ದಂಥ ಒಂದು ಪ್ರಾಚೀನವಾದ ನೈಜ ಭೌಗೋಳಿಕ ಪ್ರಾದೇಶಿಕ ವಿಭಾಗವಾಗಿದ್ದಿತು. ಎಂದು ದೃಢವಾಗಿ ಭಾವಿಸಬಹುದಾಗಿದೆ.

ಹೊಯ್ಸಳರ ಆಳಿಕೆಗಿಂತ ಹಿಂದಿನ ಕಾಲಕ್ಕೆ ಸೇರಿದ ಶಾಸನಗಳು, ಈ ಪ್ರದೇಶದಲ್ಲಿ ಕ್ವಚಿತ್ತಾಗಿ ದೊರೆತಿವೆ. (ಮೂರು ಗಂಗರ ಕಾಲದ ವೀರಗಲ್ಲು ಮತ್ತು ಒಂದು ಚೋಳರ ಕಾಲದ ವೀರಮಾಸ್ತಿಕಲ್ಲು ಶಾಸನಗಳು ಮಾತ್ರ). ಅವುಗಳಲ್ಲಿ ಚೋಳರ ಶಾಸನದಲ್ಲಿ ಮಾತ್ರ ನಾಡಿನ ಪ್ರಸ್ತಾಪವಿದ್ದಂತಿದ್ದು; ಆ ಭಾಗ ತ್ರುಟಿತವಾಗಿದೆ. ಆದ್ದರಿಂದ ಈ ನಾಡಿನ ಶಾಸನೋಕ್ತ ಪ್ರಾಚೀನ ತಮ ಉಲ್ಲೇಖಗಳನ್ನು ಹೊಯ್ಸಳರ ಕಾಲದ ಶಾಸನಗಳಿಂದಷ್ಟೆ ಕಾಣಬಹುದಾಗಿದೆ. ಕ್ರಿಸ್ತಶಕ ೧೧೫೦ರ ಬಾಳೇಪುರದ ಶಾಸನವು ಹೊಯ್ಸಳ ನರಸಿಂಗದೇವನು ಶಿಯಲ್‌ನಾಡಿನ ಮೇಲೆ ಆಕ್ರಮಣ ನಡೆಸಿರುವ ಸಂಗತಿಯನ್ನು ತಿಳಿಸುವುದರೊಂದಿಗೆ, ಅವರ ವಿರುದ್ಧ ಅಣ್ಣಾಯನ್ನಳ್ಳಿ ಎಂಬಲ್ಲಿ ನಡೆದ ಕದನದಲ್ಲಿ ಇಲ್ಮೆಯಾಂಡ ದೇವನೆಂಬುವನು ಮಡಿದ ವಿವರವನ್ನು ನೀಡುತ್ತದೆ. ಈ ಶಾಸನದ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಿಗಲನಾಡು ಪ್ರದೇಶ ಕ್ರಿ.ಶ. ೧೧೫೦ರ ಕಾಲಕ್ಕೂ ಹೊಯ್ಸಳರ ನೇರ ಆಳ್ವಿಕೆಗೆ ಒಳಪಟ್ಟಿರಲಿಲ್ಲ ಎಂದು ಹೇಳಲು ಅವಕಾಶವಿದೆ. ಹೊಯ್ಸಳರು ತಲಕಾಡಿನಿಂದ ಚೋಳರನ್ನು ಓಡಿಸಿದ ನಂತರವೂ ಕೋಲಾರ ಮತ್ತು ಬೆಂಗಳೂರು ಜಿಲ್ಲೆಯ ಅನೇಕ ಭಾಗಗಳಲ್ಲಿ ಚೋಳರಾಜರ, ಚೋಳ ಅಧಿಕಾರಿಗಳ ಆಡಳಿತ ಮುಂದುವರೆದಿರುವುದಕ್ಕೆ ಶಾಸನಗಳು ಸಾಕ್ಷಿ ನೀಡುತ್ತವೆ. ಅಂತೆಯೇ ಹೊಯ್ಸಳರು ತಮ್ಮ ಹೋರಾಟಗಳನ್ನು ಮುಂದುವರೆಸಿದ್ದು ಕ್ರಿ.ಶ. ೧೧೭೧ರ ಕಾಲಕ್ಕೆ ಸಿಗಲನಾಡು ಅವರ ವಶವಾಯಿತೆಂದು ಹೇಳಬಹುದು. ಆದರೂ ಶಾಸನಗಳಲ್ಲಿ *'ಮುಡಿಗೊಂಡ ಚೋಳಮಂಡಲದ ರಾಜೇಂದ್ರ ಚೋಳ ವಳನಾಡಿನ ಸಿಗಲನಾಡು'* ಎಂದು ಹೆಸರಿಸುವ ಪದ್ಧತಿ ಮುಂದುವರೆದಿತ್ತು. ಕ್ರಿ.ಶ. ೧೧೭೮ರಲ್ಲೂ, ಹಾಗೇ ಕರೆಯಲಾಗಿದೆ. ಆದರೆ ಮುಂದೆ ಕ್ರಿ.ಶ. ೧೨೦೭ರ ನಂತರದ ಹಲವು ಶಾಸನಗಳಲ್ಲಿ ವೀರಬಲ್ಲಾಳ ಸಿಗಲನಾಡು, ಹೊಯ್ಸಳಚ್ಚಿಗಲನಾಡು, ವೀರಾಬಲ್ಲಾಳ ಹೊಯ್ಸಳ ಸಿಗಲನಾಡು ಎಂದು ಕರೆದಿರುವುದನ್ನು ಗಮನಿಸಿದರೆ; ಹೊಯ್ಸಳ ವೀರಬಲ್ಲಾಳನ ಕಾಲಕ್ಕಷ್ಟೆ, ಸಿಗಲನಾಡಿನ ಮೇಲೆ ಅವರು ತಮ್ಮ ಪೂರ್ಣಾಧಿಕಾರವನ್ನು ಪ್ರತಿಷ್ಠಾಪಿಸಿದರೆಂದು ಗ್ರಹಿಸಬಹುದಾಗಿದೆ. ಕ್ರಿ.ಶ. ೧೩೪೦ರವರೆಗೂ ಹೊಯ್ಸಳರ ಆಳಿಕೆ ಈ ಪ್ರದೇಶದ ಮೇಲೆ ಮುಂದುವರೆದಿರುವುದು ಕಂಡುಬರುತ್ತದೆ. ಕ್ರಿ.ಶ. ೧೩೫೧ರ ಎಡಮಾರನಹಳ್ಳಿ ಗ್ರಾಮದ ವೀರಬುಕ್ಕಣ್ಣ ಒಡೆಯನ ಶಾಸನದ ಕಾಲಕ್ಕೆ ಈ ಪ್ರದೇಶದ ಮೇಲೆ ವಿಜಯ ನಗರ ಅರಸರ ಆಳಿಕೆ ಸ್ಥಿರಗೊಂಡಿದ್ದಿತು. ಶಾಸನಗಳಲ್ಲಿ ಕ್ರಿ.ಶ. ೧೬೩೩ರ ವರೆಗೂ ಸಿಗಲನಾಡಿನ ಪ್ರಸ್ತಾಪ ಮುಂದುವರೆ ದಿರುವುದು ಕಂಡುಬರುತ್ತದೆ. ಕ್ರಿ.ಶ. ೧೪೦೦ ಅರಳಾಳು ಗ್ರಾಮದ ಶಾಸನದಲ್ಲಿ ಅರುಳಹಾಳ ರಾಜ್ಯದ ಪ್ರಸ್ತಾಪ ಬಂದಿದೆ. ಇದಕ್ಕೂ ಮೊದಲು ಅರುಳಹಾಳ ಗ್ರಾಮದ ಪ್ರಸ್ತಾಪ ಹಲವು ಶಾಸನ ಗಳಲ್ಲಿ ಬಂದಿದೆ. ಸಿಗಲನಾಡಿನ ಮಹಾಪ್ರಭು ಮಾರಪ್ಪ ಆ ಸ್ಥಳದವನಾಗಿದ್ದನು. ಅವನ ವಂಶೀಯರ ಆಳಿಕೆ ಸಿಗಲನಾಡಿನ ಮೇಲೆ ಕ್ರಿ.ಶ. ೧೪೫೧ರಿಂದಲೇ ಇದ್ದುದು ಕಂಡುಬರುತ್ತದೆ. ಈ ಸಿಗಲನಾಡ ಮಹಾಪ್ರಭು ಮಾರಪ್ಪನಿಗೆ ಸಿದ್ದೆಯ ಮತ್ತು ಚಿಕ್ಕ

ಅಯಿವಣ್ಣ ಎಂಬುವ ಇಬ್ಬರು ಮಕ್ಕಳಿದ್ದ ಬಗ್ಗೆ ಶಾಸನಗಳು ಆಧಾರ ಒದಗಿಸುತ್ತವೆ. ಅನಂತರದಲ್ಲಿ 'ಸಿಗಲನಾಡ ಮಹಾ ಪ್ರಭುಗಳಾಗಿ ಅರುಳಹಾಳ ಊರಗಉಡನ ಸುಪುತ್ರ ಅಲ್ಲಗಉಡ'; ನಂತರದಲ್ಲಿ ವಿಘ್ನೇಶ್ವರ ಒಡೆಯ, ರಾಯ ಒಡೆಯ, .......ಸಣನಾಯಕ ಹಿರಿಯ ಕುಮಾರ.... ದೇವಪ್ಪನಾಯಕ, ದಂಡಗಲ್ಲೂಟ ಮುಂತಾದವರ ಉಲ್ಲೇಖಗಳು ಶಾಸನಗಳಲ್ಲಿ ಬಂದಿದೆ. ಆದರೆ ಕ್ರಿ.ಶ. ೧೧೭೧ ಮತ್ತು ೧೧೭೮ರ ಮುಳ್ಳಳ್ಳಿ ಮತ್ತು ಆಲಹಳ್ಳಿ ಗ್ರಾಮಗಳ ಶಾಸನಗಳಲ್ಲಿ 'ಮಾದೇವ' ಎಂಬುವನು ಸಿಗಲನಾಡನ್ನು ಆಳುತ್ತಿದ್ದ ಎಂದು ಉಲ್ಲೇಖಿಸುತ್ತವೆ. ಕ್ರಿ.ಶ. ೧೨೦೭ರಿಂದ ೧೯೧೪ರ ಅವಧಿಯ ನಾಲ್ಕೈದು ಶಾಸನಗಳಲ್ಲಿ 'ಮಾರದೇವ' ಎಂಬುವನು ಅದೇ ಪ್ರದೇಶವನ್ನು ಆಳುತ್ತಿದ್ದು ಆತನನ್ನು 'ಕಾವೇರಿ ವಲ್ಲಭ'ನೆಂದು ಶಾಸನವೊಂದರಲ್ಲಿ ವರ್ಣಿಸಿದೆ. ಕ್ರಿ.ಶ. ೧೩೧೫ರ ನಂತರದಲ್ಲಿ ಸಿಗಲನಾಡಿನ ಆಳಿಕೆ ಹೊಯ್ಸಳ ವೀರಬಲ್ಲಾಳದೇವರ ಕುಮಾರ ವೀರಸೋಮಯದಂಡನಾಯಕನ ಅಂಕಿತಕ್ಕೆ ನೇರವಾಗಿ ಒಳಪಟ್ಟಿರುವಂತಿದೆ. ಇಲ್ಲಿ ಪ್ರಸ್ತಾಪಿತ ವಾಗಿರುವ 'ಮಾರದೇವ' ಎಂಬುವನು ಮಹಾಪ್ರಭು ಅರುಳಹಾಳದ ಮಾರಪ್ಪನ ವಂಶೀಯನಿಂದ ಭಿನ್ನ.

ಕ್ರಿಸ್ತಶಕ ೧೩೦೦ರ ಮುಳ್ಳಳ್ಳಿ, ೧೪೩೩ರ ಅರಳಾಳು ಗ್ರಾಮದ ಶಾಸನಗಳು ಕ್ರಮವಾಗಿ ಅಗರದ ಬ್ರಹ್ಮೇಶ್ವರ ಮತ್ತು ಅರಳಾಳಿನ ಶ್ರೀನಾರಾಯಣದೇವರ ಪೂಜಾಕೈಂಕರ್ಯಗಳಿಗೆ ದತ್ತಿ ಬಿಟ್ಟ ವಿವರಗಳನ್ನು ದಾಖಲಿಸುತ್ತವೆ. ಅಗ್ರಹಾರ, ಪುರಧರ್ಮ ಹಾಗೂ ವ್ಯಕ್ತಿಗಳಿಗೆ ದತ್ತಿ ನೀಡಿರುವ ವಿವರಗಳನ್ನು ಕ್ರಿ.ಶ. ೧೩೨೦ರ ಹೊಸದುರ್ಗ, ೧೫೦೬ರ ಎಡಮಾರನಹಳ್ಳಿ, ೧೫೬೨ರ ಚನ್ನಸಂದ್ರದೊಡ್ಡಿ, ೧೨೦೭ರ ಮುಳ್ಳಹಳ್ಳಿ, ೧೫೩೦ರ ನಲ್ಲಹಳ್ಳಿ ಗ್ರಾಮಗಳಲ್ಲಿನ ಶಾಸನಗಳು ನೀಡುತ್ತವೆ.

ಈ ನಾಡಿನ ವೀರಗಲ್ಲುಗಳು ಯುದ್ಧ, ಹುಯಲ್ (ಪೆಣ್ಬುಯಲ್?), ಹುಲಿಯೊಡನೆ ಹೋರಾಡಿ ಮಡಿದ ವೀರರ ಸ್ಮಾರಕಗಳಾಗಿದ್ದು ಇಲ್ಲೆಯಾಂಡ, ಅಂಕಯ್ಯನಾಯಕ, ಶಾಮನ್ ಕುಮಾರಾಂಡ, ಸಿದ್ಧೆಯ, ಸೋಮಾಜಿ, ಎಂಬ ವೀರರನ್ನು ಸ್ಮರಿಸುತ್ತಿದ್ದು, ಬಾಳೆಪುರ (೧೧೫೦), ಮುಳ್ಳಳ್ಳಿ (೧೧೭೧), ಆಲಹಳ್ಳಿ(೧೧೭೮), ಅರಳಹಾಳು (೧೪೯೧) ಗ್ರಾಮಗಳಲ್ಲಿ ಇವೆ.

ಕೃಷಿಗೆ ಸಂಬಂಧಿಸಿದ ಕೆರೆ, ಕಾಲುವೆ, ತೂಬುಗಳ ರಚನೆ ಮತ್ತು ನಿರ್ವಹಣೆಗೆ ದತ್ತಿ ನೀಡಿರುವ ವಿವರಗಳು-ಕ್ರಿ.ಶ. ೧೩೧೬ರ ತುಂಗಣಿ ಹಾಗೂ ೧೪೦೦ರ ಅರಳಾಳ ಗ್ರಾಮದ ಶಾಸನಗಳಲ್ಲಿ ಬಂದಿವೆ. ಸಿಗಲನಾಡಿನ ವಾಣಿಜ್ಯ ಮತ್ತು ವಣಿಕರ ಚಟುವಟಿಕೆಗಳ ಬಗ್ಗೆ ಕ್ರಿ.ಶ. ೧೪೫೫ರ ನಾಯಕನಹಳ್ಳಿ, ೧೩೧೪ರ ಮರಳೇಬೇಕುಪ್ಪೆ, ೧೩೩೭ರ ಚಿಕ್ಕಕೊಪ್ಪ ಹಾಗೂ ೧೬೩೩ರ ದೊಡ್ಡಕೊಪ್ಪ ಗ್ರಾಮಗಳ ಶಾಸನಗಳು ಬೆಳಕು ಚೆಲ್ಲುತ್ತವೆ.

**ಹೀಗೆ ತನ್ನ ಮೂಲ ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ರೂಪತಾಳಿ ನಾಮಾಂಕಿತಗೊಂಡಿದ್ದ ಸಿಗಲನಾಡು, ಒಂದು ಮಟ್ಟದವರೆಗೆ ಆ ನಾಡಿನ ರಾಜಕೀಯ ಹಾಗೂ ಸಾಂಸ್ಕೃತಿಕ ಬದುಕಿನ ಮೇಲೆ ವಿಶಿಷ್ಟ ರೀತಿಯ ನಿಯಂತ್ರಣವನ್ನು ಸಾಧಿಸಿ ಪ್ರಭಾವ ಬೀರಿರುವುದನ್ನು ಮೇಲಿನ ವಿವರಣೆಯಿಂದ ಮನಗಾಣಬಹುದಾಗಿದೆ.**

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

**ಎಪಿಗ್ರಾಫಿಯಾ ಕರ್ನಾಟಿಕ** ಸಂ. IX., (ಬೆಂಗಳೂರು ಜಿಲ್ಲೆಯ ಶಾಸನ ಸಂಪುಟ), (ಸಂ.) ಬಿ.ಎಲ್. ರೈಸ್, ಬೆಂಗಳೂರು, ೧೯೦೫

**Bangalore District Gazetteer** (Ed.) Suryanath U Kamat, Bangalore, 1989

**ಕರ್ನಾಟಕ ರಾಜ್ಯ ಗ್ಯಾಸೇಟಿಯರ್** (ಸಂ.) ಸೂರ್ಯನಾಥ ಯು. ಕಾಮತ್ , ಬೆಂಗಳೂರು, ೧೯೮೬

ಎಸ್. ವರದರಾಜನ್, ಡಿ. ರಂಗಯ್ಯ., **ಭಾರತದ ಭೂ ವಿಜ್ಞಾನ**, ಮೈಸೂರು, ೧೯೬೪

* ಭೂಗರ್ಭ ಶಾಸ್ತ್ರದ ರೀತ್ಯಾ 'ಸಿಯಲ್' ಮತ್ತು 'ಸೀಮಾ' ಇವು ಭೂಮಿಯ ಬಹಳ ಆಳದ ಒಳ ಶಿಲಾಪದರಗಳಾಗಿವೆ. ಇವು ಕಬ್ಬಿಣ ಮತ್ತು ಮ್ಯಾಗ್ನೀಸ್‌ಯಂ ಲೋಹಗಳನ್ನು ಹೊಂದಿರುವುದೆಂದು ಗುರುತಿಸಲ್ಪಟ್ಟಿವೆ. (ಈ ವಿಷಯವನ್ನು ನನ್ನ ಗಮನಕ್ಕೆ ತಂದ ನಿವೃತ್ತ ಭೂಗರ್ಭ ಶಾಸ್ತ್ರ ವಿಜ್ಞಾನಿ ಶ್ರೀ. ವಿ. ಪಿ. ಗುರುಮೂರ್ತಿ ಅವರಿಗೆ ಕೃತಜ್ಞತೆಗಳು.)

ಡಾ॥ ಎಚ್.ಆರ್. ರಘುನಾಥ ಭಟ್ *

# ಸ್ವಾದಿ ಎಷ್ಟು ಪ್ರಾಚೀನ?

ಪ್ರಾಚೀನತೆ- ಮತ್ತೆ ಅದರಲ್ಲಿ ತರ, ತಮತೆ-ಅಂದರೆ ಅದಕ್ಕಿಂತ ಇದು 'ಹೆಚ್ಚು ಪ್ರಾಚೀನ' (more ancient) ಎಲ್ಲಕ್ಕಿಂತ ಇದು 'ಅತ್ಯಂತ' ಹೆಚ್ಚು ಪ್ರಾಚೀನ (most ancient) ಎಂಬ ಪರಿಕಲ್ಪನೆ ಅಥವಾ ಭಾವನೆಯು ಆವಾಹನೆ ನಮ್ಮ ಮತ್ತು ನಮ್ಮ ಸುತ್ತಮುತ್ತಿನ ಸ್ಥಳದ ಮಹಾತ್ಮೆಯನ್ನು ಸಹಜವಾಗಿಯೇ ಹೆಚ್ಚಿಸುತ್ತದೆ.

ಸ್ವಾದಿ ಪ್ರದೇಶ ಪ್ರಾಚೀನತೆಯ ನೆಲೆಯಾಗಿದೆ. ಸುಮಾರು ಮೂವತ್ತೈದು ವರ್ಷಗಳ ನನ್ನ ಪರಿವೀಕ್ಷಣೆ, ಪ್ರದಕ್ಷಿಣೆಯ ಹಿನ್ನೆಲೆಯಲ್ಲಿ ನಮ್ಮ ಈಚಿನ ಭೂಪರಿವೀಕ್ಷಣೆ ಫಲಪ್ರದವಾಗಿದೆ. ಪ್ರಾಗ್ ಐತಿಹಾಸಿಕ ಅವಶೇಷಗಳು, ಶಾಸನ, ನಾಣ್ಯ, ವಾಸ್ತು ಶಿಲ್ಪಕೃತಿಗಳು, ಜಾನಪದ ಪರಂಪರೆಗಳು ಪತ್ತೆಯಾಗಿವೆ. ಇವೆಲ್ಲವುಗಳನ್ನಾಧರಿಸಿ ಸ್ವಾದಿಯ ಪ್ರಾಚೀನತೆಯನ್ನು ನಿರ್ಧರಿಸುವುದು ಸಾಧ್ಯವಾಗುತ್ತಿದೆ. ಸೋಂದಾದ ಸುವರ್ಣ ಗರ್ಭದಲ್ಲಿ ಇನ್ನೂ ಅದೆಷ್ಟು ಸ್ವಾರಸ್ಯಕರ, ಕುತೂಹಲಕಾರಿ ಸಂಗತಿಗಳಿವೆ - ಎಂಬುದು ಮೇಲ್ನೋಟದ ತಿರುಗಾಟದಲ್ಲಿ ಗೊತ್ತಾಗುತ್ತದೆ. ಇಲ್ಲಿಯ ಗುಡ್ಡ-ಕಾಡು, ನದಿ-ಝರಿ (ನಾಗಝರಿ) ಗಿರಿಕಂದರಗಳಲ್ಲಿ ಸತತವಾಗಿ ಸುತ್ತಾಡಿದಾಗ ಹಲವು ಪ್ರಾಕ್ತನ ವಸ್ತು ವಿಚಾರಗಳನ್ನು ಪತ್ತೆ ಮಾಡಲಾಗಿದೆ.

ಸ್ಥಳನಾಮವಿಜ್ಞಾನದ ದೃಷ್ಟಿಯಿಂದ ಪರಾಮರ್ಶಿಸಿದಾಗ ಈ ಸ್ಥಳದ ಹೆಸರಲ್ಲಿ ವೈವಿಧ್ಯವಿದೆ. ಸ್ವಾದಿ, ಸೋದೆ, ಸೊದೆ, ಸುಧಾಪುರ (ಅಮೃತಪುರ), ಸೋಮದಾಪುರೀಪುರ), ಸೋಂದಾ (ಸೂಂದಾ), ಸೋಂದಾನಗರ, ಸೋಂದೆ, ಸೊಂದಾ, ಸೋಂದಾಪುರಿ ಹೊನ್ನೆಹಳ್ಳಿ, ಹೊನ್ನಳ್ಳಿ, ಸ್ವರ್ಣವಲ್ಲಿ, ಸ್ವರ್ಣವಲ್ಲೀ ಎಂದು ಮುಂತಾಗಿ ಕರೆಯಿಸಿಕೊಳ್ಳುವ ಈ ಪ್ರದೇಶ ಪ್ರಾಚೀನ ಕಾಲದಿಂದಲೂ ಮಾನವನು ನೆಲೆಸಿದ್ದ ನೆಲವೀಡಾಗಿದೆ. ಇಲ್ಲಿಯ ಶಾಲ್ಮಲಾ ನದಿಗುಂಟ ನದಿಯ ಕೊಲಂಕಷವಾಗಿ ನೋಡಿದಾಗ, ಹಳೆಮಠವಿದ್ದ ನೆಲಗಟ್ಟಿನ ಬಳಿ ಹಳೆ ಸಹಸ್ರಲಿಂಗ ಎಂದು ಕರೆಸಿಕೊಂಡ ತಾಣದಲ್ಲಿ ಪ್ರಾಗ್ಐತಿಹಾಸಿಕ ಕುರುಹುಗಳು ದೊರೆತಿವೆ. (ಅಲ್ಲೊಂದು ಪುಟ್ಟ ಅಣೆಕಟ್ಟು ಯೋಜನೆಯನ್ನು ಸರ್ಕಾರ ಹೊಂದಿತ್ತು. ಹಿಂದಿನ ಹಿರಿಯ ಸ್ವಾಮೀಜಿ ಸರ್ವಜ್ಞೇಂದ್ರ ಸ್ವಾಮಿಗಳು ಅಂದಿನ ಮುಖ್ಯ ಮಂತ್ರಿಗಳಿಗೆ ಸೂಚನೆ ನೀಡಿ, ಈ ಕೆಲಸವನ್ನು ನಿಲ್ಲಿಸಿದ್ದರಿಂದ ಆ ನೆಲಜಲದೊಟ್ಟಿಗೆ ಸಂಸ್ಕೃತಿಯ ಕುರುಹುಗಳೂ ಉಳಿದವು. ಇಲ್ಲವಾದರೆ ಸಂಪೂರ್ಣ ಮತ್ತು ಶಾಶ್ವತ ಜಲಾವೃತ್ತವಾಗಿ ಬಿಡುತ್ತಿತ್ತು!) ಈಗಲೂ ಮಳೆಗಾಲವಿಡೀ ಜಲಾವೃತಗೊಳ್ಳುವ ಈ ಬಂಡೆಪ್ರದೇಶದ ಪ್ರಾಚೀನ ಕುರುಹುಗಳನ್ನು ನದಿಬೇಸಿಗೆಯಲ್ಲಿ ಮಾತ್ರ ನೋಡಬಹುದಾಗಿದೆ. ಶಾಲ್ಮಲಾ ನದಿಯಲ್ಲಿಯ ಬಂಡೆಗಳ ಸಂದಿಗೊಂದಿಗಳಲ್ಲಿ ಹುಡುಕಾಡಿ, ಕೈಯಾಡಿಸಿ, ಮತ್ತೆ ಮತ್ತೆ ನೋಡಲಾಗಿ ಸಿಕ್ಕ ಕುರುಹುಗಳು ನಮ್ಮನ್ನು ಬೆರಗುಗೊಳಿಸಿದವು.

ಪ್ರಾಗ್ ಐತಿಹಾಸಿಕ ಬಂಡೆ ಚಿತ್ರಗಳು, ಬ್ರಾಹ್ಮಿ ಬರಹಗಳು, ಕನ್ನಡ ಶಾಸನ, ತಿಗಳಾರಿ ಬಂಡೆ ಶಾಸನ, ಶ್ರೀ ಚಕ್ರದ ಬಂಡೆಶಿಲ್ಪ, ಯೋಗಿಶಿಲ್ಪ, ನಂದಿ, ಶಿವಲಿಂಗ, ಪಾದ ಇತ್ಯಾದಿ ಹಲವು ಕಂಡರಣೆಗಳು ಬಂಡೆಯ ಮೇಲೆ ಕಂಡವು. ಅವುಗಳಲ್ಲಿ ಅತ್ಯಂತ ಪ್ರಾಚೀನವಾದ ಬಂಡೆ ಚಿತ್ರಗಳ ವಿವರಣೆಗೆ ಮಾತ್ರ ಈ ಸಂಪ್ರಬಂಧ ಸೀಮಿತವಾಗಿದೆ.

*ಶಾಲ್ಮಲೆಯ ನದಿಬಂಡೆಯ ಮೇಲೆ ಕೆತ್ತಿರುವ / ಕೊರೆದಿರುವ ಈ ಪ್ರಾಗ್ ಐತಿಹಾಸಿಕ ಚಿತ್ರವನ್ನು ಪ್ರಧಾನವಾಗಿ ಗೂಳಿಯಾಗಿದೆ. ಇದನ್ನು ಬಂಡೆಯ ಪಾರ್ಶ್ವದಲ್ಲಿ ಕೆತ್ತಲಾಗಿದೆ. ನಾಲ್ಕು ಬಲಿಷ್ಠಗೂಳಿಗಳು ಸಾಲಾಗಿ ಹೊರಟಿವೆ. ಅವುಗಳ ಹಿಂದೆ ಮತ್ತೆ ನಾಲ್ಕು ಪುಟ್ಟಗೂಳಿಗಳೂ ಅನುಸರಿಸಿ ನಡೆದಿವೆ. ಇವುಗಳ ಹಿಂದೆ ಪ್ರಾಣಿಪಾದದಂತಿರುವ ಪಾದಗಳುಳ್ಳ ಮನುಷ್ಯ (ಗೋಪಾಲಕ?) ಪ್ರಾಯಶಃ ಭುಜದ ಮೇಲೆ ದೊಣ್ಣೆ ಅಡ್ಡಲಾಗಿಟ್ಟು ಅದನ್ನು ಎರಡೂ ಕೈಗಳಿಂದ ಹಿಡಿದು ನಿಂತಿರುವುದು. ಈ ಚಿತ್ರ ಸಂಯೋಜನೆಯು ಅತ್ಯಂತ ಕುತೂಹಲಕಾರಿ ಸಂಗತಿಯೆಂದರೆ ಗೂಳಿಗಳ ಪಾದಗಳಿಂದ ಹೊರಟ ವಿಚಿತ್ರ ಗುರುತುಗಳು ಮತ್ತು ಮಂಡಲಗಳು. ಜೋಡುಗೆರೆಗಳಿಂದ ರಚಿಸಿದ ಈ ಗುರುತುಗಳು ಅರ್ಥವಿವರಣೆಯ ದೃಷ್ಟಿಯಿಂದ ಇನ್ನೂ ಶಾಶ್ವತವಾಗಿಯೇ ಉಳಿದಿವೆ. ಒಟ್ಟು ಎಂಟು ಗೂಳಿಗಳ ಪಾರ್ಶ್ವನೋಟ. ಅವುಗಳ ಕೆಳಗಿನ ಗ್ರಂಥಿ. ಜೊತೆಗೆ ಹಿಂಗಡೆಯಲ್ಲಿ ನಿಂತ ಮಾನವ, ಅತ್ಯಂತ ಕುತೂಹಲಕಾರಿಯಾಗಿದೆ. ಕರ್ನಾಟಕದ ಇತರೆಡೆಗಳಲ್ಲಿ ಕಂಡು ಬಂದ ಗೂಳಿ ಚಿತ್ರಗಳೊಟ್ಟಿಗೆ ಹೋಲಿಸಿ ನೋಡಬಹುದು. ಇವು*

---

* ಪ್ರಾಧ್ಯಾಪಕರು, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩.

ಪ್ರೊ॥ ಕ.ವೆಂ. ರಾಜಗೋಪಾಲ *

# ಕಿಗ್ಗ – ಒಂದು ಟಿಪ್ಪಣಿ

ಕಿಗ್ಗ-ಎಂಬುದು ಇಂದಿಗೂ ಬಳಕೆಯಿರುವ ಒಂದು ಸ್ಥಳನಾಮ. ಶೃಂಗೇರಿಯಿಂದ ಸುಮಾರು ೭-೮ ಕಿ.ಮೀಟರುಗಳ ಅಂತರದಲ್ಲಿರುವ ಕ್ರಿ.ಶ. ೭ನೇ ಶತಮಾನದ ಒಂದು ಕ್ಷೇತ್ರ. ಇದಕ್ಕೆ ಸುರಕ್ಷಿತವಾದ ೫-೬ ಶಾಸನಗಳ ದಾಖಲೆಗಳಿವೆ. ಇಷ್ಟು ಹಳೆಯ ಶಾಸನಗಳಲ್ಲಿ ಈ ಸ್ಥಳನಾಮವನ್ನು ಗುರುತಿಸಲು ರೈಸ್ ಸಾಹೇಬರಿಂದ ಮೊದಲಾಗಿ ಅನೇಕರ ಪ್ರಯತ್ನಗಳಾಗಿವೆ. ಆದುದರಿಂದ ಕಿಗ್ಗ ಎಂಬುದರ Back form ಕಿಟ್ಗ – ಎಂದು ಗುರುತಿಸಿದಂತಿದೆ. ಆದರೆ ಬಹು ಸೂಕ್ಷ್ಮವಾದ ತಪ್ಪು ಇಲ್ಲಿ ಸೇರಿಕೊಂಡ ಕಾರಣ ಈ ಕಿಟ್ಗ – ಎಂಬುದು ತಪ್ಪಾದ ಗುರುತಾಗಿದೆ.

ಈಗಲೂ ಕಿಗ್ಗ-ಕೊಪ್ಪ ತಾಲ್ಲೂಕಿಗೆ ಸೇರಿದೆ. ಕೊಪ್ಪ ೩೭, ೩೮, ೩೯ನೇ ಶಾಸನಗಳಲ್ಲಿ ಅನುಕ್ರಮವಾಗಿ ಆಧಾರಗಳಿಂತಿವೆ: *೧

೧. **ಕಿಟ್ಗಾನೇಶ್ವರದಾ ದೇವರ ಪರಿವರಿಯ....**

೨. **ಕಿಟ್ಗಾನದೇವಕೆ ಎಲ್ಲಮಾನ್....**

೩. ಇದರಲ್ಲಿ **ಕಿಟ್ಗಭಟರಿಂಗೆ**

ಎಂದು ತ್ರುಟಿತವಾಗಿರುವ ಭಾಗದಲ್ಲಿ ಸೇರಿಸಲಾಗಿದೆ. ಇಲ್ಲಿಯೂ '**ಕಿಟ್ಗಾನ ಭಟರಿಂಗೆ**' ಎಂದು ಸೇರಿಸಬೇಕಾಗಿದ್ದುದನ್ನು ಕಿಟ್ಗ-ಎಂದು ತಪ್ಪು ಮಾಡಲಾಗಿದೆ.

ಏಕೆಂದರೆ ಕಿಟ್ಗ'-ಪ್ರಯೋಗವು ಹಳಗನ್ನಡಕ್ಕೆ ಸೇರಬಹುದೇ ಹೊರತು ಪೂರ್ವಹಳಗನ್ನಡಕ್ಕೆ – ತಗುವುದಿಲ್ಲ. ವಾಸ್ತವವಾಗಿ ಪೂ.ಹ. ಕನ್ನಡದ ಗಡುವನ್ನು ಕವಿರಾಜ ಮಾರ್ಗಕಾರನ ಅಂದರೆ ಕ್ರಿ.ಶ. ೮೫೦ರ ವೇಳೆಯ ಕವಿರಾಜಮಾರ್ಗದ ಹೇಳಿಕೆಯ ಮೇಲೆ ಗುರುತಿಸಬೇಕಾಗುತ್ತದೆ. ಏಕೆಂದರೆ ಅದರಲ್ಲಿ **ಪಟಿಗನ್ನಡಮಂ ಪೊಲಗೆಡಿಸಲದೇಕೆ** ಎಂದು ಹೇಳಲಾಗಿದೆ. ಇದು ಪೂ.ಹ.ಗನ್ನಡದ ಬದಲಾವಣೆಯ ಅಂದರೆ ಹಟಗನ್ನಡದ ಮೊದಲ ಹೆಜ್ಜೆಯ ಸುಳುಹು ಎಂದರೆ ತಪ್ಪಾಗಲಾದರು.

ಅಲ್ಲದೆ ಸಂಸ್ಕೃತ ಪ್ರಾಕೃತ ಪದಗಳು ಈ ೯ನೇ ಶತಮಾನದ ಆದಿಯಿಂದ ಮುಂದಕ್ಕೆ ಅದರಲ್ಲೂ ಪಂಪನ ಕೃತಿಗಳಲ್ಲಿ ಹಟಗನ್ನಡದ ನಿಶ್ಚಿತ ನೆಲೆಯನ್ನು ಕಾಣಲು ಸಾಧ್ಯವಿದೆ. ಆದುದರಿಂದ 'ಕಿಟ್ಗಾನ' ಎಂಬುದನ್ನು ಸರಿಯಾಗಿ ಪರಿಶೀಲಿಸಬೇಕಾಗಿದೆ.

ಇದರಲ್ಲಿ ಪೂ.ಹ. ಗನ್ನಡ ರೂಪವಾದ 'ಕಿಟ್' ಎಂಬುದನ್ನು ಮೂಲವಾಗಿ ಪರಿಗಣಿಸಬೇಕಾಗುತ್ತದೆ. ಇದಕ್ಕೆ ಶಬ್ದಮಣಿ ದರ್ಪಣಕಾರನಲ್ಲಿ ಆಧಾರ ಸಿಕ್ಕುತ್ತದೆ.

೧. ಪೂ.ಹ. ಗನ್ನಡ ಪದಗಳು ವ್ಯಂಜನಾಂತವಾಗಿದ್ದು ಹಳಗನ್ನಡದಲ್ಲಿ ಕ್ರಮೇಣ ಸ್ವರಾಂತವಾಗುತ್ತವೆ.

೨. ಸಂಸ್ಕೃತ ಪದಗಳು ಶಾಸನಗಳ ಆಧಾರದಿಂದ ಸಂಗ್ರಹಿತವಾಗಿ ಬಳಕೆಗೆ ಬರುತ್ತವೆ- ಆದುದರಿಂದಲೇ 'ಕಿಟ್ಗ' ಎಂಬುದು ಪೂ.ಹ.ಗನ್ನಡದಲ್ಲಿ ಅಸಾಧ್ಯ.

೩. ಈ ಬಗೆಯಲ್ಲಿ ಕಿಟ್ಗಾನೇಶ್ವರದಾ – ಎಂಬುದು ಕಿಟ್+ಗಾನೇಶ್ವರದಾ ಆಗುತ್ತದೆ. ಆದುದರಿಂದ 'ಗಾನೇಶ್ವರ' ಎಂಬುದು ಪ್ರಾಕೃತ+ಸಂಸ್ಕೃತ ಸಂಬಂಧದ ಬಳಕೆಯ ಪದವಾಗುತ್ತದೆ.

೪. ಹೀಗೆ ಕಿಗ್ಗ-ಎಂಬುದಕ್ಕೆ ಗಾನೇಶ್ವರ ಎಂಬುದೇ ಸ್ಥಳನಾಮವಾಗಿದ್ದಿರಬೇಕು !

ಏಕೆಂದರೆ ಕೊಪ್ಪ ೩೭-೩೮ ಎರಡೂ ಶಾಸನಗಳಲ್ಲಿ 'ಕಿಟ್ಗಾನ' – ಎಂಬ ಪ್ರಯೋಗವಿದೆ. ಮತ್ತು ರೈಸ್ ಸಾಹೇಬರು ಇದನ್ನು ಸರಿಯಾಗಿ ಗುರುತಿಸಿದ್ದಾರೆ. ಇಲ್ಲಿಯೂ:

ಕಿಟ್-ಗಾನ + { ಈಶ್ವರ / ದೇವ } + { ೧ ರ ಪ್ರತ್ಯಯ / ೨ ರ ಪ್ರತ್ಯಯ }

ಆದುದರಿಂದ 'ಕಿಟ್ಗಾನದೇವರ' ಎಂಬುದರಲ್ಲಿಯೂ 'ಗಾನ' ಎಂಬುದು ಸಾಮಾನ್ಯವಾಗಿ ಉಳಿಯುತ್ತದೆ. ಇದಕ್ಕೆ ಈಶ್ವರ ಅಥವಾ ದೇವ – ಸೇರುವಲ್ಲಿ ವ್ಯಾಕರಣ ದೋಷವಿರುವುದಿಲ್ಲ. ಹಾಗಾದರೆ 'ಗಾನ' ಎಂಬುದನ್ನು ಪರಿಶೀಲಿಸಬೇಕಾಗುತ್ತದೆ ಅಷ್ಟೆ.

* ೪೧, ೮೦ ಅಡಿ ರಸ್ತೆ, ಎಂ.ಐ.ಜಿ. ಕೆಂಗೇರಿ ಉಪನಗರ ೨ನೇ ಹಂತ, ಬೆಂಗಳೂರು – ೬೦

ಇದರಲ್ಲಿ ಗಾನ = ಜ್ಞಾನ ಎಂಬುದನ್ನು ಬೇರೆಯ ಆಧಾರಗಳಿಂದ ಗುರುತಿಸಬಹುದಾಗಿದೆ. ಮತ್ತು ಶೃಂಗೇರಿಯ ಸ್ವಾಮಿಗಳ ಪರಂಪರೆಯಿಂದಲೂ ಇದು ತಿಳಿಯುತ್ತದೆ. ಅದರಲ್ಲಿ ಅಂದರೆ 'ಶೃಂಗೇರಿ ಜಗದ್ಗುರು ಪರಂಪರೆ ಮತ್ತು ಪೀಠಾಧಿಪತ್ಯ-(ಪರಿಶಿಷ್ಟ ೪ ಶೃಂಗೇರಿ ಧರ್ಮ ಸಂಸ್ಥಾನ, ಡಾ॥ ಎ.ಕೆ. ಶಾಸ್ತ್ರಿ) ಇದರಂತೆ ೬ ಮತ್ತು ೭ನೇ ಯವರಾಗಿ 'ಜ್ಞಾನಗಿರಿ' ಆಚಾರ್ಯ ಮತ್ತು ಸಿಂಹಗಿರಿ ಆಚಾರ್ಯ - ಎಂಬ ನಾಮಧೇಯಗಳಿವೆ. ಇವು ಈ ವಾರ್ತಿಕಕಾರರು ಸ್ಥಳನಾಮ ನಿರ್ದೇಶಿತರಾಗಿ ತಮ್ಮನ್ನು ತಮ್ಮ ವಾರ್ತಿಕೆಗಳಲ್ಲಿ ಕರೆದುಕೊಂಡಿರುವುದೂ ಇದೆ.

ಈ ಜ್ಞಾನಗಿರಿ ಮತ್ತು ಸಿಂಹಗಿರಿಗಳು ಈ ಕಿಗ್ಗದ ಪರಿಸರದ 'ಗಿರಿ'ಗಳ ಹೆಸರುಗಳೂ ಆಗಿವೆ. ಮತ್ತೊಂದು ೧೪ನೇ ಶತಮಾನದ ಪ್ರಸಿದ್ಧ ಕೃತಿ 'ಜ್ಞಾನೇಶ್ವರೀ' - ಜ್ಞಾನ ದೇವರು ವಿರಚಿತ ಮರಾಠಿ ಗೀತಾ ವ್ಯಾಖ್ಯಾನವಾಗಿದೆಯಷ್ಟೆ.

ಈ ವ್ಯಾಖ್ಯಾನದ ಧಾರ್ಮಿಕ ಕರ್ತೃ ಶ್ರೀ ಗಣೇಶನೆಂಬುದನ್ನು ಅದರ ಪ್ರಾರ್ಥನಾ ಪದ್ಯಭಾಗದಿಂದ ಗುರುತಿಸಬಹುದು. ಇದರ ಕರ್ತೃವಾದ ಜ್ಞಾನದೇವ- ಎಂಬುದು ಸುಪ್ರಸಿದ್ಧ. ಇಷ್ಟು 'ದೂರ' ಏಕೆಂದರೆ 'ಗಣೇಶ' ಎಂಬುದು ಮರಾಠಿಯಲ್ಲಿ ನಿಶ್ಚಿತವಾಗಿ ಉಳಿದುಬಂದಿದೆ. ಇವರು ಚಿತ್ತಪಾವನರು. ಮನೆಯಲ್ಲಿ ಮರಾಠಿ ಆಡುವವರು. ಮತ್ತು ಶೃಗೇರಿಯ ಕಿಗ್ಗದ ಪೂಜಾರಿ ವರ್ಗದಲ್ಲಿ ಇಂದಿಗೂ ಕಂಡುಬರುವ ಸಂಸ್ಕೃತ ವಿದ್ವಾಂಸರು ಮತ್ತು ಕಿಗ್ಗ, ಶೃಂಗೇರಿ ಎರಡೂ ಕಡೆಗಳಲ್ಲಿ ಗಣೇಶನ - ಪೂಜಾರಿಗಳೂ ಆಗಿದ್ದಾರೆ.

ಇದರಿಂದಾಗಿ ನಮ್ಮ ಮೇಲಿನ ಆಧಾರಗಳಲ್ಲಿ ಕೊಪ್ಪ ೩೮ರಲ್ಲಿ ಕಂಡುಬರುವ ಕಿಟ್ಣಾನ ದೇವಕೆ-ಎಂಬುದರಲ್ಲಿ ಮತ್ತು ಕೊಪ್ಪ ೩೯ರಲ್ಲಿರುವ ಕಿಟ್ಣಾನ ಭಟರಿಂಗೆ-ಎಂಬುದನ್ನು ಗುರುತಿಸಿ ಗಾನ=ಜ್ಞಾನ ಎಂದು ಪರಿಗಣಿಸಬೇಕಾಗುತ್ತದೆ. ರೈಸ್ ಸಾಹೇಬರು 'ಕಿಟ್ಣಾನೇಶ್ವರ'ರ ಎಂದು ಗುರುತಿಸಿರುವುದನ್ನು 'ಗಾನೇಶ್ವರ' ಎಂಬ ಸ್ಥಳನಾಮವಾಗಿ ಮತ್ತು 'ಗಾನದೇವರ' ಎಂಬ ಕಿಗ್ಗದ ದ್ವಿಬಾಹು ಗಣೇಶನನ್ನು ಗುರುತಿಸಿದರೆ ಸರಿಹೋಗುತ್ತದೆ. ಇಲ್ಲಿ ಒಂದು ಸ್ಥಳನಾಮ ಮತ್ತೊಂದು ಅದಕ್ಕೆ ಆಧಾರವಾದ ದೈವದ ನಾಮ! ಇದನ್ನು ಲಿಪಿಶಾಸ್ತ್ರದ ಆಧಾರದಿಂದಲೂ ಪರಿಗಣಿಸಬಹುದು. ಅದಕ್ಕೆ ಜ್ಞಾನ-ಎಂಬುದನ್ನು ಶಬ್ದಶಾಸ್ತ್ರದ ಆಧಾರದಿಂದ (phoneticsನ) ಕನ್ನಡದಲ್ಲಿ ಗ್ನಾನ ಎಂದೂ ಬರೆಯುವಲ್ಲಿ ಜ್ಞಾನ, ಎಂದು ಗುರುತಿಸಲಾಗಿದೆಯಷ್ಟೆ. ಕವರ್ಗ ಮತ್ತು ಚವರ್ಗಗಳ ಅನುನಾಸಿಕಗಳು ಙ ಮತ್ತು ಞ ಎಂಬುವು ವ್ಯಾಕರಣವು ಆಧಾರ ದಿಂದ ಸಿಗುತ್ತವೆ.

ಇಲ್ಲಿ ಉಚ್ಚಾರಕ್ಕೂ, ಲಿಪಿಯನ್ನು ಗುರುತಿಸುವುದಕ್ಕೂ ಅರ್ಥಾಂತರ ವ್ಯತ್ಯಾಸವಿದೆಯಷ್ಟೆ. (ಬೆರಕೆಯಾಗಿದೆ!). ವಾಸ್ತವ ವಾಗಿ ಈ 'ಜ್ಞಾನ' ಎಂಬುದರ ಉಚ್ಚಾರವು ಕನ್ನಡದಲ್ಲಿ 'ಬೆರಕೆ'ಯಿಂದ ಕೂಡಿದಂತಾಗಿದೆ. ಆದುದರಿಂದ 'ಗಾನೇಶ್ವರ' ಎಂಬುದನ್ನು ಗುರುತಿಸುವಲ್ಲಿ ಈ ಕೈ ಬೆರಕೆಯು ಕಂಡುಬರುತ್ತದೆ ಮತ್ತು ಗಾನ-ಎಂಬುದರಲ್ಲಿ, ಜ್ಞಾನ-ಎಂಬುದನ್ನು ಗುರುತಿಸ ಬಹುದಾಗಿತ್ತು.

ಚಿತ್ತಪಾವನರು 'ಗಣೇಶ' ಎಂಬುದನ್ನೇ ಬಳಸುತ್ತಾರೆ. 'ಜ್ಞಾನೇಶ್ವರಿ ಅವರ ಪವಿತ್ರ ಗ್ರಂಥವೂ ಆಗಿದೆ-ಆದುದರಿಂದ ಕೊಪ್ಪ ೩೭,೩೮ರಲ್ಲಿರುವ ಸ್ಥಳನಾಮ ಮತ್ತು ದೈವನಾಮಗಳನ್ನು ಜ್ಞಾನೇಶ್ವರ ಮತ್ತು ಜ್ಞಾನದೇವ - ಎಂದು ಗುರುತಿಸಿದರೆ ತಪ್ಪಾಗುವುದಿಲ್ಲ. ಒಟ್ಟಿನಲ್ಲಿ ಕಿಟ್ಣಾನೇಶ್ವರ ಮತ್ತು ಕಿಟ್ಣಾನ ದೇವ ಎಂಬ ಪೂರ್ವಹಳಗನ್ನಡ ಪ್ರಯೋಗಗಳನ್ನು ಪುನರ್ ವಿಮರ್ಶೆಗೆ ಒಳಪಡಿಸಿ, ವ್ಯಾಕರಣಗಳೂ ಆದನ್ನು ಗುರುತಿಸಬೇಕಾಗುತ್ತದೆ.

ಸ್ಥಳನಾಮ-ಜ್ಞಾನೇಶ್ವರ. ಏಳನೇ ಶತಮಾನದಲ್ಲಿ ಗಾನೇಶ್ವರ ಎಂದು ಸಾಮಾನ್ಯರೂ ಜ್ಞಾನೇಶ್ವರ ಎಂದು ಸಂಸ್ಕೃತರೂ ಕರೆದಿರಬೇಕೆಂಬುದಕ್ಕೆ ಮೇಲಿನ ತರ್ಕಬದ್ಧತೆಯನ್ನು ತೋರಿಸಲಾಗಿದೆ.

*ಈ ಹೆಸರಿನ ಸಾಧ್ಯತೆಯನ್ನು ಗುರುತಿಸಲು ಇದೇ ಕಿಗ್ಗದ ಪರಿಸರದಲ್ಲಿ ಆಧಾರಗಳಿವೆ. ೧. ನರಸಿಂಹಪರ್ವತ ಎಂಬ ಒಂದು ಶಿಖರ - ಇದೊಂದು ಪುರಾತನ ತೀರ್ಥಕ್ಷೇತ್ರ ೨. ಕಿಗ್ಗವು 'ಜ್ಞಾನಗಿರಿ' ಯೆಂಬ ಪುಣ್ಯಕ್ಷೇತ್ರ. ಈಗಿನ ಗಣೇಶ - ದ್ವಿಬಾಹು ಮತ್ತು 'ಉಚ್ಛಿಷ್ಟ' ಸ್ವರೂಪದ್ದು. ಇಲ್ಲಿಯ 'ಈಶ್ವರ'ರೂಪ ಮತ್ತು 'ಶಾಂತಾದೇವಿ' ವಿಗ್ರಹಗಳು ಪುರಾಣಕ್ಕೆ ಸೇರಿದುವಾಗಿ-ರಾಮಾಯಣದ ವಿಭಾಂಡಕ ಮುನಿಯ ಮತ್ತು ಆತನ ಮಗ ಋಷ್ಯಶೃಂಗರಿಗೆ ಸಂಬಂಧಿಸಿದ್ದು, ವಾಸ್ತವವಾಗಿ ನಗ್ನ - ಆರಾಧನೆಗೆ ಸೇರಿದವಾಗಿವೆ. ಕಿಗ್ಗ -ಎಂಬುದು ಇಂದಿಗೆ 'ಮರ್ಕಲ್' ಎಂಬ ಗ್ರಾಮಸ್ಥರ ಜ್ಞಾನಸಂಗ್ರಹದಲ್ಲಿ ಇರುವ ಒಂದು ಏಳನೆಯ ಶತಮಾದ ದೇಗುಲಕ್ಷೇತ್ರವಾಗಿದೆ. ಈ 'ಮರ್ಕಲ್' ಎಂಬುದರ ಪರಿಶೀಲನೆಯು ಮತ್ತೊಂದು ಶೋಧನೆಗೆ ಒಳಗಾಗಬೇಕಾದ ಸ್ಥಳನಾಮವಾಗಿದೆ. ಕೊನೆಯದಾಗಿ ಜ್ಞಾನೇಶ್ವರ ಎಂಬ ಸ್ಥಳನಾಮವನ್ನು 'ಕಿಗ್ಗ'ಕ್ಕೆ ಹಚ್ಚುವಲ್ಲಿ ಆಶ್ಚರ್ಯವುಂಟಾಗಬಹುದಷ್ಟೆ. ಆಗುಂಬೆಯ ಪರಿಸರದಲ್ಲಿ ಸುಮಾರು ೧೧ನೇ ಶತಮಾನಕ್ಕೆ ಅನ್ವಯವಾಗುವ 'ಸೋಮೇಶ್ವರ' ಎಂಬುದೂ ಇರುತ್ತದೆ. ಆದುದರಿಂದ ಈ ಗಾನೇಶ್ವರ = ಜ್ಞಾನೇಶ್ವರ, ಎಂಬುದು ಸಾಧುವಾಗಿ ಕಂಡುಬರುತ್ತದೆ.*

ಮತ್ತೊಂದೆರಡು ವಿವರಗಳು: ೧. ದಿವಂಗತ ಪ್ರೊ॥ ದೊ.ಲ. ನರಸಿಂಹಾಚಾರ್ಯರು ಹರಿಶ್ಚಂದ್ರಕಾವ್ಯದಲ್ಲಿ ಬರುವ ಗಾನರಾಣಿಯರ ಪ್ರಸಂಗದಲ್ಲಿ - ಗಾಣರಾಣಿಯರು ಎಂದು ಇರಬೇಕೆಂದು ಸೂಚಿಸಿದ್ದಾರೆ. ಆದುದರಿಂದ ಗಾನ=ಗಾಣ=ಜ್ಞಾನ ಎಂದು ಹೇಳಬಹುದು. ಅಂದರೆ ಗಾನೇಶ್ವರ = ಜ್ಞಾನೇಶ್ವರ ಆಗುತ್ತದೆ. ೨. ವಿನಾಯಕನನ್ನು ತಾಂತ್ರಿಕ ದೃಷ್ಟಿಕೋಣದಿಂದ ಪರಿಗಣಿಸುವಲ್ಲಿ ಜ್ಞಾನ - ಸಿದ್ಧಿ ಮತ್ತು ಬುದ್ಧಿ ಎಂಬ (ಪ್ರತಿಮೆಯಲ್ಲಿಯೂ ಇದು ರೂಪಿತವಾದತಿದೆ) ಅಂಶಗಳಿಂದ ಗುರುತಿಸಬಹುದು. ೩. ಚಿತ್ತಪಾವನರಲ್ಲಿ ಇಂದಿಗೂ ಜ್ಞಾನೇಶ್ವರ ಮತ್ತು ಗಣಪತಿ - ಸಾಮಾನ್ಯವಾಗಿ ಬಳಕೆಯಾಗುತ್ತಿವೆ. ಅಲ್ಲದೆ ಜ್ಞಾನದೇವ ಎಂಬುದು ಗಣೇಶನಿಗೆ ಅನ್ವಯವಾಗುತ್ತದೆ.

'ಕಿಗ್ಗ'ವು ಪುರಾತನ ಹೆಸರಲ್ಲವಾದರೂ ಇದೊಂದು ಪುರಾತನ ಅಂದರೆ ಕದಂಬರು ಮತ್ತು ಚಾಲುಕ್ಯರಕಾಲದ ಪಾಶುಪತ ಕ್ಷೇತ್ರವಾಗಿದೆ.

೧. ದೇಗುಲದಲ್ಲಿ ಲೈಂಗಿಕ ಆರಾಧನೆಯು ಮುಖ್ಯವಾಗಿ ಪ್ರತಿಮಾ ಸಂಕೇತಗಳು ಇಲ್ಲಿಯ ಬಳಕೆಯಲ್ಲಿವೆ ೨. ಯೋಗಿನಿಯರು ಸಾಧನೆಗೆ ಬಳಸುವರೆಂದು ಪ್ರತೀತಿಯಿರುವ ಹಿಡಿಯಿಲ್ಲದ ಗಂಟೆಯಂತ್ರ ಮೇಲಿನ ಆಕಾರವಾದರ, ಒಳಗಿನ ನಾಲಿಗೆಯೂ ಇರದಂಥ ಕಂಚಿನ 'ತಾರಾ' ಮಾಲೆಯಿದೆ. ೩. ದೇಗುಲದ ಗರ್ಭಗುಡಿಯ ಹಿಂಬದಿಗೆ ಯೋನಿಯ ಸಂಕೇತವು ಆಚರಣೆಗೆ ಸಂಬಂಧಿಸಿದಂತಿರುವುದನ್ನು ಗುರುತಿಸ ಬಹುದು. ೪. ಇಲ್ಲಿಯ ಪ್ರಧಾನ 'ಲಿಂಗ'ವು ಲೈಂಗಿಕ ಸಂಬಂಧವನ್ನು ಒಳಗೊಂಡಿರುವುದರಿಂದ ಆರಾಧನೆಗೆ 'ದಾಂಪತ್ಯ'ದ 'ಮಂತ್ರಪೂತ'ವು ಸೇರಿಕೊಳ್ಳುತ್ತದೆ. ೫. ಅಲ್ಲದೆ ಇಲ್ಲಿಯ ಗಣೇಶ ವಿಗ್ರಹವು ಮೊದಲೇ ಹೇಳಿರುವಂತೆ ಪುರಾತನವಾದ 'ಉಚ್ಚಿಷ್ಟ' ರೂಪದ್ದಾಗಿದೆ-ಬಲಮುರಿ ಹಾಗು ದ್ವಿಬಾಹುವನ್ನು ಕೂಡಿದುದಾಗಿದೆ. ೬. ಇದು ಪಾಶುಪತ ಕೇಂದ್ರವೆಂಬುದಕ್ಕೆ ಮುಖ್ಯವಾದ ವೃಷಭ-ಬಸವನ ಪ್ರತಿಮೆಯು ಕಂಡುಬರುತ್ತದೆ. ಇದು ಕೇವಲ ಪ್ರಧಾನ 'ಶಿವಲಿಂಗ'ಕ್ಕೆಂದು ಸೇರಿದುದಲ್ಲ. ಇಲ್ಲಿ ಶಿವನನ್ನು 'ಪಶುಪತಿ ನಾಥ' ಎಂದು ಕರೆಯಬೇಕಾಗಿದೆ.

ಇಂಥ ಕೇಂದ್ರಗಳು ಸುಮಾರು 'ಹಲ್ಮಿಡಿ'ಶಾಸನದ ಕಾಲದಿಂದಲೂ (ಹಲ್ಮಿಡಿಯಲ್ಲಿ ಕೂಡ) ಕಂಡುಬರುತ್ತಿವೆ.

**- ಈ ಶಾಸನದಲ್ಲಿ : ಆಳಪಗಣ ಪಶುಪತಿ.... ದಾನ ಪಶುಪತಿಯೆನ್ದು ಪೊಗಳೆಪ್ಪೊಟ್ಟಣ ಪಶುಪತಿ ನಾಮಧೇಯನ್ - ಎಂಬ ವಿವರಗಳು ಸಿಗುತ್ತವೆ.**

ಇವುಗಳಲ್ಲಿ ಮೊದಲನೆಯದು ಒಂದು ಪದವಿಯಾಗಿ, ಗೋದಾನದಲ್ಲಿ (ಮತ್ತು ಭೂದಾನದಲ್ಲಿ) ಪ್ರಸಿದ್ಧನೆನ್ನುವ ವಿವರವಿದೆಯಷ್ಟೆ. ಅಲ್ಲದೆ ಪಶುಪತಿ - ಎಂಬುದು ನಾಮಧೇಯ ಕೂಡ ಆಗಿದೆ. ಆದುದರಿಂದ ಈ ಪ್ರಸಿದ್ಧ ಆಳಕದಂಬನ ಒಕ್ಕಣೆಯಿರುವ ಈ ಶಾಸನವು 'ಪಾಶುಪತ'ಕ್ಕೆ ಒಂದು ಮುಖ್ಯ ದಾಖಲೆಯೇ ಆಗಿರುತ್ತದೆ.

ಇನ್ನು ಬಾದಾಮಿ ಚಾಲುಕ್ಯರ ಕಾಲದಲ್ಲಿ - ಮಹಾಕೂಟ ಮೊದಲಾಗಿ ಪಾಶುಪತ ಕ್ಷೇತ್ರಗಳಿದ್ದಿರಬಹುದಾಗಿದೆ. ಆದುದರಿಂದ 'ಪಾಶುಪತ' ಆಚರಣೆಗಳು ಕದಂಬ ಹಾಗೂ ಚಾಲುಕ್ಯರ ಕಾಲದಲ್ಲಿದ್ದಿರಬೇಕಾಗುತ್ತದೆ.

ಈ ಆಚರಣೆಗಳಿಗೆ ಇದಕ್ಕೂ ಹಳೆಯ ಆಧಾರಗಳನ್ನು ಕನ್ನಡ ನಾಡಿನಲ್ಲೇ ಗುರುತಿಸಬಹುದಾಗಿದೆ- ನಾಗಾರಾಧನೆ, (ನಾಗಮಂಡಲಕೂಡ) ವೃಷಭಾರಾಧನೆಗಳು ಬುಡಕಟ್ಟು ಜನಾಂಗಗಳಲ್ಲಿಯೂ ಕಂಡುಬರುತ್ತದೆ - ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವ 'ನಾಯಿರಿ'ಗಳು 'ನಾಗಾರಾಧನೆ'ಯ ವಾಂಶಿಕ-ಬೇರು-ಗಳನ್ನು ಉಳಿಸಿಕೊಂಡಿರುತ್ತಾರೆ.

ಆದುದರಿಂದ 'ಕಿಗ್ಗ'ವು ಅಂತಹ ಕ್ಷೇತ್ರಗಳಲ್ಲಿ ಒಂದಾಗಿದೆ ಮತ್ತು ಐದನೆಯ ಶತಮಾನದಷ್ಟು ಹಳೆಯದಾಗಿರಬಹು ದಾಗಿದೆ. ಆಗ ಈ ಕ್ಷೇತ್ರ, ಜ್ಞಾನೇಶ್ವರವೇ ಆಗಿದ್ದಿರಬಹುದು. 'ಕಿಗ್ಗ' ಎಂಬ ಸ್ಥಳನಾಮವು ನಡುಗನ್ನಡದಿಂದ ಮಾತ್ರವೇ ಬೆಳಕಿಗೆ ಬಂದಿರಬಹುದಾಗಿದೆ. ಈಗ ಈ ಪ್ರದೇಶವನ್ನು 'ಮರಕಲ್' ಎಂಬ ಗ್ರಾಮವೆಂದು ಗುರುತಿಸದ್ದಾರೆ. ಇದು ಚಿತ್ರಕಲ್ ಮತ್ತು ಕಿಸುಗಲ್ ಎಂಬಂತೆ ಹಳೆಯದಾಗಿರಬಹುದು.

*(ವಿ.ಸೂ : ಪರಿಸರ ಮತ್ತು ಜನಾಂಗೀಯ ಸಂಸ್ಕೃತಿಯ ಮೂಲಕ ಮಾಡಿರುವ ಒಂದು ಅಧ್ಯಯನದ ಜೊತೆಗೆ ಭಾಷಾಶಾಸ್ತ್ರವೂ ಸೇರುತ್ತದೆ)*

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ ಪೂರ್ವ ಹಳಗನ್ನಡದ ಕಿಗ್ಗ-ಕೊಪ್ಪದ ಶಾಸನೋಕ್ತ ಪ್ರಮಾಣಗಳು: i. ಎ.ಕ. ೬, ಕೊಪ್ಪ ೩೭, (ಕ್ರಿ.ಶ. ಸು ೬೭೫), ಶೃಂಗೇಶ್ವರ ದೇವಸ್ಥಾನ- ಕಿಳ್ಳುಂ*೩..... ಕಿಟ್ಟಾನೇಶ್ವರದಾ। ದೇವರ ...ಪಾಲುಂ ಎಟ್ಟುಂ.... ಪವಿನೊರ್ವನಾರು ಮುಹ್ನೊ ಮೆಣ್ಣುಕಮ್, ಇತ್ಯಾದಿ ೧೨ ಸಾಲುಗಳು
  ii. ಮಾಲಾ,। ಪೊನ್ನುಚ್ಚಾಳೆ (Rice : EC. vi, Transliteration, p. 178) ಕಿಳ್ಳಂ (ibid, Transliteration, p. 322)
  iii. ಎ.ಕ. ೬, ಕೊಪ್ಪ ೩೮ (ಕ್ರಿ.ಶ. ಸು. ೬೭೫):
  'ಕದಮ್ಬು ಮಣ್ಣಲಮನ್....ಚಿತ್ರವಾಹನರುಮ್....ಮುದಿಮೆಗೆಯೆ ಕಿಟ್ಟಾನ ದೇವಕೆ ಎಲ್ಲಮಾನ್..ಇತ್ತೋರ್' ಇತ್ಯಾದಿ ೬ ಸಾಲುಗಳು
  iv. ಎ.ಕ. ೬ ಕೊಪ್ಪ ೩೯ (ಕ್ರಿ.ಶ. ೭೦೦):
  'ಸ್ವಸ್ತಿ ಶ್ರೀ ಸಾನ್ತರಸಾ .... ಬಟರಿನ್ಗ ಕೊಟಾರ್... ಪಾತಕನ್ ಅಕ್ಕುಮ್.... ಪೂರ್ವ್ವಮರಿಯಾದೆಯಾ ಕಮ್ಮಾಱಿರ। ಪಾಶುಪತ ಮರಿಯಾದೆಯಾ। ಎತ್ತಿ ಕೊಟ್ಟೋನ್'.....ಇತ್ಯಾದಿ ೨೬ ಸಾಲುಗಳು
  (ಈ ಟಿಪ್ಪಣಿಗಳನ್ನು ಡಾ॥ ಎ.ಎನ್. ನರಸಿಮಯ್ಯ ತಮ್ಮ A grammer of oldest kanarese language, ಅನ್ನು ಆಧರಿಸಿದ್ದಾರೆ.)

೨. ಎ.ಕ. VI-VII (ರೈಸ್ ಆವೃತ್ತಿಗಳು)

೩. ಡಾ॥ ಎ.ಕೆ. ಶಾಸ್ತ್ರಿ: ಶೃಂಗೇರಿ ಧರ್ಮಸಂಸ್ಥಾನ

೪. ಜನತಾ ಜೀವ ವೈವಿಧ್ಯತಾ ದಾಖಲಾತಿ - ಒಂದು ಕ್ರಿಯಾಶೀಲ ಯೋಜನೆ, ೧೯೯೬ (ಡಾ॥ ಗೋಪಾಲಕೃಷ್ಣ ಭಟ್, ಪ್ರಾಣಿಶಾಸ್ತ್ರ ಪ್ರಾಧ್ಯಾಪಕರು, ಶ್ರೀ ಜೆ.ಸಿ.ಬಿ.ಎಂ. ಕಾಲೇಜು, ಶೃಂಗೇರಿ- ಪ್ರಾಯೋಜಕರು, ಪ್ರಕೃತಿಗಾಗಿ ವಿಶ್ವನಿಧಿ ಸಂಸ್ಥೆ, ಭಾರತ ಹಾಗು ಇದನ್ನು ಒದಗಿಸಿಕೊಟ್ಟ ಶ್ರೀ ವೆಂಕಣಯ್ಯ ನವರ ಸೋದರರಾದ ಶ್ರೀ ತ.ಸು. ಶಾಮರಾಯರ ಮಗ ವೆಂಕಣ್ಣಯ್ಯ, ಪ್ರಾಂಶುಪಾಲರು, ಕಾಲೇಜು ಶೃಂಗೇರಿ, ಅವರಿಗೂ ಕೃತಜ್ಞತೆಗಳು).

೪. ಮರಾಠಿ ಜ್ಞಾನೇಶ್ವರೀ ಬಗ್ಗೆ ಡಾ॥ ರಾಧಾಕೃಷ್ಣಮೂರ್ತಿ(ಬೆಂಗಳೂರು), ಇವರಲ್ಲಿ ವಿಚಾರಮಾಡಿದ್ದೇನೆ. ಅದಕ್ಕಾಗಿ ಕೃತಜ್ಞತೆಗಳು.

೫. A History of Kannada Language by R. Narasimhachar

ಎ. ಆರ್. ಗುರು*

# ಕೊಪ್ಪ ತಾಲೂಕಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳನಾಮಗಳು – ಒಂದು ಅಧ್ಯಯನ

ಕ್ರಿ.ಶ. ೧೯೦೧ರಲ್ಲಿದ್ದ ಕೊಪ್ಪ ತಾಲೂಕು ಈಗಿನ ಶೃಂಗೇರಿ ಹೋಬಳಿಯನ್ನು (ಹಿಂದಿನ ಜಹಗೀರ್) ಹೊರತುಪಡಿಸಿ ಕೊಪ್ಪ, ನರಸಿಂಹರಾಜಪುರ ಮತ್ತು ಶೃಂಗೇರಿ ತಾಲೂಕುಗಳನ್ನು ಒಳಗೊಂಡಿತ್ತು.*೧ ಕಡೂರು ಜಿಲ್ಲೆಗೆ ಚಿಕ್ಕಮಗಳೂರು ಜಿಲ್ಲೆ ಎಂದು ೧೯೪೭ರಲ್ಲಿ ಪುನರ್‌ನಾಮಕರಣವಾಯಿತು.*೨ ೧೯೦೧ರಲ್ಲಿದ್ದ ಕೊಪ್ಪ ತಾಲೂಕಿನ ಶಾಸನಗಳಲ್ಲಿ ಸುಮಾರು ೨೩೪ ಸ್ಥಳಗಳ ಹೆಸರುಗಳು ದೊರೆತಿವೆ. ಇವುಗಳಲ್ಲಿ ಒಂದೇ ಊರಿಗೆ ಬೇರೆ ಬೇರೆ ಕಾಲಗಳಲ್ಲಿದ್ದ ಹೆಸರುಗಳೂ ಸೇರಿವೆ. ಅಂತೆಯೇ ಎಲ್ಲಾ ಸ್ಥಳಗಳೂ ಹಿಂದಿನ ಕೊಪ್ಪತಾಲೂಕಿನಲ್ಲಿಲ್ಲ. ಉದಾಹರಣೆಗೆ, ಆರಗ, ಕಲ್ಯಾಣ, ಗುತ್ತಿ, ಸಿಂಗೇರಿ ಇತ್ಯಾದಿ.

ವರ್ಣಮಾಲೆಯ ಮೊದಲ ವ್ಯಂಜನ ಎಂದರೆ 'ಕ' ಕಾರದಿಂದ ಆರಂಭವಾಗುವ ಸ್ಥಳನಾಮಗಳು ಅತಿಹೆಚ್ಚು ಎಂದರೆ ಸುಮಾರು ಶೇಕಡ ೨೨. ನಂತರದ ಅತಿ ಹೆಚ್ಚಿನ ಸ್ಥಳನಾಮಗಳು 'ಹ'ಕಾರದಿಂದ ಆರಂಭವಾಗುತ್ತವೆ. ಇವುಗಳು ಸುಮಾರು ಶೇಕಡ ೧೫ ಮತ್ತು 'ಎ', 'ಜ'ಕಾರದಿಂದ ಆರಂಭವಾಗುವಲ್ಲಿ ತಲಾ ಒಂದು ಹೆಸರು ದೊರೆತರೆ, 'ಇ', 'ಒ', 'ಟ','ಡ', 'ರ', 'ಲ'ಕಾರಗಳಿಂದ ಪ್ರಾರಂಭವಾಗುವ ಒಂದು ಸ್ಥಳನಾಮವೂ ದೊರೆತಿಲ್ಲ.

ಈ ನಾಡು ಗುಡ್ಡ – ಕಾಡು, ಅಧಿಕ ಮಳೆ ಮತ್ತು ತೊರೆಗಳ ಪ್ರದೇಶವಾದುದರಿಂದ ಹೆಚ್ಚಿನ ಸ್ಥಳನಾಮಗಳು ಭೂಸ್ಥಿತಿವಾಚಿ, ಸಸ್ಯವಾಚಿ, ಜಲವಾಚಿ ಅಥವಾ ಇವುಗಳಲ್ಲಿ ಯಾವುದಾದರೂ ಎರಡು ವಾಚಿಗಳ ಸಮ್ಮಿಶ್ರಣವಾಗಿದೆ. ಅಲ್ಲದೆ, ಬಹುತೇಕ ಸ್ಥಳನಾಮಗಳು ಸ್ವಾಭಾವಿಕವಾಗಿರುವ ಉತ್ತರ ಘಟಕಕ್ಕೆ ಬೇರೆ ಊರುಗಳಿಂದ ಗುರುತಿಸುವಂತೆ ಮತ್ತು ಇತರೆ ಕಾರಣಗಳಿಂದ ಪೂರ್ವಘಟಕಗಳನ್ನು ಹೊಂದಿವೆ. ಹಲವು ಕೊಡಿಗೆಯಾಗಿ ಕೊಟ್ಟ ಊರುಗಳಾದರೆ, ಹಲವು ಗದ್ದೆಗಳಿಗೆ ಸಂಬಂಧಪಟ್ಟಿವೆ. ಈ ನಿಟ್ಟಿನಲ್ಲಿ ಕೊಪ್ಪ ತಾಲೂಕಿನ ಸ್ಥಳನಾಮಗಳನ್ನು ಮುಂದಿನಂತೆ ವಿಶ್ಲೇಷಣೆ ಮಾಡಿದೆ:

ಡಾ॥ ಎಂ.ಎಂ. ಕಲಬುರ್ಗಿಯವರು ಸ್ಥಳನಾಮಗಳನ್ನು ವಿಂಗಡಿಸಿದಂತೆ, *೪ ಕೊಪ್ಪ ತಾಲೂಕಿನ ಶಾಸನಗಳಲ್ಲಿ ಕಂಡುಬರುವ ಸ್ಥಳನಾಮಗಳನ್ನು ಈ ಕೆಳಕಂಡಂತೆ ವಿಭಾಗ ಮಾಡಬಹುದು.

೧. ಸೃಷ್ಟಿಘಟ್ಟ:

ನಿಸರ್ಗವಾಚಿ

\+

ನಿಸರ್ಗವಾಚಿ = ಕಲ್ಲು + ಮಕ್ಕಿ = ಕಲುಮಕ್ಕಿ
ವಸತಿವಾಚಿ = ಆಜ್ + ಹಳ್ಳಿ = ಆಜೆಹಳ್ಳಿ
ನಿರ್ಮಾಣವಾಚಿ = ( ಯಾವುದೂ ಆಗುವುದಿಲ್ಲ )

೨. ರಚನಾಘಟ್ಟ:

ಜನಾಂಗ ವಾಚಿ

\+

ನಿಸರ್ಗವಾಚಿ = ( ಯಾವುದೂ ಇಲ್ಲ )
ವಸತಿವಾಚಿ = ಅಂಬುಗ + ನ+ಹಳ್ಳಿ = ಅಂಬುಗನವಳ್ಳಿ
ನಿರ್ಮಾಣವಾಚಿ = ನಾಯಕ( ನ )+ಕಟ್ಟೆ = ನಾಯ್ಕನಕಟ್ಟೆ

ವ್ಯಕ್ತಿವಾಚಿ

\+

ನಿಸರ್ಗವಾಚಿ = ನಾಗಬೋವ( ನ ) + ಮಕ್ಕಿ = ನಾಗಬೋವನ ಮಕ್ಕಿ
ವಸತಿ ವಾಚಿ = ಬೊಂಮ್ಮಣ್ಣ+ಪುರ = ಬೊಂಮ್ಮಂಣ್ಣಾಪುರ
ನಿರ್ಮಾಣವಾಚಿ = ( ಯಾವುದೂ ಇಲ್ಲ )

ಆದರ್ಶವಾಚಿ

\+

ನಿಸರ್ಗವಾಚಿ = ( ಯಾವುದೂ ಇಲ್ಲ )
ವಸತಿವಾಚಿ = ಮಂಗಳ+ಪುರ = ಮಂಗಲಾಪುರ
ನಿರ್ಮಾಣವಾಚಿ = ( ಯಾವುದೂ ಇಲ್ಲ )

ರಚನಾಘಟ್ಟದಲ್ಲಿ ದೊರೆಯುವ ಹೆಸರುಗಳು ಅತ್ಯಲ್ಪವೆಂದರೂ ಇತರೆ ಪ್ರದೇಶಗಳ ಸ್ಥಳನಾಮಗಳೊಡನೆ ಹೋಲಿಕೆ ಇರುವುದು ವಿಶೇಷ.

* ಸಿ-೯, ಬಿ.ಎಚ್.ಇ.ಎಲ್. ಟೌನ್‌ಶಿಪ್, ವಿಜಯನಗರ, ಬೆಂಗಳೂರು – ೫೬೦ ೦೪೦

ಕಾಲಾನುಗತಿಕವಾಗಿ ಹೆಸರು ಬದಲಾದ ಕೆಲವು ಸ್ಥಳ ನಾಮಗಳು :

೧. ಶೃಂಗೇರಿಯ ಬಳಿಯ 'ಕಿಗ್ಗ'

| ಸ್ಥಳನಾಮ | ಕೊಪ್ಪಶಾಸನಸಂಖ್ಯೆ | ಕಾಲ |
|---|---|---|
| ಕಿಳ್ | ೩೭ | (ಕ್ರಿ.ಶ. ಸು. ೬೭೫) |
| ಕಿಗೆ | ೩೯ | (ಕ್ರಿ.ಶ. ಸು. ೭೦೦) |
| ಕೆಟ್ಗ | ೪೦ | (ಕ್ರಿ.ಶ. ಸು. ೭೦೦) |
| ಕಿಗ್ಗ | ೫೧ | (ಕ್ರಿ.ಶ. ೧೪೦೩) |

– ಮತ್ತು ಎ.ಕ.VI, ಪುಟ. ೩೨೨ (ಕ್ರಿ.ಶ. ೧೯೦೧)

೨. ಹರಿಹರಪುರದ ಬಳಿಯ 'ಬೊಮ್ಮಲಾಪುರ'

| | | |
|---|---|---|
| ಬೊಂಮ್ಮಂಣ್ಣಾಪುರ | ೫೩ | (ಕ್ರಿ.ಶ. ೧೪೦೩) |
| ಬೊಂಮಣಾಪುರ | ೫೭ | (ಕ್ರಿ.ಶ. ೧೫೪೪) |
| ಬೊಂಮಲಾಪುರ | ೫೯ | (ಕ್ರಿ.ಶ. ೧೬೦೧) |

– ಮತ್ತು ಎ.ಕ.VI, ಪುಟ. ೩೩೩ (ಕ್ರಿ.ಶ. ೧೯೦೧)

ಬೊಮ್ಮಲಾಪುರ (೧೯೭೫ರ ಕರ್ನಾಟಕ ಗ್ರಾಮಸೂಚಿ)

೩. 'ಸಿಡಿಮನೆ'

| | | |
|---|---|---|
| ಸಿಡಿಯಮಾನಿಯಗ್ರಾಮ | ೩೪ | (ಕ್ರಿ.ಶ. ೧೩೮೭) |
| ಶಿಡಿಮಾನಿ* | ೨೫ | (ಕ್ರಿ.ಶ. ೧೪೦೪) |
| ಸಿಡಿಮನೆ | –ಎ.ಕ.VI, ಪುಟ. ೩೨೯ | (ಕ್ರಿ.ಶ. ೧೯೦೧) |

*ನಾಗರಾಕ್ಷರದ ಈ ಶಾಸನದಲ್ಲಿ ತಪ್ಪುಗಳು ಹೇರಳವಾಗಿವೆ ಎಂದಿದೆ, ಎ.ಕ.VI - ಆದುದರಿಂದ ಈ ಹೆಸರು 'ಸಿಡಿಮಾನಿ' ಯಾಗಿರಬಹುದು.

ಸಾಮಾನ್ಯವಾಗಿ ಸ್ಥಳನಾಮಗಳಲ್ಲಿ ಎರಡು ಘಟಕಗಳಿರುತ್ತವೆ, ಪೂರ್ವಘಟಕ ಮತ್ತು ಉತ್ತರ ಘಟಕ. *೩ ಉತ್ತರ ಘಟಕವು ಸ್ವಾಭಾವಿಕವಾಗಿಯೂ ಮತ್ತು ಪೂರ್ವಘಟಕವು ವಿಶೇಷಣೆಯಾಗಿಯೂ ಇರುತ್ತವೆ. ಉತ್ತರಘಟಕಕ್ಕೆ ಊರುಗಳನ್ನು ಗುರುತಿಸುವಂತೆ ಸೇರಿರುವ ಪೂರ್ವಘಟಕಗಳು ಕೆಳಕಂಡ ಸ್ಥಳನಾಮಗಳಲ್ಲಿವೆ:

**ಕೊಪ್ಪ** : ಕೊಪ್ಪಕ್ಕೆ 'ಚಿಕ್ಕಹಳ್ಳಿ' ಹಾಗು 'ಮನೆಗಳ ಗುಂಪು' ಎಂಬ ಅರ್ಥಗಳಿವೆ. ಈ ಹೆಸರನ್ನು ಹೊಂದಿರುವ ಸ್ಥಳನಾಮಗಳೆಂದರೆ ಆರಡಿಕೊಪ್ಪ, ಆರನಿಕೊಪ್ಪ, ಕುಂಬಾರಕೊಪ್ಪ, ಕೆರೆಕೊಪ್ಪ, ಕೆಳಕೊಪ್ಪ, ಕೇಶಿಕೊಪ್ಪ, ಕೊಪ್ಪ, ಕೊಪ್ಪಗೋಡು, ಕೋಲೆಯಕೊಪ್ಪ, ಗುಡ್ಡೆಕೊಪ್ಪ, ತೋಟದಕೊಪ್ಪ, ಸೂರ್ಯಕೊಪ್ಪ, ಹೊಸಕೊಪ್ಪ ಮತ್ತು ಹೊಳೆಯಕೊಪ್ಪ; 'ಕೊಪ್ಪ' ಸ್ಥಳನಾಮವು ಉತ್ತರ ಮತ್ತು ಪೂರ್ವ ಘಟಕವಾಗಿ ಸೇರಿಕೊಂಡಿರುವುದು ಕಂಡುಬರುತ್ತದೆ. ('ಕೊಪ್ಪಗೋಡು'ವಿನಲ್ಲಿ ಪೂರ್ವ ಘಟಕ). ಈ ಹೆಸರುಗಳಲ್ಲಿ ಅತ್ಯಂತ ಪ್ರಾಚೀನವಾಗಿ ಸಿಗುವ ಹೆಸರು 'ಕೊಪ್ಪ' ಕ್ರಿ.ಶ. ೧೩೨೪ರ (ಕೊಪ್ಪ-೧೧) ಶಾಸನದಲ್ಲಿದೆ. ಇದರಿಂದ ಕೊಪ್ಪ ತಾಲೂಕಿನ ಮುಖ್ಯ ಪಟ್ಟಣವಾದ 'ಕೊಪ್ಪ'ವೇ ಮೇಲ್ಕಂಡ ಸ್ಥಳಗಳಲ್ಲಿ ಅತ್ಯಂತ ಪ್ರಾಚೀನವಾದುದು ಎನ್ನಬಹುದು.

**ಮಕ್ಕಿ** : ಇದಕ್ಕೆ 'ಮಳೆ ನೀರನ್ನು ಅವಲಂಬಿಸಿರುವ ಪ್ರದೇಶ', 'ನೀರಿನ ಅಭಾವದ ಪ್ರದೇಶ', 'ಹುಲುಸಾಗಿ ಬೆಳೆ ಬಾರದ ಪ್ರದೇಶ' ಎಂದೂ ಅರ್ಥಗಳಿವೆ. ಈ ಉತ್ತರ ಘಟಕಗಳಿರುವ ಊರುಗಳೆಂದರೆ, ಆಲೆಯಮಕ್ಕಿ, ಕಲುಮಕ್ಕಿ, ಕಳ್ಳಿಯಮಕ್ಕಿ, ನಾಗಬೋವನಮಕ್ಕಿ, ಪಾಳ್ಯದಮಕ್ಕಿ ಮತ್ತು ಹೊಸಮಕ್ಕಿ.

**ಕೋಡು** : ಇದಕ್ಕೆ 'ಬೆಟ್ಟದ ತುದಿ' ಎಂಬ ಅರ್ಥವಿದೆ. ಇದನ್ನೊಳಗೊಂಡ ಸ್ಥಳನಾಮಗಳೆಂದರೆ, ಅಡಗೋಳು, ಆನೆಗೋಡು, ಕಳಗೋಡು, ಕಾಗಲುಗೋಡು, ಕೊಕ್ಕೋಡು, ಕೊಪ್ಪಗೋಡು, ನಂದಿಗೋಡು, ಮಟ್ಟಕೋಡು, ಮಾಕೋಡು, ವೊಲಗೋಡು, ಸುಳಿಗೋಡು, ಹಲಗೋಡು, ಹುಲಿಯಕೋಡು ಮತ್ತು ಹುಲ್ಲುಗೋಡು.

**ಹಳ್ಳಿ** : ಅಜ್ಜಹಳ್ಳಿ, ಅಂಬುಗನಹಳ್ಳಿ, ಆಡುವಳ್ಳಿ, ಅರಂವಳ್ಳಿ, ಉಂಟುವಳಿ, ಚಾರುಂಬಳ್ಳಿ, ಬಾಳೇಹಳ್ಳಿ, ಯಡಹಳ್ಳಿ ಮತ್ತು ವಾಡುವಳ್ಳಿ.

**ಊರು** : ಅರವೂರು, ಕಡವೂರು, ಕುಂಡೂರು, ಕೆಳಲೂರು, ಕೇದಗೆ ಸಾಲೂರು, ಕೊಟ್ಟವೂರು, ಕೊಡೂರು, ಚಿಕ್ಕಹೊಳಲೂರು, ತೀರ್ಥಮುತ್ತೂರು, ನಾಗೂರು, ಬೆಂಗಳೂರು, ಭೀರವೂರು, ಮಾಸರೂರು, ಮಾಳೂರು, ಮುತ್ತೂರು, ಮುನಿಊರು, ಮೆಣಸೂರು, ಮೈಶುರು, ಮಂಗಲೂರು, ಶಿರಂಗೂರು, ಸಿತೂರು, ಸಿಂಗನೂರು, ಹರನೂರು, ಹಾಲುಮುತ್ತೂರು ಮತ್ತು ಹೊಸೂರು.

**ಪುರ** : ಕೋಳಾಪುರ, ಚಂಗಾಪುರ, ನಗಪುರ, ನಗಲಪುರ, ನರಸಿಪುರ, ನರಸಿಂಹ್ಯಪುರ, ನರಶೀಪುರ, ನರಸಿಂಹಪುರ, ನಾಗಪುರ, ನಾಗಲಾಪುರ, ಬೊಂಮ್ಮಣ್ಣಾಪುರ, ಭಾನುಪುರ, ಮಂಗಲಾಪುರ, ಶಕರೀಪುರ, ಸಿವಪುರ ಮತ್ತು ಸೋಮಲಾಪುರ. ಉತ್ತರಘಟಕವಾಗಿ 'ಪುರ'ವಿರುವ ಊರುಗಳು ಅಗ್ರಹಾರಗಳಾಗಿದ್ದವೆಂದು ಹೇಳುತ್ತಾರೆ.

**ಕೇರಿ** : ಇದಕ್ಕೆ 'ಓಣಿ' ಹಾಗು ಓಣಿಯ ಇಕ್ಕೆಲಗಳಲ್ಲಿ ಮನೆಗಳಿರುವ ಊರೆಂದು ಹೇಳುತ್ತಾರೆ. ಶಾಸನಗಳಲ್ಲಿ ಉಕ್ತವಾಗಿರುವ ಕೇರಿಗಳೆಂದರೆ, ಕಡವೂರು ಹೊಸಕೇರಿ, ಜಗಳಕೇರಿ, ಪಡುವಗೇರಿಯನಾಡು ಮತ್ತು ಸಿಂಗೇರಿ.

**ಬಯಲು**: ಕಾರಬಯಲು, ಮಾಘೆಯಬಯಲು, ಮಾನಿಯಬೈಲು ಮತ್ತು ಸಂಪಗೆಯ ಬಯಲು.

ಇದೇ ಕ್ರಮದಲ್ಲಿ ಕಲ್ಲು, ಕೆರೆ, ಕೊಡಿಗೆ, ಮಾನ್ಯ (ಮಾನಿ) ಇತ್ಯಾದಿ ಉತ್ತರ ಘಟಕಗಳನ್ನು ಹೊಂದಿರುವ ಸ್ಥಳನಾಮಗಳನ್ನು ಮುಂದಿನ ಉದಾಹರಣೆಗಳಲ್ಲಿ ನೋಡಬಹುದು.

### ನಾಮವಾಚಿಗಳು

i) **ಭೂಸ್ಥಿತಿ ವಾಚಿಗಳು:** ಮೇಲಿನ 'ಮಕ್ಕಿ, ಕೋಡು ಮತ್ತು ಬಯಲು' ಘಟಕಗಳಲ್ಲಿರುವ ಸ್ಥಳನಾಮಗಳು ಭೂಸ್ಥಿತಿವಾಚಿಗಳು. ಇತರೆ ಭೂಸ್ಥಿತಿವಾಚಿಗಳೆಂದರೆ ಅಡತೆವರು (ತೆವರು = ದಿಣ್ಣೆ), ಅಡಮೊರಡಿ (ಮರಡಿ = ಎತ್ತರದ ಪ್ರದೇಶ) ಮತ್ತು ಗೇರುಗಲ್ಲು.

ii) **ಜಲವಾಚಿಗಳು ಮತ್ತು ಜಲಸಂಬಂಧಿವಾಚಿಗಳು :** ಕಾರಬಯಲು, ಕೆರೆಕೊಪ್ಪ, ತೀರ್ಥಮುತ್ತೂರು, ನಾಬಳ, ಮಸಿಗೆಗೆರೆ, ಹುಣ್ಸೆಕೆಜೆ'ಹುಲಿಗೆಜೆ' ಮತ್ತು ಹೊಳೆಯಕೊಪ್ಪ.

iii) **ಸಸ್ಯವಾಚಿಗಳು :** ಕಳ್ಳಿಯಮಕ್ಕಿ, ಕೇದಗೆಸಾಲೂರು, ಗೇರುಗಲ್ಲು, ಗೇರುಸೊಪ್ಪೆ, ತೋಟದಕೊಪ್ಪ, ಬಾಳೇಹಳ್ಳಿ, ಮಾಫೆಯಬಯಲು, ಮೆಣಸೂರು, ಸಂಪಗೆಯಬಯಲು, ಹುಣ್ಸೆಕೆಜೆ' ಮತ್ತು ಹುಲ್ಲುಗೋಡು.

iv) **ವಾಣಿಜ್ಯವಾಚಿ :** ಅಂಗಡಿ, ಆರ್ರಂಬಳ್ಳಿಯಂಗಡಿ, ಎರಡಂಗಡಿ, ಕಳದಿ ಅಂಗಡಿ, ಹಿರಿಯಂಗಡಿ ಮತ್ತು ಹುಲಿಗೆಜೆ'ಯ ಅಂಗಡಿ.

v) **ವ್ಯಕ್ತಿವಾಚಿ:** ಅಂಬುಗನವಳ್ಳಿ ಮತ್ತು ಕುಂಬಾರ ಕೊಪ್ಪ; ಅಲ್ಲಾಳದೇವಿ, ನಾಯ್ಕಿನಕಟ್ಟೆ, ನಾಗ ಬೋವನಮಕ್ಕಿ, ಬೊಮ್ಮಂಣ್ಣಾಪುರ ಮತ್ತು ಮುನಿಊರು.

vi) **ಪ್ರಾಣವಾಚಿ:** ಆನೆಗೋಡು, ನಂದಿಗೋಡು, ನಾಗಪುರ, ಶಿಂಗನಗದ್ದೆ ಮತ್ತು ಹುಲಿಗೆಜೆ'.

vii) **ವಸತಿವಾಚಿಗಳು:** ಮೇಲಿನ (i), (iv), (v), (vi) ಮತ್ತು (vii)

viii) **ಶಿಲಾವಾಚಿಗಳು:** ಅಜೆ'ಹಳ್ಳಿ, ಕಲುಮಕ್ಕಿ ಮತ್ತು ಗೇರುಗಲ್ಲು.

ix) **ಸಂಖ್ಯಾವಾಚಿ:** ಎರಡಂಗಡಿ

x) **ದಿಕ್‌ವಾಚಿಗಳು:** ಪಡುವಗೇರಿಯನಾಡು; ಯಡದಿಟ್ಟ, ಯಡಹಳ್ಳಿ;ಕಿಗ್ಗ, ಕೆಳಊರಗ್ರಾಮ, ಕೆಳಕೊಪ್ಪ, ಮೇಲುಗೊಟೆ

xi) **ಸಾಪೇಕ್ಷವಾಚಿಗಳು:** ಚಿಕ್ಕಹೊಳಲೂರು, ದೊಡ್ಡಿನಮಾನಿ ಗ್ರಾಮ; ವೊಳಪಾಲ, ವೊಳಮಾನಿ; ಹಿರಿಯಂಗಡಿ; ಹಳಮಾನಿ, ಹಳೇ ಬೀಡು, ಹೊಸಕೊಪ್ಪ, ಹೊಸವೆಂಗಿ, ಹೊಸಮಕ್ಕಿ, ಹೊಸೂರು

**ಮಾನ್ಯ, ಕೊಡಿಗೆಗಳು :** ಸದ್ಯಕ್ಕೆ ಯಾವ ಶಾಸನಾಧಾರ ವಿಲ್ಲದಿದ್ದರೂ ಉತ್ತರಘಟಕವಾಗಿರುವ 'ಮಾನಿ' ಮತ್ತು 'ಕೊಡಿಗೆ'ಗಳು ವ್ಯಕ್ತಿಗೆ, ವ್ಯಕ್ತಿಗಳಿಗೆ ಅಥವಾ ಕುಟುಂಬಕ್ಕೆ ಮಾನ್ಯವಾಗಿ ಮತ್ತು ಕೊಡಿಗೆಗಳಾಗಿ ದೊರೆತ ಪ್ರದೇಶಗಳೆಂದು ತೋರುತ್ತವೆ. ಇಂತಹ ಸ್ಥಳಗಳನ್ನು ಕೆಳಕಂಡಂತೆ ಗುರುತಿಸಲಾಗಿದೆ.

i) **ಮಾನ್ಯಗಳು :** ಅಲಮಾನಿ, ಉರುರ್ವಾನಿ, ಉಳುರ್ವಾನಿ, ಕುರಕಲಮಾನಿ, ಗುಳ್ಳದಮಾನಿಯಗ್ರಾಮ, ದೊಡ್ಡಿನಮಾನಿಗ್ರಾಮ, ಬೋಗರುಮನಿ(ಹಳೆಯ ಮೈಸೂರು ಪ್ರಾಂತ್ಯದ ಮಲೆನಾಡು ಪ್ರದೇಶಗಳಲ್ಲಿ 'ಮನಿ'ಯು 'ಮನೆ'ಯಾಗುವ ಸಾಧ್ಯತೆಯೇ ಹೊರತು, 'ಮನೆ'ಯು 'ಮನಿ'ಯಾಗುವ ಸಾಧ್ಯತೆಯಿಲ್ಲ), ಮಾನಿಯಬೈಲು (ಇಲ್ಲಿ ಪೂರ್ವಘಟಕ), ಮೊರಿಮಾನಿ, ವಲ್ಲಭಮಾನಿ, ವೊಳಮಾನಿ, ಶಿಡಿಮಾನಿ, ಸಿಡಿಯಮಾನಿಯ ಗ್ರಾಮ ಮತ್ತು ಹಳಮಾನಿಗ್ರಾಮ.

ii) **ಕೊಡಿಗೆಗಳು :** ಅರ್ರಗೊಡಗಿ ಮತ್ತು ಬೆಂಮರುಕೊಡ. ಶಾಸನೋಕ್ತವಲ್ಲದ ಅನೇಕ 'ಕೊಡಿಗೆ'ಗಳು ಹಿಂದಿನ ಕೊಪ್ಪ ತಾಲೂಕಿನಲ್ಲಿವೆ. ಉದಾಹರಣೆಗೆ, ಅತ್ತಿಕೊಡಿಗೆ, ದಾಸನಕೊಡಿಗೆ, ಬೆಳುವಿನಕೊಡಿಗೆ, ಬೊಮ್ಮನಕೊಡಿಗೆ, ಹಿರೇಕೊಡಿಗೆ, ಹೆರ್ತನ ಕೊಡಿಗೆ, ಹೊನ್ನೇಕೊಡಿಗೆ ಇತ್ಯಾದಿ.

### ಸ್ಥಳನಾಮ ವ್ಯುತ್ಪತ್ತಿ

**ಕಿಗ್ಗ:** ಡಾ॥ ಎಂ. ಎಂ. ಕಲಬುರ್ಗಿಯವರು 'ಕಿಗ್ಗ' ಸ್ಥಳ ನಾಮದ ಬಗ್ಗೆ ಈ ರೀತಿ ವಿಶ್ಲೇಷಿಸಿದ್ದಾರೆ: *ಮೇಲುನೋಟಕ್ಕೆ ಇದರ (ಕಿಗ್ಗ) ಮೂಲರೂಪ ಸ್ಪಷ್ಟವಾಗುವುದೇ ಇಲ್ಲ. ಇದರ ಪ್ರಾಚೀನ ರೂಪ ಕಿರ್ಗ ಇಲ್ಲವೇ ಕಿಟ್ಗಿ ಇರಬಹುದು. ಗ್ರಾಮನಾಮಾಂತ್ಯದ 'ಗ' ಎಂಬುದು 'ಕೆಯ್' ಎಂಬುದರ ಸವೆದ ರೂಪವಾಗಿರುವುದರಿಂದ ಇದರ ಮೂಲರೂಪ ಕಿರ್‌ಕೆಯ್ ಇಲ್ಲವೇ ಕಿಟ್‌ಕೆಯ್ ಇರಬಹುದು. ಕಿರಿಯನೆಲ (ಕಿರ್ಗ) ಇಲ್ಲವೇ ಕೆಳಗಿನ ನೆಲ (ಕಿಗ್ಗ) ಎಂದು ಇವುಗಳ ಅರ್ಥ. ಇದು ಕಿರಿಯನೆಲೆಯಾಗಿದ್ದರೆ ಮಗ್ಗುಲಲ್ಲಿ ಹಿರಿಯನೆಲ ಅರ್ಥದ ಊರು ಪೆಗ್ಗ (ಹೆಗ್ಗ) ಎಂಬುದು ಅಥವಾ ಕೆಳಗಿನ ನೆಲೆಯಾಗಿದ್ದರೆ ಇದರ ಮಗ್ಗುಲಲ್ಲಿ ಮೇಗಣನೆಲ ಅರ್ಥದ ಊರು ಮೆಗ್ಗೆ ಎಂಬುದು ಇರಬಹುದು.* ೫೫

ಕಿಗ್ಗದ ಮಗ್ಗುಲಲ್ಲಿ ಆ ಹೆಸರುಗಳ ಯಾವ ಊರುಗಳು ಕಂಡು ಬರದಿದ್ದರೂ ಕೆಲವು ಮೈಲುಗಳ ಅಂತರದಲ್ಲಿ ಹೆಗ್ಗದ್ದೆ (ಸುಮಾರು ೮ ಮೈಲು) ಮತ್ತು ಹೆಗ್ಗಾನ್ (ಸುಮಾರು ೧೨ ಮೈಲು ದೂರದಲ್ಲಿ) ಎಂಬ ಊರುಗಳಿವೆ. ಈ ಸ್ಥಳನಾಮಗಳು ಕಿಗ್ಗದ ಮೂಲರೂಪ 'ಕಿರ್ಗ' ಎಂದು ಸಮರ್ಥಿಸುವುದಾದರೂ, ಕಿಗ್ಗದ ಹಿಂದಿನ ರೂಪ 'ಕಿಟ್ಗಿ' ಎಂಬುದು ಕೊಪ್ಪ – ೪೦ರ (ಕ್ರಿ.ಶ. ೭೦೦) ಶಾಸನದಿಂದ ವ್ಯಕ್ತವಾಗುತ್ತದೆ. ಅಲ್ಲದೆ ಅಲ್ಲಿಯ ಅಧಿದೇವತೆ ಕಿಟ್ಗಾನೇಶ್ವರ ಎಂದೂ ಕಿಟ್ಗಾನದೇವ ಎಂದೂ ಕ್ರಿ.ಶ. ಸು. ೬೭೫ರ ಶಾಸನ ಸಂಖ್ಯೆ ೩೭ ಮತ್ತು ૩೮ರಿಂದ ತಿಳಿಯುತ್ತದೆ.

ಈ ಸ್ಥಳವು ಘಟ್ಟಗಳ ಮೇಲಿದ್ದರೂ ಸಮೀಪದ ಘಟ್ಟನಿವಾಸಿಗಳಿಗೆ ತಗ್ಗು ಪ್ರದೇಶವಾಗಿದೆ. ಆದುದರಿಂದ ಈ ಊರಿನ ಪ್ರಾಚೀನ ರೂಪ ಕಿಟ್ಗಿ'; ಮೂಲರೂಪ 'ಕಿಟ್‌ಕೆಯ್' ಎನ್ನಬಹುದು.

ಅಧಿದೇವತೆಯ ಹೆಸರು 'ಕಿಟ್ಗಾನೇಶ್ವರ', 'ಕಿಟ್ಗಾನದೇವ' ಎಂದು ಮೇಲೆ ತಿಳಿಸಿದ ಶಾಸನಗಳಲ್ಲಿರುವುದರಿಂದ ಒಂದು ಊಹೆಗೆ ಅವಕಾಶವಿದೆ. ದೇವತೆಯ ಹೆಸರಿನ ಪೂರ್ವಘಟಕ ದೇವಸ್ಥಾನವನ್ನು ಸ್ಥಾಪಿಸಿದ ವ್ಯಕ್ತಿಯ (ರಾಜ, ಸಾಮಂತ ಅಥವಾ ಅಧಿಕಾರಿ) ಹೆಸರನ್ನು ಹೊಂದಿರುವ ಸಾಧ್ಯತೆ ಇರುವದರಿಂದ, 'ಕಿಟ್ಗಾನ್' ಆ ವ್ಯಕ್ತಿಯ ಹೆಸರಿರಬಹುದು ಮತ್ತು ಇದರಿಂದ ಸ್ಥಳನಾಮವು ವ್ಯುತ್ಪತ್ತಿಯಾಗಿಬರಬಹುದು.

**ಆರಗ** : ಆರಗವು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನಲ್ಲಿದೆ. ಕೊಪ್ಪ ತಾಲೂಕಿನಲ್ಲಿ ದೊರೆತ ಶಾಸನಗಳಲ್ಲಿ ಆರಗದ ಹೆಸರು ಮೊದಲಿಗೆ ಕ್ರಿ.ಶ. ೧೩೬೯ರಲ್ಲಿ (ಕೊಪ್ಪ - ೬) ಕಂಡುಬರುತ್ತದೆ. ಈ ಹೆಸರಿನ ವ್ಯುತ್ಪತ್ತಿಯನ್ನು ಈ ಕೆಳಕಂಡಂತೆ ಭಿನ್ನಭಿನ್ನವಾಗಿ ಊಹಿಸಲಾಗಿದೆ.

i) ಆರ್ = ಎತ್ತುಗಳನ್ನು ಕಟ್ಟಿದ ನೇಗಿಲು*೬ (ಆರು ಕಟ್ಟುವುದು ಎಂದರೆ ನೇಗಿಲಿಗೆ ಎತ್ತುಗಳನ್ನು ಕಟ್ಟಿ ಉಳಲು ಸನ್ನದ್ಧವಾಗುವುದು):

ಆರ್+ಕೆಯ್→ಆರ್+ಕೈ→ಆರ್+ಗೈ→ಆರ್+ಗೆ =ಆರಗ, ಎಂದರೆ, ನೇಗಿಲಿಗೆ ಎತ್ತುಗಳನ್ನು ಕಟ್ಟಿ ಉಳುತ್ತಿದ್ದ ಹೊಲ (ಇದರ ಸುತ್ತ-ಮುತ್ತಲ ಪ್ರದೇಶದಲ್ಲಿ ಬೇರೆ ಕ್ರಮಗಳಲ್ಲಿ ಹೊಲವನ್ನು ಉಳುತ್ತಿದ್ದರೇನೋ!)

ii) ಆರ್ = ನೀರು ಬರಿದಾಗುವುದು, ನೀರು ಇಲ್ಲವಾಗುವುದು. *೭ ಆರ್+ಕೆಯ್→ಆರಗ. ಎಂದರೆ, ನೀರು ಅಭಾವವಿರುವ ಹೊಲ.

iii) ತಮಿಳಿನಲ್ಲಿ ಅಱು ಎಂದರೆ 'ನೀರು', 'ಪ್ರವಹಿಸು' ಎಂಬ ಅರ್ಥಗಳಿವೆ. *೮ ಆದುದರಿಂದ, ಅಱು+ಕೆಯ್→ಅಱುಗೈ →ಅಱುಗೆ →ಆರಗ. ಎಂದರೆ, ಪ್ರವಹಿಸುವ ನೀರಿನ ಆಸರೆಯೂ ಇರುವ ಹೊಲ. ಈ ವ್ಯಾಖ್ಯಾನವು ಮೇಲಿನ ವ್ಯಾಖ್ಯಾನಕ್ಕೆ ವಿರುದ್ಧವಾಗಿದೆ.

iv) ಅರ=ಧರ್ಮ, ದಾನ*೯; ಅರ+ಕೆಯ್→ಅರಕೈ→ಅರಗೈ ಆರಗೆ = ಆರಗ ಎಂದರೆ, ದಾನವಾಗಿ ಕೊಟ್ಟ ಹೊಲವಿರಬಹುದು.

**ಬೊಂಮ್ಮಂಣ್ಣಾಪುರ:** ಈ ಹೆಸರಿನ ಬಗ್ಗೆ ಶಾಸನವೇ ತಿಳಿಸುವುದರಿಂದ ಯಾವ ಊಹೆಯ ಅವಶ್ಯಕತೆಯೂ ಇಲ್ಲ. ವಿಜಯನಗರ ಸಂಗಮ ವಂಶದ ಎರಡನೇ ಹರಿಹರನು ಆಳುತ್ತಿದ್ದ ಕಾಲದಲ್ಲಿ ಆರಗದಲ್ಲಿ ಅಧಿಕಾರಿಯಾಗಿದ್ದ ವಿಠ್ಠಂಣವೊಡೆಯನು ತನ್ನ ತಂದೆ ಬೊಂಮ್ಮಂಣ ವೊಡೆಯರ ನೆನಪಿನಲ್ಲಿ*೧೦ ಕ್ರಿ.ಶ. ೧೪೦೩ (ಶಕ ೧೩೨೫) ರಲ್ಲಿ ಹರಿಹರಪುರ ಬಳಿಯ ಮೆಣಸೂರಿನ ಭಾಗವನ್ನು ಕೊಂಡು ಬ್ರಾಹ್ಮಣರಿಗೆ ಷಡ್ಕರ್ಮಗಳನ್ನು ಮಾಡಲು, ಆ ಭಾಗವನ್ನು ಬೊಂಮ್ಮಂಣ್ಣಾಪುರವೆಂದು ಪುನರ್‌ನಾಮಕರಣ ಮಾಡಿ, ಧಾರೆ ಎರೆದ ಎಂದು ಕೊಪ್ಪ - ೫೩ರ ಶಾಸನ ತಿಳಿಸುತ್ತದೆ.

**ಸಿಡಿಮನೆ** : ಕ್ರಿ.ಶ. ೧೩೮೬ರ ಶಾಸನದಲ್ಲಿ (ಕೊಪ್ಪ - ೩೪) ಇದನ್ನು 'ಸಿಡಿಯ ಮಾನಿಯಗ್ರಾಮ' ಎಂದೂ, ಕ್ರಿ.ಶ. ೧೪೦೪ರ ಶಾಸನದಲ್ಲಿ (ಕೊಪ್ಪ - ೨೫) ಇದನ್ನು 'ಶಿಡಿಮಾನಿ' ಎಂದೂ ಕರೆಯಲಾಗಿದೆ. ಕೊಪ್ಪ - ೨೫ರ ನಾಗರಾಕ್ಷರ ಶಾಸನದಲ್ಲಿ ವಿಶೇಷವಾಗಿ ತಪ್ಪುಗಳಿವೆ ಎಂದು ಎ.ಕ. VI ರಲ್ಲೇ ತಿಳಿಸಿದೆ(ಕೊಪ್ಪ ತಾಲೂಕಿನ ಇದೊಂದೇ ಶಾಸನದಲ್ಲಿ 'ಆರಗ'ವನ್ನು 'ಆರಂಗ'ಎಂದು ಬರೆದಿದೆ). ಆದುದರಿಂದ ಇದು ಸಿಡಿಮಾನಿಯೇ ಇರಬೇಕು. ಕೊಪ್ಪ - ೩೪ರ ಶಾಸನದ ಆರಂಭದ ಭಾಗದಲ್ಲಿ, ವೀರಬಲ್ಲಾಳ ರಾಯನು ಶಕವರುಷ ೧೨೩೫ರಲ್ಲಿ (ಕ್ರಿ.ಶ. ೧೩೧೩) ಸಾಂತಳಿಕೆನಾಡಿನ ಸಿಡಿಯಮಾನಿಯ ಗ್ರಾಮವನ್ನು ಧಾರೆಯೆರದನೆಂದು ತಿಳಿಸಿದೆ (ಕಾರಣ ತಿಳಿದಿಲ್ಲ). ಇದರಿಂದ ಈ ಊರಿನ ಹೆಸರು ೧೪ನೇ ಶತಮಾನದ ಪೂರ್ವದಲ್ಲೇ 'ಸಿಡಿಯಮಾನಿ' ಎಂದಿತ್ತು ಎಂದು ತಿಳಿಯಬಹುದು. ಇದು 'ಸಿಡಿತಲೆ'ಯನ್ನು ನೀಡಿದ ವೇಳವಾಳಿಯ ವಂಶಸ್ಥರಿಗೆ ದಾನಮಾಡಿದ ಗ್ರಾಮವಿರಬಹುದು. ಇದರ ವ್ಯುತ್ಪತ್ತಿ, ಸಿಡಿಯಮಾನ್ಯ → ಸಿಡಿಯಮಾನಿ → ಸಿಡಿಮಾನಿ = ಸಿಡಿಮನೆ ಎಂದಿರಬಹುದು.

**ಅರ್ರಗೊಡಗಿ** : ಕೊಪ್ಪ - ೨೯ರ ಶಾಸನದಲ್ಲಿ (ಕ್ರಿ.ಶ. ೧೩೯೩) ಈ ಸ್ಥಳನಾಮವು ಕಂಡುಬರುತ್ತದೆ. ಇದರ ವ್ಯುತ್ಪತ್ತಿಯನ್ನು ಹೀಗೆ ವಿವರಿಸಬಹುದು : ಅರ = ಧರ್ಮ, ದಾನ; ಕೊಡಿಗೆ = ಕೊಟ್ಟುದುದು. ಅಂದರೆ ದಾನವಾಗಿ ಕೊಟ್ಟ ಊರು.

**ನಾಬಳ** : ನಾಬಾಯ್ (ನಾಲೆಯ ಬಾಯಿ)*೧೧ + ಅಳ (ನೀರು)→ನಾಬಾಯಳ→ನಾಬಾಳ = ನಾಬಳ. ಈ ಸ್ಥಳನಾಮವು ಕೊಪ್ಪ - ೫ರ ಶಾಸನದಲ್ಲಿ (ಕ್ರಿ.ಶ. ೧೫೬೯) ದೊರೆತಿದೆ. ನೀರಿನ ಕಾಲುವೆಯ ಪ್ರಾರಂಭದಲ್ಲಿ ಇರುವ ಊರಿರಬಹುದು.

**ಸಂದೇಹಾಸ್ಪದ ಸ್ಥಳನಾಮಗಳು**

**ಆನೆಗೋಡು ಗ್ರಾಮ** : ಕೊಪ್ಪ - ೫೧ ಮತ್ತು ೫೨ರಲ್ಲಿ (ಎರಡೂ ಕ್ರಿ.ಶ. ೧೪೦೩ರ ಶಾಸನಗಳು) ಕಾರಬಯಿಲು, ಆನೆಗೋಡುಗ್ರಾಮ ಮತ್ತು ಹೊಸಕೊಪ್ಪದ ಗ್ರಾಮಗಳು ಇದೇ ಕ್ರಮದಲ್ಲಿ ಉಕ್ತವಾಗಿವೆ. ಹರಿಹರಪುರದಿಂದ ಶೃಂಗೇರಿಯ ಮಾರ್ಗದಲ್ಲಿ ಈ ಊರುಗಳು ಅದೇ ಕ್ರಮದಲ್ಲಿ ಬರುತ್ತವೆ. ಎ.ಕ. VIನ್ನು ಪ್ರಕಟಿಸಿದ ಕಾಲದಲ್ಲಿ (ಕ್ರಿ.ಶ. ೧೯೦೧) ಅಸಗೋಡು ಗ್ರಾಮದ ಹೆಸರು ಅಸಗೋಡು ಎಂದೇ ಇದ್ದುದರಿಂದ, ಅಲ್ಲದೆ ಎರಡು ಶಾಸನಗಳನ್ನೂ ತಪ್ಪಾಗಿ ಓದುವ ಸಾಧ್ಯತೆ ಕಡಿಮೆ ಯಿರುವುದರಿಂದ ಹಾಗೂ ಆನೆಗೋಡು ಎನ್ನುವ ಊರು

ಆ ಪ್ರದೇಶದಲ್ಲಿ ಬೇರೆ ಯಾವುದೂ ಇಲ್ಲದೆ ಇರುವುದರಿಂದ ಈಗಿನ ಅಸಗೋಡು ಗ್ರಾಮದ ಹೆಸರು ಕ್ರಿ.ಶ. ೧೫ನೇ ಶತಮಾನದ ಮೊದಲ ದಶಕದಲ್ಲಿ ಆನೆಗೋಡು, ಎಂದಿದ್ದಿರಬಹುದು. ಆದರೆ, ಧ್ವನಿವಾಚಿಯಾಗಿ ಆನೆಗೋಡು, 'ಅಸಗೋಡು' ಆಗುವ ಸಂಭವ ಕಡಿಮೆ.

ಒಟ್ಟಿನಲ್ಲಿ ಸ್ಥಳನಾಮಗಳ ಸಂಖ್ಯೆ, ವೈವಿಧ್ಯತೆ, ಪೂರ್ವ-ಉತ್ತರಘಟಕಗಳ ಜೋಡಣೆ ಕುತೂಹಲಕಾರಿಯಾಗಿವೆ. ಇವುಗಳಲ್ಲಿ ಬಹುತೇಕ ನಿಸರ್ಗವಾಚಿಗಳು ಎನ್ನಬಹುದು. ಕೆಲವು ಭಾಷಿಕವಾಗಿ ಜನರ ಉಚ್ಚಾರಣೆಯಿಂದ ರೂಪಗಳನ್ನು ಬದಲಿಸಿವೆ. ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಆರ್ಥಿಕ ಮತ್ತು ಸಾಮಾಜಿಕ ಕಾರಣಗಳಿಂದ ಬದಲಾದ ಹೆಸರುಗಳು ಕಡಿಮೆ ಎನ್ನಬಹುದು. ಉದಾಹರಣೆಗೆ, ಸಿಂಗೇರಿಯು ಶೃಂಗೇರಿಯಾಯಿತು ಹಾಗೂ ಮೆಣಸೂರು ಬೊಂಮ್ಮಣ್ಣಾಪುರವಾಯಿತು. ಈ ಸಾಲಿಗೆ ಮೊದಲಿನ ಹೆಸರುಗಳನ್ನು ಕಳೆದುಕೊಂಡು ಉತ್ತರ ಘಟಕಗಳಲ್ಲಿ ಕೊಡಿಗೆ ಮತ್ತು ಮಾನ್ಯಗಳನ್ನು ಹೊಂದಿರುವ ಸ್ಥಳನಾಮಗಳನ್ನು ಸೇರಿಸಬಹುದು. ಪ್ರತಿಯೊಂದಕ್ಕೂ ಭಾಷಾಚರಿತ್ರೆ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಅಥವಾ ಸಾಮಾಜಿಕ ಹಿನ್ನೆಲೆ, ಅಥವಾ ಇವುಗಳ ಸಮ್ಮಿಶ್ರಣದ ಹಿನ್ನೆಲೆ ಇದೆ. ಇದು ಸ್ಥಳನಾಮಗಳ ಮಹತ್ವ.

**ಅನುಬಂಧ**

*ಎ. ಕ. VI – ಕೊಪ್ಪತಾಲೂಕಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳನಾಮಗಳು*

| ಸ್ಥಳನಾಮ | ಶಾಸನ ಸಂಖ್ಯೆ, ಕಾಲ | ಸ್ಥಳನಾಮ | ಶಾಸನ ಸಂಖ್ಯೆ, ಕಾಲ | ಸ್ಥಳನಾಮ | ಶಾಸನ ಸಂಖ್ಯೆ, ಕಾಲ |
|---|---|---|---|---|---|
| | ಕ್ರಿ.ಶ. | | ಕ್ರಿ.ಶ. | | ಕ್ರಿ.ಶ. |
| ಅಡಗೋಳು | ೫೭(೧೫೮೮) | ಆರಡಿಕೊಪ್ಪ | ೫೭(೧೫೦೮) | ಕಿಗೆ | ೩೯(ಸು.೭೦೦) |
| ಅಡತವರು | ೨೫(೧೪೦೪) | ಆರನಿಕೊಪ್ಪ | ೫೭(೧೫೦೮) | ಕಿಳ್ | ೩೭(ಸು.೬೭೫) |
| ಅಡಮೊರಡಿ | ೨೫(೧೪೦೪) | ಆಲೆಯ ಮಕ್ಕಿ | ೪೭(೧೫೩೦) | ಕುಂಕುಶೆನಾಡು | ೧೯(೧೪೩೭) |
| ಅರಂವಳ್ಳಿ | ೨೭(೧೪೨೭) | ಆಳಸರ | ೫೪(೧೪೦೪) | ಕಂಚೂರು | ೫೦(೧೫೯೮) |
| ಅರಲೂರು | ೫೮(?೧೫೯೨) | ಉಂಟುವಳಿ | ೫೦(೧೫೯೮) | ಕುಂಡಗದ್ದೆ | ೫೧(೧೪೦೩) |
| ಅರುವತಿ | ೪೯(೧೩೯೨) | ಉರುರ್ವಾನಿ | ೫(೧೫೬೯) | ಕುಂಬಾರಕೊಪ್ಪ | ೨೪(೧೬ನೇ ಶ?) |
| ಅರ್ಗೊಡಗಿ | ೨೯(೧೩೯೩) | ಉಳುರ್ವಾನಿ | ೫(೧೫೬೯) | ಕುಂಮರಿಕೋಡು | ೩೨(೧೪೪೮) |
| ಅಲಮಾನಿ | ೫೧(೧೪೦೩) | ಎರಡಂಗಡಿ | ೫೭(೧೫೦೮) | ಕುಕುಸೆನಾಡು | ೧೮(೧೨೯೪) |
| ಅಲ್ಲಾಳದೇವಿ | ೫೩(೧೪೦೩) | ಕಡಲೆಮ್ಮನೆಗ್ರಾಮ | ೩೩(೧೪೦೭) | ಕುನ್ತಳದೇಶ | ೧(ಸು.೧೦೭೦) |
| | ೫೪(೧೪೦೩) | ಕಡವೂರು ಹೊಸಕೇರಿ | ೩೫(೧೪೦೦) | ಕುಡಿಗಡಿ | ೫೨(೧೪೦೩) |
| ಅಜಿಹಳ್ಳಿ | ೧೨(೧೩೩೮) | ಕಣಲೂರು | ೨೪(೧೬ನೇಶ?) | ಕೆರೆಕೊಪ್ಪಗ್ರಾಮ | ೩೩(೧೪೦೭) |
| ಅಂಗಡಿ | ೧೨(೧೩೩೮) | ಕದಂಬಮಣ್ಣಲ | ೩೮(ಸು.೬೭೫) | ಕೆರೆಯಕೊಪ್ಪ | ೫೧(೧೪೦೩) |
| | ೪೬(೧೭೧೯) | ಕರಗರಸಿನಗ್ರಾಮ | ೫೦(೧೫೯೮) | | ೫೨(೧೪೦೩) |
| ಅಂಬುಗನವಳ್ಳಿ | ೧೩(೧೩೨೮) | ಕಲ್ಯಾಣ | ೪೩(೧೦೯೦) | ಕೆಳಊರಗ್ರಾಮ | ೪೬(೧೭೧೯) |
| ಅಂಮಣಿಕೆ | ೨೮(೧೩೨೮) | ಕಲುಮಕ್ಕಿ | ೫೭(೧೫೦೮) | ಕೆಳಕೊಪ್ಪ | ೩೨(೧೪೪೮) |
| ಆಡವಳಿ | ೮(೧೪೩೭) | | ೫೮(?೧೫೯೨) | ಕೆಳದೀ | ೪೬(೧೭೧೯) |
| ಆಡುವಳ್ಳಿ | ೫(೧೫೬೯) | ಕಳಕೋಡು | ೩೫(೧೪೦೦) | | ೬೦(೧೭೦೯) ೬೧(೧೬೨೭) |
| ಆತ್ರವಳಿ | ೪೯(೧೩೯೨) | ಕಳದಿ ಅಂಗಡಿ | ೫೧(೧೪೦೩) | ಕೆಲ್ಗ | ೪೦(ಸು.೭೦೦) |
| ಆನೆಗೋಡು | ೫೧(೧೪೦೩) | ಕಳ್ಳಿಯಮಕ್ಕಿ | ೪೭(೧೫೩೦) | ಕೇದಗೆಸಾಲೂರು | ೬೧(೧೬೨೭) |
| | ೫೨(೧೪೦೩) | ಕಾಗಲುಗೋಡು | ೫೭(೧೫೦೮) | ಕೇಶಿಕೊಪ್ಪ | ೨೩(೧೬ನೇ ಶ?) |
| ಆರಂಗ | ೨೫(೧೪೦೪) | ಕಾರಕಾಳ | ೨೫(೧೪೦೪) | ಕೊಂಡುಗುಳಿ | ೫೯(೧೬೦೧) |
| ಆರ್ರಂಬಳ್ಳಿಯಂಗಡಿ | ೩೫(೧೪೦೦) | ಕಾರಬಯಲು | ೩೦(೧೩೭೮) | ಕೊಕ್ಕೋಡು | ೫೦(೧೫೯೮) |
| ಆರಗ | ೬(೧೩೬೯) | | ೪೯ (೧೩೯೨) | ಕೊಟ್ಟವೂರು | ೩೧(೧೩೮೧) |
| | ೭(ಸು. ೧೪೧೨) ೧೯(೧೪೩೭) | | ೫೧(೧೪೦೩) | ಕೊತಾರ | ೫೭(೧೫೦೮) |
| | ೨೭(೧೪೦೭)೩೦ (೧೩೭೮) | ಕಾರಬೈಲು | ೫೨(೧೪೦೩) | | |
| | ೩೧ (೧೩೮೧)೩೨ (೧೪೪೮) | ಕಾರುಸಿ | ೫೧(೧೪೦೩) | ಕೊಡನಾಡು | ೫೭(೧೫೦೮) |
| | ೩೩ (೧೪೦೭) ೩೫(೧೪೦೦) | ಕಾಲುವಳಿ | ೩೫(೧೪೦೦) | | ೫೮(೧೫೯೨) ೫೯(೧೬೦೧) |
| | ೪೯ (೧೩೯೨) ೫೨(೧೪೦೩) | ಕಾಹಿನಗೋಲಿ | ೨೫(೧೪೦೪) | ಕೊಡಲ | ೨೭(೧೪೨೭) |
| | ೫೩ (೧೪೦೩) ೫೪(೧೪೦೪) | ಕಿಗ್ಗ | ೫೧(೧೪೦೩) | ಕೊಡೂರಮನೆ | ೫೦(೧೫೯೮) |

| | |
|---|---|
| ಸಿಂಗನೂರಗ್ರಾಮ | ೪೬(೧೭೧೯) |
| ಸಿಂಗೇರಿ | ೧೯(೧೪೩೭) |
| | ೪೪(೧೪೫೧) |
| ಸಿಡಿಯಮಾನಿಯಗ್ರಾಮ | ೩೪(೧೩೮೬) |
| ಸಿತೂರು | ೧೫(೧೨೫೨) ೫೧(೧೪೦೩) |
| ಸಿಮ್ಮ್ಸೆ | ೧೪(೧೧೬೭) ೧೫(೧೨೫೨) |
| ಸಿವಪುರ | ೪೬(೧೭೧೯) |
| ಸುಂಕರಡಿ | ೫೮( ?೧೫೯೨) |
| ಸುಳಿಗೋಡು | ೫೦(೧೫೯೮) |
| ಸೂರ್ಯಕೊಪ್ಪ | ೫೦(೧೫೯೮) |
| ಸೋಮಲಾಪುರ | ೫೭(೧೫೮೮)೫೯(೧೬೦೧) |
| ಹಂಚೆ | ೫೪(೧೪೦೪) |
| ಹಂಪನಲವೀಡು | ೧೭(೧೫೫೩) |
| ಹಚರು | ೪೯(೧೩೯೨) |
| ಹರನೂರು | ೫೯(೧೬೦೧) |
| ಹರತಾಳ | ೫೧(೧೪೦೩) |
| ಹರುಗೋಲು | ೪೭(೧೫೩೦) |
| ಹಲಗೋಡುಗ್ರಾಮ | ೫೧(೧೪೦೩) |
| ಹಸ್ತಿನವತಿಪಟ್ಟಣ | ೬(೧೩೬೯) |
| ಹಳಮಾನಿಗ್ರಾಮ | ೪೬(೧೭೧೯) |
| ಹಳೇಬೀಡು | ೧೭(೧೫೫೩) |
| ಹಾತಗೆ | ೫೨(೧೪೦೩) |
| ಹಾನಂಬಿ | ೧೭(೧೫೫೩) |
| ಹಾರಗಿಯಗ್ರಾಮ | ೫೧(೧೪೦೩) |
| ಹಾಲುಮುತ್ತೂರು | ೨೫(೧೪೦೪) |
| | ೨೭(೧೪೨೭)೩೨(೧೪೪೮) |
| | ೩೫(೧೪೦೦) |
| ಹಿರಿಯಂಗಡಿ | ೫೧(೧೪೦೩) |
| ಹುಟ್ಟೆಹರ್ತಿಗೆ | ೪೯(೧೩೯೨) |
| ಹುಣ್ಸೆಕೆಟೆ | ೫೧(೧೪೦೩)೫೨(೧೪೦೩) |
| ಹುರಿಸಿಗೆನಾಡು | ೯(೧೫೯೩) |
| ಹುಲಿಗಟೆ | ೧೩(೧೩೨೮) |
| ಹುಲಿಗೆಟೆಯಅಂಗಡಿ | ೧೩(೧೩೨೮) |
| ಹುಲಿಯಕೋಡು | ೫೪(೧೪೦೪) |
| ಹುಲ್ಲುಗೋಡು | ೩೫(೧೪೦೦) |
| ಹೆಚೆ | ೪೮(೧೮೧೧) |
| ಹೆದೆನಾಡು | ೫೮( ?೧೫೯೨) |
| ಹೆದೆಸೆಗ್ರಾಮ | ೪೬(೧೭೧೯)೪೮(೧೮೧೧) |
| ಹೆಬ್ಬರಡಿ | ೨೭(೧೪೨೭) |
| ಹೆಬ್ಬಳುಗಟ್ಟೇ | ೫೭(೧೫೮೮) |
| ಹೊಂಗನಾಡು | ೬(೧೩೬೯) |
| ಹೊಂನಾನಿ | ೧೨(೧೩೩೮) |
| ಹೊದಸೆ | ೫೧(೧೪೦೩) |
| ಹೊಸಕೊಪ್ಪ | ೫೧(೧೪೦೩) |
| ಹೊಸಮಕ್ಕಿ | ೫೦(೧೫೯೮) |
| ಹೊಸವಂಗಿ | ೫೯(೧೬೦೧) |
| ಹೊಸೂರು | ೪೯(೧೩೯೨) |
| ಹೊಳೆಯಕೊಪ್ಪ | ೫೧(೧೪೦೩) |

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧. i. **Karnataka State Gazetteer - Chikmagalur District** (C. Ed.) Dr. Suryanath U. Kamath, Bangalore, 1981, p, 3, (ಮುಂದೆ ಇದರ ಸಂಕೇತವಾಗಿ 'KSG - Chikmagalur Dt. 1981' ಎಂದಷ್ಟೇ ಬಳಸಿದೆ.)
ii. ಚಿಕ್ಕಮಗಳೂರು ಜಿಲ್ಲಾದರ್ಶನ : (ಪ್ರ.ಸಂ.) ಬಿ. ಪಾರ್ಥಸಾರಥಿ, ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು, ೧೯೮೬-ಪುಟ ೩ (ಮುಂದೆ ಇದರ ಸಂಕೇತವಾಗಿ 'ಚಿ.ಜಿ.ದ. ೧೯೮೬' ಎಂದಷ್ಟೇ ಬಳಸಿದೆ)

*೨ ಚಿ.ಜಿ.ದ., ೧೯೮೬- ಪುಟ ೩೪

*೩. ಡಾ॥ ಎಂ.ಎಂ. ಕಲಬುರ್ಗಿ; ಕನ್ನಡ ನಾಮ ವಿಜ್ಞಾನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೯, ಪುಟ ೬೩

*೪. ಅದೇ, ಪುಟ ೫೮

*೫ ಅದೇ, ಪುಟ ೭೫

*೬ ಕನ್ನಡ ರತ್ನಕೋಶ., ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

*೭ ಕೆಮ್ತೂರು ರಘುಪತಿ ಭಟ್ಟ: ತುಳುನಾಡಿನ ಸ್ಥಳನಾಮಗಳು, ಕ.ಸಾ.ಪ, ಬೆಂಗಳೂರು, ೧೯೭೯, ಪುಟ. ೪೩

*೮. ಅದೇ, ಪುಟ ೪೩

*೯. ಕನ್ನಡ ನಿಘಂಟು, ಕ.ಸಾ.ಪ, ಬೆಂಗಳೂರು

*೧೦. KSG - Chikmagalur Dt, 1981

*೧೧. ಕನ್ನಡ ನಿಘಂಟು, ಕ.ಸಾ.ಪ, ಬೆಂಗಳೂರು

(ಈ ಪ್ರಬಂಧವನ್ನು ಬರೆಯಲು ಪ್ರೋತ್ಸಾಹಿಸಿದ ಮತ್ತು ಸಲಹೆಗಳನ್ನು ನೀಡಿದ ಡಾ॥ ಎಚ್.ಎಸ್. ಗೋಪಾಲರಾಯರಿಗೆ ಕೃತಜ್ಞತೆಗಳು.)

ಜಗದೀಶ, ಎಂ ಎಚ್. ಅಗಸಿಬಾಗಲವಾರ *

# ಹುಲ್ಲುಣಿಯ ತೀರ್ಥ: ಗಳಗನಾಥ

ಶಿಕಾರಿಪುರ ತಾಲೂಕು (ಬಳ್ಳಿಗಾವೆ) ಬೆಳಗಾವಿ (ಕ್ರಿ.ಶ. ೧೧೪೯ ಫೆಬ್ರವರಿ ೨೦)ನೆಯ ಶಾಸನದಲ್ಲಿ ಭೂಲೋಕಮಲ್ಲ ಸೋಮೇಶ್ವರನು ಹೊಯ್ಸಳ ವಿಷ್ಣುವರ್ಧನನ ಚಟುವಟಿಕೆಯನ್ನು ನಿಯಂತ್ರಿಸಲು ದಕ್ಷಿಣದ ಕಡೆಗೆ ಪ್ರಯಾಣ ಮಾಡಿ ಹುಲ್ಲುಣಿಯ ತೀರ್ಥದಲ್ಲಿ ಬೀಡು ಬಿಟ್ಟಿರುವುದನ್ನು ಸಾಲು ೩೧-೩೨ರಲ್ಲಿ ಹೀಗೆ ಹೇಳಿದೆ:

*ಚಾಳುಕ್ಯ ಚಕ್ರವರ್ತಿ ಸೋಮೇಶ್ವರೋರ್ವ್ವೀಶರಂ ಭೂಲೋಕಮಲ್ಲಂ ದಿಗ್ವಿಜಯಂಗೆಯ್ಯೆಲೆನ್ದು ದಕ್ಷಿಣಾಭಿಮುಖವಾಗಿ ಬನ್ದು ಹುಲ್ಲುಣಿಯ ತೀರ್ತ್ಥದೊಳ್ಬೀಡಂ ಬಿಟ್ಟು ಸುಖಸಂಕಥಾವಿನೋದದಿಂ ಧರ್ಮ್ಮ ಪ್ರಸಂಗನು.* *೧

ಹೊಯ್ಸಳ ವಿಷ್ಣುವರ್ಧನನ ಸಮಕಾಲೀನ ಶಾಸನಗಳು ಅವನು ಉಚ್ಚಂಗಿಯ ಪಾಂಡ್ಯ ಮತ್ತು ಹಾನಗಲ್ಲು ಕದಂಬರ ಪ್ರಾಂತಗಳ ಮೇಲೆ ಆಕ್ರಮಣ ಮಾಡಿದ್ದನ್ನು ತಿಳಿಸುತ್ತವೆ. ಉಚ್ಚಂಗಿಯ ಪಾಂಡ್ಯರು ನೊಳಂಬವಾಡಿಯ ನೊಳಂಬರ ಸ್ಥಾನ ಆಕ್ರಮಿಸಿದ್ದು, ದುಮ್ಮೆಯ ಬಳಿ ಆದ ಕಾಳಗದಲ್ಲಿ. ವಿಷ್ಣುವರ್ಧನನು ಅವರನ್ನು ಸೋಲಿಸಿ ಕ್ರಿ.ಶ.೧೧೧೬ರಲ್ಲಿ "*ನೊಳಂಬವಾಡಿಗೊಂಡ*" ಎಂಬ ಬಿರುದನ್ನು ಗಳಿಸಿದ. ಹೊಯ್ಸಳ ಸೇನಾನಿ ಗಂಗರಾಜನು ಕ್ರಿ.ಶ. ೧೧೧೮ರಲ್ಲಿ ಕಣ್ಣೆಗಾಲ ಬಳಿಯ ಯುದ್ಧದಲ್ಲಿ ಚಾಲುಕ್ಯ ಸೇನಾನಿ ಬಲವನ್ನು ಮುರಿಯಲಾಗಿ, ಹಳ್ಳೂರ ಬಳಿ ಕ್ರಿ.ಶ. ೧೧೨೦ರಲ್ಲಿ ಚಾಲುಕ್ಯ ಸೇನಾನಿ ಬೊಪ್ಪಣ್ಣನಿಗೆ ಸೋಲು ಉಂಟಾಯಿತು. *೨ ಹಾನಗಲ್ಲು ಕದಂಬರ ಮೇಲೆ ಈಗಾಗಲೇ ಆಕ್ರಮಣ ಮಾಡಿದ್ದ ವಿಷ್ಣುವರ್ಧನನು ತುಂಗಭದ್ರಾ ನದಿಯನ್ನು ದಾಟಿ ಬಂಕಾಪುರದಲ್ಲಿ ಬೀಡು ಬಿಟ್ಟಿದ್ದನು.

ಡಾ॥ಬಾ.ರಾ. ಗೋಪಾಲರು, ದಕ್ಷಿಣದ ಕಡೆಗೆ ಪ್ರಯಾಣ ಮಾಡಿದನೆಂಬುದು ಸಾಮಾನ್ಯ ಹೇಳಿಕೆಯಾಗಿದ್ದು, ಬೆಳಗಾವಿ ಶಾಸನವು ತಿಳಿಸುವಂತೆ ಭೂಲೋಕಮಲ್ಲ ಸೋಮೇಶ್ವರನು ಹುಲ್ಲುಣಿಯ ತೀರ್ಥದಲ್ಲಿ ಬೀಡು ಬಿಟ್ಟು, ನಂತರ ಮುಂದಿನ ತಿಂಗಳು ಕಲ್ಯಾಣದಲ್ಲಿದ್ದನೆಂದು ತಿಳಿಸಿದ್ದಾರೆ. ಈ ಹುಲ್ಲುಣಿಯ ತೀರ್ಥವನ್ನು ಇನ್ನೂ ಗುರ್ತಿಸಿಲ್ಲವೆಂದೂ ಇದನ್ನು ಶಿವಮೊಗ್ಗ ಅಥವಾ ಧಾರವಾಡ ಜಿಲ್ಲೆಯಲ್ಲಿ ಗುರ್ತಿಸುವ ಸಾಧ್ಯತೆ ಇದೆಯೆಂದಿದ್ದಾರೆ. *೩ ಆದರೆ ಭೂಲೋಕಮಲ್ಲ ಸೋಮೇಶ್ವರನು ಹಾನಗಲ್ಲು ಕದಂಬರಿಗೆ ಹೊಯ್ಸಳರ ವಿರುದ್ಧ ಸಹಾಯ ಮಾಡಲು ಬಂದಿದ್ದರೆ ಸೋಮೇಶ್ವರನು ಬೀಡು ಬಿಟ್ಟಿರುವ ಹುಲ್ಲುಣಿಯ ತೀರ್ಥವು ಹಾನಗಲ್ಲು ಕದಂಬರು ಆಳುವ ಪ್ರದೇಶದಲ್ಲಿ ಇರುವ ಸಾಧ್ಯತೆಯಿಂದ ಈ ಹುಲ್ಲುಣಿಯ ತೀರ್ಥವನ್ನು ಧಾರವಾಡ ಜಿಲ್ಲೆಯಲ್ಲಿ ಗುರ್ತಿಸುವ ಸಾಧ್ಯತೆ ಹೆಚ್ಚಾಗುತ್ತದೆ.

ಹುಲ್ಲುಣಿ: ಪುಲ್ಲುಣಿಯ ಉಲ್ಲೇಖವು ೬ ಶಾಸನಗಳಲ್ಲಿ ಬಂದಿದ್ದು ಅದು *೬ ಹೀಗಿದೆ; ದಾವಣಗೆರೆ (ಹರಿಹರ ತಾ.) ೧೧೮ನೆಯ ಕ್ರಿ. ಶ. ೯೯೨ರ ಒಸನ ಶಾಸನದಲ್ಲಿ ಮಹಾಸಾಮನ್ತ ಮುಳುಗುಂದ ಸಿಂಧ ಜಾತರಸರು ಕದಂಬಳಿಗೆ ಸಾವಿರವನ್ನು ಆಳುತ್ತಿರುವಾಗ ಬ್ರಹ್ಮರಾಸಿ ಪಂಡಿತರಿಗೆ ಪುಲ್ಲುಣಿಯ ಬಾಕಿಗಳನ್ನು ನೀಡುವಾಗ (ಸಾಲು ೧೦-೧೬) ಹಳ್ಳಿಗಳ ದಾನದ ಉಲ್ಲೇಖ ಹೀಗಿದೆ:

*ಮಹಾಸಾಮನ್ತ ಮುಳ್ಗುನ್ದ ಶ್ರೀಮತ್ ಜಾತರಸರ ಕದಂಬಳಿಗೆ ಸಾಯಿರಮುಮಂ ಉತ್ತರೋತ್ತರಮಾಗೆ ಆಳುತ್ತಮಿರೆ ಬ್ರಹ್ಮರಾಸಿ ಪಂಡಿತರ್ಗ್ಗೆ ಆಮ್ನಾಯದಲಾದ ಒಸನದ ತೀರ್ಥವ ಕಾಲಂ ಕಚ್ಚಿ ಕೊಟ್ಟಂ ಪುಲ್ಲುಣಿಯ ಮರ್ಯ್ಯಾದೆ ಸಿರಿಗೆರೆ ಪೊಸವೂರು ಸವಣೂರು ಕಿರಿಗೇರಿ ಇವು ಪೂರ್ವಮರ್ಯ್ಯಾದೆ::* *೪

ಹಾವೇರಿ ತಾ.ಗಳಗನಾಥದ ೩ ಶಾಸನಗಳ ಪೈಕಿ ಮೊದಲನೇ ಸೋಮೇಶ್ವರನ ಕ್ರಿ.ಶ.೧೦೫೫-೫೬ರ ಶಾಸನದಲ್ಲಿ

---

* ಮನೆ ನಂ. ೬೬, ಮೊದಲನೇ ಕ್ರಾಸ್, ಹೊಸಮನೆ ಬಡಾವಣೆ, ಶಿವಮೊಗ್ಗ - ೫೭೭ ೨೦೧

**ಕೈಲಾಸದ ದೊರೆ ಪುಲ್ಲುಣಿಯ... ಮರುವವರೊಳಿರೆ: ಶ್ರೀ ಸ್ವಸ್ತಿ.. ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರ... ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ ಮತ್ತೈಲೋಕ್ಯಮ. *೫**

- ಎಂದಿದೆ. ಕ್ರಿ.ಶ. ೧೦೭೯ ಮಾರ್ಚ್ ೨೦ರಲ್ಲಿ ಜಯಸಿಂಹದೇವನು ಎರಡು ಆರುನೂರು, ಬನವಾಸಿ ೧೨೦೦೦ ಮತ್ತು ಸಾನ್ತಳಿಗೆ ೧೦೦೦ ಆಳುತ್ತಿರುವಾಗ ಮೊಕರಿ ಬಮ್ಮರ್ಯ್ಯ ಗಳಗೇಸ್ವರದೇವರ ಮಂಟಪದ ಕೆಲಸಕ್ಕೆ ನೀಡಿದ ದಾನದಲ್ಲಿ ಸಾಲುಗಳು ೨೩-೨೮ ಹೀಗಿವೆ. *೬

**ಶ್ರೀ ಮನ್ಮೊಕರಿ ಬಮ್ಮರ್ಯ್ಯಂ ಚಾಳುಕ್ಯ ವಿಕ್ರಮ ವರ್ಷ ೩ನೆಯ ಸಿದ್ಧಾರ್ತ್ಥ ಸಂವತ್ಸರದ ಚೈತ್ರ ಸು ಪುಣ್ಣಮೆ ಆದಿವಾ ( ರ ) ಸಂಕ್ರಾನ್ತಿಯನ್ನು ಪುಲ್ಲುಣಿಯ ತೀರ್ಥವಂ ಮಿನ್ನು ತಮ್ಮಬ್ಬೆ ಜೋಗಿಯಬ್ಬೆಗೆ ಪರೋಕ್ಷವಿನೆಯಂ**

ಗಳಗೇಸ್ವರದೇವರ ಮಣ್ಣಪದ ಬೆಸಕೆ ೩೦ ಗದ್ಯಾಣ ಪೊನ್ನಂ ಕೊಟ್ಟನೆ... ಕ್ರಿ.ಶ. ೧೦೮೦ ಜೂನ್ ೨೦ರಲ್ಲಿ ಜಯಸಿಂಹದೇವನ ಮಹಾಮಂಡಳೇಶ್ವರ ಚೆನ್ನ ಮೂವತ್ತೊ-ರುಂಬಾಡ ಕೊಂಡವಟಿ, ಮಹಲಿಗೆನಾಡು, ಆಳುತ್ತಿರುವಾಗ ಬೆಳಹುಗೆ ೭೦ ರಲ್ಲಿಯ ಪುಲ್ಲುಣಿಯ ಉಲ್ಲೇಖವು (ಸಾಲು ೬೪-೬೫) ಹೀಗಿದೆ:

***ತಮ್ಮಾ ಳಿಕೆಯ ಬೆಳಿಯುಗೆ ಯೆಪ್ಪತ್ತರೊಳಗಣ ಸರ್ವನಮಸ್ಯದ [ಪು]ಲ್ಲುಣಿಯದಲ್ಲಿಯ ಗಳಗೇಶ್ವರ ದೇವರ್ಗ್ಗೆ ಪುನರ್ವೃತ್ತಿ ಮಾಡಿ ದೇವರಂಗಭೋಗ *೭...***

ಹಾವೇರಿ ತಾ. ಹರಳಹಳ್ಳಿಯ ಎರಡು ಶಾಸನಗಳಲ್ಲಿ ಹುಲ್ಲುಣಿಯ ಉಲ್ಲೇಖವಿದೆ. ಕ್ರಿ.ಶ. ೧೧೮೧ ಮತ್ತು ೧೧೮೮ರಲ್ಲಿ ಜೋಯದೇವನು ವಿಕ್ರಮೇಶ್ವರ - ಗುತ್ತೇಶ್ವರ ದೇವಸ್ಥಾನವನ್ನು ಸ್ವಯಂಭು ಸೋಮನಾಥ ದೇವಸ್ಥಾನದ ಪ್ರಾಂಗಣದಲ್ಲಿ ಕಟ್ಟಿಸಿದ. ಈ ದೇವಸ್ಥಾನಗಳು ವಿಕ್ರಮಪುರ ಗ್ರಾಮದಲ್ಲಿರುವ ದಂಡನಾಯಕ ದಾಸಿರಾಜನ ದಾನ ಶಾಸನದಲ್ಲಿ ಹೀಗೆ ಉಲ್ಲೇಖಿಸಲ್ಪಟ್ಟಿವೆ:

***ಬೆಳಹಿಗೆಯೊಳೂರಿಂ ಮೂಡ ಹುಲ್ಲುಣಿಯ ಬಟ್ಟೆಯಂ ಬಡಗ... ....ಲ್ಲಹನ ಬಾವಿಯ ಪಡುವಲೆರೆ ಮತ್ತರ್ನ್ನಾಲ್ಕು ಮತ್ತಂ ಹಾಹನೂರೊಳೂರಿಂ ನೈರುತ್ಯದೊಳ ಹೊಲ್ಲಕನ ಕೆರೆಯ ಬಡಗಣ ಕೋಡಿಯ ಕೆಳಗೆ ಮೊರಡಿಯಂ ಮೂಡಲ್ ಗದ್ದೆ ಮ....***

ಕ್ರಿ.ಶ. ೧೨೧೩ರಲ್ಲಿ ವೀರ ವಿಕ್ರಮಾದಿತ್ಯನು ಗೊಟ್ಟಗಡಿಯ ಸ್ವಯಂಭು ಸೋಮನಾಥ *೮ ದೇವಾಲಯದ ಸಂನಿಧಾನದೊಳು ತುಳುವಲೇಶ್ವರ ದೇವಾಲಯ ನಿರ್ಮಾಣ ಮಾಡಿ ಸೋಮನಾಥ ದೇವರ ಸ್ಥಾನಾಚಾರ್ಯರಿಗೆ ತುಂಗಭದ್ರಾತೀರದ ಪಡುವಣ ತಡಿಯ ಗುಡ್ಡಹಾಳಪಳ್ಳಿಯನ್ನು ದಾನವಾಗಿ ಕೊಟ್ಟ ಶಾಸನದ ೭೩-೭೪ನೇ ಸಾಲುಗಳು ಹೀಗಿವೆ:

**..ಹುಲ್ಲುಣಿಯ ಹಾಹನೂರ ತೆಲೆವೊಲಸಲಿ ಹಂಮಾಡಿಯ ಬಂಮನ ಕೋಡಿಂ ಬಡಗಲ್ಲುತ್ತುಳುವಲದೇವಿಯರ್ಗ್ಗೆ *೯**

ಈ ಶಾಸನಗಳಲ್ಲಿ ಮುಳ್ಗುನ್ದ, ಕದಂಬಳಿಗೆ ಬೆಳಹುಗೆ ೭೦ ವಿಭಾಗಗಳ ಉಲ್ಲೇಖ ಬಂದಿದೆ. ಡಾ॥ ಶ್ರೀನಿವಾಸ ರಿತ್ತಿಯವರು ಈ ವಿಭಾಗಗಳಲ್ಲಿ ಬರುವ ಗ್ರಾಮಗಳನ್ನು ಹೀಗೆ ತಿಳಿಸಿದ್ದಾರೆ: ಮುಳ್ಗುನ್ದ-೧೨ ವಿಭಾಗವು ಗದಗ ತಾಲೂಕು ಮುಳುಗುಂದ, ಹೊಸೂರು, ಕುರ್ತಕೋಟಿ, ಕಣವಿ, ಹರ್ತಿ, ವೆಂಕಟಾಪುರ, ಯಲಿಸಿರೂರು, ಕಲ್ಲೂರು ಮತ್ತು ಯಲವಟ್ಟಿಗ್ರಾಮಗಳನ್ನೊಳಗೊಂಡು, ಬೆಳಹುಗೆ ೭೦-ಬೆಳಹುಗೆ ೭೦ ಬನವಾಸಿ ನಾಡಿನ ವಿಭಾಗವಾಗಿದ್ದು ಗುತ್ತಲ, ನೀರಲಗಿ, ಕನವಳ್ಳಿಗಳನ್ನೊಳಗೊಂಡ ಇಂದಿನ ಬೆಳವಿಗಿಯನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡಿದ್ದಿತು. *೧೦

ಪ್ರಸ್ತುತ ಗಳಗನಾಥ, ಹರಳಹಳ್ಳಿ ಶಾಸನಗಳಿಂದ ಬೆಳಹುಗೆ ೭೦ರಲ್ಲಿದ್ದ ಇತರ ಗ್ರಾಮಗಳು ಗಳಗನಾಥ, ಹರಳಹಳ್ಳಿ, ಹಾವನೂರು, ಗುಡ್ಡಹಾಳಪಳ್ಳಿ, ಗೊಟ್ಟಗಡಿ ಎಂದು ತಿಳಿಯಬಹುದು. ಕ್ರಿ.ಶ. ೧೨೧೩ರ ಹರಳಹಳ್ಳಿ ಶಾಸನದಲ್ಲಿ ಹುಲ್ಲುಣಿಯ ಹಾವನೂರು ಎಂದಿರುವುದರಿಂದ, ಹುಲ್ಲುಣಿಯು ಹಾವನೂರಿನೊಳಗೆ ಇರಬಹುದೆಂಬ ಸಂಶಯ ಬರುತ್ತದೆ. ಆದರೆ ಪ್ರಸಿದ್ಧ ಊರಿನ ಜೊತೆಗೆ ಅಕ್ಕಪಕ್ಕದ ಊರುಗಳನ್ನು ಆ ಊರಿನ ಜೊತೆಗೆ ಬಳಸಲಾಗುತ್ತಿತ್ತು. ಕ್ರಿ.ಶ. ೧೨೩೮ರ ರಟ್ಟವಳ್ಳಿಯ ಎರಡನೆಯ ಸಿಂಘಣನ ಶಾಸನದ ಸಾಲು ೬೪-೬೭ರಲ್ಲಿ ಕಡವೂರಿನ ಸುತ್ತಲಿನ ಹಳ್ಳಿಗಳ ಹೆಸರುಗಳನ್ನು ಹೀಗೆ ಬಳಸಲಾಗಿದೆ - ಕಡವೂರ ಎಡಗೋಡೆ, ಕಡವೂರ ಕೂವಲಿ, ಕಡವೂರಿಗಂ ಹಾಡೆಗಂ, ಕಡವೂರಿಗಂ ಸಿದ್ಧಗೇರಿ, ಕಡವೂರಿಗಂ ರಟ್ಟಪಳ್ಳಿ *೧೧ ಇಂದಿಗೂ ಕೂಡ ಈ ರೀತಿ ಹೆಸರುಗಳನ್ನು ಹೇಳಲಾಗುತ್ತಿದೆ. ಉದಾ: ಕಡಪಟ್ಟಿ ಹಳಿಯಾಳ, ದಾಂಡೇಲಿ - ಹಳಿಯಾಳ ಇತ್ಯಾದಿ. ಆದ್ದರಿಂದ ಹಾವನೂರನ್ನು ಹುಲ್ಲುಣಿಯ ಜೊತೆಯಲ್ಲಿ ಬಳಸಿರುವುದರಿಂದ ಹುಲ್ಲುಣಿಯು ಆ ಭಾಗದಲ್ಲಿ ಅಂದು ಪ್ರಸಿದ್ಧ ಊರು ಆಗಿರಬೇಕು.

ಕ್ರಿ.ಶ. ೧೧೮೧ ಮತ್ತು ೧೧೮೮ರ ಹರಳಹಳ್ಳಿಯ ಶಾಸನದಲ್ಲಿ ಬೆಳಹುಗೆಯ ಪೂರ್ವಕ್ಕೆ ಹುಲ್ಲುಣಿಯ ದಾರಿಯಲ್ಲಿಯ ಹೊಲ ಇತ್ಯಾದಿ ಇದ್ದು ಹುಲ್ಲುಣಿಯು ಇಂದಿನ ಬೆಳವಿಗೆಯ ಪೂರ್ವಕ್ಕೆ ಇರುವುದು ಖಚಿತವಾಗುತ್ತದೆ. ಕ್ರಿ.ಶ. ೧೦೮೦ರ ಶಾಸನವು ಪುಲ್ಲುಣಿಯಲ್ಲಿಯ ಗಳಗೇಶ್ವರ ದೇವರಿಗೆ ಎಂದಿರುವುದರಿಂದ - ಪುಲ್ಲುಣಿಯಲ್ಲಿಯೇ ಗಳಗೇಶ್ವರ ದೇವಸ್ಥಾನವಿದ್ದು, ಇಂದಿನ ಗಳಗನಾಥದಲ್ಲಿ ಗಳಗೇಶ್ವರದೇವಸ್ಥಾನ ಇದ್ದು ಪುಲ್ಲುಣಿಯು ಇಂದಿನ ಗಳಗನಾಥವೇ ಆಗುತ್ತದೆ. ಗಳಗನಾಥವು ಮೊದಮೊದಲು ಪುಲ್ಲುಣಿ, ಹುಲ್ಲುಣಿಯೆಂದು ಕರೆಯಲ್ಪಟ್ಟು ಅಲ್ಲಿಯ ಪ್ರಧಾನ ದೇವತೆಯಾದ ಗಳಗೇಶ್ವರ ದೇವರೊಂದಿಗೆ ಗುರ್ತಿಸಲ್ಪಡುತ್ತ ಗಳಗನಾಥವಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧. EC VIII, SK 100, 1129 AD

*೨. Dr. Suryanatha Kamath, Avalokana (Kannada), P-69

*೩. Dr. B.R. Gopal: **The Chalukyas of Kalyana and the Kalachuris,** PP. 308-309

*೪. EC XI, Dg 114, 992 AD

*೫. SII-XVIII, No 64, 1055-56 AD

*೬. ibid No. 86, 1079 AD

*೭. ibid No. 88, 1080 AD

*೮. ibid No. 296, 1181 & 1188 (KI Vol 6, No 39)

*೯. ibid No. 300, 1213 AD (KI Vol, 6, No 75)

*೧೦. Dr. S.H. Ritti : **The Seunas,** PP. 331 & 336

*೧೧. KI Vol 6, No. 44, 1238 AD

(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನಗೈದ ಡಾ॥ ಶ್ರೀನಿವಾಸ ರಿತ್ತಿ ಅವರಿಗೆ ನನ್ನ ಕೃತಜ್ಞತೆಗಳು.)

ಡಾ॥ ಹೆಚ್. ಚಂದ್ರಶೇಖರ*

# ಸೋದೆಯ ಸದಾಶಿವರಾಯನ ಉಳಿವೆಯ ಮಹಾತ್ಮೆಯ ಐತಿಹಾಸಿಕ ಮತ್ತು ಭೂವೈಜ್ಞಾನಿಕ ಅಧ್ಯಯನ

ಪಶ್ಚಿಮ ಕರ್ನಾಟಕದ ಮಲೆನಾಡಿನ ಭಾಗವನ್ನು ಸುಮಾರು ೩೫೦ ವರ್ಷಗಳ ಕಾಲ (ಕ್ರಿ. ಶ. ಸು. ೧೪೦೦-೧೭೬೩) ಆಳಿದ ಸೋದೆಯ ಅರಸು ಮನೆತನವು ನಮ್ಮ ನಾಡಿನ ಸಾಹಿತ್ಯ, ಸಾಮಾಜಿಕ ಮತ್ತು ವಾಸ್ತು ಶಿಲ್ಪವೂ ಸೇರಿದಂತೆ ಕಲೆಗಳಿಗೆ ನೀಡಿದ ಪ್ರೋತ್ಸಾಹವು ಸ್ಮರಣೀಯ. ಈ ಅರಸರಲ್ಲಿ ಒಂದನೆಯ ಸದಾಶಿವರಾಯನು (ಕ್ರಿ. ಶ. ೧೬೭೪-೧೬೯೭) ಸ್ವತಃ ಕವಿ ಮತ್ತು ಸಂಗೀತಗಾರನು. ಇವನು ಒಟ್ಟು ೨೪ ಕೃತಿಗಳನ್ನು ರಚಿಸಿದ್ದಾನೆಂದು ಡಾ ॥ ಹಿರೇಮಠರು ಹೇಳುತ್ತಾರೆ (೧೯೯೫). ಇವನ ಕೃತಿಗಳ ವೈವಿಧ್ಯತೆಯನ್ನು ನೋಡಿದರೆ ಇವನು ಸಮರ್ಥ ಅರಸನಷ್ಟೇ ಅಲ್ಲದೆ ಬಹುಶ್ರುತ ವ್ಯಕ್ತಿತ್ವವುಳ್ಳವನೆಂಬುದು ಗೊತ್ತಾಗುತ್ತದೆ.

ಈ ಅರಸು ಮನೆತನಕ್ಕೆ ಉಳಿವೆಯ ಚೆನ್ನಬಸವಣ್ಣ ಮನೆದೇವರು. ಉಳಿವೆಯಲ್ಲಿರುವ ಚೆನ್ನಬಸವಣ್ಣನವರ ಸಮಾಧಿಯನ್ನು ದೇವರಗುಡಿಯಂತೆ ಭಾವಿಸಿ ಅತ್ಯಂತ ಪೂಜ್ಯ ಭಾವನೆಯಿಂದ ಈ ಸಮಾಧಿಯನ್ನು ಈ ಅರಸರು ಪೂಜಿಸಿದ್ದಾರೆ. ಈ ಸಮಾಧಿಯ ಮೇಲೆ ಹಿಂದೆ ಮರ ಮತ್ತು ಹೆಂಚುಗಳನ್ನು ಉಪಯೋಗಿಸಿ ಸುಂದರವಾದ ಗುಡಿಯನ್ನು ಈ ಅರಸರು ಕಟ್ಟಿಸಿದ್ದರು. ಆ ಗುಡಿಯ ಬದಲಾಗಿ, ಆರ್. ಸಿ. ಸಿ.ಯ ಕಲಾತ್ಮಕ ಮಂದಿರವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಸೋದೆಯ ಅರಸರು ಕಟ್ಟಿಸಿದ ಸುಂದರ ದೇಗುಲದ ಅವಶೇಷವಾಗಿ ಎರಡು ಮರದ ಕಂಬಗಳು ಮೈಸೂರಿನ ಮಾನಸಗಂಗೋತ್ರಿಯ ಜಾನಪದ ವಸ್ತು ಸಂಗ್ರಹಾಲಯದಲ್ಲಿವೆ. ಇಂದಿಗೂ ಈ ಕಂಬಗಳ ವರ್ಣ ಕಂಗಳಿಗೆ ಮುದ ನೀಡುತ್ತದೆ. ಈ ಕಂಬಗಳನ್ನು ನೋಡಿ ಅಂದಿನ ಉಳಿವೆಯ ಚೆನ್ನಬಸವಣ್ಣನವರ ಸಮಾಧಿ ದೇವಾಲಯ ಸುಂದರವಾಗಿತ್ತು ಎಂದು ಊಹಿಸಬಹುದು.

**ಐತಿಹಾಸಿಕ ಸಂಗತಿಗಳು**

ಈ ಅರಸು ಮನೆತನದ ಆರಾಧ್ಯ ದೈವದ ಕ್ಷೇತ್ರವಾದ ಉಳಿವೆಯನ್ನು ಕವಿ ಸದಾಶಿವರಾಯನು ತನ್ನ ಕೃತಿ "ಉಳಿವೆಯ ಮಹಾತ್ಮೆ"ಯಲ್ಲಿ ಮನದುಂಬಿ ಬಣ್ಣಿಸಿದ್ದಾನೆ. ಈ ಕಾವ್ಯದಲ್ಲಿ, ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಮಗ್ರ ಕ್ರಾಂತಿಯ ಕೊನೆಯ ಘಟ್ಟವನ್ನು ಗುರ್ತಿಸಬಹುದು. ಹರಳಯ್ಯ ಮಧುವರಸರು ಹುತಾತ್ಮರಾದ ನಂತರ ಶರಣರ ಒಂದು ತಂಡ, ಚೆನ್ನಬಸವಣ್ಣನವರ ನೇತೃತ್ವದಲ್ಲಿ ಉಳಿವೆಯತ್ತ ಪಯಣ ಬೆಳೆಸಿತು. ಪರವತಾಬಾದಿ (ಪರ್ವತಾಬಾದ), ಪೆರಜಾಬಾದಿ (ಫಿರೋಜಬಾದ), ಕೇಳಕೂರು (ಕೊಳಕೂರು), ಬಡದಳ, ಸತ್ತಿಗೆರೆ, ಮುರುಗೋಡ, ಹೂಬಳ್ಳಿ (ಹುಬ್ಬಳ್ಳಿ), ಬಂಕಾಪುರ, ಹಾನಗಲ್ಲು, ಜಾಂಗಲ, ಸೋದೆಪುರ, ಎಲ್ಲಾಪುರ, ಕಾಳಿನದಿ ದಾಟಿ (ಕರಿಹೊಳೆ) ಉಳುವೆಪುರಕ್ಕೆ ಬಂದಿತು, ಈ ಶರಣರ ತಂಡ ಎಂದು ಸ್ಪಷ್ಟವಾಗಿ ಹೇಳುತ್ತಾನೆ ಸದಾಶಿವರಾಯ. ಮಾರ್ಗ ಮಧ್ಯದಲ್ಲಿ ಶರಣರು ಪೂಜೆಗೈದ ಸ್ಥಳಗಳನ್ನು ಸಂದರ್ಶಿಸಿದ ಮಠಗಳನ್ನೂ ಉದಾಹರಿಸುತ್ತಾನೆ ಈ ಅರಸು. ಈ ದೃಷ್ಟಿಯಿಂದ ಅತ್ಯಂತ ಮಹತ್ವದ ಐತಿಹಾಸಿಕ ಅಂಶಗಳುಳ್ಳ ಕೃತಿಯೆನಿಸುತ್ತದೆ ಈ ಕಾವ್ಯ.

ಆದರೆ ಈ ಕಾವ್ಯದ ೩೧ನೆಯ ನುಡಿಯಲ್ಲಿ ಕಡು ಸೋಜಿಗವಾದ ಗವಿಯನ್ನು ಕಂಡಾಕ್ಷಣವೆ ಹಡಪದ ಅಪ್ಪಣ್ಣನು ಆ ಗವಿಯಲ್ಲಿ ವಾಸಮಾಡಿದನೆಂದು ಹೇಳಲಾಗಿದೆ. ಹಡಪದ ಅಪ್ಪಣ್ಣನವರು ಬಸವಣ್ಣನವರ ಜೊತೆಯಲ್ಲಿಯೇ ಕೂಡಲ ಸಂಗಮಕ್ಕೆ ಹೋದರು ಮತ್ತು ಕೃಷ್ಣಾನದಿಯ ಇನ್ನೊಂದು ಬದಿಯಲ್ಲಿರುವ ತಂಗಡಗಿಯಲ್ಲಿ (ಬಸವಣ್ಣನವರು ಲಿಂಗೈಕ್ಯರಾದ ನಂತರ) ಇವರು ಲಿಂಗೈಕ್ಯರಾದರು. ತಂಗಡಗಿಯಲ್ಲಿ ನೀಲಾಂಬಿಕೆಯ ಸಮಾಧಿಯ ಬಳಿಯಲ್ಲಿಯೇ ಹಡಪದ ಅಪ್ಪಣ್ಣನವರ ಸಮಾಧಿ ಇದೆ. ಆದರೆ ಹಡಪದ ಅಪ್ಪಣ್ಣನವರ ಸಮಾಧಿ ಕಟ್ಟಡಕ್ಕೆ ರಕ್ಷಣಾಗೋಡೆ ಇರದ್ದರಿಂದ ಇದು ನಾರಾಯಣಪುರ ಅಣೆಕಟ್ಟಿನಿಂದ ನಿರ್ಮಿತವಾದ ಬಸವಸಾಗರದಲ್ಲಿ ಮುಳುಗಿದೆ. ಇದೊಂದು ಈ ಕೃತಿಯಲ್ಲಿರುವ ಐತಿಹಾಸಿಕ ಲೋಪ.

* 'ಸಂಗಮ', ಎಂ. ಐ. ಜಿ. ನಂ.೭೭, ಕೆ. ಎಚ್. ಬಿ. ಕಾಲೋನಿ, ಬಸವನಗರ, ಬೆಂಗಳೂರು - ೫೬೦ ೦೭೯

ಚೆನ್ನಬಸವಣ್ಣನವರ ಸಮಾಧಿಯ ಕಟ್ಟಡದ ಸುತ್ತಲಿರುವ ಬಯಲಿನಲ್ಲಿ ಒಂದು ದೊಡ್ಡ ಅರಳಿ ಮರ ಇದೆ. ಇದನ್ನು



ಚೆನ್ನಬಸವಣ್ಣನವರು ನೆಟ್ಟರೆಂದು ಜನಪದರು ಹೇಳುತ್ತಾರೆ. ಆದ್ದರಿಂದಲೇ ಈ ಮರವು ಸಮಾಧಿ ಮಂದಿರದ ಪೂರ್ಣ ನೋಟಕ್ಕೆ ಅಡ್ಡಿಯಾಗಿದ್ದರೂ ಅವರು ಅದನ್ನು ಕಡಿಯಬಾರದೆನ್ನುತ್ತಾರೆ.

ಈ ಕಾವ್ಯದ ೫ನೇ ನುಡಿಯಲ್ಲಿ ಕವಿಯು "ಹೊನ್ನ ಅರಳಿಯ ಮರದ ಕೊನೆಯನು ಚೆನ್ನಬಸವನು ನೆಟ್ಟ"ನು ಎಂದು ಸ್ಪಷ್ಟವಾಗಿ ಹೇಳಿರುವದು ಐತಿಹಾಸಿಕ ದಾಖಲೆ ಎನಿಸುತ್ತದೆ. ಅದೇ ನುಡಿಯಲ್ಲಿ ಚೆನ್ನ ಬಸವನು ಗಣಗಳನು ಪನ್ನಗಾಭರಣನ ಸಮೀಪಕ್ಕೆ ಪರಮ ಹರುಷದಿ ಕಳಿಸಿದನು ಎಂದು ಹೇಳಿದ್ದಾನೆ ಕವಿ. ಅಂದರೆ ಚೆನ್ನ ಬಸವಣ್ಣನವರು ಉಳಿದ ಎಲ್ಲಾ ಶರಣರು ಲಿಂಗೈಕ್ಯರಾದ ನಂತರ ಲಿಂಗೈಕ್ಯರಾದರೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

### ಭೂವೈಜ್ಞಾನಿಕ ಅಂಶಗಳು

ಶಿವಕವಿ ಸೋದೆಯ ಸದಾಶಿವರಾಯನು ಚೆನ್ನಬಸವಣ್ಣನವರ ಬಗ್ಗೆ ಅತ್ಯಂತ ಭಕ್ತಿ ಗೌರವವುಳ್ಳವನಾಗಿದ್ದುದಲ್ಲದೆ, ಉಳಿವೆಯ ಪರಿಸರವನ್ನು ಚೆನ್ನಾಗಿ ಬಲ್ಲವನಾಗಿದ್ದನೆಂಬುದಕ್ಕೆ ಅವನ ಈ ಕೆಳಗೆ ಉದಾಹರಿಸಿದ ಒಂದು ನುಡಿ ಸಾಕ್ಷಿ :-

*ಶಿಲೆಯೆಲ್ಲವು ಶಿವಲಿಂಗವು*
*ಜಲವೆಲ್ಲವು ಪುಣ್ಯ ತೀರ್ಥ ತರುಲತೆತೃಣದ*
*ಮಲೆಯೆಲ್ಲವು ಬಿಲ್ವ ದವನ*
*ಸಲೆಯುಳುವೆಯ ಕ್ಷೇತ್ರ ಪೇಳಲಶಕ್ಯಂ*

ಉಳಿವೆಯ ಸುತ್ತಲಿರುವ ಕಾಡು, ಬೆಟ್ಟ, ಹಳ್ಳ ಮತ್ತು ಗವಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು ಈ ಅರಸ ಎಂಬುದಕ್ಕೆ ಈ ಕಾವ್ಯ ಸಾಕ್ಷಿಯಾಗಿದೆ.

ಇಂದಿನ ಉಳಿವೆಯ ಸಮಾಧಿ ಕಟ್ಟಡ ಇರುವದು ಒಂದು ಸಮತಟ್ಟಾದ ಸಣ್ಣ ಪ್ರದೇಶ. ಆದರೆ ಇದರ ಸುತ್ತಲೂ ಸಹ್ಯಾದ್ರಿಯ ಸಾಲು ಬೆಟ್ಟಗಳು ಹಬ್ಬಿವೆ. ದಟ್ಟವಾದ ಕಾಡು ಇಂದಿಗೂ ಇದೆ. ಆದ್ದರಿಂದ ಶರಣರು ಬಿಜ್ಜಳನ ಸೈನಿಕರಿಂದ ರಕ್ಷಣೆ ಪಡೆಯುವದಕ್ಕಾಗಿ ಈ ಸ್ಥಳವನ್ನು ಆರಿಸಿಕೊಂಡಿರಬಹುದೆಂದು ಊಹಿಸಬಹುದು.

ಈ ಕಾವ್ಯದಲ್ಲಿ, ಈ ಪ್ರದೇಶದಲ್ಲಿ ಏಳುನೂರಾಎಪ್ಪತ್ತು ಗವಿಗಳಿವೆ ಎಂದು ಹೇಳಿದೆಯಾದರೂ, ಅವುಗಳನ್ನು ಇಂದು ನಿಖರವಾಗಿ ಎಣಿಸುವದು ತೀರ ಕಷ್ಟಸಾಧ್ಯದ ಕೆಲಸ. ಆದರೆ ಈ ಕಾವ್ಯದಲ್ಲಿ ವಿಶೇಷವಾಗಿ ಬಣ್ಣಿಸಲ್ಪಟ್ಟಿರುವ ಆಕಳ ಗವಿ, ರುದ್ರಾಕ್ಷಿ ಗವಿ (ಮಂಟಪ), ಹರಳಯ್ಯನ ತೀರ್ಥ ವಿಭೂತಿ ಕಣಜ, ಪಂಚಲಿಂಗೇಶ್ವರ ಗವಿ, ಮಹಾಮನೆ ಅಕ್ಕನಾಗಮ್ಮನ ಗವಿ ಇವುಗಳಿಗೆ ಸಾಗುವ ಹಾದಿ ಒಂದು ಸಾಹಸ ಯಾತ್ರೆ; ಒಂದು ಆನಂದದ ನೋಟ.

### ಗವಿಗಳು

ಸದಾಶಿವರಾಯ ಆಕಳ ಗವಿಯ ಇರವನ್ನು ಈ ರೀತಿಯಾಗಿ ಬಣ್ಣಿಸುತ್ತಾನೆ :

*ಆಗಮ ಶಾಸ್ತ್ರ ಪುರಾಣದ*
*ಲಾಗುವ ಸಿದ್ಧಿ ಗಳನಿತ್ತು ಬೇಡಿದ ಜನಕೆ*
*ಭೋಗವ ಮೋಕ್ಷವ ಕೊಡುತಿಹ*
*ಗೋಗರ್ಭವ ಪೊಕ್ಕು ನೋಡಿ ಹೊರಟರು ಗಣಗಳ್*

ಇಲ್ಲಿ ಬರುವ ಗೋಗರ್ಭ ಎಂಬ ಶಬ್ದ ಆಕಳ ಗವಿಯನ್ನು ನಿರ್ದೇಶಿಸುತ್ತದೆ.

ರುದ್ರಾಕ್ಷಿ ಗವಿ(ಮಂಟಪ)ಯನ್ನು ಶರಣರು ಕಂಡ ಪರಿಯನ್ನು ಈ ರೀತಿ ಬಣ್ಣಿಸಲಾಗಿದೆ :

*ಹರನೇತ್ರಗಳಿಂದಲುದಿಸಿದ*
*ವರ ಮುಕ್ತಿಯನಿತ್ತು ಭಕ್ತ ಜನರನು ಕಾವ*
*ಸಿರಿ ರುದ್ರಾಕ್ಷಿಯ ಮಂಟಪ*
*ವಿರವನು ಬಸವಾದಿ ಗಣಗಳೆಲ್ಲರು ಕಂಡರು*



ಹರಳಯ್ಯನ ಸ್ಮಾರಕ ಚಿಲುಮೆ

ಹರಳಯ್ಯನ ನೆನೆಪಿಗಾಗಿ ಅಲ್ಲಿರುವ ಒಂದು ನೀರಿನ ಬುಗ್ಗೆ (Spring)ಗೆ ಅವನ ಹೆಸರನ್ನಿಡಲಾಗಿದೆ :

*ವರ ಉಳುವೆಯ ಸುಕ್ಷೇತ್ರದಿ*
*ಹರನಭಿಷೇಕವನು ಮಾಡಬೇಕೆಂದೆನುತ*
*ಸುರನದಿಯ ನೆನೆಯಲುದಿಸಿದ*
*ನೆರೆಹಳ್ಳಯ್ಯಗಳ ತೀರ್ಥವಾಯಿತು ಸಹಜ*

ವಿಭೂತಿ ಕಣಜದ ಗವಿಯ ಜನನವನ್ನು ಧಾರ್ಮಿಕ ದೃಷ್ಟಿಯಿಂದ ಈ ಕವಿ ಈ ರೀತಿಯಾಗಿ ಬಣ್ಣಿಸಿದ್ದಾನೆ. ಅದನ್ನು ಓದಿ :

*ಪುರದಹನವ ಮಾಡಿದ ಸಮಯದಿ*
*ನೆರೆ ಜ್ವಾಲೆಯ ಭರದಿ ಬಂದು ನಂದಿಸಿದಂಥ*
*ಕರಿಯ ವಿಭೂತಿಯ ಗಿರಿಯನು*
*ಶರಣರು ಕಂಡದನು ಧರಿಸಿಕೊಂಡರು ಮುದದಿ*

ಇಂದು ಪಂಚಲಿಂಗೇಶ್ವರ ಗವಿ ಎಂದು ಕರೆಯಲ್ಪಡುವ ಗವಿಯನ್ನು ಈ ಕವಿ ಈ ರೀತಿಯಾಗಿ ಬಣ್ಣಿಸಿದ್ದಾನೆ :

*ಎಲ್ಲಗಣಗಳು ಕೂಡಿ ಇಹರೆ ಯಾವ ಗವಿ ಅತಿಯೋಗ್ಯವು*
*ಅಲ್ಲಿ ಯೋಚಿಸಿ ಆಗ ನಡೆದರು ಅಧಿಕ ಸಂಭ್ರಮದಿಂದಲಿ*
*ಮಿಲ್ಲಿ ಶಾಸ್ತ್ರನ ಮೈಯನುರುಹಿದ ಮಾಸದಾಶಿವಲಿಂಗವಂ*
*ಬಿಲ್ವಪತ್ರೆಗಳಿಂದಲರ್ಚಿಸಿ ಬೇಗ ಮಠಕ್ಕೆ ತಂದರು*

ಇದೇ ರೀತಿಯಾಗಿ ಮಹಾಮನೆಗವಿ ಮತ್ತು ಅಕ್ಕನಾಗಮ್ಮನ ಗವಿಯ ಮಹತ್ವವನ್ನು ವರ್ಣಿಸುತ್ತಾನೆ ಈ ಕವಿ :

*''ಮಹಾಮನೆ ಗವಿನೋಡಲ್ ಮಹಾಪಾತಕ ನಾಶನ*
*ಮಹಾಗಣಂಗಳಿಂತೆಂದು ಹರುಷಿತರಾದರು''*
*''ಅಕ್ಕರಿಂದುಳುವೆ ಕ್ಷೇತ್ರ ಪೊಕ್ಕ ಸಂಭ್ರಮದಿಂದಲಿ*
*ಅಕ್ಕನಾಗಮ್ಮನು ನಿಲ್ಲೆ ಚೊಕ್ಕಟ ಗವಿಯಾಯಿತು''*

ಮೇಲೆ ವಿವರಿಸಲಾದ ಗವಿಗಳು ಇರುವ ಪ್ರದೇಶ ಎತ್ತರದ ಬೆಟ್ಟಗಳಿಂದಲೂ ಆಳವಾದ ಕಣಿವೆಗಳಿಂದಲೂ ಕೂಡಿದೆ. ತುಂಬಾ ಕಡಿದಾದ ಹಾದಿಯಾಗಿದ್ದರೂ ನಿಸರ್ಗ ಪ್ರೇಮಿಗಳಾಗಿದ್ದರೆ ಯಾತ್ರಿಕರು ಈ ಚಾರಣಕ್ಕೆ ಸಿದ್ಧರಾಗಿರಬೇಕು; ಆನಂದಿಸಬೇಕು.

### ತೂಗು ಕಂಬಗಳು

ಈ ಪ್ರದೇಶದ ಕಲ್ಲು ಪ್ರಿಕೇಂಬ್ರಿಯನ್ ಯುಗದ ಸುಣ್ಣದ ಕಲ್ಲು ಅಥವಾ ಶಿಲೆ. ಸುಮಾರು ೨೫೦ ಕೋಟಿ ವರ್ಷಗಳ ಹಿಂದೆ ಈ ಪ್ರದೇಶವು ಸಮುದ್ರದ ತಳದಲ್ಲಿತ್ತು. ಆಗ ಸುಣ್ಣ ಶಿಲೆಯ ಮಡ್ಡಿಯು ಸಂಗ್ರಹಗೊಂಡು ಗಟ್ಟಿಯಾಯಿತು. ನಂತರ ಹಲವಾರು ಸ್ತರಭಂಗಗಳುಂಟಾಗಿ ಸಮುದ್ರ ತಳವು ಮೇಲೆ ಬಂದ ನಂತರ, ವಾತಾವರಣಕ್ಕೆ ಮೈಯೊಡ್ಡಿತು. ಆಗ ಭೂವೈಜ್ಞಾನಿಕ ನಿಯೋಗಿಗಳಾದ (Geological Agents)ಅಂತರ್ಜಲ, ಗಾಳಿ, ಇಬ್ಬನಿ, ಹರಿವ ನೀರು, ಮಳೆ, ಈ ಸುಣ್ಣ ಶಿಲೆಯ ಮೇಲೆ ದಾಳಿ ಮಾಡಿದವು. ಇದರಿಂದಾಗಿ ಕಣಿವೆಗಳುಂಟಾದವು. ಕೆಲ ಕಣಿವೆಗಳು ಸ್ತರಭಂಗ ಕ್ರಿಯೆಯಿಂದಲೂ ಉಂಟಾಗಿರಬಹುದು. ಈ ಸಂಕೀರ್ಣ ಪ್ರಕ್ರಿಯೆಯಲ್ಲಿ ಗವಿಗಳುಂಟಾದವು. ಗವಿಯ ಮಾಳಿಗೆ (Roof) ಯಿಂದ ಮಳೆ ನೀರು ಜಿನುಗುವಾಗ ತನ್ನೊಡನೆ ಸುಣ್ಣ ಶಿಲೆಯ ಸುಣ್ಣಾಂಶವನ್ನು (ಕ್ಯಾಲ್ಸಿಯಂ ಕಾರ್ಬೊನೇಟ್) ತನ್ನೊಡನೆ ಕರಗಿಸಿ ಕೊಂಡಿರುತ್ತದೆ. ಅಂಥ ನೀರು ಮಾಳಿಗೆಯಿಂದ ಗವಿಯೊಳಕ್ಕೆ ಜಿನುಗುವಾಗ ಯಾವುದಾದರೂ ಮಣ್ಣಿನ ಕಣ, ಗಿಡದ ಬೇರು ಇತ್ಯಾದಿ ವಸ್ತುಗಳ ಸುತ್ತಲೂ ಸುಣ್ಣದ ಕಾರ್ಬೊನೇಟನ್ನು ಸಂಕ್ಷೇಪಗೊಳಿಸುತ್ತದೆ. ಈ ನಿಕ್ಷೇಪಿಸುವ ಕ್ರಿಯೆ ಕೋಟಿಗಟ್ಟಲೆ ವರ್ಷಗಳ ಕಾಲ ನಡೆದಾಗ ಸುಣ್ಣದ ಕಾರ್ಬೊನೇಟ್, ಗವಿಯ ಮಾಳಿಗೆಯಿಂದ ತೂಗು ಬಿದ್ದ ಕಂಬಗಳಂತೆ ಕಾಣುತ್ತದೆ. ಆದ್ದರಿಂದ ಇವುಗಳನ್ನು ತೂಗು ಕಂಬಗಳೆಂದು (Stalactite) ಕರೆಯುತ್ತಾರೆ. ಈ ತೂಗುಕಂಬಗಳು ವಿವಿಧ ರೂಪವನ್ನು ಹೊಂದಿರಲು ಸಾಧ್ಯ. ಮಾನವಾಕೃತಿಯನ್ನೋ, ರುದ್ರಾಕ್ಷಿ ರೂಪವನ್ನೋ, ಬಾಳೆಹಣ್ಣಿನ ರೂಪವನ್ನೋ, ಆಕಳ ಕೆಚ್ಚಲಿನ ರೂಪವನ್ನೋ ಹೋಲುತ್ತವೆ ಈ ತೂಗುಕಂಬಗಳು. ಪ್ರಸ್ತುತ ಅಕ್ಕನಾಗಮ್ಮನ ಗವಿಯಲ್ಲಿ ಛಾವಣಿಯಿಂದ ನಿಕ್ಷೇಪಗೊಂಡ ತೂಗು ಕಂಬ ಒಬ್ಬ ಹೆಣ್ಣುಮಗಳು



ರುದ್ರಾಕ್ಷಿ ತೂಗುಗಂಬ ಕೆಚ್ಚಲಾಕಾರದ ತೂಗುಗಂಬ ಬಾಳೆಹಣ್ಣನಾಕಾರದ ತೂಗುಗಂಬ

ಕೂದಲು ಬಿಟ್ಟುಕೊಂಡು ಮಲಗಿದಂತೆ ಕಾಣುತ್ತದೆ. ಇದಲ್ಲದೆ ಅಕ್ಕನಾಗಮ್ಮ ಇಲ್ಲಿ ಕೆಲಕಾಲ ತಂಗಿದ್ದರಿಂದ ಜನಪದರು ಇದು ಅಕ್ಕನಾಗಮ್ಮನ ಮೂರ್ತಿ ಎಂದು ನಂಬುತ್ತಾರೆ. ಆಕಳ ಗವಿಯೊಳಗೆ ತೂಗು ಕಂಬಗಳು ಆಕಳಿನ ಕೆಚ್ಚಲನ್ನು ಹೋಲುವದರಿಂದ ಇದಕ್ಕೆ ಆಕಳ ಗವಿ ಎಂದು ಹೆಸರು ಬಂತು. ಜನಪದರು ಇದಕ್ಕೆ ಬೇರೆ ಕಾರಣ ಕೊಡುತ್ತಾರೆ. ಗವಿಯ ಮೇಲೆ ಶರಣರಿಗಾಗಿ ಆಗ ಒಂದು ಆಕಳ ಬಂದು ಹಾಲನ್ನು ಕರೆಯುತ್ತಿತ್ತು ಎಂಬುದು ಜನಪದ

ಸುಂದರ ಕಲ್ಪನೆಯಷ್ಟೆ. ರುದ್ರಾಕ್ಷಿ ಗವಿ (ಮಂಟಪ)ಯೊಳಗೆ ತೂಗು ಕಂಬಗಳು ರುದ್ರಾಕ್ಷಿಯ ರೂಪವನ್ನು ಹೋಲುವದರಿಂದ ಈ ಹೆಸರು ಬಂದಿದೆ. ಅಲ್ಲದೆ ಕೆಲವೆಡೆ ಬಾಳೆಹಣ್ಣಿನ ರೂಪವನ್ನು ಹೋಲುತ್ತವೆ. ಈ ರುದ್ರಾಕ್ಷಿಗಳು ಶರಣರು ಬಿಟ್ಟುಹೋದ ರುದ್ರಾಕ್ಷಿಗಳು ಮತ್ತು ಬಾಳೆಹಣ್ಣು ಕೂಡ ಶರಣರು ಬಿಟ್ಟುಹೋದವುಗಳೆಂದು ಜನಪದರು ನಂಬುತ್ತಾರೆ.

### ನೆಲ ಕಂಬಗಳು

ಕೆಲವೊಂದು ಸಲ, ಗವಿಯ ಛಾವಣಿಯಿಂದ ಜಿನುಗುವ ಖನಿಜಾಂಶ ಭರಿತ ನೀರು ಛಾವಣಿಯಲ್ಲಿ ನಿಕ್ಷೇಪಗೊಳ್ಳದೆ, ಗವಿಯ ನೆಲದ ಮೇಲೆ ನಿಕ್ಷೇಪಗೊಳ್ಳುತ್ತದೆ. ಹಾಗೇ ಅದು ನಿಕ್ಷೇಪ ಗೊಳ್ಳುತ್ತಾ ಕೋಟ್ಯಾವಧಿ ವರ್ಷಗಳ ಅವಧಿಯಲ್ಲಿ ನೆಲದಿಂದ ಮೇಲಕ್ಕೆ ಉರ್ಧ್ವಮುಖಿಯಾಗಿ ಬೆಳೆಯುತ್ತದೆ. ಇದನ್ನು ನೆಲಕಂಬ (Stalag unite)ವೆಂದು ಕರೆಯುತ್ತಾರೆ. ಊರ್ಧ್ವಮುಖಿಯಾಗಿ ಬೆಳೆಯುವಾಗ ಅದು ವಿವಿಧ ರೂಪಗಳನ್ನು ಪಡೆಯಲು ಸಾಧ್ಯ. ಅಕ್ಕನಾಗಮ್ಮನ ಗವಿಯ ಒಂದು ಮೂಲೆಯಲ್ಲಿ ಎರಡು ಕಂಬಗಳಿವೆ. ಸುಮಾರು ಎರಡು ಅಡಿಗಳಷ್ಟು ಎತ್ತರವಿರುವ ರಚನೆಗಳಿವು. ಜನಪದರು ಇವನ್ನು ಶರಣರು ರಚಿಸಿದ (ಸ್ಥಾವರ) ಲಿಂಗಗಳೆಂದು ನಂಬುತ್ತಾರೆ. ಬಹುಶಃ ಇಂಥ ರಚನೆಗಳನ್ನೇ ನೋಡಿಯೇ ಸದಾಶಿವರಾಯ ತನ್ನ ಕಾವ್ಯದಲ್ಲಿ 'ಶಿಲೆಯೆಲ್ಲವೂ ಶಿವಲಿಂಗ' ಎಂದು ಕರೆದಿರಬಹುದು. ಇದೇ ರೀತಿ ಪಂಚಲಿಂಗೇಶ್ವರ ಗವಿಯಲ್ಲಿ ಒಂದು ನೆಲಕಂಬವು ಐದು ಮುಖವುಳ್ಳ (ಒಂದು ದಿಕ್ಕಿನಲ್ಲಿ ನೋಡಿದರೆ) ಶಿವಲಿಂಗದಂತೆ ಕಾಣುತ್ತದೆ. ಆದ್ದರಿಂದ ಇದು ಪಂಚಲಿಂಗೇಶ್ವರ ಎಂದು ಹೆಸರನ್ನು ಪಡೆದಿದೆ. ಕರಿವಿಭೂತಿ ಕಣಜದ ಗವಿಯಲ್ಲಿ ನೆಲಕಂಬವು *ಗಂಟೆಯಾಕಾರವನ್ನು* ಪಡೆದಿರುವ ಸುಮಾರು ೬ ಅಡಿ ಎತ್ತರವಿರುವ ರಚನೆ. ಈ ಗವಿಯ ಸುತ್ತಲೂ ಇರುವ ಮಣ್ಣಿನಲ್ಲಿ ಮ್ಯಾಂಗನೀಜಿನ ಅಂಶ ಇದೆ. ಆದ್ದರಿಂದ ತಿಳಿ ಕಪ್ಪು ಬಣ್ಣದ ಹುಡಿಯನ್ನು ನೀಡುತ್ತದೆ. ಈ ಮ್ಯಾಂಗನೀಜ ಭರಿತ ಕಪ್ಪು ಧೂಳು ಗಂಟೆಯಾಕಾರದ ರಚನೆಯ ಮೇಲೆ ಕೂತಿರುತ್ತದೆ. ಆದ್ದರಿಂದ ಇದು ಸದಾಶಿವರಾಯನ ಕಣ್ಣಿಗೆ ಪುರದಹನದಿಂದ ಉಂಟಾದ ಬೂದಿಯಂತೆ ಕಂಡಿದೆ. ಈ ಕರಿ ಧೂಳನ್ನು ಚೆನ್ನಾಗಿ ಒರೆಸಿದರೆ ಬಿಳಿ ಬಣ್ಣದ ಕ್ಯಾಲ್ಸಿಯಂ ಕಾರ್ಬೋನೇಟ್ ಕಾಣುತ್ತದೆ.


ಕರಿವಿಭೂತಿ ಕಣಜ / ಗವಿಯ ನೆಲಗಂಬ

### ಸಂರಕ್ಷಣೆ

ಈ ಗವಿಗಳೆಲ್ಲವು ಭೂವೈಜ್ಞಾನಿಕ ವಿಸ್ಮಯಗಳು. ಈ ವಿಸ್ಮಯಗಳೊಂದಿಗೆ ಶರಣರ ಇತಿಹಾಸ ಹೊಂದಿ ಕೊಂಡಿರುವದರಿಂದ ಜನಪದರ ಭಕ್ತಿಗೆ ಪಾತ್ರವಾಗಿವೆ. ಈ ಗವಿಗಳನ್ನು ಹಾಳು ಮಾಡದಂತೆ ಸಂರಕ್ಷಿಸಬೇಕು. ಇವು ಒಂದು ಸಲ ಹಾಳಾದರೆ ಪುನರ್ ಸೃಷ್ಟಿ ಸಾಧ್ಯವಿಲ್ಲ. ಆದ್ದರಿಂದ ಇಲ್ಲಿಗೆ ಸಂದರ್ಶನಕ್ಕೆ ಬರುವ ಯಾತ್ರಿಕರಿಗೆ ತಮ್ಮ ಹೆಸರನ್ನು ಕೆತ್ತದಂತೆ ಮತ್ತು ತೂಗು ಕಂಬಗಳನ್ನು ಒಡೆಯದಂತೆ ತಿಳುವಳಿಕೆ ನೀಡಬೇಕು. ಅದು ಮುಂದೆ ಘಟಿಸದಂತೆ ಇವುಗಳನ್ನು ಕಾಯಲು ಸೂಕ್ತ ಸಿಬ್ಬಂದಿಯನ್ನು ಅರಣ್ಯ ಇಲಾಖೆ ನೇಮಿಸಬೇಕು. ಇಲ್ಲವಾದರೆ ಕೆಲವೇ ವರ್ಷಗಳಲ್ಲಿ ಇವು ವಿರೂಪಗೊಳ್ಳುತ್ತವೆ.

### ಆಕರ ಗ್ರಂಥ


೧. ಬಿ. ಆರ್. ಹಿರೇಮಠ : **ಸೋದೆಯ ಸದಾಶಿವರಾಯನ ಕೃತಿಗಳು**, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೬೫.

ಡಾ॥ ಶ್ರೀನಿವಾಸ ಹಾವನೂರ*

# ತುಂಗಭದ್ರೆ! - ನಾಡಿಗೆ ವರವೊ, ಶಾಪವೊ?

ಮಂಡ್ಯದಲ್ಲಿ ಮಿತ್ರರೊಬ್ಬರು ನನ್ನನ್ನು ಅವರ ಗುರುತಿನವರಿಗೆ ಪರಿಚಯ ಮಾಡಿಕೊಟ್ಟ ಸಂದರ್ಭ. ಧಾರವಾಡ ಜಿಲ್ಲೆಯ ಹಾವನೂರು ನನ್ನೂರು ಎಂದಾಗ ಅವರು "ಓಹೋ! ನೀವು ತುಂಗಭದ್ರೆಯ ಆಚೆಯವರು!" ಎಂದು ಉದ್ಗರಿಸಿದರು. ತುಂಗಭದ್ರೆಯ ಆಚೆಯವರು ಎಂದರೆ 'ಉತ್ತರ ಕರ್ನಾಟಕದವರು; ಈಚೆಯವರು, ಎಂದರೆ ನಾವು ಮೈಸೂರ ಸೀಮೆಯವರು' ಎಂಬ ಅವರ ಆಶಯ ಸ್ಪಷ್ಟವಾಗಿತ್ತು. ಏಕೀಕರಣವಾಗಿ ನಾಲ್ಕು ದಶಕಗಳು ಕಳೆದುಹೋಗಿದ್ದರೂ ಈ ಭೇದಭಾವ ನಿಚ್ಚಳವಾಗಿ ಉಳಿದುಕೊಂಡು ಬಂದಿದೆಯಲ್ಲ- ಎಂದು ಬೇಸರವಾಯಿತು. ಆ ಸಂಬಂಧ ಸಮಾಲೋಚನೆಗಳಲ್ಲಿ ಮೂಡಿಬಂದ ವಿಷಯಗಳಿವು.

ಯಾವುದೇ ನದಿಯು ತನ್ನ ಪಾಡಿಗೆ ತಾನು ಹರೀತಿರತದೆ. ಆದರೆ ಅದರ ಪರಿಣಾಮ ಅಲ್ಲಿಯ ಜನಜೀವನದ ಎಲ್ಲ, ಅಂದರೆ ಅಕ್ಷರಶಃ ಎಲ್ಲ ಕ್ಷೇತ್ರಗಳಲ್ಲಿ ಕಂಡುಬರುತ್ತದೆ- ಆ ಜನತೆಯ ಒಳ್ಳೆಯದಕ್ಕೇ. ಅದಕ್ಕೆಯೇ, ನೈಲ್, ಥೇಮ್ಸ್, ನಮ್ಮ ಗಂಗಾನದಿ ಎಲ್ಲವೂ ವರನದಿ, ಜೀವನದಿ, ಪವಿತ್ರನದಿ ಎನಿಸಿಕೊಂಡಿವೆ. ಹೀಗೆ ನದಿಯು ತನ್ನ ನೆರೆಯ ಜನಾಂಗದ ಸಂಸ್ಕೃತಿಯನ್ನು ರೂಪಿಸುವ, ಅದರ ಇತಿಹಾಸವನ್ನೆ ನಿರ್ಮಿಸುವ ಸಾಮರ್ಥ್ಯವುಳ್ಳದ್ದು.

ನಮ್ಮ ನಾಡಿನಲ್ಲಿ ಇಂತಹ ಮೂರು ದೊಡ್ಡ ನದಿಗಳಿವೆ. ಉತ್ತರದ ಗಡಿಯಲ್ಲಿಯ ಕೃಷ್ಣೆ; ದಕ್ಷಿಣ ಭಾಗವನ್ನು ಪೋಷಿಸುತ್ತಿರುವ ಕಾವೇರಿ ಇವೆರಡೂ ನಮ್ಮವರ ಪಾಲಿಗೆ ವರನದಿಗಳು. ಮೂರನೆಯದೇ ತುಂಗಭದ್ರೆ. ಕನ್ನಡ ನಾಡಿನಲ್ಲಿಯೆ ಉಗಮ ಹೊಂದಿ, ದಕ್ಷಿಣ-ಪೂರ್ವಾಭಿಮುಖವಾಗಿ, ನಾಡ ಮಧ್ಯದ ಐದು ಜಿಲ್ಲೆಗಳಲ್ಲಿ ಹರಿದು ಕೃಷ್ಣಾನದಿಯನ್ನು ಕೂಡಿಕೊಂಡಿದೆ. ಈ ಮೂರು ನದಿಗಳಲ್ಲಿ ಮಾರ್ಗಕ್ರಮಣ ತುಸು ಹೆಚ್ಚು ಕಡಿಮೆ ಒಂದೇ ಆಗಿದ್ದರೂ (೩೬೦-೪೦೦), ತುಂಗಭದ್ರೆಯ ಜಲಾನಯನ ಪ್ರದೇಶವು ಇತರ ನದಿಗಳಿಗಿಂತ ಹೆಚ್ಚು ವಿಸ್ತಾರ ಹೊಂದಿದೆ.

ತುಂಗಭದ್ರೆಯು ಇನ್ನೂ ಕೆಲವು ಹೆಚ್ಚಳಗಳನ್ನು ಹೊಂದಿದೆ. ಇದಕ್ಕೆ ಸೇರುವ ಉಪನದಿಗಳ, ಹಳ್ಳಗಳ ಸಂಖ್ಯೆ ದೊಡ್ಡದು (ಇಪ್ಪತ್ತಕ್ಕೂ ಮೇಲ್ಪಟ್ಟು). ನದೀ ಪ್ರವಾಹದಲ್ಲಿ ಕಲ್ಲಿನ ಬಂಡೆಗಳು ಹೇರಳವಾಗಿ ಕಾಣಿಸಿಕೊಂಡರೂ ಒಟ್ಟಿನಲ್ಲಿ ಸಮತಟ್ಟಾದ ನೆಲದಲ್ಲಿಯೇ ಹರಿದು ಬಂದಿದೆ. ಮೋಜೆಂದರೆ ಎಲ್ಲಿಯೂ ಜಲಪಾತ ಇಲ್ಲ. ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ತುಂಗ, ಭದ್ರೆ ಇವೆರಡರ ಸಂಗಮವಾಗಿ ಮುಂದುವರಿದಾಗ ಆ ಎರಡು ಹೆಸರುಗಳು ಸೇರಿದ ಹೆಸರೇ ಇದಕ್ಕಿದೆಯಷ್ಟೆ. ಹೀಗೆ ಜೋಡಿ ಹೆಸರಿನ ನದಿಗಳು ದೇಶದಲ್ಲಿಯೇ ಅಪರೂಪ.

ತುಂಗಭದ್ರಾ ಎಂಬ ಹೆಸರು ಎಷ್ಟೇ ಪ್ರಾಚೀನವಾದರೂ ಇತಿಹಾಸ ಕಾಲದ್ದೇ ಅದು. ಪೌರಾಣಿಕ ಯುಗದಲ್ಲಿಯೂ ಇದರ ಪ್ರಸಿದ್ಧಿ ಇದೆ. ರಾಮಾಯಣ ಕಾಲದಲ್ಲಿ ಅದರ ಹೆಸರು 'ಪಂಪಾ' ಎಂಬುದು. ಶ್ರೀರಾಮನ ವನವಾಸ, ವಾಲಿಸುಗ್ರೀವಾದಿಗಳ ಕಿಷ್ಕಿಂಧೆ ಇದರ ಆಸುಪಾಸಿನಲ್ಲಿಯೇ ನಡೆಯಿತು.

ನೀರಿದ್ದಲ್ಲಿ ನೇಮ ಹೆಚ್ಚು. ಆ ರೀತಿಯ ಧಾರ್ಮಿಕ ಶ್ರದ್ಧೆಯಿಂದಾಗಿ ನದೀ ತೀರದ ಹತ್ತೈವತ್ತು ಕಡೆಗಳಲ್ಲಿ ದೇವಾಲಯಗಳು ನಿರ್ಮಿತವಾಗಿವೆ. ತೀರ್ಥಕ್ಷೇತ್ರಗಳೆನಿಸಿಕೊಂಡಿವೆ. ಜೊತೆಗೆ ಶಿಲ್ಪಕಲೆಯ ಆವಿರ್ಭಾವಕ್ಕೂ ಅವಕಾಶ ಒದಗಿದೆ. ವಿಶೇಷತಃ ಚಾಲುಕ್ಯ ಶೈಲಿಗೆ ಇಲ್ಲಿ ಅಗ್ರಪಟ್ಟ. ಸಂಗಮ ಸ್ಥಾನವನ್ನು ದಾಟಿದ ಅನಂತರ ಹರಿಹರದಲ್ಲಿ ಹರಿಹರೇಶ್ವರ, ಕುರವತ್ತಿಯಲ್ಲಿ ಮಲ್ಲಿಕಾರ್ಜುನ, ಮೈಲಾರದಲ್ಲಿ ಮೈಲಾರ ದೇವರು, ಗಳಗನಾಥದ ಗಳಗೇಶ್ವರ, ಬಿದರಹಳ್ಳಿಯ ಅಶ್ವತ್ಥನಾರಾಯಣ ಇವೇ ಮುಂತಾದವುಗಳು ಹೆಸರಾಂತ ದೇವತಾ ಸನ್ನಿಧಿಗಳು. ಹಂಪಿಯಲ್ಲಂತೂ ವಿರೂಪಾಕ್ಷ, ಪುರಂದರ ಮಂಟಪ, ನವ ವೃಂದಾವನ - ಏನೆಲ್ಲ ಇವೆ. ಹಂಪಿಯ ಜೊತೆಗೆ ಹೊಸಪೇಟೆ ಆನೆಗೊಂದಿಗಳನ್ನೂ ಪ್ರಸಿದ್ಧ ಸ್ಥಳಗಳೆಂದೇ ಪರಿಗಣಿಸಬೇಕು. ಹಾಲ್ವಿ, ಮಂತ್ರಾಲಯಗಳು ಸದ್ಯ ಆಂಧ್ರದಲ್ಲಿದ್ದರೂ ಅಲ್ಲಿಯ

* ಆಶ್ರಯ ಅಪಾರ್ಟ್‌ಮೆಂಟ್ಸ್, ೩೬, ವಿನಾಯಕ ಲೇಔಟ್, ೧ನೇ ಮೆಯಿನ್, ವಿಜಯನಗರ ಪಶ್ಚಿಮ, ಬೆಂಗಳೂರು - ೫೬೦ ೦೪೦

ಸ್ವಾಮಿಗಳು ನಮ್ಮವರೇ. ಶ್ರೀ ರಾಘವೇಂದ್ರ ಯತಿವರರನ್ನು ಅನೇಕ ಹರಿದಾಸರು ಮನ ದುಂಬಿ ಸ್ತುತಿಸಿದ್ದಾರಷ್ಟೇ. ಆಗೆಲ್ಲ ತುಂಗಭದ್ರೆಯನ್ನು ಪ್ರಸ್ತಾಪಿಸಿದುದಿದೆ. (ಉದಾ.ಗೆ- 'ತುಂಗಾ ತೀರದಿ ನಿಂತ ಸುಯತಿ - ವರನ್ಯಾರೆ ಪೇಳಮ್ಮಯ್ಯ').




ಅದೆಷ್ಟು ಜನ ಕವಿಗಳು, ತುಂಗಭದ್ರೆಯನ್ನು ಹೊಗಳಿದ್ದಾರೆ! ಆ ನದಿಯ ನೀರನ್ನು ಕುಡಿದು ಬೆಳೆದದ್ದರ ಋಣವನ್ನು, ತೀರಿಸುವಂತಿದೆ ಆ ಹೊಗಳಿಕೆ.

ಹರಿಹರನು ಇದನ್ನು 'ಮಹಾನದೀಶ್ವರೀ' ಎಂದು ಕರೆದದ್ದು ಮಾತ್ರವಲ್ಲದೆ, ತನ್ನ 'ಗಿರಿಜಾ ಕಲ್ಯಾಣ'ದಲ್ಲಿ ಶಿವ-ಪಾರ್ವತಿಯರ ವಿವಾಹವನ್ನು ದೇವ ಲೋಕದಲ್ಲಿ ನಡೆಸದೇ ಈ ನದೀ ತೀರದಲ್ಲೇ ಜರುಗಿಸುವಷ್ಟು ಆತ್ಮೀಯತೆಯನ್ನು ತೋರಿದ್ದಾನೆ.

ರಾಘವಾಂಕನಿಗಂತೂ ಇದು 'ಪಾಪನಾಶಿನಿ'. ಚಾಮರಸ, ಸಿದ್ಧನಂಜೇಶರ ಹೊಗಳಿಕೆಯೂ 'ಡಿಟ್ಟೊ'! ಚಂದ್ರಶೇಖರ ಎಂಬ ಕವಿಯು ಉತ್ತರದ ಗಂಗಾ, ಯಮುನಾ, ಸರಸ್ವತಿ - ಈ ನದಿಗಳಿಗಿಂತಲೂ ಮಿಗಿಲು ಎಂಬುದನ್ನು ಕಾರಣ ಕೊಟ್ಟು ವಿವರಿಸಿದ್ದಾನೆ.

ಲಕ್ಕಣ್ಣದಂಡೇಶನು ತುಂಗಾ, ಭದ್ರಾ - ಈ ಎರಡು ಹೆಸರುಗಳನ್ನು ಎತ್ತಿಕೊಂಡು ಅವುಗಳಲ್ಲಿ ವಿಶೇಷ ಅರ್ಥವನ್ನು ಕಂಡಿದ್ದಾನೆ. 'ಸಕಲ ತೀರ್ಥದ ಮಹಿಮೆಯಂ ತನ್ನೊಳಂಗೀಕರಿಸಿ ಧರಾತಳದ ಜೀವರ್ಗೆಲ್ಲ ತುಂಗೆ'; 'ಭದ್ರ ಲಕ್ಷಣ ವಿಡಿದುದರಿಂದ ಭದ್ರೆ' ಎಂದಿದ್ದಾನೆ.

ಆಧುನಿಕ ಕವಿಗಳೂ ಈ ಸ್ತುತಿಯ ಸೊಲ್ಲಿನಲ್ಲಿ ಹಿಂದೆ ಬಿದ್ದವರಲ್ಲ. ಅಕಬರಅಲಿ, ಚೆನ್ನವೀರಕಣವಿ, ಚಂದ್ರಕಾಂತ ಕುಸನೂರ, ಶಾಂತರಸ, ಜಿ. ಎಸ್. ಸಿದ್ಧಲಿಂಗಯ್ಯ ... ಪಟ್ಟಿ ಇನ್ನೂ ದೊಡ್ಡದಿದೆ.

ನದೀ ತೀರದ ಹಳ್ಳೂರು - ಎಂಬಲ್ಲಿ ಉತ್ಖನನ ಮಾಡಿದಾಗ, ಪ್ರಾಗೈತಿಹಾಸಿಕ ಕಾಲದ ಜನಜೀವನದ ಕುರುಹು ಕಂಡು ಬಂದಿದ್ದು ಅನಾದಿ ಕಾಲದಿಂದ ಇದರ ಪ್ರತಿಷ್ಠೆ - ಪ್ರಭಾವ ಇದೆಯೆನ್ನಬೇಕು.

ಹೀಗಿರುತ್ತ ಇದನ್ನು ವರನದಿಯೇ ಎಂದು ಕರೆಯಬೇಕಲ್ಲವೆ?

**ಇತಿಹಾಸ ಕಾಲದಲ್ಲಿ**

ನಮ್ಮ ಇತಿಹಾಸದ ಹಲವಾರು ಗ್ರಂಥಗಳಲ್ಲಿ ನದಿಗಳ ಪ್ರಸ್ತಾಪ ಬರುತ್ತದೆ. ಆದರೆ ಎಲ್ಲಕ್ಕೂ ಹೆಚ್ಚು ಕಾಣಿಸಿಕೊಂಡದ್ದು

ಈ ನದಿಯೇ. (*ಡಾ॥ಪಿ. ಬಿ. ದೇಸಾಯರ ಚಿರಪರಿಚಿತ **ಕರ್ನಾಟಕ ಇತಿಹಾಸದ** ಪುಸ್ತಕದಲ್ಲಿ ಕಾವೇರಿ ನದಿಯ ಪ್ರಸ್ತಾಪ ೧೮ ಸಲ; ಕೃಷ್ಣಾನದಿಯದು ೨೪ ಸಲ ಇದ್ದರೆ ತುಂಗಭದ್ರೆಯದು ೪೦ ಸಾರಿ ಬಂದಿದೆ*).

ಹಾಗೆಂದು ಈ ಚರಿತ್ರೆಯ ಎಲ್ಲ ಕಾಲದಲ್ಲಿ ಈ ನದಿ ಗಣನೀಯ ಪಾತ್ರವಹಿಸಿದೆ, ಎಂದಲ್ಲ. ಕದಂಬ, ಗಂಗ, ಬಾದಾಮಿ ಚಾಲುಕ್ಯರ ಆಳ್ವಿಕೆಯಲ್ಲಿ ಇದು ನಗಣ್ಯವಾಗಿದ್ದಿತು. ರಾಷ್ಟ್ರಕೂಟರ ಕಾಲದಲ್ಲಿ ಅದೇ ಸ್ಥಿತಿ ಎನ್ನಬಹುದಾದರೂ, ಅವರ ಒಂದು ಸಂದರ್ಭ ಶಾಸನೋಕ್ತವಾಗಿದೆ. ಎರಡನೆಯ ಗೋವಿಂದನು ದಕ್ಷಿಣದ ಪಾಂಡ್ಯ, ಚೋಳ, ಗಂಗರನ್ನು ಸೋಲಿಸಿ ಹಿಂತಿರುಗುವಾಗ ತುಂಗಭದ್ರೆಯ ತೀರವೊಂದರಲ್ಲಿ ತಂಗಿ, ನೆರೆಯ ಕಾಡಿನಲ್ಲಿ ಹಂದಿಯ ಬೇಟೆಯನ್ನಾಡಿದನಂತೆ!

**ಚೋಳ - ಚಾಳುಕ್ಯರು**

ಆ ಮುಂದಿನ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಾತ್ರ, ಈ ನದಿಯು ಮುಖ್ಯ ಪಾತ್ರವಹಿಸಿದೆ. ಈ ಚಾಲುಕ್ಯರಿಗೂ ಚೋಳರಿಗೂ ಹನ್ನೊಂದನೆಯ ಶತಮಾನವಿಡೀ ಯುದ್ಧಗಳು ಜರುಗಿದುವು. ಅವರೀಯುದ್ಧಗಳ ಮೂಲ ಕಾರಣ ಎಂದರೆ ಚಾಲುಕ್ಯರಿಗೆ ನದಿಯಾಚೆಗಿನ ವೆಂಗಿ ಪ್ರದೇಶವನ್ನು (ಅಲ್ಲಿ ಆಳುತ್ತಿದ್ದವರು ದಾಯಾದಿ ಚಾಲುಕ್ಯರೇ) ತಮ್ಮದಾಗಿಸಿಕೊಳ್ಳಬೇಕೆಂದಿದ್ದರೆ, ಚೋಳರಿಗೆ ತುಂಗಭದ್ರಾ-ಕೃಷ್ಣಾ ನಡುವಿನ ಫಲವತ್ತಾದ ಪ್ರದೇಶದ ಮೇಲೆ ಕಣ್ಣಿದ್ದಿತು.

ಚೋಳರ 'ರಾಜರಾಜ' ಎಂಬವನು (ಕ್ರಿ. ಶ. ೯೮೫-೧೦೧೪) ಪ್ರಬಲರಾಜನಿದ್ದು, ತನ್ನ ಸಮಕಾಲೀನನಾದ ಚಾಳುಕ್ಯ ಸತ್ಯಾಶ್ರಯನೊಂದಿಗೆ (ಕ್ರಿ. ಶ. ೯೯೭-೧೦೦೮) ಸೆಣಸಿ, ವಿಜಾಪುರ ಜಿಲ್ಲೆಯ ಒಳತನಕ ದಂಡೆತ್ತಿ ಹೋದನು. ತಿರುಗಿ ಬರುವಾಗ ಅವನ ಆನೆಗಳು ತುಂಗಭದ್ರೆಯ ನೀರನ್ನೆಲ್ಲ ಕದಡಿ ರಾಡಿ ಮಾಡಿದುವಂತೆ. ಅವನ ಮಗ ರಾಜೇಂದ್ರ ಚೋಳನು (ಕ್ರಿ. ಶ. ೧೦೧೪-೧೦೪೪) ಇನ್ನಷ್ಟು ಪ್ರಬಲನೆನಿಸಿ ದೂರದ ಮಳಖೇಡದವರೆಗೂ ಸಾಗಿ ಹೋದನಂತೆ. ಈ ಬಗ್ಗೆ ವಿವರಗಳನ್ನು ಕೊಡುತ್ತ ಕೆ. ಎ. ನೀಲಕಂಠಶಾಸ್ತ್ರಿಗಳು ಹೀಗೆ ಹೇಳಿದ್ದಾರೆ :

*These campaigns resulted in the annexation to the Cola empire of nearly the whole of the modern district of Bellary, so that the Tungabhadra became the boundary between the two empires. (The Colas, p. 176)*

ಇನ್ನು ಚಾಲುಕ್ಯರ ಸರದಿ. ಜಯಸಿಂಹನು (ಕ್ರಿ. ಶ. ೧೦೧೫-೧೦೪೪) ಪ್ರತಿ ದಾಳಿಯನ್ನು ಕೈಕೊಂಡಾಗ ಚೋಳರು ಭೋಜ, ಮುಂತಾದ ಸಾಮಂತರೊಂದಿಗೆ ಅವನನ್ನು ಎದುರಿಸಿದರು. ಜಯಸಿಂಹನು ಆ ಒಕ್ಕೂಟವನ್ನು ಸದೆಬಡಿದನಲ್ಲದೆ, ಬಳ್ಳಾರಿ ಪ್ರದೇಶದಿಂದ ಅವರನ್ನು ಹೊರದೂಡಿದನು. ಹೀಗೆ ಒಮ್ಮೆ ಚೋಳರು, ಮತ್ತೊಮ್ಮೆ ಚಾಳುಕ್ಯರು ಗೆದೆಯುವುದು ಇಲ್ಲವೆ ಸೋಲುವುದು ನಡೆದಾಗ ತುಂಗಭದ್ರೆಯು ಅವರ ನಡುವಿನ ಗಡಿರೇಖೆ ಎಂಬುದು ನೆಲೆಗೊಂಡು ಬಿಟ್ಟಿತು.

ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿಯೂ ಈ ಘರ್ಷಣೆ ಮುಂದುವರಿಯಿತು. ಚಾಳುಕ್ಯ ಸೋಮೇಶ್ವರನಿಗೆ. (ಕ್ರಿ. ಶ. ೧೦೪೨-೧೦೬೮), ಚೋಳರ ರಾಜಾಧಿರಾಜ ಹಾಗೂ ಅವನ ತಮ್ಮ ರಾಜೇಂದ್ರ ಇಬ್ಬರೂ (೧೦೪೪-೧೦೫೨-೧೦೬೩) ತಕ್ಕ ಪ್ರತಿಸ್ಪರ್ಧಿಗಳಾಗಿದ್ದರು. ಅವರುಗಳ ನಡುವೆ ಆದ ಮೂಡಕ್ಕಾರು ಮತ್ತು ಕೊಪ್ಪಮ್ ಸ್ಥಳಗಳಲ್ಲಿಯ ಯುದ್ಧಗಳು ಇತಿಹಾಸದ ಪುಟಗಳಲ್ಲಿ ಸದ್ದೈವ ದಾಖಲಾದವುಗಳು. ಆಗೆಲ್ಲ ತುಂಗಭದ್ರೆಯನ್ನು ದಾಟುವ ಇಲ್ಲವೆ ಇದ್ದಲ್ಲಿಯೆ ಉಳಿಯುವಂಥ ಪ್ರಸಂಗಗಳು ಪರಸ್ಪರರ ಸೋಲು-ಗೆಲವುಗಳಿಗೆ ಪರೋಕ್ಷವಾಗಿ ಕಾರಣೀಭೂತವಾದುವು.

ಮತ್ತೊಂದು ಗಣನೀಯ ಯುದ್ಧವು ೨ನೆಯ ಸೋಮೇಶ್ವರ (ಕ್ರಿ. ಶ. ೧೦೬೯-೧೦೭೬) ಹಾಗೂ ವೀರರಾಜೇಂದ್ರ (ಕ್ರಿ. ಶ. ೧೦೬೪-೧೦೭೦) ಇವರ ನಡುವೆ ಕೂಡಲಸಂಗಮ ಎಂಬಲ್ಲಿ ಜರುಗಿತು. ಎಂಬಲ್ಲಿ ಎಂದುದರ ಕಾರಣ, ವಿಜಾಪುರಜಿಲ್ಲೆಯ ಘಟಪ್ರಭಾ-ಕೃಷ್ಣಾ ನದಿಗಳ ಸಂಗಮ ಇದಾಗಿರದೇ, ಕುಮದ್ವತಿ-ತುಂಗಭದ್ರಾ ಇವುಗಳ ಸಂಗಮ ಸ್ಥಳವಾಗಿರಬೇಕು(ಅದಕ್ಕೂ ಕೂಡಲಸಂಗಮ ಎನ್ನುತ್ತಿದ್ದರೆಂದು ಹಲ್ಷ್ ಅವರು ಊಹಿಸಿದ್ದಾರೆ). ದಕ್ಷಿಣದ ಚೋಳರಿಗೆ ಈ ಸಂಗಮವೇ ಹತ್ತಿರದ್ದು. ಆ ಭೀಕರ ಯುದ್ಧದಲ್ಲಿ ಚಾಳುಕ್ಯರ ಏಳು ಜನ ಸೇನಾಪತಿಗಳು ಚೋಳರಿಗೆ ಸೆರೆಸಿಕ್ಕರು. (ಅವರ ಹೆಸರುಗಳೂ ಒಂದು ತಮಿಳು ಶಾಸನದಲ್ಲಿವೆ). ಆಗ ಸೋಮೇಶ್ವರನು ವೀರರಾಜೇಂದ್ರನಿಗೆ ''ಈ ರೀತಿ ಅವಮಾನ ಹೊಂದಿ ಬದುಕುವುದುಂಟೆ? ಇದರ ಪರಿಮಾರ್ಜನೆಗಾಗಿ ನಾನು ಮತ್ತೆ ಇದೇ ಜಾಗದಲ್ಲಿ (ಕುಮದ್ವತಿ - ತುಂಗಭದ್ರಾ ಸಂಗಮ) ಸೈನ್ಯಸನ್ನದ್ಧನಾಗಿ ಒಂದು ತಿಂಗಳಲ್ಲಿ ಮರಳಿ ಬರುವೆ'' ಎಂದು ತಿಳಿಯಪಡಿಸಿದನಂತೆ. 'ಹೋ, ಆಗಲಿ' ಎಂದು ವೀರರಾಜೇಂದ್ರನು ಒಪ್ಪಿ, ತಾನು ಬಂದು ದಾರಿ ಕಾಯ್ದನಂತೆ. ಸೋಮೇಶ್ವರನು ಬರಲಿಲ್ಲವಂತೆ.

ಈ ಅಂಶ - ಎಂದರೆ ಸೋಮೇಶ್ವರನ ಆಹ್ವಾನ, ಚೋಳ ರಾಜನ ಕಾಯುವಿಕೆ ಹಾಗೂ ಸೋಮೇಶ್ವರನ ಅನಾಗಮನ ಇವು ನಮ್ಮ ಕಡೆಯ ಯಾವುದೇ ಶಾಸನದಲ್ಲಿ ಉಲ್ಲೇಖವಾಗಿಲ್ಲ (ಅದು

ಸಹಜವೇ). ವೀರರಾಜೇಂದ್ರನು ಗೆದ್ದುದಂತೂ ನಿಜ. ಏನೇ ಇರಲಿ, ಇದಾಗಿ ಕೆಲವೇ ತಿಂಗಳಲ್ಲಿ ಸೋಮೇಶ್ವರನು ಮಹಾ ವ್ಯಾಧಿಯಿಂದ ಬಳಲಿದವನಾಗಿ ಕುರವತ್ತಿಯ ತೀರದ ತುಂಗಭದ್ರೆಯಲ್ಲಿ ಜಲ ಸಮಾಧಿಯಿಂದ ಪ್ರಾಣತೆತ್ತ. ಈ ವಿಷಯವು ಮಾತ್ರ ಬಿಲ್ಹಣನ ಸುಪ್ರಸಿದ್ಧ 'ವಿಕ್ರಮಾಂಕದೇವ ಚರಿತೆ'ಯಲ್ಲಿ ಹಾಗೂ ಒಂದೆರಡು ಶಾಸನಗಳಲ್ಲಿಯೂ ವೈಭವೋಪೇತವಾಗಿ ವರ್ಣಿತವಾಗಿದೆ.

ಈ ಜಲಸಮಾಧಿಯನ್ನು ಕುರಿತು ನನ್ನವೇ ಆದ ಒಂದೆರಡು ಸಂದೇಹಗಳಿವೆ. ಚಕ್ರವರ್ತಿಯಾದರೇನು, ಮಹಾರೋಗ ಬರಬಾರದೆಂದೇನಿಲ್ಲ. ಆದರೆ ಅದು ಗುಣವಾಗದೆಂಬ ಕಾರಣದಿಂದ ಜಲಸಮಾಧಿಯಂಥ ಲೋಕರೂಢಿಯಲ್ಲಿಲ್ಲದ ಉಜ್ಜುಗಕ್ಕೆ ತೊಡಗಬೇಕಿತ್ತೆ? ನಮ್ಮಲ್ಲಿ ಸಲ್ಲೇಖನವ್ರತ, ಮಾಸತಿಯರ ಸಹಗಮನ, ಸಶರೀರ ಸಮಾಧಿ (ಕೆಲವು ಮಾಧ್ವಯತಿಗಳು ಮಾಡಿದಂತೆ) ಇವು ಕೆಲವು ಧಾರ್ಮಿಕ ಮನ್ನಣೆಯನ್ನು ಪಡೆದಿವೆ. ಜಲಸಮಾಧಿಯ ಬಗ್ಗೆ ಯಾವುದೇ ಧಾರ್ಮಿಕ ವಿಧಿನಿಯಮ ಇಲ್ಲ. ಬೇರೆ ಯಾರಾದರೂ ಮಾಡಿದ್ದರ ಪ್ರಸ್ತಾಪ ಚರಿತ್ರೆಯಲ್ಲಿ ಬಂದಿಲ್ಲ.

ಈ ಕುರಿತ ನನ್ನ ಅನಿಸಿಕೆ ಇದು. ಅವನು ಚೋಳರೊಡನೆಯ ಯುದ್ಧದಲ್ಲಿ ಸೋತನೆಂದ ಮೇಲೆ 'ಆಹವಮಲ್ಲ' ಎಂಬ ಅವನ ಬಿರುದಿಗೇ ಪೆಟ್ಟು ತಗಲಿದಂತಾಯ್ತಲ್ಲವೆ? ಅದಾವ ಕಾರಣದಿಂದಲೋ, ಮರು ಯುದ್ಧಕ್ಕೆ ಹೋಗಲಿಲ್ಲ ಎನ್ನುವ, ಈ ಸೋಲು ಮತ್ತು ಸಾವುಗಳ ಸಂಬಂಧವನ್ನು ತೋರ್ಪಡಿಸುವ ಈ ಶ್ಲೋಕವನ್ನು ಗಮನಿಸಬೇಕು. (ಇದು ಸುಪ್ರಸಿದ್ಧ ಬಾದಾಮಿ ಶಾಸನ - ಕಪ್ಪೆ ಅರಭಟ್ಟನ ಸ್ತುತಿಪರವಾದದ್ದು):

ವರಂ ತೇಜಸ್ವಿನೋ ಮೃತ್ಯುರ್ನತು ಮಾನಾವ ಖಂಡನಂ।
ಮೃತ್ಯುಃ ತತ್‌ಕ್ಷಣಿಕೋ ದುಃಖಮ್ಮಾನಭಂಗಂ ದಿನೇದಿನೇ॥

ಇನ್ನೊಂದು ಪ್ರಶ್ನೆ. ರಾಜಧಾನಿಯಿಂದ ದೂರವಿರುವ ಕುರವತ್ತಿಯನ್ನೇಕೆ ಆಯ್ದುಕೊಂಡ? ಬನವಾಸಿಯ ಬಗ್ಗೆ ಪಂಪನಿಗಿದ್ದಂತೆ ಸೋಮೇಶ್ವರನಿಗೆ ಕುರವತ್ತಿಯ ಬಗ್ಗೆ ವಿಶೇಷ ವ್ಯಾಮೋಹ ಇದ್ದಿರಬಹುದೆ? ಹೌದು, ಎಂದುದಾಗಿ ಅಲ್ಲಿಯ ಶಾಸನಗಳನ್ನು ಅಭ್ಯಸಿಸಿದ ಡಾ॥ ದೇವರಕೊಂಡಾರೆಡ್ಡಿಯವರು ದೃಢೀಕರಿಸುತ್ತಾರೆ. ಇದೇ ಸೋಮೇಶ್ವರನ ಹೆಂಡತಿ - ಹೊಯ್ಸಳಾದೇವಿ, ೧೦೫೫ರಲ್ಲಿ ನೆರೆಯ ಒಂದು ಕ್ಷೇತ್ರಕ್ಕೆ ದತ್ತಿಬಿಟ್ಟದ್ದಾಳೆ. ಅಲ್ಲದೆ ಚೋಳರನ್ನು ಎದುರಿಸಹೊರಟಾಗ ಇಲ್ಲಿಯೇ ನದಿಯನ್ನು ದಾಟುತ್ತಿದ್ದು ಪರಿಚಿತ ಸ್ಥಳವಾಗಿರಬೇಕು. ಅಲ್ಲದೆ ಕುರವತ್ತಿಯ ಬಳಿಯಲ್ಲಿ ತುಂಗಭದ್ರೆ ಒಂದಿಷ್ಟು ಬಾಗಿಕೊಂಡು ಹರಿಯುತ್ತಿದ್ದು, ಅಂಥ ಸ್ಥಾನದಲ್ಲಿ ದೇವತಾ ಸನ್ನಿಧಾನವಿರುವುದೆಂಬ ನಂಬಿಕೆ ಈಗಲೂ ಪ್ರಚಲಿತವಿದೆ. ಏನಿದ್ದರೂ ಆ ಮೂಲಕ ಈ ನದಿಯ ಬಗೆಗಿನ ತನ್ನ ಒಲವನ್ನು ತೋರ್ಪಡಿಸಿದ್ದಾನೆ. ಅವನ ಮರಣಾನಂತರ ಕಟ್ಟಿಸಿದ್ದಿರಬಹುದಾದ ಮಲ್ಲಿಕಾರ್ಜುನ ದೇವಾಲಯಕ್ಕೆ ಆಹವಮಲ್ಲೇಶ್ವರ ಎಂದೇ ಹೆಸರಿಟ್ಟು ಆ ಮುಂದಿನವರು ದತ್ತಿಬಿಟ್ಟಿದ್ದಾರೆ.

ಈ ಸೋಮೇಶ್ವರನ ಇನ್ನೊಬ್ಬ ಮಗನೇ ಆರನೆಯ ವಿಕ್ರಮಾದಿತ್ಯ ಮಹಾಪರಾಕ್ರಮಿ. ಚೋಳರನ್ನು ಸದೆಬಡೆಯಲೆಂದು ಅವರ ರಾಜಧಾನಿಯ ತನಕ ಸಾಗಿಬಂದ ವೇಳೆಗೆ ವೀರರಾಜೇಂದ್ರನು ಮುದುಕನಾಗಿದ್ದ. ವಿಕ್ರಮಾದಿತ್ಯನನ್ನು ಎದುರಿಸಲಾಗದೇ, ತನ್ನ ಮಗಳನ್ನು ಧಾರೆಯೆರೆದು ಮಿತ್ರತ್ವವನ್ನು ಸಂಪಾದಿಸಿದ. ಆ ನೂತನ ವಧುವಿನೊಂದಿಗೆ ವಿಕ್ರಮಾದಿತ್ಯನು ರಾಜಧಾನಿಗೆ ಹಿಂತಿರುಗುವಾಗ, ತುಂಗಭದ್ರೆಯ ತೀರದಲ್ಲಿ ತಂಗಿದ್ದನಂತೆ. ಈಗಿನ ಪರಿಪಾಠದಲ್ಲಿ ಹೇಳುವುದಾದರೆ ಆ ನದೀತೀರವು ಅವನ ಹನಿಮೂನ್ ತಾಣವಾಯಿತೆನ್ನಬೇಕು! ಅಂತೂ ಈ ಬೀಗತನದಿಂದ ಚಾಳುಕ್ಯ ಚೋಳರ ತುಂಗಭದ್ರೆಯ ಎಡಬಲದಲ್ಲಿಯ ಸಂಘರ್ಷಕ್ಕೆ ತೆರೆಬಿದ್ದಿತು.

ಇನ್ನೀಗ ಚಾಲುಕ್ಯರೊಡನೆ ಯುದ್ಧ ಮಾಡಲು ಹೊಯ್ಸಳರು ಮತ್ತು ಸೇಉಣರ ಸರದಿ. ಹೊಯ್ಸಳರು ಕರ್ನಾಟಕದ ದಕ್ಷಿಣ-ಪೂರ್ವ ಭಾಗದಲ್ಲಿ ರಾಜ್ಯವಾಳುತ್ತಿದ್ದರೆ ಸೇಉಣರು ಈಗಿನ ಮಹಾರಾಷ್ಟ್ರದ ಬಹು ಭಾಗ ಮತ್ತು ನಮ್ಮ ನಾಡಿನ ಪಶ್ಚಿಮೋತ್ತರ ಪ್ರದೇಶವನ್ನು ಆಳುತ್ತಿದ್ದರು. ಹೀಗಿರುತ್ತ ೧೨-೧೩ನೆಯ ಶತಮಾನಗಳಲ್ಲಿ ಈ ಮೂವರು ರಾಜಮನೆತನದವರು ಸಮರೋತ್ಸಾಹಿಗಳಾದರು. ಹೊಯ್ಸಳರ ವಿಷ್ಣುವರ್ಧನನು ತುಂಗಭದ್ರೆಯ ಪೂರ್ವ ದಿಕ್ಕಿಗಿರುವ ಕುಮ್ಮಟವನ್ನು ಗೆದ್ದು ನದಿಯನ್ನು ದಾಟಿ ಧಾರವಾಡ ಜಿಲ್ಲೆಯ ಬಹುಭಾಗವನ್ನು ವಶಪಡಿಸಿಕೊಂಡನು (೧೧೩೫). ಕೆಲ ಕಾಲದ ಮೇಲೆ ಚಾಲುಕ್ಯರು ಅವನನ್ನು ಸೋಲಿಸಿ ತುಂಗಭದ್ರೆಯ ಗಡಿಯಾಚೆ ದಾಟ ಹಾಕಿದರು...ಇತ್ಯಾದಿ.

ಆದರೆ ಆ ಮುಂದಿನ ಸೇಉಣ, ಹೊಯ್ಸಳರ ಸೆಣಸಾಟ ದೀರ್ಘ ಕಾಲದ್ದಾಗಿ ನಾಡನ್ನು ಇಬ್ಭಾಗಿಸುವ ಕೆಲಸಕ್ಕೆ ಗಟ್ಟಿಯಾದ ತಳಹದಿಯನ್ನು ಹಾಕಿತ್ತು. ಅದರಲ್ಲಿಯೂ ಸೇಉಣ ಸಿಂಘಣ ಹಾಗೂ ಹೊಯ್ಸಳ ನರಸಿಂಹರ ಕಾದಾಟ, (ಕ್ರಿ. ಶ. ೧೨೩೫) ಚೋಳ-ಚಾಳುಕ್ಯರದನ್ನು ಪುನರಾವೃತ್ತಿಗೊಳಿಸಿದಂತಿತ್ತು. ಒಂದು ಮಹತ್ತರವಾದ ಸ್ಥಿತ್ಯಂತರವೆಂದರೆ ತುಂಗಭದ್ರೆ ಅದುವರೆಗೆ ಗಡಿರೇಖೆಯಾಗಿ ಇದ್ದದ್ದು ನಾಡಿನ ವಿಭಜನಾ ರೇಖೆಯಾಗಿ ಪರಿಣಮಿಸಿದ್ದುದು. ಸೇಉಣರನ್ನು ಕುರಿತ ತಮ್ಮ ಗ್ರಂಥದಲ್ಲಿ ಡಾ॥ ರಿತ್ತಿ ಅವರು ಈ ಅಂಶವನ್ನು ಹೀಗೆ ಎತ್ತಿ ತೋರಿಸಿದ್ದಾರೆ.

*From the sixth to the end of the twelth century it flourished as one unit between the traditional boundaries of Godavari & Kaveri. [ಕಾವೇರಿಯಿಂದ ಮಾ ಗೋದಾವರಿ ವರಮಿರ್ದ ನಾಡದಾ...].*

But it came to be divided into two regions due to the rivalry between Seunas and Hoysalas. Broadly the river became the dividing line. The result was gradual lessening of contacts between the two peoples.

ಪಿ. ಬಿ. ದೇಸಾಯಿಯವರಂತೂ ತಮ್ಮ History of Karnatakaದ ಸೇಉಣ ಚರಿತ್ರೆಯ ಕೊನೆಯ ಪ್ಯಾರಾದಲ್ಲಿ 'Karnataka Divided' ಎಂದೇ ಶೀರ್ಷಿಕೆ ಕೊಟ್ಟಿದ್ದಾರೆ. ಈ ವಿಷಯದ ಒಂದು ವ್ಯಂಗ್ಯವೆಂದರೆ ಇಬ್ಬರೂ ಕರ್ನಾಟಕದ ರಾಜರೇ ಎನಿಸಿದ್ದರೂ ಕನ್ನಡಿಗರ ಭಾಷೆ ಹಾಗೂ ಮತಧರ್ಮಗಳು ಒಂದೇ ಆಗಿದ್ದರೂ, ಆಚಾರ-ವಿಚಾರ, ಸಾಮಾಜಿಕ ನಡವಳಿಕೆ, ವೇಷ-ಭೂಷ, ಆಹಾರಾದಿ ವಿಷಯಗಳಲ್ಲಿಯೂ ಭಿನ್ನತೆ ಕಂಡು ಬರತೊಡಗಿದ್ದದ್ದು ಇದೇ ಕಾಲದಿಂದ. ಏನು ಕಾರಣ? ಎಂದರೆ ತುಂಗಭದ್ರೆಯ ಉತ್ತರ ಪ್ರದೇಶವನ್ನಾಳುತ್ತಿದ್ದ ಸೇಉಣರು ಮಹಾರಾಷ್ಟ್ರದ ಆಧಿಪತ್ಯವನ್ನು ಹೆಚ್ಚಾಗಿ ಹೊಂದಿದ್ದರಿಂದ ಆ ಪ್ರದೇಶದ ಸಾಮಾಜಿಕ ಜೀವನಕ್ಕೆ ಅಲ್ಲಿಯ ಕನ್ನಡಿಗರು ಹೊಂದಿಕೊಳ್ಳುವುದು ಅನಿವಾರ್ಯವಾಯಿತು. ಸೇಉಣರ ಅನಂತರ ಆ ಪ್ರದೇಶವನ್ನು ಆಳಿದ ಬಹಮನಿ ಸುಲ್ತಾನರು ಅದನ್ನು ಮುಂದುವರಿಸಿದರು. ಹೀಗೆ 'ಇದು ಉತ್ತರ ಕರ್ನಾಟಕ ದಕ್ಷಿಣ ಭಾಗಕ್ಕಿಂತ ಬೇರೆಯದು'- ಎಂಬ ಪ್ರಮೇಯ ನೆಲೆಗೊಂಡದ್ದು ಈ ಹದಿಮೂರನೆಯ ಶತಮಾನದಿಂದ.

### ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ

ಹದಿನಾಲ್ಕನೆಯ ಶತಮಾನದ ಆರಂಭಕ್ಕೆ ನಾಡಿನ ರಾಜಕೀಯ ದೃಶ್ಯ ಆನೆಗೊಂದಿ-ಹಂಪಿ ಈ ಸೀಮೆಗೆ ಸ್ಥಳಾಂತರಗೊಂಡಿತು. ವಿಜಯನಗರದ ರಾಜ್ಯವು ಅಸ್ತಿತ್ವಕ್ಕೆ ಬರುವ ಮುನ್ನ, ಎಂದರೆ ೧೩೨೦ರ ಸುಮಾರಿಗೆ ನೆರೆಯ ಕಂಪಲಿಯಲ್ಲಿ ರಾಜ್ಯವಾಳುತ್ತಿದ್ದ ಕಂಪಿಲ ಹಾಗೂ ಕುಮಾರರಾಮ ಇವರನ್ನು ಪ್ರಸ್ತಾಪಿಸತಕ್ಕುದು. ದಿಲ್ಲಿಯ ಮಲಿಕ ಕಾಫರನ ದಾಳಿಯನ್ನು ಬಲವಾಗಿ ಎದುರಿಸಿದ ಶಕ್ತಿಶಾಲಿಗಳಿವರು. ಅವರ ಈ ಯಶಸ್ಸಿಗೆ ನದೀ ಮಾರ್ಗದ ಸೂಕ್ತ ಬಳಕೆ ತುಸು ಮಟ್ಟಿಗೆ ಕಾರಣವಾಯಿತು.

*ವಿಜಯನಗರ ಸಾಮ್ರಾಜ್ಯವು ಜನ್ಮತಾಳಿದ್ದೇ ತುಂಗಭದ್ರೆಯ ಆಸರೆಯಲ್ಲಿ ಮತ್ತು ಕೊನೆವರೆಗೆ ಅದೊಂದೇ ಅವರ ರಾಜಧಾನಿಯಾಗಿ ಉಳಿಯಿತು. ಆ ಹಿಂದಿನ ಹಲವಾರು ಸಣ್ಣ ದೊಡ್ಡ ರಾಜಮನೆತನಗಳವರು ತಮ್ಮ ರಾಜಧಾನಿಯ ಸ್ಥಳವನ್ನು ಬದಲಿಸಿದ್ದರೆನ್ನುವುದನ್ನು ಗಮನಿಸಬೇಕು. ಅಲ್ಲದ ಬೇರೆ ರಾಜರಿಗೆ ನದಿಗಳ ಸಂಪರ್ಕ ಆಗೀಗೊಮ್ಮೆ ಎಂಬಂತಿದ್ದರೆ ವಿಜಯ ನಗರದವರಿಗೆ ದಿನ ನಿತ್ಯ ಅದರೊಡನೆ ಅವಿನಾಭಾವಿಯಾದ ಸಂಬಂಧ. ವೈರಿಗಳ ಹಟಾತ್ ದಾಳಿಯಿಂದ ರಕ್ಷಿಸಲು ಅದು ಪ್ರಕೃತಿದತ್ತ ಆಶ್ರಯವನ್ನಿತ್ತಿತು. ಅದರ ಆಸುಪಾಸಿನ ಯುದ್ಧಗಳಲ್ಲಿ ವಿಜಯನಗರದವರೇ ಹೆಚ್ಚಾಗಿ ಗೆಲವನ್ನು ಸಾಧಿಸಿದ್ದಾರೆ.*

*ಇತರ ಹಲವು ರೀತಿಯಲ್ಲಿಯೂ ಈ ನದಿಯು ಅವರಿಗೆ ವರದಾನವಾಗಿ ಪರಿಣಮಿಸಿದೆ. ವಿಶೇಷತಃ ನೀರಾವರಿ. ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ವಿಜಯನಗರದ ರಾಜರು ಇದರ ನೀರಿನ ಪ್ರಯೋಜನ ಮಾಡಿಕೊಂಡರು. ಕೆಲಕಡೆ ಬಂಡೆಗಲ್ಲುಗಳನ್ನು ನೀರೊಳಗೆ ಉರುಳಿಸಿ ನದೀ ನೀರು ಅಡ್ಡಲಾಗಿ ಹರಿಯುವಂತೆ ಮಾಡಿದ್ದುಂಟು. ಎರಡನೆಯ ಬುಕ್ಕನ ಕಾಲದಿಂದಲೇ ಕಾಲುವೆಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ತುರುತ್ತು ಎಂಬಲ್ಲಿಯ ಕಾಲುವೆ, ಉಲ್ಲೇಖಗೊಂಡ ಮೊತ್ತ ಮೊದಲಿನದು (ಕ್ರಿ.ಶ. ೧೩೯೮). ಪ್ರೌಢದೇವರಾಯನು (ಕ್ರಿ. ಶ. ೧೪೨೪-೧೪೪೬) ಆಗಿನ ಕಾಲದಲ್ಲಿ ಬಹು ದೊಡ್ಡದೆನಿಸಿದ ಆಣೆಕಟ್ಟನ್ನು ಕಟ್ಟಿ ಸು.೧೫ ಮೈಲು ಉದ್ದದ ವಿಶಾಲವಾದ ಕಾಲುವೆಯೊಂದನ್ನು ನಿರ್ಮಿಸಿದನಂತೆ. ಕೃಷ್ಣದೇವರಾಯನ ಕಾಲದಲ್ಲಂತೂ ನೀರಾವರಿ ವ್ಯಾಪಕವಾಗಿದ್ದಿರಲು ಸಾಕು. ರಾಯರಕೆರೆ, ರಾಯರ ಕಾಲುವೆ - ಎಂಬವುಗಳು ಮನೆಮಾತಾಗಿದ್ದುವು. ಆದರೆ ಈಚಿನ ಹೊಸಪೇಟೆ ಬಳಿಯ ಬೃಹತ್ ಆಣೆಕಟ್ಟಿನಿಂದಾಗಿ ಇಂಥ ಕೆಲವು ಮುಳುಗಿ ಹೋಗಿವೆ.*

ತುಂಗಭದ್ರಾ ಪ್ರವಾಹದ ಉಪಯೋಗದ ಒಂದು ವಿಶಿಷ್ಟ ಉದಾಹರಣೆ ಇಲ್ಲಿದೆ. ಹಡಗಲಿ, ಹೂವಿನ ಹಡಗಲಿ ಈ ಊರುಗಳ ಹೆಸರನ್ನು ಕೇಳಿಬಲ್ಲೆವು. ಆದರೆ ಹೂವಿಗೂ ಹಡಗಲಿಗೂ ಏನು ಸಂಬಂಧ? - ಈ ಹೂವಿನ ಹಡಗಲಿ ಪ್ರಾಚೀನದಿಂದಲೂ ಹೂವು ಹಣ್ಣುಗಳ ಬೆಳೆಗಳಿಗೆ ಪ್ರಸಿದ್ಧವಿತ್ತು. ವಿಜಯನಗರದ ಕಾಲಕ್ಕೆ ಬುಟ್ಟಿ ಬುಟ್ಟಿ ತುಂಬ ಹೂವುಗಳನ್ನು ರಾಜಧಾನಿಗೆ ಈ ನದಿ ಮೂಲಕ ಸಾಗಿಸುತ್ತಿದ್ದರಂತೆ.

*ಆದರೆ, ಆದರೆ! ಸಮಗ್ರ ದಕ್ಷಿಣ ಭಾರತವನ್ನೇ ಆಳುತ್ತಿದ್ದ ವಿಜಯನಗರದವರಿಗೂ ತುಂಗಭದ್ರೆಯು ಒಂದು ಗಡಿ ರೇಖೆಯಾಗಿಯೆ ಉಳಿಯಿತು. ಸುರುವಿಗೆ ಅದನ್ನು ದಾಟಿ ಪಶ್ಚಿಮದತ್ತ ಎಂದರೆ ಧಾರವಾಡ, ವಿಜಾಪುರಗಳತ್ತ ರಾಜ್ಯದ ಗಡಿಯನ್ನು ವಿಸ್ತರಿಸಿದ್ದರು. ಮೊದಲನೇ ಹರಿಹರ ಬಾದಾಮಿಯ ವರೆಗೂ ಸಾಗಿ ಹೋಗಿದ್ದ. ಆದರೆ ಆ ಸಮಯಕ್ಕೆ ಬಹಮನಿ ಸುಲ್ತಾನರು ನೆಲೆಗೊಂಡದ್ದರಿಂದ ಆ ವಿಸ್ತರಣೆಗೆ ಅವಕಾಶ ಒದಗಲೇ ಇಲ್ಲ - ಕೊನೆವರೆಗೂ! ನದಿಯನ್ನೇನೊ ಆಗೀಗ ದಾಟಿಕೊಂಡು ಹೋದದ್ದುಂಟು; ಸುಲ್ತಾನರುಗಳನ್ನು ಸೋಲಿಸಿದ್ದೂ ಹೌದು. ಆದರೆ ಮರಳಿ ತುಂಗಭದ್ರೆಯ ಗಡಿಗೇ ಅವರ ವಾಪಸಾತಿ. ನಾಡಿನ ಇಬ್ಭಾಗಕ್ಕೆ ಇದು ಕೂಡ ಪೂರಕವಾಯಿತು. ವಿಜಯನಗರ ಸಾಮ್ರಾಜ್ಯ ಆಳಿದ ಮೇಲೆಯೂ ಪೆನುಗೊಂಡೆಯ ರಾಜರು ಹಂಪಿಯ, ತುಂಗಭದ್ರೆಯ ಸಂಪರ್ಕವನ್ನು ಉಳಿಸಿಕೊಂಡಿದ್ದರು. ಆ ನದೀ ತೀರದಲ್ಲಿ ಒಂದು ಉದ್ಯಾನವನ್ನು ನಿರ್ಮಿಸಿದ್ದರ, ದೇವಾಲಯಗಳಿಗೆ ದತ್ತಿ ದಾನ ಕೊಟ್ಟಿದರ ಉಲ್ಲೇಖಗಳು ದೊರೆಯುತ್ತಿವೆ.*

### ಹದಿನೆಂಟನೆಯ ಶತಮಾನದಲ್ಲಿ

ಈ ಶತಮಾನದ ಉತ್ತರಾರ್ಧದಲ್ಲಿಯ ಹೈದರ್-ಟೀಪೂ, ಮರಾಠಾ, ನಿಜಾಮ ಹಾಗೂ ಬ್ರಿಟಿಶ್ ಸತ್ತೆಗಳ ಹೋರಾಟ ನಡೆದದ್ದು. ಮೋಜೆಂದರೆ ಹೈದರ್ ಮತ್ತು ಟೀಪೂ ಇವರು

ತುಂಗಭದ್ರೆಯು ಒಂದು ಗಡಿ ಎಂದು ಲೆಕ್ಕಕ್ಕೆ ಹಿಡಿಯದೇ, ಬೇಕು ಬೇಕೆಂದಾಗ ದಾಟಿ ಹೋಗಿದ್ದಾರೆ! ಹೈದರನು ರಾಜ್ಯಸೂತ್ರ ವಹಿಸಿದ ಮರುವರ್ಷವೇ (ಕ್ರಿ. ಶ. ೧೭೬೩) ನದಿಯಾಚೆಗಿನ ಬಂಕಾಪೂರ, ಧಾರವಾಡ ಕೋಟೆಗಳನ್ನು ವಶಪಡಿಸಿಕೊಂಡನಲ್ಲದೆ, ಮೇಲ್ಗಡೆ ಕೃಷ್ಣಾ-ತುಂಗಭದ್ರಾ ನಡುವಿನ ಸೀಮೆಗೂ ಲಗ್ಗೆ ಇಟ್ಟ.

ಪೇಶ್ವೆಯವರೂ ಅಷ್ಟೇ. ಇದೇ ಸುಮಾರಿಗೆ ಪೇಶ್ವೆ ಮಾಧವರಾಯನು ಬೇರೊಂದು ದಿಕ್ಕಿನಿಂದ ಕರ್ನಾಟಕದ ಮೇಲೆ ಮೂರು ಬಾರಿ ದಂಡಯಾತ್ರೆ ಕೈಕೊಂಡನು. (ಕ್ರಿ. ಶ. ೧೭೬೪, ೧೭೬೯, ೧೭೭೧). ಆಗ ಮರಾಟರು ಬೆಂಗಳೂರು, ಶ್ರೀರಂಗ ಪಟ್ಟಣದವರೆಗೂ ನುಗ್ಗಿದರು. ಯಥಾಪ್ರಕಾರ ಆ ಪ್ರದೇಶಗಳನ್ನು ಆಳುವ ಉಸಾಬರಿಗೆ ಹೋಗಲಿಲ್ಲ. ಮರಾಟರು ಈ ಮಧ್ಯೆ ಹೈದರ್ ಗೆದ್ದುಕೊಂಡಿದ್ದ ಹೆಚ್ಚಿನ ಪ್ರದೇಶವನ್ನು ಮರಳಿ ಪಡೆದಿದ್ದರು. ನಿಜಾಮನೂ ಕ್ರಮೇಣ ಮುನ್ನುಗ್ಗುತ್ತಲಿದ್ದ. ಇಬ್ಬರೂ ಸೇರಿ, ಟೀಪೂವನ್ನು ಸದೆಬಡೆಯುವ ಸನ್ನಾಹದಲ್ಲಿದ್ದರು. ಆಗ ಟೀಪೂ ಸುಲ್ತಾನನು ಕೈಕೊಂಡ ದಂಡಯಾತ್ರೆ ಅತ್ಯಂತ ಸಾಹಸಪೂರ್ಣವಾದದ್ದಿತ್ತು (೧೭೮೬). ಅವನು ಇನ್ನು ತಮ್ಮ ಮೇಲೆ ಎರಗುವನೆಂದು ಕಾಯ್ದಿದ್ದಾಗ ಟೀಪೂ ನದಿಯ ಪೂರ್ವ ದಿಕ್ಕಿನ ದಂಟೆಗುಂಟ ಮೇಲಕ್ಕೆ ಸಾಗಿ ಆದವಾನಿಯನ್ನು ಮುತ್ತಿದನು. ಅನಂತರ ಕಾಂಚನಗಡಕ್ಕೆ ಬಂದನು. ಅದಾದರೂ ತುಂಗಭದ್ರಾ ತೀರದ ಊರೇ. ಅಲ್ಲಿಯ ಪಾಳೆಯಗಾರ್ತಿ ತುಂಗಮ್ಮ ಎಂಬಾಕೆ ನದಿಯನ್ನು ದಾಟಿ ಪಾರಾಗಿ ಮರಾಟರನ್ನು ಸೇರಿಕೊಂಡಳು.

ಟೀಪೂವಿನ ಮುಂದಿನ ಗುರಿ ಹೊಸಪೇಟೆ. ಆ ದಿಕ್ಕಿನಿಂದ ಧಾರವಾಡ ಜಿಲ್ಲೆಗೆ ನುಗ್ಗುವ ಮಿಂಚಿನ ವಿಚಾರ ಅವನದು. ಅದು ಜುಲೈ ತಿಂಗಳು. ತುಂಗಭದ್ರೆ ತುಂಬಿ ರಭಸದಿಂದ ಹರಿಯುವ ಕಾಲವದು. ಆಗ ಟೀಪೂ ಸಾವಿರಾರು ಹರಗೋಲುಗಳನ್ನು ಬಳಸಿ, ರಾತ್ರೋರಾತ್ರಿ ತನ್ನ ಸಮಸ್ತ ಸೈನ್ಯವನ್ನು ದಾಟಿಸಿದನಂತೆ. 'A remarkable feat indeed' ಎಂದೊಬ್ಬ ಇತಿಹಾಸಕಾರನು ಹೊಗಳಿದ್ದಾನೆ. ತುಂಗಭದ್ರಾ ನದಿಯೇ ಯುದ್ಧದಲ್ಲಿ ಪಾಲ್ಗೊಂಡಿತೇನೊ ಎಂಬಷ್ಟು ಸಕ್ರಿಯ ಪಾತ್ರ ಅದರದು!

ಪೇಶ್ವೆಯವರ ಆಗಿನ ದಾಖಲೆಗಳಲ್ಲಿಯೂ (ಕ್ರಿ. ಶ. ೧೭೬೨-೧೭೯೨) ಈ ನದಿಯ ಪ್ರಸ್ತಾಪ ಬಂದೇಬರುತ್ತದೆ. ದಿ. ೨೭-೨-೧೭೬೨ರ ಒಂದು ಪತ್ರದ ಉಲ್ಲೇಖವಿದು:

*''ಶ್ರೀಮಂತ (ಅಂದರೆ ಪೇಶ್ವೆ) ತುಂಗಭದ್ರಾ ತೀರಾ ಪರ್ಯಂತ ಜಾವೂನ ಕರ್ನಾಟಕ ಪ್ರಾಂತೇ ದಬಾವ ಬಸವೂನ ಖಂಡಣೀ ತ್ಯಾ ಪ್ರಾಂತಾತ್ ಕರಾವೀ. ತುಂಗಭದ್ರಾ ತೀರಾ ಪುಢೇ ನ ಜಾವೇ.''*

೧೭೯೨ರಲ್ಲಿ ಮೈಸೂರು ಮೂರನೆಯ ಯುದ್ಧ ಜರುಗಿ ಬ್ರಿಟಿಶರು ವಿಜಯಿಗಳಾದರು. ಸೋತು ಹೋದ ಟೀಪೂ ತನ್ನ ಮಕ್ಕಳನ್ನೇ ಅಡವಿಟ್ಟ ಪ್ರಸಂಗ ಏನೆಲ್ಲ ನಡೆದು ಹೋಯಿತಲ್ಲವೆ! ಆಗಿನ ಒಪ್ಪಂದದ ಮಹತ್ತರ ಪರಿಣಾಮವೆಂದರೆ ಅವನ ರಾಜ್ಯದ ವ್ಯಾಪ್ತಿ ಈಗಿನ ಮೈಸೂರ ಸೀಮೆಗೆ ಸೀಮಿತವಾದದ್ದು. ಹೇಗೆ 'ಉತ್ತರ ಕರ್ನಾಟಕ' ಎಂಬ ಅಭಿಧಾನವು ನೆಲೆಗೊಂಡಿತೋ ಹಾಗೆಯೇ 'ಮೈಸೂರು ಸೀಮೆ' ಎನ್ನುವುದು ಸ್ಥಿರಗೊಂಡದ್ದು ಆ ವರ್ಷದಿಂದ, ಎನ್ನಬೇಕು.

ಅನಂತರ ಯಾವ ರಾಜರೇ ಆಗಲಿ ತುಂಗಭದ್ರೆಯನ್ನು ದಾಟಿ ಆಚೆಯ ಇಲ್ಲವೆ ಈಚೆಯ ಪ್ರದೇಶವನ್ನು ಗೆದ್ದು ಕೊಳ್ಳಬೇಕೆನ್ನುವ ಪ್ರಮೇಯ ನಿಂತು ಹೋಯಿತು. ಅರ್ಥಾತ್ ನಾಡಿನ ಸಾಂಸ್ಕೃತಿಕ ವಿಭಜನೆಗೆ ಅಧಿಕೃತ ಮುದ್ರೆ ಬಿದ್ದಿತು!

ಆ ಮುಂದೆ ಬ್ರಿಟಿಶರ ಅಧಿಕಾರಾವಧಿಯಲ್ಲಿ (೧೮೦೦-೧೯೪೭) ತುಂಗಭದ್ರೆಯು ಧಾರವಾಡ-ಚಿತ್ರದುರ್ಗ ರಾಯಚೂರ-ಬಳ್ಳಾರಿ ಜಿಲ್ಲೆಗಳ ನಡುವೆ ಸೀಮಾರೇಖೆಯಾಯಿತಷ್ಟೆ. ಅದರಿಂದಾಗಿ ನದಿಯ ಪಶ್ಚಿಮಕ್ಕೆ 'ಮುಂಬಯಿ ಕರ್ನಾಟಕ' ಹಾಗೂ 'ನಿಜಾಮ ಕರ್ನಾಟಕ' ಎಂಬ ಹೆಸರುಗಳು ಬಳಕೆಗೆ ಬರತೊಡಗಿದುವು.

ಇತ್ತ 'ಮೈಸೂರ ಸೀಮೆ'ಯ ಪ್ರತ್ಯೇಕತೆಯು ಅಸ್ಪಷ್ಟವಾಗಿ ಆರಂಭವಾಗಿ, ಹೇಗೆ ರೂಪುಗೊಂಡಿತನ್ನುವುದನ್ನು ನೋಡೋಣ. ಒಡೆಯರ್ ಮನೆತನದ ಆದ್ಯ ಪುರುಷ ಯದುರಾಯನು ಕೇವಲ ೩೦-೪೦ ಹಳ್ಳಿಗಳ ಒಡೆಯನಾಗಿದ್ದ. ಮುಂದೆ ರಾಜ ಒಡೆಯರು, ಕಂಠೀರವ ನರಸರಾಜ ಹಾಗೂ ಚಿಕ್ಕದೇವರಾಯ-ಇವರುಗಳ ಕಾಲಕ್ಕೆ ಮೈಸೂರ ರಾಜ್ಯವು ವಿಸ್ತಾರ ಹೊಂದಿತು. ಆದಾಗ್ಯೂ ಕೆಳದಿ, ಚಿತ್ರದುರ್ಗ, ಬೆಂಗಳೂರು ಮೊದಲಾದ ತುದಿಯಲ್ಲಿರುವ ಪ್ರದೇಶಗಳು ಸೇರಿರಲಿಲ್ಲ. ಹಾಗೆ ಅವು ಸೇರಿ ಈಚಿನ ಮೈಸೂರ ಸಂಸ್ಥಾನವು ರೂಪುಗೊಂಡದ್ದು ಹೈದರ್-ಟೀಪೂ ಸುಲ್ತಾನರ ಕಾಲದಲ್ಲಿ.

ಗಮನಿಸಬೇಕಾದ ಒಂದು ವೈಶಿಷ್ಟ್ಯವೆಂದರೆ ಈ ಸಂಸ್ಥಾನವು ಹಲವು ಶತಮಾನಗಳ ಕಾಲದಿಂದ ದಳವಾಯಿ, ಪಾಳೆಯಗಾರರೇ ಇಲ್ಲಿ ಪ್ರಮುಖರಾಗಿ ಬಾಳಿದ್ದುದು. ಆಗ ಹೊರಗಿನ ವಿಶೇಷ ಸಂಪರ್ಕವಿಲ್ಲದೇ, ತನ್ನದೇ ಆದ ವಿಶಿಷ್ಟ ಜನಜೀವನ ರೂಪುಗೊಂಡಿತು. ಸಂಪರ್ಕ ಬರುವುದೇ ಆಗಿದ್ದರೆ ಒಂದೇ ಭಾಷೆ, ಹಾಗೂ ಸಮಾನ ಮತಧರ್ಮಗಳನ್ನು ಹೊಂದಿದ್ದ ನದಿಯ 'ಆಚೆ'ಯವರೊಂದಿಗೆ ಬರಬೇಕಿತ್ತು. ಹದಿಮೂರನೆಯ ಶತಮಾನದಿಂದಲೇ ಅದು ಹೇಗೆ ತಪ್ಪಿಹೋಯಿತೆಂಬುದನ್ನು ನೋಡಿದ್ದಾಗಿದೆ. ಮತ್ತೆ ಹೇಳಬೇಕೆನಿಸುವುದು! ತುಂಗಭದ್ರೆಯ ಅಡ್ಡ ಹರಿಯುವಿಕೆಯಿಂದಾಗಿ ಸಂಪರ್ಕ ಬಾರದೇ ಹೋಯಿತು.

ಆದರೆ ಅವಳೋ, ಬ್ರಿಟಿಶರ ಆಳ್ವಿಕೆಯಲ್ಲಿ ಇದಾವುದರ ಪರಿವೆ ಇಲ್ಲದೆ ನಿಶ್ಚಿಂತಳಾಗಿ ಹರಿದು ಬಂದಳು. ಒಂದೇ ಒಂದು

ಮಹತ್ವದ ಘಟನೆ ಎಂದರೆ, ನಿಜಾಮ ಹಾಗೂ ಮದ್ರಾಸ ಸರಕಾರಗಳ ಸಂಯುಕ್ತ ಯೋಜನೆಯಾಗಿ ಈಗಿನ ಹೊಸಪೇಟೆಯ 'ಡ್ಯಾಮ್'ನ ಕೆಲಸ ನಡೆದದ್ದು. ಅದರ ಮುಕ್ಕಾಲು ಪಾಲು ಯೋಜನೆ ಮುಗಿಯುತ್ತ ಬಂದಾಗ ೧೯೫೩ರಲ್ಲಿ ಆಂಧ್ರಪ್ರಾಂತದ ನಿರ್ಮಾಣ ಹಾಗೂ ಅದರಲ್ಲಿ ಬಳ್ಳಾರಿ ಜಿಲ್ಲೆಯ ಸೇರ್ಪಡೆ ಇವು ಸಮಸ್ಯೆಗಳಾಗಿ ತಲೆದೋರಿದ್ದವು. ಕೊನೆಗೆ ಬಳ್ಳಾರಿ ಜಿಲ್ಲೆ ನಮ್ಮದೇ ಆಗಿ ಉಳಿಯಿತು. ಇದನ್ನು ನಿರ್ಣಯಿಸುವಲ್ಲಿ ತುಂಗಭದ್ರೆಯು ಕನ್ನಡಿಗರ ಜೀವಾಳದ ಪ್ರಶ್ನೆಯಾಗಿದ್ದುದೇ ಪ್ರಮುಖವಾಗಿದ್ದಿತೆನ್ನುವುದನ್ನು ಡಾ. ಎಚ್. ಎಸ್. ಗೋಪಾಲರಾವ್ ಅವರು ತಮ್ಮ 'ಕರ್ನಾಟಕ ಏಕೀಕರಣ ಇತಿಹಾಸ' ಪುಸ್ತಕದಲ್ಲಿ ವಿವರವಾಗಿ ತೋರಿಸಿದ್ದಾರೆ.

ಈ ಏಕೀಕರಣ ಚಳುವಳಿಯ ಕಾಲಕ್ಕೆ ಎಂದರೆ ೧೯೪೫ ರಿಂದ ೧೯೫೬ರ ವರೆಗಿನ ಅವಧಿಯಲ್ಲಿ ಹಳೆಯ ಮೈಸೂರ ಸಂಸ್ಥಾನದವರು ಒಟ್ಟಿನಲ್ಲಿ ಏಕೀಕರಣದ ಕಟ್ಟಾ ವಿರೋಧಿಗಳಾಗಿದ್ದುದು ತಿಳಿದ ವಿಷಯ. ಉತ್ತರ ಕರ್ನಾಟಕದ ಜನ ಹಾಗೂ ಮುಂದಾಳುಗಳೆಲ್ಲರಿಗೂ ಸಮಗ್ರ ಕರ್ನಾಟಕದಲ್ಲಿ ಆಸಕ್ತಿ ಇದ್ದರೆ, ತುಂಗಭದ್ರೆಯ ಕೆಳಗಣ ೮೫% ಜನರಿಗೆ, ನಾಯಕರಿಗೆ ಮನಸಾ ಬೇಡವಾಗಿತ್ತು. ಅಲ್ಲಿಯ ಲೇಖಕರು ಮಾತ್ರ ಬೆಂಬಲಿಸಿದ್ದರು. ಉತ್ತರ ಕರ್ನಾಟಕದ ಏಕೀಕರಣವಾದಿಗಳು ಅದೆಷ್ಟು ಸಮಜಾಯಿಸಿದರೂ ಮೈಸೂರಿಗರು ಒಪ್ಪದಿದ್ದಾಗ, ಅಲ್ಲಿಯ ಕೆಲವು ಉಗ್ರಭಾವನೆಯುಳ್ಳವರು-

''ನಾವು ಸೇರುವುದು ಅವರಿಗೆ ಬೇಡವಾದರೆ, ನಮಗೂ ಅವರು ಬೇಡ! ನಮ್ಮಗಳ ಪರಸ್ಪರ ಸಂಪರ್ಕದ ಕೊಂಡಿಯೆಂದರೆ ಹರಿಹರದ ಬಳಿಯಲ್ಲಿ ಹರಿಯುವ ತುಂಗಭದ್ರೆಯ ಸೇತುವೆ ತಾನೇ. ಅದನ್ನು ಒಂದು ರಾತ್ರಿ ಸಿಡಿಮದ್ದಿನ ಸ್ಫೋಟದಿಂದ ಕೆಡವಿ ಬಿಡೋಣ!!'' ಎಂಬುದಾಗಿ ಯೋಚಿಸಿದ್ದರು-ಕೂಡಾ. ಆದರೆ ಇತರ ಹಿರಿಯ ನಾಯಕರು ಅದಕ್ಕೆ ಎಳ್ಳಷ್ಟೂ ಆಸ್ಪದ ಕೊಡಲಿಲ್ಲ.

''ನೀವು ತುಂಗಭದ್ರೆಯ ಆಚೆಯವರು, ಸ್ವಾಮೀ'' ಎಂದು ಅನ್ನಿಸಿಕೊಂಡಿದ್ದ ನನಗೆ ಇತಿಹಾಸದ ಪುಟಗಳಲ್ಲಿ ಉತ್ತರ ದೊರೆಯಿತು (ಅದರತ್ತ ನನ್ನ ಗಮನ ಸೆಳೆದವರು ಡಾ. ಗೋಪಾಲರಾಯರೇ). ಬ್ರಿಟಿಶರು ನಾಡನ್ನು ಹರಿದು ಹಂಚಿ-ಹಾಕಿದರು ಎನ್ನುವುದನ್ನು ನಾವು ಸಾಮಾನ್ಯವಾಗಿ ಹೇಳುವುದುಂಟು. ಆದರೆ ಅದು ಅರ್ಧ ಸತ್ಯಮಾತ್ರ. ಕಳೆದ ಎಂಟುನೂರು ವರ್ಷಗಳಿಂದ ಈ ಸಾಂಸ್ಕೃತಿಕ ಬಿರುಕು ಆಗುತ್ತಲೇ ಇದ್ದಿತೆಂಬುದನ್ನು ನೋಡಿದ್ದೇವೆ.

ಏಕೀಕರಣ ಆದ ಮೇಲೂ ಅದು ಅಳಿಸದೇ ಹೋದುದರ ಇನ್ನೊಂದು ಕಾರಣ ನಮ್ಮ ರಾಜಧಾನಿಯು ನಾಡಿನ ತೀರ ದಕ್ಷಿಣದ ಒಂದು ತುದಿಯಲ್ಲಿದ್ದುದು. ಅದೇ, ಏಕೀಕೃತ ಕರ್ನಾಟಕದ ರಾಜಧಾನಿಯು ಭೌಗೋಲಿಕ ಮಧ್ಯದ ದಾವಣಗೇರಿಯಲ್ಲಾಗಲೀ, ಹುಬ್ಬಳ್ಳಿ-ಧಾರವಾಡದ ಮಧ್ಯದಲ್ಲಿಯಾಗಲೀ ಇದ್ದಿದ್ದರೆ ಕನ್ನಡಿಗರ ಸಾಂಸ್ಕೃತಿಕ ಹಾಗೂ ಭಾವನಾತ್ಮಕ ಏಕೀಕರಣವು ಇಪ್ಪತ್ತನೆಯ ಶತಮಾನಾಂತ್ಯದಲ್ಲಿಯೇ ಕೈಗೂಡುತ್ತಿತ್ತು. ಇದು ನನ್ನ ಪ್ರಾಮಾಣಿಕ ಹಾಗೂ ಸ್ಪಷ್ಟವಾದ ಅನಿಸಿಕೆ.

ಡಾ॥ ಎಸ್. ಕೆ. ಜೋಶಿ *

# ಭಾರತದ ಆರ್ಯರು: ಬೃಹತ್ ಆರ್ಯ ಸಾಂಸ್ಕೃತಿಕ ಸಾಮ್ರಾಜ್ಯದ ಅವಿಭಾಜ್ಯ ಅಂಗ

ಮಾನವನ ಇತಿಹಾಸ ಶೋಧನೆಯಲ್ಲಿ, ಆತನ ಬುದ್ಧಿಯೂ ಕೂಡ ಒಮ್ಮೊಮ್ಮೆ ದಾರಿ ಕಾಣದೆ ಮಂತ್ರಮುಗ್ಧವಾಗುತ್ತದೆ. ಆರ್ಯರು ಚಲಿಸಿದ ದಾರಿ, ಅವರ ಚೇತನಾಮಯ ಸಾಹಿತ್ಯ-ವೇದಗಳು-ಅವರ ಕಾಲ ಮುಂತಾದವುಗಳ ಬಗ್ಗೆ ಶೋಧನೆಯ ದಾರಿಯು, ಇನ್ನೂ ಸ್ಪಷ್ಟವಾಗದೆಯೇ ಮಸುಮಸುಕಾಗಿ ಕಾಣುತ್ತಿದೆ. ವಿದ್ವತ್ ಜನರ 'ಶೋಧನ' ಯಾತ್ರೆಯು, ಮುಂದುವರಿದೇ ಇದೆ. ಜರ್ಮನ್ ಫಿಲಾಸಫರ್ ಮ್ಯಾಕ್ಸಮ್ಯುಲರ್ ತಮ್ಮ ಗ್ರಿಫೋರ್ಡ್ ಲೆಕ್ಚರ್‌ಗಳಲ್ಲಿ (೧೮೮೯) ನುಡಿದ ಮಾತು ಇನ್ನೂ ಸತ್ಯವಾಗಿದೆ.

> *'We can not hope to fix*
> *a terminus, whether the vedic*
> *hymns were composed in 1000,*
> *or 2000 or 3000 years B.C; no*
> *power on earth will ever determine'*

ವೈದಿಕ ಆರ್ಯರ ತಂಡವು, ಮನು, ವೇದವ್ಯಾಸ, ಪೈಲ, ವೈಶಂಪಾಯಣ, ಜೈಮಿನಿ, ಯಾಸ್ಕ, ಸಮಂತು, ಅತ್ರಿ, ಭಾರದ್ವಾಜ, ವಶಿಷ್ಠ, ವಿಶ್ವಾಮಿತ್ರ, ಕಶ್ಯಪ, ಗೌತಮ, ಭೃಗು, ಅಂಗೀರಸ, ಅಜಗರ್ತ, ವಾಮದೇವ, ಮೇಧಾತಿಥಿ, ಶಕ್ತಿಪ್ರಗಾಧ, ಪತಂಜಲಿ, ಕೌಟಿಲ್ಯ, ಕುಮಾರಿಲಭಟ್ಟ, ಆದಿಶಂಕರ, ರಾಮಾನುಜ, ಮಧ್ವ, ಸಾಯಣ, ಮಾಧವರ ವರೆಗೆ, ಬೌದ್ಧಿಕ ಚಾಲನೆಯಲ್ಲಿ, ವಿಶ್ವಚೇತನವ ಹುಡುಕುವಿಕೆಯಲ್ಲಿ ಧೀಮಂತವಾಗಿ ಒಟ್ಟಾಗಿ ಚಲಿಸಿದೆ, ಪ್ರಯೋಗಿಸಿದೆ, ಸಂಗಮಿಸಿದೆ. ಈ ಜ್ಞಾನದಾಹದ ಚಾಲನೆಯಲ್ಲಿ; ಪುರುಷ ಋಷಿಗಳಿಗೆ ಸಮಾಂತರವಾಗಿ, 'ಋಷಿಕಾ' ಎಂದು ಕರೆಯಿಸಿಕೊಂಡು, ಮಂತ್ರದ್ರಷ್ಟಾರರೂ ವೇದ ಪಾರಂಗತರೂ ಆದ ಶ್ರೇಷ್ಠ ಮಹಿಳೆಯರಾದ ಸಾವಿತ್ರಿ, ಅಪಾಲಾ, ಲೋಪಮುದ್ರಾ, ಸಾರ್ವರಾಜ್ಞಿ ಮುಂತಾದವರು ನಡೆದ ದಾರಿಯೂ ಸಂಸ್ಮರಣೀಯ.

ಜ್ಞಾನದ ಖಣಿಗಳಾದ ವೇದಗಳು ಜಗತ್ತಿನಲ್ಲಿಯೇ ಆರ್ಯಕೃತ 'ಅತ್ಯಂತ ಪ್ರಾಚೀನ ಸಂಸ್ಕೃತ ಸಾಹಿತ್ಯ'. ಅರಿವಿನ ಅರಸುವಿಕೆಯಲ್ಲಿ, ಚೇತನದ ಚೈತ್ರಕ್ಕಾಗಿ, ವಿಶ್ವಸದ್ದರ್ಶನಕ್ಕಾಗಿ ಸಾಕ್ಷಾತ್ಕಾರದ ಸಿದ್ಧಿಗಾಗಿ, ಈ ಸಾಹಿತ್ಯವನ್ನು ತಲೆಯ ಮೇಲೆ ಹೊತ್ತುಕೊಂಡು, ಅಲೆದಾಡಿದ ಅರಸಿಗರು ಆರ್ಯರು. ಅವರ ಜ್ಞಾನದಾಹದ ಆತ್ಮಾನುಸಂಧಾನದ ಮಾರುತವು ಭಾವಾವೇಶದ ಆವರ್ತಗಾಳಿಯಾಗಿ ಸುಳಿಗೊಂಡು ತದನಂತರ ಆರ್ಯಾವರ್ತ 'ಪ್ರದೇಶದಲ್ಲಿ ಪ್ರಶಾಂತವಾಗಿ, ಗಂಭೀರ ಸಾಗರದಂತೆ ವೇದಗಳ ರೂಪದಲ್ಲಿ ಹರಡಿದೆ.

ದಕ್ಷಿಣ-ಪೂರ್ವ ಯುರೋಪಿನಿಂದ, ದನ್ಯೂಬ್ ತಪ್ಪಲಲ್ಲಿ, ಪಶ್ಚಿಮ ಏಶಿಯಾದಿಂದ ಟೈಗ್ರಿಸ್ ಹಾಗೂ ಯುಫ್ರೆಟಿಸ್‌ಗಳ ಅಂಚುಗಳಲ್ಲಿ, ಮಧ್ಯಏಶಿಯಾದಿಂದ ಆಕ್ಸಸ್‌ನ ದಂಡೆಗಳಲ್ಲಿ, ದಕ್ಷಿಣ ಏಶಿಯಾದಿಂದ ಇಂದಸ್ ಹಾಗೂ ಗ್ಯಾಂಜೆಟಿಕ್‌ಗಳ ಮೈದೊಳೆವ ನಾಡಲ್ಲಿ, ಈ ವಿಶಾಲ ಪ್ರದೇಶದಲ್ಲಿ ಮೂರುವರೆ ಸಾವಿರ ಮೈಲು ಪೂರ್ವ-ಪಶ್ಚಿಮವಾಗಿ, ಒಂದು ಸಾವಿರ ಮೈಲು ದಕ್ಷಿಣೋತ್ತರವಾಗಿ ಹರಡಿದ ನಾಡು ಆರ್ಯದರ್ಶನದ ಬೀಡು. ಅಂದರೆ, ಏಶಿಯಾಮೈನರ್, ನಾರ್ಥ್‌ವೆಸ್ಟರ್ನ್ ಬೆಬಿಲೋನ್, ಯುರೇಶಿಯಾ, ಹಿಟೈಟ್, ಪರ್ಶಿಯಾ, ಟರ್ಕಿ, ಇರಾಣ, ಇರಾಕ್, ಅಫಘಾನಿಸ್ತಾನ್, ಪಾಕಿಸ್ತಾನ್‌ಗಳನ್ನೊಳಗೊಂಡು ಇಂಡಿಯಾದ ಗಂಗಾನದಿ ತಪ್ಪಲು ಪ್ರದೇಶದವರೆಗೂ ಆರ್ಯ ಸಂಸ್ಕೃತಿಯ ಭೂ ಪ್ರದೇಶವಾಗಿತ್ತು.

ಈ ವಿಸ್ತೃತ ಪ್ರದೇಶವು ಆರ್ಯರ ಕಾರ್ಯಕ್ಷೇತ್ರವಾಗಿದ್ದು, ಅವರ, ದೇಹದಾಕಾರ, ಆಚಾರ, ವಿಚಾರ, ರೀತಿ-ನೀತಿ, ಧರ್ಮ-ಪೂಜೆ, ದೇವಕಲ್ಪನೆ, ಸಾಮಾಜಿಕ ಪದ್ಧತಿ, ಭಾಷೆಗಳೆಲ್ಲ ಸಾಮಾನ್ಯವಾಗಿ ಒಂದೇ ಆಗಿದ್ದುವು.

ಇವೆಲ್ಲ ನಡವಳಿಕೆಗಳು, ಈ ಮೇಲಣ ವಿಶಾಲ 'ಆರ್ಯದರ್ಶನ'ದ ಪ್ರದೇಶದಲ್ಲಿ ಅನುಭಾವದ ತಾಣಕ್ಕೆ ಅನುವಾದ ಇಂಡಿಯಾದ 'ಆರ್ಯಾವರ್ತ' ವೆಂದು ಹೆಸರಿಸಿಕೊಂಡ ಪ್ರದೇಶದಲ್ಲಿ ಕೇಂದ್ರೀಕೃತವಾಗಿ, ಹೊಸರೂಪ ಪಡೆದು ಈ ಮೂಲಕೇಂದ್ರದಿಂದ ಪ್ರತ್ಯಾವರ್ತಗೊಂಡವು. ಆರ್ಯಾವರ್ತವೆಂದು

* ಆರ್ಕಿಯಾಲಜಿಸ್ಟ್, ನಂ - ೬೦, 'ಶ್ರೀ ಕೃಪಾ', ಸಿಲ್ವರ್ ಆರ್ಚರ್ಡ್, ಕೆಲಗೇರಿ ರೋಡ್, ಧಾರವಾಡ - ೫೮೦ ೦೦೮

ಅಭಿದಾನ ಹೊತ್ತ 'ಕೇಂದ್ರ ಪ್ರದೇಶ'ವಾದ ಇಂಡಿಯಾದಿಂದ-ಸಿಂಧು ಗಂಗೆಯರ ತಟಾಕಗಳಿಂದ-ಪಶ್ಚಿಮದ ಸೀಮಾಂತ 'ದೆನ್ಯೂಬ್' ನದಿಯ ಕೊಳ್ಳದವರೆಗೆ ಆರ್ಯರ ಜ್ಞಾನ ಪ್ರಕಾಶ ಹರಡಿತ್ತು. ಇಂಡಿಯಾ ಆರ್ಯರ ಕೇಂದ್ರ ಬಿಂದು. ಇಲ್ಲಿಂದ ಆರ್ಯ ಜೀವನ-ಚಿಂತನೆಗಳ ಚಟುವಟಿಕೆಗಳು ಪಸರಿಸಿದವು. ತಾತ್ಪರ್ಯ ಆರ್ಯರು ಮೂಲತಃ ಸಿಂಧು-ಸರಸ್ವತಿ-ಗಂಗೆಯರ ತೀರದ ನಾಗರೀಕರು.

*From the Denube to the Indus, was the spread of the 'Aryan cultural empire' and the Indus belt was the epicentre of Aryanisation in all spheres.*

ಇನ್ನು, 'ಆರ್ಯ' ಎಂಬುದರ ಶಬ್ದಾರ್ಥವು 'ಸುಸಂಸ್ಕೃತ', 'ಶ್ರೇಷ್ಠ', 'ಆದರಣೀಯ' ಎಂದಾಗುತ್ತದೆ. ಇದು ಕೇವಲ ಜನಾಂಗವಾಚಕವಾಗಿರದೆ, ಗುಣವಾಚಕವೂ ಆಗಿದೆ. ಆರ್ಯರ ಸಾಂಸ್ಕೃತಿಕ ಸಾಮ್ರಾಜ್ಯದಲ್ಲಿ ನಡೆಯುತ್ತಲಿದ್ದ ಭಾಷೆ 'ಆರ್ಯ ಭಾಷೆ' ಎಂದು ಕರೆಯುವಾ. ಈ ಆರ್ಯಭಾಷೆಯ ಮುಂದುವರಿದ ಕುಡಿಗಳೆಂದರೆ ಝೆಂಡ್, ಗ್ರೀಕ್, ಲ್ಯಾಟಿನ್ ಹಾಗೂ ಸಂಸ್ಕೃತ. ಈ ಚತುರಶ್ರ ನುಡಿಗಳಲ್ಲಿ, ಆರ್ಯರ ಸಾಹಿತ್ಯ ಬೆಳೆದು, 'ಇಂಡೊ-ಯುರೋಪಿಯನ್' ಕುಲುಮೆಯಲ್ಲಿ, ಸಮಾನ ನುಡಿ, ಸಮಾನ ಶಬ್ದ, ಸಮಾನ ಅರ್ಥ, ಸಮಾನಭಾವಗಳನ್ನು ತಳೆದು, ಸಮಾನವಾಗಿ ಹೊಳೆವ ಬಂಗಾರವಾಯಿತು. ಮದರ್-ಮಾತೃ -, ಪಿತರ್-ಫಾದರ್, ಬ್ರದರ್-ಭ್ರಾತೃ, ಸರ್=ಶ್ರೀ, ಸಪ್ತ ಅಂಬರ=Sept, ಅಷ್ಟ ಅಂಬರ=Oct, ನವ ಅಂಬರ=Nov ದಶ್ ಅಂಬರ=Dec. ರಾತ್ರಿ=ರಾತ್ರಿ ಮುಂತಾಗಿ ಸಮಾನ ಅರ್ಥ ಹಾಗೂ ಸಮಾನ ಉಚ್ಚಾರಣೆಯ ಸಾವಿರಾರು ಶಬ್ದಗಳ ಸರಮಾಲೆ ಇಡೀ ಆರ್ಯ ಸಾಂಸ್ಕೃತಿಕ ಸಾಮ್ರಾಜ್ಯದಲ್ಲಿ ಹರಡಿ, ಸಾಂಸ್ಕೃತಿಕ, ಏಕತೆಯನ್ನು ದೃಢೀಕರಿಸುತ್ತವೆ, ಭಾಷೆಯ ಸಮನ್ವಯತೆ ಯನ್ನು ಸೂಚಿಸುತ್ತದೆ.

ಆರ್ಯರ ಕಾಲ: ಲೋಕಮಾನ್ಯ ತಿಳಕರ ಕೃತಿಗಳಾದ ದಿ ಆರ್ಕ್ಟಿಕ್ ಹೋಮ್ ಆಫ್ ವೇದಾಜ್', 'ದಿ ವೇದಿಕ್ ಕ್ರನಾಲಜ' (ಹಿಮಸಮುದ್ರವಾಸ, ಮೃಗಶಿರ ನಕ್ಷತ್ರ, ವೈದಿಕ ಕಾಲಗಣನೆ) ಮುಂತಾದವು ವೇದಗಳ ಇತಿಹಾಸವನ್ನು, ಕ್ರಿ. ಪೂ. ೬೦೦೦ ವರುಷಗಳ ಹಿಂದಕ್ಕೆ ತಳ್ಳುತ್ತವೆ. ಅಲ್ಲದೆ ಉತ್ತರಧ್ರುವ ಪ್ರದೇಶ



ಆರ್ಯರ ಸಾಂಸ್ಕೃತಿಕ ಸಾಮ್ರಾಜ್ಯ (Aryan cultural Empire)

: ಡೆನ್ಯೂಬ್
: ಯುಫ್ರಟೀಸ್
: ಟೈಗ್ರೀಸ್
: ಆಕ್ಸಸ್
: ಇಂಡಸ್

ನದೀ ಕೊಳ್ಳಗಳು

'ಆರ್ಯ ನೆಲೆ'ಯಾಗಿತ್ತೆಂದು ಸಮರ್ಥಿಸಿವೆ. ಶ್ರೀ ಅರವಿಂದರ ಆಧ್ಯಾತ್ಮಿಕ ಹಿನ್ನೆಲೆಯ ಆರ್ಯ ಪತ್ರಿಕೆ ಹಾಗೂ ಹಿಮ್ಸ್ ಟು ದಿ ಮಿಸ್ಟಿಕ್ ಫಾಯರ (ಅಗ್ನಿಮಿತ್ರ)ಗಳು ಆರ್ಯರ ಆಧ್ಯಾತ್ಮಿಕ ಹಾಗೂ ದೈವಚಿಂತನದ ಗುರುತುಗಳನ್ನು ತೋರಿಸಿವೆ. ಅವಿನಾಶ ಚಂದ್ರದಾಸ್‌ರ ಋಗ್ವೇದಿಕ್ ಇಂಡಿಯಾ ಆರ್ಯರು ಭಾರತಕ್ಕೆ ಬರಲಿಲ್ಲವೆಂದು ಮಂಡಿಸಿ, ಅವರ ಕಾಲವನ್ನು ಕ್ರಿ.ಪೂ. ೩೦೦೦ ವರುಷಗಳಲ್ಲಿ ಜೋಡಿಸುತ್ತದೆ. ಶ್ರೀ ಸಿ.ವಿ. ವೈದ್ಯರ ವೈದಿಕ ಸಾಹಿತ್ಯ ಚರಿತ್ರೆ, ಪ್ರೊ. ಆರ್.ಎಸ್. ದಾಂಡೇಕರ ಅವರ ವೈದಿಕ ಧರ್ಮ ಮತ್ತು ಪುರಾಣ ಸಾಹಿತ್ಯ ಹಾಗೂ ಶ್ರೀ ಸಿ. ತುನ್ನನ್‌ರವರ ಋಗ್ವೇದದ ಋಷಿಗಳು ಹಾಗೂ ಋಗ್ವೇದ ಸಾರ, ಪ್ರೊ॥ ಪಿ. ವ್ಹಿ. ಕಾಣೆಯವರ ಧರ್ಮಶಾಸ್ತ್ರದ ಇತಿಹಾಸ ಇವೆಲ್ಲ ಋಗ್ವೇದದ ಸಮಯವನ್ನು ಕ್ರಿ ಪೂ. ೩೦೦೦ ವರುಷಗಳವರೆಗೆ ತಳ್ಳುತ್ತವೆ. ಬುದ್ಧಪ್ರಕಾಶರ ಋಗ್ವೇದ ಮತ್ತು ಸಿಂಧು ಕೊಳ್ಳದ ನಾಗರಿಕತೆ ಭಾರತೀಯ ವಿದ್ಯಾಭವನದ ಪ್ರಕಟಣೆ ವೈದಿಕ ಯುಗ, ಶ್ರೀ ಎಸ್. ಎಸ್. ಅನಂತ ರಂಗಾಚಾರ್ಯರ ವೈದಿಕ ಸಾಹಿತ್ಯ ಚರಿತ್ರೆ, ಡಾ॥ ವಿ.ಕೆ. ಗೋಕಾಕ್‌ರ ಭಾರತ ಸಿಂಧು ರಶ್ಮಿ ಪ್ರೊ. ಕೆ.ಎಸ್. ನಾರಾಯಣಾಚಾರ್ಯರ ವೇದ ಸಂಸ್ಕೃತಿ ಪರಿಚಯ, ಪ್ರೊ॥ ಬಿ. ಆರ್. ಮೋಡಕ್ ರವರ ಅಥರ್ವವೇದ, ಡಾ॥ ಎಸ್.ಆರ್. ರಾವ್ ಅವರ ಸಮ್ ಪ್ರಾಬ್ಲೆಮ್ಸ ಆಫ್ ಪ್ರೋಟೊ ಹಿಸ್ಟಾರಿಕ್ ಪಿರಿಯಡ್, ಮುಂತಾದವು ಆರ್ಯರ ಸಮಯವನ್ನು ಕ್ರಿ.ಪೂ. ೩೦೦೦-೧೫೦೦ ವರುಷಗಳ ಕಾಲದವರೆಗೆ ಕೊಂಡೊಯ್ಯುತ್ತವೆ. ಮೇಲೆ ವಿವರಿಸಿದ ಆರ್ಯರ ಸಾಂಸ್ಕೃತಿಕ ಸಾಮ್ರಾಜ್ಯ ಹಾಗೂ ಸಿಂಧುನಾಗರಿಕತೆಗಳು ಸಮಕಾಲೀನವಾಗಿ ಬೆಳೆದಿದ್ದು, (ಕ್ರಿ.ಪೂ. ೩೦೦೦-೧೫೦೦), ಸಿಂಧುನಾಗರಿಕತೆಯು ಆರ್ಯ ಆಕ್ರಮಣದಿಂದ ನಾಶವಾಗದೆ, ಮಹಾಪೂರಗಳಂಥ ಪ್ರಾಕೃತಿಕ ಆಘಾತಗಳೇ ಕಾರಣ ಎಂದು ಸಮರ್ಥಿಸುತ್ತವೆ.

ವಾಸ್ತುಕಲೆ, ನಂಬುಗೆ, ಆಚರಣೆಗಳಲ್ಲಿ, ಎದುರು ವೈರುಧ್ಯದ ಅಲೆಗಳಲ್ಲಿ ತೇಲಿದರೂ, ಇಂದಸ್ ನಾಗರಿಕ ಹಾಗೂ ವೇದಿಕ್ ಪಂಡಿತ ಈರ್ವರೂ ಸಮಕಾಲೀನರಾಗಿ, ಒಂದೇ ವೇದಿಕೆಯಲ್ಲಿ, ಸಮಾಂತರವಾಗಿ (ಕ್ರಿ.ಪೂ. ೩೦೦೦-೧೫೦೦) ಬಾಳಿದರು. ಆದರೆ, ಕ್ರಿ.ಪೂ. ೧೫೦೦ ರ ನಂತರದಲ್ಲಿ ಇಂದಸ್ ನಾಗರಿಕತೆ ನಾಶವಾಗಿ, ವೇದ ಸಂಸ್ಕೃತಿ ಹಾಗೂ ವೇದ ಜನಸಾಗರಗಳು ಉದಾತ್ತವಾಗಿ ವೃದ್ಧಿಗೊಳ್ಳುತ್ತ, ಕ್ರಿ. ಶ. ಪೂರ್ವ ೫೦೦ ಬುದ್ಧಕಾಲೀನವರೆಗೂ ಹರಿದು ಬಂದವು..

ಅದಾಗಿ, 'ಋಗ್ವೇದ' ಹಾಗೂ 'ಝೆಂಡಾ ಅವೆಸ್ತಾ'ಗಳಂಥ ಆರ್ಯ ಸಂಪ್ರದಾಯದ ಸಾಹಿತ್ಯಿಕ, ಚೈತನ್ಯದ ಕೊಡುಗೆಗಳೊಂದಿಗೆ, ವಿಸ್ತೃತವಾದ ಸಾವಿರಾರು ಮೈಲುಗಳ ಕ್ಷೇತ್ರದಲ್ಲಿ, ದೆನ್ಯೂಬ್‌ದಿಂದ ಇಂದಸ್‌ವರೆಗೆ ಹಬ್ಬಿದ ಆರ್ಯ ಸಾಂಸ್ಕೃತಿಕ ಸಾಮ್ರಾಜ್ಯದಲ್ಲಿ, ಕೆಲವು ವೈಭವೋಪೇತವಾದ ಚೇತನದ-ನಂಬುಗೆಯ ಹಸಿರ್ಗಾವಲುಗಳು ಬೆಳೆದು ಬಂದವು. ಅಂಥ ಸಾಂಸ್ಕೃತಿಕ 'ಓಯಾಸಿಸ್'ಗಳಲ್ಲಿ ಇಂದಸ್ ಹಾಗೂ ಗ್ಯಾಂಜೆಸ್‌ಗಳ ತಪ್ಪಲು ಪ್ರದೇಶಗಳು ಮಹಾನ್ ಸಾಂಸ್ಕೃತಿಕ ಸಾಧನೆ ನೀಡಿವೆ. ಜಗತ್ತಿನ ಅತ್ಯಂತ ಪ್ರಾಚೀನ ಸಾಹಿತ್ಯವೆಂದರೆ ವೇದಗಳು. ಇಡಿಯಾದ ಆರ್ಯ ಸಾಂಸ್ಕೃತಿಕ ಸಾಮ್ರಾಜ್ಯದಲ್ಲಿ, ಇಂದಸ್-ಗ್ಯಾಂಜೆಸ್‌ಗಳಂಥ ತಪೋವನಗಳು ಜ್ಞಾನವನಗಳಾಗಿ ಈ ವೇದ ಸಂಪದವನ್ನು ನೀಡಿವೆ. ಅದಾಗಿ, ಇಂಡಿಯದ ಆರ್ಯ ಸಾಂಸ್ಕೃತಿಕ ಸಾಮ್ರಾಜ್ಯದ ಒಂದು ಅವಿಭಾಜ್ಯ ಅಂಗ ಇಂಡಿಯದ ಆರ್ಯರು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. Max Muller: **Vedic index and Collected Works**, Vol X

೨. Dr. Das A.C. : **Rigvedic India**, Vol I

೩. Dr. Dutt N.K. : **The Aryanisations of India**

೪. Dr. Prakash Buddha : **Rg. Veda and Indus Valley Civilization**

೫. Nehru Jawaharlal : **Discovery of India- Glimpses of world History**

೬. Sri Aurobindo : **Foundations of Indian Culture**

೭. ಡಾ॥ ಪಂಚಮುಖಿ ಆರ್.ಎಸ್(ಸಂ.), ಹಾಗೂ ಶ್ರೀ ಚಿದಂಬರಾನಂದ (ಲೇ): **ಋಗ್ವೇದ ರಹಸ್ಯ**

೮. ಡಾ॥ ಶ್ರೀಕಂಠಶಾಸ್ತ್ರಿ, ಎಸ್: **ಭಾರತೀಯ ಸಂಸ್ಕೃತಿ**

೯. ಪ್ರೊ॥ ನಾರಾಯಣಾಚಾರ್ಯ, ಕೆ.ಎಸ್: **ವೇದ ಸಂಸ್ಕೃತಿ ಪರಿಚಯ**

೧೦. ವಿವಿಧ ವಿದ್ವಾಂಸರೊಂದಿಗೆ, ಈ ಲೇಖಕನ ಚರ್ಚೆ ಹಾಗೂ ವೇದ ಕಾಲೀನ ಸರಸ್ವತಿ ತೀರ 'ಭಗವಾನ್ ಪುರ'ದ (ಹರಿಯಾನಾ), ಉತ್ಖನನದಲ್ಲಿ ಭಾಗವಹಿಸಿದ ಅನುಭವ, ಕಾಲೀಬಂಗನ್ - ಲೋಥಲ್ ಹಾಗೂ ಸುರಕೊಟಡಾ ಮುಂತಾದ ಇಂದಸ್ ನಾಗರಿಕ ತಾಣಗಳ ಉತ್ಖನನದಲ್ಲಿಯೂ, ಭಾಗವಹಿಸಿದ ಅನುಭವ ಕೂಡ ಇಲ್ಲಿ ನೆರವಾಗಿದೆ.

೧೧. ಡಾ॥ ಗೋಕಾಕ್, ವಿ,ಕೆ: **ಭಾರತ ಸಿಂಧು ರಶ್ಮಿ**

ಡಾ|| ಕೋ. ವಸಂತಲಕ್ಷ್ಮಿ *

# ಹಾಸನ ಜಿಲ್ಲೆಯಲ್ಲಿದ್ದ ಕಾಶ್ಮೀರಿ ಬ್ರಾಹ್ಮಣರು!

ಉತ್ತರಭಾರತ ಮತ್ತು ದಕ್ಷಿಣ ಭಾರತಗಳ ನಡುವೆ ಪ್ರಾಚೀನ ಕಾಲದಿಂದಲೂ ಸಂಪರ್ಕ ವ್ಯವಸ್ಥೆ ಇದ್ದಿತ್ತು. ಅಶೋಕನ ಕಾಲದಲ್ಲಿ ಅವನ ಧರ್ಮಾಧಿಕಾರಿಗಳು ಎಲ್ಲೆಡೆ ಸಂಚರಿಸಿ 'ಧರ್ಮಲಿಪಿ'ಗಳನ್ನು ಸ್ಥಾಪಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ನಂತರದ ಕಾಲದಲ್ಲಿಯೂ ವ್ಯಾಪಾರ ವ್ಯವಹಾರಗಳು ನಡೆದಿದ್ದವೆನ್ನಲು ಅಲ್ಲಲ್ಲಿ ದೊರೆತಿರುವ ನಾಣ್ಯಗಳು ಸಾಕ್ಷಿಯಾಗಿವೆ. ಶಂಕರ ವಿಜಯ ಗ್ರಂಥವು - ''ಆದಿ ಶಂಕರಾಚಾರ್ಯರು ಕಾಶ್ಮೀರದ ಶಾರದಾದೇವಾಲಯಕ್ಕೆ ಹೋಗಿ ಅಲ್ಲಿದ್ದ ಘನಪಾಠಿಗಳನ್ನು ವಿವಾದದಲ್ಲಿ ಸೋಲಿಸಿ, 'ಸರ್ವಜ್ಞ ಪೀಠ'ವನ್ನೇರಿದರೆಂದು ತಿಳಿಸುತ್ತದೆ. ಶಂಕರಾಚಾರ್ಯರು ಮತ್ತೆ ಕರ್ನಾಟಕಕ್ಕೆ ಹಿಂತಿರುಗುವಾಗ ಅವರೊಂದಿಗೆ ಅನೇಕ ಜನ ಶಿಷ್ಯರು, ಕಾಶ್ಮೀರದ ವಿದ್ವಾಂಸರು ಬಂದು ನೆಲೆಸಿದರೆಂದು ತಿಳಿದುಬರುತ್ತದೆ. ಈ ಘಟನೆಯು ಉತ್ತರ ಮತ್ತು ದಕ್ಷಿಣಭಾರತಗಳ ಸಂಪರ್ಕ ಮಾಧ್ಯಮವನ್ನು ಹೆಚ್ಚು ನಿಕಟಗೊಳಿಸಿತು. ಹೀಗೆ ಕಾಶ್ಮೀರದಿಂದ ಬಂದು ನೆಲೆಸಿದ್ದ ಜನರು ಸರಸ್ವತೀ ಆರಾಧಕರೂ, ಶಾರದಾ ವರಲಬ್ಧ ಪ್ರಾಸಾದರೂ ಆಗಿದ್ದರು. ಇವರ ಹೆಸರುಗಳೂ, ಕಾರ್ಯಕ್ಷಮತೆಯು, ವಿಶಿಷ್ಟವಾಗಿತ್ತು. ಇವರನ್ನು 'ಸಹವಾಸಿ'ಗಳೂ, '**ಸಾವಸಿಗ ಕುಲದವ**'ರೆಂದೂ ಕರೆಯಲಾಗಿದೆ.

ಕಪಟರಾಳ ಕೃಷ್ಣರಾಯರು **ಸಹವಾಸಿವಂಶದ** ಬಗೆಗೆ*೧ ತಿಳಿಸುತ್ತಾ- ''ಸೌಂದತ್ತಿಯ ಶಾಸನವನ್ನು ರಚಿಸಿರುವ ಶಾಸನಕವಿ ಮಾದಿರಾಜನು ಸಾಮಾಸಿಗ ಕುಲದ ಅತ್ರಿಗೋತ್ರದ ಬ್ರಾಹ್ಮಣನು. ಇವನು ತನ್ನ ವಂಶಖ್ಯಾತಿಯನ್ನು ತಿಳಿಸುತ್ತಾ, ಈ ವಂಶದ ಮೂಲಪುರುಷನು ರುದ್ರಭಟ್ಟ, ಕವೀಂದ್ರನು. ಇವನು ತನ್ನ ಕವಿತೆಯಿಂದ ಕನ್ನರದೇವನನ್ನು (ಕ್ರಿ. ಶ. ೯೪೫-೯೫೬) ಮೆಚ್ಚಿಸಿ ಹದಿನೆಂಟು ಗ್ರಾಮಗಳನ್ನು ಬಹುಮಾನವಾಗಿ ಪಡೆದಿದ್ದನು, ಎಂದು ಶಾಸನದಲ್ಲಿ ತಿಳಿಸಿದ್ದಾನೆ. ಇದರಿಂದ ಸುಮಾರು ಕನ್ನರದೇವನ ಕಾಲದಿಂದಲೂ **ಸಾವಾಸಿಗರು** ಕನ್ನಡ ನಾಡಿನಲ್ಲಿ ನೆಲೆಸಿದ್ದರೆಂದು ತಿಳಿದುಬರುತ್ತದೆ. 'ಸಹವಾಸಿ' ಎಂಬುದು ಅವುದೋ ಒಂದು ತಂತ್ರವು. ಆ ತಂತ್ರಾನುಸಾರ ನಡವಳಿಕೆ ಉಳ್ಳವರು 'ಸಹವಾಸಿ ಬ್ರಾಹ್ಮಣರು'. ಇವರು ಮೂಲ ಕಾಶ್ಮೀರ ದೇಶದವರು. ಹತ್ತನೇ ಶತಮಾನಕ್ಕಿಂತ ಹಿಂದೆಯೇ ಕರ್ನಾಟಕದಲ್ಲಿ ನೆಲೆಸಿದ್ದರೆ''ಂದು ಹೇಳಿದ್ದಾರೆ.

ಕಾಶ್ಮೀರ ಸಂತತಿಯ ಒಂದು ಪಂಗಡದ ಕಾಳಾಮುಖ ಮುನಿಗಳು ಬಳ್ಳಾರಿ ಜಿಲ್ಲೆ, ಬಿಜಾಪುರ ಜಿಲ್ಲೆಗಳಲ್ಲಿದ್ದ ಬಗೆಗೆ ಕೆಲವು ಉಲ್ಲೇಖಗಳು ದೊರೆತಿವೆ. ತುಂಗಭದ್ರಾತೀರ ಪ್ರದೇಶದ ಹಲವು ಶಾಸನಗಳು ಕಾಶ್ಮೀರದಿಂದ ಬಂದ ಸಹವಾಸಿ ಬ್ರಾಹ್ಮಣರ ಬಗೆಗೆ ತಿಳಿಸುತ್ತಿವೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ, ವಿದ್ವಾಂಸರೊಬ್ಬರು ಕಲ್ಹಣನ ರಾಜತರಂಗಿಣಿಯ ಬಗೆಗೆ ಬರೆಯುತ್ತಾ - ''ಸು. ೧೧-೧೨ನೇ ಶತಮಾನದಲ್ಲಿ ಕಾಶ್ಮೀರದಲ್ಲಿದ್ದ ಬ್ರಾಹ್ಮಣರು ಮಂತ್ರವಾದಿಗಳೂ, ಯಂತ್ರ ಪ್ರಸಿದ್ಧರೂ ಆಗಿದ್ದರು. ಅಲ್ಲಿನ ಜನರಿಗೆ ಬ್ರಾಹ್ಮಣರನ್ನು ಕಂಡರೆ ಗೌರವವಿರದೇ ಭಯವಿರುತ್ತಿತ್ತು. ಇವರು ೧೧-೧೨ನೇ ಶ.ಗಳಲ್ಲಿ ದಕ್ಷಿಣದ ಕಡೆಗೆ ವಲಸೆ ಹೋದರೆ''ಂದು ತಿಳಿಸಿದ್ದಾರೆ. *೨ ಕಲ್ಯಾಣದ ಚಾಲುಕ್ಯರ ದೊರೆ ವಿಕ್ರಮಾದಿತ್ಯನ ಆಸ್ಥಾನ ಕವಿ ಬಿಲ್ಹಣನು ಕಾಶ್ಮೀರ ದೇಶದವನೆಂಬುದನ್ನಿಲ್ಲಿ ಸ್ಮರಿಸಬಹುದು. ಹೀಗೆ ೧೧-೧೨ನೇ ಶತಮಾನದಲ್ಲಿ ದಕ್ಷಿಣ ಭಾರತದ ಹಲವೆಡೆಗಳಲ್ಲಿ ಕಾಶ್ಮೀರ ಬ್ರಾಹ್ಮಣರು ನೆಲೆಸಿದ್ದು, ಈ ಪ್ರಬಂಧದಲ್ಲಿ ಹಾಸನ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿತರಾಗಿರುವ ಕಾಶ್ಮೀರಿ ಬ್ರಾಹ್ಮಣರ ಬಗೆಗೆ ಗಮನಿಸಲಾಗಿದೆ. ಹಾಸನ ಜಿಲ್ಲೆಯಲ್ಲಿ ಕೆಲವು ಗ್ರಾಮಗಳನ್ನು 'ಸರಸ್ವತೀಪುರ', 'ಸರ್ವಜ್ಞಪುರ'ಗಳೆಂದು ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆಯಲ್ಲಿ ದ್ದಿರಬಹುದಾದ ಕಾಶ್ಮೀರದ ಬ್ರಾಹ್ಮಣರ ಬಗೆಗೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ.

---

* ೧೬೪೩, ೧೭ನೇ ಮುಖ್ಯ ರಸ್ತೆ, ಬನಶಂಕರಿ ೧ನೇ ಹಂತ, ಬೆಂಗಳೂರು - ೫೬೦ ೦೫೦

ಹಾಸನ ತಾಲೂಕಿನ ಹೆರಗು ಗ್ರಾಮದ ಶಾಸನವು (ಎಕಲ. ಶಾ. ಸಂ. ೧೪೪) ಹೊಯ್ಸಳದೊರೆ ವೀರಬಲ್ಲಾಳದೇವನ ಅಧಿಕಾರಿ ಅವತಾರ ಭಟ್ಟಯ್ಯನಾಯಕನನ್ನು - ''ಶ್ರೀಮತು ಕಾಶ್ಮೀರ ರಾಷ್ಟ್ರದ ಲೋಲಾಯ ದೇಶದ ಮಹಾಗ್ರಹಾರ ದಾರುಶ ಗ್ರಾಮದ ಆತ್ರೇಯ ಗೋತ್ರದ ಭುವನಭಟ್ಟಯ್ಯನ ಮದುವಳ್ಗಿ ನೂಪಾವೈನಿಗಂ ತತ್ಪುತ್ರ ಗಯಾಧರ ಭಟ್ಟಯ್ಯಂಗಂ ಪಿಂಬಾರಾಣಿಗಂ ತತ್ಪುತ್ರ ಶ್ರೀಮತು ಸಾವಾಸಿ ತಂತ್ರಾಧಿಷ್ಠಾಯಕಂ ಮಹಾಪಸಾಯ್ತಂ ಪರಮ ವಿಶ್ವಾಸಿ ಮಾಯಿದೇವೀ ವಲ್ಲಭ ಅವತಾರ ಭಟ್ಟಯ್ಯ ನಾಯಕರು''- ಎಂದು ತಿಳಿಸಿದೆ. ಅವತಾರ ಭಟ್ಟಯ್ಯನು ಲಕ್ಷ್ಮೀನಾರಾಯಣ ದೇವಾಲಯವನ್ನು ನಿರ್ಮಿಸಿದಾಗ ರಾಜನು, ದೇವರ ಶ್ರೀಕಾರ್ಯಕ್ಕಾಗಿ ದಾನ ನೀಡುವಾಗಿನ ಈ ಶಾಸನದಲ್ಲಿ ಹೆರಗನ್ನು-''ದಕ್ಷಿಣಕಾಶ್ಮೀರ ಸರಸ್ವತೀಪುರವಾದ ಹೆರಗು'' ಎಂದಿದೆ. ಈ ಶಾಸನಾಂತ್ಯದಲ್ಲಿ ಶ್ರೀ ಶಾರದಾಯೈ ನಮಃ ಎಂದು, ಉಲ್ಲೇಖಿಸಲಾಗಿದೆ. *೨

ಹೆರಗಿನ ಮತ್ತೊಂದು ಶಾಸನವು (ಎಕಲ. ಶಾಸಂ. ೧೪೫) ಹೊಯ್ಸಳದೊರೆ ವೀರಬಲ್ಲಾಳದೇವನ ಅಧಿಕಾರಿಯಾಗಿದ್ದ ಜೈತುಭಟಯ್ಯನಾಯಕರನ್ವಯವನ್ನು ತಿಳಿಸುವಲ್ಲಿ - ''ಸ್ವಸ್ತಿ ಶ್ರೀ ಕಾಶ್ಮೀರ ರಾಷ್ಟ್ರಕ್ರಮ ರಾಜಗೂಲ ವಿಷಯ ಭವನಾಶ್ರಯ ಭದ್ರಾಹು ಗ್ರಾಮ । ಭಾರ್ಗವಗೋತ್ರ ಪಿತಾಮಹಂ ಭೂನಿದೇವ ವಲ್ಲಾದೇವೀ ಪಿತಾ ಜೋಯಲದೇವ ಮಾತಾ ಗಂಗಾದೇವೀ ಮಾತಾಮಹ ವಶಿಷ್ಠಗೋತ್ರ ರುದ್ರಘೋಶಂ ಶ್ವಶುರರು ಶ್ರೀ ಮತ್ಸಾವಾಸಿ ತಂತ್ರಾಧಿಷ್ಠಾಯಕ ವೃತಾನಸ ಗೋತ್ರ ಭೂಜಭಟಯ್ಯ ನಾಯಕ ಭಾವ ಶ್ರೀ ಮನ್ಮಾಹಪ್ರಧಾನಂ ಮಾಧವಯ್ಯ ದಣ್ಣಾಯಕರು ಶ್ವಶುರೇ ಶ್ರೀ ಅಬ್ಬವೆಯರು ಸ್ವಸ್ತಿ ಶ್ರೀಮತ್ಸಾವಾಸಿ ತಂತ್ರಾಧಿಷ್ಠಾಯಕಂ ಮಹಾಪಸಾಯ್ತಂ ಪರಮ ವಿಶ್ವಾಸಿ ಆಶ್ರಯ ಜನ ಕಲ್ಪವೃಕ್ಷ ಪ್ರಾತಸ್ನಾನೌಪಾಸನ ಉಭಯೇಕಾದಶೀ ವ್ರತ ದ್ವಿಜ ಗುರುಪಾದಾರಾಧಕರೂ'' ಆಗಿದ್ದ ಜಯಿಭಟ ನಾಯಕನೆಂದಿದೆ. ಇವರು ಚೈತನಾರಾಯಣ ದೇವಾಲಯವನ್ನು ನಿರ್ಮಿಸಿದ್ದಲ್ಲದೇ, ಹೆರಗಿನಲ್ಲಿ - ''ಚೈತನಾರಾಯಣದೇವ ಪುರ''ವು ಇತ್ತೆಂದು ಶಾಸನವು ತಿಳಿಸಿದೆ. ಶಾಸನಾಂತ್ಯದಲ್ಲಿ ಶ್ರೀ ಶಾರದಾಯೈ ನಮಃ ಎಂಬ ಉಲ್ಲೇಖವಿದೆ. ಈ ಎರಡೂ ಶಾಸನಗಳಿಂದ, ಹೆರಗಿನಲ್ಲಿ ಕಾಶ್ಮೀರದಿಂದ ಬಂದಿದ್ದ ವಿಪ್ರರು ನೆಲೆಸಿದ್ದ ಅಗ್ರಹಾರಗಳಿದ್ದವೆಂದು ತಿಳಿದುಬರುತ್ತದೆ.

ಬೇಲೂರು ತಾಲೂಕಿನ ಪಂಡಿತನಹಳ್ಳಿ ಶಾಸನವು - 'ಸಹವಾಸಿ ಪ್ರವರ ಮಹಾಭಾರತ ಶಾಸ್ತ್ರಾಂಭೋಜಿನೀ ಪ್ರೋಲ್ಲಸನ್ಮಿಹಿರಂ ಗೌತಮಗೋತ್ರ ವಾರ್ದ್ಧಿ ವಿಲಸತ್ಪೂರ್ಣೇಂದು ವರ್ಣ್ಯಂ ತ್ರಯಿಮಾಮಹಿತಂ ವಿಶ್ವಜನಾಗ್ರಗಣ್ಯನನವದ್ಯಾಪಾರ ಪುಣ್ಯೋದಯಂ ಮಹಾದೇವಂ......'ಎಂದಿದ್ದು, ಈ ಮಹಾದೇವನು ಮಹೇಶನ ನಿಲಯವನ್ನು ಕಟ್ಟಿಸುತ್ತಾನೆ. ಇವನ ಸೋದರಿ ಲೋಕಮಾನ್ಯೆ ಪತಿಭಕ್ತೆ, ಮನೋಹರ ಮೂರ್ತಿ ವಿಶ್ವಭೂಷಾಯಿತೆ ಬೊಪ್ಪಭಟ್ಟರ ಮನೋಹರಿ ಮಾದಲದೇವೀ ಲಕ್ಷ್ಮೀನಾರಾಯಣ ದೇವರನ್ನು ನಿಲ್ಲಿಸುತ್ತಾಳೆ. (ಎಕ೯, ಶಾ. ಸಂ. ೪೫೯).

ಬೇಲೂರಿನ ಚೆನ್ನಕೇಶವ ದೇವಾಲಯದ ಶಾಸನವೊಂದು- (ಎಕ೯. ಬೇ ೧೨) ಕಾಶ್ಮೀರ ವಂಶದ ಮಲಗರಸನು ಚನ್ನಕೇಶವ ದೇವಾಲಯಕ್ಕೆ ಚಿನ್ನದ ಕಲಶ ಹಾಕಿಸಿದ್ದನ್ನು ತಿಳಿಸುತ್ತದೆ. ಬೇಲೂರಿನ ಮತ್ತೊಂದು ಶಾಸನದಲ್ಲಿ (ಅದೇ, ಬೇ ೧೬೪) ರೂಂಮೆಯ ಲಂಣ್ಣಮಭಟ್ಟರ ಮಗ ದೋರಪನನ್ನು, ಬಸವಯ್ಯನ ಮಗ ಸಾವಾಸಿ ಬೊಪ್ಪಜ್ಜನನ್ನು ಉಲ್ಲೇಖಿಸಲಾಗಿದೆ.

ಬೇಲೂರು ತಾಲೂಕು ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಶಾಸನವು ದೇವರ ಶಿವರಾತ್ರಿ ಉತ್ಸವಕ್ಕೆ ಬಿಟ್ಟ ದಾನಿಗಳನ್ನು ಹೆಸರಿಸುವಲ್ಲಿ 'ಸಾವಾಸಿ ವಿಸ್ಸಯ್ಯ'ನನ್ನು ಉಲ್ಲೇಖಿಸಿದೆ. (ಎಕ೯. ಬೇ ೨೯೮) ಹಳೇಬೀಡಿನ ಇದೇ ದೇವಾಲಯದ ಇನ್ನೊಂದು ಶಾಸನದಲ್ಲಿ ಸಾವಾಸಿ ನಾಗಾರಸರು, ಸಾವಾಸಿ ಎಸ್ಸಯ್ಯ, ದಾಸಯ್ಯರ ಉಲ್ಲೇಖವಿದೆ.

ಹಾಸನ ತಾಲೂಕಿನ ಗೌಡಗೆರೆ ಶಾಸನವು- ಸಾವಾಸಿ ಎಲಿಭಟ್ಟನು ಹಾಲುತೊರೆಯ ಗೌಡರಿಂದ ಭೂಮಿಯನ್ನು ಕೊಂಡುಕೊಂಡು ಗೌಡಗೆರೆಯ ದೇವಿಗಾಗಿ ಬಿಟ್ಟ ದಾನವನ್ನು ಉಲ್ಲೇಖಿಸುತ್ತದೆ(ಎಕ೮. ಹಾ ೨೧). ಹಾಸನ ತಾಲೂಕಿನ ಕೋರವಂಗಲದ ಶಾಸನವು- ಹೊಯ್ಸಳ ದೊರೆ ನರಸಿಂಹ ಬಲ್ಲಾಳನ ಅಧಿಕಾರಿಯಾಗಿದ್ದ ನಾಕರಸನನ್ನು- ಸಮಸ್ತ ತಂತ್ರಾವಾಪ ಪರತನ್ತ್ರಾತನ್ತ್ರಾಧಿಕಾರನೂ, ಮಾಹೇಶ್ವರಾಗ್ರ ಗಣ್ಯನೂ ಆಗಿದ್ದನೆಂದಿದೆ; ಇವನ ಪತ್ನಿ ದೇಲವ್ವೆಯನ್ನು ಉಲ್ಲೇಖಿಸಿದೆ.

ಹಾಸನ ಜಿಲ್ಲೆಯ ಹೆರಗು ಗ್ರಾಮವನ್ನು ದಕ್ಷಿಣ ಕಾಶ್ಮೀರ 'ಸರಸ್ವತೀಪುರ' ಎಂದಿದೆ. ಇದರಂತೆ ಹಾಸನ ಜಿಲ್ಲೆಯ ಕೆಲವು ಗ್ರಾಮಗಳನ್ನು ಶಾಸನಗಳಲ್ಲಿ 'ಸರಸ್ವತೀ ಪುರ', 'ಸರ್ವಜ್ಞಪುರ'ವೆಂದು ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಅಲ್ಲಿ ನೆಲೆಸಿದ್ದ ವಿಪ್ರರ ವಿದ್ವತ್ತನ್ನು ಗಮನಿಸಿದರೆ, ಈ ಗ್ರಾಮಗಳು ಅಲ್ಲಿಂದ ಬಂದ ವಿಪ್ರರು ನೆಲೆಸಿದ್ದ ಗ್ರಾಮಗಳಿರಬಹುದು ಅಥವಾ ಆ ವಿಪ್ರರು ಪ್ರಭಾವ ಬೀರಿದ್ದ ಸ್ಥಳಗಳಾಗಿದ್ದಿರಬೇಕೆಂದು ತಿಳಿಯಬಹುದಾಗಿದೆ. ಹಾಸನ ತಾಲೂಕಿನ ಸಾಲಗಾಮೆ ಗ್ರಾಮದ ಶಾಸನವು (ಎಕ೮. ಹಾ ೫೮) ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಲ ಸಂಪನ್ನರುಂ ಯವುಪಾಸನಾಗ್ನಿಹೋತ್ರ ದ್ವಿಜಗುರುದೇವತಾ ತತ್ಪರರು ಮಾರ್ತಾಂಡೋಜ್ವಳ ಕೀರ್ತಿಯುತರುಮಪ್ಪ ಶ್ರೀಮದನಾದಿ ಅಗ್ರಹಾರ 'ಸರಸ್ವತೀ ಪುರ'ವಾದ ಸಾಲಗಾವೆ ಎಂದಿದೆ. ಹಾಸನ ತಾಲೂಕಿನ ಶಾಂತಿಗ್ರಾಮದಲ್ಲಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಲಗುಣ ಸಂಪನ್ನರೂ ಔಪಾಸನಾಗ್ನಿಹೋತ್ರ ದ್ವಿಜಗುರು ದೇವತಾ ಪೂಜನ ತತ್ಪರರೂ,

ಮಾರ್ತಾಂಡೋಜ್ವಲ ಕೀರ್ತಿಯುತರುಮಪ್ಪ' ಮಹಾಜನರಿದ್ದರೆಂದು ಶಾಸನವೊಂದು ತಿಳಿಸಿದೆ (ಎಕ ೮. ಹಾ ೧೫೫). ಇದೇ ಗ್ರಾಮದ ಮತ್ತೊಂದು ಶಾಸನವು ಇಲ್ಲಿ ೨೪ ಜನ ಯಾಗನಿರತ ಬ್ರಾಹ್ಮಣರಿದ್ದರೆಂದು ತಿಳಿಸಿದೆ(ಅದೇ. ಶಾ. ಸಂ ಹಾ. ೧೬೧). ಶಾಂತಿಗ್ರಾಮದಲ್ಲಿ ಶ್ರುತಿ ಸ್ಮೃತಿ ಪುರಾಣಂಗಳ ನಿತ್ಯಗೋಷ್ಠಿ ನಡೆಯುತ್ತಿತ್ತು. ಇಲ್ಲಿ ಚತುರ್ವೇದ ಚತುರ್ಮುಖರೂ, ಷಡಂಗಷಣ್ಮುಖರೂ, ತ್ರಿಕಾಂಡಜ್ಞಾನ ತ್ರಿನೇತ್ರರೂ ಆದ ಸರಸ್ವತೀ ಭಟ್ಟ ನಾರಾಯಣ ಸ್ವಾಮಿಗಳ ಶಿಷ್ಯರಾದ ಪರಮಹಂಸ ಅಚಲ ಪ್ರಕಾಶ ಸ್ವಾಮಿಗಳು ನೆಲೆಸಿದ್ದರು. ಹೀಗೆ ಶಾಂತಿಗ್ರಾಮವು 'ವಿದ್ಯಾವಿಳಾಸ ನೃತ್ಯಸ್ಥರಂಗ'ವಾಗಿತ್ತು (ಶಾ. ೧೬೦).

ಅರಸೀಕೆರೆ ತಾಲೂಕಿನ ಅರಕೆರೆ ಗ್ರಾಮದ ಶಾಸನದಂತೆ (ಎಕ ೫ ಅಕೆರೆ೮೨ [R]) ಅರಕೆರೆ ಗ್ರಾಮದಲ್ಲಿ ಶ್ರೀದೇವಿ ಭೂದೇವಿಯರು ನೆಲೆಸಿದ್ದರು. ಇಲ್ಲಿನ ಬ್ರಾಹ್ಮಣರು ಅಧ್ಯಯನ, ಅಧ್ಯಾಪನ ಸದ್ವಿದ್ಯುಕ್ತ ಶ್ರುತಿಮತಾಗಮಾಚಾರರಾಗಿ, ಸತತ ವೇದಾರ್ಥ ಶಾಸ್ತ್ರಗಳ ಸಂವಾದ ನಡೆಸುತ್ತಿದ್ದರು. ಈ ಊರಿನಲ್ಲಿ ಪುರಾಣ ಸಕು ಸ್ಮೃತಿ ಕಾವ್ಯನಾಟಕಾರ್ಥಗಳನ್ನು ಸಾಧಿಸುತ್ತಿದ್ದರು. ಇಲ್ಲಿ ವಿಷ್ಣುಗೃಹಗಳೂ, ವೀಖಣಸಾಲೆಯೂ ಇತ್ತು. ಈ ಗ್ರಾಮದಲ್ಲಿ ಒಳಕಲೆಗಳಿಂದ ಶೋಭಿಸುತ್ತಿದ್ದ ೧೨೦ ಜನ ವಿಪ್ರರಿದ್ದು 'ಸರ್ವಜ್ಞಪುರ'ವೆನ್ನಿಸಿತ್ತೆಂದು ತಿಳಿದು ಬರುತ್ತದೆ. ಅರಸಿಕೆರೆ ತಾಲೂಕಿನ ಕೆಲ್ಲಂಗೆರೆಗ್ರಾಮವು ಅನಾದಿ ಅಗ್ರಹಾರವಾಗಿದ್ದು ಇಲ್ಲಿಯ ವಿಪ್ರರನ್ನು ಶಾಸನವು (ಎಕ ೫. ಅಕೆರೆ ಶಾ. ಸಂ. ೧೧೦ [R]) 'ಯಮನಿಯಮ............... ಷಟ್ಕರ್ಮನಿರತರೂ, ಋಗ್ ಯಜುರ್ಸಾಮಥರ್ವಣ ಷಡಂಗ ವಂದಿ ವೃಂದ ದಾರಿದ್ರಾನ್ಧಾಕಾರ ಸಂಹರಣ ಪರಿಣತ ಮಾರ್ತಾಂಡ........., ಕ್ಷತ್ರಿಯ ವೈಶ್ಯ ಶೂದ್ರ ತ್ರಯ ಲಲಾಟ ಪಾದಘಟ್ಟಿತರು, ಆದಿ ಸಮರ್ಥರು, ಶರಣಾಗತ ಜಳನಿಧಿಗಳೂ ಆಗಿದ್ದರೆಂ'ದಿದೆ. ಶ್ರೀಮದನಾದಿ ಅಗ್ರಹಾರವಾದ ಕೆಲ್ಲಂಗೆರೆಯು 'ಹರಿಹರಪುರ'ವೆನ್ನಿಸಿತ್ತು ಎಂದು ತಿಳಿಸುವ ಈ ಶಾಸನವನ್ನು ಚಬ್ಬರಾಜನ ಪುತ್ರ ಶಾರದೀನಾಥ ಪಂಡಿತನು ಬರೆದಿದ್ದಾನೆ. ಅರಸಿಕೆರೆ ತಾಲೂಕಿನ ಹಾರನಹಳ್ಳಿ ಶಾಸನವು (ಎಕ ೫. ಅಕೆರೆ ೧೨೩ [R]) ಅಲ್ಲಿಯ ಶ್ರೇಷ್ಠ ಬ್ರಾಹ್ಮಣರು ಛಂದ ಪರಿಣಿತ ನಿಶಿತಶಾಸ್ತ್ರ ಬಲ ಸಂಪನ್ನರು. ಪರಮ ಕವೀಶ್ವರರೂ ಆಗಿದ್ದರು. ಇಲ್ಲಿ ಸದಾಚಾರನಿಷ್ಠನೂ, ಶ್ರೀಶಪೂಜಾಕರಣ ಪರಿಣಿತನೂ, ಮಂತ್ರ ತಂತ್ರಜ್ಞನೂ, ಪರಮಶಮಸತ್ಯ ಸಂಪನ್ನನೆನ್ನಿಸಿದ್ದ ಶ್ರೀ ನಿಜಾನಂದ ದೇವನು ನೆಲೆಸಿದ್ದನು.*೩ ಇವನ ಮಗ ಆನಂದ ಬೋಧಮುನಿಯು, ಪರಮ ಮುನಿವರಿಷ್ಠನೂ, ಬ್ರಹ್ಮ ಕರ್ಮೈಕನಿಷ್ಠನೂ, ಶಾಂತಚಿತ್ತನೂ, ಪರಮ ಜ್ಞಾನ ನಿಧಿಯೂ ಆಗಿದ್ದನು. ಇವನ ಅನೇಕ ಶಿಷ್ಯರು ಇಲ್ಲಿ ನೆಲೆಸಿದ್ದು ಈ ಊರು ಅನಾದಿ ಅಗ್ರಹಾರವಾಗಿತ್ತು ಎಂದು ತಿಳಿಸಿದೆ. ಅರಸಿಕೆರೆ ತಾಲೂಕಿನ ತಳಲೂರಿನಲ್ಲಿರೇವರಾಜನು ವಿಷ್ಣುಗೃಹವನ್ನೆತ್ತಿಸುತ್ತಾನೆ. ಇಲ್ಲಿಯ ಶಾಸನವನ್ನು ಶ್ರೀಮನ್ಮಾಹಯೋಗೀಶ್ವರ ಬ್ರಹ್ಮಾನಂದ ಸ್ವಾಮಿಗಳ ಸುಪುತ್ರ ಶ್ರೀರಂಗದೇವನು ರಚಿಸಿದ್ದಾನೆ (ಎಕ ೫. ಅಕೆರೆ. ೧೩೦ [R]).

ಬೇಲೂರು ತಾಲೂಕಿನ ಕುಮಾರನಹಳ್ಳಿಯಲ್ಲಿ ಹೊಯ್ಸಳ ನಾರಸಿಂಹದೇವನು ಶ್ರೀಮದ್ವರದ ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠೆ ಮಾಡಿದಾಗ ಶ್ರೀಕಾರ್ಯಕ್ಕಾಗಿ ಬಿಟ್ಟ ಗ್ರಾಮುಗಳಲ್ಲಿ 'ಸಹವಾಸಿಹಳ್ಳಿ'ಯು ಉಲ್ಲೇಖವಿದೆ. ಕುಮಾರನಹಳ್ಳಿಯ ಬಳಿಯಲ್ಲೇ ಇದ್ದ ಸಹವಾಸಿ ಹಳ್ಳಿಯ ಬಗೆಗೆ ಹೆಚ್ಚಿನ ವಿವರಗಳು ತಿಳಿಯದಿದ್ದರೂ, ಗ್ರಾಮದ ಹೆಸರೇ ಸೂಚಿಸುತ್ತಿರುವಂತೆ ಅಲ್ಲಿ ಸಾವಾಸಿಗರು ಹೆಚ್ಚಾಗಿ ನೆಲೆಸಿದ್ದರೆಂದು ತಿಳಿಯಬಹುದಾಗಿದೆ(ಎಕ ೯. ಶಾಸಂ ಬೇ ೪೬೩).

ಹೀಗೆ ಹಾಸನ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಕಾಶ್ಮೀರದ ಪಂಡಿತರು, ಬ್ರಾಹ್ಮಣರು ನೆಲೆಸಿದ್ದು ಕಾಶ್ಮೀರದ ಪ್ರತಿರೂಪವೆಂಬಂತೆ *ಸರಸ್ವತೀಪುರ*, *ಸರ್ವಜ್ಞಪುರ*ಗಳೆಂದು ಸೂಚಿಸಲ್ಪಟ್ಟಿವೆ. ಕಾಶ್ಮೀರದಿಂದ , ಉತ್ತರ ಭಾರತದೆಡೆಯಿಂದ ಬಂದು ನೆಲೆಸಿದ್ದ ವ್ಯಕ್ತಿಗಳ ಹೆಸರುಗಳೂ (ವ್ಯಕ್ತಿವಾಚಕಗಳೂ) ವಿಶೇಷವಾಗಿದ್ದು ಗಮನಾರ್ಹವಾಗಿವೆ. ಅನೇಕ ಶಾಸನಗಳಲ್ಲಿ ವ್ಯಕ್ತಿಗಳನ್ನು ಕಾಶ್ಮೀರದವರೆಂದು ನೇರವಾಗಿ ಸೂಚಿಸಿಲ್ಲವಾದರೂ, ಅವರ ಹೆಸರುಗಳಿಂದ ಊಹಿಸಬಹುದಾಗಿದೆ. ಹಾಸನ ಜಿಲ್ಲೆಯ ಶಾಸನಗಳಲ್ಲಿ ಇಂಥ ನೂರಾರು ಹೆಸರುಗಳು ಕಂಡುಬರುತ್ತಿವೆ. ಅವುಗಳಲ್ಲಿ ಕೆಲವನ್ನಿಲ್ಲಿ ಉದಾಹರಣೆಗಾಗಿ ಗಮನಿಸಲಾಗಿದೆ.

ಹಾಸನ ತಾಲೂಕಿನ ದೊಡ್ಡಗದ್ದವಳ್ಳಿ ಗ್ರಾಮದ ಶಾಸನವು (ಎಕ ೮. ಹಾ ೩೮) ಅಭಿನವ ಕೊಲ್ಲಾಪುರವೆನ್ನಿಸಿದ್ದ ಗದ್ದುಂಬಳ್ಳಿಯ ಆಚಾರ್ಯ ಚಿಕ್ಕಚವುಂಡರಾಯ ಭಟ್ಟಯ್ಯಂಗಳ ಮಗ ಪಟ್ಟವರ್ಧನ ದೇವನ ಮಗ ಸಿಂಗಯ್ಯ........ ಮೊದಲಾದವರು ಮಾಡಿದ ಕ್ರಯ ಪತ್ರದ ಬಗೆಗೆ ತಿಳಿಸುತ್ತಿದೆ. ಈ ಶಾಸನದಲ್ಲಿ ಶ್ರೀ ಮನ್ಮಹಾವಡ್ಡಬ್ಯವಹಾರಿ ಗೋಲೆಹೆನಾಯಕರ ತಂಗೆ ಸಿರಿಯಾದೇವಿಯಕ್ಕ, ಮಾಯಿದೇವ, ಭೂತಯ್ಯ...... ಮೊದಲಾದವರ ಉಲ್ಲೇಖವಿದೆ. ಈ ಗ್ರಾಮದಲ್ಲಿ ಮಹಾಲಕ್ಷ್ಮಿ ದೇವಾಲಯವನ್ನೆತ್ತಿಸಿದ ಶ್ರೀಮನ್ಮಹಾವಡ್ಡಬ್ಯವಹಾರಿ ಕುಲ್ಲಹುಣ ರಾಹುತರು, ಅವರ ಪತ್ನಿ ಸಹಜಾದೇವಿಯರನ್ನು ಶಾಸನವು - "ಶ್ರೀಭುವನಭವನ ವೇಳಾವನೀ ಪಾರಿಯಾತ್ರ ತನ್ಮಧ್ಯ ದೇಶೋದ್ಭವರು ಹಿತಕುಳತಿಳಕ ಧರ್ಮಾವತಾರ ಸರ್ವಜೀವದಯಾ ಪರರೂ" ಎಂದಿದೆ. (ಅದೇ, ಹಾ ೩೬). ಇದೇ ಗ್ರಾಮದ ಮತ್ತೊಂದು ಶಾಸನವು (ಅದೇ. ಶಾ. ಸಂ. ಹಾ ೩೫) ಹೊಯ್ಸಳದೊರೆ ವೀರಬಲ್ಲಾಳನ ಮಹಾಪ್ರಧಾನಿ ಹಿರಿಯ ದಣ್ಣಾಯಕರಾದ ಗೋಯಿದಿಮ್ಮೆಯ್ಯಂಗಳ ಮಗ ಶ್ರೀಮನ್ಮಹಾ ವಡ್ಡವ್ಯವಹಾರಿ ಪುರುಸನಿಧಿ ಶ್ರೀ ಜಯಿತೈಯ್ಯಂಗಳ ಮೈದುನ ಸಂತಸವಾಡಿಯ ಸುಂಕದಧಿಕಾರಿ ಹೆಗ್ಗಡೆ ಸೋಮಯ್ಯನು ಬಿಟ್ಟದಾನವನ್ನು ಉಲ್ಲೇಖಿಸಿದೆ.

ಬೇಲೂರು ತಾಲೂಕಿನ ಘಟ್ಟದಹಳ್ಳಿಯ ಶಾಸನವು (ಎಕ ೯ ಬೇ ೨೬೪) ಘಟ್ಟದ ಹಳ್ಳಿಯನ್ನು 'ಸರ್ವಜ್ಞ ಹರಿಹರ ಪುರ' ವೆಂದು ಕರೆದಿದ್ದು, ಈ ಅಗ್ರಹಾರದ ವೃತ್ತಿಗಳನ್ನು ಪಡೆದವರೆಂದು ''ಬಾಚಿಹಳ್ಳಿ ಮಾಧವ ಪಟ್ಟವರ್ಧನನ ಮಗ ವೇದಮೂರ್ತಿ ರಾಮಕೃಷ್ಣ ಭಟ್ಟ, ನೀರುಗುಂದ ಸತ್ಯಾನಂದ ಕೇಶವ ಪ್ರಭುಗಳ ಮಗ ಅಲ್ಲಾಲಭಟ್ಟ, ಕಪಿಲತೀರ್ಥದ ರುದ್ರಭಟ್ಟರು.... ಅರಸೀಕೆರೆ ಅಪಂಣ ಕ್ರಮಿತನ ಮಗ ಅವಧಾನಿ ದೇವಣ್ಣ, ಬಾಣೂರ ಸರ್ವಜ್ಞ ವಿಷ್ಣು ಕ್ರಮಿತನ ಮಗ ಅನಂತ ಕ್ರಮಿತ, ದೋರನಹಾಳು ನರಸಿಂಹಪ್ರಭುವಿನ ಮಗ ಪೋಚನಾರಾಧ್ಯ, ಕೂಡಲೂರಿನ ದೇವಣದೀಕ್ಷಿತನಮಗ ಮಲ್ಲಿದೇವ ಸರಸ್ವತ, ಅಗ್ಗುಂದದ ಕಾಮದೇವ ಕ್ರಮಿತನ ಮಗ ಲಖ್ಖಣ, ಮಧುಸೂದನ ಪುರದ ಯೋಗೀಶ್ವರ ಭಟ್ಟರ ಮಗ ಸಾಯೀ ಭಟ್ಟ, ಕಣತೂರಿನ ಅಲ್ಲಾಲ ಕ್ರಮಿತನ ಮಗ ಶ್ರೀರಂಗಭಟ್ಟ..... ಮೊದಲಾದವರನ್ನು ಹೆಸರಿಸಿದೆ.

ಬೇಲೂರಿನ ಚೆನ್ನಕೇಶವ ದೇವಾಲಯದ ಶಾಸನವೊಂದು (ಎಕ ೯. ಬೇ ೪೯) ಈ ದೇವಾಲಯದಲ್ಲಿದ್ದ ಪರಿಚಾರಕರ ಬಗ್ಗೆ ತಿಳಿಸುತ್ತಾ-''ಅರ್ಚಕವರ್ಗದಲ್ಲಿ ೯ ಜನ ಚೌಧುರಿಗಳಿದ್ದರೆಂದು ತಿಳಿಸಿದೆ. ಇದರಂತೇ ದಸಪಾಳಸಾಹಣೀ, ಜಸನಾಯಕ ಮತ್ತು ಅವನ ಪತ್ನಿ ರಲ್ಲೂಬಾಯಿಯರ ಹೆಸರುಗಳನ್ನು (ಬೇ ೩೩೨) ಹಳೇಬೀಡಿನ ಶಾಸನದಲ್ಲಿ ಕಾಣುತ್ತೇವೆ. ಮಾಯಿಭಟ್ಟ, ಕಾಮಭಟ್ಟ, ಸಿಂಗಾರಿಭಟ್ಟರ ಉಲ್ಲೇಖಗಳು (ಹಾ ೮೮ರಲ್ಲಿ), ಮತ್ತು ಸರಸ್ವತಿಭಟ್ಟರು, ಕೋಮಣಭಟ್ಟರು, ಸಿಂಗಾರಾರ್‍ಯರ ಉಲ್ಲೇಖಗಳೂ (ಹಾ ೧೧)ಶಾಸನದಲ್ಲಿ ದೊರೆಯುತ್ತವೆ. ಅರಸಿಕೆರೆಯ ಶಾಸನವೊಂದರಲ್ಲಿ ಕೂಸ ಘಂಟೆಯ ಸಿಂಘಯ್ಯ, ಬೇಲೂರು ತಾಲೂಕಿನ ಕೆಲವು ಶಾಸನಗಳಲ್ಲಿ ಸಿಂಗುಪಧ್ಯಾಯ, ಮಾಯಿಭಟ್ಟ, ಪಂಢರಿಭಟ್ಟ, ಸರಸ್ವತಿಭಟ್ಟ, ಜೋನೆಯನಾಯಕ (ಬೇ ೨೫೬)ರ ಉಲ್ಲೇಖಗಳಿವೆ. ಇದೇ ತಾಲೂಕಿನ ಶಾಸನಗಳಲ್ಲಿ ಕೂಸಬೋಕ ಮತ್ತು ಕೂಸವೆಗ್ಗಡೆ (ಬೇ ೫೩೫) ಕೂಸ ಚಟ್ಟಯ್ಯ (ಬೇ ೪೧೦)ರ ಉಲ್ಲೇಖಗಳಿವೆ. ಅರಸೀಕೆರೆ ಶಾಸನವೊಂದು ಗೋವಿದೇವನನ್ನು (ಅಕೆರೆ ೪೫) ಉಲ್ಲೇಖಿಸಿದೆ. ಬೇಲೂರಿನ ಕೇಶವ ದೇವಾಲಯದ ಶಾಸನದಲ್ಲಿ ಉಕ್ತವಾಗಿರುವ ಮುದ್ದಯ್ಯ ದಣ್ನಾಯಕರನ್ನು 'ಅಹಿಚ್ಛತ್ರಪುರವರಾಧೀಶ್ವರ'ರೆಂದು ಕರೆದಿದ್ದು ಇವರಿಗೆ ಪೃಥ್ವಿಸೆಟ್ಟಿತನವನ್ನಿತ್ತು ಗೌರವಿಸಲಾಗಿದೆ (ಎಕ ೯, ಬೇ ೧೭೧). ಇದೇ ತಾಲೂಕಿನ ಹಳೇಬೀಡಿನ ಶಾಸನವೊಂದು - ಶ್ರೀ ಮನ್ಮಹಾಮಾಣಿಕ್ಯ ಭಟ್ಟರನ್ನು ಉಲ್ಲೇಖಿಸಿದ್ದು ಮಣಿಗಾಱರ ಬಗೆಗೆ ತಿಳಿಸುತ್ತಾ, ಅವರ ಗುಂಪನ್ನು - **ಕಾಶ್ಮೀರ ಸಾರದಾ ದೇವೀ ಲಬ್ಧವರ ಪ್ರಾಸಾದರುಂ, ಸಹವಾಸಿ ಸನ್ತೋಸ ರಹಿಚ್ಛತ್ರವಿನಿರ್ಗತರುಂ** ಎಂದಿದೆ. ಇದರಿಂದ ಹಳೇಬೀಡ ಮಾಣಿಕ್ಯ ವ್ಯಾಪಾರಿಗಳಿಗೂ ಕಾಶ್ಮೀರದ ವ್ಯಾಪಾರಿಗಳಿಗೂ ಇದ್ದ ಸ್ನೇಹವು ವ್ಯಕ್ತವಾಗುವುದಲ್ಲದೇ, ಇವರು ಸಹವಾಸಿಗಳನ್ನು ಗೌರವಿಸುತ್ತಿದ್ದರೆಂದು ತಿಳಿದುಬರುತ್ತಿದೆ. ಹಳೇಬೀಡಿನ ಮಾಣಿಕ್ಯೇಶ್ವರ ದೇವರಿಗೆ ಗೊಲ್ಲೆಹೆನಾಯಕನೂ ಮತ್ತಿತರರೂ ಸೇರಿ ದಾನಬಿಟ್ಟಿದ್ದಾರೆ.

ಹಾಸನ ಜಿಲ್ಲೆಯ ಶಾಸನಗಳನ್ನು ಆಧರಿಸಿ ಕಾಶ್ಮೀರಿ ಬ್ರಾಹ್ಮಣರ ಬಗೆಗೆ ಗಮನಿಸಿದರೆ, ಈ ಪ್ರದೇಶದ ಅನೇಕ ಗ್ರಾಮಗಳಲ್ಲಿ ಕಾಶ್ಮೀರದಿಂದ ಬಂದ ಸಾವಾಸಿಗರು ನೆಲೆಸಿದ್ದರೆಂದು ತಿಳಿದುಬರುತ್ತದೆ. ಸಾವಾಸಿಗರು ವಿಶೇಷವಾಗಿ ತಂತ್ರಾಧಿಪ್ಪಾಯಕರು ಅಥವ ಉನ್ನತ ಅಧಿಕಾರಗಳು ಆಗಿದ್ದು, ರಾಜ ಮರ್ಯಾದೆ ಗಳಿಸಿರುವಂತಿದೆ. ಇವರೆಲ್ಲರೂ ಬ್ರಾಹ್ಮಣರೇ ಆಗಿರದೇ 'ಸಾವಾಸಿ' ಎಂಬುದು ಗುಣವಾಚಕವಾಗಿದ್ದು, ಅವರಲ್ಲಿ ವೈಶ್ಯರು, ಕ್ಷತ್ರಿಯರು ಇರುವಂತಿದೆ. ಇವರ ಹೆಸರುಗಳು ವಿಶಿಷ್ಟವಾಗಿದ್ದು ಇವರು ವಿಶೇಷವಾಗಿ ವೇದಾಧ್ಯಯನ ಪಂಡಿತರೂ, ತಂತ್ರಜ್ಞರೂ ಆಗಿದ್ದರು. ಇವರು ವಿಷ್ಣು ಮತ್ತು ಶಿವ ಇಬ್ಬರನ್ನೂ ಪೂಜಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಇಂದಿಗೂ ದಕ್ಷಿಣ ಕರ್ನಾಟಕದಲ್ಲಿ ವಿಶೇಷವಾಗಿ ನೆಲೆಸಿರುವ ಈ ಗುಂಪಿನ ಜನರನ್ನು ದಕ್ಷಿಣ ಕರ್ನಾಟಕದಲ್ಲಿ ದೇಶಿಕರು ಅಥವ ಸಹವಾಸಿಗಳೆಂದೂ, ಘಟ್ಟದ ಕೆಳಗೆ ನೆಲೆಸಿರುವ ಇದೇ ಗುಂಪಿನ ಜನರನ್ನು 'ಸಾರಸ್ವತ ಬ್ರಾಹ್ಮಣ'ರೆಂದೂ ಕರೆಯುತ್ತಾರೆ. ಇವರು ವಿಶೇಷವಾಗಿ ಗ್ರಾಮದ ಮುಖ್ಯಾಧಿಕಾರಿಗಳಂತೆ, ಗಣ್ಯವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದುದನ್ನು ಕಾಣಬಹುದು.

**ಆಧಾರ ಸೂಚಿ ಮತ್ತು ಟಿಪ್ಪಣಿಗಳು**

*೧. ಕಪಟರಾಳಕೃಷ್ಣರಾಯರು: 'ಸಾವಾಸಿಗರು ಕಾಶ್ಮೀರ ದೇಶದ ಬ್ರಾಹ್ಮಣರು', **ಕರ್ನಾಟಕ ಸಂಸ್ಕೃತಿ ಸಂಶೋಧನೆ**, ಮೈಸೂರು, ೧೯೭೦ (ಪು. ೨೯೨-೯೬).

*೨. ಅದೇ,

*೩. ಕವಿ ಮಹಾಲಿಂಗರಂಗನು 'ಅನುಭವಾಮೃತ'ದಲ್ಲಿ, ತನ್ನ ಗುರು 'ಸಹಜಾನಂದ'ನನ್ನು ಸ್ಮರಿಸುತ್ತಾನೆ; ತನ್ನನ್ನು - ''ಘನತರ ಸಹವಾಸಿ ವಂಶದವ''ನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.

ಕುಂ. ಬಾ. ಸದಾಶಿವಪ್ಪ*

# ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳ ಜೈನರ ಮತಾಂತರ - ಒಂದು ಅಧ್ಯಯನ

ಹನ್ನೊಂದನೆಯ ಶತಮಾನದ ಮಧ್ಯಭಾಗದಿಂದಲೇ ಜೈನಧರ್ಮ ಕರ್ನಾಟಕದಲ್ಲಿ ಇಳಿಮುಖವಾದುದನ್ನು ಶಾಸನವೊಂದು ದೃಢಪಡಿಸುತ್ತದೆ: **"ತೊಲಗದೆ ಜೈನಮಾರ್ಗದೊಳ್ ನಿಶ್ಚಳರಪ್ಪುದು"** (ಸೌ. ಇ. ಇಂ., ಸಂ. ೯ ೧೧೭, ಕ್ರಿ. ಶ. ೧೦೫೫) ಶ್ರೀರಾಮಾನುಜರು ವಿಷ್ಣುವರ್ಧನ ಚಕ್ರವರ್ತಿಯನ್ನು ಕ್ರಿ. ಶ. ೧೧೧೬ರಲ್ಲಿ ಸಂಧಿಸಿ ಅವನನ್ನು ವೈಷ್ಣವ ಧರ್ಮಕ್ಕೆ ಒಲಿಸಿದರು. ಕ್ರಿ. ಶ. ೧೩೬೮ರ ಒಂದು ಶಾಸನದಲ್ಲಿ ಶ್ರೀ ವೀರಬುಕ್ಕರಾಯ ಭವ್ಯರ (ಜೈನರ) ಮತ್ತು ಭಕ್ತರ (ಶ್ರೀ ವೈಷ್ಣವರ) ನಡುವೆ ಉಂಟಾದ ವಿವಾದವನ್ನು ಪರಿಹರಿಸಲು ೧೮ ನಾಡುಗಳ ಶ್ರೀ ವೈಷ್ಣವರೊಡನೆ ಜೈನರ ಕೈಗಳನ್ನು ಕೂಡಿಸಿದನು. ಹೀಗೆ ಶೈವ - ಜೈನ ಧರ್ಮಕ್ಕೂ ಘರ್ಷಣೆ ಉಂಟಾಗಿದ್ದುದನ್ನು ಇತಿಹಾಸ ತಿಳಿಸುತ್ತದೆ.

ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕು ಮತ್ತು ಚಿತ್ರದುರ್ಗ ಜಿಲ್ಲೆಗೆ ಪಕ್ಕದ ಕೂಡ್ಲಿಗಿ-ಹರಪನಹಳ್ಳಿ ತಾಲ್ಲೂಕುಗಳ ಗ್ರಾಮಗಳಲ್ಲಿ ಹೆಚ್ಚಾಗಿ ಜೈನ ಜನಾಂಗ ನೆಲೆಸಿತ್ತು. ಉದಾಹರಣೆಗೆ: ಹೂವಿನ ಹಡಗಲಿ ತಾಲ್ಲೂಕು ಹೊಳಲು, ಕತ್ತೆ ಬೆನ್ನೂರು ಉತ್ತಂಗಿ, ತಳಕಲ್, ಮಾಗಳ ಇಟ್ಟಿಗಿ; ಹಗರಿಬೊಮ್ಮನಹಳ್ಳಿ ತಾಲ್ಲೂಕು ಮೋರಿಗೇರಿ, ಕೋಗಳಿ; ಕೂಡ್ಲಿಗಿ ತಾಲ್ಲೂಕು ಉಜ್ಜಿನಿ, ಕೊಟ್ಟೂರು, ಅಂಬಳಿ; ಹರಪನಹಳ್ಳಿ ತಾಲ್ಲೂಕು ಬಾಗಳಿ, ಮೈದೂರು, ಚಿಗಟೇರಿ, ಮತ್ತಿಹಳ್ಳಿ, ಶೀರನಹಳ್ಳಿ, ಬೆಣ್ಣೆಹಳ್ಳಿ, ಹುಣಸೀಹಳ್ಳಿ, ಸಾಸ್ವಿಹಳ್ಳಿ, ಕಡಬಗೇರಿ, ಹೊಸಕೋಟೆ, ತುಂಬಿಗೇರಿ, ಅರಸೀಕೆರೆ, ಮಾಡ್ಲಿಗೇರಿ, ಯರಬಳ್ಳಿಗುಡ್ಡ, ಉಚ್ಚಂಗಿದುರ್ಗ, ಯು. ಕಲ್ಲಹಳ್ಳಿ, ಯು. ಬೇವಿನಹಳ್ಳಿ, ಪುಣಬಗಟ್ಟಿ, ಕಂಬತ್ತಹಳ್ಳಿ, ಹಿರೇಮೇಗಳಗೇರಿ, ನಂದಿಕಂಬ, ಅಣಜೀಗೆರೆ, ಮಾದಿಹಳ್ಳಿ, ಕುಣೆಮಾದಿಹಳ್ಳಿ, ಗಡಿಗುಡಾಳು, ಮುತ್ತಿಗಿ, ಚಿಕ್ಕೀಕಟ್ಟೆ, ದುಗ್ಗಾವತಿ, ಇತ್ಯಾದಿ ಗ್ರಾಮಗಳಲ್ಲಿ ಜೈನರಿದ್ದರು.

ಮೇಲೆ ತಿಳಿಸಿದ ಗ್ರಾಮಗಳಲ್ಲಿ ಈಗ ವೀರಶೈವ ಮತ್ತು ಸಾಧುವಿರಶೈವ ಜನಾಂಗ ಕಂಡುಬರುವುದು. ಯರಬಳ್ಳಿ ಗುಡ್ಡದ ಮೇಲೆ ಈಗ ಯಾರೂ ನೆಲೆಸಿಲ್ಲ. ಅಲ್ಲಿನ ಗುಂಡುಕಲ್ಲು ಶಾಸನದ ಪ್ರಕಾರ ಹಿಂದೆ ಶಿವನಂದಿ, ಶಿರಿನಂದಿ, ಜಯನಂದಿ, ಅಜಿತಸೇನಾಚಾರ್ಯ ಮುಂತಾದ ಜೈನಮಹಾಮುನಿಗಳ ಹೆಸರು ಇದ್ದು ಅವರು ಅಲ್ಲಿಯೇ ಸಲ್ಲೇಖನವ್ರತ ಕೈಕೊಂಡಿರುವರು. ಯರಬಳ್ಳಿ ಮತ್ತು ಉಚ್ಚಂಗಿದುರ್ಗದ ಸಮೀಪದ ಕೆಲವು ಕೋಟೆಗಳ ಹೂಡೇವುಗಳನ್ನು ವೀಕ್ಷಿಸಿದಾಗ, ಹೂಡೇವುಗಳಲ್ಲಿ ಈಶಾನ್ಯ, ವಾಯುವ್ಯ ದಿಕ್ಕುಗಳಲ್ಲಿ ಒಂದು ಚಿಕ್ಕ ಗೂಡು, ಅದರಲ್ಲಿ ಗುಂಡು ಭರ್ಮಪ್ಪ(ಬ್ರಹ್ಮ), ಊರ ಹೊರಗೆ ಆಂಜನೇಯ ಕಂಡು ಬರುವುವು. ಈ ಎರಡೂ ದೈವಗಳು ಗ್ರಾಮಗಳನ್ನು ರಕ್ಷಿಸುವ ದೇವರು ಎಂಬುವ ಭಾವನೆ ಹಿಂದಿನವರದು.

ನಂದಿಕಂಬ ಒಂದು ಚಿಕ್ಕ ಗ್ರಾಮ. ಅದರಲ್ಲಿ ಒಂದು ಹೂಡೇವು ಇದೆ. ಅಲ್ಲಿರುವ ೨೦ ಮನೆಗಳೆಲ್ಲಾ ಸಾಧುವೀರಶೈವ ಕೋಮಿಗೆ ಸೇರಿವೆ. ಪ್ರತಿವರ್ಷ ಶ್ರಾವಣ ಮಾಸದ ಒಂದು ಭಾನುವಾರ ಅಲ್ಲಿ ಬ್ರಹ್ಮದೇವರ ಆರಾಧನೆ ನಡೆಯುತ್ತದೆ. ಹೂಡೇವುದಲ್ಲಿ ಈಶಾನ್ಯ ದಿಕ್ಕಿಗೆ ಒಂದು ಚಿಕ್ಕ ಗೂಡು. ಅದರಲ್ಲಿ ಗುಂಡು ಭರ್ಮದೇವರು ಇರುವುದು. ಗೌಡರ ಮನೆಯಿಂದ ಒಂದು ಖಡ್ಗ ಮೆರವಣಿಗೆಯಲ್ಲಿ ಅಲ್ಲಿಗೆ ಬರುವುದು. ಕರುಗಲ್ಲಿಗೆ ನೀರು ಎರೆದು ಪೂಜೆ ಸಲ್ಲಿಸುವರು. ಭರ್ಮದೇವರಿಗೆ ಬೆಳ್ಳಿ ಜನಿವಾರವನ್ನು ಧರಿಸಿ ಪೂಜಿಸುವರು. ನಂತರ ಊರ ಜನರೆಲ್ಲ ಹೂಡೇವಿನ ಮುಂದೆ ಕುಳಿತು ಸಾಮೂಹಿಕ ಭೋಜನ ಮಾಡುವರು.

ಅಣಜೀಗೆರೆ ಗ್ರಾಮವು ಉಚ್ಚಂಗಿದುರ್ಗದಿಂದ ಪೂರ್ವಕ್ಕೆ ೫ ಕಿಲೋಮೀಟರ್ ದೂರದಲ್ಲಿದೆ. ಅದರಲ್ಲಿ ೨೨೦ ಸಾಧು ವೀರಶೈವರ ೩೨ ಹರಿಜನರ, ೨೨ ಬೇಡನಾಯಕರ, ೨ ಪಂಚಮಸಾಲೆ ವೀರಶೈವರ, ೩ ಬಡಿಗೇರ ೨ ವಡ್ಡರ, ೧ ಗಂಗಾಕುಲ, ೧ ಮುಸ್ಲಿಂ -ಒಟ್ಟು ೨೮೩ ಮನೆಗಳಿರುವುವು. ಈ ಗ್ರಾಮದಲ್ಲಿ ಬ್ರಹ್ಮದೇವರ ಆರಾಧನೆ ಊರೊಟ್ಟಿಗೆ ನಡೆಯುವುದು. ಗ್ರಾಮದ ಮಧ್ಯ ಒಂದು

* ನಾರಾಯಣ ಭಟ್ಟರ ವಠಾರ, ಶಂಕರಮಠದ ಹತ್ತಿರ, ಹೊಸಪೇಟೆ ರಸ್ತೆ, ಹರಪನಹಳ್ಳಿ - ೫೮೩ ೧೧೩

ಹೂಡೇವು ನಿಂತಿದೆ. ಇದು ಪ್ರಾಚೀನ ಕಾಲದಲ್ಲಿ ಕಟ್ಟಿದ ಕೋಟೆಗೆ ಸಂಬಂಧಿಸಿದ್ದು, ಕೋಟೆ ಹಾಳಾಗಿದೆ. ಹೂಡೇವಿನ ಈಶಾನ್ಯ ದಿಕ್ಕಿನಲ್ಲಿ ಒಂದು ಚಿಕ್ಕ ಗೂಡು ಇದೆ. ಅದರ ಅಳತೆ ಮೇಲ್ಭಾಗ ಪೂರ್ವ ಪಶ್ಚಿಮ ೧೭ ಇಂಚು. ಕೆಳಭಾಗ ೧೪ ಇಂಚು, ಎತ್ತರ ೧೮ ಇಂಚು, ಗೂಡಿನ ಒಳಭಾಗ ೧೬ ಇಂಚು, ಅದರಲ್ಲಿ ೯ ಇಂಚು ಉದ್ದ ೮ ಇಂಚು ಅಗಲ ೭ ಇಂಚು ಎತ್ತರದ ಒಂದು ದೊಡ್ಡದಾದ ಹಾಗು ಅದಕ್ಕಿಂತ ಚಿಕ್ಕದಾದ ೫ ಗುಂಡು ಭರ್ಮದೇವರು ಇರುವುವು. ಮೂರು ವರ್ಷಕ್ಕೆ ಒಮ್ಮೆ ರಾಮನವಮಿಯ ಹಿಂದೆ ಅಥವಾ ಮುಂದೆ ಬರುವ ಒಂದು ಆದಿತ್ಯವಾರ ಅರಾಧನೆ ನಡೆಯುವುದು. ಊರವರು ಕರುಕಲ್ಲಿಗೆ ನೂರೊಂದು ಕೊಡ ನೀರು ಸುರಿದು ಪೂಜಿಸುವರು. ಗ್ರಾಮದ ಸರ್ವದೇವರಿಗೆ ಅಭಿಷೇಕ ಮಾಡಿ ಪೂಜಿಸುವರು. ಆಂಜನೇಯ ಮತ್ತು ಬಸವಣ್ಣ ದೇವರ ಉತ್ಸವಮೂರ್ತಿಗಳನ್ನು ಪಲ್ಲಕ್ಕಿಯಲ್ಲಿ ಹೊತ್ತು ತಂದು ಹೂಡೇದ ಮುಂದೆ ಸ್ಥಾಪಿಸುವರು. ಬಣಕಾರರ ಮನೆಗೆ ಕಳಸ ಕನ್ನಡಿಯಿಂದ ಹೋಗಿ ಅವರ ಮನೆಯಲ್ಲಿರುವ ಖಡ್ಗವನ್ನು ಪೂಜಿಸಿ, ಅದನ್ನು ಅವರ ಮನೆಯವರ ಕೈಯಲ್ಲಿ ಹಿಡಿಸಿ, ಮೆರವಣಿಗೆಯಲ್ಲಿ ಬ್ರಹ್ಮದೇವರ ಬಳಿಗೆ ಬರುವರು. ಬ್ರಹ್ಮದೇವರ ಬಳಿ ಅದನ್ನು (ಖಡ್ಗ) ಇರಿಸಿ ಅದಕ್ಕೆ ರುಮಾಲು ಸುತ್ತಿ, ಒಂದು ಚಿಕ್ಕ ಶಲ್ಯ ಧರಿಸಿ, ಉಡಿಅಕ್ಕಿ ಕಟ್ಟಿ ಇಡುವರು. ಈಗ ಸರ್ವರೂ ಹೂಡೇವಿನ ಬ್ರಹ್ಮದೇವರಿಗೆ ಪೂಜೆ ಸಲ್ಲಿಸುವರು. ಹರಕೆ ಹೊತ್ತವರು ಬೆಳ್ಳಿ ಜನಿವಾರಗಳನ್ನು ದೇವರಿಗೆ ಅರ್ಪಿಸುವರು. ಇಡೀ ಗ್ರಾಮದ ಪರವಾಗಿ ಒಂದು ಬೆಳ್ಳಿ ಜನಿವಾರ ದೇವರಿಗೆ ಅರ್ಪಿಸುವುದು ಕಡ್ಡಾಯ. ಪೂಜೆ ಮುಗಿದ ಬಳಿಕ ಊರವರು (ಎಲ್ಲಾ ಕೋಮಿನವರು) ಹೂಡೇವಿನ ಸುತ್ತು ಕುಳಿತು ಮಾದಲಿ (ಗೋಧಿ ಮತ್ತು ಬೆಲ್ಲ ಸೇರಿಸಿದ ಆಹಾರ) ಮತ್ತು ಅನ್ನ ಸಾರು ಊಟ ಮಾಡುವರು. ಜೊತೆಗೆ ದೇವರಿಗೆಂದು ಮಡಿಯಿಂದ ತಯಾರಿಸಿದ ಎಣ್ಣೆ ಹೋಳಿಗೆ ಮತ್ತು ಅಕ್ಕಿ ಹುಗ್ಗಿ ಪ್ರಸಾದವನ್ನು ಸ್ವಲ್ಪ ಸ್ವಲ್ಪ ಸರ್ವರ ಊಟದ ಎಲೆಗಳಿಗೆ ನೀಡುವರು. ಸ್ವಲ್ಪ ಪ್ರಸಾದವನ್ನು ನೆಲದಲ್ಲಿ ಹೂಳುವರು. ಅಡಿಗೆ-ಆಹಾರ ಪದಾರ್ಥಗಳು ಉಳಿದರೆ ಅದನ್ನು ಗ್ರಾಮದ ಎಲ್ಲಾ ಜನರಿಗೆ ಹಂಚಿಕೊಡುವರು. ಇದರ ವೆಚ್ಚವನ್ನು ಗ್ರಾಮದ ಸರ್ವರೂ ಚಂದಾ ರೂಪದಲ್ಲಿ ಭರಿಸುವರು. ಈ, ಆಡಳಿತಕ್ಕೆ ಒಂದು ಸಮಿತಿಯನ್ನು ಗ್ರಾಮದ ಜನರೇ ನೇಮಿಸುವರು, ಆರಾಧನೆಗೆ ದೊರೆತ ಬೆಳ್ಳಿ ಜನಿವಾರಗಳನ್ನು ಒಟ್ಟುಗೂಡಿಸಿ, ಕರಗಿಸಿ ೫ ಕೆ. ಜಿ.ಬಸವಣ್ಣನ ಒಂದು ಉತ್ಸವ ಮೂರ್ತಿಯನ್ನು ಮಾಡಿಸಿರುವರು.

ಮಳೆ ಬಾರದೇ ಹೋದರೆ 'ದುಗ್ಗಾವತಿ ಗ್ರಾಮದಲ್ಲಿ' ಮಾಳಿಗೆ ಮೇಲೆ ಗುಂಡುಭರ್ಮದೇವರನ್ನು ಇರಿಸಿ, ಅದಕ್ಕೆ ಸುಣ್ಣ ಬಳಿದು ಪೂಜಿಸುತ್ತಿದ್ದರು. ಈಗ ಈ ಕ್ರಮ ನಿಂತಿದೆ.

ಸಮೀಪದ ಕಡಬಗೇರಿ ಗ್ರಾಮದ ಕೋಟೆ ಹಾಳಾಗಿ, ಅದರ ಕಲ್ಲುಗಳನ್ನು ತಂದು ಒಂದು ಪಾವಟಿಕೆ ಬಾವಿಯನ್ನು ರಚಿಸಿರುವರು. ಅದರ ಸಮೀಪ ಗುಂಡುಭರ್ಮದೇವರುಗಳನ್ನು ಇಟ್ಟಿರುವರು. ಈ ದೇವರು ಕೋಟೆ ಹೂಡೇವುಗೆ ಸಂಬಂಧಿಸಿದ್ದು, ಪ್ರತಿ ಹಬ್ಬ ಹುಣ್ಣಿಮೆಗಳಲ್ಲಿ ಗ್ರಾಮದವರು ಪೂಜೆ ಸಲ್ಲಿಸುವರು. ಕಡಬಗೇರಿ ಗ್ರಾಮ ಸುಮಾರು ೫೦೦ ಮನೆಗಳಿಂದ ಕೂಡಿದೆ. ಅದರಲ್ಲಿ ಸುಮಾರು ೪೦೦ ಮನೆಗಳು ಸಾಧು ವೀರಶೈವ ಕೋಮಿಗೆ ಸೇರಿವೆ.

ಅರಸೀಕೆರೆ ಗ್ರಾಮದಲ್ಲಿ ಭರ್ಮನಗೌಡರ ಒಂದು ಮನೆತನವಿದೆ. ಇವರು ಈಗ ಪಂಚಾಚಾರದ ಲಿಂಗಾಯಿತರು. ಮೊದಲಿಗೆ ಜೈನರು. ಈ ಮನೆತನದಿಂದ ಸುಮಾರು ೨೦ ಮನೆಗಳು ಉಂಟಾಗಿವೆ. ಸುಮಾರು ೧೫೦ ವರ್ಷಗಳ ಹಿಂದೆ ಹೊಂಬುಜ ಮಠದ ಜೈನಸ್ವಾಮಿಗಳು ಅರಸೀಕೆರೆ ಗ್ರಾಮಕ್ಕೆ ಆಗಮಿಸಿದರು. ಸ್ವಾಮಿಗಳು ಭಕ್ತರಿಗೆ ಕಾಣಿಕೆ ಕೊಡಲು ಹೇಳಿ ಹರಪನಹಳ್ಳಿಗೆ ಹೋದರು. ಅವರು ಬರುವುದರ ಒಳಗೆ ಅವರು ತಿಳಿಸಿದಷ್ಟು ಕಾಣಿಕೆ ಕೊಡಬೇಕು. ಇಲ್ಲದಿದ್ದರೆ ಅವರು ತಂದ ಕುದುರೆ, ಆನೆ, ಶಿಷ್ಯರನ್ನು ಪರಿವಾರದವರನ್ನು ಕಾಣಿಕೆ ಕೊಡುವವರೆಗೂ ಸಾಕಬೇಕು. ಇದನ್ನು ಸಾಕಲಾಗದೆ ಜೈನರು *ಕೋಲಶಾಂತ ಮಠದಸ್ವಾಮಿಗಳ* ಸಮ್ಮುಖದಲ್ಲಿ ಲಿಂಗಧರ್ಮಕ್ಕೆ ಮತಾಂತರಗೊಂಡರು. ಭರ್ಮನಗೌಡರ ಮನೆಯವರು ಈಗ್ಗೆ ೧೬ ವರ್ಷಗಳ ಹಿಂದೆ ಬ್ರಹ್ಮ ದೇವರ ಚಿಕ್ಕ ಗುಡಿಯನ್ನು ಅರಸೀಕೆರೆ ಗ್ರಾಮದಲ್ಲಿ ಕಟ್ಟಿಸಿದರು. ಈ ಗ್ರಾಮದಲ್ಲಿ ವರ್ಷಕ್ಕೊಮ್ಮೆ ಬ್ರಹ್ಮದೇವರ ಕಾರ್ತಿಕ ನಡೆಯುವುದು. ***ಆಗ ಲಿಂಗಾಯತ ಧರ್ಮೀಯರು ಲಿಂಗ ತೆಗೆದು ಜನಿವಾರ ಧರಿಸಿ ದೇವರನ್ನು ಪೂಜಿಸುವರು.***

ಹಗರಿಬೊಮ್ಮನಹಳ್ಳಿ ತಾಲ್ಲೂಕು ಮೋರಿಗೆರೆಯಲ್ಲಿ ಪ್ರಾಚೀನ ಕಾಲದ ಒಂದು ಬ್ರಹ್ಮದೇವರ ಗುಡಿ ಇದೆ. ಅದು ಕಟ್ಟಿಗೆಯದು. ಅದನ್ನು ತೆಗೆದು ಈಗ ಕಲ್ಲಿನ ಗುಡಿಯನ್ನು ಕಟ್ಟಿಸಿರುವರು. ಅದರ ಖರ್ಚಿಗಾಗಿ ಪಟ್ಟಿಯನ್ನು ಗ್ರಾಮದ ಬಹುಜನರು ಕೊಟ್ಟಿರುವರು. ಬ್ರಹ್ಮದೇವರ ಪ್ರತಿಮೆ ಮತ್ತು ಅದರ ವಾಹನ ಕುದುರೆಗಳಿಗೆ ಬಂಗಾರದ ಮುಖವಾಡ ಇರುವುವು. ಗ್ರಾಮದ ಜನರು ಸರ್ವಕಾರ್ಯಗಳಿಗೆ ಮೊದಲು ಬ್ರಹ್ಮದೇವರನ್ನು ಪೂಜಿಸುವರು. ಶ್ರಾವಣ ಮಾಸದ ಕೊನೇ ಆದಿತ್ಯವಾರ ದೇವರು ತಾಳೇ ಮರಕ್ಕೆ ಹೋಗುವುದು. ಬಂಥ ಹುಣ್ಣಿಮೆ ಮುಂದೆ ಬರುವ ಆದಿತ್ಯವಾರ ಕಾರ್ತೀಕ ನಡೆಯುವುದು. ಕಂಬತ್ತಹಳ್ಳಿಯಲ್ಲಿ ೫-೬ ಮನೆಗಳ ಒಂದು ಸಮೂಹ ಇರುವುದು. ಅವರಿಗೆ ಸಂಗೇನಹಳ್ಳಿ ಯವರು ಎಂದು ಈಗ ಕರೆಯುವರು. ಅವರು ಸಾಧು ವೀರಶೈವರು. ವರ್ಷಕ್ಕೊಮ್ಮೆ ಬ್ರಹ್ಮದೇವರ ಪೂಜೆ ಸಲ್ಲಿಸುವರು. ಆಗ ಜನಿವಾರ ಧರಿಸಿ ಪೂಜೆ ಸಲ್ಲಿಸುವರು. ಅವರ ಮನೆಗಳಲ್ಲಿ ನಡೆಯುವ ವಿವಾಹಗಳಲ್ಲಿ ಬ್ರಹ್ಮದೇವರ ಪೂಜೆ ಕಡ್ಡಾಯ. ಈ ಗ್ರಾಮದಲ್ಲಿ ಸಣ್ಣ ಗುಡಿಯಲ್ಲಿ ಬ್ರಹ್ಮದೇವರು, ಕಟ್ಟೆಯ ಮೇಲೆ ಗುಂಡು ಭರ್ಮಪ್ಪ ದೇವರು ಇರುವುವು. ಇದು ಜೈನರ ಯಕ್ಷ ದೇವತೆ. ೧೦ನೇ

ತೀರ್ಥಂಕರ ಶೀತಲನಾಥರಿಗೆ ಸಂಬಂಧಿಸಿದ್ದು, ಇದು ದಿಗಂಬರ-ಶ್ವೇತಾಂಬರ ಪರಂಪರೆಯಲ್ಲಿ ಬ್ರಹ್ಮಯಕ್ಷ. ಇಲ್ಲಿ 'ಗುಂಡು ಭರ್ಮ ದೇವರು' ಬ್ರಹ್ಮಯಕ್ಷನ ಜಾನಪದ ಮೂಲದ ಸಂಕೇತವಾಗಿರಬೇಕು. ಇಲ್ಲವೆಂದರೆ ಶೀತಲನಾಥರ ಯಕ್ಷಿಯಾದ 'ಮಾನವಿ'ಯ ಸಂಕೇತವಾಗಿರಬಹುದು. ಸಾಮಾನ್ಯವಾಗಿ ಎಲ್ಲಾ ಭಾಗಗಳಲ್ಲಿ ಗುಂಡು ಭರ್ಮದೇವರು ಇದ್ದರೆ, ಮೋರಿಗೆರೆ, ಚಿಗಟೇರಿ, ಅಡವಿ, ಹರಪನಹಳ್ಳಿ, ಮಾಡ್ಲಿಗೇರಿಗಳಲ್ಲಿ ಬ್ರಹ್ಮದೇವರ ಮೂರ್ತಿಗಳು ಕಂಡು ಬರುವುವು. ಮೇಲಿನ ಸಂದರ್ಭಗಳು ಹಾಗು ಇತರ ಆಕರಗಳಿಂದ ಮುಂದಿನ ಅಂಶಗಳು ಸೂಚಿತವಾಗುತ್ತವೆ:

೧. ನಂದಿಕಂಬ, ಬ್ರಹ್ಮದೇವರ ಆರಾಧನೆಗೆ ಮೆರವಣಿಗೆಯಲ್ಲಿ ಬರುವ ಖಡ್ಗ ಗೌಡರ ಮನೆಗೆ ಸೇರಿದ್ದು. ಅಣಜೀಗೆರೆ ಗ್ರಾಮದ ಖಡ್ಗ ಬಣಕಾರರ ಮನೆಗೆ ಸೇರಿದ್ದು. ಈ ಎರಡೂ ಕುಟುಂಬಗಳು ಸಾಧುವೀರಶೈವ ಸಮಾಜದವು.

೨. ಅಣಜೀಗೆರೆ ಬಣಕಾರರ ಮನೆಯ ಅಜ್ಜಿ ಗಂಗವ್ವನವರ ಹೇಳಿಕೆಯ ಪ್ರಕಾರ ಅವರ ಮನೆಯಲ್ಲಿ ಭರ್ಮದೇವರ ಹೆಸರಿನ ಒರ್ವ ವ್ಯಕ್ತಿ ಇರಲೇಬೇಕು. ಇರದಿದ್ದರೆ ಅವರಿಗೆ ಕೆಡುಕು. ಅಜ್ಜಿಗೆ ಇಬ್ಬರು ಮಕ್ಕಳು. ಕಿರಿಯ ಮಗನಿಗೆ ಬೇರೆ ಹೆಸರು ಕರೆದಾಗ ಆ ಮಗು ೧೫ ದಿನಗಳವರೆಗೂ ಅಳು ನಿಲ್ಲಿಸಲಿಲ್ಲ. ಭರ್ಮದೇವರ ಹೆಸರು ಇಟ್ಟದಿನವೇ ಅಳು ನಿಲ್ಲಿಸಿತು. ಆ ಮಗನೇ ಈಗ ಪ್ರಾಯಕ್ಕೆ ಬಂದ ಭರಮಪ್ಪ. ಆತನ ಪ್ರಾಯ ಸುಮಾರು ೨೫ ವರ್ಷಗಳು.

೩. ಜೈನರ ಹೇಳಿಕೆ ಪ್ರಕಾರ ಬ್ರಹ್ಮದೇವರ ಪ್ರಿಯವಾದ ಆಹಾರ ಎಣ್ಣೆ ಹೋಳಿಗೆ-ಅಕ್ಕಿ ಹುಗ್ಗಿ. ಬ್ರಹ್ಮದೇವರ ಆರಾಧನೆಗೆ ಶ್ರೇಷ್ಠವಾದ ದಿನ ಆದಿತ್ಯವಾರ.

೪. ಜೈನ, ಬ್ರಾಹ್ಮಣ, ವಿಶ್ವಕರ್ಮ, ದೇವಾಂಗ, ಜನಾಂಗದವರು ಜನಿವಾರ ಧರಿಸುವರು. ವೀರಶೈವರು ಲಿಂಗ ಧರಿಸುವರು.

೫. ೧೬ನೇ ಶತಮಾನದ ಅಂತ್ಯದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಬಲರಾದ ಸಾಧುಗಳೆಂದರೆ ಚಿಗಟೇರಿ ನಾರಪ್ಪ, ಮರುಳಸಿದ್ಧಸ್ವಾಮಿ ಮತ್ತು ಅವರ ಶಿಷ್ಯರು ಪಂಚಗಣಾಧೀಶರು, ಕೂಲಹಳ್ಳಿ ಗೋಣಿಬಸಪ್ಪ. ಜೈನರು ಇವರ ಪ್ರಭಾವಕ್ಕೆ ಒಳಗಾದಂತೆ ಕಂಡುಬರುವುದು.

೬. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಉಜ್ಜಿನಿ ಗ್ರಾಮದ ಈಶಾನ್ಯ ದಿಕ್ಕಿಗೆ ಮೂರು ಮೈಲು ಅಂತರದ ಗ್ರಾಮ ಕಗ್ಗಲಪುರ (ಈಗ ಬೇಚಿರ ಗ್ರಾಮ). ಅಲ್ಲಿ ಮರುಳಸಿದ್ಧಸ್ವಾಮಿ, ಕೂಚಿಮಾರ-ಸುಪ್ರಭೆ ದಂಪತಿಗಳ ಉದರದಲ್ಲಿ ಜನಿಸಿದ. ಎಳವೆಯಲ್ಲಿ ತಂದೆ-ತಾಯಿ ಮಡಿದರು. ಬಾಚಣ್ಣಗೌಡ, ಮಲ್ಲಮ್ಮ ದಂಪತಿಗಳು ಈ ಮಗುವನ್ನು ಸಾಕಿದರು. ಈ ಮಗು ಬೆಳೆದು ದೊಡ್ಡವನಾಗಿ ಸಾಧುವೀರಶೈವ ಜನಾಂಗಕ್ಕೆ ಗುರುವಾದದ್ದು ಮರಳುಸಿದ್ಧಕಾವ್ಯ ಮತ್ತು ಸಿರಿಗೆರೆ ಸಾಹಿತ್ಯದಿಂದ ಗೊತ್ತಾಗುತ್ತದೆ.

೭. ಕೂಡ್ಲಿಗಿ ತಾಲ್ಲೂಕು ಉಜ್ಜಿನಿ ಮಠದ ನಾಲ್ಕು ಶಾಸನಗಳ ಅಧ್ಯಯನದಿಂದ ೧೬ನೇ ಶತಮಾನಕ್ಕೂ ಮೊದಲು ಉಜ್ಜಿನಿ ಮಠದಲ್ಲಿ ಯಾವ ಸ್ವಾಮಿಗಳ ಅಸ್ತಿತ್ವವೂ ಕಂಡು ಬರುವುದಿಲ್ಲ. ಮಲ್ಲಿಕಾರ್ಜುನ ಮತ್ತು ಪಾರ್ವತಿದೇವಿ ಗುಡಿಗಳಲ್ಲಿ ಜೈನ ತೀರ್ಥಂಕರರ ಉಬ್ಬುಚಿತ್ರಗಳು ಈಗಲೂ ಗೋಡೆಗಳ ಮೇಲೆ ಕಾಣಬರುತ್ತವೆ.

೮. ಜೈನರು ತಮ್ಮ ಮುನಿಗಳು ಮನೆಗೆ ಆಗಮಿಸಿದಾಗ ಅವರ ಕಾಲು ತೊಳೆದು (ಅವರ ಕಾಲು ಕರ್ಚಿ) ಪೂಜಿಸುವರು. ವೀರಶೈವರು ತಮ್ಮ ಗುರುಗಳ ಪಾದ ತೊಳೆದು ನೀರು ಕುಡಿಯುವರು(ಕರುಣ ಪ್ರಸಾದ). ಇಬ್ಬರೂ ಸಸ್ಯಾಹಾರಿಗಳು; ಅಹಿಂಸಾವಾದಿಗಳು. ಹೀಗೆ ಆಚಾರ ವಿಚಾರಗಳಲ್ಲಿ ಹಲವು ಸಾಮ್ಯತೆ ಕಂಡು ಬಂದರೂ ಜೈನರ ಕೆಲವು ಆಚಾರಗಳು ತುಂಬಾ ಕಠಿಣ (ರಾತ್ರಿ ಆಹಾರ ಸೇವನೆ ತ್ಯಾಜ್ಯ - ಸಲ್ಲೇಖನ ವ್ರತ).

೯. ಹರಪನಹಳ್ಳಿ ಪಾಳೇಯಗಾರರು ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ಸುಮಾರು ೪½ ತಾಲ್ಲೂಕುಗಳನ್ನು ಆಳಿದ ದಾಖಲೆಗಳು ಇರುವುವು. ಮೊದಲ ಬಸವಂತ ನಾಯಕನ ಕಾಲದಲ್ಲಿ ಸಾಧು ವೀರಶೈವ ಜನಾಂಗ ಬಾಗಳಿ, ಇಟಗಿ ಗ್ರಾಮಗಳಲ್ಲಿದ್ದುದು ಗೊತ್ತಾಗುವುದು. ಈ ನಾಯಕನ ಕಾಲ ಕ್ರಿ.ಶ. ೧೬೮೭-೧೭೦೫

೧೦. ಹದಿನಾರನೇ ಶತಮಾನದ ಕೊನೆಯಲ್ಲಿ ಬಾಗಳಿ ಮತ್ತು ಇಟಗಿ ಗ್ರಾಮಗಳಲ್ಲಿ, ಹದಿನೆಂಟನೇ ಶತಮಾನದ ಮಧ್ಯದಲ್ಲಿ ಅರಸೀಕೆರೆ-ಉಚ್ಚಂಗಿದುರ್ಗ ಸಮೀಪದ ಜೈನರು ವೀರಶೈವ ಧರ್ಮಕ್ಕೆ ಮತಾಂತರಗೊಂಡಿರುವುದು ತಿಳಿಯುತ್ತದೆ.

೧೧. ಇತರ ಕೋಮಿನವರು ವೀರಶೈವ ಜನಾಂಗಕ್ಕೆ ಮತಾಂತರ ಗೊಂಡಿರಬಹುದು. ಆದರೆ ಈ ಭಾಗದ ಪ್ರಾಚೀನ ಕಾಲದ ಬಹುಜನ ಜೈನರು ಶೈವ ಮತ್ತು ಸಾಧುವೀರಶೈವ ಧರ್ಮಕ್ಕೆ ಮತಾಂತರಗೊಂಡಿರುವುದು ಕಂಡು ಬರುವುದು.

೧೨. ಬಹುಶಃ ಬ್ರಹ್ಮದೇವರ ಅಪಭ್ರಂಶರೂಪ ಭರ್ಮಪ್ಪದೇವರು ಅಥವಾ 'ಭರ್ಮ' ಶಬ್ದದ ಸಂಸ್ಕೃತ ರೂಪ ಬ್ರಹ್ಮವಿರಬೇಕು.

೧೩. ಮತಾಂತರಗೊಂಡ ಜನಾಂಗವು ತನ್ನ ಕೆಲವು ಪೂರ್ವಾಚಾರಗಳನ್ನು ಉಳಿಸಿಕೊಂಡೇ ಬಂದಿರುವುದು ಕಾಣುತ್ತದೆ.

೧೪. ಗುಂಡುಭರ್ಮಪ್ಪ ೧೦ನೇ ತೀರ್ಥಂಕರ ಶೀತಲನಾಥನಿಗೆ ಸಂಬಂಧಗೊಂಡಿರುವ ಬಗೆ ಗಮನಾರ್ಹ. ಅದು ಬ್ರಹ್ಮದೇವರ ಅನ್ವಯಿಕ ಮೂಲರೂಪವಿರಬಹುದು?

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಶಾಸನಗಳು ಗ್ರಾಮದ ಆರಾಧನೆ, ಭಾವಚಿತ್ರಗಳು

೨. **ಕರ್ನಾಟಕ ಪರಂಪರೆ ಸಂಪುಟ**-೨, ಪ್ರಾಚೀನರ ಹೇಳಿಕೆಗಳು, ಆಹ್ವಾನ ಪತ್ರಿಕೆ, ಜೈನ - ವೀರಶೈವರ ಸಂಬಂಧಗಳು, ಕೆ.ಬಿ. ಶ್ರೀಪಾಲಪ್ಪ ಅವರ ಹೇಳಿಕೆ

೩. ಡಾ॥ ಎಂ. ಚಿದಾನಂದ ಮೂರ್ತಿ : **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**

ಎಂ. ಜಿ. ನಾಗರಾಜ್ *

# ಹಲ್ಮಿಡಿ ಮತ್ತು ಕಲ್ಯ : ಕೆಲವು ಸಾಂಸ್ಕೃತಿಕ ವಿಶೇಷಗಳು

## ಹಲ್ಮಿಡಿ

ಹಲ್ಮಿಡಿ ಗ್ರಾಮವು ಹಾಸನ ಜಿಲ್ಲೆ ಬೇಲೂರು ತಾಲೂಕು ಬೆಣ್ಣೂರು ಅಂಚೆಗೆ ಸೇರಿದ ಗಡಿಗ್ರಾಮವಾಗಿದೆ. ಸು. ೧/೨ ಕಿ. ಮೀ. ದೂರದಲ್ಲಿನ ಯಗಚಿ ನದಿಗೆ ಸೇರುವ ಯಗಚಿಹಳ್ಳದ ಪಶ್ಚಿಮ ಬದಿಗಿರುವ ಈ ಗ್ರಾಮ ಮತ್ತಷ್ಟು ಪಶ್ಚಿಮಕ್ಕೆ ಸರಿದು ತುಸು ಬೆಳೆದಿದೆ. ಯಾವ ಬೆಳೆಗೂ ಫಲವತ್ತಾದ ಯಗಚಿ ನದಿ ತೀರದ ಈ ಪ್ರದೇಶವು 'ಹೊನ್ನುಜಾವಣಿಗೆ' ಪ್ರದೇಶವೆಂದೂ ಜನ ಬಳಕೆಯಲ್ಲಿದೆ. ಕನ್ನಡದ ಮೊಟ್ಟ ಮೊದಲ ಶಾಸನ ದೊರೆತ 'ಹಲ್ಮಿಡಿ ಶಾಸನದ ಗ್ರಾಮ' ಎಂಬ ಹೆಗ್ಗಳಿಕೆಯನ್ನು ಹೊಂದಿರುವ ಈ ಗ್ರಾಮಕ್ಕೆ ಶಾಸನದಲ್ಲಿ 'ಪಲ್ಮಿಡಿ' ಎಂದು ಹೆಸರು ಉಕ್ತವಿದ್ದರೂ*೧ ಇಂದು ಜನಬಳಕೆಯಲ್ಲಿ ಹನುಮಿಡಿ, ಹಾಗು ಹಿರಿಯರ ಬಾಯಲ್ಲಿ ಹಲ್ಮುಡಿ ಎಂದೂ ಕರೆಯಲ್ಪಡುತ್ತದೆ. ಇದಕ್ಕೆ ಪೂರಕವಾಗಿ ಶಾಸನೋಕ್ತ ಪಲ್ಮಾಡಿ (ಕ್ರಿ. ಶ. ೪೫೦?) *೨ ಹಾಗೂ ಹಲುಮಿಡಿ*೩ ಎಂಬ ಶಬ್ದಗಳೂ ದೊರಕುತ್ತವೆ. ಇವುಗಳಲ್ಲಿ 'ಹಲ್ಮುಡಿ' ಎಂಬ ಪದವು ಪ್ರಾಚೀನ ಶಬ್ದರೂಪದ ಹಿನ್ನೆಲೆ ಹೊಂದಿದ್ದರೆ, 'ಹನುಮಿಡಿ' ಶಬ್ದವು ನಂತರದ ರೂಪಾಂತರದ ಒಂದು ಮಜಲಿನದೆನಿಸುತ್ತದೆ. ಸ್ಥಳನಾಮವಾಗಿ 'ಹಲ್ಮುಡಿ' ವಿಶ್ಲೇಷಣೆಗೆ ದೊರಕುತ್ತದೆ.

ಮಾರ್ನೋಮಿಯಲ್ಲಿ ಬಾಳೆಗೊನೆಯ ಕೆಂಪುಹೂ ಮೊಗ್ಗಿಗೆ ಬಿಲ್ಲು (ಅಂಬು) ಹೊಡೆದು ತರುವುದು, ಹಿರಡೆ ಲಿಂಗನ ಹಬ್ಬದಲ್ಲಿ ಬಾಳೆಗೊನೆಯನ್ನು ಕಡಿದು ತರುವುದು, ವೀರಭದ್ರನ ಕೆಂಡೋತ್ಸವದಲ್ಲಿ, ಬನದಹಳ್ಳಿಯಿಂದ ತಾವರೆ ಮೊಗ್ಗು ತಂದು ಮೃಣ್ಮಯ ಕುಂಭದಲ್ಲಿಟ್ಟು, ಕೊಂಡದ ಕೆಳಗಿಟ್ಟು ಅರಳಿಸುವುದು ಇತ್ಯಾದಿ ಜನಪದ ಆಚರಣೆಗಳ ಪ್ರಾಚೀನ ಸಂಕೇತಗಳಿಂದ 'ಪಲ್ಮಿಡಿ=ಹಲ್ಮಿಡಿ=ಹಲ್ಮುಡಿ' ಶಬ್ದನಿಷ್ಪತ್ತಿಯು, ದೊರಕುವಂತಿದೆ. ಬಲ್( < ಬಲ್ಲಿತು ) + ಮಿಡಿ=ಬಲ್ಮಿಡಿ ≈ ಪಲ್ಮಿಡಿ ಅಂದರೆ ಹೀಚು ಸ್ಥಿತಿಯಲ್ಲಿರುವ ದೊಡ್ಡ ಹೂ ಮೊಗ್ಗುಗಳನ್ನು (ಇಂದಿಗೂ ಕುಳವಾಡಿಗಳೇ ತರವುದು) ತಂದು ಆಚರಣೆ ಮಾಡುವ ನೆಲೆಯಾಗಿ, ಪ್ರಾಚೀನದಿಂದಲೂ ಇದ್ದಿರಬಹುದಾದ ಕಾರಣ 'ಪಲ್ಮಿಡಿ' ಹೆಸರು ರೂಪುಗೊಂಡಿರಬಹುದು ! ಹೀಗಿದ್ದರೆ ನಿಸರ್ಗವಾಚಿ ಶಬ್ದಕ್ಕೆ ಗುಣವಾಚಿ ಶಬ್ದವೊಂದು ಸೇರಿ, ಈ ಗ್ರಾಮನಾಮವು ಉಗಮಗೊಂಡಿರುವಲ್ಲಿ ಆಚರಣಾವಾಚಿ ಅರ್ಥಗಳನ್ನು ಒಳಗೊಳ್ಳುತ್ತದೆ. ಇದರಲ್ಲಿ ಐತಿಹ್ಯ, ಚಾರಿತ್ರಿಕ, ಪಂಡಿತ ಹಾಗು ನಿಜನಿಷ್ಪತ್ತಿಗಳ ಸಂಯುಕ್ತ ರೂಪವೊಂದು ಒದಗುವಂತಿದೆ; ಸದಾ ಸೊಂಪು ಬೆಳೆಯ ಪ್ರದೇಶವೆಂಬರ್ಥದ **'ಹೊನ್ನು ಜಾವಣಿಗೆ'** ಎಂಬುದು ***'ಹೊನ್ನು ಜೀವಣಿಗೆ'*** ಎಂಬ ಇನ್ನೊಂದು ಉಚ್ಚಾರ ರೂಪವಾಗಿದ್ದರೆ ನಿಸರ್ಗವಾಚಿಯಾಗಿ 'ಹನುಮಿಡಿ' ಶಬ್ದದ ಮೂಲವನ್ನು ಸೂಚಿಸಬಹುದೆನಿಸುತ್ತದೆ. *೪ ಈ ಹಿನ್ನೆಲೆಯಲ್ಲಿ ಈವರೆಗೆ ಕೇವಲ ಹಲ್ಮಿಡಿ ಶಾಸನ ಪಾಠದ ಬಗ್ಗೆ ವಿಪುಲವಾಗಿ ಚರ್ಚೆಯಾಗುತ್ತಿರುವುದು ಕಾಣಬರುವಲ್ಲಿ, ಸದ್ಯ ಅಲ್ಲಿನ ಸಾಂಸ್ಕೃತಿಕ ವೈಶಿಷ್ಟ್ಯಗಳು ಹಾಗೂ ಈವರೆವಿಗೂ ಅರ್ಥವನ್ನು ಸ್ಫುಟವಾಗಿ ಬಿಟ್ಟುಕೊಟ್ಟಿಲ್ಲದಿರುವ ಆ ಶಾಸನದಲ್ಲಿನ ಶಬ್ದಗಳನ್ನು ಪರಿಶೀಲಿಸುವ ಅಗತ್ಯವಿದೆ. ಜೊತೆಗೆ ಹಲ್ಮಿಡಿಯ ಸುತ್ತಲ ಗ್ರಾಮಗಳು ಹಾಗೂ ನೆಲೆಗಳು, ಸಿರಗಟ್ಟ, ಸೂರನಹಳ್ಳಿ, ಭೈರಾಪುರ, ಹಾರದವಳ್ಳಿ, ಮುಗುಳವಳ್ಳಿ, ಯಮಸಂದಿ, ರಾಜನಕಟ್ಟೆ, ರಾಯಲಒಡ್ಡು, ರಾಜನಗದ್ದೆ ಇತ್ಯಾದಿಗಳು ಹಾಗೂ ಯಗಚಿ ನದಿಯ ಪೂರ್ವ ಬದಿಗೆ ಕುರುಬ ಜನಾಂಗದವರು ಪೂರ್ಣ ಸಂಖ್ಯೆಯಲ್ಲಿರುವ, ದೇಗುಲಾಪುರ, ಕುಳಾರಹಳ್ಳಿ, ಹೊಸಕೋಟೆ, ಮಣೇನಹಳ್ಳಿ, ಹರಿಹರದಹಳ್ಳಿ ಬೀರೇದೇವರಹಳ್ಳಿ, ಕುರುಬರಹಳ್ಳಿ, ಬ್ರಾಹ್ಮಣರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದ 'ರಾಯಲಒಡ್ಡು'ವಿಗೆ ಸಮೀಪದ ಅಂಬಳೆ ಗ್ರಾಮ, ರಾಜನಗದ್ದೆ ಹಾಗೂ ಹೆಜ್ಜೆಗಾನಹಳ್ಳಿ ನಡುವೆ ವಿಪುಲವಾಗಿ ಬ್ರಾಹ್ಮಣರಿಗೆ ಇದ್ದ ತಲತಲಾಂತರದ ಜಮೀನು, ರಾಜವೇಶ್ಯೆ ಕಟ್ಟಿಸಿದ ಹೆಜ್ಜೆಗಾನ ಹಳ್ಳಿಕೆರೆ,

* ೧೭೫, ೭ನೇ ಅಡ್ಡರಸ್ತೆ, ಶ್ರೀರಾಮನಗರ, ಮಹಾಲಕ್ಷ್ಮೀಪುರಂ, ಬೆಂಗಳೂರು ೫೬೦ ೦೮೬

ಹಳ್ಳಿಹಾಳೂರು ಇವೆಲ್ಲ ಹಲ್ಮಿಡಿ ಶಾಸನದ ಸಾಂಸ್ಕೃತಿಕ ಸಂಗತಿಗಳಿಗೆ ಅನುಗುಣವಾದ ಹೆಸರು ಹಾಗೂ ಪರಿಸರವನ್ನು ಹೊಂದಿರುವಂತಹುವಾಗಿವೆ. ಇಂದಿನ ಹನುಮಿಡಿಯ ಸಾಂಸ್ಕೃತಿಕ ಆಚರಣೆಗಳು ಈ ನೆಲೆಗಳ ಹಾಗೂ ಶಾಸನದ ಕೆಲವು ಪಾರಿಭಾಷಿಕ ಶಬ್ದಗಳ ಮೂಲದತ್ತ ಸೂಚನೆಗಳನ್ನು ನೀಡುವಂತಿವೆ.

**ಹಲ್ಮಿಡಿಯ ಶಿಲ್ಪಗಳು :** ಊರಿನ ಉತ್ತರ ಭಾಗಕ್ಕಿರುವ ಈಶ್ವರ ಗುಡಿಯಲ್ಲಿ ಸುಮಾರು ೧೧ನೇ ಶತಮಾನದ್ದೆನ್ನಬಹುದಾದ, ಬ್ರಹ್ಮ ವಿಷ್ಣು ರುದ್ರಾಂಶಗಳ ಅನುಕ್ರಮ ಹೆಚ್ಚಳದ ಉತ್ಸೇಧವುಳ್ಳ ವರ್ಧಮಾನ ಶಿವಲಿಂಗ, ನಂದಿ, ಗಣೇಶ ವಿಗ್ರಹಗಳಿವೆ. ಜೊತೆಗೆ ಈ ಗುಡಿಯ ಎಡಕ್ಕಿದ್ದ- ಈಗ ಮೆದೆ ರಾಶಿ ಹಾಕಿದ ಜಾಗ- ಪ್ರಾಚೀನ ರಾಮೇಶ್ವರ (ರಾಮ ಲಿಂಗೇಶ್ವರ) ಗುಡಿಯು ಇಂದು ತಳ ಕಚ್ಚಿದೆ. ಅದರಲ್ಲಿದ್ದ ನೀಳಶಿವಲಿಂಗವನ್ನು ಈ ಗುಡಿಯ ಸುಖನಾಸಿಯಲ್ಲಿ (ಅಂತರಾಳ) ವೇದಿಕೆಯ ಮೇಲೆ ಇಡಲಾಗಿದೆ. ಈ ಶಿವಲಿಂಗದ ತಳಕ್ಕೆ ಪಾಣಿವಟ್ಟವಿಲ್ಲ. ಬದಲು ೯ ಅಂಗುಲ ಚೌಕಘನ ಬ್ರಹ್ಮಕಾಂತ ರೂಪದ ಭಾಗವಿದ್ದು ಅದರ ಮೇಲೆ ಕಡೆದ ಸುಮಾರು ೮ ಅಂಗುಲ ವ್ಯಾಸದ ೧½ ಅಡಿ ಉದ್ದದ ನೀಳ ರುದ್ರಭಾಗ (ನಾಳರೂಪಿ) ಮಾತ್ರವಿರುವ ತ್ರಪುಸಾಕಾರದ ಶಿರರೂಪದ ಸ್ತಂಭ ಶಿವಲಿಂಗವದಾಗಿದೆ. ಈ ರುದ್ರಭಾಗದ ಮಧ್ಯಕ್ಕೆ (ಯೋನಿ!) ಆನೆಕಣ್ಣಿನ ಚಿಹ್ನೆಯೂ ಇದೆ. ನೆತ್ತಿಯ ಮೇಲೆ ೩ ಗೆರೆಗಳು ತಗ್ಗುಗಳಲ್ಲಿರುವಂತಿವೆ. ಈ ಬಗೆ ಬಹಳ ಪ್ರಾಚೀನವಾದ ರೂಪ.

*ಪ್ರಾಚೀನ ಶಿವಲಿಂಗಗಳು ಕೇವಲ ಕಂಬ ರೂಪದ ಬರಿಯ ನಾಳಗಳಂತಿರುತ್ತವೆ. ಶಿವನನ್ನು ಹಲವಾರು ಶಿವಕ್ಷೇತ್ರಗಳಲ್ಲಿ- ತಿರುವಣ್ಣಾಮಲೈ, ತಿರುಕ್ಕನೂರ್ - ಅಗ್ನಿಸ್ತಂಭನೆಂದೇ ಪರಿಗಣಿಸಿದೆ. ಅಥರ್ವೇದದಲ್ಲಿ ವೈದಿಕ ಸ್ಕಂಭವನ್ನು ಲಿಂಗದ ಹಿನ್ನೆಲೆಯಲ್ಲಿ ಕಾಣಬಹುದು . ಸೈಂಧವ ಸಂಸ್ಕೃತಿಯ (ಪಶುಪತಿ ಶಿವನ ರೂಪ!) ಉರ್ಧ್ವಲಿಂಗ, ಕ್ರಿ. ಪೂ. ೨ನೆಯ ಶತಮಾನದ ಗುಡಿಮಲ್ಲದ ಲಿಂಗ (ಪರಶುರಾಮೇಶ್ವರ), ಕ್ರಿ. ಶ. ೨ನೇ ಶತಮಾನದ ಮಧುರೆಯ ಭಾರಲಿಂಗಶಿವ, ಕ್ರಿ.ಶ. ೨ನೇ ಶ. ದ. ಮಾಮಲ್ಲಪುರದ ತ್ರಿಮೂರ್ತಿ ಗುಹೆಯ ಶಿವಲಿಂಗ ಪಾಣಿವಟ್ಟವಿಲ್ಲದ ಲಿಂಗಗಳಾಗಿವೆ. *೫ ನಾಗವಂಶೀಯರಾದ ಭಾರಶಿವರು ಇಂತಹ ಲಿಂಗಗಳನ್ನು ಹೊತ್ತು ತಿರುಗುತ್ತಿದ್ದರು. ಲಿಂಗದ ವಿಧಗಳಲ್ಲಿ ಪಾಶುಪತಲಿಂಗವೂ ಇದೆ. *೬ ಲಿಂಗದ ಚಿಹ್ನೆಯಲ್ಲಿ ಆನೆಕಣ್ಣಿನಾಕಾರವಿದ್ದರೆ ಅದು ಕ್ಷತ್ರಿಯರಿಗೆ ವೃದ್ಧಿಪ್ರದ. *೭ ಶಿಶ್ನರೂಪದ ಶಿಲೆಯನ್ನೂ, ಸ್ತ್ರೀಚಿಹ್ನದ ಭಾವನೆಯಿಂದ ಸಾಲಿಗ್ರಾಮುವನ್ನೂ ಭಾರತದ ಆದಿವಾಸಿಗಳಲ್ಲಿ ಕೆಲವರು ಪೂಜಿಸುತ್ತಿದ್ದುದು ಶಾಕ್ತೇಯ ಸಂಪ್ರದಾಯವೇ ಹೊರತು ದಕ್ಷಿಣ ದೇಶದ ಶೈವವೈಷ್ಣವಸಂಪ್ರದಾಯವಲ್ಲ. *೮ ಕ್ರಿ.ಶ. ೨ನೇ ಶತಮಾನದ ಲಕುಲೀಶ ಶಿವನ ಮೂರ್ತಿಗಳು ಕುಷಾಣ ಹುವಿಷ್ಕನ ನಾಣ್ಯಗಳಲ್ಲಿ ಕಾಣಬರುತ್ತವೆ. *೯ ಪ್ರಾಚೀನ ಶೈವಸಂಪ್ರದಾಯವಾದ ಪಾಶುಪತವು ಕುಷಾಣ ರಾಜರಲ್ಲಿ ತುಂಬ ಬಳಕೆಯಲ್ಲಿತ್ತು. *೧೦ ನೇರಸ್ತಂಭಲಿಂಗ ಲಕ್ಷಣಗಳಿರುವ ಊರ್ಧ್ವಲಿಂಗ ಸ್ವರೂಪವು ಕುಷಾಣರ ಅವಧಿಯಲ್ಲೂ ಇತ್ತು. *೧೧ ವಿಮಕಥಫೀಸ (wemakada phises) ಎಂಬ ಪ್ರಸಿದ್ಧ ಕುಷಾಣ ಚಕ್ರವರ್ತಿಯು ಶಿವಭಕ್ತನಾಗಿದ್ದ. ಅವನ ಚಿನ್ನ ಹಾಗು ತಾಮ್ರದ ನಾಣ್ಯಗಳಲ್ಲಿ ಶಿವನ ಚಿಹ್ನೆ ಇದ್ದು ಜೊತೆಗೆ ಖರೋಷ್ಠಿ ಲಿಪಿಯಲ್ಲಿ ಮಾಹೇಶ್ವರ ಎಂಬ ಆಲೇಖ್ಯವೂ ಕಾಣಬರುತ್ತದೆ. *೧೨ ಈ ಹಿನ್ನೆಲೆಯಲ್ಲಿ ಡಾ॥ ಶ್ರೀ ಜಚನಿ ಅವರು ಬಹುಶಃ ಸೈಂಧವ ಸಂಸ್ಕೃತಿಯ ಊರ್ಧ್ವಲಿಂಗಗಳನ್ನು ಗಮನದಲ್ಲಿರಿಸಿಕೊಂಡು ರುದ್ರಪಶುಪತಿಯೆ ಪಶುಪತಿಮತ (ಪಾಶುಪತ) ಸ್ಥಾಪಕನೆಂದಿರುವುದು *೧೩ ಗಮನಾರ್ಹ. ಪಾಶುಪತ ಸೂತ್ರದ ಕೌಂಡಿನ್ಯ ಭಾಷ್ಯದಲ್ಲಿ ಪಾಶುಪತ ಯೋಗ ಚಿಹ್ನೆಯುಳ್ಳವರು ಲಿಂಗಧಾರಿಗಳೆಂದೂ ಅದು ಶಾಸನೋಕ್ತವಾಗಿ ಕಾಳಾಮುಖ ಶೈವರಿಗೂ ಅನ್ವಯವೆಂದಿದೆ. *೧೪ ಅಂತೇ ಕ್ರಿ.ಶ. ೧೦೭೯ರ ದೇವೂರ ಶಾಸನದಲ್ಲಿ ಸುಗ್ಗಲದೇವಿಯು 'ಪಾಸುಪತಯೋಗಾ ಚಾರ್ಯ ಶ್ರೀಮದ್ಬ್ರಹ್ಮರಾಸಿ ಪಂಡಿತರ್ಗೆ' ದತ್ತಿನೀಡಿದ ವಿವರ ಗಮನಾರ್ಹವಾಗುತ್ತದೆ. ಇನ್ನು ದೇವರ ದಾಸಿಮಯ್ಯನ ಆರಾಧ್ಯ ದೈವ ರಾಮನಾಥನಾಗಿದ್ದು, ಲಕುಲೀಶ ಪರಂಪರೆಯ ಪ್ರಸಿದ್ಧಗುರು ಮಲೆಯಾಳ ಪಂಡಿತನ (ದಕ್ಷಿಣದ ಮುದಿನೀರ(ಸಮುದ್ರ) ರಾಮೇಶ್ವರತೀರ್ಥದ ಮಲೆಯಾಳ ಗುರುಗಳ ಸಂತಾನ) ಮುದಿನೀರ ತೀರ್ಥದ ರಾಮೇಶ್ವರನೆ ಆಗಿದ್ದಾನೆ. *೧೫ ಇದು ಲಕುಲೀಶ ಪಾಶುಪತ ಧರ್ಮವು, ಅಭಿನವ ಪಾಶುಪತ ಎಳಮೇಲ ಸಿಂಹಪರ್ಷೆಯತ್ತ ವಿಕಾಸಗೊಂಡು 'ರಾಮೇಶ್ವರ' ಎಂಬ ಹೆಸರಿನಿಂದ ತನ್ನ ಆರಾಧ್ಯದೈವವನ್ನು ೧೦-೧೧ನೇ ಶತಮಾನಗಳಲ್ಲಿ ಗುರುತಿಸಿಕೊಂಡಿರುವಂತಿದೆ.* ಪ್ರಸ್ತುತ ಹಲ್ಮಿಡಿಯ ನೀಳಸ್ತಂಭ ಶಿವಲಿಂಗದ ಛಾಯಾಚಿತ್ರವನ್ನು ಡಾ॥ಅ. ಸುಂದರ ಅವರಿಗೆ ತೋರಿಸಿದಾಗ, ಈ ಶಿವಲಿಂಗವು ಪ್ರಾಚೀನ ಶಿವಲಿಂಗವಾಗಿದ್ದು ಕ್ರಿ.ಶ. ೨-೫ನೇ ಶತಮಾನದ ಅವಧಿಗೆ ಸೇರುವುದೆಂಬ ಅಭಿಪ್ರಾಯವನ್ನು ಸೂಚಿಸಿದರು.

ಈ ಹಿನ್ನೆಲೆಗಳಿಂದ ಪ್ರಸ್ತುತ ಶಿವಲಿಂಗವು ಹಲ್ಮಿಡಿಯಲ್ಲಿ ಶಾತವಾಹನರಿಂದಲೋ ಅಥವಾ ಕದಂಬರ ಕಾಲದಲ್ಲಿಯೋ ಪಾಶುಪತ ಲಿಂಗವಾಗಿ ಪ್ರತಿಷ್ಠಾಪನೆಗೊಂಡು ಹಲ್ಮಿಡಿಯು ಪಾಶುಪತ ಕ್ಷೇತ್ರವಾಗಿ ರೂಪುಗೊಂಡಿರಬೇಕು. ಅಂದರೆ ಕದಂಬರೂ ಪಾಶುಪತವನ್ನು ಅನುಸರಿಸಿರಬಹುದೆಂಬ ಸೂಚನೆ ಒದಗುತ್ತದೆ. ತಾಳಗುಂದ ಶಾಸನದಲ್ಲಿ ಬರುವ **ಸನಾತನಃ ಸ್ಥಾಣು** ಎನ್ನುವಲ್ಲಿ ಸ್ಥಾಣು, ಎಂಬುದಕ್ಕೆ ಅಚಲ, ಸ್ಥಿರನಾದವ, ಎಂಬರ್ಥವಲ್ಲದೆ 'ಸ್ತಂಭಲಿಂಗ' ಎಂಬ ಅರ್ಥದ ಧ್ವನಿಯೂ ಇದೆ. ಅಂತಾಗಿ ಅಲ್ಲಿ ಸಾತಕರ್ಣಿ ಶಾತವಾಹನರು ಪಾಶುಪತಲಿಂಗವನ್ನು ಆರಾಧಿಸಿರಬೇಕು. (ಇಂದು ತಾಳಗುಂದದಲ್ಲಿರುವ ಶಿವಲಿಂಗವು ಜೀರ್ಣೋದ್ಧಾರ ಕಾಲದಲ್ಲಿ ಪ್ರತಿಷ್ಠಿತವೆಂಬ ಅಭಿಪ್ರಾಯವೂ ಇದೆ).

ಅದು ಕದಂಬರ ನೆಲೆಗಳಿಗೂ ಅನ್ವಯವೆ. ಇನ್ನು ಸುಮಾರು ೧೧ನೇ ಶತಮಾನದ ವೇಳೆಗೆ ಈ ಶಿವಗುಡಿಯು ಜೀರ್ಣೋದ್ಧಾರಗೊಂಡು, ಅಂದಿನ ಪ್ರಾಚಲಿತ್ಯಕ್ಕನುಗುಣವಾಗಿ 'ರಾಮೇಶ್ವರ' ಎಂಬ ಹೆಸರನ್ನು ಪಡೆದಿರಬೇಕು. ಆದರೆ ಮುಂದೆ ಯುದ್ಧಗಳ ಕಾರಣವೋ ಏನೋ, ಅನಾದರ ಹಾಗು ನಾಶಕ್ಕೀಡಾದ ಗುಡಿಯು ತಳಕಚ್ಚುವಲ್ಲಿ ಜನತೆ ಈಶ್ವರನ ಗುಡಿಯ ಸುಖನಾಸಿಯಲ್ಲಿ ಆ ಲಿಂಗವನ್ನು ತಂದು ನೆಟ್ಟಿರಬೇಕು. ಬಹುಶಃ ಅದು ಸ್ವಯಂಭೂ ಲಿಂಗವೆನಿಸಿ ಅದನ್ನು ಜನತೆ ಕಾಪಾಡಲು ಕಾರಣವಿರಬೇಕು.



ಗಣಪತಿ, ಈಶ್ವರ, ನೀಳರಾಮೇಶ್ವಲಿಂಗ, ಈಶ್ವರ ದೇಗುಲ

ಇಲ್ಲಿನ ಚತುರ್ಭುಜ ಆಸೀನ ಗಣಪತಿ ಚಪ್ಪಟೆ ಮುಖದವ. ಹೊಟ್ಟೆಯ ನಾಗಬಂಧ ಭಿನ್ನವಾಗಿದೆ. ಈ ಎಡಮುರಿ ಗಣಪತಿಯ ಎಡಹಿಂಗೈಯಲ್ಲಿ ಖಟ್ವಾಂಗದಂತೆ ಕಾಣುವ ಆಯುಧ ಧಾರಣವಿರುವುದು ವಿಶೇಷ. ಬಹಳ ಪ್ರಾಚೀನ ಶೈಲಿಯ ಗಣಪತಿ ಇದಾಗಿದ್ದು ಶಾಕ್ತಪಂಥದ ಪ್ರಭಾವವನ್ನು ತೋರುವಂತಿದೆ. ದ್ವಯನಾಗ ಶಿಲ್ಪಗಳೂ ಇಲ್ಲಿವೆ.

ದೇಗುಲದ ನವರಂಗಭಾಗದ ಸ್ತಂಭಗಳೂ ಶಿಥಿಲ ಮೈಗಳಿಂದ ಕೂಡಿವೆ. ಭಿತ್ತಿಗಳಲ್ಲಿ ಇದ್ದ ಜಾಲಂಧ್ರಗಳು ಕಳಚಿ ಬಿದ್ದಿವೆ. ಸುಂದರಶೈಲಿಯ ಭುವನೇಶ್ವರಿಯೂ ಕೆಳಗೆ ಬಿದ್ದಿದೆ. ಇಲ್ಲಿನ ಶಾಸನೋಕ್ತ ವೀರಗಲ್ಲುಗಳು ೧೩ನೇ ಶತಮಾನದ ಹೊಯ್ಸಳರ ಕಾಲದ್ದಾಗಿವೆ. ಗಮನಾರ್ಹವಾದ ಭಿನ್ನಗೊಂಡಿರುವ ನಾಲ್ಕು ಹೆಡೆಯ ಹಾಗೂ ಮೂರು ಹೆಡೆಯ ದ್ವಯನಾಗಗಳ (ನಾಗದಂಪತಿ!) ಉಬ್ಬು ಶಿಲ್ಪವಿದ್ದು ಅವುಗಳ ಮೇಲೆ ಬಹುಶಃ ಒತ್ತಾದ ಮುಕ್ಕೊಡೆಯ ಶಿಲ್ಪದಂತಹ ರಚನೆ ಇದೆ. ಇವು ಜಿನಧರ್ಮಿ ಸಂಕೇತವೆಂದರೆ ಪಾರ್ಶ್ವನಾಥ ಹಾಗೂ ಸುಪಾರ್ಶ್ವನಾಥ ತೀರ್ಥಂಕರರ ಸಂಕ್ಷಿಪ್ತ ನಾಗಾತಪತ್ರ ಸೂಚನೆಯಾಗಿ ಮುಕ್ಕೊಡೆ, ಮಹಾವೀರ ಅಥವಾ ಆದಿನಾಥನ ಸಂಕೇತವೆನಿಸಬಹುದು. ಅಥವಾ ಪಾರ್ಶ್ವನಾಥ ತೀರ್ಥಂಕರರ ಶಾಸನ ದೇವತೆಗಳಾದ ಧರಣೇಂದ್ರ - ಪದ್ಮಾವತಿಯರ ಸಂಕೇತವಾಗಿ ಈ ನಾಗಜೋಡಿ (ದಂಪತಿ ನಾಗಶಿಲ್ಪ)ಗಳಿರಬಹುದು. ಹೀಗೆ ಸಂಕೇತಾತ್ಮಕವಾಗಿ ರೂಪುಗೊಂಡಿರುವ ಶಿಲ್ಪವು ಹೊಯ್ಸಳರ ಕಾಲದ್ದೆಂದು ತೋರುತ್ತದೆ. ಜೊತೆಗೆ ಬ್ರಹ್ಮದೇವರ ಕಟ್ಟೆ ಹಾಗೂ ಬ್ರಹ್ಮದೇವರ ಕಲ್ಲು (ವೀರ ಮಾಸ್ತಿಗಲ್ಲೊಂದು ಇರುವ ನೆಲೆ)ಎಂಬ ನೆಲೆಗಳ ಅಸ್ತಿತ್ವ ಇಲ್ಲಿನ ಗ್ರಾಮೀಣರ ಬಾಯ್ದೆರೆಯಲ್ಲಿದೆ. ಅಂತಾಗಿ ಜೈನಧರ್ಮವೂ ಕೆಲಕಾಲ ಇಲ್ಲಿ ಪ್ರಚಲಿತವಾಗಿದ್ದುದರ ಸೂಚನೆ ಈ ಶಿಲ್ಪಗಳಿಂದ ಒದಗುತ್ತದೆ. ಇದು ಆದಿ ಕದಂಬರ ಕಾಲದಿಂದ ಹಲ್ಮಿಡಿಯಲ್ಲಿನ ಧರ್ಮಸಮನ್ವಯದ ಸಂಕೇತವೂ ಇರಬಹುದು.

ಸುಂದರವಾದ ಅನುಕ್ರಮವಾಗಿ ಕಿರಿದಾಗುತ್ತಬರುವ ಏರು ವೃತ್ತಗಳ ಸುತ್ತುವರಿ ಮಣಿ ಮಕುಟದ ಎದೆಮಟ್ಟದಷ್ಟು ಮಾತ್ರ ಉಳಿದು ಭಿನ್ನಗೊಂಡಿರುವ ಮುಂಡವಿರುವ ದ್ವಿಭುಜೆ ಸ್ತ್ರೀ ಶಿಲ್ಪವೊಂದಿಲ್ಲಿದೆ. ನೀಳ ಕರ್ಣಪತ್ರಕುಂಡಲ, ದ್ವಯ ಕಂಠೀಹಾರ, ವಕ್ಷಪದಕ ನೀಳಸರವಿರುವ ತುಂಬಿದ ಎದೆಯ ಈ ಶಿಲ್ಪ ತುಂಬ ಮನೋಹರವಾಗಿದೆ. ಮೊಗ ಸವೆದಿದ್ದರೂ ಅದರ ಪ್ರಸನ್ನತಾಭಾವಕ್ಕೆ ಕುಂದಿಲ್ಲ. ಶಿರದ ಎಡಬದಿಯಲ್ಲಿ ಭುಜಕ್ಕೆ ಆನಿಸಿದಂತಿರುವ ಇಳಿಚಾಚು, ಕೇಶದ ಬಿತ್ತರವೆ ಅಥವಾ ಪ್ರಭಾವಳಿಗಂಟಿದ ಭಾಗವೆ ಎಂಬುದು ಸ್ಪಷ್ಟವಿಲ್ಲ. ಕೇಶಪಾಶವಿರಬಹುದೆಂದರೆ, ಶಾಕ್ತತಾಂತ್ರಿಕ ಸಂಪ್ರದಾಯದ ಕಾತ್ಯಾಯಿನಿ ಪ್ರತಿಮೆಯ ಪ್ರಸನ್ನಭಾವವನ್ನು ಹೊಂದಿರುವ ಒಂದು ಭಂಗಿಯೆ ಇದರದು ಎನಿಸುತ್ತದೆ! ಕಾರಣ

ಯಗಚಿ ನದಿಯ ಇನ್ನೊಂದು ದಂಡೆಗಿರುವ ಹಲ್ಮಿಡಿಗೆ ಅಷ್ಟೇನೂ ದೂರವಲ್ಲದ ಯಮಸಂದಿ ಗ್ರಾಮದಲ್ಲಿನ ದ್ವಿಭುಜೆ ದೇವೀರಮ್ಮನ ಶಿಲ್ಪವನ್ನು ಒರಿಸ್ಸಾದ ಕಾತ್ಯಾಯಿನಿ ಪ್ರತಿಮೆಗೆ ಹೋಲಿಸಲಾಗಿದೆ. *೧೬ ಆದರೆ ತಾಂತ್ರಿಕ ಬೌದ್ಧ ಸಂಪ್ರದಾಯವು ಹುಟ್ಟಿದ್ದು, ಬುದ್ಧನ ಕಾಲದಲ್ಲಿಯೆ ಎಂದು ಬೌದ್ಧಸಿದ್ಧ ಪಂಥದವರ ನಂಬಿಕೆಯಾಗಿದೆ. *೧೭ ಅಲ್ಲದೆ ಈ ಶಿಲ್ಪ ವಜ್ರಯಾನದ ತಾಂತ್ರಿಕ ದೇವತೆಗಳಂತೆ ಉಗ್ರವಾಗಿಲ್ಲ. ಬಹುಶಃ ಬೌದ್ಧ ಅಥವಾ ಜೈನ ಪ್ರಭಾವದ ನಡುವೆ ಹಿಂದೂ ಶೈಲಿಯನ್ನು ಆಳವಡಿಸಿಕೊಂಡಿರುವ ಶಿಲ್ಪವಿದೆನ್ನಿಸುತ್ತದೆ. ಗಾಂಧಾರಶೈಲಿಯ ಬೋಧಿಸತ್ವನ ಶಿರೋವೇಷ (ಶಿರೋಧಾರಣೆ)ವನ್ನು ಗಮನಿಸಿದರೆ ಗುಂಗುರು ಕೇಶದ ಮಣಿರೂಪ*೧೮ ಕಾಣಬರುತ್ತದೆ. ಬಾರಹುತ್‌ನ ಸ್ತ್ರೀ ಶಿಲ್ಪಗಳಲ್ಲಿನ ಶಿರೋವೇಷಗಳ ಮಣಿರೂಪದ ಅಲಂಕಾರವನ್ನು*೧೯ ಸದ್ಯ ಹಲ್ಮಿಡಿಯ ಸ್ತ್ರೀ ಶಿಲ್ಪವು ಹೋಲುತ್ತದೆ. ಗುಪ್ತರ ಕಾಲದ ಹಳೆಯ ಸಪ್ತಮಾತೃಕೆಯರ ಶಿಲ್ಪ ಕಲ್ಪನೆಯಲ್ಲಿ, ಇಂದ್ರಾಣಿಯ ಶಿರೋವೇಷದಲ್ಲಿಯೂ ಮಣಿಗಳ ಸುತ್ತುವರಿಯ ಏರು ಕಿರಿದಾಗುವ ಮಕುಟವಿದೆ. *೨೦ ಕುಶಾನರ ಕಾಲದಲ್ಲಿ ಬಹಳಷ್ಟು ಇಂತಹ ಮಾತೃಕಾಶಿಲ್ಪಗಳು ಲಭ್ಯ. ಮಥುರೆಯ ೫ನೇ ಶ.ದ ಬುದ್ಧನ ಶಿಲ್ಪಗಳ ಶಿರೋವೇಷವು ಗುಂಗುರು ಕೇಶದ ಮಣಿಸುತ್ತು ವರಿಯಂತಿದ್ದು ಮಕುಟ ಶೈಲಿಯನ್ನು ಸ್ಫುರಿಸುತ್ತವೆ. ಈ ಹಿನ್ನೆಲೆಗಳಲ್ಲಿ ಪ್ರಸ್ತುತ ಸ್ತ್ರೀ ಶಿಲ್ಪದ ಕಾಲವು ಸುಮಾರು ೫ನೇ ಶತಮಾನವೆನ್ನಬಹುದು. ಇದು ರಾಮೇಶ್ವರನ ಶಕ್ತಿ, ಪಾರ್ವತಿಯೆ ಎಂಬುದು ಸ್ಪಷ್ಟವಿಲ್ಲ.



ಮಕುಟ ಸ್ತ್ರೀಶಿಲ್ಪ, ಹಯ-ಗಜಲಕ್ಷ್ಮಿ, ಸ್ಥಾನಕಶಿಲ್ಪ, ಶಿರಸ್ತಮ್ಮ, ನಾಗದಂಪತಿ ಮುಕ್ಕೊಡೆ ಶಿಲ್ಪ

ಪೀಠ ಶಿಲ್ಪವೊಂದು ಭಿನ್ನಗೊಂಡ ಸ್ಥಾನಕಮೂರ್ತಿಯ ಸಮಭಂಗದ ಜೋಡಿಪಾದ ಭಾಗಗಳನ್ನು ಮಾತ್ರ ಹೊಂದಿದೆ; ಮುಂಬದಿಯಲ್ಲಿ ಅಭಿಷೇಕ ಭಂಗಿಯಲ್ಲಿಲ್ಲದ ಐದು ಹಯಗಳು, ನಾಲ್ಕು ಗಜಗಳ ನಡುವೆ ಕಮಲದ ಮೊಗ್ಗುಗಳನ್ನು ಎತ್ತಿ ಹಿಡಿದ ಭಂಗಿಯ ಹಯ-ಗಜಲಕ್ಷ್ಮಿಯ ಉಬ್ಬು ಶಿಲ್ಪವನ್ನು ಹೊಂದಿದೆ. ಅದು ಪಾದಗಳನ್ನು ಅಭಿಮುಖವಾಗಿಟ್ಟುಕೊಂಡು, ಯೋನಿ ಭಾಗವನ್ನು ವಿಸ್ತಾರಗೊಂಡಂತಿರಿಸಿಕೊಂಡಿರುವ ಭಂಗಿಯಿಂದ ಬಹುಶಃ(ಬತ್ತಲೆ ಗೌರಿ-ಬಾದುಬ್ಬೆ)ಲಜ್ಜಾಗೌರಿಯ ವಿಶಿಷ್ಟ ರೂಪದ ಶಿಲ್ಪವದಾಗಿರಬಹುದೆನಿಸುತ್ತದೆ. ಮತ್ತೆ ಪೀಠದ ಮೇಲೆ ಪಾದಗಳಿರುವ ಕಾರಣ, ಈ ಗೌರಿ ಶಿಲ್ಪಕ್ಕನುಗುಣವಾದ ಸ್ತ್ರೀ ಶಿಲ್ಪವೊಂದರ ಸ್ಥಾನಕಮೂರ್ತಿ ಅದಾಗಿರಬೇಕು. ಅದು ಸ್ಥಾನಕ 'ಬನಶಂಕರಿಯ' 'ರೂಪವಾಗಿದ್ದು, ಸಾಂಕೇತಿಕವಾಗಿ ಪೀಠ ಮುಖದಲ್ಲಿ ಲಜ್ಜಾಗೌರಿಯನ್ನು ಕಂಡರಿಸಿರುವಂತಿದೆ. ಜೊತೆಗೆ ಹಲ್ಮಿಡಿಯಲ್ಲಿ ಬನದಮ್ಮನ ಹಬ್ಬದ ವೈವಿಧ್ಯದ ಆಚರಣೆಗಳೂ ಕಾಣಬರುವುದೂ ಗಮನಾರ್ಹ. ಇನ್ನು 'ಶಾಕಂಬರಿ ಮಹಾತ್ಮೆ'ಯ ೯ ಲಿಂಗಗಳ ವಿಷಯ, ಮಂಗಲೀಸನ ಬಾದಾಮಿ ಶಾಸನದ 'ಲಂಜಿಗೇಸರ'ವು ಲಜ್ಜಾಗೌರೀಶ್ವರನೆನಿಸಿ ಗೌರಿ ಎಂಬ ಲಂಜಿಕಾ (=ಸೂಳೆ) ಸ್ಥಾಪಿತನಾಗಿರಬಹುದಾದ್ದು, ಹಾಗೂ ಆಲಂಪುರದ ನವಬ್ರಹ್ಮೇಶ್ವರ (ನವಲಿಂಗೇಶ್ವರ)ದ ಹಿನ್ನೆಲೆ, ಇವುಗಳನ್ನು ಗಮನಿಸಿ ಕಲಬುರ್ಗಿ ಅವರು ಲಜ್ಜಾಗೌರಿ ವಿಗ್ರಹ ೯ ಲಿಂಗಗಳ ಪರಿಸರದಲ್ಲಿರುವುದಕ್ಕೆ ವಿಶೇಷ ಅರ್ಥವಿರಬಹುದೆ? ಎಂಬ ಪ್ರಶ್ನೆ ಎತ್ತಿದ್ದಾರೆ. *೨೧ ಈ ಬಗೆ ಶಿಲ್ಪ ಸಂಬಂಧದಲ್ಲಿ ಕುಂಡಲಿನಿ-ಸಹಸ್ರಾರದ ತಾಂತ್ರಿಕ ಸೂಚನೆಯನ್ನು ಡಾ. ಅ.ಸುಂದರ ಆವರು ನೀಡಿದರೆ, ಫಲಶಕ್ತಿಯ ಸಂಕೇತವೆಂದು ಚಿದಾನಂದ ಮೂರ್ತಿಯವರೂ ಹೇಳುತ್ತಾರೆ. *೨೨ ಈ ಎರಡೂ ಅಂಶಗಳ ಸಂಯುಕ್ತತೆಯು ಮೇಲಿನ ಪ್ರಶ್ನೆಗೆ ಉತ್ತರವಾಗುವಂತಿದೆ. ಪಾಶುಪತಮತಕಾಲದಿಂದಲೂ ಇದ್ದ *೨೩ ಸರ್ವಾಂಗಲಿಂಗದ ೩ ಮುಖಗಳಲ್ಲಿನ ನವಲಿಂಗಾಕೃತಿಗಳ ತಾಂತ್ರಿಕ ಪರಿಕಲ್ಪನೆ ಹಾಗೂ ಲಿಂಗಕ್ಕೆ ಆಧಾರ ಲಿಂಗವೆ ಆಗಿ ಯೋಗಲಿಂಗ ವಿರುವುದು, ಇವುಗಳಲ್ಲಿ ಕುಂಡಲಿನಿಯಿಂದ ಸಹಸ್ರಾರಕ್ಕೇರುವಲ್ಲಿ ೯ ಅವಸ್ಥಾ ವಿಶೇಷಗಳು ತೋರಿಬರುವಂತಹವಾಗಿರಬೇಕು. *೨೪ ಇಲ್ಲಿ ಶ್ರೀ ಚಕ್ರದ ಶಿವ-ಶಕ್ತಿ ಸಂಯೋಗದ ಪ್ರತೀಕವೂ ಹದುಳಗೊಳ್ಳುತ್ತದೆ.

ಹೀಗಾಗಿ ನವಲಿಂಗಗಳು ಹಾಗೂ ಲಜ್ಜಾಗೌರಿಯ ಕುಂಡಲಿನಿ ಸಹಸ್ರಾರ ಸಂಬಂಧಗಳು ಹೊಂದಿಕೆಯಾಗಬಲ್ಲುವೆನಿಸುತ್ತದೆ. ಈ ದೃಷ್ಟಿಯಿಂದ ಪ್ರಸ್ತುತ ಪೀಠದ ಮುಖ ಶಿಲ್ಪದಲ್ಲಿ ಹಯ-ಗಜಗಳ ಒಟ್ಟು ಸಂಖ್ಯೆ ೯ ಇದ್ದು ಅವು ಹಯ-ಗಜಶಕ್ತಿ ಸೂಚಕವಾಗಿ ಕಮಲ ಹಿಡಿದ, ವಿಸ್ತರಿಸಿದ ಯೋನಿ ಭಂಗಿಯ ಶಿಲ್ಪವು ಲಜ್ಜಾಗೌರಿಯನ್ನು ಸಂಕೇತಿಸ ಬಹುದೆನಿಸುತ್ತದೆ. ಆದರೆ ಈ ಮೊದಲು ಹೇಳಿದ ಸುಂದರ ಮಕುಟ ಮುಡಿಯ ಸ್ತ್ರೀ ಶಿಲ್ಪದ ಪಾದಪೀಠವೇ ಇದೆಂದು, ನಿಖರವಾಗಿ ಸೊಂಟದಿಂದ ಕಾಲಿನ ಭಾಗದವರೆಗೂ ಇದ್ದ ಶಿಲ್ಪಭಾಗವು ಲಭ್ಯವಾಗುವವರಿಗೆ, ಹೇಳುವುದು ಕಷ್ಟ. ಇದು ಬೆತ್ತಲೆ ಭೈರವಿಯ ಶಿಲ್ಪವಾಗಿದ್ದಿರಲೂಬಹುದು.

ಇನ್ನೊಂದು ಸ್ಥಾನಕ ಸ್ತ್ರೀಶಿಲ್ಪದ ಭಾಗಗಳೆಲ್ಲ ತುಂಡಾಗಿದ್ದು, ಜೋಡಿಸಿಟ್ಟಾಗ ಪಾದಗಳು ಹಾಗೂ ಕೈಗಳಿಲ್ಲದ ಮುಂಡಭಾಗ ಮಾತ್ರ ಇದ್ದು ಹೊಕ್ಕಳವರೆಗೆ ಇಳಿಬಿದ್ದ ಸರ ಹಾಗೂ ಕಂಠಿಹಾರ ಇರುವ ಶಿಲ್ಪ ಕಾಣಬರುತ್ತದೆ. ಸೊಂಟದಿಂದ ಪಾದದವರೆಗೆ ಸೀರೆಯ ನೆರಿಗೆಯ ಮಡಿಚುಗಳಿದ್ದು ವಿಜಯನಗರ ಕಾಲದ ಸಾಮಾನ್ಯ ಶಿಲ್ಪದಂತೆ ಕಾಣುತ್ತದೆ.

ಆಂಜನೇಯನ ಗುಡಿಯಲ್ಲಿ ಅವನ ರೂಪದ ಕುರುಹು ಇರುವ ಭಿತ್ತಿಗೆ ನಾಮಗಳನ್ನು ಬಳಿದಿದ್ದಾರೆ. ಜೊತೆಗೆ ಅಲ್ಲಿ ಬಹಳ ಪ್ರಾಚೀನ ಹಾಗೂ ತೀರ ಸವೆದ ಶಿಲ್ಪವೊಂದಿದೆ. ಗ್ರಾಮೀಣರು ಇದನ್ನು 'ಶಿರಸ್ತಮ್ಮ' ಎಂದು ಕರೆದು ಪೂಜಿಸುತ್ತಾರೆ. ಸ್ತ್ರೀ ಶಿರವೆಂದರೆ ತಾರಾಭಗವತಿಯದಾಗಿರಬಹುದೇ ಎಂಬ ಅನುಮಾನವು ಅದರ ರೂಪದಿಂದ ಬಂದರೂ ಆ ಹಿನ್ನೆಲೆಯ ಇಲ್ಲಿನ ಕತೆ ಅಸ್ಪಷ್ಟವಿದೆ. ಈ ಶಿಲ್ಪವು ಭೈರವಿಯ ಶಿರವೆ? ರಾಮೇಶ್ವರ ಗುಡಿಯ ಪೀಠಪಾದಕ್ಕೆ ಸಂಬಂಧಿಸಿರಬಹುದೇ? ಎಂಬ ಪ್ರಶ್ನೆಯಂತು ಇದೆ. ಶಿರಶಿಲ್ಪ ಮಾತ್ರ ತೀರ ಪ್ರಾಚೀನವಿದ್ದು ಕ್ರಿ. ಶ. ೫ನೇ ಶತಮಾನದ ಪ್ರಾಚೀನತೆ ಹೊಂದಿರಬಹುದೆನಿಸುತ್ತದೆ. ಹಲ್ಮಿಡಿ-ಯಗಚಿ ನದಿ ಪೂರ್ವದಂಡೆಯಲ್ಲಿನ ಬೇಚರಾಕ್ ಗ್ರಾಮ ಸಿರಗಟ್ಟದ ಬಾರೆಯಲ್ಲಿ ಆಂಜನೇಯ ಗುಡಿ ಇದ್ದು ಊರಿಗೆ ಹೆಸರು ತಂದ ಅಲ್ಲಿದ್ದ ಈ ಶಿರವನ್ನು ಇಲ್ಲಿರಿಸಿರಬಹುದು.

ವೀರಭದ್ರನ ಗುಡಿಯಲ್ಲಿ, ಮುಂಬದಿ ಬಸವನ ಉಬ್ಬು ಶಿಲ್ಪವಿರುವ ಕೋನ ಮೂಲೆಗಳ ಸುಂದರ ಪಾಣಿವಟ್ಟದ ಮೇಲೆ ಹೊಯ್ಸಳ ಶೈಲಿಯ ಚುತುರ್ಭುಜ ಸಮಭಂಗ ಸ್ಥಾನಕ ವೀರಭದ್ರ ಮೂರ್ತಿ ಸುಮಾರು ೩½ ಅಡಿ ಎತ್ತರವಾಗಿದೆ. ಹಾವುಗೆ ಇಲ್ಲದ ಪಾದ ಗಗ್ಗರ, ಕಾಲ್ಕಂಕಣ, ದಕ್ಷ ಪ್ರಸೂತಿ ರಹಿತವಾದ ಪ್ರಭಾವಳಿ ಎಡ ಭುಜದಿಂದ ಮಂಡಿಯವರೆಗೆ ಇಳಿದು ಸೊಂಟದ ಕೇಂದ್ರಕ್ಕೆ ಏರಿ ತಾಗಿಕೊಂಡಿರುವ ವಿಶಿಷ್ಟ ಶೈಲಿಯ ರುಂಡಮಾಲೆ, ಸೊಂಟದ ಬಾಕು ಇವನಿಗಿದೆ. ಕಲಾತ್ಮಕವಾಗಿ ಬಿಡಾವಣೆಗೊಂಡಿರುವ ಅಗಲದ ಡಾಲು ಹಲಗೆಯ ಮೇಲೆ ಕಲಾತ್ಮಕವಾಗಿ ಎಡಮುಂಗೈ ಬೆರಳುಗಳನ್ನು ಬಿಡಿಸಿದೆ. ಬಲಮುಂಗೈ ಖಡ್ಗ, ಹಿಂಗೈಯಲ್ಲಿ ರುಂಡಮೊಗ ಹೊಂದಿ ಕೊಂಡಿರುವ ತ್ರಿಶೂಲ-ಖಟ್ವಾಂಗ, ಎಡ ಹಿಂಗೈಯಲ್ಲಿ ಡಮರು- ಖಟ್ವಾಂಗವಿದ್ದು, ಫಾಲನೇತ್ರದ, ಮೇಲೆ ಶಿವಲಿಂಗದ ಬಿಡಾವಣೆ ಇರುವ ಗಂಭೀರವದನದ ಈ ಮೂರ್ತಿ ಕರ್ನಾಟಕದ ವೀರಭದ್ರ ವಿಗ್ರಹಗಳಲ್ಲಿ ವಿಶಿಷ್ಟ ತೆರನಾಗಿದೆ. ಶಿಲಾಪ್ರಭಾವಳಿಗೆ ಹೊಂದಿಕೊಂಡಿರುವ ಈ ವಿಗ್ರಹವು ಹಿಂದೆ ಇದ್ದ ವೀರಭದ್ರಮೂರ್ತಿಯ ಹೊಯ್ಸಳ ಶೈಲಿಯ ರೂಪ ಪಡೆದು ಜೀರ್ಣೋದ್ಧಾರಗೊಂಡಂತಿದೆ. (ಶಿಂಗಟಾಲೂರು, ಹೊಸಪೇಟೆಯ ಕಣವಿ ವೀರಭದ್ರರಲ್ಲಿ ಹೀಗೆಯೆ ಹೊಯ್ಸಳ ಶೈಲಿಯ ಭಿನ್ನ ಶಿಲ್ಪಗಳ ಜೊತೆಗೆ ಜೀರ್ಣೋದ್ಧಾರಗೊಂಡ ಶಿಲ್ಪಗಳಿವೆ. ಹೊರಗೆ ಅಲ್ಲಿ ಭಿನ್ನಗೊಂಡ ಹಿಂದಿನ ಹೊಯ್ಸಳ ಶೈಲಿಯ ವೀರಭದ್ರ ವಿಗ್ರಹಗಳನ್ನು ರಕ್ಷಿಸಿಡಲಾಗಿದೆ.) ಈ ಶಿಲ್ಪದ ಲಕ್ಷಣಗಳು ಹಿಂದೆ ಇಲ್ಲಿ ಪಾಶುಪತ ಕ್ಷೇತ್ರವಿದ್ದ ಸೂಚನೆ ನೀಡುವಂತಿವೆ. ಅಲ್ಲದೆ ಕ್ರಿ.ಶ. ೮ನೆಯ ಶತಮಾನದಲ್ಲಿ ಬಾಣರ (ಮುಡಿಯನೂರು) ಶಾಸನದಲ್ಲಿ ವೀರಭದ್ರನ ಶೌರ್ಯದ ವರ್ಣನೆ ಇದೆ. ಬಾದಾಮಿಚಾಲುಕ್ಯರಲ್ಲಿ, ಚೋಳರಲ್ಲಿ, ಕಲ್ಯಾಣ ಚಾಲುಕ್ಯ ಹಾಗು ಹೊಯ್ಸಳರಲ್ಲಿ ನಂತರ ವಿಜಯನಗರಕಾಲದಲ್ಲಿ, ವೀರಭದ್ರಾರಾಧನೆ, ಶಿಲ್ಪಗಳ ಮೂಲಕವೂ ಎದ್ದು ಕಾಣುತ್ತದೆ. ವೀರಶೈವ ಪರಂಪರೆಯಲ್ಲಿ ಶ್ರೀ ಶೈಲಪೀಠ ಹಾಗು ಶ್ರೀ ರಂಭಾಪುರಿ ಪೀಠಗಳ ಜ|| ಗುರುಗಳು ೧೨ನೇ ಶ.ಕ್ಕೆ ಮುಂಚೆಯೆ ವೀರಭದ್ರಮೂರ್ತಿಗಳನ್ನು ತಮ್ಮ ಸಂಚಾರಕಾಲದಲ್ಲಿ ಪ್ರತಿಷ್ಠಿಸಿದರೆನ್ನಲಾಗಿದೆ. ಈ ಹಿನ್ನೆಲೆಗಳಲ್ಲಿ ಹಲ್ಮಿಡಿಯ ವೀರಭದ್ರ ಶಿಲ್ಪ ಗಮನಾರ್ಹ. ಈ ನೆರೆಯ ಗ್ರಾಮಗಳಲ್ಲೂ ವೀರಭದ್ರ ಶಿಲ್ಪಗಳು ಕುತೂಹಲಕಾರಿ ಆಗಿವೆ. ಹನುಮಿಡಿಯವರ ಹಿಂದಿನ ನೆಲೆ ಊರ ಹೊರಟ್ಟೆಯಲ್ಲಿತ್ತು. ಅಲ್ಲಿದ್ದ ಸಿದ್ದೇಶ್ವರ ದೇಗುಲವು ಈಗ ಶಿಥಿಲವಾಗಿದ್ದರೂ ವಾರಕ್ಕೊಂದು ದಿನ ಅಲ್ಲಿನ ಗದ್ದುಗೆ ರೀತಿಯ ರಚನೆಗೆ ಪೂಜೆ ಸಲ್ಲುತ್ತದೆ.

ವೀರಗಲ್ಲುಗಳು: ಈಶ್ವರನ ಗುಡಿಯ ಶಿಥಿಲ ನವರಂಗ ದಾವರಣದಲ್ಲಿರುವ ವೀರಶಾಸನಗಲ್ಲು ಕ್ರಿ. ಶ. ೧೨೭೭ ರದು. *೨೫ ಆನೆಕುದುರೆ ದಳದ ಮುಖಂಡ ಬೊಮಯ ಸಹಣಿಯ ಮಗ (ಬಹುಶಃ ತನ್ನ ಸ್ನೇಹಿತನ ಅಥವಾ ಬಂಧುವಿನ ಮರಣಕ್ಕಾಗಿ)ನು ಬೀರೆಯನ ಮಗ ದೊರೆಯನಿಗೆ ವೀರಗಲ್ಲು ಪ್ರತಿಷ್ಠೆಮಾಡಿದ ಸಂಗತಿ ಆ ಶಾಸನದಲ್ಲಿದೆ. ಅಂದರೆ ಹಲ್ಮಿಡಿಯು ಆನೆಕುದುರೆ ಸಾಕಾಣಿಕೆಯ ಕೇಂದ್ರವಾಗಿದ್ದುದರ ಸೂಚನೆ ಒದಗಿ, ಪಾದಪೀಠ ಶಿಲ್ಪದ 'ಹಯ-ಗಜಲಕ್ಷ್ಮಿ' ಪರಂಪರೆಯ ಸಂಕೇತವನ್ನು ಈ ಶಾಸನದ ಸಹಣಿ ಶಬ್ದವು ಸೂಚಿಸುವಂತಿದೆ. ೨ ಪಟ್ಟಿಕೆಗಳಲ್ಲಿ ಶಾಸನ, ಮೂರು ಹಂತಗಳಲ್ಲಿ ಹೋರಾಟ, ವೀರ-ಅಪ್ಸರಾಸಹಯಾನ, ಕೈಲಾಸ ಭಾಗದ ಶಿಲ್ಪಗಳು ಸ್ಪಷ್ಟ ವಿವರಗಳೊಂದಿಗೆ ಸುಂದರವಾಗಿ ಬಿಡಿಸಲ್ಪಟ್ಟಿವೆ. ಶಿವಲಿಂಗ ಶಿಲ್ಪ ಎದ್ದು ಕಾಣುತ್ತದೆ. ಇದೇ ಆವರಣದಲ್ಲಿ ಭಿನ್ನಗೊಂಡು ವೀರ-ಅಪ್ಸರಾಸಹಯಾನ, ಕೈಲಾಸ ಭಾಗದ ಶಿಲ್ಪವನ್ನೊಳಗೊಂಡ, 'ಸ್ವಸ್ತಿ' ವಾಚನದಿಂದ ಆರಂಭವಾಗುವ ೨ ಸಾಲಿನ ಸವೆದ ಅಕ್ಷರಗಳ ಅಪ್ರಕಟಿತ ವೀರಗಲ್ ಶಾಸನವಿದ್ದು ಹೊಯ್ಸಳರ ಕಾಲಕ್ಕೆ ಸೇರಿದುದಾಗಿದೆ.



'ಬ್ರಹ್ಮದೇವರ ಕಲ್ಲು' ಮತ್ತು ವೀರಗಲ್ಲುಗಳು

ದೂರದಲ್ಲಿ ತಿಪ್ಪೆಗುಂಡಿಯ ಬಳಿ ಬಿದ್ದಿರುವ ಹಸುಕರು ಹಾಕದಿದ್ದಾಗ ಹರಕೆ ಕಟ್ಟಿಕೊಂಡು ಒಪ್ಪಿಸುವ ಬ್ರಹ್ಮದೇವರ ಕಲ್ಲು ಎಂದೆನಿಸಿಕೊಳ್ಳುವ ಕಲ್ಲು ವೀರಮಾಸ್ತಿಯ ಪುಷ್ಪ ವೀರದ್ವಿಭಂಗದ ಶಿಲ್ಪವಾಗಿದೆ; ಬಾಚಿಗತ್ತಿ ಹಿಡಿದ ಚಪ್ಪಟೆ ಮೊಗದ ವೀರ ಮಾಸ್ತಿಯರ ಅಲಂಕರಣ, ಜನಪದ ಶೈಲಿಯ ಮಾಸ್ತಿಯ ಮುಡಿ, ಕಮಲ ಹಾಗೂ ನಿಂಬೆ ಹಿಡಿದ ಹಸ್ತಗಳು, ವೀರನ ಸೊಂಟ ಹಾಗೂ ಮಂಡಿ ಭಾಗಗಳವರೆಗಿನ ಅಲಂಕೃತ ಕೆತ್ತನೆ ಇತ್ಯಾದಿಗಳಿಂದಾಗಿ ಇದು ೧೪ನೇ ಶತಮಾನದ ಶಿಲ್ಪವಾಗಿ ಕಾಣಿಸುವಂತಿದೆ. ಆದರೆ 'ಬ್ರಹ್ಮದೇವರ' ಪ್ರಸ್ತಾಪವಿರುವ ಕಾರಣ, ಬಹುಶಃ ಇನ್ನೂ ಪ್ರಾಚೀನಕ್ಕೆ ಜೈನ ಬಸದಿಯ ತೀರ್ಥಂಕರ ಶಿಲ್ಪವೊಂದಿದ್ದು ಆ ಸ್ವರೂಪವನ್ನು ವೀರಗಲ್ಲಿಗೆ ಸಮೀಕರಿಸಿಕೊಂಡು ಜನ ಹೀಗೆ ಕರೆದಿರಬೇಕು. ಮೊದಲು ಇಲ್ಲಿ ಜೈನರೂ ಸಾಕಷ್ಟು ಇದ್ದರು. ಇನ್ನು ಊರಿನ ಹೆಬ್ಬಾಗಿಲಿನ ಪೂರ್ವಕ್ಕೆ ಪ್ರಾಚೀನ ಮಣ್ಣಿನ ಕೋಟೆಯ ದಿಬ್ಬದ ಅವಶೇಷದ ಬಳಿ ವಿಜಯನಗರ ಕಾಲದ ಆಲೀಢ ಭಂಗಿಯ ವೀರನ ವೀರಗಲ್ ಶಿಲ್ಪ ಪುಷ್ಪವಾಗಿದೆ. ಇಡೀ ಕಲ್ಲಿನ ತುಂಬ ತುಂಬಿಕೊಂಡ ವೀರ, ಪ್ರಾಚೀನ ಯಕ್ಷನಂತೆ ನೀಳದೇಹ, ಪುಷ್ಪತೊಡೆ, ತೋಳು, ಹೊಂದಿದ್ದು ಎಡಗಾಲನ್ನು ಬಟ್ಟಗಲ್ಲೊಂದರ ಮೇಲಿಟ್ಟು ಕ್ರಿಯಾ ಭಂಗಿಯಲ್ಲಿರುವಂತೆ ಬಿಡಿಸಲಾಗಿದೆ. ತುಪಾಕಿ, ಕತ್ತಿ, ಗುರಾಣಿ, ಬಿಲ್ಲು, ಸೂರ್ಯ, ಚಂದ್ರ ಸಿಂಹಲಲಾಟ ಇತ್ಯಾದಿಗಳು ಅಚ್ಚುಕಟ್ಟಾಗಿ ಶಿಲ್ಪಕೊಂಡಿವೆ. ಒಟ್ಟಾರೆ ಈ ವೀರಗಲ್ಲುಗಳು ಹಲ್ಮಿಡಿಯ ಸಾಂಸ್ಕೃತಿಕ ಜಾಯಮಾನಗಳ ಜೊತೆಗೆ ವೀರರ ಹೋರಾಟಗಳ ಪ್ರತೀಕಗಳನ್ನು ಕಾಲಾನುಕ್ರಮಣಿಕೆಯಲ್ಲಿ ನಿದರ್ಶಿಸಿವೆ. ಈಗ ಗ್ರಾಮದ ಪೂರ್ವಕ್ಕಿರುವ ಹಳೆಯ ಹೆಬ್ಬಾಗಿಲ ಜಗತಿಯ ಮುಂಬದಿ ಕೆಳಗೆ ಹುಗಿದಿರುವ ವೀರನ ಶಿರದ ಸಂಬಂಧದ ಕತೆ ಮುಗುಳವಳ್ಳಿ (ಶಾಸನದ ಮೂಟೆವಳ್ಳಿ)ಯ ಕಾರಹಬ್ಬಕ್ಕೆ ಹೊಂದಿ ಕೊಂಡುದುದಾಗಿದೆ.

ವೀರಭದ್ರನ ಗುಡಿಯ ಮುಂದೆ ಮೂರು ಹಂತಗಳ ಎರಡು ವೀರಗಲ್ ಶಿಲ್ಪಗಳಿದ್ದು ಒಂದರಲ್ಲಿ ವೀರನ ಭೀಕರ ಹೋರಾಟದ ಭಂಗಿಯ ಶಿಲ್ಪ ಎದ್ದು ಕಂಡು, ಅಪ್ಸರಾಸಹಯಾನದಲ್ಲಿಯೂ ಅದೇ ವೀರಭಂಗಿಯನ್ನು ಚಿತ್ರಿಸಿರುವುದು ಗಮನಾರ್ಹವಾಗಿದೆ. ಕೈಲಾಸದ ದೃಶ್ಯದಲ್ಲಿ ಶಿವಲಿಂಗದ ಎತ್ತರ ಹಾಗೂ (ಕಾಳಾಮುಖ !) ಮಾಹೇಶ್ವರ ಅರ್ಚಕನ ಸ್ಥಾನಕ ಶಿಲ್ಪ ಸುಂದರವಾಗಿದ್ದು, ಶೈಲಿಯು ೧೧ನೇ ಶತಮಾನದಷ್ಟು ಪ್ರಾಚೀನತೆಯನ್ನು ತೋರುವಂತಿದೆ. ಇನ್ನೊಂದು ವೀರಗಲ್ಲು ಸಾಮಾನ್ಯ ಶೈಲಿಯ ಮೂರು ಹಂತದ ಶಿಲ್ಪಗಳನ್ನು ಹೊಂದಿ, ಕೈಲಾಸದ ದೃಶ್ಯದಲ್ಲಿ ಉದ್ದ ಪಾಣಿವಟ್ಟದ ಶಿವಲಿಂಗ, ಆಸೀನ ಕಾಳಾಮುಖ ಅರ್ಚಕನ ಭಂಗಿ ಗಮನ ಸೆಳೆಯುತ್ತದೆ. ಇದು ಮೇಲಿನ ವೀರಗಲ್ಲಿನ ನಂತರದ ಕಾಲದ್ದೆಂಬುದು ಶಿಲ್ಪದ ಶೈಲಿಯಿಂದಲೇ ವ್ಯಕ್ತವಾಗುತ್ತದೆ. ವೀರಭದ್ರನ ಗುಡಿಯ ಪಶ್ಚಿಮ ಹಿಂಬದಿಯ ಅರ್ಧಫರ್ಲಾಂಗ್

**ಹಬ್ಬಗಳು :** ಮೂರು ವರ್ಷಕ್ಕೊಮ್ಮೆ ದೀಪಾವಳಿ ಸಮಯದಲ್ಲಿ ದಲಿತ ಕುಳವಾಡಿಗಳಾದ ಏಳು ಗದ್ದುಗೆಯವರು ಊರಿನವರೊಡನೆ ಸೇರಿ ಹಬ್ಬದ ಆಚಾರಗಳ ಮುಖ್ಯಸ್ಥರಾಗಿ ಹಿರಡೆಲಿಂಗನ ಹಬ್ಬ(ಜಾತ್ರೆ)ವನ್ನು ಬನದಹೊಲ ದಲ್ಲಿ (ಐದಳ್ಳಿಸ್ವಾಮಿ ನೆಲೆ) ಆಚರಿಸುತ್ತಾರೆ. ಹಿರಡೆಲಿಂಗನೇ ಅಗಸ್ತ್ಯ ಹಾಗೂ ಅವನ ಜೊತೆಯಲ್ಲಿ ಬಂದವರೇ ಸಪ್ತರ್ಷಿಗಳೆಂಬ ನಂಬಿಕೆಯೂ ಇದೆ. ಆದರೆ ಹಿರಡೆಲಿಂಗನ ಕತೆ ಮಾತ್ರ ವೀರಶೈವ ಜಂಗಮನೊಬ್ಬ ತನ್ನ ಏಳು ಜನ ಗಣಂಗಳೊಡನೆ ಗ್ರಾಮಕ್ಕೆ ಕಂತೆ ಭಿಕ್ಷಕ್ಕೆ ಬಂದಾಗ, ದಲಿತ ಹೆಣ್ಣುಮಗಳೊಬ್ಬಳು ಮಾತ್ರ ಮಡಿಶುದ್ಧವಾಗಿ, ಭತ್ತ ಕುಟ್ಟಿ ಅನ್ನ ಮಾಡಿ, ಕರಿಮೆಣಸು,



ಹಿರಡೆ ಲಿಂಗನ ಗದ್ದುಗೆಗಳು

ಚೇಣಿಕಾಯಿ ಸಾರು ಮಾಡಿ ದಾಸೋಹವಿಟ್ಟ ಕತೆಗೆ ಸಂಬಂಧಿಸಿದ್ದು, ಹಿರಡೆಲಿಂಗ ತನ್ನವರೊಡನೆ ಬನದಹೊಲದಲ್ಲಿ ಐಕ್ಯವಾದ ಸಂಗತಿಯನ್ನು ಹೊಂದಿದೆ. ಈ ಹಬ್ಬದಲ್ಲಿ ಸಾರುಮಾನ (ಹಬ್ಬದ ಸುದ್ದಿ) ಹಾಕುವುದು, ಅಂದರೆ ೭ ಗದ್ದುಗೆಯವರು ಕಳಸಾಪುರದ ನಿಗದಿತ ಬಾಳೆ ತೋಟದಿಂದ ೭ ಬಾಳೆಗೊನೆ ಕಡಿದು ಕಳಚಿ ತಂದು ೭ ಗದ್ದುಗೆ ಹಗೇವಿನಲ್ಲಿ ತಂದಿಟ್ಟು ಊರಿನ ಜನಕ್ಕೆ ಹಬ್ಬ ಮುಗಿವ ತನಕ ಶುದ್ಧ ಆಹಾರದ ಕಟ್ಟು ಕಟ್ಟಳೆ ಹಾಕುತ್ತಾರೆ. ಇಡೀ ಊರಿನವರು ಹೊಸ ಮೊರದಲ್ಲಿ ಬಾಳೆಹಣ್ಣು ಬಳೆ ಬಾಗಿಣ ವೀಳ್ಯದ ಅಮ್ಮನವೆಚ್ಚು (ಅಮ್ಮನ ಹೆಚ್ಚು)ವನ್ನು ಪಟ್ಟೆ ನೊಜೆಹುಲ್ಲು ಕಟ್ಟಿ ವೀರಭದ್ರನಗುಡಿ ಮುಂದೆ ಇಡುತ್ತಾರೆ. ೭ ಗದ್ದುಗೆಯವರು ಬನದ ಹೊಲದ ಏಳು ಗದ್ದುಗೆಗಳ ಹಿರಡೆಲಿಂಗನ ಸನ್ನಿಧಿಯಲ್ಲಿ ಬಾಗಿಣ ಒಯ್ದು ಇಟ್ಟು ಬರುತ್ತಾರೆ. ಮಾರನೆ ದಿನ ರಾತ್ರಿ ಏಳು ಮಣ್ಣಿನ ಕಳಸಿಕೆ ('೭ ಮಚ್ಚಣ') ಯೊಡನೆ ಗದ್ದೆ ಹತ್ತುವವರು (ಕುಳವಾಡಿಗಳು) ಮಡಿ ಮೀಸಲಿನಿಂದ ಹಿರಡೆಲಿಂಗನ ಗದ್ದುಗೆ ಬಳಿ ಏಳು ಒಲೆ ಇಟ್ಟು ಚೇಣಿಕಾಯಿ ಕರಿಮೆಣಸು ಹಾಕಿ ಅಡುಗೆ ಮಾಡಿ ರಾತ್ರಿ ೩ ಗಂಟೆಗೆ ನೈವೇದ್ಯವಿಟ್ಟು 'ಸಾರಿಗೆ ಹೊಲ'ದಲ್ಲಿ ಪ್ರಾರ್ಥಿಸಿ ನಂತರ ಕೇರಿಗೆ ಹಿಂದಿರುಗಿ ಎಡೆ ಇಟ್ಟ ಬಗ್ಗೆ 'ಸಾರು' ಹಾಕುತ್ತಾರೆ. ಅದು ಕೇರಿಯ ತಮ್ಮ ಜನಕ್ಕೆ ಊಟಮಾಡಿಕೊಳ್ಳಲು ನೀಡುವ ಸೂಚನೆ. ಮರು ಬೆಳಿಗ್ಗೆ ೮ ಗಂಟೆಗೆ ಊರಿನ ಮನೆಗಾಣಿಸಿ (ಮನೆಯವರೆಲ್ಲ) ಬನದ ಹೊಲಕ್ಕೆ ಸಾಗಿ ಅರ್ಚಕ ಕುಳವಾಡಿಗಳಿಂದ ತೀರ್ಥಪ್ರೋಕ್ಷಣೆ ಪಡೆಯುತ್ತಾರೆ. ಗದ್ದುಗೆ ಸುತ್ತ ಮುತ್ತಲವರ ಮೇಲೆ ಅಡಕೆ ಮತ್ತು ಮೆಣಸನ್ನು ಸೂರೆ ಬಿಡ್ತೀವಿ (ಎಸೆಯುವಿಕೆ) ಮಾಡುವವರು 'ಹರಕೆ ಹಾಡ್ಯ' (ಹರಕೆ ಆಡುವುದು ತೀರಿಸುವುದು) ಸಲ್ಲಿಸುತ್ತಾರೆ. ನಂತರ ಕುಳವಾಡಿಗಳ ಪೈಕಿಯ ಹೆಣ್ಣು-ಗಂಡು ಮಕ್ಕಳು ಬಾಗಿಣವನ್ನು ತಲೆಯ ಮೇಲೆ ಸಾಲಾಗಿ ಹೊತ್ತು ತಂದು ವೀರಭದ್ರನ ಗುಡಿಯ ಮುಂದೆ ಇಡುತ್ತಾರೆ. ಊರಿನ ಯಾರೆಲ್ಲ ವೀರಶೈವರು ವೈನ್ಯಕ್ಷತ್ರಿಯರು (ವಹ್ನಿಕ್ಷತ್ರಿಯ ತಿಗುಳ ಜನಾಂಗ), ವಿಶ್ವಕರ್ಮ, ದಲಿತರು ತಮ್ಮ ತಮ್ಮ ಬಾಗಿಣವನ್ನು ಮನೆಗೆ ಒಯ್ದು ಪೂಜಿಸಿ ಬಾಗಿಣ ಬಿಚ್ಚಿ ಮನೆಯುವರು ಹಾಗು ಅತಿಥಿಗಳಿಗೆ ಹಂಚುತ್ತಾರೆ. ಅಲ್ಲಿಗೆ ಹಬ್ಬ ಮುಕ್ತಾಯ. ಹನುಮಿಡಿಯಿಂದ ಮೂರು ಮೈಲು ದೂರದ ಅಗಸರಹಳ್ಳಿಯಲ್ಲಿ ಉಗಾದಿ ಸಮಯದಲ್ಲಿ ಹಿರಡೆಲಿಂಗನ ಹಬ್ಬ ನಡೆಯುತ್ತದೆ. ಅಲ್ಲಿ ೭ ಮನೆ ಜನದ ಪೈಕಿ ಪೂಜೆಮಾಡುವಾತ ಲಿಂಗದ ಕರಡಿಗೆ (ಲಿಂಗದ ಕಾಯಿ) ಕಟ್ಟಿಕೊಂಡು ಮಡಿಮೀಸಲಿನಿಂದ ಇದ್ದು ಆಚಾರಗಳನ್ನು ನಡೆಸುತ್ತಾನೆ.

ಇಲ್ಲಿ ಗಮನಿಸಬೇಕಾದುದೆಂದರೆ, ಹಿರಡೆಲಿಂಗನ ಗದ್ದುಗೆಗಳು ವೃತ್ತ ಹಾಗು ಚೌಕಾಕಾರದ ನೆಲಗಟ್ಟಿನಲ್ಲಿ ಮಧ್ಯೆ ಕಲ್ಲುಗಳು ಹಾಗು ಹಗೇವುಗಳಂತೆ ಇರುವುದು. ಇದು ಪ್ರಾಗೈತಿಹಾಸಿಕ ಕಾಲದ ವೃತ್ತ(pit circle)ಸಮಾಧಿ-ಗೋರಿಗಳ ಸಂಕೇತ ಗಳಂತಿರುವುದರ ಸೂಚನೆ. ಅಂದರೆ ಪ್ರಾಗೈತಿಹಾಸಿಕ ನೆಲೆಯ ಸುತ್ತುವರಿ ಕಲ್ಲುತೆಗೆದು ಬನದಹೊಲ ಮಾಡಿದಾಗ, ಜಾನಪದ ಪ್ರವೃತ್ತಿಯು ತನ್ನ ಕಾಲದ ಘಟನೆಯೊಂದಕ್ಕೆ ಈ ಸಂಕೇತಗಳನ್ನು ಅನ್ವಯಿಸಿಕೊಂಡು ಮಾರ್ಪಾಟು ಆಚರಣೆಗಳೊಡನೆ ಪ್ರಾಚೀನತೆಯನ್ನು ಪೋಷಿಸಿದಂತಿದೆ. ಹಲ್ಮಿಡಿಯ ನೆರೆಯ ಉತ್ತರಕ್ಕಿರುವ ಹೆಜ್ಜೆಗೇನ ಹಳ್ಳಿಯ ಬನದಮ್ಮನ ನೆಲೆಯ ಗದ್ದುಗೆ ಮಡಿಕೆಗಳೂ ಇಂತಹ ಅನ್ವಯಿಕ ಪ್ರಾಚೀನ ಸಂಬಂಧದ್ದೇ ಆಗಿವೆ. ಮುಂದೆ ಕಾಲಾಂತರದಲ್ಲಿ ಸಪ್ತಮಾತೃಕೆಯರ ಆರಾಧನೆಯು, ಪುರುಷರೂಪಾಚರಣೆಗೆ ಅನ್ವಯಗೊಂಡ ಸೂಚನೆಯಾಗಿದೆ. 'ಬನದ ಹೊಲ', 'ಬನಹತ್ತುವುದು' ಇವೆಲ್ಲ ಬನದಬ್ಬೆ- ಬನಶಂಕರಿ - ಸಪ್ತಮಾತೃಕೆಯರ ಆರಾಧನೆಯ ಜಾನಪದ ರೂಪವೆ. ಗ್ರಾಮದಲ್ಲಿ ದೇವಿರಮ್ಮ ಮುಖವಾಡಗಳು ಪೂಜೆಗೊಳ್ಳುವುದೂ ಇದಕ್ಕೆ ಸಂವಾದಿಯಾದುದೇ. ನೆರೆಯ ಮುಗುಳವಳ್ಳಿಯ ದೇವೀರಮ್ಮ ದೇಗುಲದ ಸಪ್ತಮಾತೃಕೆಯರ ವಿಗ್ರಹಗಳೂ ಈ ದಿಸೆಯಲ್ಲಿ ಸಂವಾದಿ ಅನ್ವಯಿಕಗಳಾಗಿವೆ.

ಹಿರಡೆಲಿಂಗನನ್ನು ಅಗಸ್ತ್ಯನೊಡನೆಯೂ ಸಮೀಕರಿಸಲಾಗಿದೆ. ಅವನು ಆರ್ಯರ ಬಹಿಷ್ಕೃತ ಸೋದರನಾಗಿ ಕ್ರಿ. ಪೂ. ೧೦೨೫ರಲ್ಲಿ ತನ್ನ ಬುಡಕಟ್ಟು ಅನುಯಾಯಿಗಳೊಡನೆ ದಕ್ಷಿಣ ಭಾರತಕ್ಕೆ ಬಂದ ಎಂದಿರುವ ಕತೆಯನ್ನು ಕೆ. ಮಮ್ಮನ್ ಹೇಳುತ್ತಾರೆ.*೨೬ ಗುರುಜಂಗಮನಾಗಿ ಕಂತೆಭಿಕ್ಷಕ್ಕೆ ಬಂದ ಹಿರಡೆಲಿಂಗನಿಗೂ ಇಂತಹ ಸಂದರ್ಭ ಒದಗಿ ಹೊರಚ್ಚಾಗಿ ನಿಂತರೂ ಜನತೆಯು ಪರಂಪರೆಯ ಪ್ರಾಚೀನ ಕತೆಯನ್ನು ಇಲ್ಲಿಗೆ ಹೊಂದಿಸಿಕೊಂಡು ಇಂದು ಭೇದಗಳಿಲ್ಲದೆ ಹಬ್ಬದಾಚರಣೆ ನಡೆಸುತ್ತಿದೆ. ಹಿರಡೆಲಿಂಗನನ್ನು ಹಿರಣ್ಯಲಿಂಗ (ಹಿರಣ್ಯ> ಹಿರಣೆ> ಹಿರಡೆ!) ನೆನ್ನುವುದು ಹಿಂದಿನ ಬಳಕೆ. ಪಶುಪತಿ ರುದ್ರನಿಗೆ 'ನಮೋ ಹಿರಣ್ಯ ಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮಃ' ಎಂದಿರುವ ಮಂತ್ರಗೀತೆಯಲ್ಲಿ ಆತನ ಹಿರಣ್ಯಸಿರಿವಂತಿಕೆ ಹಾಗು ಸೈನ್ಯಬಲದ ಸಹಯೋಗ ಸೂಚನೆ ಇದೆ ಎನ್ನುತ್ತಾರೆ ಡಾ॥ ಶ್ರೀ ಜಚನಿ. *೨೭ ಅಂತಾಗಿ (ಪಶುಪತಿ) ರುದ್ರದೇವರೆಂದು ರುದ್ರಪುತ್ರ ವೀರಭದ್ರನನ್ನು

ಅನ್ವಯಗೊಳಿಸುವುದರಿಂದ, ಹಲ್ಮುಡಿಯ ವೀರಭದ್ರನನ್ನೂ ಹಬ್ಬದ ಸಂದರ್ಭದಲ್ಲಿ ಸಂಬಂಧಿಸಿಕೊಂಡು ಗ್ರಾಮದ ಎಲ್ಲ ವರ್ಗದ ಜನತೆ ಇಲ್ಲಿ ಪಾಲ್ಗೊಳ್ಳುವುದು ವಿಶೇಷ.

**ಮಾರ್ನೋಮಿ** (ವಿಜಯದಶಮಿ)ಯ ೨ ದಿನಗಳ ಹಬ್ಬದಲ್ಲಿ ವೀರಭದ್ರನ ಅಡ್ಡೆ, ಮಾರಮ್ಮನ ಅಡ್ಡೆಯ ಉತ್ಸವ ವಿಗ್ರಹಗಳನ್ನು ಚಿಕ್ಕೆರೆಯಲ್ಲಿ ಶುದ್ಧಮಾಡಿ ಉತ್ಸವ ಮಾಡಿ ದೇಗುಲದ ಬಳಿ ತಂದಿಡುವರು. ಊರಿನ ಬಾರೆ (ಬೋರೆ)ಯಲ್ಲಿ ಸಂಜೆಗೆ **'ಅಂಬು ಹೊಡೆಯುವುದು'** ಇರುತ್ತದೆ. ಬಿದಿರಿನ ಬಿಲ್ಲು ಬಾಣ, ದೇವರ ಕತ್ತಿಯನ್ನು, ಗೊನೆಸಹಿತ ಬಾಳೆಕಂಬವನ್ನು ಕತ್ತಿಪೂಜೆಗೆ (ಈಗ ವೀರಭದ್ರನ ಢಾಲು) ಒಯ್ದು ಊರ ಹಿರಿಯ ಮುಖ್ಯಸ್ಥನಿಂದ ಪೂಜೆ ನಡೆಯುತ್ತದೆ. ಬಿಲ್ಲಿನಿಂದ ಅಥವಾ ಕೋವಿಯಿಂದ ಬಾಳೆಗೊನೆಯ ಕೆಂಪುಹೂವಿಗೆ (ತೊಂಬೆಕ್ಕೆ) ಹೊಡೆಯುತ್ತಾರೆ. ಅದು ಕಳಚಿ ಬೀಳದಿದ್ದರೆ ಗ್ರಾಮದ ಯಾರದೆ ಬಾಳೆತೋಟದಿಂದ ಗೊನೆ ತಂದವನಾದ ಕುಳವಾಡಿ ಮುಖ್ಯಸ್ಥ (ಏಳುಗದ್ದುಗೆ ಮನೆಯವರ ಪೈಕಿ) ತನ್ನ ಕತ್ತಿಯಿಂದ ಹೊಡೆದು ಅದನ್ನು ಕಳಚಬೇಕು. ಹೀಗೆ ಅಂಬು ಹೊಡೆದ ಮೇಲೆ ದೇವರ ಅಡ್ಡೆಗಳನ್ನು ಊರಿಗೆ ತಂದು, ದೇಗುಲದ ಮುಂದೆ ಹೊತ್ತು ಕುಣಿಯುತ್ತಾರೆ. ಮಾರ್ನೋಮಿ ಮಂಟಪದಲ್ಲಿ ಮಡಿವಾಳ ದೀವಟಿಗೆ ಹಿಡಿದು ನಾಲ್ದಿಸೆಗೂ 'ದೀವಟಿಗೆ ಸಲಾಂ' ತೋರಿಸಿ ದೇವರಿಗೂ ನಮಿಸಿದ ಮೇಲೆ ಮಂಗಳಾರತಿಯೊಡನೆ ಆ ದಿನದ ಆಚರಣೆ ಮುಕ್ತಾಯ. ಮರುದಿನ ವೀರಭದ್ರ ಹಾಗು ದೇವೀರಮ್ಮನ ಮೊಗವಾಡಗಳ ಉತ್ಸವವು ಮಾರಮ್ಮನ ಅಡ್ಡೆಯ ಜೊತೆಯಲ್ಲಿ ನಡೆಯುತ್ತದೆ. ನವ ಮದುವಣಗಿತ್ತಿಯು ಕೆಂಪು ಮೇಲ್ಮುಸುಕಿನ ಸೀರೆ, ಮಡಿಲಕ್ಕಿ, ವೀಳ್ಯ ಕಾಣಿಕೆಯೊಡನೆ ದೇವತೆಯ ಉತ್ಸವದ ಖರ್ಚಿಗೆಂದು ನೀಡುವುದಿದೆ. ಇಲ್ಲಿ **ಅಂಬು ಹೊಡೆಯುವುದು** ವಿನಲ್ಲಿ,

*(i) ಬಿಲ್ಲಿನಿಂದ ಕಳಚುವುದು > ಬಿಲ್‌ಕಳಚು > ಬಿಲ್ಗಳಚು;*

*(ii) ಬಾಳ್‌ನಿಂದ ಕಳಚುವುದು > ಬಾಳ್ ಕಳಚು > ಬಾಳ್ಗಟ್ಟು (!)*

*–ಈ ಹಿನ್ನೆಲೆ ಇರಬಹುದಾದರೆ, ಕತ್ತಿ ಹಾಗು ಕೆಂಪು ಹೂ ಸಂಕೇತಗಳು ವೀರಗತ್ತಿಯ ರಕ್ತದ ಸೂಚನೆಯಾಗಬಹುದು. ಹಾಗಾಗಿ ಹಲ್ಮಿಡಿ ಶಾಸನದ 'ಬಾಳ್ಗಟ್ಟು' ಜನಪದ ಪರಂಪರೆಯ ವಿಜಯದಶಮಿ ದಿನದಾಚರಣೆಯ 'ಬಿಲ್ಗಟ್ಟು–ಬಾಳೆಗಟ್ಟು'ಗಳಿಂದ ರೂಪುಗೊಂಡ ಶಬ್ದವಾಗಿ ಬಳಕೆಗೊಂಡುದೋ ಅಥವಾ ಶಾಸನದ ಶಬ್ದವೇ ಜನಪದ ಹಬ್ಬದಲ್ಲಿ ಅಂಬಿನಿಂದ ಬಾಳೆ ತೊಂಬೆಕ್ಕೆ ಹೊಡೆಯುವ ಆಚರಣೆಗೆ ಪ್ರೇರಣೆಯಾಯಿತೋ ಸ್ಪಷ್ಟವಿಲ್ಲ. ಆದರೂ ಜನಪದದಲ್ಲಿದ್ದ ಉತ್ಸವದ ಶಬ್ದವೊಂದನ್ನು ಕತ್ತಿ ತೊಳೆದಾಚರಿಸುವ ಸಮಾರಂಭಕ್ಕೆ ಬಳಸಿರುವುದು ಅಸಂಭವವಲ್ಲ.*

**ಗೌರಿಹಬ್ಬದಲ್ಲಿ** ಊರಿನ ಈಶ್ವರ, ರಾಮೇಶ್ವರ (ರಾಮಲಿಂಗೇಶ್ವರ) ಆಂಜನೇಯ, ಗೋಗಲ್ಲು, ದೇವೀರಮ್ಮ, ಆಂಕಾಳಮ್ಮ, ಬ್ರಹ್ಮದೇವರ ಕಲ್ಲು, ಮಾರಮ್ಮ, ಗಣಬಂದಾಗ ಕುಣಿವ ಭೂತಪ್ಪ– ಕೆಂಚಪ್ಪನಕಲ್ಲು ವೀರಭದ್ರ ಇತ್ಯಾದಿ ಇಡೀ ಗ್ರಾಮದ ದೇವರುಗಳಿಗೆ ಪೂಜೋತ್ಸವಗಳುಂಟು. ಹಬ್ಬಕ್ಕೆ ಒಂದು ದಿನ ಮುಂಚೆ ಮಡಿ ಮೀಸಲಾಗಿ ತಂಬಿಟ್ಟು, ಚಿಗಳಿ, ಕಡ್ಲೆಕಾಳು ಸಿದ್ಧಮಾಡಿ ಪೂಜಾಸಾಮಗ್ರಿಗಳೊಡನೆ ಮನೆವಾರು ಊರಿನ ಎಲ್ಲ ಹೆಣ್ಣು ಮಕ್ಕಳು ಕೆರೆಯಿಂದ ೩ ಅಥವಾ ೫ ಬೆಣಚುಕಲ್ಲುಗಳನ್ನು ಆಯ್ದು ತಂದು ಮರಳುಗೌರಿ ಕಳಶವಿಟ್ಟು, ಹರಿಶಿನ ಗೌರಮ್ಮನ ಸಹಿತವಾಗಿ ಪೂಜೆ ಮಾಡುತ್ತಾರೆ. ಕತ್ತಿ ಜೊತೆ ಇರುವ ಬಯಲು ಮಾರಮ್ಮನ ಗದ್ದುಗೆಯೂ ಇಲ್ಲಿದೆ. ಇದೆಲ್ಲ ಮಾತೃಕಾರಾಧನೆಯ ವಿವಿಧ ರೂಪವೆ ಆಗಿದೆ.

**ಕಾರಹಬ್ಬ** (ಕರ್‌ಗಲ್)ವು ಜೇಷ್ಠದ ಕೊನೆಯದಿನ ಪ್ರತಿವರ್ಷ ನಡೆಯುತ್ತದೆ. ಈ ಸಂದರ್ಭದಲ್ಲಿ ಊರಿನ ಕುಳವಾಡಿಗಳು ಗ್ರಾಮದ ಮನೆಯವರ ಭತ್ತದ ಹುಲ್ಲಿನ ಮೆದೆಯಿಂದ ಹುಲ್ಲು ಹಾಗು ಹೆಬ್ಬೇವು ಸೊಪ್ಪು ಸೇರಿಸಿ ನುಲಿದು ೨ ಗುಡ್ಡೆ **'ಸುಡಿಯುತ್ತಾರೆ'**. ಇದನ್ನೆ ಕರಿನುಡಿಯುವುದು ಎನ್ನುತ್ತಾರೆ. ದಲಿತರ ಕೇರಿಯಲ್ಲಿ ಹೀಗೆ ನುಲಿದಿಟ್ಟ ಕರಿ(ನುಲಿದ ಕರಿ)ಯನ್ನು ವಾದ್ಯ ಸಮೇತ ಊರಿನವರು ಹೋಗಿ ಕರೆತರುತ್ತಾರೆ. ಅದರಲ್ಲಿ ಒಂದು ಗುಡ್ಡೆಯನ್ನು ವೀರಭದ್ರ ಗುಡಿಯ ಎಡಪಾರ್ಶ್ವದ ಸನಿಹದಲ್ಲಿರುವ ೪ ಕರ್‌ಗಲ್ಲು (ಕರೆಗಲ್ಲು) ಬಳಿ, ಇನ್ನೊಂದು ಗುಡ್ಡೆಯನ್ನು ಊರ ಹೆಬ್ಬಾಗಿಲ ಬಳಿ ಇಡುತ್ತಾರೆ. ಜಂಗಮರಿಂದ ಅಭಿಷೇಕ ಪೂಜೆಗಳು ಆ ಕರ್‌ಗಲ್ಲು ನೆಲೆಗಳಿಗೆ ನಡೆಯುತ್ತವೆ. ಹಿಂದಿನ ಪದ್ಧತಿಯಂತೆ ೧೨ ದೋಸೆ ೧೨ ಕಡಬು ೧೨ ಹೋಳಿಗೆ ೩ಸೇರು ಅಕ್ಕಿ ಅನ್ನ, ಒಂದು ಹಲಸಿನ ಹಣ್ಣಿನ ಪೂರ್ತಾ ತೊಳೆಗಳನ್ನು ಇಲ್ಲಿಗೆ ಎಡೆ ಹಾಕಿ ಅಖಂಡ ನೈವೇದ್ಯ ನಡೆಯುತ್ತಿದ್ದು ನೈವೇದ್ಯ ಕುಳವಾಡಿಗಳ ಪಾಲಿನ ಹಕ್ಕಾಗಿತ್ತು. ತಿಗಳ ಗೌಡ, ವೀರಶೈವ, ವಿಶ್ವಕರ್ಮ ಇತ್ಯಾದಿ ಊರ ಮುಖಂಡರ ಸಮ್ಮುಖದಲ್ಲಿ ಪೂಜೆ, ಎಡೆ ಆದ ಮೇಲೆ ಊರಿನ ಗೌಡರ ಮನೆ ಹೋರಿ, ವಿಶ್ವಕರ್ಮ ಆಚಾರ್ಯರ ಮನೆ ಹೋರಿ (ಮೊದಲು ೭ ಹೋರಿಗಳಿರುತ್ತಿದ್ದುದು ಈಗ ೩ಕ್ಕೆ ಸೀಮಿತ ಗೊಂಡಿದೆ)ಗಳ ಕೊಂಬಿಗೆ ಸುಣ್ಣ–ಕೆಮ್ಮಣ್ಣು, ಬಸವನ ಹೂವಿನ ಹಾರ, ಕೊರಳಿಗೆ ಹೆಬ್ಬೇವು ಸೊಪ್ಪಿನ ಅಲಂಕಾರ ಮಾಡಿ ಕರೆಗಲ್ಲುಗಳ ಪ್ರದಕ್ಷಿಣೆ ಹಾಕಿಸಿ ಮನೆಗೆ ಒಯ್ಯುತ್ತಾರೆ. ನಂತರ ನುಲಿಕರಿಯ ಹಗ್ಗವನ್ನು ಜನರತ್ತ ಎಸೆಯುತ್ತಾರೆ. ಎಳೆ ಹಗ್ಗದಾಟ ನಡೆದು ತುಂಡಾದ ಹಗ್ಗದ ಚೂರುಗಳನ್ನು ಅವರವರ ಮನೆಗೆ ಒಯ್ದು ಬಾಗಿಲು, ಹೆಂಚುಗಳಿಗೆ ಹೋರಾಟದ ಯಶಸ್ಸಿನ, ಶುಭದ ಸಂಕೇತವೆಂದು ಸಿಗಿಸುತ್ತಾರೆ. ಇದೆಲ್ಲ ತ್ರಿಮೂರ್ತಿಗಳನ್ನು ತೃಪ್ತಿಪಡಿಸುವ ಬಗೆ ಎಂದು ಗ್ರಾಮೀಣರ ನಂಬುಗೆ. ಊರಿಗೆ ೨ ಹೆಬ್ಬಾಗಿಲುಗಳಿವೆ. ಪರಸ್ಪರ ಅವುಗಳ ಅಂತರ ೨೦೦ ಅಡಿ.

ಬಹುಶಃ ಈ ಕರ್‌ಗಲ್ಲುಗಳು ಊರು ಸ್ಥಾಪನೆಯ ಕಲ್ಲುಗಳಾಗಿರಬೇಕು. ಮೊದಲಿಗೆ ಊರ ಹೆಬ್ಬಾಗಿಲ ಬಳಿ ಊರು ಸ್ಥಾಪನೆಯ ಕಲ್ಲಿದ್ದು, ಅದು ಹೂತುಹೋಗಿ ಶಿರ ಮಾತ್ರ ಕಾಣುತ್ತದೆ. ಅಲ್ಲಿನ ಗೂಡಿನಲ್ಲಿ ಅಪ್ರಕಟಿತ ಕಲ್‌ಬರೆಹವೂ ಇದೆ.

ಹೊಸ ಊರು ಬೆಳೆದು ಪಶ್ಚಿಮಕ್ಕೆ ಸರಿದಾಗ ಮತ್ತೆ ಬೇರೆ ನಾಲ್ಕು ಕರೆಗಲ್ಲುಗಳನ್ನು ನೆಟ್ಟಿರುವಂತಿದೆ. ಇಂತಹ ಉದಾಹರಣೆಯು ಕೊಡಗಿನ ಹುಲುಕೋಡು ಗ್ರಾಮದ ಹೆಬ್ಬಾಗಿಲ ಬಳಿಯೂ ಕಾಣಬರುತ್ತದೆ.

*ಇಲ್ಲಿ ಹೋರಿಗಳ ಅಲಂಕಾರದ ಬಗ ಹಾಗು ಪ್ರದಕ್ಷಿಣೆ ಒಂದು ಕಾಲದ ಬಲಿಯ ಸಂಕೇತವೆನಿಸುತ್ತದೆ. ಹಾಗು ಈ ಶಿಲಾಸ್ತಂಭಗಳು ಪ್ರಾಗೈತಿಹಾಸಿಕ ಕಾಲದ 'ರಿಚುವಲ್ ಪೋಲ್'(ಧಾರ್ಮಿಕ ಬಲಿಸ್ತಂಭ)ಗಳ ಆಧುನಿಕ ಪ್ರತೀಕವೆನಿಸುತ್ತದೆ. ಮಾರಮ್ಮನ ಹಬ್ಬದಲ್ಲಿ ಈ ಕರಗಲ್ಲಿನ ಬಳಿ ಕುರಿಗಳ ಬಲಿ ನೀಡುವುದು ಈ ಭಾವನೆಗೆ ಪೋಷಕವಾಗಿದೆ.*



ವೀರಭದ್ರ ಶಿಲ್ಪ, ಗುಗ್ಗುಳ ಗುಂಭ ಮತ್ತು ಕೊಂಡದಲ್ಲರಳಿದ ಕಮಲ

ವೀರಭದ್ರನಕೆಂಡೋತ್ಸವ ಇಲ್ಲಿ ಬಹಳ ಪ್ರಸಿದ್ಧಿ. ಶಿವರಾತ್ರಿಯ ಸಮಯದಲ್ಲಿ ೨ ಅಥವಾ ೩ ವರ್ಷಗಳಿಗೊಮ್ಮೆ ವೀರಭದ್ರನ 'ಪರ'ಮಾಡುವಲ್ಲಿ ವೀರಶೈವರ ನೇತೃತ್ವದಲ್ಲಿ ಇದು ನಡೆಯುತ್ತದೆ. ಮುಳ್ಳಯ್ಯನ ಗಿರಿಯ ಮೇಗಳ ಮಠದಿಂದ ಗಂಗೆಯನ್ನು ಗಂಡಸರು ಮಡಿ ಮೀಸಲಲ್ಲಿ ಕಾಲ್ನಡಿಗೆಯಲ್ಲಿ ಹೊತ್ತು ವೀರಭದ್ರನ ಗುಡಿಯಲ್ಲಿ ತಂದಿಡುತ್ತಾರೆ. ಮರುದಿನ ಸೋಮವಾರ ಬೆಳಿಗ್ಗೆ ಯಗಚಿ ನದಿ ಬಳಿಗೆ ೫ ಜನ ಮುತ್ತೈದೆಯರು ಒಂದು ಕಳಸ, ನಾಲ್ಕು ಕೊಡ ಹಿಡಿದು ಮೇಗಳಮಠದ ಗಂಗೆ ಸಹಿತ ಹೋಗಿ, 'ಕಳಸ ಪೂಜೆ' ಮಾಡಿ ಗಂಗೆ ಸಮೇತ ನಡೆಮುಡಿಯಲ್ಲಿ ದೇಗುಲಕ್ಕೆ ಹಿಂದಿರುಗುವಾಗ ಹೆಜ್ಜೆಗೊಂದು ಇಡಿಗಾಯಿ ಹಾಕುತ್ತಾರೆ. ಆ ಗಂಗೆಯಿಂದ ವೀರಭದ್ರನಿಗೆ ಮಧ್ಯಾಹ್ನ ರುದ್ರಾಭಿಷೇಕ ನಡೆಸಿ, ರಾತ್ರಿ ವೀರಗಾಸೆ, ವಡಬುಗಳ ನಂತರ, ೯ ಗಂಟೆಗೆ ೯ ಅಡಿ ಉದ್ದ ೬ ಅಡಿ ಅಗಲ, ೧½ ಅಡಿ ಆಳದ ಗುಂಡಿ ಸಿದ್ಧಮಾಡುತ್ತಾರೆ. ಗುಂಡಿಯ ಮಧ್ಯಭಾಗದಲ್ಲಿ ಸುಮಾರು ೨ ಅಡಿ ಆಳ ವಿಸ್ತಾರದ ಒಳಗುಂಡಿ ತೋಡಿ ರಂಗೋಲಿ ಅಲಂಕಾರವಿಟ್ಟು 'ರಾವು ತೆಗೆಯಲು' (ಬಲಿ ತೆಗೆವುದು) ಉಮಾಮಹೇಶ್ವರ ಕಳಶ ಪೂಜೆಯನ್ನು ಕೊಂಡದ ಮೂಲೆಗಳಿಗೆಲ್ಲ ಮಾಡುತ್ತಾರೆ. ಅಷ್ಟರಲ್ಲಿ ಗುಡಿಯ ಒಳಗೆ ಮೃಣ್ಮಯ ಕುಂಭದೊಳಗೆ (ಗುಗ್ಗುಳಗುಂಭ) ತುಸು ಗಂಗೆ, ಬನದಹಳ್ಳಿಯ ಕೆರೆಯ ಮೂರು ಮೊಗ್ಗುತಾವರೆ, ಮೂರು ಸೂಜಿಮಲ್ಲಿಗೆ, ಮೂರು ಮೊಗ್ಗುಸಂಪಿಗೆ ಹಾಕಿ, ಬಿದಿರು ಮತ್ತು ಗಂಧದ ಸೀಳು ಚಕ್ಕೆ ಕೋಲುಗಳನ್ನು ಗುಗ್ಗುಳ ಸಹಿತ ಕುಂಭದ ಬಾಯಿಗೆ ಅಗಲವಾಗಿ ಜೋಡಿಸುತ್ತಾರೆ. ವೀರಭದ್ರ ವಿಗ್ರಹದ ಪಾದದಿಂದ ಹಸಿನೂಲಿನ ಸೂತ್ರವನ್ನು ಕೊಂಡದವರೆಗೆ ಬರುವಂತೆ ಇಟ್ಟು, ಕರ್ಪೂರವನ್ನು ಕುಂಭದ ಚಕ್ಕೆಗಳ ಮೇಲಿಟ್ಟು, ಹೊತ್ತಿಸಿ, ಸೂತ್ರವನ್ನು ತಾಗಿಸಿಕೊಂಡು ಕೊಂಡದ ನೆಲೆಗೆ ತಂದು ಕುಂಭವನ್ನು ಒಳಗುಂಡಿಗಿಡುತ್ತಾರೆ. ನಂತರ ಪುರಲೆ ಹಾಗು ಮರದ ಕೊಂಬುಗಳನ್ನು ನೇರನಿಲ್ಲಿಸಿದಾಗ, ಕುಂಭದ ಅಗ್ನಿಯಿಂದ ಅವು ಉರಿಯಲಾರಂಭಿಸುತ್ತವೆ. ಬೆಳಗಿನ ಆರು ಗಂಟೆಯ ವೇಳೆಗೆ ಕೊಂಡದ ಕೆಂಡವೆಲ್ಲ ಮಟ್ಟವಾಗಿ ಹರಡಿರುತ್ತದೆ. ನಂತರ ಮನೆತನದ ಸೊಸೆ ಹೊಂಬಾಳೆ ಹೊತ್ತು ಶಿರೋಕಂಪನದ ತುಂಬು ಆವೇಶದೊಡನೆ ಕೊಂಡ ಹೊಗುವಲ್ಲಿ, ವೀರಭದ್ರನ ಉತ್ಸವ ಮೂರ್ತಿ ಹಾಗೂ ಜನತೆ ಮೂರು ಬಾರಿ ಹಿಂಬಾಲಿಸಿ ಕೊಂಡ ಹಾಯುತ್ತವೆ. ನಂತರ ಕೊಂಡದ ಬೆಂಕಿಯನ್ನು ಇಬ್ಬದಿ ಸರಿಸಿ ಗಗ್ಗುಳ ಕುಂಭವನ್ನು ಗುಂಡಿಯಿಂದ ಶೀಘ್ರವಾಗಿ ಎತ್ತಿಕೊಂಡು

ವೀರಭದ್ರನ ಬಳಿ ಇಟ್ಟು ಪೂಜೆ ಸಲ್ಲಿಸುತ್ತಾರೆ. ನಂತರ ಕುಂಭದ ಒಳಗಿನ ತಾವರೆ, ಮಲ್ಲಿಗೆ, ಸಂಪಿಗೆ ಮೊಗ್ಗುಗಳನ್ನು ತೆಗೆದಾಗ, ಪೂರ್ಣ ಅರಳಿದ ಸೌರಭ ಪುಷ್ಪಗಳಾಗಿರುವುದನ್ನು ನೆರೆದವರಿಗೆ ತೋರಿಸಿ, ಬೇರೆ ಹೂಗಳಿಗೂ ಅವನ್ನು ಮುಟ್ಟಿಸಿ ಹೂ ಪ್ರಸಾದವನ್ನು ಹಂಚಿದ ಮೇಲೆ ಹಬ್ಬದ ಮುಕ್ತಾಯ.

*ಈ ಹಬ್ಬದಾಚರಣೆಯಲ್ಲಿ ಪೌರಾಣಿಕ ಸಂಕೇತವಾಗಿ ಕೊಂಡವು ದಕ್ಷಯಜ್ಞನಾಶವನ್ನು, ಹೊಂಬಾಳೆ ಕಳಶ ಪೂಜೆಯು ಭದ್ರಕಾಳಿಯ ಸಹಯೋಗವನ್ನು ಮಾತ್ರರಕ್ಷಕ ಪೂಜೆಯನ್ನು ಸೂಚಿಸುತ್ತವೆ. ವೀರ ಭದ್ರನ ಪಾದದಿಂದ, ಕೊಂಡದವರೆಗಿನ ಸೂತ್ರ ಹಾಗು ತಾವರೆ ಮೊಗ್ಗುಗಳ ಗುಗ್ಗುಳ ಕುಂಭವು, ಅಕ್ಕಮಹಾದೇವಿ ಹಾಗು ಸತ್ಯಕ್ಕನ ವಚನಗಳಲ್ಲಿ ಅವನ ಸಂಬಂಧದಲ್ಲಿ ಬರುವ ಹರಿಯಿಂದ ನಯನ ಪದ್ಮ ಪೂಜೆಯನ್ನು, ಸೂಚಿಸುವಂತಿವೆ; ಇನ್ನೊಂದು ಗಮನಾರ್ಹ ತೋಲನೆ ಎಂದರೆ ವೀರಭದ್ರನಿಂದ ಲಿಂಗಧಾರಣ ದೀಕ್ಷೆ ಪಡೆದ ಹನುಮಂತ ವೀರಭದ್ರ ಭಕ್ತ ಎಂಬ ಸ್ಕಾಂದಪುರಾಣದ ಕಥಾ ಪ್ರಸಂಗಕ್ಕನುಗುಣವಾಗಿ ವೀರಭದ್ರ ಕ್ಷೇತ್ರಗಳಲ್ಲಿ ಹನುಮಂತನ ನೆಲೆಗಳೂ ಸಮಸಮನಾಗಿದ್ದಿರಬೇಕು. ಮೂಡಲಪಾಯ ಬಯಲಾಟದಲ್ಲಿಯೂ ಈ ಕಥಾ ಪ್ರಸಂಗವಿದೆ. ಕಿಷ್ಕಿಂಧಾ ಪ್ರದೇಶವೆನಿಸಿದ ಹಂಪೆಯ ವಿರೂಪಾಕ್ಷನನ್ನು ಕುರಿತು ವಿರೂಪಾಕ್ಷಾಷ್ಟಕದಲ್ಲಿ ಅವನ ಚರಣದೊಳಂಬಕ (ಪಾದದಲ್ಲಿ ಹರಿಯ ನಯನ ಅರ್ಥಾತ್ ದಕ್ಷಯಜ್ಞಮರ್ದನನಾದ ವೀರಭದ್ರನನ್ನು ಶಾಂತಗೊಳಿಸಲು ಹರಿಯು ತನ್ನ ಕಮಲನೇತ್ರವನ್ನೇ ಅರ್ಪಿಸಿ ಪೂಜೆಗೈದ ಎಂದಿರುವ ಕಾರಣ) ಹಾಗು ಹರಿಹರನ ಪಂಪಾಶತಕದಲ್ಲಿ ದಕ್ಷನ ಧ್ವರಮಂ ಸುಟ್ಟವ ನೀತನೀತನೆ (ದಕ್ಷಯಜ್ಞ ನಾಶಕ) ಎಂದಿರುವುದು, ಪರಸ್ಪರ ಪೋಷಕವಾಗಿವೆ. ಇನ್ನು ಕೊಂಡದಡಿಯಲ್ಲಿಟ್ಟ ಕುಂಭದಲ್ಲಿ ಅರಳಿದ ಮೊಗ್ಗುಗಳ ಅರಳುವಂತಿಕೆ, ಅನುಷ್ಣವಾಹಕವಾದ ಒಳಮಣ್ಣು, ಅತೀವ ಉಷ್ಣತೆಯ ನಡುವೆ ಮೊಗ್ಗು ಅರಳಲು ಬೇಕಾದ ಸೂಕ್ತ ಕಾವನ್ನು ನೀಡಿದ ವೈಜ್ಞಾನಿಕ ಹಿನ್ನಲೆಯದಾಗಿದೆ. ಆಸ್ತಿಕ ಮನಸ್ಸಿಗೆ ಇದಲ್ಲ ಪವಾಡದಂತ ಗೋಚರಿಸುವುದು ಸಹಜ.*

**ಹಲ್ಮಿಡಿಯ ಶಾಸನ ಶಿಲ್ಪ ಮತ್ತು ಶಬ್ದಗಳು :** ಹಲ್ಮಿಡಿ ಶಾಸನದ ಶಿರೋಭಾಗ ಕುದುರೆಲಾಳದ ಕಮಾನಿನಂತಿದ್ದು ತುದಿಯಲ್ಲಿ ತುಸು ಚಾಚಿದ ಭಾಗವನ್ನು ಹೊಂದಿದೆ; ಶಬ್ದಗಳಲ್ಲಿ, ಶ್ಲೇಷಾರ್ಥಗಳಿದ್ದು ಸುದರ್ಶನ ಎಂಬ ಶಬ್ದವೂ ದ್ವಂದಾರ್ಥವನ್ನು ಹೊಂದಿದೆ ಎಂದಿದ್ದಾರೆ ಡಾ॥ಎಂ. ಎಚ್. ಕೃಷ್ಣ. *೨೮ ಶ್ರೀ ಹೆಚ್. ಆರ್. ರಘುನಾಥ ಭಟ್ಟರು ಶಿರೋಭಾಗದ ಚಾಚುವನ್ನು 'ಜ್ಯೋತಿ' ಎಂದು ಪರಿಭಾವಿಸಿ ವಾದಿಸಿದ್ದಾರೆ. ಈ ಶಿರ ಶಿಲ್ಪ ಭಾಗದಲ್ಲಿ, ವೃತ್ತದೊಳದೆ ವೃತ್ತವಿದ್ದು, ಕೇಂದ್ರದಿಂದ ಹೊರಟ ಬಾಗಿದ ಗೆರೆಗಳ ನಡುವಣ ಭಾಗಗಳು ಹೂಪಟಲವನ್ನು (ಈ ರೀತಿಯ ಕಮಲ ದಳಗಳ ಬಿಡಾವಣೆಗಳು ಬೇರೆಡೆಯಲ್ಲಿಯೂ ಇವೆ) ಹೋಲುವ ಕಾರಣ, ಅದನ್ನು ಆಧ್ಯಾತ್ಮ ಶ್ರೀ ಚಕ್ರ ಸಮನ್ವಿತ ಅರಳು ಕಮಲದ ಬಿಡಾವಣೆ ಎಂದು ಭಾವಿಸಬಹುದು ಮತ್ತು ಈ ಅರಳುವಿಕೆಯೆ ಒಳ್ಳೆಯ ದರ್ಶನಕಾರಕವೂ ಆಗಿದೆ ಎಂದೂ ಪರಿಭಾವಿಸ ಬಹುದೆನಿಸುತ್ತದೆ. ಶ್ರೀಚಕ್ರದ ಕಮಲದರಳಿಕೆಯ ಪರಾಕಾಷ್ಠೆಯು ಬೆಳಕಿನ ಸಂಕೇತ ಅರ್ಥಾತ್ ಶಿವಲಿಂಗದ ರುದ್ರಭಾಗದಲ್ಲಿ ಪರಿಣಮಿಸುತ್ತದೆ; ಶಿವನನ್ನು ಅಗ್ನಿಸ್ತಂಭವೆಂದೆ ಪರಿಗಣಿಸಿ ರುವುದಿದೆ. *೨೯ ಶಿವನ ಶಾಂತನಾಮವು 'ಅಗ್ನಿ'. ಹೀಗಾಗಿ ಇಲ್ಲಿ ಶೈವ ವೈಷ್ಣವ ಸಂಕೇತಗಳ ಶ್ಲೇಷಾರ್ಥಗಳಿವೆ. ಹಾಗು ಸೈಂಧವ ಸಂಸ್ಕೃತಿಯ ಊರ್ಧ್ವಲಿಂಗದ ಶಿರೋಭಾಗದ ಹೋಲಿಕೆಯನ್ನು 'ಜ್ಯೋತಿ'ಯ ಚಾಚು ರೂಪಕ್ಕೆ ಒದಗಿಸಬಹುದು; ಶಾಕ್ತೇಯ, ಪಾಶುಪತ ಪ್ರಭಾವವನ್ನೂ ಕಾಣಬಹುದು.

*ಈ ಶಾಸನ ಸ್ತಂಭಾಕಾರ (stone pillar) ದಲ್ಲಿದೆ ಎಂಬುದು ಗಮನಾರ್ಹ. ಶಾಸನದ ಶ್ಲೋಕದಲ್ಲಿ 'ಲಕ್ಷ್ಮಿ'(ಶ್ರೀ)ಯ ಪ್ರಸ್ತಾಪವಿದೆ. ಋಗ್ವೇದದ ಪರಿಶಿಷ್ಟ ಭಾಗದಲ್ಲಿನ ೧೫ ಮಂತ್ರಗಳ ಶ್ರೀ ಸೂಕ್ತದ ರೀತ್ಯಾ ಲಕ್ಷ್ಮಿಯನ್ನು ಅವಲಂಬಿಸಿದವರು ಶಿವ ಮತ್ತು ವಿಷ್ಣು. ಹಾಗಾಗಿ ಆಕೆ ನಾರಾಯಣಿ ಎನಿಸಿದಂತೆ ತ್ರ್ಯಂಬಕೆ ಎನಿಸಿದ್ದಾಳೆ. ಶ್ರೀ ಸೂಕ್ತ ಭಾಷ್ಯಕಾರರಾದ ಶ್ರೀ ಕಂಠರು ಜಾತವೇದದ ಅಗ್ನಿಯನ್ನು ಶಿವನೆಂದೂ, 'ಶ್ರೀ'ಯನ್ನು ಗೌರೀ ಎಂದೂ ಗುರುತಿಸಿದ್ದಾರೆ. *೩೦ ಶಿವನೂ ಚ್ಯುತಿ ಇಲ್ಲದವನು; ಅವನು ಬಿಲ್ಗಾರ. ಅಜಕವ ಶಿವನ ಧನುಸ್ಸು. ಅಂತಾಗಿ ಧನುರ್ಧಾರಿ ಕೂಡ. ಅಂತಾಗಿ ಅಚ್ಯುತ ಆರೋಪಿತ 'ಶಾರ್ಙ್ಗ' (ಧನುಸ್ಸು) ಶಬ್ದವೂ ಶ್ಲೇಷೆಯಿಂದ ಕೂಡಿರುವಂತಿದೆ. ಶಿವ ಅಥವಾ ರುದ್ರ ಅಗ್ನಿಯ ಒಂದು ರೂಪ (ಅಗ್ನಿರ್ ಅಪಿ ರುದ್ರ ಉಚ್ಯತೇ - ಋಗ್ವೇದ). *೩೧ ಅರಿದ್ರಾ ನಕ್ಷತ್ರದಲ್ಲಿ ಲಕ್ಷ್ಮಿ ಹುಟ್ಟಿದ್ದು, ಅದರ ಅಧಿ ದೇವತ ರುದ್ರನಾದ ಕಾರಣ ಅವಳು ರುದ್ರನ ಶಕ್ತಿಯೂ ಹೌದು. ಅಂತಾಗಿ ಪಾರ್ವತಿ, ಲಕ್ಷ್ಮಿ ಅಭಿನ್ನರು. ಶ್ರೀ ಸೂಕ್ತಮಂತ್ರಗಳು ಪಾರ್ವತಿಯನ್ನು ಉದ್ದೇಶಿಸಿದ್ದು ವೃತ್ತಾಕಾರದ ಯಂತ್ರಗಳನ್ನು ಕಮಲದ ಆಕಾರದಲ್ಲಿ ಕಾಣಿಸುವಲ್ಲಿ ಲಕ್ಷ್ಮಿಯನ್ನು ಕಮಲವೆನ್ನುವ ಅರ್ಥದಲ್ಲಿ ಹೇಳಿ ಕುಂಡಲಿನಿಯಿಂದ ಏರುಚಕ್ರಗಳಿಗೆ ಸಂಬಂಧಗೊಳಿಸುವುದುಂಟು. ಈ ಹಿನ್ನೆಲೆಯಲ್ಲಿ ಹಲ್ಮಿಡಿ ಶಾಸನ ಶಿರ ಶಿಲ್ಪ ಹಾಗು ಆರಂಭದ ಅನುಷ್ಟುಪ್ ಶ್ಲೋಕ ಶ್ರೀ ಸೂಕ್ತ - ಶ್ರೀ ಚಕ್ರಾಧಾರಿತವೆನಿಸುತ್ತದೆ. ಹೀಗಾಗಿ ಆ ಶ್ಲೋಕದ ಮೂಲವು ಶ್ರೀ ಸೂಕ್ತದಿಂದ ಪ್ರೇರಿತ ಇರಬಹುದು. ಮತ್ತೆ ಹುವಿಷ್ಕನ ಸುವರ್ಣನಾಣ್ಯದ ಮೇಲೆ ಆಲೇಖಿತ ಶಿವನ ಕರಗಳಲ್ಲಿ 'ಚಕ್ರ'ವೂ ಧಾರಣವಾಗಿದೆ. ಅಂದರೆ ಪ್ರಸ್ತುತ ಕದಂಬ ಶಾಸನವು ಶ್ಲೇಷೆಯಿಂದ ಹರಿ-ಹರ ಸಮನ್ವಯ ಸಂಕೇತದ್ದೆನಿಸುತ್ತದೆ. ಎಂ. ಎಚ್. ಕೃಷ್ಣ ಅವರೇ, ಈ ಶಾಸನದ ಪ್ರಾರ್ಥನಾ ಶ್ಲೋಕವು, ಹಾಗು ತಾಳಗುಂದ ಸ್ತಂಭಶಾಸನವು ಕದಂಬರ ಹರಿ-ಹರ ಭಕ್ತಿಯನ್ನು ಸೂಚಿಸುತ್ತದೆ (ಎಂ. ಎ. ಆರ್ ೧೯೩೬, ಪು. ೮೧) ಎಂದಿರುವಾಗ ಶಾಸನ ಶ್ಲೋಕವನ್ನು ಶ್ಲೇಷೆ ಇಲ್ಲದ ಕೇವಲ ವಿಷ್ಣುಪರ ಶ್ಲೋಕ ಎನ್ನುವಂತಿಲ್ಲ. ಶಾಸನದಲ್ಲಿ 'ಪಶುಪತಿ' ಎಂಬ ಶಬ್ದವನ್ನು ಸ್ಥಾನಮಾನ-ವಿಶೇಷಣಕ್ಕೆ, ಬಿರುದಿಗೆ, ಹೋಲಿಕೆಗೆ ನಾಮಧೇಯಕ್ಕೆ ಹೀಗೆ ಹಲವುಬಾರಿ ಪುನರಾ ವರ್ತಿಸಿರುವ ಹಿನ್ನೆಲೆಯನ್ನು ಪಾಶುಪತ ಸಂದರ್ಭಕ್ಕೆ ಅನ್ವಯಿಸಬಹುದಾಗಿದೆ. ಅಲ್ಲದೆ ತಾಳಗುಂದ ಶಾಸನದ ಆರಂಭದಲ್ಲಿಯೆ (ಶಿವ) ಪಶುಪತಿಯ ಸ್ತುತಿ ಇದೆ. ಕದಂಬರು ಸಪ್ತಮಾತೃಕೆಯರ ಆರಾಧಕರೆಂದಿದೆ; ಕಾಕುಸ್ಥನು ಪಶುಪತಿಯ ಪ್ರಸಾದ ಜನಿತನೆಂದಿದೆ.*

*ಇನ್ನು ಹಲ್ಮಿಡಿ ಶಾಸನದ ಗದ್ಯಶೈಲಿಗೆ ಶಾಸನದ ಸಾಲುಗಳನ್ನು (೨-೪) ಸೋದಾಹರಿಸಿ ಒಳ್ಳೆಯ ಗದ್ಯಕ್ಕೂ ತನ್ನದೇ ಆದ ಒಂದು ಅಸಾಧಾರಣ ಲಯಗತಿ ಉಂಟೆಂಬುದು ಇಲ್ಲಿ ವ್ಯಕ್ತವಾಗಿದೆ. ಎಂದು *೩೨ ಪ್ರೊ॥ ಸಿ. ಮಹಾದೇವಪ್ಪ ಅಭಿಪ್ರಾಯಪಟ್ಟಿದ್ದಾರೆ. ಅವರ ಮಾತು 'ನಮಃ ಶ್ರೀ ಮತ್ಕದಂಪನ್ತ್ಯಾಗ*

ಸಂಪನ್ನಸ್...' ಅನ್ನುವವರೆಗೆ ಹಾಗು ೩-೪ನೇ ಸಾಲುಗಳವರೆಗೆ ಸರಿಯೆ. ಆದರೆ ೫ನೇ ಸಾಲಿನ 'ಕಲಭೋರ(ನಾ) ಅರಿ' ಎನ್ನುವಲ್ಲಿ ಲಯಗತಿ ಧುತ್ತೆಂದು ನಿಂತ ಭಾಸವಾಗುತ್ತದೆ. ಅಲ್ಲದೆ ಈ ಮಾತಿಗೆ ಪೋಷಕವಾಗಿ ಲಯತಪ್ಪಿದ ಶಬ್ದವೊಂದು ಊಹಾಪಾಠವಾಗಿರುವುದೂ ಕಾರಣವಾಗಿದೆ. ಡಾ॥ನೇಗಿನಹಾಳ ಅವರು, ಶಾಸನದ ಲಿಪಿ ಅಷ್ಟೊಂದು ಪರಿಶುದ್ಧವಾಗಿಲ್ಲ; ಕಾಗುಣಿತ ತಪ್ಪುಗಳಿವೆ; ಲಿಪಿಕಾರ ಅಥವಾ ಕಂಡರಣೆಕಾರನ ಕೆಲವೊಂದು ತಪ್ಪುಗಳು ನುಸುಳಿರುವುದು ತೀರ ಸಂಭವನೀಯ ಎನಿಸುತ್ತದೆ; ಶಾಸನ ಸಂಪಾದಕರು ಗದ್ಯಭಾಗದಲ್ಲಿ ನಾಲ್ಕು ಕಡೆಗೆ ಊಹಾಪಾಠ ಕೊಟ್ಟಿದ್ದಾರೆ ಎಂದೆಲ್ಲ ಹೇಳಿದ್ದಾರೆ. *೩೩ ಎಂ. ಎಚ್. ಕೃಷ್ಣ ಅವರು ಲಿಪಿ ಲಕ್ಷಣ ಹೇಳುತ್ತ, 'ಭ' ಅಕ್ಷರ ಬಹಳ ಅಗಲವಾಗಿ ಬಾಹುಗಳು ಬಾಗಿವೆ. 'ಲ' ಅಕ್ಷರದ ಬಾಲ ಎಡಕ್ಕೆ ಮುಗಿದಿದೆ, ಎಂದಿದ್ದಾರೆ ಮತ್ತು 'ಕಲಭೋರ' ಎಂಬ ಶಬ್ದ ಸ್ಪಷ್ಟವಾಗಿ ಕಾಣದು; ಅದರ ಮಧ್ಯದ ಮೂರಕ್ಷರಗಳ ಓದು ಸಂದೇಹಾಸ್ಪದವಾಗಿದೆ. ಅಂತಾಗಿ ಕಲಭ್ರರ 'ಕಲಭೋರ' ನೆಂಬುವನಿರಬಹುದು ಎಂಬ ಊಹಾಪಾಠ ನೀಡಿದ್ದಾರೆ; ಅಲ್ಲದೆ ಕಲಭೋರನ ಅಂಕಿತನಾಮ ನೀಡಿಲ್ಲವಾಗಿ ಅವನು ಕಲಭ್ರದೇಶದ ದೊರೆ ಎಂದಿದ್ದಾರೆ. *೩೪

ಎಂ. ಜೆ. ಶರ್ಮ ಅವರು ಕೆ. ಎ. ನೀಲಕಂಠ ಶಾಸ್ತ್ರಿಗಳ ಕೃತಿಯಿಂದ ಉದ್ಧೃತಮಾಡುತ್ತ 'ಕಲಭ್ರರು ದುಷ್ಟರಾಜರು, ನಾಗರಿಕ ಶತ್ರುಗಳು. ಪಾಂಡ್ಯರಾಜ್ಯ ಆಕ್ರಮಿಸಿದವರು,' ಎಂದಿದ್ದಾರೆ. ಪಲ್ಲವರಿಗೂ ಅವರಿಂದ ಬೆದರಿಕೆ ಇತ್ತು. ಅವರ ಮೂಲ ನೆಲೆ ಸಿಂಹಳದ್ವೀಪದ ಜಾಫ್ನಾ ಪ್ರದೇಶವಾಗಿದ್ದು ಅಲ್ಲಿ ಕ್ರಿ. ಪೂ. ೩ನೇ ಶತಮಾನದಿಂದಲೂ ಬೌದ್ಧ ಧರ್ಮ ಪ್ರಬಲವಾಗಿದ್ದು, ಕಲಭ್ರರು ಬ್ರಾಹ್ಮಣ ವಿರೋಧಿಗಳಾಗಿದ್ದರು ಎಂಬುದನ್ನು ಹೇಳಿ 'ಕಲ ಭೋರನಾ ಅರಿ' ಎಂಬ ವಿಶೇಷಣವು ಇಮ್ಮಡಿ ಚಂದ್ರಗುಪ್ತನಿಗೆ 'ಶಕಾರಿ' ಎಂದಿದ್ದಂತೆ ಕಾಕುಸ್ಥನಿಗೆ ಒದಗಿದೆ. ಬಹುಶಃ ಕರ್ನಾಟಕದ ದ. ಕ. ಜಿಲ್ಲೆಯ ಆಳುಪರು, ಪಾಂಡ್ಯರು ಕಲಭ್ರರಿಂದ ತಮ್ಮ ರಾಜ್ಯ ಗೆದ್ದುಕೊಳ್ಳುವಲ್ಲಿ ನೆರವಾಗಿರಬಹುದು ಎಂದೆಲ್ಲ *೩೫ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಕಲಭ್ರರು ೪ನೇ ಶತಮಾನದ ಮಧ್ಯದಲ್ಲಿಯೇ ಪಾಂಡ್ಯ ರಾಜ್ಯವನ್ನು ಆಕ್ರಮಣ ಮಾಡಿದರು. ಆದರೆ ಕ್ರಿ. ಶ. ೫೫೦ರ ಪಾಂಡ್ಯರ ಕಡುಂಗನ್ ಕಲಭ್ರರನ್ನು ಓಡಿಸಿದ. *೩೬ ಪಲ್ಲವ ಸಿಂಹವಿಷ್ಣು ಕೂಡ ಅವರನ್ನು ಸೋಲಿಸಿದ. ಆದರೂ ಅವರ ಬಿರುದುಗಳಲ್ಲಿ 'ಕಲಭ್ರಾರಿ' 'ಕಲಭ್ರಧ್ವಂಸಿ' ಎಂಬ ಅರ್ಥದ ಬಿರುದುಗಳಿದ್ದ ಬಗ್ಗೆ ಉಲ್ಲೇಖಗಳಿಲ್ಲ. ಹೀಗಿರುವಲ್ಲಿ ಕಲಭ್ರರ ಪೈಕಿ ಎನ್ನಲಾದ 'ಕಲಭೋರನ', 'ಅರಿ' ಎಂಬ ವ್ಯಕ್ತಿವಾಚಿ ವಿಶೇಷಣವನ್ನು 'ಶಕಾರಿ' ಎಂಬ ಜನಾಂಗವಾಚಿ ವಿಶೇಷಣ ಎಂಬಂತೆ ಕಾಕುಸ್ಥನಿಗೆ ಹಚ್ಚುವುದು ಎಷ್ಟು ಸರಿ? ಜೊತೆಗೆ ದಕ್ಷಿಣದ ಕಡೆಯಿಂದ ಬರುತ್ತಿದ್ದ ಸಮಾನ ಶತ್ರು 'ಕಲಭ್ರ'ರನ್ನು ಸದೆ ಬಡಿಯಲು ಪಾಂಡ್ಯ, ಪಲ್ಲವ, ಕದಂಬರು ಒಂದಾಗಿ ನಿಲ್ಲಲಿಲ್ಲವೇಕೆ! ಸಮುದ್ರ ಗುಪ್ತನ ಕ್ರಿ. ಶ. ಸು. ೩೫೦ರ ಅಲಹಾಬಾದ್ ಶಾಸನದಲ್ಲಿ ಸಿಂಹಳದೊರೆ ಮೇಘವರ್ಣನ ಪ್ರಸ್ತಾಪವಿದ್ದು, ಬೌದ್ಧಗಯೆಯಲ್ಲಿ ಚೈತ್ಯ ಕಟ್ಟಿಕೊಳ್ಳಲು ಅವಕಾಶ ನೀಡಿ 'ಸಿಂಹಳಕಾದಿಭಿಶ್ಚ ಸರ್ವದೀಪ ವಾಸಿ' ಎಂದು ಹೇಳಿ ಅವರ ಯಾವ ದುಷ್ಟಗುಣವನ್ನೂ ಎತ್ತಿ ಹೇಳಿಲ್ಲ. ಆಗ ಕಲಭ್ರರು ಅಲ್ಲಿನವರೇ ಆಗಿದ್ದರೆ, ಮಯೂರವರ್ಮನ ಕಾಲದಲ್ಲಿಯೂ ಇಲ್ಲಿ ಅವರ ಧಾಳಿ ನಡೆದಿಲ್ಲ. ಕಾಕುಸ್ಥನಿಗೆ ಅವರು 'ಅರಿ' ಎಂದಿರುವುದು ಹೆಮ್ಮೆಯ ವಿಶೇಷಣವಾಗಿದ್ದರೆ ಅವನು ನೂರಾರು ಯುದ್ಧ ಮಾಡಿದ ನಿಪುಣ ಎಂದೂ ಅರ್ಥವನ್ನು ಹಲ್ಮಿಡಿ ಶಾಸನದಲ್ಲಿ ಅನ್ವಯಿಸಿಕೊಳ್ಳುವಲ್ಲಿ, ಕಲಭ್ರರ ಮೇಲೆ ಯುದ್ಧ ಮಾಡಿ ಗೆದ್ದ ಸಂಗತಿ ಇರಬಹುದೆ? ಹಾಗಿದ್ದಿದ್ದರೆ ತಾಳಗುಂದ ಶಾಸನವೂ ಸೇರಿದಂತೆ ಅನ್ಯ ಶಾಸನೋಕ್ತವಾಗಿರ ಬೇಕಿತ್ತಲ್ಲವೆ? ಅಲ್ಲದೆ ಪಲ್ಲವ, ಕೇಕೆಯರೊಡನೆ ಕದಂಬರು ಯುದ್ಧ ಮಾಡುವಲ್ಲಿ ಆ ದೊಡ್ಡ ಶತ್ರು ಕಲಭ್ರರು (ಕಲಭೋರ!) ಸಮಯ ಸಾಧಿಸಿ ಕದಂಬರ ಮೇಲೆ ಏರಿಬರಬಹುದಿತ್ತಲ್ಲ! ಮೃಗೇಶನಿಗೆ 'ಪಲ್ಲವ ಪ್ರಲಯಾನಲ' ಎಂದು ವೀರ್ಯವತ್ತಾದ ವಿಶೇಷಣವಿರುವಲ್ಲಿ ಅಷ್ಟೊಂದು ಪ್ರಸಿದ್ಧರೆಂದಿರುವ ಕಲಭ್ರರಿ ಗೆದುರು ಅವರ 'ಅರಿ' ಎಂಬ ಸಾಮಾನ್ಯ ವಿಶೇಷಣ ಕಾಕುಸ್ಥನಂತಹ ವನಿಗೆ ಹೊಂದುವುದೆ? ಶಾಸನಾರಂಭದಲ್ಲಿ ಒಳ್ಳೆಯ ಕದಂಬ ವಂಶಿಕ ತ್ಯಾಗಸಂಪನ್ನ ಎಂದೆಲ್ಲ ಸಮುಚಿತ ಸದ್ಗುಣ ಆರೋಪಿಸುವ ಸಾಲಿನಲ್ಲಿ, ಸಾಮಾನ್ಯ ತೆರನಾದ, ದೋಷ ಗುಣದ ಧ್ವನಿತೋರುವ 'ಕಲಭೋರನಾ ಅರಿ' ಶಬ್ದ ಸಾಧುವೆನಿಸದು. ಅದು ಧನಾತ್ಮಕ ವಿಶೇಷಣ ಎನಿಸದು. ಹೀಗಾಗಿ ಆ ಶಬ್ದದ ಊಹಾಪಾಠವಾಗಿರುವ 'ಕಲಭೋರ(ನಾ) ಅರಿ' ಎನ್ನುವಲ್ಲಿ ಗದ್ಯದ ಲಯಗತಿಗೂ ಅನುಗುಣವಾಗಿ ನಮಃ ಶ್ರೀಮತ್ಕದಂಪನ್ತ್ಯಾಗಸಂಪನ್ನಸ್ಕಲಿ ಭೈರವನ್ಕ ಎಂಬ ೧೯ ಅಕ್ಷರಗಳ ಸಾಲನ್ನು ಮಾಡಿಕೊಂಡರೆ, ಇದು ಪಾಶುಪತದ ಹಿನ್ನೆಲೆಯಲ್ಲಿ ಶೂರ ಕಾಕುಸ್ಥನಿಗೆ ಅನ್ವಯವಾಗಬಹುದಾದ ವಿಶೇಷಣವಾಗುತ್ತದೆ. ಶಾಸನಗಲ್ಲಿಗೆ ಕಲ್ಲು ಏಟುಗಳು ಬಿದ್ದು ನಿಜವಾದ ಪಾಠ ಅಳಿಸಿಯೋ, ಲಿಪಿಕಾರನ ದೋಷವೋ ಏನೋ ಮೊದಲಿನ ಊಹೆಗಳಿಗೆ ಅವಕಾಶವಾಗಿರ ಬಹುದು. ಇನ್ನು ಆ ಸಾಲಿನಲ್ಲಿ ೨೧ ಅಕ್ಷರಗಳೇ ಇದ್ದು 'ಅರಿ' ಎಂಬ ಶಬ್ದವಿದೆ ಎಂದರೆ ಕಾಕುಸ್ಥನು 'ಕಲಿಭೈರವ'ನೆಂಬುದನ್ನು 'ತಿಳಿ' ಎಂಬರ್ಥ ಸೂಕ್ತಾನ್ವಯವಾಗಬಹುದು. ಇಲ್ಲವೆಂದರೆ, 'ಅರಿ' ಎಂಬ ಶಬ್ದ 'ಹರಿ' ಅಥವಾ 'ಆರ್ಯ' ಎಂಬುದರ ಅಪಭ್ರಂಶ ರೂಪವಾಗಬಹುದು. ಆಗ ಡಾ॥ ಜಿ. ಎಸ್. ಗಾಯಿ ಅವರು ಹೇಳಿರುವಂತೆ 'ಕಕುಸ್ಥ ಭಟ್ಟೋರನು' ಕದಂಬ ಮೂಲಮನೆತನದ ಕೊನೆ ಅರಸು ಹರಿವರ್ಮನ (ಕ್ರಿ. ಶ. ಸು. ೬. ಶ.ದ ಆರಂಭ) ಮಾಂಡಲಿಕನಾಗಿ ನರಿದಾವಿಳೆನಾಡಧಿಪತಿಯಾಗಿರಬೇಕು. *೩೭ ಅದರಿಂದ ಅಧಿರಾಜರ ಹೆಸರನ್ನು ಅಧೀನರು ವಿಶೇಷಣವಾಗಿ ಬಳಸಿಕೊಳ್ಳುವಂತೆ ಇಲ್ಲಿ ಹರಿ ಕಾಕುಸ್ಥ ಭಟ್ಟೋರನೆನಿಸಿ, ಲಿಪಿಕಾರನ ದೋಷದಿಂದ ಅಪಭ್ರಂಶ ರೂಪದಲ್ಲಿ ನಮೂದಿತವಾಗಿರಬಹುದು. ಕಲಭ್ರರೆ, ಕಲಭೋರರು ಎಂದೇ ಹೇಳಬೇಕೆಂದರೆ ಶಾಸನದಲ್ಲಿ 'ಕಲಭೋರರಾ ಅರಿ' ಎಂಬುದು 'ಕಲಭೋರ(ನಾ) ಅರಿ' ಎಂಬುದಕ್ಕಿಂತ ಜನಾಂಗವಾಚಿಯಾಗಿ ಹೆಚ್ಚು ಸೂಕ್ತವೆನಿಸಬಹುದು. ಆದರೆ ಉಳಿದ ಪ್ರಶ್ನೆಗಳಿಗೆ ಉತ್ತರ ಬೇಕಾಗುತ್ತದೆ.

ಶಾಸನದ ಕುಱುಮ್ಬಿಡಿ ಎಂಬ ಶಬ್ದ ಒಂದು ಬಗೆ ತೆರಿಗೆ ಎಂಬ ಊಹೆ ಇದ್ದರೂ ಜಿ. ಎಸ್. ಗಾಯಿ ಅವರು ಆ ಶಬ್ದವನ್ನು

ಸಂಸ್ಕೃತದ ಕುಟುಂಬವೃತ್ತಿ ಹಾಗು ಕನ್ನಡ ಶಾಸನಗಳಲ್ಲಿನ ಕುತ್ತುಂಬಿತ್ತಿ ಶಬ್ದಗಳೊಡನೆ ಹೋಲಿಸಿ ವಿವೇಚಿಸಿದ್ದಾರೆ. ಆ ಶಬ್ದಗಳು 'family fief' ಅಥವಾ ಅಣುಗಜೀವಿತ (Ep. Ind. vol XVI, pp.81-83) ವಾಗಿ ವಂಶಪಾರಂಪರ್ಯದ ಉಪಭೋಗಕ್ಕೆ ಕೊಟ್ಟ ದಾನವನ್ನು ಸೂಚಿಸುವಲ್ಲಿ, ವಿಜಅರಸನು ಪಲ್ಮಡಿಯನ್ನು ದಾನಪಡೆಯುವ ಸಂದರ್ಭಕ್ಕೆ ಸೂಕ್ತವಾದ ಅರ್ಥವಾಗಿದೆ ಎಂದಿದ್ದಾರೆ.*೩೮ ತಮಿಳು-ಇಂಗ್ಲಿಷ್ ನಿಘಂಟೊಂದರಲ್ಲಿ (೧೯೦೮) ಕುಱುಮ್‌ಬಿಡಿ = ಉಡೈವಾಳ್ = a short seimifar (short single edged curved sword) ಎಂದು ಅರ್ಥ

குறும்பிடி = உடைவாள்

ನೀಡಲಾಗಿದೆ.*೩೯ ಪ್ರೊ॥ ಸಿ. ಮಹಾದೇವಪ್ಪ ಅವರು ಈ ಅರ್ಥವನ್ನು ಅನುಸರಿಸಿ(ಉಡಿ=ಸೊಂಟ, ಉಡೈವಾಳ್=ಸೊಂಟದ ಕಿರುಗತ್ತಿ) 'ಕುಱುಮ್ಬಿಡಿ' ಎಂದರೆ ಕಱುಗತ್ತಿವಾಳ ಬಿಟ್ಟರು ಎಂದಿದ್ದಾರೆ.*೪೦ ಕಿಱುಗೇಣ್-ಕಿಱುಗತ್ತಿ(=ಮಾಳ) ಎಂದೂ ಹೇಳಿದ್ದಾರೆ. ಕುಱು=ಸಣ್ಣದಾದ ಎಂಬರ್ಥ ಕ-ಕ ನಿಘಂಟಿನದು. (cf ಕುಱುಮನೆ = ಸಣ್ಣಮನೆ); ಪಿಡಿ=ಒಂದು ಬಗೆ ಆಯುಧ ಎಂದೂ ಅರ್ಥನೀಡಿದೆ. ಎಂ. ಜೆ. ಶರ್ಮ ಅವರು ಶಾಸನದ ಪುನರ್‌ಪರಿಶೀಲನೆಯಲ್ಲಿ, 'ಕುಱುಮ್ಬಿಡಿ' ಎಂಬ ಶಬ್ದವನ್ನು ಕುಟಿಮ್ಬಿಡಿ ಎಂದು ಓದಿದ್ದಾರೆ.*೪೧ ಬಾಟ್ ಮತ್ತು ಬಾಳ್ ಶಬ್ದಗಳು ಜೀವನದ ಮುಖ್ಯ ಸಾಧನವಾದ 'ಹೊಲ' ಎಂಬ ಅರ್ಥದಲ್ಲಿ ಪ್ರಯುಕ್ತ ಎಂಬದು ಡಾ॥ ಕೆ. ವಿ. ರಮೇಶರ ವಾದ; ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಪೂರ್ವದ್ರಾವಿಡ ಉಚ್ಚಾರಣೆ ಹಾಗು ಅರ್ಥವ್ಯತ್ಯಾಸ ಹೊಂದಿದ್ದರೂ, 'ಳ' ಮತ್ತು 'ಟ್' ಹಾಗೆಯೆ ಉಳಿದಂತೆ, ಜೀವನಗಳಿಕೆ, ಹೊಲ ಎಂಬ ಎರಡೂ ಅರ್ಥಗಳಲ್ಲುಳಿದಿರಬೇಕು ಎಂಬುದು ಕಲುಬುರ್ಗಿಯವರ ಮಾತು; ಡಾ॥ರಾ. ಶೇಷಶಾಸ್ತ್ರಿ ಅವರ ಭಿನ್ನಮತದ ನಡುವೆಯೂ, ಮೇಲಿನ ಹಿನ್ನೆಲೆಗಳನ್ನು ಗಮನಿಸಿದರೆ ಅವೇ ಸೂಕ್ತ ಎನಿಸುತ್ತವೆ. ಹಲ್ಮಿಡಿಯ ಮಾರ್ನೋಮಿ ಹಬ್ಬದಲ್ಲಿ ಊರಿನ ಬೋರೆ (ಮಾಳ)ಯಲ್ಲಿ ದೇವರ ಕತ್ತಿ ಇಟ್ಟು ಬಾಳೆಯ ಕೆಂಪು ತೊಂಬೆಕ್ಕೆಯನ್ನು ಕುಳವಾಡಿ ಮುಖ್ಯಸ್ಥ ತನ್ನ ಕತ್ತಿಯಿಂದ ಕಡಿದು ಕಳಚುವುದು, ಹಿರಡೆಲಿಂಗನ ಹಬ್ಬಕ್ಕೆ 'ಬನದಹೊಲ'ವನ್ನೆ ನೀಡಿರುವುದು ಇವೆಲ್ಲ ಪರಂಪರೆಯ ಬಾಳ್ಗಟ್ಟು, ಕುಱುಮ್ಬಿಡಿ ಶಬ್ದಗಳಿಗೆ ಸಾಂಪ್ರದಾಯಿಕ ಸಂವೇದನೆ ಎನಿಸುತ್ತದೆ. ಅಲ್ಲದೆ ಱ ಅಥವಾ ಟ, ಕುಳವಾಗುವುದು ಅಸಂಭವವಲ್ಲ.*೪೨ ಕುಳವಾಡಿಗೆ ವಂಶಪಾರಂಪರ್ಯವಾಗಿ 'ನಾಯಿಮಣ್ಣು' ನೀಡಿರುವ ಪದ್ಧತಿ ಇದೆ. ಹೀಗಾಗಿ ಕುಱುಮ್ಬಿಡಿ> ಕುಟಿಮ್ಬಿಡಿ> ಕುಳಮ್‌ಪಿಡಿ> ಕುಳಮ್‌ವಡಿ> ಕುಳವಡಿ> ಕುಳವಾಡಿ> ಕೊಟವಳಿ ಆಗಿರಬಹುದೇ? ಹಾಗಿದ್ದರೆ 'ಕುಳವಾಡಿ' ಶಬ್ದದ ಪ್ರಾಚೀನ ಇತಿಹಾಸಕ್ಕೆ ಇಂಬು ಒದಗಬಹುದು. ಅದರ ಮೂಲರೂಪ 'ಕುಱುಮ್ಬಿಡಿ' ಆಗಿ ದಲಿತವರ್ಗದ ಮುಖ್ಯಸ್ಥರಿಗೂ ಅದನ್ನು ನೀಡುವ ಪದ್ಧತಿ ಇದ್ದಿರಬಹುದು. ಹಾಸನಜಿಲ್ಲೆಯ ಕೆಲವು ವೀರಶೈವಮಠಗಳಲ್ಲಿ ಕುಳವಾಡಿ ಮುಖ್ಯಸ್ಥರಿಗೆ 'ಕೊಟವಳಿ' ದೀಕ್ಷೆ ಕೊಡುವುದು, ಹಲ್ಮಿಡಿಯ ನೆರೆಯ ಅಗಸರಹಳ್ಳಿಯ ಹಿರಡೆಲಿಂಗನ ಹಬ್ಬದಲ್ಲಿ ಮಾತ್ರ ಲಿಂಗದಕಾಯಿ ಕಟ್ಟಿಕೊಂಡು ಪೂಜೆ ಮಾಡುವ ಅರ್ಚಕರಿರುವುದು ಈ ದಿಸೆಯಲ್ಲಿ ಮತ್ತಷ್ಟು ಪರಿಶೀಲಿಸಬೇಕಾದ ಅಂಶವಾಗಿದೆ.

ಶಾಸನದಲ್ಲಿ ಬರುವ ಹಲ್ಮಿಡಿಯ ನೆರೆಯ ಮೂಱುವಳ್ಳಿ (೩ ಕಿ. ಮೀ. ದೂರ) ಇಂದು ಮುಗುಳವಳ್ಳಿ ಎಂದಾಗಿದೆ. ಇವೆರಡರ ನಡುವೆ ಯಗಚಿ ಹೊಳೆ, ಪ್ರಾಚೀನ ಕಲ್ಲೇಶ್ವರ ಗುಡಿ, ಬ್ರಾಹ್ಮಣರು ಬಹಳ ಸಂಖ್ಯೆಯಲ್ಲಿದ್ದ ಅಂಬಳೆ-ಹೆಚ್ಚೆಗೇನಹಳ್ಳಿ ಪ್ರದೇಶ, ರಾಯರ ಒಡ್ಡು, ಸತಿಗುಂಡಿ, ಹಳ್ಳಿ ಹಾಳೂರು ರಾಜನಗದ್ದೆ, ಇತ್ಯಾದಿಗಳಿವೆ. ಕ್ರಿ. ಶ. ೯೦೦ರಲ್ಲಿಯೂ ಮೂಱುವಳ್ಳಿ ಎಂಬ ಹೆಸರಿದ್ದು ಅದನ್ನು ಮಾದಿವರ್ಮನು ಕಲ್ನಾಡಾಗಿ ಪಡೆದ ಸಂಗತಿ, ಹೊಯ್ಸಳರ ಕಾಲದಲ್ಲಿ ಅದೇ ಹೆಸರು ಮುಂದುವರಿದು, ನಂತರ ಮುಗುಳವಳ್ಳಿ ಎನಿಸಿದ್ದು ಶಾಸನೋಕ್ತ. ಕ್ರಿ. ಶ. ೧೩೫೦ರ ವಿಜಯನಗರದ ಹರಿಹರನ ಸಮಕಾಲೀನ ಜೈನಕ್ಷತ್ರಿಯ ಮಂಗರಸ ದೇವಳಿಗೆನಾಡಿನ ಮುಗಳೀಪುರದ ಅರಸನಾಗಿದ್ದುದರ ಬಗ್ಗೆ ಜಯನೃಪಕಾವ್ಯ ಸಂಗ್ರಹವು ಹೇಳುವಲ್ಲಿ, ಪ್ರಸ್ತುತ ಮುಗುಳವಳ್ಳಿಗೆ ಅದು ಅನ್ವಯವಿರಬೇಕು. 'ಮುಗಲಿ' ಎಂದೂ ಹೆಸರನ್ನು ಪಡೆದಿದ್ದ ಈ ಗ್ರಾಮದಲ್ಲಿ ಪ್ರಾಚೀನ ಗಣಪತಿ, ಪರಮೇಶ್ವರ, ವೀರಭದ್ರ, ವಿಶಿಷ್ಟ ಶೈಲಿಯ ಸುಂದರ ಕಪಾಲಭೈರವ, ದೇವೀರಮ್ಮನ (ಸಪ್ತಮಾತೃಕೆಯರು) ಗುಡಿಗಳು, ಶಾಸನ-ವೀರಗಲ್ಲುಗಳೂ ಇವೆ. ಈ ಸುತ್ತಿನಲ್ಲಿ ಕುರುಬಜನಾಂಗ ಇಂದಿಗೂ ಹೆಚ್ಚಿದೆ. ಮೊದಲಿಗೆ ಮೈಲಾರ ದೇವರಿಗೆ ಬಹಳ ಪ್ರಸಿದ್ಧಿ ಇಲ್ಲಿತ್ತು. ಹಲ್ಮಿಡಿ ಹಾಗು ಮುಗುಳವಳ್ಳಿಯ ಅನೇಕ ಸಾಂಸ್ಕೃತಿಕ ಹಬ್ಬಗಳು ಪರಸ್ಪರ ಸಂಬಂಧಗೊಂಡಿವೆ. ಗೌರಮ್ಮನ ಜಾತ್ರೆ ಇಲ್ಲಿ ಪ್ರಸಿದ್ಧ. ಕರಿ ಎಳೆಯುವ ಹಬ್ಬವೂ ಕುಳವಾಡಿಯ ಸಹಯೋಗದೊಡನೆ ಉತ್ಸಾಹಪೂರ್ಣವಾಗಿ ಇಲ್ಲಿ ನಡೆಯುತ್ತದೆ. ಊರಿನ ಸುತ್ತ ಪ್ರಾಚೀನ ಕೋಟೆಯ ಅವಶೇಷಗಳ ಕುರುಹೂ ಇದೆ. ಸನಿಹದ ಮರಲೆ ಹೋಬಳಿಗೆ ಸೇರಿದ ರಾಮೇನ ಹಳ್ಳಿಯ ರಾಮೇಶ್ವರ ದೇಗುಲದಲ್ಲಿ ಕ್ರಿ. ಶ. ೮೯೩ರ ಶಾಸನವೊಂದಿದ್ದು ಅಮೃತರಾಶಿ ತೀರ್ಥ ಭಟಾರರ ವ್ರತಕ್ಕೆ ದಾನಕೊಟ್ಟ ಸಂಗತಿ ಇದ್ದು ಈ ನೆರೆಯಲ್ಲಿ ಕಾಳಾಮುಖ ಶೈವ ಪ್ರಭಾವವಿದ್ದುದನ್ನು ಅದು ಸೂಚಿಸುತ್ತದೆ. ಹೀಗೆ ಹಲ್ಮಿಡಿ-ಮುಗುಳವಳ್ಳಿ ಪರಿಸರಗಳು ಬಹುಶಃ ಸಾತವಾಹನರ ಕಾಲದಿಂದಲೇ ಪಾಶುಪತ ಶೈವಕ್ಷೇತ್ರವೆನಿಸಿ, ಪ್ರಾಚೀನ ಶಿಲ್ಪಗಳು, ಜನಪದ ಆಚರಣೆಗಳು, ಇತಿಹಾಸದ ನೆನಪುಗಳ ಮೂಲಕ ತಮ್ಮ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ನಿದರ್ಶಿಸಿವೆ.

## ಕಲ್ಯ

ಹಲ್ಮಿಡಿಯಲ್ಲಿ ಇತಿಹಾಸಪೂರ್ವಕಾಲದ ಚಹರೆಗಳು ಜನಪದ ಆಚರಣೆಗಳಲ್ಲಿ ರೂಪಾಂತರಗೊಂಡಂತಿದ್ದರೆ, ಕಲ್ಯದಲ್ಲಿ

ಆದರ ಖಚಿತ ಗುರುತುಗಳು ಎದ್ದು ಕಾಣುತ್ತವೆ. ಅಲ್ಲಿನ ತಾರಕಾಚಲ ಗವಿಗಳಲ್ಲಿ ನವಶಿಲಾಯುಗದ ಮಾನವರು ಬರೆದ ಚಿತ್ರಗಳು, ಬಳಸಿದ ಸಾಮಗ್ರಿಗಳು, ಬೃಹತ್‌ಶಿಲಾಯುಗದ ಕಲ್ಮನೆ, ಕಲ್ಗೋರಿಗಳೂ ಕಾಣಬರುತ್ತವೆ. ಐತಿಹಾಸಿಕವಾಗಿ ಬೌದ್ಧ (ವಜ್ರಯಾನ) ಜೈನ, ವೀರಶೈವ ವೈಷ್ಣವ ಧರ್ಮಗಳ ಅಸ್ತಿತ್ವ ಹಾಗು ಸಾಂಸ್ಕೃತಿಕ ಅವಶೇಷಗಳನ್ನು ಅದು ಹೊಂದಿದೆ.

ಶಿಲ್ಪಗಳು : ಕಲ್ಲೇಶ್ವರ ಗುಡಿಯು ಒಂದು ಗುಹಾಂತರ್ದೇಗುಲವಾಗಿದೆ. ಗುಡಿಯ ಹೊರ ಬಾಗಿಲುವಾಡದ ಬುಡದ ಇಬ್ಬದಿಯಲ್ಲಿ ದ್ವಾರಪಾಲಕರ ಬದಲು ಗಂಗೆ ಯಮುನೆಯರ ಸಂಕೇತವಾದ ಕುಂಭ-ಕಳಶಗಳ ಚಿತ್ತಾರವನ್ನು ರೇಖಾ ಶಿಲ್ಪದ ಮೇಲೆ ಬಿಡಿಸಿದೆ. ಗರ್ಭಗೃಹದ ಬಾಗಿಲುವಾಡದಲ್ಲಿಯೂ ಹೀಗೆಯೆ ಇದ್ದು, ಲಲಾಟದಲ್ಲಿ ತಾಂತ್ರಿಕ ಸಂಕೇತದ ೯ ಮನೆಗಳ ವೃತ್ತದ ಉಬ್ಬುಶಿಲ್ಪವಿದೆ. ತ್ರಪುಸಾಕಾರದ ಕಿರು ರುದ್ರಭಾಗವಿರುವ(ಬಾಣ) ಶಿವಲಿಂಗದ ಪಾಣಿವಟ್ಟ ವಿಸ್ತ್ರತ ವೃತ್ತಾಕಾರವಾಗಿದ್ದು ಒರಿಸ್ಸಾದ ಶಿವಲಿಂಗಗಳ ರಚನೆಯನ್ನು ನೆನಪಿಗೆ ತರುತ್ತದೆ. ಅಂತಾಗಿ ಕಾಕತೀಯರ ಕಾಲದಲ್ಲಿ ಇದು ಜೀರ್ಣೋದ್ಧಾರಗೊಂಡಿರುವಂತಿದೆ. ಅಥವಾ ರಾಷ್ಟ್ರಕೂಟರ ಕಾಲಕ್ಕೇ ಪ್ರತಿಷ್ಠೆಯಾದ ಶಿವಲಿಂಗವೋ ಎಂಬುದು ನಿಖರವಾಗಿ ತಿಳಿಯದು. ಕಾರಣ ಕ್ರಿ. ಶ. ೯೭೭ರ ಸಮಯದಲ್ಲಿ ರಾಷ್ಟ್ರಕೂಟ ಕನ್ನರದೇವನ ಕಾಲದಲ್ಲಿ ನೆರೆಯ ಬಾಣವಾಡಿಯಲ್ಲಿ ಮೂಕಸಾಲೇಶ್ವರ, ಉಡುಕುಂಟೆಯಲ್ಲಿ ದಡಿಗೇಶ್ವರ ದೇಗುಲಗಳು ನಿರ್ಮಾಣಗೊಂಡಿರುವುದು ಮಾಗಡಿಯ ಶಾಸನಗಳಿಂದ ತಿಳಿಯುತ್ತದೆ. ಗರ್ಭಗೃಹದ ಎದುರಿಗೆ ಕಮಲದ ಬಿಗಿ ಮೊಗ್ಗುಗಳನ್ನು ಹಿಡಿದ ಸ್ಥಾನಕ ಸೂರ್ಯಶಿಲ್ಪವಿದೆ. ತಾರಕಾಚಲ ಗುಡ್ಡ ಎಂಬ ಹೆಸರು ಇಲ್ಲಿರುವ ಕಾರಣ, ಅನುಗುಣ ಚಹರೆಯ ಶಿಲ್ಪಗಳೂ ಇಲ್ಲಿರುವ ಕಾರಣ, ಬೌದ್ಧಸಿದ್ಧರ ನೆಲೆಯಾಗಿ ಈ ಪ್ರದೇಶವಿತ್ತೆನಿಸುತ್ತದೆ. ತಾಂತ್ರಿಕ ಚಿಹ್ನೆಯ ಬಳಕೆಯೂ ತಾಂತ್ರಿಕ ಬೌದ್ಧ-ವಜ್ರಯಾನದ ಕುರುಹಾಗಿ, ಬೌದ್ಧಸಿದ್ಧರು ನಾಥಪಂಥದ ಮೂಲಕ ಕಾಳಾಮುಖ ಶೈವರಾದಂತೆ ಇಲ್ಲಿನ ಧಾರ್ಮಿಕ ಪರಿಸರವೂ ಶೈವೀಕರಣಗೊಂಡಿತು. ಅಂತೇ ಸ್ಥಾನಕ ಭೈರವನ ಪ್ರಾಚೀನ ಶಿಲ್ಪವೂ ಇಲ್ಲಿ ಕಾಣಬರುತ್ತದೆ.

ಇಲ್ಲಿನ ಬಹುಮುಖ್ಯ ಶಿಲ್ಪವೆಂದರೆ ಕಕ್ಕುಟಾಂಡಾಕಾರದ ಪ್ರಾಚೀನ ಶಿವಲಿಂಗದ ರುದ್ರಭಾಗ, ಪಾಣಿವಟ್ಟವಿಲ್ಲದ ಪ್ರಾಚೀನ ಶಿವಲಿಂಗವಾಗಿದೆ. ಮೊಗದ ಮೇಲಿನ ಮೂರು ಗುಳಿಗಳೂ ಪಾಶುಪತಯೋಗ ಚಿಹ್ನೆ ಇರಬಹುದೆನಿಸುತ್ತದೆ. ಈ ಶಿಲ್ಪದ ಛಾಯಾ ಚಿತ್ರವನ್ನು ನೋಡಿ ಡಾ॥ ಅ. ಸುಂದರ ಅವರು ಇದರ ಕಾಲ ಕ್ರಿ. ಶ. ೩-೪ನೇ ಶತಮಾನ ಎಂದು ಅಭಿಪ್ರಾಯ ಸೂಚಿಸಿದರು. ಕದಂಬ ಮಯೂರಶರ್ಮನ ಶಾಸನ ದೊರೆತ ನೆಲೆಯ ಸನಿಹದಲ್ಲಿಯೆ ಅಂಡಾಕಾರದ ಶಿವಲಿಂಗವನ್ನು ಅವರು ಪತ್ತೆಮಾಡಿದ್ದಾರೆ. *೪೩ ಅಂತದೆ ಈ ತಳಭಿನ್ನಗೊಂಡ ಅಂಡಾಕಾರದ ಶಿವಲಿಂಗವು ಕದಂಬರ ಕಾಲದ್ದು ಎಂದಾಗಿ, ಕದಂಬರ ಶಿಲ್ಪ ಶೈಲಿಯ ಚಾಚು ಇಲ್ಲಿಯವರೆಗಿತ್ತೆಂಬ ಸೂಚನೆ ಸಿಗುತ್ತದೆ. ಇನ್ನೊಂದು ಶಿಲ್ಪವು ಸ್ತ್ರೀ ಮೊಗ(ರುಂಡ)ದ ಚಹರೆ ತೋರುತ್ತ, ಕಲ್ಮಾತ್ಮಕ ಹುಬ್ಬು, ಪ್ರಸನ್ನವದನ, ಅರಳಿದ ನಯನ, ನೀಳ ಮೂಗು, ಅರಳಿದ ದುಂಡು ಮೊಗದಲ್ಲಿ ನಗೆದುಟಿ, ಸುಂದರ ನೀಳಕರ್ಣ, ನೆತ್ತಿಪಟ್ಟಿಯ ಮಣಿಮಾಲೆ, ಮಟ್ಟಸ ಅಗಲದ ಕೇಶಮುಡಿಯಂತೆ ಅಲಂಕೃತಗೊಂಡ ಶಿರ(ಟೊಪ್ಪಿಗೆ!) ಲಲಾಟದಲ್ಲಿ ಬಹುಶಃ ಧ್ಯಾನಿಬುದ್ಧನ ಸಂಕೇತ ತೋರುವ ಚಹರೆ - ಇವೆಲ್ಲ ತಾರಾಭಗವತಿಯ ಒಂದು ಮಾದರಿ ಸ್ತ್ರೀ ಮೊಗ ಶಿಲ್ಪವಿದಾಗಿರಬಹುದೆ? ಎನಿಸುತ್ತದೆ. ತಾರಕಾಚಲ ಗುಡ್ಡ ಎನಿಸಿಯೂ ಷಣ್ಮುಖನ ಶಿಲ್ಪವಿಲ್ಲದಿರುವುದು, ತಾರಕಾಸುರನನ್ನು ಗಜಮುಖವೆನ್ನುವ ಸಂಗತಿ *೪೪ ಹಾಗು ಇದರ ಕಾಲ ಅ. ಸುಂದರ ಅವರ ರೀತ್ಯಾ ಕ್ರಿ. ಶ. ೫ನೇ ಶತಮಾನವೆಂದಿರುವಲ್ಲಿ, ಈ ಮೊಗ 'ತಾರಾ ಭಗವತಿ'ಯ ಒಂದು ರೂಪವಾಗಿರಬಹುದು. ಬೌದ್ಧ ವಾಸಾ ಮಹಾಪುರೀ ಎಂದು ಕಲ್ಯಕ್ಕೆ ಶಾಸನೋಕ್ತ ಆದೇಶ ಇರುವುದೂ ಈ ಅಂಶಗಳಿಗೆ ಪೋಷಕ.

ಅಗಲ ಹಾಗು ಶೃಂಗಾಕಾರದ ಶಿಲಾಫಲಕದ ತುಂಬು ಉಬ್ಬು ಶಿಲ್ಪವಾಗಿ ಚಾಚಿದ ಪುರುಷಮೊಗಶಿಲ್ಪವೊಂದು ಕಂಠದ ಮಟ್ಟಕ್ಕೆ ತುಂಡುಗೊಂಡು ಪ್ರತ್ಯೇಕ ಶಿಲ್ಪವಾಗಿ ಇಲ್ಲಿದೆ. ವಿಶಾಲವಾದ ಕರ್ಣಕುಂಡಲ, ನೀಳ ನಾಸಿಕ, ಅರಳುತುಟಿ, ವಿಶಾಲನೇತ್ರ ಇವೆಲ್ಲದರ ಕಲಾತ್ಮಕ ಬಿಡಾವಣೆಯಾಗಿ ಪ್ರಸನ್ನ ಗಂಭೀರ ಶಿಲ್ಪವೆನಿಸಿದೆ. ಜೊತೆಗೆ ಕಿರೀಟದ ಹೊದ್ದಿಕೆ ಎಂಬ ಭ್ರಮೆ ತರುವ ಶಿರಮುಡಿಯಲ್ಲಿ ಏಳು ವೃತ್ತಗಳ ಏರುಸುತ್ತಿನ ಚೌಕಾಕೃತಿಯ ಹರಳು(ಮಣಿ)ಗಳಂತೆ ರಚನೆ ಇದೆ. ಹಲ್ಮಿಡಿ ಸ್ತ್ರೀ ಶಿಲ್ಪ ಮುಡಿಯ ಮಣಿಗಳಿಗಿಂತ ದಟ್ಟವಾಗಿ ಕಾಣುವ ಈ ಶಿರಮುಡಿಯ ಮೊಗದ ಹಣೆಯಲ್ಲಿ 'ಶಿವಲಿಂಗ'ದ ಕುರುಹು ಕಾಣುವಲ್ಲಿ ಪ್ರಾಚೀನ ವೀರಭದ್ರ ಶಿಲ್ಪವಿದಿರಬಹುದೆ ಹಾಗು ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿರಬಹುದೆ? ಎನಿಸುತ್ತದೆ. ಆದರೆ ಮಥುರಾ ಶೈಲಿಯ ಉಮಾಮಹೇಶ್ವರ ಶಿಲ್ಪಗಳಲ್ಲಿ ಇಂಥ ಶಿರಶೈಲಿ ಕಾಣುವಲ್ಲಿ ಈ ಶಿಲ್ಪದ ಪ್ರಾಚೀನತೆ ಮತ್ತೂ ಹಿಂದೆ ಹೋಗಬಹುದಾಗಿದೆ. ಇನ್ನೊಂದು ಸ್ಥಾನಕ ಚತುರ್ಭುಜ ಶಿಲ್ಪವು ಭೈರವ ಶಿಲ್ಪದ ಲಕ್ಷಣಗಳನ್ನೆ ಹೊಂದಿದೆ. ಹಾಗು ಜಾನಪದ ಶೈಲಿಯ ಕೆತ್ತನೆ ಎನಿಸಿದರೂ ಪ್ರಾಚೀನ ಭೈರವಶಿಲ್ಪವೆನ್ನಲಡ್ಡಿ ಇಲ್ಲ. ಇವಲ್ಲದೆ ಗುಡಿಯಲ್ಲಿ ಗಣಪತಿ, ನಂದಿ, ಶಿವಲಿಂಗ ಶಿಲ್ಪಗಳು ಪ್ರತ್ಯೇಕವಾಗಿವೆ. ಕಲ್ಲೇಶ್ವರನ ಎದುರಿನ ಪೀಠಸ್ಥ ಬಸವ ಅಷ್ಟೇನೂ ಪ್ರಾಚೀನವೆನಿಸದು.

ಕಲ್ಲೇಶ್ವರನ ಗರ್ಭಗುಡಿಗೆ ಅಂಟಿಕೊಂಡಂತೆ ಪಾರ್ಶ್ವ ದೇವಕೋಷ್ಠಗಳಲ್ಲಿ ವಿಷ್ಣುವಿನ ಸ್ಥಾನಕ ಚತುರ್ಭುಜ ಶಿಲ್ಪವಿದ್ದು



ಕಲ್ಲೇಶ್ವರ ಗುಡಿಯ ತಾಂತ್ರಿಕ ರೇಖಾ ಶಿಲ್ಪ, ತಾರಾಭಗವತಿ ಶಿರ( !), ಕಕ್ಕುಟಾಂಡಾಕಾರದ ಶಿವಲಿಂಗ, ವೀರಭದ್ರಶಿರ( !), ಪ್ರಾಚೀನ ಭೈರವ

ಬೇರಡಯಿಂದ ರಕ್ಷಿಸಿಡಲು ತಂದು ಇಟ್ಟಿರುವಂತಿದೆ. ಅಥವಾ ಪಾಲ್ಕುರಿಕೆ ಸೋಮನಾಥ, ಚಕ್ರಪಾಣಿ ರಂಗನಾಥನನ್ನು ಏಕಾಮ್ರ ನಾಥನನ್ನಾಗಿಸಿದ ಸಂಕೇತವಿದಾಗಿದ್ದರೆ ಇದು ಹರಿ-ಹರ ಸಮನ್ವಯವೆನಿಸುತ್ತದೆ. ಜೈನ ಸಂಬಂಧಿ ಶಿಲ್ಪಗಳು ದೇಗುಲದಲ್ಲಿಲ್ಲ. ಆದರೆ ಗ್ರಾಮದ ಆಗ್ನೇಯ ಭಾಗದಲ್ಲಿ. ಎತ್ತರ ಹಾಗು ಸುಂದರವಾದ ಮಾನಸ್ತಂಭ, ಬಸದಿಯನೆಲೆ (ಬಸ್ತಿಗುಂಡಿ) ಮುಕ್ಕೊಡೆಯ ಶಿಲ್ಪಗಳು ಜೈನ ಧರ್ಮದ ಇಲ್ಲಿನ ಪ್ರಾಚೀನ ಅಸ್ತಿತ್ವದ ಕುರುಹಾಗಿ ನಿಂತಿವೆ.

ಕಲ್ಲೇಶ್ವರ ಗುಡಿಯ ಗರ್ಭಗೃಹದಿಂದ ೧೮ ಹೆಜ್ಜೆಗಳಷ್ಟು ದೂರದಲ್ಲಿ, ಎದುರಿನ ಮುಖಮಂಟಪ ಮತ್ತು ಬಂಡೆಗಳ ನಡುವೆ ಭಿತ್ತಿಯ ಬುಡದಲ್ಲಿ ಪಾಲ್ಕುರಿಕೆ ಸೋಮನಾಥಾರಾಧ್ಯನ ಸಮಾಧಿ ಗದ್ದುಗೆ ಇದೆ ಎಂಬುದು ಅಲ್ಲಿನ ಮಠದ ವಂಶೀಕರ ಮಾತು. ಜಂಗಮ ಮಠದ ಆವರಣದಲ್ಲಿ ಆ ಸಮಾಧಿ ಇದೆ ಎಂದು ಕನ್ನಡ ವಿಶ್ವಕೋಶದ ಮಾತು. ಅಲ್ಲದೆ ಗುಡಿಯ ಮುಖಮಂಟಪದ ಮುಂದೆ ಬಿಲ್ವಪತ್ರೆ ಮರದಡಿಯ ಚಪ್ಪಡಿ ಕಲ್ಲುಗಳ ಸುಂದರ ಗದ್ದುಗೆಯೆ ಅವನದು ಎಂದೂ ಹೇಳಲಾಗಿದೆ.

**ಜಂಗಮ ಮಠದ ಗದ್ದುಗೆಗಳು :** *ತಾರಕಾಚಲ ಗುಡ್ಡದಲ್ಲಿ ಜನಿಸುವ ಕಣ್ವನದಿಯು ಗುಡ್ಡದ ಮೇಲಿನ ಮಠದ ವೃಷಭ ಶಿಲ್ಪ-ಶಿವಲಿಂಗಗಳಿರುವ ಗದ್ದುಗ ಮಂಟಪಗಳ ನಡುವಣ ಕೊರಕಲಿನಲ್ಲಿ ಹರಿದು ಹೋಗುತ್ತದೆ. ೬೪ ಶೀಲಗಳನ್ನು ಆಚರಿಸುತ್ತಿದ್ದ ಆಂಧ್ರದ ಪಾಲ್ಕುರಿಕೆ ಸೋಮನಾಥ, ಕಲ್ಯದಲ್ಲಿ ಅದೇ ಶೀಲಾಚರಣೆಯಲ್ಲಿದ್ದ ಶರಣೆ ಚನ್ನಮ್ಮನನ್ನು ಕಾಣಲು ತನ್ನ ಭಕ್ತರೊಡನೆ ಬಂದು ಕಲ್ಯದಲ್ಲಿ ಉಳಿದಿದ್ದ ಸಮಯದಲ್ಲಿಲಿಂಗೈಕ್ಯನಾದ. ಗುಡಿಯ ಮುಂಭಾಗದಲ್ಲಿ ಅವನ ಸಮಾಧಿ-ಗದ್ದುಗೆ ಮಾಡಿ ಶಿಷ್ಯರು ಅವನ ಮಗ ಚತುರ್ಮುಖ ಬಸವಿದೇವನನ್ನು ಜಂಗಮ ಮಠದ ಗುರುವಾಗಿಸಿದರು ಎಂದಲ್ಲ ಹೇಳಿದ. ಈ ವೀರಶೈವ ಕವಿ ಪಾಲ್ಕುರಿಕೆ ಸೋಮನಾಥ ವೈಷ್ಣವಾಚಾರ್ಯ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ ತನ್ನ ಧರ್ಮಕ್ಕೆ ಬರುವಂತೆ ಮಾಡಿ ಏಕಾಮ್ರ ನಾಥ ಎಂಬ ಹೆಸರನ್ನು ನೀಡಿದ. *೪೫ ಚತುರ್ಮುಖ ಬಸವಿದೇವ ಈ ರಂಗನಾಥನನ್ನು ವಾದದಲ್ಲಿ ಸೋಲಿಸಿದ ಎಂಬುದು ಗುರುರಾಜ ಚರಿತ್ರೆಯ ಮಾತು. ಬಹುಶಃ ಹಕ್ಕಬುಕ್ಕರನ್ನು ಕಾಕತೀಯ ೨ನೇ ಪ್ರತಾಪರುದ್ರನ ಗಮನಕ್ಕೆ ತಂದ ಪರಿಸರವಿದಾಗಿತ್ತು. ಅವನ ಆಳ್ವಿಕೆಗೆ ಮಾಗಡಿ ಪ್ರದೇಶ ಸೇರಿದ್ದ ಸಮಯದಲ್ಲಿ *೪೬ (ಕ್ರಿ. ಶ. ೧೩೧೪-೧೬ ) ಚನ್ನಮ್ಮನ ಶೀಲಾಚರಣೆ ನೋಡಲು ಬಂದ ಸೋಮನಾಥ ಬಸವಣ್ಣನ ಅಭಿಮಾನಿಯಾಗಿ ನಿಷ್ಠಾವಂತ ವೀರಶೈವನಾಗಿ ಇಲ್ಲುಳಿದು ಶಿವಧರ್ಮದ ಪ್ರಭಾವವನ್ನು ಹೆಚ್ಚಿಸಿರಬೇಕು. ಇವನ ಮಗ ಚತುರ್ಮುಖ ಬಸವೇಶ ಜಂಗಮ ಮಠದ ಗುರುವಾಗಿ ರಂಗನಾಥನಿಗೆ ಶಿವದೀಕ್ಷೆ ನೀಡಿದ (ಕ.ಸಾ. ಚರಿತ್ರೆ, ಮೈಸೂರು, ಪು. ೧೭೪). ರಂಗನಾಥನು ವೀರಭದ್ರ ವಿಜಯ, ಶರಭಲೀಲೆ ಇತ್ಯಾದಿ ಕೃತಿ ರಚಿಸಿ ಕೊನೆಗೆ ಈ ಗುರು ಸನ್ನಿಧಿಯಲ್ಲಿ ಲಿಂಗೈಕ್ಯನಾದ. ಅವನ ಗದ್ದುಗೆಯೂ ಇಲ್ಲಿರುವ ಕುರುಹುಗಳಿವೆ.*

ಮಂಟಪಗಳ ಆವರಣದಲ್ಲಿ ಚೌಕ ಚತುರಸ್ರ ಏಕ ಗರ್ಭಗೃಹ ವಿಮಾನವಿರುವ ಚಿಕ್ಕಗುಡಿಯಂತಿರುವ ಮಂಟಪವೊಂದಿದೆ. ಅದರ ಬಾಗಿಲುವಾಡದ ಮುಂದೆ ಪ್ರಭಾವಳಿಯಂತಹ ಚಾಚಿದ ರಚನೆ ಇದ್ದು ಬೌದ್ಧಚೈತ್ಯಾಲಯದ ಮುಖರಚನೆಯನ್ನು ನೆನಪಿಗೆ ತರುತ್ತದೆ. ಇದನ್ನು ಚತುರ್ಮುಖ ಬಸವಿದೇವನ ಗದ್ದುಗೆ ಎನ್ನುತ್ತಾರೆ. *೪೭ ಈ ಮಂಟಪದ ಬಲ ಮುಂಬದಿಯಲ್ಲಿ ಇರುವ ಮಂಟಪದ ಒಳ ಶಿಲಾ ಭಿತ್ತಿಯಲ್ಲಿ ೧೧/೨ ಅಡಿ ಎತ್ತರದ ಕಂಬದ ಶಿವಲಿಂಗದ ಉಬ್ಬುಶಿಲ್ಪ, ಅದರ ಮುಂದೆ ದೊಡ್ಡ ವೃಷಭನ ಬಲಪಾದ ಮಾನುಷ ಶಿರವೊಂದರ ಮೇಲಿರುವಂತೆ ಉಬ್ಬು ಶಿಲ್ಪದ ಕೆತ್ತನೆ ವೈಶಿಷ್ಯಪೂರ್ಣವಾಗಿದೆ. ಈ ಮಂಟಪಕ್ಕೆ ಎದುರು ದಕ್ಷಿಣದಲ್ಲಿ ಚೌಕ ಚತುರಸ್ರ ಮಂಟಪದ ಮೇಲೆ ಬೃಹತ್ ಬಸವನ ಸುಂದರ ಆಸೀನ ಗಾರೆ ಅಚ್ಚಿನ ವಿಗ್ರಹವಿದೆ. ಅದರ ಎಡಪಾದವು, ಉಬ್ಬಿದ ದುಂಡುಗಣ್ಣಿನ, ಕರ್ಣಕುಂಡಲ ಧರಿಸಿದ, ನಿಮಿರಿದ ನಾಸಿಕದ ಹೊಳ್ಳೆಯ ಮಾನುಷ(ರುಂಡ)ಶಿರದ ಮೇಲೆ ಪ್ರಸ್ಥಾಪಿತ ವಾಗಿರುವುದು ಶಿವದೀಕ್ಷೆಯ ಕುರುಹೆನಿಸುತ್ತದೆ. ಗುರುವಿನ ಪಾದವನ್ನು ಶಿರದ ಮೇಲಿರಿಸಿ ಪಾದೋದಕ ಹರಿಸಿ ಶಿವ ದೀಕ್ಷಿತನನ್ನಾಗಿ ಮಾಡುವ ಪದ್ಧತಿಗನುಗುಣವಾಗಿ ಚಕ್ರಪಾಣಿ ರಂಗನಾಥ, 'ಏಕಾಮ್ರನಾಥನಾದ' ಸಂಕೇತವಿದಾಗಿ, ಅವನ ಗದ್ದುಗೆ ಇದೇ ಮಂಟಪವಾಗಿರಬೇಕೆನಿಸುತ್ತದೆ. ಪಾಲ್ಕುರಿಕೆ


ನಾಟ್ಯಭೃಂಗಿ, ಜಟಾಮುನಿ, ಸೋಮನಾಥನ ಗದ್ದುಗ( !) ಗುರು - ಶಿವದೀಕ್ಷಾ ಶಿಲ್ಪ, ಚಕ್ರಪಾಣಿ ರಂಗನಾಥನ ಗದ್ದುಗ( !)

ಸೋಮನಾಥ ಗುರುವಾಗಿ ಮುಕ್ತಗುಚ್ಛಸೂತ್ರ ವೃಷಭಗೋತ್ರ ಪರಂಪರೆಗೆ ಸೇರಿದವನಾಗಿ 'ಪಂಡಿತಾರಾಧ್ಯ ಕೃಪಾ ಸಮುದ್ಗತ'ನಾದ ಕಾರಣ ಅವನ ಮಗ ಬಸವಿದೇವ ಮಲ್ಲಿಕಾರ್ಜುನ ಲಿಂಗದೆದುರಿನಲ್ಲಿ ಗೋತ್ರಪುರುಷ ಬಸವನ ಉಬ್ಬು ಶಿಲ್ಪ, ಹಾಗು ಲಿಂಗ-ವೃಷಭ ಪಾದಾಕ್ರಾಂತ ಶಿರ ಕೆತ್ತಿಸಿ ಮುಂದಿನ ಪರಂಪರೆಗೆ ಕಾರಣನಾಗಿರಬೇಕು. ಈ ರೀತಿಯ ವೃಷಭಪಾದ ಆಚ್ಛಾದ ಶಿರಶಿಲ್ಪಗಳು ಶಿವಗಂಗೆ, ನಂದಿಬೆಟ್ಟ ಹಾಗು ರಕ್ಷಾಸಂಕೇತವಾಗಿ ಕೆಲವು ಮಠಗಳ ಬಾಗಿಲುವಾಡದ ಮೇಲಿರುವುದೂ ಕಾಣಬರುತ್ತವೆ. ಮೂಲ ಆಶಯ ಇಲ್ಲಿಲ್ಲ ಗುರುವಿನಿಂದ ಶಿವದೀಕ್ಷಾ ಸಂಕೇತದ್ದಾಗಿರಬೇಕು.

ಮಂಟಪಗಳ ಉತ್ತರ ಬದಿಗೆ ತಾಗಿದಂತಿರುವ ಮಠದ ಒಳಗೆ ಗುರುಪೂಜಾಮನೆ, ಪ್ರಸಾದದಮನೆ-ದಾಸೋಹನೆಲೆ, ಅಲ್ಲದೆ ಶಿಲಾಭಿತ್ತಿಗಳ ಮೇಲೆ, ಬಾಗಿಲುವಾಡಗಳ ಮೇಲೆ ಬಸವ, ಲಿಂಗಕ್ಕೆ ಹಾಲೂಡಿಸಿ ನೆಕ್ಕುತ್ತಿರುವ ಗೋವು, ದಂಡ ಹಿಡಿದ ಮೂರ್ಗಾಲಿನ ದ್ವಾರಭೃಂಗಿ ಹಾಗು ದಂಡ ಹಿಡಿದ ನಾಟ್ಯ ಭಂಗಿಯ ಮೂರ್ಗಾಲಿನ ಸುಂದರ ಭೃಂಗಿ, ಹಾಗು ಇಷ್ಟಲಿಂಗವನ್ನು ಕರಸ್ಥಲದಲ್ಲಿ ಹಿಡಿದು ಆಸೀನ ಧ್ಯಾನಸ್ಥ ಭಂಗಿಯಲ್ಲಿರುವ ಹರಡಿದ ಇಳಿಜಟೆಗಳ ಮುನಿ(ಪಂಡಿತಾರಾಧ್ಯ !)ಯ ಉಬ್ಬುಶಿಲ್ಪವೂ, ಚಿತ್ರಪಟ್ಟಿಕೆ, ತೋರಣಪತ್ರಗಳ ಉಬ್ಬುಶಿಲ್ಪಗಳೂ ಇವೆ. ಈ ಶಿಲ್ಪ ಸಂಕೇತಗಳಿಂದ, ಪಾಲ್ಕುರಿಕೆ ಸೋಮನಾಥ ಬರುವ ಮುನ್ನವೆ ಇಲ್ಲಿ ವೀರಶೈವ ಮಠವಿದ್ದುದು ಸ್ಪಷ್ಟ. ಭೃಂಗಿಯ ಶಿಲ್ಪದ ಕಾರಣ, ಗೋತ್ರಪ್ರವರದಲ್ಲಿರುವಂತೆ, ಮೊದಲಿಗೆ ಕೇದಾರ ಪೀಠದ ಏಕೋರಾಮಾರಾಧ್ಯ ಸಂಪ್ರದಾಯವಿದ್ದು ನಂತರ ಗುರುವಿಲ್ಲದೆ ಹೋಗಿದ್ದ ಸಂದರ್ಭವಾಗಿ, ಪಾಲ್ಕುರಿಕೆ ಸೋಮನಾಥ ಬಂದ ಮೇಲೆ ಶ್ರೀಶೈಲ ಪೀಠದ ಸಂಪ್ರದಾಯವಾಗಿ ಬಸವಿದೇವನನ್ನು ಗುರು ಮಾಡಿ, ಕೇದಾರ, ಶ್ರೀಶೈಲ ಪೀಠಗಳ ಸಹಯೋಗ ಇಲ್ಲಿ ಆಗಿದೆ ಎನ್ನಬೇಕು. ಈ ಪ್ರಭಾವ ಇಮ್ಮಡಿ ಕೆಂಪೇಗೌಡನ ಮೇಲೆ ಆದುದಕ್ಕೆ ಮುಂದೆ ಸಾಕ್ಷ್ಯಗಳು ಒದಗುತ್ತವೆ.

**ಕುಂಬಳಕಾಯಜ್ಜಿ ಸ್ತಂಭ(ಗುಳ್ಳೆಕಾಯಜ್ಜಿ ಸ್ತಂಭ):** ಇದು ಕಲ್ಲೇಶ್ವರ ಗುಡಿಯ ಕೆಳ ಮುಂಬದಿಗಿದ್ದು ಅಷ್ಟಮುಖಿ ಸ್ತಂಭದ ಮೇಲ್ಭಾಗದ ಚೌಕ ಭಾಗದಲ್ಲಿ ಹೆಣ್ಣಿನ ಮೊಗದಂತೆ ಭಾಸವಾಗುವ ಶಿಲ್ಪದ ಬಿಡಾವಣೆ ಇದೆ. ಬಲಗೆನ್ನೆಯವರೆಗೆ ವೃತ್ತಾಕಾರದ ಜಡೆ ಇಳಿಬಿದ್ದಿದೆ. ಇದರ ನೆತ್ತಿಯ ಮೇಲೆ ಮಡಕೆಯಂತೆ ಕಾಣುವ ಉಬ್ಬು ಶಿಲ್ಪವಿದ್ದರೂ, ಕುಂಬಳಕಾಯಿ ಎಂದು ಭ್ರಮಿಸಿ ಕುಂಬಳಕಾಯಜ್ಜಿ ಎಂದು ಚಾಲ್ತಿಗೆ ಬಂದು ಬಿಟ್ಟಿದೆ. ಕೂಷ್ಮಾಂಡಿನಿ ಯಕ್ಷಿಯ ರೂಪಕ್ಕೆ ಹೊಂದುವ ಕುಂಬಳ ಹಿಡಿದ ಶಿಲ್ಪವಿದಾಗದೆ ನೆತ್ತಿಯ ಮೇಲೆ ಘಟದಂತೆ ಕಾಣುವ ಉಬ್ಬು ಶಿಲ್ಪ ಹೊಂದಿರುವುದು ಸ್ಪಷ್ಟವಿದೆ.

**ಏಳುಮುಂದಮ್ಮನ ಕಲ್ಲು :** ಕಲ್ಯದ ಗುಡ್ಡವಿಳಿದು, ಕ್ರಿ. ಶ. ೧೫೬೦ರ ಕಲ್ಯದ ಪ್ರಭು ರಾಮರಾಜಯ್ಯದೇವನ ಅರಮನೆ ಇದ್ದ ಜಾಗವೆನ್ನುವ 'ಅರಮನೆ ತುಂಡು' ದಾಟಿ ಸುಬ್ಬಮ್ಮನವರ ಹೊಲಕ್ಕೆ ಬಂದರೆ ಒಂದರ ಮೇಲೊಂದರಂತೆ ಏಳುಸಾಲು ಏಳು ಮಡಕೆಗಳಿರುವ (ಕುಡಿಕೆ) ಉಬ್ಬು ಶಿಲ್ಪಗಳಿರುವ ಕಲಾತ್ಮಕ ಏಕ ಶಿಲಾಫಲಕ ಕಾಣಬರುತ್ತದೆ. ಇದರ ನೆರೆಯಲ್ಲಿ ನಾಗಶಿಲ್ಪ ಹಾಗು ಪಾದಶಿಲ್ಪ ಗಳಿವೆ. ಮಠದ ವತಿಯಿಂದ ಗೌರಿ ತೊಟ್ಟಿಲು ಹಬ್ಬವು ಈ ಪರಿಸರದಲ್ಲಿ ನಡೆಯುತ್ತಿತ್ತು ಎಂಬ ಅಂಶವನ್ನು ಗಮನಿಸಿದರೆ ಫಲವಂತಿಕೆಯ ಮಿಥುನ ಪರಿಕ್ರಮದ ಶಕ್ತಿದೇವತಾರಾಧನೆಯ ಪರೋಕ್ಷ ಸೂಚನೆ ಇದಾಗುತ್ತದೆ. ರಾಮನಗರ ತಾಲೂಕು ಸುಗ್ಗನ ಹಳ್ಳಿಯಲ್ಲಿ ಚಿಕ್ಕಮ್ಮ ಮತ್ತು ದೊಡ್ಡಮ್ಮನ 'ಏಳುಕರಗ'ದ ಒಂದರ ಮೇಲೊಂದರಂತೆ ಏಳು ಮಡಿಕೆಗಳ ಸಾಲನ್ನು ಅಲಂಕರಿಸಿ ಗೌರಿಹಬ್ಬದ ಸಮಯದಲ್ಲಿ ಹಬ್ಬ ನಡೆಸುವ ಚಿಕ್ಕಮ್ಮ, ದೊಡ್ಡಮ್ಮನ ಒಕ್ಕಲುಗಳು-ಹರಿಸಂದ್ರ, ಗಂಗವಾಡಿಯವರೂ ಸೇರಿದಂತೆ ಕಲ್ಯದ ಜಂಗಮ ಮಠದ ಶಿಷ್ಯರಾಗಿದ್ದವರು. ಮೊದಲಿಗೆ ಗೌರಿತೊಟ್ಟಿಲು ಹಬ್ಬ ಇಲ್ಲಿ ನಡೆಯುತ್ತಿದ್ದಾಗ ಬರುತ್ತಿದ್ದ ಅವರು ಇಂದು ಬರದಿದ್ದರೂ ಈ ಮಠದ ಶಿಷ್ಯರೆಂದು ಹೇಳಿಕೊಳ್ಳುತ್ತಾರೆ. ಏಳುಮುಂದಕ್ಕನ ಕಲ್ಲು ಹಾಗು ಪಾದಶಿಲ್ಪಗಳ ಪೂಜೆಯನ್ನು ಸಾಂಕೇತಿಕವಾಗಿ ಉಳಿಸಿಕೊಂಡು ತಮ್ಮಲ್ಲಿಯೇ ಆಚರಿಸುತ್ತಿದ್ದಾರೆ. ಆಂಧ್ರದಲ್ಲಿ ಒಂದರ ಮೇಲೊಂದು ಜೋಡಿಸಿದ ಪವಿತ್ರ

ಘಟಕುಂಭಗಳನ್ನು ಇಳಿಸಿ ಅವುಗಳಲ್ಲಿನ ಗಂಗೆಯನ್ನು ಪೂಜಿಸಿ ಬಳಸುವ 'ಅವಿರೇಣಿ ಪಾಟಲು' ಹಬ್ಬದಂತೆ *೪೮ 'ಏಳು ಮುಂದಕ್ಕನ ಕಲ್ಲು' (ಸಪ್ತಮಾತೃಕೆಯರು!)ವಿನ ಜನಪದ ಆಚರಣೆ ಒಂದು ಕಾಲಕ್ಕೆ ವೈಭವದಿಂದ ನಡೆಯುತ್ತಿದ್ದುದು ಈಗ ನೆನಪಿನಲ್ಲಷ್ಟೆ ಉಳಿದಿದೆ. 'ಕಲ್ಲೆಹ'ದ ಹೆಸರೇ ಈ ಶಿಲಾಫಲಕದ ಇತಿಹಾಸದೊಡನೆ ಮಿಳಿತವಾಗಿರುವಂತಿದೆ.

**ಸ್ಥಳನಾಮ ಕಲ್ಲೆಹ :** ತುರುವೇಕೆರೆಯ ಕ್ರಿ. ಶ. ೧೫೩೭ರ ಶಾಸನದಲ್ಲಿ ಬೌದ್ಧವಾಸಾ ಮಹಾಪುರೀ ಕಲವತೀತಿ ವಿಖ್ಯಾತಾತೊತ್ತರೇ ಹರಿಣಾಟವೀ ಎನ್ನುವಲ್ಲಿ 'ಕಲವತೀತಿ' ಶಬ್ದವನ್ನು ಸಂಸ್ಕೃತ ಭಾಷಾನುಸಾರಿಯಾಗಿ ಸ್ತ್ರೀ ನಾಮವಾಚಿ ದೀರ್ಘಕ್ಕನುಗುಣವಾಗಿ, 'ಕಲಾವತಿ' ಪಟ್ಟಣಕ್ಕೆ ಅನ್ವಯಿಸುವುದುಂಟು. ಚಿದಾನಂದ ಮೂರ್ತಿಯವರು ಕಲ್ಯವೇ ಕಲಾವತಿ ಪಟ್ಟಣ, (ಬೌದ್ಧ ಸಂಬಂಧದ) ಹರಿಣಾಟವಿಯೆ ಇಂದಿನ 'ಹುಲ್ಲೇನಹಳ್ಳಿ', ಕಲ್ಲೇಶ್ವರ ದೇಗುಲದಲ್ಲಿನ ಶಿರಶಿಲ್ಪವೊಂದು ಬೌದ್ಧ ಸಂಬಂಧಿಯಾಗಿರಬಹುದು, ಎಂದೆಲ್ಲ ಹೇಳಿದ್ದಾರೆ. *೪೯ ಆದರೆ. ಕನ್ನಡ ತದ್ಭವದ ಜಾಯಮಾನಕ್ಕನುಗುಣವಾಗಿ ದೀರ್ಘ ಬಿಟ್ಟು ಕಲವತಿ+ಇತಿ=ಕಲವತಿ ಪಟ್ಟಣ ಹೀಗಿತ್ತು ಎಂಬ ಭೂತಕಾಲೀನ ರೂಪವನ್ನು ಪರಿಶೀಲಿಸಬಹುದು.

ನಿಘಂಟು ರೀತ್ಯಾ 'ಕಲ್ಲೆ'ಎಂದರೆ ನೀರಿನ ಹರವಿ. ಭಾವನಾಮ ಪ್ರತ್ಯಯವಾಗಿ ಪ > ಹ(ವ) ಅಕ್ಷರವು ಅದಕ್ಕೆ ಸೇರುವುದಾದರೆ 'ಕಲ್ಲೆಹ' ಶಬ್ದ ರೂಪುಗೊಳ್ಳಬಹುದು. ಕಲ್ಲೆಹ ಎಂದರೆ ಕಲತಿ, ಕಲ್ಲತ್ತಿ-ಮಣ್ಣಿನ ಪಾತ್ರೆ (ಮಡಕೆ, ಘಟ) ಎಂಬ ಅರ್ಥವಿದೆ. 'ಕಲ' ಎಂದರೆ ಬೆರೆತುಕೊಂಡಿರುವಿಕೆ ಎಂದೂ ಅರ್ಥವಿದೆ. ಹೀಗಾಗಿ ಕಲವ > ಕಲ್ಲವ > ಕಲ್ಲೆಹ > ಕಲ್ಯ ಎಂದು ರೂಪುಗೊಂಡು 'ಏಳು ಮುಂದಮ್ಮನ ಕಲ್ಲು' ಶಿಲ್ಪದ ಪ್ರಾಚೀನ ಸಂಕೇತದ ದನಿ ಎನಿಸುವಂತಿದೆ. ಕ್ರಿ. ಶ. ೧೩೬೮ರ ಬುಕ್ಕನ ಜೈನ-ವೈಷ್ಣವ ಮತೀಯ ಸಂಘರ್ಷ ನಿವಾರಣಾ ಪ್ರಯತ್ನದ ಶಾಸನದ ಮೂಲಪಾಠವಾದ *೫೦ ಕಲ್ಯ ಶಾಸನದಲ್ಲಿ 'ಕಲ್ಲೆಹ' ಎಂದಿದ್ದು ಕ್ರಿ. ಶ. ೧೫೩೭ರ ಹೊತ್ತಿಗೆ ಕಲ್ಯಕ್ಕೆ 'ಕಲಾವತಿ' ಎಂಬ ಸಂಸ್ಕೃತಾನುಕರಣ ಶಬ್ದ ಕಾಣಿಸಿಕೊಂಡಿದೆ. ಅದು ಜನಪದದಲ್ಲಿ ಪ್ರಚಲಿತಗೊಂಡು 'ಕಲಾವತಿ' ಎಂಬ ರಾಣಿಯೋ ರಾಜನಮಗಳೋ, ಆಳುತ್ತಿದ್ದ ರಾಜ್ಯ' ಎಂಬ ಕತೆಗಳು ಹುಟ್ಟಿದುವೆನ್ನಬಹುದು.

ಇನ್ನು ಘಟದೊಳಗಿದ್ದ ತಾರಾಭಗವತಿಯನ್ನು ಜೈನ ಮುನಿ ಅಕಲಂಕ ಗೆದ್ದ ಕತೆ ಇದೆ. ಘಟ ಅಥವಾ ಕುಂಭ ಕುಡಿಕೆಗಳ ಸಂಕೇತವಾಗಿ ತಾರಾಭಗವತಿ, ಬೌದ್ಧ ವಜ್ರಯಾನದ ಪ್ರಜ್ಞಾಪಾರಮಿತೆಯ ಪ್ರತೀಕವಾಗಿ ಕ್ರಿ. ಶ. ೪-೫ನೇ ಶತಮಾನಗಳಲ್ಲಿ ಇಲ್ಲಿ ಮೂಡಿ ಬೌದ್ಧಸಿದ್ಧರಿಂದ ೬-೧೦ ನೇ ಶತಮಾನಗಳಲ್ಲಿ ಆಕೆಯ ಪ್ರಸಿದ್ಧ ಪೂಜಾನೆಲೆ ಇದಾಗಿದ್ದಿರಬೇಕು. ಅದರ ಸಂಬಂಧದಲ್ಲಿಯೆ ಕಾಲಾಂತರದಲ್ಲಿ ಸ್ತಂಭದ ಮೇಲೆ ಮಡಕೆ ಅದರ ಕೆಳಗೆ ಸ್ತ್ರೀಮೊಗ(ಅಜ್ಜಿ)ವಿದ್ದು ಘಟದ ಮರೆಯಲ್ಲಿರುವವಳು ಎಂಬ ಅರ್ಥದಲ್ಲಿ ಬಿಡಾವಣೆಯಾಗಿರಬೇಕು. ಸಾಲು ಮಡಿಕೆಗಳ ರೂಪವೂ ಮೊದಲಿಗೆ ತಾರಾಭಗವತಿ ಪೂಜೆಯ ಪ್ರತೀಕವಾಗಿ, ನಂತರ ಸಪ್ತಮಾತೃಕೆಯರ, ಗೌರೀಪೂಜೆಯ ನಂಟು ಒದಗಿಸಿಕೊಂಡಿರಬೇಕು. ಬೌದ್ಧ ಪ್ರಭಾವದ ಮುನ್ನ ಕದಂಬರ ಕಾಲದ ಅಂಡಾಕಾರದ ಶಿವಲಿಂಗದ ಅಸ್ತಿತ್ವದಿಂದಾಗಿ ಶೈವ(ಪಾಶುಪತ) ಧರ್ಮದ ಪ್ರಭಾವ ಇಲ್ಲಿ ಒದಗಿರುವ ಸೂಚನೆ ಇದೆ. ಚಕ್ರತ್ತಾಳ್ವಾರರ ವಿಗ್ರವೊಂದಿಲ್ಲಿದ್ದುದರ ಕಾರಣ, ಅದು ಹೊಯ್ಸಳರ ಕಾಲಕ್ಕೆ ವೈಷ್ಣವ ಪ್ರಭಾವ, ಕಾಕತೀಯರ ಕಾಲಕ್ಕಂತು ವೀರಶೈವ ಪ್ರಭಾವ, ಇಲ್ಲಿ ಆಯಿತು. ಹೊಯ್ಸಳರ ಮುನ್ನ ಜೈನರು ಇಲ್ಲಿ ಪ್ರಾಬಲ್ಯ ಕಳೆದುಕೊಂಡಿದ್ದ ಬೌದ್ಧರ ಮೇಲೆ ಗೆಲುವು ಸಾಧಿಸಿ ಮಾನಸ್ತಂಭ, ಬಸದಿ ಸ್ಥಾಪನೆಗೆ ಕಾರಣರಾಗಿರಬೇಕು. ಒಟ್ಟಾರೆ 'ಕಲ್ಯ'ದ ಹೆಸರು ಬೌದ್ಧದೇವತೆಯ ಮೂಲದ ದೇವವಾಚಿಯಾಗಿ, ವಸ್ತುವಾಚಿ ಹಾಗು ಜನಪದವಾಚಿಯಾಗಿ ಪಂಡಿತ ನಿಷ್ಪತ್ತಿಗೂ ತೆರೆದುಕೊಂಡಿರುವುದಾಗಿದೆ.

ಹೀಗೆ ಹಲ್ಮಿಡಿ ಹಾಗು ಕಲ್ಯ ಎರಡೂ ಪ್ರಾಚೀನ ನೆಲೆಗಳಾಗಿ ವಿವಿಧ ಧರ್ಮಗಳಿಗೆ ಜನಪದ ಆಚರಣೆಗೆ, ಅನುಗುಣ ಶಿಲ್ಪ ರೂಪಾಂತರಗಳಿಗೆ ಒದಗಿಕೊಂಡು, ಶಾಸನೋಕ್ತವಾಗಿಯೂ ಸಾಂಸ್ಕೃತಿಕ ವೈಶಿಷ್ಟಗಳನ್ನು ಸಮಸಮನಾಗಿ ಮೆರೆದಿವೆ.

*(ಹಲ್ಮಿಡಿಯ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಅಲ್ಲಿನ ಹಬ್ಬಗಳಿಗೆ ಆಹ್ವಾನಿಸಿ ನೆರವಾದ ಸರ್ವಶ್ರೀ ಹೆಚ್. ಆರ್. ಅಮೃತೇಶ್ವರ್, ಹೆಚ್. ಆರ್. ಕಲ್ಲೇಶ್ವರ, ಹೆಚ್. ಕೆ. ರಾಜೇಗೌಡ, ಹೆಚ್. ಬಿ. ಗುರುಸಿದ್ದೇ ಗೌಡ, ಪಟೇಲ್ ನಂಜೇಗೌಡ, ಮುಗುಳವಳ್ಳಿಯ ಎಂ. ವಿ. ರುದ್ರಪ್ಪ ಶೆಟ್ಟಿ, ಹಾಗು ಕಲ್ಯ ಗ್ರಾಮದ ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ ನೆರವಾದ ಸರ್ವಶ್ರೀ ಕೆ. ಎಸ್. ಶೇಷಗಿರಿರಾವ್, ಸಿ. ವಿ ಮಲ್ಲಿಕಾರ್ಜುನ, ಕೆ. ಆರ್. ನಾಗರಾಜ್ (ನರಸಿಂಹ) ಮತ್ತು ಬೆಂಗಳೂರಿನ ಕೆ. ಎಸ್. ಸುಬ್ರಮಣ್ಯ ಅವರಿಗೆ ಕೃತಜ್ಞತೆಗಳು).*

# ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಇತ್ತೀಚಿಗೆ 'ಪೆಮ್ಮಡಿ' ಶಾಸನವೇ ಕನ್ನಡದ ಮೊಟ್ಟಮೊದಲ ಶಾಸನ, ಹಲ್ಮಿಡಿ ಶಾಸನವಲ್ಲ. ಹಲ್ಮಿಡಿ ಶಾಸನಕ್ಕಿಂತ ನಾಲ್ಕೈದು ದಶಕದ ಹಿಂದಿನ ಈ ಶಾಸನ ಕೋಲಾರ ಜಿಲ್ಲೆ ನೊಣಮಂಗಲ ಗ್ರಾಮದಲ್ಲಿ ಕಂಡುಬಂದಿದೆ. ಅಲ್ಲಿನ ಪಾಳು ಬಸದಿಯಲ್ಲಿದ್ದ ದೊಡ್ಡ ಕಂಬದ ಮೇಲೆ ಬರೆದಿದ್ದ 'ಪೆಮ್ಮಡಿ' ಎಂಬ ಅಚ್ಚ ಕನ್ನಡ ಮಾತು ಮೊಟ್ಟ ಮೊದಲ ಕನ್ನಡ ಶಾಸನ ಎಂದು ಡಾ॥ ಹಂಪನಾ ಅವರು ಅಭಿಪ್ರಾಯ ಪಟ್ಟಿದ್ದಾರೆ (ಕನ್ನಡ ಪ್ರಭ : ೨೭.೨.೧೯೯೮).ಆದರೆ ಹಲ್ಮಿಡಿ ಶಾಸನದಲ್ಲಿಯೂ 'ಪಲ್ಮಿಡಿ' ಎಂಬ ರೂಪವಿದ್ದು, 'ಪೆಮ್ಮಡಿ'ಗೆ ಸಂವಾದಿ ರೂಪವಾಗಿರುವಲ್ಲಿ, 'ಪೆಮ್ಮಡಿ' ಬಹುಶಃ ಸಮಕಾಲೀನ ರೂಪವೆನ್ನಬಹುದೇ ವಿನಾ, 'ಪಲ್ಮಿಡಿ' ಶಾಸನಕ್ಕಿಂತ ಹಳೆಯದು ಎಂದು ಸದ್ಯ ಅವರು ಅಭಿಪ್ರಾಯಿಸಿರುವ ರೀತಿಯಿಂದ ಸಾಧಿತವಾಗುವುದಿಲ್ಲ. ಆ ಪ್ರಯೋಗವು ೪-೫ ದಶಕಗಳ ಹಿಂದಿನ ಶಾಸನಗಳಲ್ಲಿ ಬೇರೆಡೆ ಲಭ್ಯವಿರುವ ಬಗ್ಗೆ ಹಾಗು ಅನ್ಯ ಪುರಾವೆಗಳನ್ನು ಮಂಡಿಸಿದರ ಆಗ ಅದು ಗಮನಾರ್ಹವಾಗಬಹುದು. ಮತ್ತು ಎ.ಕ.VI. ಚಿಕ್ಕಮಗಳೂರಿನ ಸು.ಕ್ರಿ. ಶ. ೮೯೯ರ ಶಾಸನವೊಂದರಲ್ಲಿ 'ಪೆಮ್ಮಡಿಗೌಡ', ಕಿಜಿಯ ಮುಗುಳಿಯ (ಪಲ್ಮಾಡಿ?) ಪೆಮ್ಮಾಡಿಗೊಣ್ಣ ಎಂಬ ಪ್ರಯೋಗಗಳನ್ನೂ ಗಮನಿಸುವುದೊಳಿತು. ಹೀಗೆಯೇ ಕೊಡಗಿನ ೯ನೇ ಶ. ದ ಕೋತೂರು ೯೭ನೇ ಶಾಸನದ 'ಪೆರ್ಮ್ಮಡಿ', ಹಾಸನ ಜಿಲ್ಲೆ ಬೇಲೂರು ೮೭ರಲ್ಲಿನ (ಕ್ರಿ. ಶ. ೧೧೭೭) 'ಹೆಮ್ಮಾಡಿ' ಎಂಬ ಶಬ್ದಗಳೂ ಗಮನಾರ್ಹವಾಗಿವೆ.

*೨. ಎ.ಕ.VI, ಚಿಕ್ಕಮಗಳೂರು ೩-೧೪ ರೀತ್ಯಾ 'ಪೆಮ್ಮಾಡಿ ಗೊಣ್ಣ' ಎಂದಿದ್ದರೆ ಕಕನಿ ೫ನೇ ಸಂಪುಟ, ಪು. ೫೪೮೯ರಲ್ಲಿ 'ಪಲ್ಮಾಡಿ' ಎಂದು ದಾಖಲಾಗಿದೆ; ಇದು ಸಾಂದರ್ಭಿಕವಾಗಿ ಸರಿಹೊಂದಿದರೂ ಅಚ್ಚಿನ ದೋಷವೂ ಹಣಿಕಿರಬಹುದೆನಿಸುತ್ತದೆ.

*೩. ಎಂ. ಎ. ಆರ್. ೧೯೩೩, ಕಡೂರು ಜಿಲ್ಲೆ, ಶೃಂಗೇರಿಯ ಶಾಸನ(ಕ್ರಿ. ಶ. ೧೫೨೩)ದಲ್ಲಿ 'ಹಲುಮಿಡಿ' ಎಂಬ ಗ್ರಾಮನಾಮ ರೂಪವಿದೆ. ಅಂದರೆ ಇಂದಿನ ಜನಬಳಕೆಯ ಎರಡೂ ರೂಪಗಳಿಗೆ ಹಿನ್ನೆಲೆ ಇದೆ ಎಂದು ಗೋಚರವಾಗುತ್ತದೆ.

*೪. ಹೊನ್ನು ಜಾವಣಿಗೆ(≈ ಹೊನ್ನು ಜೀವಣಿಗೆ!)ಯು ಬದುಕಿಗೆ ಆಧಾರವಾದ ಹೊಲಗದ್ದೆಗಳಲ್ಲಿ ಬಾಳೆ, ಬತ್ತ, ಕಬ್ಬು, ಸೊಪ್ಪು ಇತ್ಯಾದಿ ಬೆಳೆಗಳಿಗೆ ಹಸನು ಮಾಡಿ ಬದುಕಟ್ಟಿದ ಮಟ್ಟ ಸ್ಥಳವೆನಿಸುವ 'ಮಡಿ'ಗಳನ್ನು ಹೊಂದಿ, ವಿಪುಲ ಬೆಳೆಗಳಿಂದಾಗಿ ಹೊನ್ನು ಸಂಪತ್ತು ತರುವ ಪ್ರದೇಶವಾಗಿದೆ. ಅಂತಾಗಿ ಹೊನ್ನು + ಮಡಿ > ಹೊನು ಮಡಿ> ಹೊನುಮಿಡಿ> ಹನುಮಿಡಿ ಎಂಬ ರೂಪಾಂತರಗಳೂ ಆಗಿರಬಹುದು. ಹಿರಡೆಲಿಂಗನ ಹಬ್ಬದ ಆಚರಣೆಯೂ ಇದ್ದು 'ಹಿರಡೆ'ಯು ಹಿರಣ್ಯ (=ಚಿನ್ನ)ದ ಅಪಭ್ರಂಶವಾಗಿ ಹಿರಡೆಲಿಂಗನ ಮಡಿ, ಹನುಮಿಡಿ ಎಂಬ ರೂಪವನ್ನು ತಂದುಕೊಟ್ಟಿರಬಹುದು. ಊರಿನ ಪ್ರಾಚೀನ ಆಂಜನೇಯನ ಗುಡಿಯ ಕಾರಣ, ಹನುಮನ ಮಡಿ, ಹನುಮಿಡಿ ಎಂಬ ರೂಪಕ್ಕೆ ಸಾಧ್ಯವಾಗಿರಲೂಬಹುದು. ಹೀಗೆ ನಿಸರ್ಗವಾಚಿ, ದೇವವಾಚಿ ಮೂಲಗಳ ಕಾರಣ 'ಹನುಮಿಡಿ' ಶಬ್ದ ಒದಗಿರಬಹುದೆಂದರೂ, ನಿಸರ್ಗವಾಚಿ ಮೂಲವೇ ಹೆಚ್ಚು ಹೊಂದಿಕೊಳ್ಳುವಂತಿದೆ. ಹೀಗಾಗಿ ಪಲ್ಮಿಡಿ=ಹಲ್ಮಿಡಿ ≈ ಹಲ್ಮುಡಿ ಶಬ್ದವು, ದೇವವಾಚಿ ಅರ್ಥವು ಬಳಕೆಗೊಂಡ ಕಾಲದ 'ಹನುಮಿಡಿ' ಶಬ್ದಕ್ಕಿಂತಲೂ ಪ್ರಾಚೀನ ಬಳಕೆಯಾಗಿದೆ. ಆದರೆ ಎರಡೂ ಶಬ್ದಗಳು ನಿಸರ್ಗವಾಚಿ ಮೂಲಹೊಂದಿ, ಇಂದಿಗೂ ಬಳಕೆಗೊಂಡಿರುವುದು ವಿಶೇಷ. ಹಲ್ಮಿಡಿ ಶಾಸನ ಮಾತ್ರ ಪ್ರಾಚೀನ ಬಳಕೆಯ ಒಂದು ರೂಪವನ್ನು ಮಾತ್ರ ಹೇಳುತ್ತದೆನ್ನಬೇಕು.

*೫. ಎಸ್. ಕೆ. ರಾಮಚಂದ್ರರಾವ್: **ಮೂರ್ತಿಶಿಲ್ಪ – ನೆಲೆ ಮತ್ತು ಹಿನ್ನೆಲೆ**, ಬೆಂಗಳೂರು, ೧೯೭೫, ಪು. ೧೦೫, ೧೦೬, ೧೧೨, ೧೧೬, ೧೧೭

*೬. ಶ್ರೀ ಅಸೂರಿ ಸಂಪತ್ಕುಮಾರ್ ರಾಮಾನುಜ ಜೀಯರ್ ಸ್ವಾಮೀಜಿ: 'ಶೈವಶಿವಲಿಂಗಗಳು ಅರ್ಥ, ತತ್ವ, ನಿರ್ಮಾಣ, ಪ್ರತಿಷ್ಠೆ, ಪ್ರಭೇದ', **ಮಾಮಿಡಿ ( ತ್ರೈಮಾಸಿಕ )**, ಬೆಂಗಳೂರು, ಸಂ.೩, ಆಶ್ವೀಜ ಸಂಚಿಕೆ ೯ (೧೯೮೨), ಪು. ೭೯.

*೭. ಅದೇ, ಸಂ. ೪, ಆಷಾಢ ಸಂಚಿಕೆ ೧೩, (೧೯೮೩) ಪು. ೬೧

*೮. ಟಿ. ಎನ್. ಮಲ್ಲಪ್ಪ: **ವೀರಶೈವದ ಉಗಮ ಮತ್ತು ಪ್ರಗತಿ**, ಬೆಂಗಳೂರು, ೧೯೬೯, ಪು. ೧೧೩

*೯. ಕಪಟರಾಳ ಕೃಷ್ಣರಾವ್: **ಕರ್ನಾಟಕ ಲಾಕುಳ ಶೈವರ ಇತಿಹಾಸ**, ಧಾರವಾಡ, ೧೯೫೫, ಪು. ೨೧

*೧೦. ಎಸ್. ಕೆ. ರಾಮಚಂದ್ರರಾವ್: ಪೂರ್ವೋಕ್ತ, ಪು. ೧೧೫

*೧೧. T.K.Biswas and Bhogendra : ***Gupta Sculptures***, New Delhi, 1985, p.8 and Harle J.C : ***Gupta Sculptures***, Oxford, 1974, p.19

*೧೨. Saroj panthey : ***I conography of Siva in Pahari Paintings***, Delhi, 1987, p.19(and Banerjee, J.N : ***Puranic and Tantric Religion***, calcutta, 1966, p.117)

*೧೩. ಡಾ॥ ಜ. ಚ.ನಿ: ***ರುದ್ರ-ಭದ್ರ-ರೇಣುಕ***, ಬೆಂಗಳೂರು, ೧೯೮೫, ಪು ೫, ೧೩, ೨೬-

ರುದ್ರ : ಪಶೂನಾಮಧಿಪತಿರಿತಿ ವಯಂ ಬ್ರಹ್ಮಾದಯಃ ಸರ್ವೇ ಪಶವಃ ಅಸ್ಮಾಕಂ ತ್ವಮೇಕಃಪತಿರಿತಿ -(ಯಜುರ್ವೇದ)

ಅತ್ಯಾಶ್ರಮಂ ಪಾಶುಪತಾ ಶಾಂಭವಂ ತಚ್ಚಿರೋವ್ರತಂ

ಇತ್ಯೇವ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ॥ -(ಕಾರಣಾಗಮ)

*೧೪. ಕಪಟರಾಳ ಕೃಷ್ಣರಾವ್ : ಪೂರ್ವೋಕ್ತ, ಪು. ೧೮

*೧೫. ಡಾ॥ ಎಂ. ಎಂ. ಕಲಬುರ್ಗಿ: ***ಐತಿಹಾಸಿಕ***, ಬೆಂಗಳೂರು, ೧೯೯೧, ಪು. ೧೧೬

*೧೬. ಆಲ್ಲಚಿರಂಜೀವಿ : *'ಯಮಸಂಧಿಯ ದೇವೀರಮ್ಮ'*, **ಇತಿಹಾಸದರ್ಶನ**, ಸಂ.೮/೧೯೯೩, ಪು. ೮೦.

*೧೭. ಎಸ್. ಕೆ. ರಾಮಚಂದ್ರರಾವ್: *'ಟಿಬೆಟ್ಟಿನಲ್ಲಿ ತಾಂತ್ರಿಕ ಸಂಪ್ರದಾಯ'*, **ಶ್ರೀಕಂಠತೀರ್ಥ**, ಬೆಂಗಳೂರು, ೧೯೭೬, ಪು. ೮೦೪

*೧೮. Jas Burgess : ***The Gandhara Sculptures,*** Delhi, 1978, p.1, plate-23, 25

*೧೯. Lolitha Nehry: ***Origins of the Gandhara Style***, Delhi, 1989, plates 28, 62, 100

*೨೦. T.K. Biswas : op. cit., p.14, fig. 28, p. 59, plate 64 (and R.C. Agarwala: ***Matrika Reliefs In Early Indian Art, East and West,*** New series, vol. 21 (1971), pp. 79-89)

*೨೧. ಎಂ. ಎಂ. ಕಲಬುರ್ಗಿ : ***'ಲಜ್ಜಾಗೌರಿ'***, ಶಿಲ್ಪಕಲಾಪ್ರಪಂಚ, ಬೆಂಗಳೂರು, ೧೯೯೪, ಪು. ೩೬೨

*೨೨. ಎಂ. ಚಿದಾನಂದ ಮೂರ್ತಿ: ***ಹೊಸತು ಹೊಸತು***, ಹಂಪಿ, ೧೯೯೩, ಪು. ೪೦೧-೪೦೨.

*೨೩. ***ಶಿವಾಗಮಸೌರಭ :*** (ಸಂ) ಎಂ. ಜಿ. ನಂಜುಂಡಾರಾಧ್ಯ, ಬೆಂಗಳೂರು, ೧೯೮೬, ಪು. ೧೨-೧೩

*೨೪. ಲಿಂಗದ ಮೇಲೆ ಲಿಂಗದ ಕಲ್ಪನೆಯು ರಾಘವಾಂಕನ 'ಸಿದ್ಧರಾಮ ಚರಿತ್ರೆ'ಯಲ್ಲಿ ವಿವರವಾಗಿ ಬಂದಿದೆ. ಇದು ಗುಪ್ತರ ಕಾಲದ ಶಿಲ್ಪಗಳಲ್ಲೂ ಕಾಣಬರುತ್ತದೆ. T. K. Biswas ಅವರ Gupta sculptures ಎಂಬ ಕೃತಿಯಲ್ಲಿ ಹೇಳಿರುವುದು ಇಂತಿದೆ: Incidentally it may be added that Siva as Linga also carries a Linga by himself and there are many sculptural examples of this type (Chandra, Promod; ***Sculptures in Allahabad Museum***. 1970, P. 24)

*೨೫. ಎ.ಕ.೯ (ಹೊಸತು), ಮೈಸೂರು ವಿಶ್ವವಿದ್ಯಾಲಯ, ೧೯೯೦, ಬೇಲೂರು ೨೩೫ (ಹಲ್ಮಿಡಿ)

*೨೬. i. K. Mammen : ***Kerala Culture***, 1942, pp. 80-81

ii. A. Sreedhara Menon : ***Social and Cultural History of India,*** New Delhi, 1979, p. 47

*೨೭. ಡಾ॥ ಶ್ರೀ ಜಚನಿ : ***ಚಿಗುರಿಟ್ಟ ಚಿಂತನ***, ಬೆಂಗಳೂರು, ೧೯೮೧, ಪು. ೫೩

*೨೮. MAR, 1936, pp. 75,76

*೨೯. ಎಸ್. ಕೆ. ರಾಮಚಂದ್ರರಾವ್ : ಪೂರ್ವೋಕ್ತ, ಪು. ೧೦೪

*೩೦. ಎಸ್. ಕೆ. ರಾಮಚಂದ್ರರಾವ್: ***ಶ್ರೀ ಸೂಕ್ತ***, ಬೆಂಗಳೂರು, ೧೯೮೪, ಪು. ೭, ೧೦

*೩೧. ಸಿ. ಬಿ. ಸೀತಾರಾಂ : ***'ಸೈಂಧವ ಸಂಸ್ಕೃತಿಯ ಕೆಲವು ಪ್ರತೀಕಗಳು'***, ಪ್ರಬುದ್ಧ ಕರ್ನಾಟಕ, ಪು. ೧೬

*೩೨. ಪ್ರೊ॥ ಸಿ. ಮಹಾದೇವಪ್ಪ: *'ಗದ್ಯಕಾವ್ಯವಾಚನ'*, **ಗಮಕವಾಹಿನಿ**, ಬೆಂಗಳೂರು, ೧೯೮೮, ಪು. ೭೦

*೩೩. ಡಾ॥ಎಂ. ಬಿ. ನೇಗಿನಹಾಳ: ***'ಹಲ್ಮಿಡಿ ಶಾಸನದ ಅರ್ಥ ವಿವೇಚನೆ'***, ಬರಹಬಾಗಿನ(ಡಾ॥ಹಂಪನಾ ಷಷ್ಟ್ಯಬ್ದ ಗೌರವ ಗ್ರಂಥ), ಶಿವಮೊಗ್ಗ, ೧೯೯೬, ಪು. ೪೫೧-೫೨

*೩೪. MAR, 1936, pp. 76, 79, 80 -(The name is not clearly visible and the reading of three middle letters is doubtful!)

*೩೫. M.J. Sharma : ***'Note on Kalabhras'***, JESI, Vol xi, 1983, pp. 120-24

*೩೬. N. Sethuraman: ***'Date of Early Pandyas'***, JESI vol xv, 1988, pp. 20-21

*೩೭. ಜಿ. ಎಸ್. ಗಾಯಿ : *'ಹಲ್ಮಿಡಿ ಶಾಸನ - ಒಂದು ಅಧ್ಯಯನ'*, ವಜ್ರದೀಪ್ತಿ, ಬೆಂಗಳೂರು, ೧೯೯೦, ಪು. ೬

*೩೮. ಅದೇ, ಪು. ೧೩

*೩೯. V. Vishwanathan Pillai : **A Dictionary Tamil and English-** Revised and enlarged- Madras, 1908, p. 277

*೪೦. ಪ್ರೊ॥ ಸಿ. ಮಹಾದೇವಪ್ಪ : ಪೂರ್ವೋಕ್ತ, ಪು. ೭೧

*೪೧. M. J. Sharma : ***'A Re examination of the Halmidi inscription of Kadamba Kakutsa',*** JESI, vol ix, 1982, p. 80

*೪೨. ಡಾ॥ ಎಂ. ಬಿ. ನೇಗಿನಹಾಳ: ***ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ,*** ಧಾರವಾಡ, ೧೯೮೨, ಪು. ೮೬-೮೯

*೪೩. ಎಚ್. ಆರ್. ರಘುನಾಥ ಭಟ್ : *'ಆದಿ ಕದಂಬರ ವಾಸ್ತು ಕಲೆ'* , **ಶಿಲ್ಪಕಲಾ ಪ್ರಪಂಚ,** ಬೆಂಗಳೂರು, ೧೯೯೪, ಪು. ೧೪೯

*೪೪. ಬೆನಗಲ್ ರಾಮರಾವ್, ಪಾನ್ಯಂ ಸುಂದರ ಶಾಸ್ತ್ರಿ : ***ಪುರಾಣ ನಾಮ ಚೂಡಾಮಣಿ,*** ಮೈಸೂರು, ೧೯೭೭ (೩ನೇ ಮುದ್ರಣ), ಪು. ೨೪೬

*೪೫. ***ಕನ್ನಡ ಸಾಹಿತ್ಯ ಚರಿತ್ರೆ*** (೪ ನೆಯ ಸಂಪುಟ), ಮೈಸೂರು ವಿಶ್ವವಿದ್ಯಾಲಯ, ಪು. ೧೭೪೦

*೪೬. ಎಂ. ವಿ. ಕೃಷ್ಣರಾವ್: ***ಬೆಂಗಳೂರು ಕಂಪೇಗೌಡ***, ಬೆಂಗಳೂರು, ೧೯೬೪, ಪು. ೭೧

*೪೭. ಜಂಗಮ ಮಠದ ಮುಖ್ಯಸ್ಥರಾದ ಬಸವಿದೇವನ ಸಂತತಿಯ ಶ್ರೀ ಕೆ. ಪಿ. ಮಲ್ಲಿಕಾರ್ಜುನ ಅವರು ಹೇಳುವ ಈ ಮಾತಿನಲ್ಲಿ ತಾರ್ಕಣೆ ಕಾಣಿಸುತ್ತದೆ.

*೪೮. ಬಿ. ರಾಮರಾಜು : ***ಆಂಧ್ರ ಪ್ರದೇಶದ ಜಾನಪದ,*** ಹೊಸದೆಹಲಿ, ೧೯೭೮, ಪು. ೧೧೪

*೪೯. ಎಂ. ಚಿದಾನಂದಮೂರ್ತಿ : ಪೂರ್ವೋಕ್ತ, ಪು. ೨೫೯-೬೦

*೫೦. ಅದೇ, ಪು. ೨೩೧

ಡಾ॥ ಚೆನ್ನಕ್ಕ ಪಾವಟೆ *

# ಚಲ್ಲಕೇತ ಮನೆತನ: ಇತ್ತೀಚಿನ ಹೊಸ ಶೋಧಗಳು

ಕರ್ನಾಟಕದ ಇತಿಹಾಸದಲ್ಲಿ ರಾಷ್ಟ್ರಕೂಟರದು ಘನತೆವೆತ್ತ ಅಧ್ಯಾಯ. **'ಕಾವೇರಿಯಿಂದಮಾ ಗೋದಾವರಿವರಂ'** -ಕನ್ನಡನಾಡಿನ ಮೇಲ್ಮೆಯನ್ನು ಮೆರೆದ ಅಚ್ಚಗನ್ನಡ ಮನೆತನವಿದು. ಈ ಮನೆತನದ ಒಂದು ಕೀರ್ತಿಸ್ತಂಭ ಕವಿರಾಜಮಾರ್ಗ, ಇನ್ನೊಂದು ಕೀರ್ತಿಸ್ತಂಭ ಸಾಮಂತ ಚಲ್ಲಕೇತನ ಮನೆತನ.

ರಾಷ್ಟ್ರಕೂಟರ ಸ್ವಾಮಿನಿಷ್ಠ ಸಾಮಂತರಾಗಿ ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳಿದವರು ಚಲ್ಲಕೇತ ಮನೆತನದವರು. ಜಿನಧರ್ಮೀಯರಾದರೂ ಸರ್ವಧರ್ಮಗಳಲ್ಲಿ ಸಮನ್ವಯತೆಯನ್ನು ಕಂಡವರು. ರಾಷ್ಟ್ರಕೂಟ ಮನೆತನವನ್ನು ತಮ್ಮ ತೋಳ್ಬಲದಿಂದ ಕಟ್ಟಿ ನಿಲ್ಲಿಸಲು ನೆರವಾದವರು. ಬಂಕಾಪುರದಲ್ಲಿ ಕ್ರಿ.ಶ. ೮೯೮ರಂದು ಹುಟ್ಟಿದ ಮಹಾಕಾವ್ಯ 'ಉತ್ತರಪುರಾಣ' ಚಲ್ಲಕೇತ ಮನೆತನದ ಇತಿಹಾಸವನ್ನು ತಿಳಿಸಿದೆ.

ನೃಪತುಂಗನ ರಾಜಕೀಯ ಬದುಕಿನ ಅವಿಭಾಜ್ಯ ಅಂಗದಂತಿದ್ದವನು **ಚಲ್ಲಕೇತ ಮನೆತನದ ವೀರಬಂಕೇಯು.** ಅವನ ಹೆಸರಿನಿಂದ ರಚಿತವಾದುದು ಬಂಕಾಪುರ ಪಟ್ಟಣ. ಇಲ್ಲಿಯವರೆಗೆ ಅವನ ಮಕ್ಕಳಲ್ಲಿ ಲೋಕಟೆ, ಕುಂದಟೆ ಇಬ್ಬರೇ ಹೆಚ್ಚು ಉಲ್ಲೇಖಿತರಾಗಿದ್ದಾರೆ. ಇವರಲ್ಲದೆ ಧೋರ, ಧೊಂಡ, ಬಂಕ ಈ ಮೂವರು ಮಕ್ಕಳ ಬಗೆಗೆ ತಿಳಿಯಬೇಕಾದ ಅಗತ್ಯವಿದೆ. ಅದರಲ್ಲೂ ಕುಂದಟೆ ಆಂಧ್ರಪ್ರದೇಶದ ಮಡಕಶಿರಾ ತಾಲೂಕು ಹೆಂಚೇರುವಿನಲ್ಲಿ ಸಮಾಧಿಮರಣ ಪಡೆದುದನ್ನು ಎತ್ತಿ ಹೇಳುವದು ಇನ್ನೊಂದು ಉದ್ದೇಶ.

ವೀರಬಂಕೇಯನ ದ್ವಿತೀಯ ಪುತ್ರ ಲೋಕಾದಿತ್ಯನ ಬಗೆಗೆ ಬೆಳಕು ಬೀರುವ ಹೊಸಶೋಧಗಳು ಹೀಗಿವೆ:

೧೯೪೨-೪೩ ಕೆ.ಆರ್.ಆಯ್ ರಿಪೋರ್ಟ್‌ನಲ್ಲಿ ಮುಧೋಳ ತಾಲೂಕಿನ ಲೋಕಾಪುರದ •೨ ಶಾಸನಗಳ ಪತ್ಯವನ್ನಾಧರಿಸಿ ಸಾರಾಂಶವನ್ನು ಪ್ರಕಟಿಸಿದ್ದು ಅದರ ಅಧ್ಯಯನದಿಂದ ಅನೇಕ ಮಹತ್ವದ ವಿಷಯಗಳು ತಿಳಿಯುತ್ತವೆ.

ಈ ಶಾಸನಗಳು ಇನ್ನೂ ಪ್ರಕಟವಾಗಿಲ್ಲ. ಅವುಗಳ ಸಾರಾಂಶವನ್ನು ಪ್ರಕಟ ಪಡಿಸಿದ ಆರ್.ಎಸ್. ಪಂಚಮುಖಿ ಅವರು ಶಾಸನಗಳನ್ನು ಪ್ರಕಟಿಸಿದ್ದರೆ ಸಾಕ್ಷ್ಯ ಉಳಿಯುತ್ತಿತ್ತು. ಲೋಕಾಪುರ ಕ್ಷೇತ್ರಕಾರ್ಯ ಕೈಕೊಂಡಾಗ ಈಗ ಅಲ್ಲಿ ಶಾಸನಗಳು ನಾಶವಾಗಿ ಹೋಗಿರುವದು ಇನ್ನೊಂದು ವಿಷಾದದ ಸಂಗತಿ. ಆ ಸಾರಾಂಶದಲ್ಲಿ-

''*ಲೋಕಟೆ ಪ್ರಸಿದ್ಧ ಪರಾಕ್ರಮಿಯಾಗಿದ್ದನು. ಅವನಿಗೆ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಚಲುಕ್ಯಕುಲ ಕಮಲವಿಕಾಸ ಭಾಸ್ಕರನೆಂಬ ಬಿರುದು ಇದ್ದಿತು. ಇಲ್ಲಿ ಚಾಲುಕ್ಯಕುಲವನ್ನು ವರ್ಣಿಸಲಾಗಿದೆ. ಲೋಕಟೆ, ಕೃಷ್ಣನ 'ಮೈದುನ'ನೆಂದು ಹೇಳುವದರಿಂದ ಅವನು ಚಲ್ಲಕೇತ ಮನತನಕ್ಕೆ ಸಂಬಂಧಿಸಿದ್ದವನೆಂದು ಸಿದ್ಧವಾಗುತ್ತದೆ. ಈ ಶಾಸನದಿಂದ ದೊರೆತ ಹೊಸ ವಿಷಯ ರಾಷ್ಟ್ರಕೂಟ ಕೃಷ್ಣನು ಚಲ್ಲಕೇತ ಮನೆತನಕ್ಕೆ ಸಮೀಪದ ಸಂಬಂಧಿ ಎಂಬುದನ್ನು ತಿಳಿಸಿದೆ; ಲೋಕಟೆಯು ತನ್ನ ಮಾಂಡಲಿಕರಿಂದ ಕೃಷ್ಣನ ಆಜ್ಞೆಯ ಮೇರೆಗೆ ಕಪ್ಪ ಕಾಣಿಕೆಗಳನ್ನು ವಸೂಲಮಾಡಿದ ಬಗ್ಗೆ ತಿಳಿಸಿದೆ. ಅವನ ಬೇಟೆಯ ಸಾಹಸದಲ್ಲಿ ವಿಂಧ್ಯಪರ್ವತದ ಆಚೆ ಒಂದು ಅಡವಿಗೆ ಹೋದಾಗ ಕುತೂಹಲಕಾರಿ ಘಟನೆ ನೋಡಿದ. ಅದೇನೆಂದರೆ ಚಿಗರಿ ಮೊಲವನ್ನು ಅಟ್ಟಿಸಿಕೊಂಡು ಬರುತ್ತಿದ್ದುದು. ವೈರಿಯಿಂದ ತನಗೆ ರಕ್ಷಣೆ ಕೊಡಬೇಕೆಂದು ಕೋರಿದ ಘಟನೆಯನ್ನು ತಿಳಿಸಿದೆ. ಅವನಿಗೆ ಈ ಸ್ಥಳವು ಪರಾಕ್ರಮದ ಸ್ಥಳವೆನಿಸಿ, ಇದು ರಾಜಧಾನಿಗೆ ಯೋಗ್ಯ ಸ್ಥಳವೆಂದರಿತು ಕನ್ನರ ಆತನಿಗೆ ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳ್ವಿಕೆಗೆ ಕೊಟ್ಟನು. ಲೋಕಾದಿತ್ಯ ಅದನ್ನು ಕೇಂದ್ರವಾಗಿಸಿಕೊಂಡು ತನ್ನ ಹೆಸರಿನ ಲೋಕಾಪುರ ಕಟ್ಟಿ ಅಲ್ಲಿ ಬುದ್ಧ ಜಿನ ಹರಿಹರ ದೇವಾಲಯ ಕಟ್ಟಿಸಿದ. ದುರ್ದೈವದಿಂದ ಶಾಸನದ ಕೊನೆಯ ಭಾಗ ಒಡೆದು ಹೋಗಿದೆ. ಲೋಕಾಪುರ ೧೨ ಹಳ್ಳಿಗಳ ವಿಭಾಗವೆಂದು ಹೇಳಿ ಯಾದವ ಮತ್ತು ಚಲ್ಲಕೇತರ ನಡುವಿನ ಸಂಬಂಧವನ್ನು ಈ ಶಾಸನ ಮೊದಲಬಾರಿಗೆ ತೋರಿಸಿದೆ*'' ಎಂದಿರುವರು.

* ರೀಡರ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩

ಇಲ್ಲಿಯ ಸಾರಾಂಶವನ್ನು ಗಮನಿಸಿದರೆ ಬಿರುದಾವಳಿಗಳು ಚಾಲುಕ್ಯರಿಗೆ ಸಂಬಂಧಿಸಿದವುಗಳಿದ್ದು ವಿದ್ವಾಂಸರು ಅವನ್ನು ಚಲ್ಲಕೇತನ ಮನೆತನಕ್ಕೆ ಆರೋಪಿಸಿರುವದು ಮೇಲ್ನೋಟಕ್ಕೆ ಕಂಡುಬರುತ್ತದೆ. ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ ೬೪ ವರ್ಷಗಳ ಆಳ್ವಿಕೆ ಕೈಕೊಂಡ ತರುವಾಯ ಅವನ ಮಗ ಎರಡನೆಯ ಕೃಷ್ಣ ಕ್ರಿ.ಶ. ೮೮೦ರಲ್ಲಿ ಪಟ್ಟಾಭಿಷೇಕಗೊಂಡ. ಪಟ್ಟಕ್ಕೆ ಮುನ್ನ ವಿರೋಧಿರಾಜರು ಯುವರಾಜ ಕೃಷ್ಣನನ್ನು ಕುತಂತ್ರಕ್ಕೆ ಸಿಲುಕಿಸಿ ನೃಪತುಂಗನ ವಿರುದ್ಧ ಬಂಡಾಯವನ್ನೆಬ್ಬಿಸಿದ್ದರಷ್ಟೇ. ಚೇದಿಯ ಅರಸು ಕೊಕ್ಕಲನ ಮಗಳನ್ನು ಮದುವೆಯಾಗುವ ಹಾಗೂ ತಾನೇ ರಾಷ್ಟ್ರಕೂಟ ಚಕ್ರವರ್ತಿ ಎಂದು ಸಾರಿದ ಎರಡು ಘಟನೆಗಳು ಬಂಡಾಯಕ್ಕೆ ಕಾರಣವೆನಿಸಿದ್ದವು. ಇಂಥ ಸಂದಿಗ್ಧ ಸಂದರ್ಭದಲ್ಲಿ ಬಂಕೇಯನು ತನ್ನ ಅದಮ್ಯ ಸಾಹಸ, ಮುಂದಾಲೋಚನೆ, ನೃಪತುಂಗನ ಸಮಯೋಚಿತ ಪ್ರಜ್ಞೆಯಿಂದ ಕಾರ್ಯ ನಿರ್ವಹಿಸಿದ್ದು, ಗಂಗವಾಡಿಯ ಮೇಲೆರಗಿ ಜಯವನ್ನೂ ಸಾಧಿಸಿ ಪರಂಪರಾಗತವಾಗಿ ಮುನ್ನಡೆದು ಬಂದ ವೈರವನ್ನು ಬಾಂಧ್ಯವ್ಯದಲ್ಲಿ ಪರ್ಯಾವಸಾನಗೊಳಿಸಿದ್ದ.

ಬಹುಶಃ ಈ ಸಂದರ್ಭ ಬಂಕೇಯನ ನಿಸ್ಪೃಹ ಸೇವೆಗೆ ಮೆಚ್ಚಿದ ಕೃಷ್ಣ ಬಂಕೇಯನ ಮಗಳನ್ನು ಮದುವೆಯಾಗಿ ಆ ಮನೆತನದ ಗೌರವ



ಲೋಕೇಶ್ವರ

ಹೆಚ್ಚಿಸಿರಬಹುದೇ? ಹೀಗಾಗಿ ಲೋಕಾಪುರ ಶಾಸನ ಲೋಕಾದಿತ್ಯನನ್ನು ಕೃಷ್ಣನ 'ಮೈದುನ'ನೆಂದು ಕರೆದುದು ಈ ವಿಚಾರಕ್ಕೆ ಅವಕಾಶ ಮಾಡಿಕೊಟ್ಟಿದೆ. ಈ ರಕ್ತಸಂಬಂಧ ರಾಷ್ಟ್ರಕೂಟ, ಚಲ್ಲಕೇತ ಮನೆತನಗಳ ಆತ್ಮೀಯತೆಯನ್ನು ಇನ್ನೂ ಹೆಚ್ಚು ಹತ್ತಿರಕ್ಕೆ ತಂದಿರಬಹುದು.

ಇನ್ನು, ವೀರಬಂಕೇಯ ತೈಲಕಬ್ಬೆಯರ ನಾಲ್ವರು ಮಕ್ಕಳಲ್ಲಿ ಲೋಕಾದಿತ್ಯ ತನ್ನ ಹೆಸರಿನ ಲೋಕಾಪುರ ಕಟ್ಟಿಸಿ ಅಲ್ಲಿ ಲೋಕ ಮಾಹೇಶ್ವರಿ ದೇವಾಲಯ, ಲೋಕನಾಥ ಬಸದಿ ಲೋಕಸಮುದ್ರ ವೆಂಬ ಸರೋವರ ಮತ್ತು ಹರಿ ಹರ ಜಿನ ಬುದ್ಧ ದೇವಾಲಯ ಗಳನ್ನು ನಿರ್ಮಿಸಿದ ಉಲ್ಲೇಖವಿದೆ. ಶಾಸನದ ವಸ್ತುವನ್ನು ಆಧಾರವಾಗಿ ಹಿಡಿದು ಕೈಕೊಂಡ ಲೋಕಾಪುರದ ಕ್ಷೇತ್ರಕಾರ್ಯ ದಿಂದ ತಿಳಿದುಬಂದುದು ಇಷ್ಟು: ಅಲ್ಲಿ ಚಾವಡಿಯ ಮುಂದೆ ನಿಲ್ಲಿಸಿದ ಎರಡು ಶಾಸನಗಳು ಕಣ್ಮರೆಯಾಗಿವೆ. ಲೋಕಮಾಹೇಶ್ವರಿ ದೇವಸ್ಥಾನ ಜೀರ್ಣೋದ್ಧಾರ ಹೊಂದಿ ಲೋಕೇಶ್ವರ ದೇವಸ್ಥಾನ ವೆನಿಸಿದೆ. ಲೋಕಸಮುದ್ರ ಸರೋವರ ಈಗ ಹೂತು ಹೋಗಿರಬೇಕು.



ತೀರ್ಥಂಕರ ವಿಗ್ರಹ

ಇಲ್ಲವೆ ಬೇರೆ ಯಾವದೊ ಆಗಿರದೇ ಊರ ಮುಂದೆ ಹರಿಯುತ್ತಿರುವ ಸುಂದರವಾದ ಹಳ್ಳವಾಗಿರಬೇಕೆನಿಸುತ್ತದೆ. ಶಾಸನದ ವಿಷಯದಂತೆ ಲೋಕಾಪುರದ ಹರಿ-ಹರ-ಜಿನ ದೇವಸ್ಥಾನಗಳು ಇಂದು ಮಾರ್ಪಾಟು ಹೊಂದಿ ಲಕ್ಷ್ಮೀವೆಂಕಟೇಶ,

ಶ್ರೀ ನಾರಾಯಣ, ಕಲ್ಲೇಶ್ವರ ದೇವರ ಮಂದಿರಗಳಾಗಿ ಬದಲಾವಣೆಗೊಂಡಿವೆ. ಲೋಕನಾಥ ಬಸದಿ ಹಾಳಾಗಿದ್ದು, ಅತ್ಯಂತ ಸುಂದರ ಕೈ, ತಲೆ ಮುಕ್ಕಾದ ಭವ್ಯ ತೀರ್ಥಂಕರ ವಿಗ್ರಹ ಹೊಲದಲ್ಲಿ ಬಿದ್ದುಕೊಂಡಿದೆ. ಲೋಕಾಪುರದ ಹೊರವಲಯದಲ್ಲಿ ಜೈನ ತೀರ್ಥಂಕರರ ಅವಶೇಷ ಅವುಗಳ ಪಟ್ಟಿಕೆಯ ಮೇಲಿನ ತ್ರುಟಿತ ಶಾಸನಗಳ ಸಾಲುಗಳು ಸ್ಪಷ್ಟವಾಗಿ ಗೋಚರವಾಗುತ್ತವೆ.

ಅಲ್ಲಿಯ ಬುದ್ಧನ ವಿಗ್ರಹವನ್ನು ಕೆಲ ಕಾಲದ ಹಿಂದೆ ಪಕ್ಕದ ಹಳ್ಳಿಗೆ ಒಯ್ದಿರುವದಾಗಿ ತಿಳಿಸಿದ್ದು ಲೋಕಾಪುರದ ದೇವಸ್ಥಾನಗಳೆಲ್ಲ ಸುಸ್ಥಿತಿಯಲ್ಲಿವೆ.

ಹೀಗೆ ಚಲ್ಲಕೇತ ಮನೆತನದ ಲೋಕಾದಿತ್ಯ ತನ್ನ ಹೆಸರಿನ ಲೋಕಾಪುರ ಕಟ್ಟಿ ಅಲ್ಲಿ ಅನೇಕ ಧರ್ಮಗಳ ಕುರುಹುಗಳನ್ನು ಸ್ಥಾಪಿಸಿ ತನ್ನ ಹೆಸರನ್ನು ಚಿರಸ್ಥಾಯಿಗೊಳಿಸಿಕೊಂಡಿದ್ದನೆನ್ನೋಣವೆ? ರಾಷ್ಟ್ರಕೂಟ ಹಾಗೂ ಚಲ್ಲಕೇತ ಮನೆತನಗಳ ಬಾಂಧವ್ಯದ ಈ ವಿಷಯದ ಮೇಲೆ ವಿದ್ವಾಂಸರು ಇನ್ನೂ ಹೆಚ್ಚು ಆಳವಾದ ಅಧ್ಯಯನ ಕೈಕೊಳ್ಳುವುದಕ್ಕೆ ಇಲ್ಲಿ ಅವಕಾಶ ಕಾಯ್ದಿದೆ.

ಡಾ|| ಎಂ.ಬಿ. ನೇಗಿನಹಾಳ*

# ಪ್ರಾಚೀನ ಕರ್ನಾಟಕದಲ್ಲಿ ಕೆಲ್ಲ ಜನಾಂಗ

ಹಲ್ಮಿಡಿ ಶಾಸನದಲ್ಲಿ ಕದಂಬ, ಆಳುಪ, ಭಟಾರಿ, ಸರಕ್ಕೆಲ್ಲ, ಕೇಕಯ, ಪಲ್ಲವ, ಸೇಂದ್ರಕ ಮತ್ತು ಬಾಣ ಎಂಬ ಎಂಟು ವಂಶನಾಮುಗಳು ಉಲ್ಲೇಖಗೊಂಡಿವೆ. ಇವಲ್ಲದೆ ಕಲಭೋರ ಎಂಬುದೂ ವಂಶನಾಮವಾಗಿರುವ ಸಾಧ್ಯತೆಯಿದೆ. ಇವುಗಳಲ್ಲಿ ಭಟಾರಿ ಮತ್ತು ಸರಕ್ಕೆಲ್ಲ ವಂಶಗಳ ಬಗ್ಗೆ ಹೆಚ್ಚಿನ ಸಂಗತಿಗಳು ತಿಳಿದು ಬಂದಿಲ್ಲ. ವಿದ್ವಾಂಸರು ಈ ಬಗ್ಗೆ ಹೆಚ್ಚುಗಮನ ಹರಿಸಿಲ್ಲ, ಹಲ್ಮಿಡಿ ಶಾಸನೋಕ್ತ ಪಶುಪತಿ, ಭಟಾರಿ ವಂಶದವನು, ಅವನ ತಾಯಿ ಕದಂಬ ಕುಲದವಳು ಮತ್ತು ಅವನು ಹತ್ತು ಮಂಡಲಗಳಿಗೆ ಅಧಿಪತಿಯಾಗಿದ್ದವನು ಎಂಬ ಮಾಹಿತಿ ತಾಳಗುಂದದ ಪ್ರಣವೇಶ್ವರ ದೇವಾಲಯದ ಬಾಗಿಲ ತೋಳಿನ ಮೇಲೆ ಬರೆದ ಸಂಸ್ಕೃತ ಶಾಸನದಲ್ಲಿ ದೊರಕುತ್ತದೆ.*೧ ಹಲ್ಮಿಡಿ ಶಾಸನದ ವೀರ ವಿಜ ಅರಸ ಭಟಾರಿ ವಂಶದವನೆಂದು ಹೇಳುವುದರ ಜತೆಗೆ ಅವನು ಸರಕ್ಕೆಲ್ಲನೆಂದೂ ಹೇಳಿದೆ. ಎಂದರೆ ಸರಕ್ಕೆಲ್ಲ ಎಂಬ ಕೆಲ್ಲ ಜನಾಂಗದ ಪ್ರಭೇದವೊಂದರ ಹೆಸರು ಇಲ್ಲಿ ಬಂದಿದೆ.

ಇದೇ ರೀತಿಯ ಉಲ್ಲೇಖಗಳು ಅಯ್ದನೆಯ ಶತಮಾನದ ಇನ್ನೂ ಕೆಲವು ಪ್ರಸಂಗಗಳಲ್ಲಿವೆ. ಹೊನ್ನಾವರ ತಾಮ್ರ ಶಾಸನ*೨ ಕೆಲ್ಲ-ಚಿತ್ರಸೇನ ಎಂಬ ಅರಸನನ್ನು ಹೆಸರಿಸಿದೆ. ಅವನನ್ನು ಮಹಾಕೆಲ್ಲನೆಂದೂ ಕೇಕಯ ವಂಶದವನೆಂದೂ ಅದೇ ಶಾಸನ ಮಾಹಿತಿ ಒದಗಿಸುತ್ತದೆ. ಇದರಿಂದ ಕೆಲ್ಲರು ಕೇಕಯವೆಂಬ ಪೌರಾಣಿಕ ವಂಶದ ಸಂಬಂಧವನ್ನು ಹೇಳಿಕೊಳ್ಳುತ್ತಿದ್ದರೆಂಬುದು ಸ್ಪಷ್ಟಪಡುತ್ತದೆ. ಹಾಗೂ ಕೆಲ್ಲವೆಂಬ ಜನಾಂಗವೇ ಪ್ರಾಚೀನ ಕರ್ನಾಟಕದಲ್ಲಿದ್ದು ಅವರಲ್ಲಿ ಕೆಲ್ಲ, ಮಹಾಕೆಲ್ಲ ಮತ್ತು ಸರಕ್ಕೆಲ್ಲ ಎಂಬ ಪರ್ಯಾಯಗಳಿದ್ದವೆಂಬುದು ಹಲ್ಮಿಡಿ ಮತ್ತು ಹೊನ್ನಾವರ ಶಾಸನಗಳಿಂದ ಖಚಿತವಾಗುತ್ತದೆ. ಅದೇ ರೀತಿ ಖಾನಾಪೂರ ತಾಲೂಕಿನ(ಬೆಳಗಾವಿ.ಜಿ) ಕಾಪೋಲಿ ಗ್ರಾಮದಲ್ಲಿ ದೊರೆತ ಭೋಜ ಅಸಂಕಿತವರ್ಮನ ಶಾಸನದಲ್ಲಿ ರಾಜನ ಅಧಿಕಾರಿಗಳು ಆ ಮುಂಚೆ ಸೊಲ್ಲಂದೂರು - ೭೦ರಲ್ಲಿನ ಒಂದು ಹಳ್ಳಿಯನ್ನು ಏಲ(ಎಳ)ಕೆಲ್ಲನೆಂಬ ಕೈಕೇಯ ದೊರೆ ಬಿಟ್ಟಿದ್ದ ದತ್ತಿಯನ್ನು ಪುನರ್ದತ್ತಗೊಳಿಸಿದರೆಂದು ಹೇಳುತ್ತದೆ. ಇದೇ ಕಾಲಾವಧಿ ಎಂದರೆ ಅಯ್ದನೆಯ ಶತಮಾನಕ್ಕೆ ಸೇರುವ ಬೆಂಡಿಗಾನಹಳ್ಳಿಯ ಒಂದು ಶಾಸನ*೩ದಲ್ಲಿ ಮಾತ್ರ ವರ್ಮ-ಮುರಸಕೆಲ್ಲನೆಂಬ ದೊರೆಯ ಹೆಸರು ಇದೆ. ಎಂದರೆ ಅಯ್ದನೆಯ ಶತಮಾನದ ಕಾಲಕ್ಕಾಗಲೇ ಕೆಲ್ಲ, ಮಹಾಕೆಲ್ಲ, ಸರಕ್ಕೆಲ್ಲ, ಎಳಕೆಲ್ಲ ಮುರಸಕೆಲ್ಲ ಎಂಬ ಮನೆತನಗಳು ಇದ್ದುದು ಇದರಿಂದ ಖಚಿತ ಪಡುತ್ತದೆಯಲ್ಲದೆ ಇವರು ತಮ್ಮನ್ನು ಪುರಾಣಪ್ರಸಿದ್ಧ ಕೇಕಯ ವಂಶಕ್ಕೆ ಸಂಬಂಧಪಟ್ಟವರೆಂದು ಹೇಳಿಕೊಳ್ಳುತ್ತಿದ್ದರೆಂದು ತಿಳಿಯಬಹುದಾಗಿದೆ.

ಮುಂದಿನ ಕಾಲಾವಧಿಯಲ್ಲಿ ಇವರ ಉಲ್ಲೇಖಗಳು ಹೆಚ್ಚುತ್ತ ಹೋಗುತ್ತವೆ. ಕದಂಬ ದೊರೆ ಕೃಷ್ಣವರ್ಮನ ಹಾಗೂ ವಿಷ್ಣುವರ್ಮನ ತಾಯಿ ಹಾಗೂ ಮೃಗೇಶವರ್ಮನ ಹೆಂಡತಿ ಮತ್ತು ರವಿವರ್ಮನ ತಾಯಿ ಪ್ರಭಾವತಿ, ಇವರು ಕೇಕಯ ವಂಶದವರೆಂಬ ಅಂಶ-ಶಿವಳ್ಳಿ*೪, ಗುಡ್ನಾಪುರ*೫ ಚಿನ್ನಹಳ್ಳಿ*೬, ತಾಳಗುಂದ*೭ ಮೊದಲಾದ ಶಾಸನಗಳಲ್ಲಿ ಉಕ್ತವಾಗಿದೆ. ಹಿರೇಗುತ್ತಿಯ ಭೋಜವಂಶದವರ (ಅಸಂಕಿತವರ್ಮ) ತಾಮ್ರಪಟದಲ್ಲಿ ನಂದಿಪಲ್ಲಿಯ ಕೈಕಯಾನ್ವಯಕ್ಕೆ ಸೇರಿದ್ದ ಕೊತ್ತಿಪೆಗ್ಗಿಲಿ ಎಂಬ ರಾಜನ ಹೆಸರಿದೆ.

ಕ್ರಿ.ಶ. ೮ನೆಯ ಶತಮಾನದ ಶಾಸನಗಳಲ್ಲಿ ಕೆಲ್ಲರ ಬಹಳಷ್ಟು ಉಲ್ಲೇಖಗಳಿವೆ. ಕೆಕ್ಕಾರಗ್ರಾಮದ ಶಾಸನದಲ್ಲಿ ಉಕ್ತನಾದ ಅಣ್ಣಿಯರಸನು ಕೇಕಯ ವಂಶದವನಾಗಿದ್ದು ಪಯೆಗುಂಡಪುರ ವರೇಶ್ವರನೆಂದಿದೆ. ಈ ಪಯೆಗೊಂಡಪುರವೆಂದರೆ ಹೈವೆ ಅಥವಾ ಹೈಗುಂದವೇ.

ಪ್ರಸಿದ್ಧ ದೊರೆ ಗಂಗ ಶ್ರೀಪುರುಷನ ಕಾಲದಲ್ಲಿ ರಾಷ್ಟ್ರಕೂಟ ಒಂದನೆಯ ಕೃಷ್ಣನ ಸಂಗಡ ನಡೆದ ಘೋರಯುದ್ಧಗಳಲ್ಲಿ ಸಿಯಗಲ್ಲರೆಂಬ ಮನೆತನದವರು ಬೆಂಗಳೂರು ತುಮಕೂರು

* ಪ್ರಾಧ್ಯಾಪಕರು, ಕ.ವಿ.ವಿ. ಬೆಳಗಾವಿ ಆವರಣ, ಬೆಳಗಾವಿ

ಭಾಗದಲ್ಲಿ ಆಳುತ್ತಿದ್ದು ಶ್ರೀ ಪುರುಷನ ಪರವಾಗಿ ಹೋರಾಡಿದರು. ಬಾಗೆಯೂರು ಪಿಂಚನೂರು ಮೊದಲಾದೆಡೆಗಳಲ್ಲಿ ಎರಡೂ ಪಕ್ಷದವರಿಗೆ ಘೋರ ಯುದ್ಧಗಳಾದವು: ತುಮಕೂರು ೮೬ನೆಯ ಶಿಲಾಲಿಪಿ, ಸಿಯಗೆಲ್ಲರು ಮಱುಗರೆನಾಡು ಮುನ್ನೂರನ್ನು ಆಳುತ್ತಿದ್ದು ಅವರ ಅಧೀನನಾಗಿದ್ದ ಮೂರು ಕೊಡೆ ಅಣ್ಣಿಯರನು ಪಿಂಚನೂರ ಕಾಳಗದಲ್ಲಿ ಹೋರಾಡಿ ಮಡಿದನೆಂದು ಹೇಳುತ್ತದೆ. ಅದೇ ತುಮ-೮೭ರಲ್ಲಿ ಪುಲಿಯೇರ ಸಿಯಗೆಲ್ಲ ಕನ್ನರಸರೊಂದಿಗಿನ ಯುದ್ಧದಲ್ಲಿ ಹೋರಾಡಿ ಸತ್ತ(?) ವಿಷಯ ಬಂದಿದೆ. ತುಮ-೮೮ರಲ್ಲಿ ಒಬ್ಬ ಸಿಯಗೆಲ್ಲದೊರೆ ಮಱುಗಜೆ - ೩೦೦ ಪ್ರದೇಶವನ್ನಾಳುತ್ತಿದ್ದನೆಂದಿದೆ. ತುಮ-೮೯, ೯೦, ೯೧, ೯೩, ೯೪, ೯೫, ೯೬ ಮತ್ತು ೯೯ನೆಯ ಶಾಸನಗಳಲ್ಲಿಯೂ ಸಿಯಗೆಲ್ಲ ರಾಜರ ಹೆಸರುಗಳಿವೆ. ೯೧ರಲ್ಲಿ ಶಿವಮಾರ-ಸಿಯುಗೆಲ್ಲರೆಂಬ ದೊರೆಗಳ ಹೆಸರೂ ೯೫ರಲ್ಲಿ ಕೆಸುಮಣ್ಣುನಾಡಾಳುತ್ತಿದ್ದ ಒಬ್ಬ ಸಿಯಗೆಲ್ಲನ ಹೆಸರೂ ಬಂದಿವೆ.

ಮೇಲೆ ತಿಳಿಸಿದ ಸಿಯಗೆಲ್ಲರು ಮಾಂಡಲಿಕ-ಸಾಮಂತ ದರ್ಜೆಯವರು. ಮಲ್ಲೇನಹಳ್ಳಿ(ಶಿಕಾರಿಪುರ)ಯ ಎರಡು ಗೋಸಾಸಗಳಲ್ಲಿ*೮ (ಕ್ರಿ.ಶ. ಸು. ೭೬೦-೭೯೦) ಕೆಸುಗೆಲ್ಲರ ಸಿರಿಯಮ್ಮನು ಊರಾಳುತ್ತಿದ್ದನೆಂದಿದೆ. ಎಂದರೆ ಈ ಸಿರಿಯಮ್ಮ ಕೇವಲ ಒಂದು ಗ್ರಾಮದ ಅಧಿಕಾರಿ.

೯ನೆಯ ಶತಮಾನದ ಉದಯಾವರದ ಎರಡು ಶಾಸನಗಳು ಇಲ್ಲಿ ಉಲ್ಲೇಖನೀಯವಾಗಿವೆ. *೯ ''ಸ್ವಸ್ತಿಶ್ರೀ ಪೃಥುವೀ ಸಾಗರ ಶ್ರೀ ಮದಾಳುಪೇಂದ್ರ ಸೋಮವಂಶೋದ್ಭವ ಉದಯಾದಿತ್ಯ ಉತ್ತಮ ಪಾಂಡ್ಯ ಆಳುವರಸರ್'' ಎಂದು ಮತ್ತು ''ಶ್ರೀ ವಿಜಯಾದಿತ್ಯನ್ ಆಳುಪೇಂದ್ರ ಪರಮೇಶ್ವರ ಅಧಿರಾಜನ್ ಉತ್ತಮ ಪಾಂಡ್ಯನ್ ಸೋಮವಂಶೋದ್ಭವನ್ ಆಳುವರಸರ್ 'ಅರಕೆಲ್ಲರಾ' ನಾಡು ಮುದಿಮೆಯುಳ್'' ಮುಂತಾಗಿ ಆಳುಪ ದೊರೆಗಳನ್ನು ಇವು ಹೊಗಳಿವೆ. ಇಲ್ಲಿ ಆಳುಪ ದೊರೆಗಳು ಸೋಮವಂಶದವರೂ ಆಳುಪರೂ ಪಾಂಡ್ಯರೂ ಎಂದು ವಂಶನಾಮಗಳನ್ನು ಹೇಳಿ ಕೊಂಡಿದ್ದು ಎರಡನೆಯ ಶಾಸನದಲ್ಲಿ ಅರಕೆಲ್ಲರು ಎಂಬ ಇನ್ನೊಂದು ವಂಶನಾಮವನ್ನು ಹೆಚ್ಚಾಗಿ ಹೇಳಿಕೊಂಡಿದ್ದು ಕಂಡುಬರುತ್ತದೆ. ಎಂದರೆ ಆಳುಪರು ಕೆಲ್ಲ ಜನಾಂಗದ ಒಂದು ಪಂಗಡವಾದ ಅರಕೆಲ್ಲ ಮನೆತನದವರು. ಮೂಲದ್ರಾವಿಡದ ಶಬ್ದಾದಿ ತಾಲವ್ಯ ವ್ಯಂಜನವು ತರುವಾಯ ಕಾಲದ ಕನ್ನಡ ಮೊದಲಾದ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಲೋಪಿಸುವುದರಿಂದ ಹಲ್ಮಿಡಿ ಶಾಸನೋಕ್ತ ಸರಕ್ಕೆಲ್ಲ ಪದವೇ ಇಲ್ಲಿ ಅರಕೆಲ್ಲ ಎಂದಾಗಿದೆಯೆಂದು ಹೇಳಬಹುದು.

ಹತ್ತನೆಯ ಶತಮಾನದಲ್ಲೂ ಕೆಲ್ಲರ ಮನೆತನಗಳು ಶಾಸನೋಕ್ತವಾಗಿವೆ. ಮದ್ದಗಿರಿ ತಾಲೂಕಿನ ರಾಮಪುರ (ತುಮ-೩೮) ಗ್ರಾಮದಲ್ಲಿನ ಕ್ರಿ.ಶ. ೯೪೩ರ ಒಂದು ಶಾಸನ ನೊಳಂಬ ಮತ್ತು ಸಿಯಗೆಲ್ಲರ ನಡುವೆ ನಡೆದ ಯುದ್ಧವನ್ನು ಉಲ್ಲೇಖಿಸುತ್ತದೆ. ''ಸ್ವಸ್ತಿಶ್ರೀ ಸಿಯಗೆಲ್ಲರಾಶರ ಆಳು, ರಣಕೇತುಗಳ ಮಗನ್ ದೇವೆಯನವ್ಪೋನ್ ನೊಲವ್ಬನ್ಸ್ರಗಳೂರ ಕೋಟ್ಟೆ ಕೊಣ್ಡನ್ನು ಸತ್ತಾನ್,'' ಸಿಯಗೆಲ್ಲ ಅರಸನ ಪರವಾಗಿ ದೇವೆಯನು ಹೋರಾಡಿ ಸತ್ತನೆಂಬುದು ಶಾಸನದ ಆಶಯ. ಇದೇ ಶತಮಾನಕ್ಕೆ ಸೇರುವ ಮರಳೆ ಮತ್ತು ಮರಳೆ ಹೊಸಹಳ್ಳಿಗಳ ಶಾಸನಗಳಲ್ಲಿ *೧೦ ಅರಕೆಲ್ಲ ವಂಶದವರ ಉಲ್ಲೇಖಗಳಿವೆ. ಅರಕೆಲ್ಲನ ಬೆಸದಲ್ಲಿ ಕೆಲ್ಲಗಾವುಣ್ಡ ಕಾದಿಸತ್ತನು. ಅರಕೆಲ್ಲನ ಮ(ಮ್ಮ) ಪೊಯ್ಸಳ ಮಾರುಗನೂ ಈ ಯುದ್ಧದಲ್ಲಿ ತೀರಿಹೋದ. ಮರಳೆ ಹೊಸಹಳ್ಳಿಯ ಈ ಶಾಸನದ ಭಾಷೆ ಸ್ಪಷ್ಟವಾಗಿಲ್ಲ. ಪೊಯ್ಸಳ ಮಾರುಗನು ಅರಕೆಲ್ಲನ ಮೊಮ್ಮಗನೆಂದರೆ ಮಗನ ಮಗನೊ ಮಗಳ ಮಗನೋ ಖಚಿತವಾಗುವುದಿಲ್ಲ. ಆದ್ದರಿಂದ ಅರಕೆಲ್ಲರೊಂದಿಗೆ ಹೊಯ್ಸಳರನ್ನು ಜೊತೆಗೂಡಿಸುವುದು ಸೂಕ್ತವೆನಿಸಲಾರದು.

ಹೀಗೆ ಕ್ರಿ.ಶ.೫ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೂ ಈ ಕೆಲ್ಲ ಜನಾಂಗದವರು ಕರ್ನಾಟಕದ ಶಾಸನಗಳಲ್ಲಿ ಕಂಡುಬರುತ್ತಾರೆ. ಹಲ್ಮಿಡಿ ಶಾಸನೋಕ್ತ ವಿಜ ಅರಸನು ಸರಕ್ಕೆಲ್ಲನು. ಹೊನ್ನಾವರ ಶಾಸನೋಕ್ತ ಚಿತ್ರಸೇನನು ಕೆಲ್ಲ ಅಥವಾ ಮಹಾಕೆಲ್ಲ ಮನೆತನಕ್ಕೆ ಸೇರಿದವನು. ಮಲ್ಲೇನಹಳ್ಳಿ ಶಾಸನೋಕ್ತ ಸಿರಿಯಮ್ಮನದು ಕೆಸುಗೆಲ್ಲರ ಮನೆತನ. ಪಿಂಚನೂರ ಯುದ್ಧದಲ್ಲಿ ಸತ್ತ ಸಿಯಗೆಲ್ಲ ಮನೆತನದ ಅರಸನ ಹೆಸರು ಪುಲಿಯೇರ ಸಿಯಗೆಲ್ಲನೆಂದು. ಅದೇ ರೀತಿ ಬೆಂಡಿಗಾನಹಳ್ಳಿ ಶಾಸನೋಕ್ತ ಮುರಸಕೆಲ್ಲ ಮತ್ತು ಕಾಪೋಲಿ ಶಾಸನೋಕ್ತ ಎಳಕೆಲ್ಲ ಮನೆತನಗಳನ್ನೂ ಇಲ್ಲಿ ನೆನಪಿಸಿಕೊಳ್ಳಬೇಕು. ಮೇಲೆ ತಿಳಿಸಿದ ಕೆಲವು ಶಾಸನಗಳಲ್ಲಿ ಅವರ ವಂಶನಾಮಗಳು ಮಾತ್ರ ಇದ್ದರೆ ಮತ್ತೆ ಕೆಲವು ಶಾಸನಗಳಲ್ಲಿ ವಂಶನಾಮಗಳ ಜತೆಗೆ ಅವರ ಹೆಸರುಗಳೂ ಉಕ್ತವಾಗಿವೆ. ಆದ್ದರಿಂದ ಸಿಯಗೆಲ್ಲ ಅರಕೆಲ್ಲ ಮೊದಲಾದುವು ವ್ಯಕ್ತಿನಾಮಗಳಲ್ಲವೆಂಬುದು ಸ್ಪಷ್ಟವಾಗುತ್ತದೆ.

ಕಾಲದದೃಷ್ಟಿಯಲ್ಲಿ ಕ್ರಿ.ಶ. ಅಯ್ದನೆಯ ಶತಮಾನದಿಂದ ಹತ್ತನೆಯ ಶತಮಾನದವರೆಗೆ ಈ ವಂಶದವರ ಉಲ್ಲೇಖಗಳಿವೆ. ಅಯ್ದನೆಯ ಶತಮಾನದ ಸರಕ್ಕೆಲ್ಲರು ಕದಂಬರ ಅಧೀನರಾಗಿದ್ದರೆಂದು ಹೇಳಬಹುದಾದರೆ, ಮಹಾಕೆಲ್ಲ ಚಿತ್ರಸೇನ, ಎಳಕೆಲ್ಲರು ಮತ್ತು ಮುರಸಕೆಲ್ಲರು ತಾತ್ಪೂರ್ತಿಕ ಸ್ವತಂತ್ರರಾಗಿ ರಾಜ್ಯವಾಳಿದಂತೆ ಕಾಣುತ್ತದೆ. ಗಂಗ ಶ್ರೀಪುರುಷನ ಅಧೀನದಲ್ಲಿ ತುಮಕೂರು-ಬೆಂಗಳೂರು ಪ್ರದೇಶಗಳಲ್ಲಿ ಆಳುತ್ತಿದ್ದ ಸಿಯಗೆಲ್ಲರು ಕೆಸುಮಣ್ಣು ನಾಡು ಮತ್ತು ಮಱುಗಜ್ - ೩೦೦ ಪ್ರದೇಶಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದ ಎರಡು ಪ್ರತ್ಯೇಕ ಮನೆತನಗಳಿಗೆ ಸೇರಿದವರು.

ಹೊನ್ನಾವರ ಮತ್ತು ಕಾಪೋಲಿಗಳ ತಾಮ್ರಪಟಗಳಲ್ಲಿ ಇವರು ತಮ್ಮನ್ನು ಕೆಲ್ಲವಂಶದ ಜತೆಗೆ ಕೇಕಯ ವಂಶದ

ಸಂಬಂಧವನ್ನೂ ಹೇಳಿಕೊಂಡಿರುವದರಿಂದ ಅಣಜಿಯ ನಣಕ್ಕಸಪಲ್ಲವ ಶಾಸನೋಕ್ತ ಶಿವನಂದವರ್ಮ, ಮೃಗೇಶ ವರ್ಮನ ಹೆಂಡತಿ ಪ್ರಭಾವತಿ, ಹೆಸರು ತಿಳಿಯದೆ ಇರುವ ಕೃಷ್ಣವರ್ಮನ ಹೆಂಡತಿ ಇವರೆಲ್ಲರೂ ಕೈಕೇಯ। ಕೇಕಯ ವಂಶೀಯರು, ಅತಏವ ಕೆಲ್ಲ ಮನೆತನದವರು. ಇದೇ ರೀತಿ ಹಿರೇಗುತ್ತಿಯ ಭೋಜ ಅಂಸಕಿತವರ್ಮನ ಶಾಸನೋಕ್ತ ಕೊತ್ತಿಪೆಗ್ಗಿಲಿ ಕೂಡ ಕೇಕಯನೇ.

ಹಲ್ಮಿಡಿಶಾಸನದಲ್ಲಿ ವಿವರಿಸಬೇಕಾದ ಇನ್ನೂ ಕೆಲವು ಸಂಗತಿಗಳಿವೆ. ಅದರಲ್ಲಿ ಸರಕ್ಕೆಲ್ಲನೂ ಭಟಾರಿಯೂ ಆಗಿದ್ದ ವಿಜ ಅರಸನು ಕೇಕಯ-ಪಲ್ಲವರನ್ನು ಕಾದಿ ಗೆದ್ದನೆಂದಿದೆ. ಅಯ್ದನೆಯ ಶತಮಾನದ ಕಾಲಕ್ಕಾಗಲೆ ಈ ವಂಶದಲ್ಲಿ ಹಲವಾರು ಪಂಗಡಗಳಾಗಿದ್ದು ಕೆಲವರು ಕದಂಬರ ಪರವಾಗಿಯೂ ಇನ್ನು ಕೆಲವರು ಪಲ್ಲವರ ಪರವಾಗಿಯೂ ಇದ್ದುದು ಅಸಂಭವವೇನೂ ಅಲ್ಲ. ಆದಿ ಚಾಲುಕ್ಯ ದೊರೆ ಮಂಗಲೇಶನು ಚಾಲುಕ್ಯ ವಂಶದವನೇ ಆದ ಸ್ವಾಮಿರಾಜನನ್ನು ಕೊಂದನೆಂದು ನೆರೂರು ತಾಮ್ರಶಾಸನದಲ್ಲಿ ಹೇಳಿದೆ. ಇಂಥ ಉದಾಹರಣೆಗಳು ಇತಿಹಾಸದಲ್ಲಿ ಬೇಕಾದಷ್ಟಿವೆ. ಇದಲ್ಲದೆ ಹಲ್ಮಿಡಿ ಶಾಸನದಲ್ಲಿಯೇ ಉಕ್ತನಾಗಿರುವ ಭಟಾರಿ ವಂಶದ ಪಶುಪತಿ ಎಂಬ ಮಂಡಲೇಶ್ವರನು ತಾನು *'ಭಟಾರಿ ವಂಶದೋನ್-ಆಳುಕದಂಬನ್'* ಎಂದರೆ ಭಟಾರಿ, ಆಳುಪ ಮತ್ತು ಕದಂಬ-ಈ ಮೂರೂ ವಂಶಗಳಿಗೆ ಸಂಬಂಧಪಟ್ಟವನೆಂದು ಹೇಳಿಕೊಂಡಿದ್ದಾನೆ. ಉದಯಾವರದ ಶಾಸನವೊಂದು ಹೇಳುವಂತೆ ಆಳುಪರು ಅರಕೆಲ್ಲರೂ ಆಗಿದ್ದ ಸಂಗತಿಯನ್ನು ಈಗಾಗಲೇ ನೋಡಿದ್ದೇವೆ.

ಈ ಕೆಲ್ಲರು ಪ್ರಾಚೀನ ಕರ್ನಾಟಕದ ಒಂದು ಪ್ರಭಾವಿ ಜನಾಂಗವಾಗಿದ್ದು ಸು. ಅಯ್ದುನೂರು ವರ್ಷಗಳ ಕಾಲ ಮಾಂಡಲಿಕ, ಸಾಮಂತ, ಊರಗೌಡ ಇತ್ಯಾದಿಯಾಗಿ ಚರಿತ್ರೆಯಲ್ಲಿ ಕಂಡು ಬರುತ್ತಾರೆ. ಅಂದಿನ ಪ್ರಮುಖ ರಾಜಮನೆತನಗಳಾದ ಕದಂಬ, ಆಳುಪ, ಗಂಗ, ಇಕ್ಷ್ವಾಕು, ಸೇಂದ್ರಕ, ಬಾಣ, ಭೋಜ ಮೊದಲಾದ ರಾಜಮನೆತನಗಳೊಂದಿಗೆ ಮೈತ್ರಿಯುತ ಸಂಬಂಧ ವನ್ನೂ ರಾಷ್ಟ್ರಕೂಟ, ಪಲ್ಲವ, ನೊಳಂಬ ಮೊದಲಾದವರೊಂದಿಗೆ ಪ್ರಸಂಗಾನುಸಾರ ವೈರವನ್ನು ಹೊಂದಿದ್ದ ಇವರು ಕರ್ನಾಟಕದ ಬೆಳಗಾವಿ, ಉತ್ತರ ಕನ್ನಡ, (ಧಾರವಾಡ) ಶಿವಮೊಗ್ಗ ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು (ಬೆಂಗಳೂರು) ಮತ್ತು ಹಾಸನ-ದಕ್ಷಿಣ ಕನ್ನಡ, ಇವಿಷ್ಟು ಪ್ರದೇಶಗಳಲ್ಲಿ ಕಂಡು ಬಂದಿದ್ದಾರೆ.

ರಾಮಾಯಣ, ಮಹಾಭಾರತ, ಭಾಗವತ, ವಾಯುಪುರಾಣ ಮೊದಲಾದ ಪ್ರಾಚೀನ ಸಂಸ್ಕೃತ ಕೃತಿಗಳಲ್ಲಿ ಕೇಕಯ। ಕೈಕೇಯರ ಉಲ್ಲೇಖಗಳಿರುವುದಾಗಿ ತಿಳಿದುಬರುತ್ತದೆ. ರಾಮಾಯಣ ಕಾಲದ ಅಶ್ವಪತಿ ಕೇಕಯ ದೊರೆಯಾಗಿದ್ದು ದಶರಥನ ಹೆಂಡತಿ ಕೈಕೇಯಿ ಅವನ ಮಗಳು. ಕೃಷ್ಣನ ಒಬ್ಬ ಹೆಂಡತಿ ಭದ್ರೆ, ವಿರಾಟನ ಹೆಂಡತಿ ಸುದೇಷ್ಣೆ, ಅವಳ ತಮ್ಮ ಕೀಚಕ ಮೊದಲಾದವರು ಕೇಕಯ ದೇಶದವರು. ಗೋಮಂತವೆಂಬ ಕೋಟೆಯ ಮುತ್ತಿಗೆಯಲ್ಲಿ ಮೊದಲು ಜರಾಸಂಧನ ಪಕ್ಷದಲ್ಲಿದ್ದು ತರುವಾಯ ಕೃಷ್ಣನ ಮತ್ತು ಪಾಂಡವರ ಪಕ್ಷ ವಹಿಸಿದ ಈ ಕೇಕಯರು ತಮ್ಮ ಮೂಲನೆಲೆ ಕೇಕಯ ದೇಶದಿಂದ ಯದುಗಳ ದೇಶಕ್ಕೆ ವಲಸೆಹೋದರೆಂದು ಭಾಗವತ ಹೇಳುತ್ತದೆ. ಶಿಬಿ ಚಕ್ರವರ್ತಿಯ ಮಗ ಧೃಷ್ಟಕೇತು ಅಥವಾ ಕೇಕಯನಿಂದಾಗಿ ಇವರ ದೇಶಕ್ಕೆ ಕೇಕಯದೇಶವೆಂದು ಹೆಸರಾಯಿತಂತೆ. ಈ ಕೇಕಯದೇಶ ವಿಪಾಶಾ ಮತ್ತು ಶತದ್ರು ನದಿಗಳೇ (ಈಗಿನ ಬಿಯಾಸ್ ಮತ್ತು ಸತಲಜ್ ನದಿಗಳ) ನಡುವಿನ ಪ್ರದೇಶ.

ಆದರೆ ಇತಿಹಾಸ ಕಾಲದ ಯಾವ ಶಾಸನಗಳಲ್ಲೂ ಇವರು ಕರ್ನಾಟಕದ ಹೊರಗೆ ಕಂಡುಬಂದಿಲ್ಲ. ಕಾರಣ ಪೌರಾಣಿಕ ಕಾಲದ ಕೇಕಯರೊಂದಿಗೆ ಇವರ ಸಂಬಂಧವನ್ನು ನಿರ್ಧರಿಸಿ ಹೇಳುವುದು ಕಷ್ಟಸಾಧ್ಯ. ಕೆಲ್ಲ ಎಂಬ ಪದ ಕನ್ನಡದಲ್ಲಿ ಮಾತ್ರ ಇದ್ದು ಇತರ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಪರ್ಯಾಯ ರೂಪಗಳಾವುವೂ ಇಲ್ಲ; ಇದರ ಅರ್ಥವೂ ಏನೆಂದು ತಿಳಿಯದು. ಒಟ್ಟಿನಲ್ಲಿ ಪ್ರಾಚೀನ ಕರ್ನಾಟಕದ ಒಂದು ಪ್ರಬಲ ಜನಾಂಗವಿದಾಗಿದ್ದು ಚರಿತ್ರೆಯಲ್ಲಿ ಮಹತ್ವಪೂರ್ಣ ಪಾತ್ರವಹಿಸಿ ಸು. ಹನ್ನೆರಡನೆಯ ಶತಮಾನದಿಂದ ಕಣ್ಮರೆಯಾಯಿತೆಂದು ಹೇಳಬಹುದಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. M.A.R. 1911, p. 137

*೨. E. I. XXXVII, p. 31 – ಈ ಚಿತ್ರಸೇನ ವಿಜಯಾಂಬುದ್ವೀಪದಲ್ಲಿ ಆಳುತ್ತಿದ್ದನೆಂದು ಶಾಸನ ಹೇಳುತ್ತದೆ.

*೩. ಎಂ. ಎ. ಆರ್. ೧೯೧೫, ಪು. ೩೯

*೪. A corpus of kadamba Inscriptions

*೫. ಅದೇ

*೬. E. I. vol. VI, p. 18

*೭. M.A.R. 1910-11, p. 35

*೮. ಸತ್ಯ ಶುದ್ಧ ಕಾಯಕ, ೩ -೩/೪

*೯. EI. IX, p. 21 and 23

*೧೦. ಇತಿಹಾಸ ದರ್ಶನ, ಬೆಂಗಳೂರು, ಸಂ. ೧೧/೧೯೯೬, ಪು. ೨೨೪

ಆರ್. ವೆಂಕಟೇಶ ಮೂರ್ತಿ*

# ಪೆರುಮಾಳೆದೇವ ಮತ್ತು ವಂಶದವರ ಧಾರ್ಮಿಕ ಸಾಧನೆಗಳು – ಒಂದು ಅವಲೋಕನ

ಮೂರನೇ ನರಸಿಂಹನ ಪ್ರಸಿದ್ಧನಾದ ಸೇನಾನಿ ಪೆರುಮಾಳೆ ದೇವ ದಂಡನಾಯಕ ತನ್ನ ಅರಸನಿಗೆ ಬಹು ಪ್ರಿಯನಾಗಿದ್ದ. ಈತನು ಸ್ವಾಮಿ ವಂಚಕರ ಗಂಡ, ರಾವುತ್ತರಾಯ, ಜವನಿಕೆ ನಾರಾಯಣ, ಇತ್ಯಾದಿ ಅಭಿದಾನಗಳಿಂದ ಕೂಡಿ ಶ್ರೀ ರಾಮಕೃಷ್ಣ ಪಾದ ಪದ್ಮಾರಾಧಕನೆನಿಸಿ ಶೋಭಿಸಿದ್ದಾನೆ. ಮೂರನೇ ನರಸಿಂಹನ ಕಾಲದಿಂದ ಮೂರನೇ ಬಲ್ಲಾಳನ ಕಾಲದವರೆವಿಗೂ ಅಧಿಕಾರ ವನ್ನು ಮುಂದುವರೆಸಿಕೊಂಡು ಬಂದಿದ್ದನೆಂಬುದು ಸರ್ವವಿದಿತ.

ಶಾಸನಗಳು ಇವನ ವಂಶಾವಳಿಯನ್ನು ಈ ರೀತಿ ದಾಖಲಿಸಿವೆ: ವಿಷ್ಣುದೇವ ಮತ್ತು ಮಂಚಲೆ*೧ ದಂಪತಿಗಳ ಪುತ್ರ ಪೆರು ಮಾಳೆದೇವ. ಈತನಿಗೆ ಬಸವಿಯಕ್ಕ*೨ ಎಂಬ ಒಬ್ಬಳು ಸಹೋದರಿ. ಪೆರುಮಾಳೆ ದೇವನಿಗೆ ಲಕ್ಷ್ಮೀನಾರಾಯಣ*೩ ಮತ್ತು ಮಾಧವ*೪ ಎಂಬ ಪುತ್ರರು. ಇವರಲ್ಲಿ ಮಾಧವನಿಗೆ ಕೇತಯ*೫ ಮತ್ತು ಭರತಜೀಯ*೬ ಎಂಬಿಬ್ಬರು ಪುತ್ರರು.

ವಂಶವೃಕ್ಷ




ಪ್ರಸ್ತುತ ಶಿರೋನಾಮೆಗೆ ಸಂಬಂಧಿಸಿದಂತೆ ಸುಮಾರು ೪೦ ಶಾಸನಗಳಲ್ಲಿ ಪೆರುಮಾಳ, ಇವನ ಮಕ್ಕಳು ಹಾಗೂ ಮೊಮ್ಮಕ್ಕಳು ತಮ್ಮ ಅಧಿಕಾರಾವಧಿಯಲ್ಲಿ ತಮ್ಮ ವ್ಯಾಪ್ತಿಯ ಪ್ರದೇಶಗಳಲ್ಲಿ ದೇವಾಲಯ ನಿರ್ಮಾಣ, ಅಗ್ರಹಾರಗಳು, ಕೆರೆ, ಕಟ್ಟೆ, ಕಾಲುವೆಗಳ ನಿರ್ಮಾಣ, ಜೀರ್ಣೋದ್ಧಾರ ಹಾಗೂ ಪೂಜೆ ಪುನಸ್ಕಾರಗಳಿಗೆ, ಅನ್ನಸತ್ರಗಳಿಗೆ, ಶಾಲೆ, ಮಠಗಳು ಇತ್ಯಾದಿಗಳಿಗೆ ದಾನ ದತ್ತಿಗಳನ್ನು ನೀಡಿದ್ದಾರೆ.

ಪೆರುಮಾಳೆದೇವ ದಂಡನಾಯಕನಿಗೆ ಸಂಬಂಧಿಸಿದಂತೆ ಸುಮಾರು ೨೨ ಶಾಸನಗಳು ದೊರೆಯುತ್ತವೆ. ಉಳಿದವು ಈತನ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಸೇರಿದುವಾಗಿವೆ.

ರಾಜನ ವಿಷಯವನ್ನು ಕನ್ನಡದಲ್ಲಿಯೂ, ಉಳಿದ ವಿಷಯಗಳನ್ನು ತಮಿಳಿನಲ್ಲಿಯೂ ದಾಖಲಿಸಿರುವ ಚಾಮರಾಜ ನಗರದ ಎಡೂರು*೭ ಶಾಸನವು, ಮಹಾಪ್ರಧಾನ ಪೆರುಮಾಳೆ ದಂಡನಾಯಕನು ಪದಿನಾಡಿನ ಪ್ರಭುಗಾವುಂಡರೊಡಗೂಡಿ 'ವೋಗೂರ್'ನ ಪ್ರದೇಶಿ ನಾಯಕದೇವ ಎಂಬ ದೇವರಿಗೆ ಇಡೈಯೂರ್ ಎಂಬ ಹಳ್ಳಿಯನ್ನು ದೇವದಾನವಾಗಿ ನೀಡಿರುವುದನ್ನು ತಿಳಿಸುತ್ತದೆ.

ವೀರ ಸೋಮೇಶ್ವರದೇವ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಪೆರುಮಾಳೆದೇವನು ದುರ್ಗಯಾರ್ ಅಗರ ಎಂಬ ಅಗ್ರಹಾರವನ್ನು (ಬಹುಶಃ ಹಾಳಾಗಿದ್ದ ಅಗ್ರಹಾರವನ್ನು) ಪುನರ್ ಪ್ರತಿಷ್ಠಾಪಿಸಿ ದನೆಂದು ಯಳಂದೂರಿನ ಶಾಸನವು;*೮ ಮೂರನೇ ನರಸಿಂಹನ ಆಡಳಿತ ಕಾಲದಲ್ಲಿ, ಶ್ರೀರಂಗಪುರದಲ್ಲಿ ಅಲ್ಲಾಳಸಮುದ್ರ ಕೆರೆಯನ್ನು ಕಟ್ಟಿಸಿ ಖಾಯಂ ನೀರು ಸರಬರಾಜು ವ್ಯವಸ್ಥೆ ಮಾಡಿದನೆಂದು ಬೆಳ್ಳೂರು ಶಾಸನವು*೯ ಅಲ್ಲಾಳ ಸಮುದ್ರ ತಗಚಗೆರೆ ಅವ್ವೆಯರ ಕೆರೆಗಳನ್ನು ಕಟ್ಟಿಸಿ, ಕಾಲುವೆಗಳನ್ನು ನಿರ್ಮಿಸಿ ಖಾಯಂ ನೀರು ಸರಬರಾಜು ವ್ಯವಸ್ಥೆ ಮಾಡಿಸಿ, ಗದ್ದೆಗಳನ್ನೂ ಮಾಡಿಸಿದುದಾಗಿ ಕ್ರಿ.ಶ ೧೨೯೮ರ ಶಾಸನವು*೧೦ ದಾಖಲಿಸಿವೆ.

ಕ್ರಿ.ಶ. ೧೨೭೧ರ ಶಾಸನವು*೧೧ (ಉದ್ಭವನರಸಿಂಹಪುರ) ಬೆಳ್ಳೂರಿನಲ್ಲಿ ತಾನು ಸ್ಥಾಪಿಸಿದ ಪಂಚಿಕೇಶ್ವರ ದೇವಾಲಯದಲ್ಲಿ ನಡೆಸುವ ಇಂದ್ರಪೂಜೆ ಮತ್ತು ಆರಣಪೂಜೆಗಳಿಗೆ ಭೂದಾನ ನೀಡಿ ಆ ಭೂಮಿಯಲ್ಲಿ ವ್ಯವಸಾಯ ಮಾಡುವ ೧೨ ವೊಕ್ಕಲುಗಳಿಗೆ ಮನೆಯನ್ನು ನೀಡಿ, ಮನೆದೆಜೆಯನ್ನು ಮನ್ನಾಮಾಡಿ ಬಾಡಿಗೆಯ ರೂಪದಲ್ಲಿ ಮೂರು ವರ್ಷಗಳವರೆಗೆ ೩೭ ಗದ್ಯಾಣ ಮತ್ತು ೨

* ನಂ. ೫೭೪, ಎಸ್.ಆರ್.ಎಸ್., ಕೆ.ಇ.ಬಿ.ಕ್ವಾರ್ಟರ್ಸ್, ಹೂಟಗಳ್ಳಿ, ಬೆಳವಾಡಿ ಅಂಚೆ, ಮೈಸೂರು – ೫೭೦ ೦೧೮

ಪಣ, ಅನಂತರ ೫೪ ಗದ್ಯಾಣವನ್ನು ದೇವಾಲಯದ ಖರ್ಚುಗಳಿಗೆ ನೀಡುವಂತೆ ವ್ಯವಸ್ಥೆ ಮಾಡಿದುದು, ಹಾಗೂ ತನ್ನ ಮನೆಯಲ್ಲಿ ನಡೆಸುವ ಅನ್ನಸತ್ರದಲ್ಲಿ ೧೬ ಬ್ರಾಹ್ಮಣರಿಗೆ ಮತ್ತು ಋಗ್ವೇದ, ಯಜುರ್ವೇದಗಳನ್ನು ಮಕ್ಕಳಿಗೆ ಹೇಳಿಕೊಡುವ ಉಪಾಧ್ಯಾಯರುಗಳ ಊಟದ ವ್ಯವಸ್ಥೆಗಾಗಿ ಭೂಮಿಯನ್ನು ಕೊಡುಗೆ ನೀಡಿರುವ ವಿಷಯಗಳನ್ನು ವ್ಯಕ್ತಪಡಿಸುತ್ತದೆ.

ಹೊಳೇನರಸೀಪುರದ ಶಾಸನವು *೧೨ ವಿಷ್ಣುದೇವ ಮತ್ತು ಮಂಚಲೆಯರ ಪುತ್ರನಾದ ಪೆರುಮಾಳೆ ದಂಡನಾಯಕನು ಉದ್ದೂರಿನ ಆಲಕೆರೆಯ ಕೆಳಗಿನ ಮೊದಲೇರಿಯ ಹಳ್ಳದ ಎರಡು ಸಲಗೆ ಗದ್ದೆಯನ್ನು ಕೊಂಡು ಪಂಚಿಕೇಶ್ವರ ಧರ್ಮಕ್ಕೆ, ಆರಣ ಪೂಜೆ ಮತ್ತು ಆಯಿಂದ್ರ ಪರ್ವದ ಧರ್ಮಕ್ಕೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ.

ಸರ್ವನಮಸ್ಯದಗ್ರಹಾರ ಬಿಜ್ಜಳಾಪುರ ಅಲಿಯಾಸ್ ಹಾನುಗಲ್ ಮಹಾಜನರು ಮತ್ತು ಮಾಸವರ್ಗಡೆ ಸಾಮ್ಯಾದಿ ಮಂಚಣೋಪಾಧ್ಯಾಯನ ವಶದಲ್ಲಿದ್ದ, ಹಾನುಗಲ್ಲಿಗೆ ಸಂಬಂಧಿಸಿದ ಒಟ್ಟು ೧೦ ಸಲಗೆ ಹದಿನಾಲು ಕೊಳಗ ಬೆಳೆಯುವ ಭೂಮಿಯನ್ನು ಕೊಂಡು ಹಾನುಗಲ್ಲಿನ ಪೂರ್ವ, ಪಶ್ಚಿಮ, ಉತ್ತರ ದಕ್ಷಿಣದ ಕಣಪೂಜಯ್ಯರ ಮಕ್ಕಳಿಗೆ ದಾನ ನೀಡಿದ್ದಲ್ಲದೆ, ಹಾನುಗಲ್ಲಿನ ಮುಂದೆ ಪೆರುಮಾಳಿಸಮುದ್ರವೆಂಬ ಕೆರೆಯನ್ನು ನಿರ್ಮಿಸಿದನು ಎಂದು ಅರಕಲಗೂಡು ತಾಲ್ಲೂಕಿನ ಹಾನಗಲ್ಲು ಶಾಸನ ತಿಳಿಸುತ್ತದೆ. *೧೩

ಅರಸ ವೀರನರಸಿಂಹನಿಂದ ಪಡೆದ, ಬೆಟ್ಟದಕೋಟೆ, ಬಿಲ್ಲಬಿಳಗುಂದ ಮತ್ತು ತಿಪ್ಪೂರು ಹಳ್ಳಿಗಳು ಹಾಗೂ ಅದಕ್ಕೆ ಸೇರಿದ ಗ್ರಾಮಗಳನ್ನು ಬೆಳ್ಳೂರಿನ ಮಹಾಜನಗಳಿಗೆ ಮೂಲ ೮೬ ವೃತ್ತಿಗಳಿಗೆ ಮತ್ತೂ ಹತ್ತನ್ನು ಸೇರಿಸಿ ದೇವಾಲಯಗಳಲ್ಲಿನ ಪೂಜಾ ಕೈಂಕರ್ಯಗಳಿಗಾಗಿ ದಾನ ನೀಡಿರುವುದು ಕ್ರಿ.ಶ. ೧೨೮೮ರ ಶಾಸನದಿಂದ ತಿಳಿದು ಬರುತ್ತದೆ. *೧೪

ಯಳಂದೂರಿನ ಶಾಸನವು (ಎ.ಕ. ೪ - ಶಾಸಂ. ೭) ಪೆರುಮಾಳೆ ದಂಡನಾಯಕನು..... ಪುಂಗಣೂರು ಮಹಾಜನರಿಂದ ಭೂಮಿಯನ್ನು ಕೊಂಡು ಪದಿನಾಡಿನಲ್ಲಿರುವ ಅರುಳೈ ಅಲಿಯಾಸ್ ಚೋಳೇಂದ್ರ ಸಿಂಹ ಚತುರ್ವೇದಿ ಮಂಗಲಂನಲ್ಲಿರುವ ಕಪಾಲೇಶ್ವರ ಉಡೈಯಾರ್ ದೇವರ ನಂದಾದೀಪ ಮತ್ತು ನೈವೇದ್ಯಕ್ಕಾಗಿ ದಾನ ನೀಡಿದ ಬಗ್ಗೆ ಹೇಳಿದೆ. ಬೆಳ್ಳೂರಿನ ೭೩ನೇ ಸಂಖ್ಯೆಯ ಶಾಸನವು *೧೫ ಇದೇ ಊರಿನ ಶಾಸನ ಸಂಖ್ಯೆ ೭೭ರ ಮುಂದುವರಿದ ಭಾಗದಂತಿದ್ದು, ಈತನು ಅರಸನಿಂದ ತಾಮ್ರಪಟಗಳ ಮೂಲಕ ಪಡೆದ ಬೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಹಾಗೂ ಅದಕ್ಕೆ ಸೇರಿದ ಗ್ರಾಮಗಳನ್ನು ಬೆಳ್ಳೂರಿನ ಪ್ರಸನ್ನ ಮಾಧವ, ರಾಮಕೃಷ್ಣ ಮತ್ತು ವರದ ಅಲ್ಲಾಳನಾಥ ದೇವಾಲಯಗಳಲ್ಲಿನ ಆರಾಧನೆ, ನೈವೇದ್ಯಗಳಿಗೆ ಹಾಗೂ ಅಲ್ಲಿ ಪೂಜೆಸಲ್ಲಿಸುವ ನಿಬಂಧಕರುಗಳ ಜೀವಿತಕ್ಕಾಗಿ ನೀಡಿದ್ದನ್ನು ಹಾಗು ದೇಗುಲಗಳ ಎಲ್ಲಾ ಪೂಜಾದಿ ಕಾರ್ಯಗಳ ಪಟ್ಟಿ ಮತ್ತು ಇದಕ್ಕಾಗಿ ಹಣ. ಅಕ್ಕಿ, ಸಾಂಬಾರ ಪದಾರ್ಥಗಳು ಇತ್ಯಾದಿಗಳನ್ನು ಒದಗಿಸುವ ಬಗೆಗೆ ವಿವರವನ್ನೂ ನೀಡುತ್ತದೆ.

*ಚಿತ್ರದುರ್ಗದ ಶಾಸನವೊಂದು *೧೬ ಬೆಟ್ಟದ ಮೇಲಿರುವ ಬ್ರಹ್ಮಪುರಿಗಿರಿಯನ್ನು ಈ ದಂಣಾಯಕನು ಪೆರುಮಾಳೆಪುರವನ್ನಾಗಿ ಪರಿವರ್ತಿಸಿದನೆಂದು ದಾಖಲಿಸಿದೆ. ಮತ್ತೊಂದು ಶಾಸನವು *೧೭ ಚಿಮ್ಮತ್ತನೂರು ವೃತ್ತಿಯೊಳಗಣ ನಗರೇರು ಗ್ರಾಮದ ಕಾಮಗೌಡನ ಮಗ ಬೆನಕಗವುಡನಿಂದ ಕುರುಬನಕಾಳೆಯಕೆಱೆ ಮತ್ತು ಅದರ ಕೆಳಗೆ ಇದ್ದ ಗದ್ದೆಗಳನ್ನು ಪೂರ್ತಿ ಹಣ ಸಂದಾಯ ಮಾಡಿ ಖರೀದಿಸಿ, ನಾಲ್ಕೂ ದಿಕ್ಕಿಗೂ ಕಲ್ಲುಗಳನ್ನು ಹಾಕಿಸಿ ೨೪ ಭಾಗಗಳನ್ನಾಗಿ ಮಾಡಿ, ದುರ್ಗದ ಹೂಲೆಯಬಾವಿಯಲ್ಲಿ ತಾನು ಸ್ಥಾಪಿಸಿದ ಪೆರುಮಾಳೆಪುರದ ಬ್ರಹ್ಮಪುರಿಯ ಬ್ರಾಹ್ಮಣರಿಗೆ ದಾನ ನೀಡಿದ್ದಲ್ಲದೆ ವಿವಿಧ ಪ್ರಮಾಣದ ಭೂಮಿಯನ್ನು, ಕೊಳಗ, ಸಲಗೆ, ಕಂಬ ಪರಿಮಾಣದಲ್ಲಿ ಸೂಚಿಸಿ, ಹಿಡಿಂಬೇಶ್ವರ ದೇವರಿಗೆ ಚೋಳೇಶ್ವರ ದೇವರಿಗೆ, ಬೆನಕಗೌಡನಿಗೆ, ನಾಡಿನ ಸೇನಬೋವ ಬಾಚಯ್ಯನಿಗೂ ಹೆಗ್ಗಡೆ ಬಾಚಯ್ಯನಿಗೂ ಕೊಡುಗೆಯಾಗಿ ನೀಡಿದ ಕುರುಬನ ಕಾಳೆಯ ಕೆರೆಯನ್ನು ಪುನಃ ಹೊಸದಾಗಿ ನಿರ್ಮಿಸಿ ಅದಕ್ಕೆ ಪೆರುಮಾಳೆ ಸಮುದ್ರವೆಂದು ಹೆಸರಿಸಿ, ಪೆರುಮಾಳೆಪುರದಲ್ಲಿ ತಾನು ಸ್ಥಾಪಿಸಿದ ಪಂಚಿಕೇಶ್ವರ ದೇವರ ಆಯಿಂದ್ರ ಪರ್ವದ ಕಾರ್ಯಕ್ಕಾಗಿ ದಾನ ನೀಡಿದ್ದನ್ನೂ ತಿಳಿಸಿದೆ.*

ಬೆಂಣ್ಣೆದೊಣೆಯ ಕಾಮಗವುಡನ ಮಗ ಬಲ್ಲಗವುಡ, ಕಾಮಗವುಡ ಬಮ್ಮಗವುಡರಿಂದ ಎಸಗೂರು ಕ್ಷೇತ್ರದಲ್ಲಿರುವ ಹೊಳಲಕೆರೆಯ ಗದ್ದೆ ಬೆದ್ದಲುಗಳನ್ನು ಕೊಂಡು, ಅದರಲ್ಲಿ ಅಧಿಕಾರಿ ವಿಠ್ಠಪ್ಪನಿಗೆ ೫೦೦ ಕಂಬ ಬೆದ್ದಲು, ಬಲ್ಲಗವುಡ, ಕಾಮಗವುಡ, ಬಂಮ್ಮಗವುಡರಿಗೆ ೩೦ ಬೆದ್ದಲುಗಳನ್ನು ಕೊಡುಗೆಯಾಗಿ ಕೊಟ್ಟು, ಎಸಗೂರು ಕ್ಷೇತ್ರದ ಗವುಡಿಕೆಯನ್ನು ನೀಡಿದ್ದಾನೆ. ಸೇನಬೋವ ಬಾಚಯ್ಯನಿಗೆ ೫೦ ಕಂಬ ಬೆದ್ದಲು, ಹೆಗ್ಗಡೆ ಬೊಮ್ಮಯ್ಯನಿಗೆ ೫೦ ಕಂಬ ಬೆದ್ದಲು ಹಾಗೂ ಬೆಮ್ಮತ್ತೂರಿನ ಧರ್ಮೇಶ್ವರ ದೇವರ ಮುಂದಿರುವ ಶ್ರೀ ರಂಗನಾಥದೇವರ ಅಮೃತಪಡಿಗೆ ೧೦೦೦ ಕಂಬ ಬೆದ್ದಲುಗಳನ್ನು ದತ್ತಿ ನೀಡಿ, ಉಳಿದ ಎಸಗೂರಿನ ಎಲ್ಲಾ ಕ್ಷೇತ್ರವನ್ನೂ ಧರ್ಮೇಶ್ವರ, ಭೀಮೇಶ್ವರ, ಅರ್ಜುನೇಶ್ವರ, ಲಕುಲೇಶ್ವರ, ಸಹದೇವೇಶ್ವರ ಮತ್ತು ತೀರ್ಥದ ಪಂಚಲಿಂಗಗಳಿಗೆ, ತ್ರಿಕಾಲ ಪೂಜಾ ಪುನಸ್ಕಾರ, ಅಮೃತಪಡಿ, ಅಂಗಭೋಗ, ರಂಗಭೋಗ, ಗ್ರಹಣ ಸಂಕ್ರಮಣ ದೀಪೋತ್ಸವ ಸಹಿತ ವಿಶಿಷ್ಟ ಉತ್ಸವಗಳಿಗಾಗಿ ದಾನ ನೀಡಿರುವುದನ್ನು ಚಿತ್ರದುರ್ಗದ ಶಾಸನವು ತಿಳಿಸುತ್ತದೆ. *೧೮

ಮಾಳಲಂಗೆಯ ಮಹಾಜನರು ಮತ್ತು ದೇವಪ್ಪ ಎಂಬುವರಿಂದ ಭೂಮಿಗಳನ್ನು ಖರೀದಿಸಿ ಮಾಳಲಂಗೆ ಪ್ರತಿನಾಮ ಉದ್ಭವ ಸರ್ವಜ್ಞ ಶ್ರೀರಂಗಪುರ ಅಗ್ರಹಾರದಲ್ಲಿ ನಡೆಸುವ ಖಂಡಿಕ ಬಾಲ ಶಿಕ್ಷೆ, ಋಗ್ವೇದವನ್ನು ಓದಿಸುವ ಉಪಾಧ್ಯಾಯರ ಜೀವಿತಕ್ಕೆ, ನಾಗರಿ, ಕನ್ನಡ, ತಮಿಳು, ಆರ್ಯವನ್ನು ಕಲಿಸುವ ಉಪಾಧ್ಯಾಯರ ಜೀವಿತಕ್ಕೆ ಮನೆ ಮತ್ತು ವಾರ್ಷಿಕ ಜೀವನಕ್ಕಾಗುವ ಆಹಾರ ಧಾನ್ಯ, ಹೊನ್ನು ಮುಂತಾದುವುಗಳ ವ್ಯವಸ್ಥೆ ಮಾಡಿರುವುದನ್ನು ತಡಿಮಾಲಿಂಗಿಯ ಶಾಸನ ತಿಳಿಸುತ್ತದೆ. *೧೯ ಅಲುಗೋಡು ಪ್ರತಿನಾಮ ಸರ್ವಜ್ಞ ಪ್ರಸನ್ನ ಚೆನ್ನಕೇಶವಪುರ ಗ್ರಾಮದಲ್ಲಿನ ಚೆನ್ನಕೇಶವ ದೇವಾಲಯ ಮತ್ತು ಮೂಲಸ್ಥಾನ ರಂಗನಾಥ ದೇವಾಲಯಗಳಲ್ಲಿ ರಂಗಮಂಟಪಗಳು ಮತ್ತು ಸಭಾ ಮಂಟಪಗಳನ್ನು ನಿರ್ಮಿಸಿರುವ ವಿಷಯವನ್ನು ತಿರುಮಕೂಡಲು ನರಸೀಪುರ ಶಾಸನವು ವ್ಯಕ್ತಪಡಿಸುತ್ತದೆ. *೨೦

ಭೀಮಯ ದಂಡನಾಯಕ, ಮಂಚಯ ದಂಡನಾಯಕ ನೊಡಗೂಡಿ ಈತನು, ಎಡತಲೆಯ ಲಕ್ಷ್ಮೀನಾರಾಯಣ ದೇವರು, ನರಸಿಂಹದೇವರು, ಗೋಪಾಲ ದೇವರುಗಳ ದೇವಾಲಯಕ್ಕೆ ಸೇರಿದ ಎಡತಲೆಯಲ್ಲಿನ ಗದ್ದೆ, ಬೆದ್ದಲು, ತೋಟ, ಮನೆ ಮುಂತಾದ ವೃಷ್ಣವಿಕ್ರಯ ನಾಲ್ಕು ಭಾಗದಲ್ಲಿ, ಎರಡು ಭಾಗವನ್ನು ವಂಗಿಪುರದ ಕೊಂಡಪಿಳ್ಳೆಯ ಮಗ ವಾಮಂಣನಿಗೆ ದಾನವಾಗಿ ನೀಡಿರುವುದು ಹೆಡತಲೆಯ ಶಾಸನದಿಂದ ತಿಳಿದು ಬರುತ್ತದೆ. *೨೧

ಹೆಚ್ಚಿನ ವಿವರಗಳನ್ನೇನೂ ತಿಳಿಸದ ನಾಗಮಂಗಲದ ಶಾಸನವು*೨೨ ಪೆರುಮಾಳಿದೇವನು ಕಾಳೆಗರಾವನಹಳ್ಳಿಯನ್ನು ಕೊಡುಗೆಯಾಗಿ ನೀಡಿದ್ದನ್ನು ತಿಳಿಸಿದೆ. ನರಸಮಂಗಲದ ಜನಾರ್ಧನ ಪೆರುಮಾಳ್ ದೇವರ ನೈವೇದ್ಯಕ್ಕಾಗಿ ರಾಮಸಮುದ್ರದ ಕೆಳಗಿನ ನಾಲ್ಕು ಸಲಗೆ ಭೂಮಿ ಮತ್ತು ಜಗತಪಾಟಿ ಗ್ರಾಮದಲ್ಲಿ ೧೦೦ ಮಣ್ಣನ್ನು ನೀಡಿರುವುದಾಗಿ ಇಲ್ಲಿನ ಶಾಸನವು ದಾಖಲಿಸಿದೆ. *೨೩

ಶಾಸನದ ಕಾಲವನ್ನು ಉಲ್ಲೇಖಿಸದ ಹುಲ್ಲಹಳ್ಳಿಯ ಶಾಸನವು ಬಹು ಮುಖ್ಯವಾದ ವಿಷಯವನ್ನು ಅರುಹುತ್ತದೆ. *೨೪ ಮಹಾ ಪ್ರಧಾನ ಪೆರುಮಾಳ ದೇವರಸನು ಮಾಚಿರಾಜ ಮತ್ತು ಮಾಚಲಾಂಬಿಕೆಯರ ಪುತ್ರನಾದ ಪೆರ್ಮಿದೇವರಸನ ಜೊತೆಗೂಡಿ ತ್ರಿನಪುರ ಎಂದು ಪ್ರತಿನಾಮವಿದ್ದ ಹುಲ್ಲನಹಳ್ಳಿಯಲ್ಲಿ ರಾಜ್ಯ ವಾಳುತ್ತಿದ್ದಾಗ, ಈ ಇಬ್ಬರೂ ತಮ್ಮ ಇಹಪರ ಲೋಕ ಸಾಫಲ್ಯಕ್ಕಾಗಿ ತ್ರಿಜಗನ್ಮಂಗಲವೆಂಬ ಚೈತ್ಯಾಲಯವನ್ನು ಮಾಡಿಸಿ ಅಲ್ಲಿ ಚಿಂತಾಮಣಿಯಲ್ಲಿನ ಪ್ರತಿರೂಪವಾದ ಮಾಣಿಕ್ಯದೇವರ ಪ್ರತಿಷ್ಠೆಯನ್ನು ಮಾಡಿ, ಹುಲ್ಲನಹಳ್ಳಿಯಲ್ಲಿದ್ದ ಪುರಾತನವಾದ ಪರಮೇಶ್ವರ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿಸಿ ಎರಡೂ ಚೈತ್ಯಾಲಯಗಳಿಗೆ ಅಮೃತಪಡಿಗಾಗಿ ಭೂಮಿ, ತೋಟ ಮುಂತಾದವುಗಳನ್ನು ದಾನ ನೀಡಿದ ಬಗ್ಗೆ ತಿಳಿಸಿ "ಪೆರುಮಾಳಿ **ದೇವರಸನು ಖರ, ಚೈತ್ರ, ಶುದ್ಧ ನವಮಿ, ಶಕ ೧೨೭೪ರಲ್ಲಿ (ಕ್ರಿ.ಶ. ೧೩೫೧ ಮಾರ್ಚ್ ೭, ಸೋಮವಾರ) ತನ್ನ ಕೊನೆಯುಸಿರೆಳೆದನು"** ಎಂದು ಪೆರುಮಾಳಿದೇವನು ದೈವಾಧೀನನಾದುದನ್ನು ದಾಖಲಿಸಿದೆ.

ಈ ಪೆರುಮಾಳಿದೇವ ದಂಡನಾಯಕನ ಆಡಳಿತಾವಧಿಯ ಬಗ್ಗೆ ಒಂದು ಸಂಶಯ ಉದ್ಭವವಾಗುತ್ತದೆ. ಕ್ರಿ.ಶ. ೧೨೪೭ರ ಚಾಮರಾಜನಗರ ೧೨೪೮ರ ಶಾಸನದಲ್ಲಿ ಈ ಪೆರುಮಾಳಿ ದೇವದಂಡ ನಾಯಕನ ಹೆಸರು ಉಕ್ತವಾಗಿದೆ. ಈ ಶಾಸನವು ಸೋಮೇಶ್ವರನ ಕಾಲಕ್ಕೆ ಸೇರಿದುದಾಗಿದೆ. ಈ ಶಾಸನದ ಹಿನ್ನೆಲೆಯಲ್ಲಿ, ಎ.ಕ. ೪ರ ಪೀಠಿಕೆಯಲ್ಲಿ *"ಸೋಮೇಶ್ವರನ ಮಗ ಮುಮ್ಮಡಿ ನರಸಿಂಹನ ಆಡಳಿತಾವಧಿಯಲ್ಲಿ ಈ ಹೆಸರಿನ ಪ್ರಖ್ಯಾತ ಸೇನಾಪತಿ ಇದ್ದು ಆತನೇ ಮುಮ್ಮಡಿ ಬಲ್ಲಾಳನ ಕಾಲದಲ್ಲೂ ಅಧಿಕಾರವನ್ನು ಮುಂದುವರಸಿದನೆಂಬುದು ಗೊತ್ತಿರುವ ವಿಷಯ. ಪ್ರಕೃತ ಶಾಸನದಲ್ಲಿ ಉಕ್ತನಾಗಿರುವ ಸೇನಾಪತಿಯು ಆತನೇ ಎಂದು ಗುರುತಿಸಿದರೆ. ಈ ಪೆರುಮಾಳದೇವನು ಸೋಮೇಶ್ವರನ ಕಾಲದಲ್ಲಿ ಬಹಳ ಚಿಕ್ಕವನಾಗಿದ್ದಾಗಲೇ ಅಧಿಕಾರ ವಹಿಸಿಕೊಂಡಿರಬಹುದೆಂದು ಊಹಿಸಿ ೫೦ ವರ್ಷಕ್ಕೂ ಹೆಚ್ಚುಕಾಲ ಅಧಿಕಾರದಲ್ಲಿದ್ದು ಮುಮ್ಮಡಿ ಬಲ್ಲಾಳನ ಆಳ್ವಿಕೆಯ ಪೂರ್ವಾರ್ಧದವರಗೆ ಜೀವಿಸಿದ್ದನೆಂದು ಹೇಳಬಹುದು,"* ಎಂದು ವ್ಯಕ್ತವಾಗಿದ.

ಆದರೆ ಕ್ರಿ.ಶ. ೧೨೧೬ರ ಹಾಸನ ತಾಲ್ಲೂಕಿನ ದೊಡ್ಡಗದ್ದವಳ್ಳಿ ಶಾಸನದ ರೀತ್ಯಾ, ಈ ದಂಡನಾಯಕನು ಗದ್ದುಂಬಳ್ಳಿಯ ಆಚಾರ್ಯ ಮತ್ತು ಅವನ ಮಕ್ಕಳಿಂದ ೧೨೦೦ ಅಡಿಕೆ ಮರಗಳನ್ನು ಕೊಂಡು ಅಲ್ಲಿ ತೋಟದ ಕೆಲಸ ಮಾಡುವವರಿಗೆ, ಅವರ ಮಕ್ಕಳು ಹಾಗೂ ಮೊಮ್ಮಕ್ಕಳ ಕಾಲದವರೆಗೂ ಅನುಭವಿಸುವಂತೆ ದಾನ ನೀಡಿದ್ದಾನೆ.

*ಅಲ್ಲದೆ ಕ್ರಿ.ಶ. ೧೨೧೬ರ ದೊಡ್ಡಗದ್ದವಳ್ಳಿ ಶಾಸನ, ಕ್ರಿ.ಶ. ೧೩೫೧ರ ಹುಲ್ಲಹಳ್ಳಿ ಶಾಸನಗಳಲ್ಲಿ ಆಡಳಿತ ಅಧಿಕಾರ ಸೂಚಿತವಾಗಿ ಉಕ್ತನಾದ ಈ ದಂಡನಾಯಕನ ಆಡಳಿತ ಹಾಗು ಜೀವಿತಾವಧಿ ಸುಮಾರು ೧೩೫ ವರ್ಷಗಳ ಪರ್ಯಂತ ಕಾಣುವಲ್ಲಿ ಅನುಮಾನಕ್ಕೆಡೆಯಾಗುತ್ತದೆ. ಅಂತಾಗಿ ಶಾಸನೋಕ್ತ ಕಾಲಗಳು ತಪ್ಪಿರಬಹುದು ಅಥವಾ ತಪ್ಪಾಗಿ ಓದಲ್ಪಟ್ಟಿರಬಹುದು.*

ಒಟ್ಟಿನಲ್ಲಿ, ಈತನು ತನ್ನ ಆಡಳಿತಾವಧಿಯಲ್ಲಿ, ಧಾರ್ಮಿಕ, ಸಾಂಸ್ಕೃತಿಕ ಕಾರ್ಯಗಳನ್ನು ಹೆಚ್ಚಿನ ರೀತಿಯಲ್ಲಿ ಕೈಗೊಂಡು, ದೈವಭಕ್ತನೂ, ಜನಾನುರಾಗಿಯೂ ಆಗಿ ಅರಸನಿಗೆ ಆಪ್ತನೂ ಆಗಿದ್ದನೆಂದು ಹೇಳಬಹುದು. ದಂಡನಾಯಕನ ಮಕ್ಕಳಾದ ಲಕ್ಷ್ಮೀನಾರಾಯಣ ಮತ್ತು ಮಾಧವ ಕೂಡ ದಂಡನಾಯಕರ ಪದವಿಗಳಲ್ಲಿದ್ದು, ಇವರುಗಳೂ ಸಹ ತಮ್ಮ ತಂದೆಯಂತೆಯೇ ತಮ್ಮ ಅಧಿಕಾರದ ಅವಧಿಯಲ್ಲಿ ಅನೇಕ ಧಾರ್ಮಿಕ ಕಾರ್ಯಗಳನ್ನು ಮಾಡಿದ್ದಾರೆ. ಲಕ್ಷ್ಮೀನಾರಾಯಣನಿಗೆ ಸೇರಿದ ಒಂದು ಶಾಸನ ಮಾತ್ರ ಇದ್ದು ನಾರಸಿಂಹನು ರಾಜ್ಯವಾಳುತ್ತಿದ್ದಾಗ ಮಹಾಪ್ರಧಾನ ಪೆರುಮಾಳು ದೇವ ದಂಣ್ನಾಯಕರ ಮಗ 'ಲಕ್ಶುಮಿ ನಾರಾಯಣ

ದೇವ ದಂಣ್ನಾಯಕ ರಾಮೇಶ್ವರ ದೇವರಿಗೆ ಸರ್ವಮಾನ್ಯ' ಎಂದು ದಾಖಲಿಸಿದೆ. *೨೫

ಕುಮಾರ ಮಾಧವ ದಂಣ್ನಾಯಕ ಮತ್ತು ಕೇಶವ ದಂಣ್ನಾಯಕ ಇಬ್ಬರೂ ಕುಮಾರನಾಡನ್ನು ಆಳುತ್ತಿದ್ದರು ಎಂಬುದನ್ನು ಕಳ್ಳಂಬಾಳುವಿನ ಶಾಸನವು ತಿಳಿಸುತ್ತದೆ. *೨೬ ತೆರಕಣಾಂಬಿಯಲ್ಲಿ ಮಾಧವ ದಂಡನಾಯಕನು, ವರದರಾಜ ಅಲ್ಲಾಳನಾಥ ದೇವರನ್ನು ಸುಪ್ರತಿಷ್ಠೆ ಮಾಡಿಸಿ, ಭೂಮಿಯನ್ನು ದತ್ತಿಯಾಗಿ ನೀಡಿದ್ದಾನೆ. ಈ ಸಂದರ್ಭದಲ್ಲಿ ಈತನ ಮಗ ಕೇತಯ ದಂಡನಾಯಕನು ಜೊತೆಯಾಗಿ ಇದ್ದನು ಎಂದು ಕೊತ್ತಲವಾಡಿಯ ಶಾಸನದಿಂದ *೨೭ ತಿಳಿದುಬರುತ್ತದೆ. ಕ್ರಿ.ಶ. ೧೩೧೦ರಲ್ಲಿ ಮಾಧವ ದಂಡನಾಯಕನು ತನ್ನ ತಂದೆಯ ಹೆಸರಿನಲ್ಲಿ 'ಪೆರುಮಾಳಿಪುರ' ವೆಂದು ಒಂದು ಗ್ರಾಮಕ್ಕೆ ಹೆಸರಿಸಿ ತೆರಕಣಾಂಬಿಯ ಪ್ರಮುಖ ವೈಷ್ಣವರಾದ ಗೋವಿಂದ ದಾಸ, ರಾಮದಾಸ ಮತ್ತು ಶ್ರೀರಂಗದಾಸ ಮುಂತಾದವರಿಗೆ ಸರ್ವನಮಸ್ಯದಗ್ರಹಾರವಾಗಿ ದಾನ ನೀಡಿದ್ದಾನೆ ಎಂದು ತ್ರಿಯಂಬಕಪುರ ಶಾಸನದಲ್ಲಿ ಉಕ್ತವಿದೆ. *೨೮ ಮೇಲು ಕೋಟೆಯ ಶಾಸನವು*೨೯ ೧೧೧೫ ಖಂಡುಗ ಗದ್ದೆಯನ್ನು ಧರ್ಮವಾಗಿ ನೀಡಿದ್ದಾನೆ ಎಂದಿದೆ. ಕೇಶವನಾಥ ದೇವಾಲಯಕ್ಕೆ ಸೇರಿದ್ದ ಕಾಲುವೆಯ ಪಕ್ಕದಲ್ಲಿದ್ದ ಭೂಮಿಯನ್ನು ಎಡತಲೆಯ ಶ್ರೀ ವೈಷ್ಣವರಿಂದ ಖರೀದಿಸಿ ಅಲ್ಲಿದ್ದ ಮಣ್ಣಿನ ದಿಣ್ಣೆಯನ್ನು ತೆಗೆಸಿ ಗದ್ದೆಯನ್ನಾಗಿ ಪರಿವರ್ತಿಸಿ, ಪುನಃ ಅದೇ ಶ್ರೀವೈಷ್ಣವರಿಗೆ ಕೊಡುಗೆಯಾಗಿ ನೀಡಿ ಆ ದೇವರಿಗೆ ಪ್ರತಿದಿನ ಒಂದು ಬಳ್ಳ ಅಕ್ಕಿಯನ್ನು ನೀಡುವುದೆಂದು ಕಟ್ಟುಪಾಡು ವಿಧಿಸಿರುವುದು ಹೆಡತಲೆಯ ಶಾಸನದಲ್ಲಿದೆ. *೩೦ ಗುಂಡ್ಲುಪೇಟೆ ಶಾಸನ ರೀತ್ಯಾ ಗೋವರ್ಧನಗಿರಿಯಲ್ಲಿ ತಾನು ಪ್ರತಿಷ್ಠೆ ಮಾಡಿಸಿದ ಗೋಪಿನಾಥ ದೇವರ ಅಂಗಭೋಗ, ರಂಗಭೋಗ, ಸಮಸ್ತಪಡಿ ಮತ್ತು ತಿರುವಳಿಯಾಟಕ್ಕೆ ಇವುಗಳಿಗೆ ಕುಡುಗುನಾಡಿನ ಕಂಣ್ನಗಾಲವನ್ನು ದಾನ ನೀಡಿದ್ದಾನೆ. *೩೧ ಬಸವಾಪುರದ ಶಾಸನವು*೩೨ ಮಾಧವ ದಂಣ್ನಾಯಕನು 'ವಿದ್ಯಾನಿಧಿಪ್ರಸನ್ನಕೇಶವಪುರ' ಎಂಬ ಅಗ್ರಹಾರವನ್ನು ನಿರ್ಮಿಸಿದನೆಂದು ದಾಖಲಿಸಿದೆ.

ಅಲ್ಲಪ್ಪ ದಂಡನಾಯಕನ ಅರಸಿ ಚಾಮವ್ವೆ ದಂಣ್ನಾಯಕಿತಿ ತೆರಕಣಾಂಬಿಯಲ್ಲಿ ಪ್ರತಿಷ್ಠಾಪಿಸಿದ್ದ ಶ್ರೀ ಗೋಪಿನಾಥದೇವರ ಅಂಗಭೋಗ, ರಂಗಭೋಗ, ಸಮಸ್ತಪಡಿ ಇವುಗಳಿಗಾಗಿ ಅರಸನಿಂದ ತಾನು ಪಡೆದಿದ್ದ ಕೆಲ್ಲಿಗೆಜೆ ಹಳ್ಳಿಯನ್ನೂ ಮತ್ತು ಅದರೊಂದಿಗಿನ ಬೆಲಕುಪ್ಪೆ ಗ್ರಾಮವನ್ನೂ ದಾನ ನೀಡಿರುವ ಸಂಗತಿಯು ಕಿಲಗೆರೆಯ ಶಾಸನದಿಂದ ತಿಳಿದು ಬರುತ್ತದೆ. *೩೩ ಮೇಲುಕೋಟೆಯ ಶಾಸನವು*೩೪ ಎಂಬೆರುಮಾನ ಎಂಬ ವ್ಯಕ್ತಿ ಕಂಡು ಸೂಚಿಸಿದ ಭೂಮಿಯನ್ನು ತಿರುಮಣ್ಣಾ ಪೆರುಮಾಳ್ ದೇವರಿಗೆ ತಿರುಮಣ್ಣಾಗಿ ಧರ್ಮ ನೀಡಿದ್ದನ್ನು ದಾಖಲಿಸಿದೆ.

ಪಾಂಡಪುರ ಶಾಸನದ ರೀತ್ಯಾ ಮಾಧವ ಮತ್ತು ಈತನ ಮಗ ಕೇತಯ ದಂಡನಾಯಕ ಇಬ್ಬರೂ ಕೂಡಿ ಎಲೆಯ ಕಿರಿಯ ಕುಲವನಹಳ್ಳದ ೧೦ ಕೊಳಗ ಬೆಳೆಯುವ ಗದ್ದೆಯನ್ನು ಶ್ರೀ ಲಕ್ಷ್ಮಣದಾಸ ಎಂಬುವನಿಗೆ ದಾನವಾಗಿ ನೀಡಿ, ವರ್ಷಂಪ್ರತಿ ೧೫ಗುಳ ಎಲೆಯತ್ತಿಯನು (ಎಲಕ್ಕಿ?) ಮೇಲುಕೋಟೆಯ ತಿರುನಾರಾಯಣ ಪೆರುಮಾಳ್ ದೇವರಿಗೆ ನೀಡುವಂತೆ ಕಟ್ಟುಪಾಡನ್ನು ವಿಧಿಸಿದ್ದಾರೆ. *೩೫ ಮಾದಪ್ಪ ದಂಣ್ನಾಯಕನು ಬಲ್ಲಾಳನಿಂದ ತಾನು ಪಡೆದಿದ್ದ ಕಲದಗೆರೆ, ಗುಳಿಯಕೆರೆ, ದೊಡ್ಡಿಗಟ್ಟ, ಗವುಡಿಗೆರೆ, ಹೊಸಹಳ್ಳಿ ಮತ್ತು ಹೊನ್ನೆಯನಹಳ್ಳಿ ಹಾಗೂ ಹೊಲಕುಪ್ಪೆಯ ½ ಭಾಗವನ್ನು, ಕಿತ್ತಪ್ಪ ದಣ್ಣಾಯಕರ ಹೆಸರಿನಲ್ಲಿ ನಡೆಸುವ ಧರ್ಮಕ್ಕಾಗಿ ತಿರುನಾರಾಯಣ ಪೆರುಮಾಳ್ ಮತ್ತು ಕದಲ ಗೆರೆಯ ಲಕ್ಷ್ಮಿನಾರಾಯಣ ದೇವರುಗಳಿಗೆ ದಾನ ನೀಡಿದ್ದಾನೆ ಎಂದು ಕದಲಗೆರೆಯ ಶಾಸನ ತಿಳಿಸುತ್ತದೆ. *೩೬

ಮಾಧವನ ಪುತ್ರನಾದ ಭರತಜೀಯನು ತೆರಕಣಾಂಬಿಯಿಂದ ಹದಿನಾಲ್ಕು ನಾಡನ್ನು ಪ್ರತಿಪಾಲಿಸುತ್ತಿದ್ದಾಗ, ಕೇತಯ ದಂಡನಾಯಕನು ಗೊಮ್ಮಟಹಳ್ಳಿ, ಕಾಚಗವುಡನ ಮಾದೆಯ ಹಳ್ಳಿಗಳನ್ನು ತನ್ನ ಅರಮನೆಯಲ್ಲಿದ್ದ ಶ್ರೀಕರಣದ ರಾಘವದೇವನ ಮಗ ನಾರಣದೇವಣ್ಣನಿಗೆ ಅವನ ತಂದೆಯಾದ ರಾಘವದೇವನ ಹೆಸರಿನಲ್ಲಿ ಗೊಮ್ಮಟಹಳ್ಳಿಯನ್ನು 'ರಾಘವಾಪುರ' ಎಂಬ ಅಗ್ರಹಾರವನ್ನಾಗಿ ಪುನರ್ ನಾಮಕರಣ ಮಾಡಿ ನಾನಾಗೋತ್ರದ ಬ್ರಾಹ್ಮಣರಿಗೆ ೩೦ ವೃತ್ತಿಗಳನ್ನಾಗಿ ಮಾಡುವಂತೆ ದಾನ ನೀಡಿದ್ದಾನೆ. *೩೭

ಕೇತಯ ದಂಡನಾಯಕನು, ಬಲ್ಲಾಳನಿಂದ ಬಳುವಳಿಯಾಗಿ ಪಡೆದಿದ್ದ ಹಾಬುಗುತ್ತಿಗೆಯ ಹುಲ್ಲನಹಳ್ಳಿ ನಾಡಿನೊಳಗೆ ಸೇರಿದ್ದ ಕೇತಮ್ಮನಹಳ್ಳಿಯನ್ನು, ಹುಲ್ಲನಹಳ್ಳಿಯಲ್ಲಿದ್ದ ಅಲ್ಲಾಳನಾಥ ದೇವರ ಅಂಗಭೋಗ, ರಂಗಭೋಗ ಮುಂತಾದ ಸೇವೆಗಳಿಗಾಗಿ ಸರ್ವಬಾಧೆಯನ್ನೂ ಪರಿಹರಿಸಿ ಬಳಿ ಸಹಿತವಾಗಿ ದಾನ ನೀಡಿದ್ದಾನೆ. *೩೮

ಪೆರುಮಾಳಿದೇವ ದಂಡನಾಯಕನಿಗೆ, ಮಾಧವ, ಲಕ್ಷ್ಮಿ ನಾರಾಯಣ ಎಂಬ ಇಬ್ಬರು ಪುತ್ರರಿದ್ದರು ಎಂಬುದು ಶಾಸನಸ್ಥ ವಿಷಯ. ಆದರೆ ಕಾಲದ ಉಲ್ಲೇಖವಿಲ್ಲದ ನಂಜನಗೂಡಿನ ಹೆಡತಲೆ (ಸಂಖ್ಯೆ ೩೪೬) ಶಾಸನವು ತಮಿಳು ಭಾಷೆಯದಾಗಿದ್ದು, ''ಕೊಲಗಣದ ಮಹಾಪ್ರಭು ಶ್ರೀ ಪೆರುಮಾಳ ದೇವನ ಮಕ್ಕಳಾದ ಅಲ್ಲಾಳದೇವ, ವಿಮ್ಮಯ್ಯ, ನಾರಾಯಣ ಮತ್ತು ಗೌಡಯ್ಯ ಅವರುಗಳು ಕಾಟ್ಟುಪುರದಲ್ಲಿರುವ ಶ್ರೀ ಅಲ್ಲಾಳ ಪೆರುಮಾಳ್ ದೇವರಿಗೆ ೫ ಕುಟಿ ಅಕ್ಕಿ ಬೆಳೆಯುವ ಭೂಮಿಯನ್ನು ದಾನ ನೀಡಿದ್ದಾರೆ'' ಎಂದು ದಾಖಲಿಸಿದೆ.

ಹಾಗಾದಲ್ಲಿ, ಈ ಪೆರುಮಾಳಿದೇವ ಯಾರು? ಒಂದು ವೇಳೆ ವಿಷ್ಣುದೇವ ಮತ್ತು ಮಂಚಲೆಯರ ಪುತ್ರ ಪೆರುಮಾಳಿದೇವನೇ ಆಗಿದ್ದಲ್ಲಿ ಈತನ ವಂಶವೃಕ್ಷಕ್ಕೆ ಮತ್ತೂ ಮೂರು ಜನ ಮಕ್ಕಳು ಸೇರುತ್ತಾರೆ. ಆದರೆ ಈ ನಂಜನಗೂಡಿನ ಶಾಸನಸ್ಥ ಪೆರುಮಾಳಿ ದೇವನನ್ನು ಗುರುತಿಸಲು ಸದ್ಯ ಹೆಚ್ಚಿನ ದಾಖಲೆಗಳ ಕೊರತೆ ಕಂಡುಬರುವುದರಿಂದ. ಸದ್ಯ ಈ ಪ್ರಬಂಧದಲ್ಲಿ ಸೂಚಿಸಿರುವಷ್ಟೇ ವಂಶಾವಳಿಯನ್ನೇ ಉಳಿಸಿಕೊಳ್ಳಲಾಗಿದೆ.

*(ಮತ್ತೆ ಬೆಳ್ಳೂರು – ನಾಗಮಂಗಲ ಶಾಸನಗಳಲ್ಲಿ ಪೆರುಮಾಳೆ ದಂಡನಾಯಕನು ಅಲ್ಲಾಳಸಮುದ್ರವನ್ನು ಕಟ್ಟಿಸಿದ್ದುದು – ಹಾನುಗಲ್ಲು ಶಾಸನ ರೀತ್ಯಾ 'ಪೆರುಮಾಳಸಮುದ್ರ' ವೆಂಬ ಕೆರೆ ಕಟ್ಟಿರುವುದನ್ನು ಗಮನಿಸಿ – ಅಲ್ಲಾಳನಾಥ ದೇಗುಲಕ್ಕೆ ದಾನ ನೀಡಿರುವುದು, ಇತ್ಯಾದಿಗಳು ಅವನು ಅಲ್ಲಾಳಪೆರುಮಾಳ ದೇವರ ಭಕ್ತನಾಗಿದ್ದು ಹಾಗೂ ಬಹುಶಃ ತನ್ನ ಮಗನೊಬ್ಬನಿಗೆ. ಅಲ್ಲಾಳ ದೇವ ಎಂಬ ಹೆಸರಿಟ್ಟಿರಬಹುದೇ? ಎಂಬ ಸೂಚನೆಯನ್ನು ಒದಗಿಸುವಂತಿವೆ. 'ನಾರಾಯಣ' ಎಂಬ ಹೆಸರು ಬಹುಶಃ 'ಲಕ್ಷ್ಮೀನಾರಾಯಣ' ಎಂಬ ಹೆಸರಿನ ಸಂಕ್ಷಿಪ್ತರೂಪ ವಿರಬಹುದು. ಹೀಗಿಲ್ಲವಾದರೆ, 'ವಿಮಯ್ಯ, ಗೌಡಯ್ಯ' ಎಂಬ ಹೆಸರುಗಳ ಹಿನ್ನೆಲೆಯಲ್ಲಿ ಅವರು, ಮನೆಮಕ್ಕಳಿದ್ದಿರಬಹುದೇ ಅಥವಾ ಈ ನಾಲ್ವರೂ ಕುಮಾರವೃತ್ತಿಯವರೇ ಎಂಬ ಅನುಮಾನವೂ ಒದಗುತ್ತದೆ. ಹಾಗಿದ್ದರೆ ನಂಜನಗೂಡಿನ ಶಾಸನದ ಸಂಗತಿಗಳೊಡನೆ ಪೆರುಮಾಳೆದಂಡನಾಯಕನ ಸಂಬಂಧಗಳು ಕೂಡಬಹುದೇ ಎಂಬುದನ್ನೂ ಪರಿಶೀಲಿಸಬಹುದು. – ಸಂ).*

ಈ ಎಲ್ಲಾ ಶಾಸನಗಳಲ್ಲಿನ ದಾಖಲಾತಿಗಳ ಹಿನ್ನೆಲೆಯಲ್ಲಿ ಗಮನಿಸಿದಾಗ, ಮೊಡಕುಲದ, ಆತ್ರೇಯಗೋತ್ರದ ಪೆರುಮಾಳ ದೇವನ ವಂಶದವರು ತಮ್ಮ ಅಧಿಕಾರಾವಧಿಯಲ್ಲಿ, ಅರಸರಿಗೆ ಪ್ರಿಯರಾಗಿದ್ದು, ಧಾರ್ಮಿಕ ಕಾರ್ಯಗಳನ್ನು ಹೆಚ್ಚಿನ ರೀತಿಯಲ್ಲಿ ನಡೆಸಿ, ಕೆಲವು ಸಾಂಸ್ಕೃತಿಕ ಹಾಗೂ ಶಿಕ್ಷಣ ವ್ಯವಸ್ಥೆಯ ಕಾರ್ಯಗಳನ್ನೂ ಮಾಡುವ ಮೂಲಕ ಜನಾನುರಾಗಿಗಳಾಗಿದ್ದರು ಎಂಬುದನ್ನು ಮನಗಾಣಬಹುದು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎಕ-೮(ಪರಿಷ್ಕೃತ) ಹೊಳೇನರಸೀಪುರ ೧, ಕ್ರಿ. ಶ. ೧೨೭೬
*೨. ಎಕ-೭(ಪರಿಷ್ಕೃತ) ನಾಗಮಂಗಲ ೭೪, ಕ್ರಿ. ಶ. ೧೨೭೧
*೩. ಎಕ-೪ (ಪರಿಷ್ಕೃತ) ಚಾಮರಾಜನಗರ ೧೦೮, ಕ್ರಿ. ಶ. ೧೨೮೫
*೪. ಅದೇ ೩೦೯, ಕ್ರಿ. ಶ. ೧೩೦೩
*೫. ಅದೇ (ಪರಿಷ್ಕೃತ) ೩೪೬, ಕ್ರಿ. ಶ. ೧೨೮೨
*೬. ಎಕ-೩ (ಪರಿಷ್ಕೃತ), ಗುಂಡ್ಲುಪೇಟೆ ೪೦, ಕ್ರಿ. ಶ. ೧೩೨೦
*೭. ಎಕ-೪ ಚಾಮರಾಜನಗರ ೧೨೮, ಕ್ರಿ. ಶ. ೧೨೪೭
*೮. ಅದೇ – ಯಳಂದೂರು ೧೩೬, ಕ್ರಿ. ಶ. ೧೨೪೮
*೯. ಎಕ-೭ ನಾಗಮಂಗಲ ೮೨, ಕ್ರಿ. ಶ. ೧೨೬೯
*೧೦. ಅದೇ – ನಾಗಮಂಗಲ ೮೩
*೧೧. ಅದೇ- ನಾಗಮಂಗಲ ೭೪, ಬೆಳ್ಳೂರು
*೧೨. ಎಕ-೮ ಹೊಳೇನರಸೀಪುರ ೧, ಕ್ರಿ. ಶ. ೧೨೭೬
*೧೩. ಅದೇ – ಹೊಳೇನರಸೀಪುರ ೩೯, ಕ್ರಿ. ಶ. ೧೨೮೦
*೧೪. ಎಕ-೭ ಬೆಳ್ಳೂರು, ೭೪
*೧೫. ಅದೇ – ಕ್ರಿ. ಶ. ೧೨೮೪
*೧೬. ಎಕ-XI ಚಿತ್ರದುರ್ಗ ೭, ಕ್ರಿ. ಶ. ೧೨೮೫
*೧೭. ಅದೇ ೧೨, ಕ್ರಿ. ಶ. ೧೨೮೬
*೧೮. ಅದೇ- ಚಿತ್ರದುರ್ಗ ೩೨, ಕ್ರಿ.ಶ. ೧೨೮೬
*೧೯. ಎಕ-೫ ತಿ. ನರಸೀಪುರ ೨೩೮, ಕ್ರಿ. ಶ. ೧೨೯೦
*೨೦. ಅದೇ – ತಿ. ನರಸೀಪುರ ೭, ಕ್ರಿ. ಶ. ೧೨೯೦
*೨೧. ಎಕ-೩ ನಂಜನಗೂಡು ೩೪೦, ಕ್ರಿ. ಶ. ೧೨೯೨
*೨೨. ಎಕ-೭ ನಾಗಮಂಗಲ ೧೨೫ ಕಾಳಿಂಗನಹಳ್ಳಿ, ಕ್ರಿ. ಶ. ೧೩ನೇ ಶತಮಾನ
*೨೩. ಎಕ-೪ ಚಾಮರಾಜನಗರ ೨೯೬, ಕ್ರಿ. ಶ. ೧೩-೧೪ನೇ ಶತಮಾನ.
*೨೪. ಎಕ-೩ ನಂಜನಗೂಡು ೧೩೭
*೨೫. ಎಕ-೪ ಚಾಮರಾಜನಗರ ೧೦೮, ಆಲದೂರು, ಕ್ರಿ. ಶ. ೧೨೮೫
*೨೬. ಎಕ-೩ ಹೆಗ್ಗಡದೇವನಕೋಟೆ ೮೧, ಕ್ರಿ. ಶ. ೧೨೧೮
*೨೭. ಅದೇ – ಚಾಮರಾಜನಗರ ೩೦೯, ಕ್ರಿ. ಶ. ೧೩೦೩
*೨೮. ಎಕ-೩ ಗುಂಡ್ಲುಪೇಟೆ, ೧೫೨
*೨೯. ಎಕ-೬ ಪಾಂಡವಪುರ ೧೫೪, ಕ್ರಿ. ಶ. ೧೩೧೨
*೩೦. ಎಕ-೩ ನಂಜನಗೂಡು ೩೪೭, ಕ್ರಿ. ಶ. ೧೩೧೪
*೩೧. ಅದೇ – ಗುಂಡ್ಲುಪೇಟೆ ೨೨೩, ಕ್ರಿ. ಶ. ೧೩೧೫
*೩೨. ಎಕ-೪ ಚಾಮರಾಜನಗರ ೨೩೫, ಕ್ರಿ. ಶ. ೧೩೧೬
*೩೩. ಅದೇ – ಚಾಮರಾಜನಗರ ೩೦೬, ಕ್ರಿ. ಶ. ೧೩೧೮
*೩೪. ಎಕ-೬ ಪಾಂಡವಪುರ ೧೮೫, ಕ್ರಿ. ಶ. ೧೩೧೯
*೩೫. ಅದೇ – ಪಾಂಡವಪುರ, ೧೬೧ ಮೇಲುಕೋಟೆ, ಕ್ರಿ. ಶ. ೧೪ನೇ ಶತಮಾನ
*೩೬. ಅದೇ – ಪಾಂಡವಪುರ ೨೨೦, ಕದಲಗೆರೆ, ೧೪ನೇ ಶತಮಾನ
*೩೭. ಎಕ-೩ ಗುಂಡ್ಲುಪೇಟೆ ೪೦, ಕ್ರಿ. ಶ. ೧೩೨೦
*೩೮. ಅದೇ – ನಂಜನಗೂಡು ೧೩೮, ಕ್ರಿ. ಶ. ೧೩೩೨

ಡಾ॥ ಹೆಚ್.ಎಸ್. ಉಷಾರಾಣಿ *

# ಶಾಸನೋಕ್ತ ನವರತ್ನ ಸೇವೆ - ಒಂದು ಚಾರಿತ್ರಿಕ ಪರಿಶೀಲನೆ

ನವರತ್ನ ಎಂಬ ಪದವು ಸಾಮಾನ್ಯವಾಗಿ ಮುತ್ತುರತ್ನಗಳನ್ನು ಅಥವಾ ಆಸ್ಥಾನವನ್ನಲಂಕರಿಸುವ ವಿದ್ವಜ್ಜನರನ್ನು ಸೂಚಿಸುತ್ತದೆ. ಹಾಗೆಯೇ ನವರತ್ನಸೇವೆ ಎಂದಾಗ ಅಮೂಲ್ಯ ರತ್ನಗಳನ್ನರ್ಪಿಸಿ ಕೈಗೊಂಡಿರುವ ಸೇವೆಯನ್ನು ನೆನಪಿಗೆ ತರುತ್ತದೆ. ಆದರೆ ನವರತ್ನಸೇವೆ ರಚನಾತ್ಮಕ ಕಾರ್ಯಗಳಾಗಿದ್ದು ಅವುಗಳನ್ನು ಚಾರಿತ್ರಿಕವಾಗಿ ಪರಿಶೀಲಿಸುವ ಅಗತ್ಯವಿದೆ.

೧೭೯೯ರ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ತರುವಾಯ ಮೈಸೂರು ರಾಜ್ಯಕ್ಕೆ ಕರ್ನಲ್‌ಹ್ಯಾರಿ ಬ್ಯಾರಿಕ್ಲೋಸ್ ರೆಸಿಡೆಂಟಾಗಿ ನೇಮಕಗೊಂಡ. ಆಗ ಪಟ್ಟಾಭಿಷಿಕ್ತರಾದ ೫ ವರ್ಷ ವಯಸ್ಸಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಅಪ್ರಾಪ್ತವಯಸ್ಕರಾದುದರಿಂದ ೧೮೧೧ರವರೆಗೂ ದಿವಾನ್ ಪೂರ್ಣಯ್ಯನವರೇ ರಾಜಪ್ರತಿನಿಧಿಯಾಗಿಯೂ ಆಡಳಿತ ನಡೆಸಿದರು. ಸ್ವತಂತ್ರವಾಗಿ ಆಡಳಿತ ಸೂತ್ರ ಹಿಡಿದ ಮುಮ್ಮಡಿಯವರು ಕೇವಲ ಇಪ್ಪತ್ತು ವರ್ಷಗಳಲ್ಲಿ ತಮ್ಮ ಸಾಮರ್ಥ್ಯ ಹಾಗು ಪ್ರತಿಭೆ ಪ್ರದರ್ಶಿಸುವಂತಹ ಕಾರ್ಯಗಳನ್ನು ಕೈಗೊಂಡಿದ್ದರೆಂಬುದಕ್ಕೆ ನವರತ್ನ ಸೇವೆ ಸಾಕ್ಷಿ.

ಮೈಸೂರಿನ ಅರಮನೆ ಆವರಣದಲ್ಲಿರುವ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯದ ಪ್ರಕಟಿತ ಶಾಸನ *೧ ಈ ನವರತ್ನ ಸೇವೆಯ ಬಗ್ಗೆ ಮಾಹಿತಿ ನೀಡುತ್ತದೆ. ಈ ಶಾಸನದ ಪ್ರಕಾರ, ನವರತ್ನ ಸೇವೆಗಳಾವುವೆಂದರೆ ಭೂಷಾರತ್ನ, ದೇಶರತ್ನ, ಸೇವಾರತ್ನ, ದಾನರತ್ನ, ಪ್ರತಿಷ್ಠಾರತ್ನ, ಉಪಕಾರರತ್ನ, ಧರ್ಮರತ್ನ, ಕೀರ್ತಿರತ್ನ ಮತ್ತು ಸಾರಸ್ವತರತ್ನ. ಈ ನವರತ್ನಗಳನ್ನು ಶಾಸನದಲ್ಲಿ ಈ ರೀತಿ ನಿರೂಪಿಸಲಾಗಿದೆ: ನವರತ್ನಂಗಳೆಂಬ ಹೆಸರಿನಿಂದ ಒಂಭತ್ತು ಬಗೆಯಾಗಿ ಮಾಡಿದ ಸೇವೆಗಳಲ್ಲಿ ೧. *ಮೇಲುಕೋಟೆ ನಂಜನಗೂಡು ಚಾಮರಾಜನಗರ ಮಹಿಷೂರುಗಳಲ್ಲಿ ದೇವರಿಗೆ ಸಮರ್ಪಿಸಿದ ರತ್ನಮಯಂಗಳಾದ ಕೃಷ್ಣರಾಜಮುಡಿಗಳೆಂಬ ಭೂಷಾರತ್ನ ೨. ಚಾಮರಾಜನಗರ ಮೊದಲಾದ ನಗರಪುರ ಗ್ರಾಮಾದಿ ದೇಶರತ್ನ ೩. ಚಾಮರಾಜನಗರದ ಚಾಮರಾಜೇಶ್ವರ ದೇವಸ್ಥಾನ, ನಾರಾಯಣ ಸ್ವಾಮಿ ದೇವಸ್ಥಾನ, ಮಹಿಷೂರು ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನಗಳು ಮುಂತಾದ ಸೇವಾರತ್ನ ೪. ನಿಜನಾಮಾಂಕಿತದಿಂದ ರಚಿಸಿದ ಕೃಷ್ಣರಾಜೇಂದ್ರಪುರ ಅಗ್ರಹಾರ ಮೊದಲಾಗಿ ಗೃಹಸೋಬಸ್ಕರ ಗೃಹಸಹಿತಂಗಳಾದ ಅನೇಕ ಅಗ್ರಹಾರ ನಿರ್ಮಾಣ ಪೂರ್ವಕ ಗ್ರಾಮಭೂದಾನವೆಂಬ ದಾನರತ್ನ ೫. ಕುಲದೇವರಾದ ಬೆಟ್ಟದ ಶ್ರೀ ಚಾಮುಂಡೇಶ್ವರಿ ಗೋಪುರ ಇಷ್ಟದೇವರಾದ ನಂಜನಗೂಡು ಶ್ರೀಕಂಠೇಶ್ವರಸ್ವಾಮಿ ಗೋಪುರ ಚಾಮರಾಜನಗರ ಚಾಮುಂಡೇಶ್ವರಸ್ವಾಮಿ ಗೋಪುರ ಮಹಿಷೂರ ಲಕ್ಷ್ಮೀರಮಣ ಸ್ವಾಮಿ ಗೋಪುರಗಳು ಮುಂತಾದ ಪ್ರತಿಷ್ಠಾರತ್ನ ೬. ಕಾವೇರಿಯಾದಿಗಳೊಳ್ ಕೃಷ್ಣರಾಜಕಟ್ಟೆ ಪಶ್ಚಿಮವಾಹಿನಿಯಲ್ಲಿ ಕೃಷ್ಣರಾಜ ಸೋಪಾನ ಮುಂತಾದ ಉಪಕಾರರತ್ನ ೭. ಕಾಶಿ ಜಗನ್ನಾಥ ಶ್ರೀರಂಗ ಕಂಚಿ ತಿರುಪತಿ ಮೇಲುಕೋಟೆ ಮೊದಲಾದ ದಿವ್ಯ ಕ್ಷೇತ್ರಗಳಲ್ಲಿ ಮಾಡಿಶಿಯಿರುವ ಅನ್ನದಾನ ಸತ್ರಗಳೆಂಬ ಧರ್ಮರತ್ನ ೮. ಕೃಷ್ಣರಾಜ ವರಹ ಕೃಷ್ಣರಾಜಪಣ ಎಂಬ ಸುವರ್ಣ ರಜತ ನಾಣ್ಯಗಳೆಂಬ ಕೀರ್ತಿರತ್ನ ೯. ಶ್ರೀ ಭಾಗವತ ಅಧ್ಯಾತ್ಮರಾಮಾಯಣ ಮೊದಲಾದ ಪುರಾಣೇತಿಹಾಸಗಳಿಗೆ ಕರ್ನಾಟಕ ಭಾಷಾ ವ್ಯಾಖ್ಯಾನಗಳು ಸೌಗಂಧಿಕಾ ಪರಿಣಯಾದಿ ಕಾವ್ಯ ಪ್ರಬಂಧಗಳೆಂಬ ಸಾರಸ್ವತರತ್ನ.*

ಸೇವಾರತ್ನಕ್ಕೆ ಸಂಬಂಧಿಸಿದಂತೆ ಮತ್ತಷ್ಟು ವಿವರಗಳಲ್ಲಿವೆ. ಅದರಂತೆ ಪ್ರಸನ್ನ ಕೃಷ್ಣಸ್ವಾಮಿದೇವಾಲಯಕ್ಕೆ ಮಾಡಿಸಿಕೊಟ್ಟ ಸ್ವರ್ಣಕಲಶ, ವಿಮಾನ ಮಹಾದ್ವಾರ, ಪ್ರಾಕಾರ ಮಂಟಪ, ಶ್ರೀರಂಗನಾಥ, ವೆಂಕಟರಮಣಸ್ವಾಮಿ, ವರದರಾಜ, ಚೆಲುವ ರಾಜಸ್ವಾಮಿ ವಿಗ್ರಹಗಳು, ಲಕ್ಷ್ಮೀನರಸಿಂಹಸ್ವಾಮಿ, ರಾಮಾನುಜಾ ಚಾರ್ಯರ ವಿಗ್ರಹಗಳು, ಅವುಗಳ ಉತ್ಸವಮೂರ್ತಿಗಳನ್ನು ಪ್ರತಿಷ್ಠೆ ಮಾಡಿಸಲಾಯಿತು. ಕಂಚಿಯಿಂದ ತೆರಕಣಾಂಬಿಗೆ ತರಲಾಗಿದ್ದ ಪೆರಂದೇವಿ ಅಮ್ಮನವರ ವಿಗ್ರಹವನ್ನು ಈ ದೇವಾಲಯದಲ್ಲಿ

* ೮೩೩ 'ಇ' ಬ್ಲಾಕ್, ಜಯಪ್ರಕಾಶ್‌ನಗರ, ಮೈಸೂರು - ೫೭೦ ೦೦೮

ಪ್ರತಿಷ್ಠಾಪಿಸಲಾಯಿತು. ಅಲ್ಲದೆ ವರ್ಷಂಪ್ರತಿ ನಡೆಯುವ ಸಕಲ ಉತ್ಸವಗಳು ಹಾಗೂ ಧರ್ಮಕಾರ್ಯಕ್ಕಾಗಿ ೫೦೦೦ ಕಂಠೀರಾಯಿ ವರಹ ನಿಷ್ಕರ್ಷೆ ಮಾಡಿ ಎಲ್ಲಾ ಸೇವೆಗಳು ಆಚಂದ್ರಾರ್ಕವಾಗಿ ನಡೆಯಬೇಕೆಂದು ಪ್ರಾರ್ಥಿಸಿ ಅಥ್ಥವಣೆ ಸುಬೇದಾರನ ಹೆಸರಿಗೆ ನಿರೂಪಕಟ್ಟೆ ಮಾಡಿಸಿದರೆಂದೂ ಶಾಸನದಲ್ಲಿ ಹೇಳಲಾಗಿದೆ.

ಇನ್ನು ಈ ಶಾಸನ ಬರೆಸುವ ಸಂದರ್ಭದಲ್ಲಿ ಸಾರಸ್ವತರತ್ನ ದಡಿಯಲ್ಲಿ ಕೆಲವೇ ಕೃತಿಗಳು ಉಲ್ಲೇಖಿಸಲ್ಪಟ್ಟಿವೆಯಷ್ಟೆ. ೧೮೩೧ರಲ್ಲಿ ಆಡಳಿತವನ್ನು ಕಂಪೆನಿಯು ವಹಿಸಿಕೊಂಡ ಬಳಿಕ ಸಾಹಿತ್ಯರಚನೆಗೆ ಹೆಚ್ಚು ಮಹತ್ವ ನೀಡಿದ ಮುಮ್ಮಡಿಯವರು ೪೫ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ.

ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಂತಿದ್ದ ದೇವಾಲಯಗಳ ನಿರ್ಮಾಣ, ಕೃಷ್ಣರಾಜಕಟ್ಟೆ, ದೇಶದ ವಿವಿಧ ಭಾಗಗಳಲ್ಲಿ ಅನ್ನಸತ್ರಗಳ ನಿರ್ಮಾಣ ಹೊಸನಾಣ್ಯಗಳನ್ನು ಅಚ್ಚುಹಾಕಿಸಿದ್ದು, ಸ್ವತಃ ವಿದ್ವಾಂಸರಾಗಿದ್ದು ಸಾಹಿತ್ಯ ರಚನೆ ಮುಂತಾದವು ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಕಾರ್ಯದಕ್ಷತೆ ಸಾಮರ್ಥ್ಯ ಹಾಗೂ ಪ್ರತಿಭೆಯನ್ನು ವ್ಯಕ್ತಪಡಿಸುತ್ತದೆ. ಸಂದಿಗ್ಧ ಕಾಲದಲ್ಲಿ ಪಟ್ಟಕ್ಕೆ ಬಂದರೂ ನವರತ್ನಸೇವೆಯಿಂದಾಗಿ ಮೈಸೂರು ಅರಸರ ಆಡಳಿತವನ್ನು ಊರ್ಜಿತಗೊಳಿಸಿದರೆಂಬುದು ದೃಢಪಡುತ್ತದೆ. ಮಿಗಿಲಾಗಿ ಬ್ರಿಟಿಷರ ಅಸಹನೆಗೂ ಈ ನವರತ್ನಸೇವೆ ಎಡೆಮಾಡಿಕೊಟ್ಟಿತ್ತೆಂದರೆ ಅತಿಶಯೋಕ್ತಿಯಲ್ಲ. ಇಲ್ಲ ಸಲ್ಲದ ಆಪಾದನೆ ಹೊರಿಸಿ ೧೮೩೧ರಲ್ಲಿ ಕಂಪೆನಿಯು ಮೈಸೂರಿನ ಆಡಳಿತ ವಹಿಸಿಕೊಂಡಿತು. ಆದರೆ ಯಾವ ಆಪಾದನೆಯೂ ಸ್ಥಿರಗೊಳ್ಳಲಿಲ್ಲ.*೨

*ದೇಶಿಯರ ಸಾಮರ್ಥ್ಯವನ್ನು ಅಲ್ಲಗಳೆಯುತ್ತಿದ್ದ ಬ್ರಿಟಿಷರ ಧೋರಣೆಗೆ ದಕ್ಷ ಆಡಳಿತಗಾರನೆನಿಸಿ ಘನವಿದ್ವಾಂಸರೂ ಆಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ ನವರತ್ನಸೇವೆಯೇ ಜ್ವಲಂತ ನಿದರ್ಶನ. ಇದರಿಂದ ಆಂಗ್ಲರ ಕಣ್ಣುರಿ ಬೆಳೆದು ನವರತ್ನ ಸೇವೆಯೇ ಕೃಷ್ಣರಾಜ ಒಡೆಯರ್‌ಗೆ ಮಾರಕವಾಗಿ ಪರಿಣಮಿಸಿತು. ಇದನ್ನು ಆಂಗ್ಲರು ತಮ್ಮ ಆಕ್ರಮಣಕ್ಕೆ ನೆಪಮಾಡಿಕೊಂಡರು.* ಇದರಿಂದ ನವರತ್ನ ಸೇವೆಯಲ್ಲಿ ಆಯುಧಗಳ ಸಂಗ್ರಹಕ್ಕೆ ಆದ್ಯತೆ ನೀಡಿದ್ದರೆ? ಎಂಬ ಪ್ರಶ್ನೆ ಮುಂದಾಗುತ್ತದೆ. ಈ ದಿಸೆಯಲ್ಲಿ ಗಂಭೀರವಾಗಿ ಅಧ್ಯಯನ ಮಾಡಲು ಅವಕಾಶವಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಎಪಿಗ್ರಾಫಿಯಾ **ಕರ್ನಾಟಕ**, ಸಂಪುಟ ೫, ಮೈಸೂರು, ಶಾಸನ ಸಂಖ್ಯೆ ೩೭, ಕ್ರಿ.ಶ. ೧೮೨೯

*೨. ಡಾ || ಬಾ.ರಾ. ಗೋಪಾಲ: **ಕರ್ನಾಟಕದ ಇತಿಹಾಸ;** ಪುಟ. ೩೫೨

ಹನುಮನಾಯಕ *

# ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ: ಕಳಿಕಟ್ಟೆ, ಒಂದು ವಿಶ್ಲೇಷಣೆ

ಕರ್ನಾಟಕವನ್ನು ಆಳಿದ ಪ್ರಮುಖ ರಾಜವಂಶಿಕರಾದ ಹೊಯ್ಸಳರು ಇಂದಿನ ಕರ್ನಾಟಕದ, ದಕ್ಷಿಣದ ಬಹುಭಾಗವನ್ನು ಕ್ರಿ.ಶ. ೧೧ನೇ ಶತಮಾನದಿಂದ ೧೪ರ ಮೊದಲರ್ಧ ಭಾಗದವರೆಗೆ ಆಳಿದರು. ಅವರ ಈ ದೀರ್ಘ ರಾಜಕೀಯ ಆಳ್ವಿಕೆಯ ಯಶಸ್ಸಿಗೆ ಒಂದು ಪ್ರಮುಖ ಕಾರಣವೆಂದರೆ, ಅವರು ನಗರೀಕರಣಕ್ಕೆ ಕೊಟ್ಟ ಪ್ರಾಶಸ್ತ್ಯ.

ನಗರೀಕರಣವೆಂದರೆ ಹಳ್ಳಿಯು ಪಟ್ಟಣವಾಗಿ ಮಾರ್ಪಡುವುದು ಮತ್ತು ಕೃಷಿ ಆರ್ಥಿಕತೆಯಿಂದ ಕೃಷಿಯೇತರ ಆರ್ಥಿಕತೆಗೆ ಮಾರ್ಪಾಟಾಗುವಿಕೆಯೆಂದು ಸೂಕ್ಷ್ಮವಾಗಿ ಹೇಳಬಹುದು.

ನಗರೀಕರಣದ ಇತಿಹಾಸ ಗಮನಿಸಿದರೆ ಮೊದಲನೆ ನಗರೀಕರಣವು ಕ್ರಿ.ಪೂ.೨೫೦೦ರಿಂದ ಕ್ರಿ.ಪೂ. ೧೦೦೦ದ ಅವಧಿಯಲ್ಲಿ ಸಿಂಧೂ ಕೊಳ್ಳದ ಮುಖಜ ಭೂಮಿಯಲ್ಲಿ ಕಾಣಿಸಿಕೊಂಡರೂ ದಕ್ಷಿಣ ಭಾರತದ ಮೇಲೆ ಯಾವುದೇ ರೀತಿಯ ಪರಿಣಾಮ ಬೀರಲಿಲ್ಲ. ಎರಡನೇ ನಗರೀಕರಣವು ಕ್ರಿ.ಪೂ. ೬೦೦ರಿಂದ ಕ್ರಿ.ಶ. ೩೦೦ರ ಅವಧಿಯಲ್ಲಿ ಗಂಗಾ ನದಿಯ ಬಯಲಿನಲ್ಲಿ ಕಾಣಿಸಿಕೊಂಡು, ದಕ್ಷಿಣ ಭಾರತದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಮೇಲೆ ತನ್ನ ಪ್ರಭಾವ ಬೀರಿತು. ದಕ್ಷಿಣ ಭಾರತದ ಮಟ್ಟಿಗೆ ಇದು ಮೊದಲನೆಯ ನಗರೀಕರಣವಾಗುತ್ತದೆ. ಮೂರನೆಯ ನಗರೀಕರಣವು ಕ್ರಿ.ಶ. ೧೦೦೦ದಿಂದೀಚೆಗೆ ಕಾಣಿಸಿಕೊಂಡು ದಕ್ಷಿಣ ಭಾರತಕ್ಕೆ ಎರಡನೆಯ ನಗರೀಕರಣವಾಗಿದೆ. ಈ ಅವಧಿಯಲ್ಲಿ ಕರ್ನಾಟಕವು ಸೇರಿದಂತೆ ಇಡೀ ದಕ್ಷಿಣ ಭಾರತವು ಒಂದು ಹೊಸ ಆಯಾಮವನ್ನು ಪಡೆಯಿತು. ಇದೊಂದು ಹಿನ್ನೆಲೆ.

ಇನ್ನು ನಗರೀಕರಣಕ್ಕೆ ಮೂಲ ಚೇತನ ನೀಡಿದ್ದು ವ್ಯಾಪಾರ. ವ್ಯಾಪಾರಕ್ಕೆ ಪ್ರೇರಣೆ ನೀಡಿದ್ದು ಕೃಷಿಯಲ್ಲಾದ ಕ್ರಾಂತಿ. ಕೃಷಿಗೆ ನೀರೊದಗಿಸುವ ತಂತ್ರಜ್ಞಾನದಿಂದಾಗಿ ಮತ್ತು ಕೃಷಿಗೆ ಬೇಕಾದ ಕಬ್ಬಿಣದ ಸಲಕರಣೆಗಳು ದೊರೆಯುತ್ತಿದ್ದುದರ ಪರಿಣಾಮವಾಗಿ ಅಧಿಕ ಪ್ರಮಾಣದ ಭೂಮಿ ಕೃಷಿಗೊಳಪಟ್ಟಿತು. ಇದರಿಂದಾಗಿ ಕೃಷಿಕ್ಷೇತ್ರದಲ್ಲಿ ಅಧಿಕ ಉತ್ಪಾದನೆ ಉಂಟಾಗಲಾರಂಭಿಸಿತು. ಇದರ ಜೊತೆಗೆ ಇದೇ ಸಮಯದಲ್ಲಿ ಸಮಾಜದಲ್ಲಿ ಒಂದು ಹೊಸ ಪ್ರತಿಷ್ಠಿತ ವರ್ಗ ಹುಟ್ಟಿ ಅದರ ದೈನಂದಿನ ಬೇಡಿಕೆಗಳು ದಿನೇ ದಿನೇ ಹೆಚ್ಚಾಗತೊಡಗಿದವು. ಅದರ ಬೇಡಿಕೆಗಳನ್ನು ಪೂರೈಸಲು ಇನ್ನೊಂದು ವರ್ಗ ಹುಟ್ಟಿಕೊಂಡಿತು. ಅದೇ ವ್ಯಾಪಾರಿಗಳ ವರ್ಗ ಅಥವಾ ಸಂಘಗಳು. ವ್ಯಾಪಾರಿಗಳು ಸ್ಥಳೀಯ ವ್ಯಾಪಾರ ಕೈಗೊಳ್ಳುವುದರ ಜೊತೆಗೆ ಅಕ್ಕಪಕ್ಕದ ರಾಜ್ಯಗಳೊಡನೆ, ನಂತರ ಪರದೇಶಿಯ ವ್ಯಾಪಾರಿಗಳ ಜೊತೆ ಸಂಪರ್ಕವನ್ನು ಬೆಳೆಸಿಕೊಂಡರು. ಇವೆರಡರ ಪರಿಣಾಮವಾಗಿ ಈ ಅವಧಿಯಲ್ಲಿ ಕೆಲವು ನಗರಗಳು ಅಸ್ತಿತ್ವಕ್ಕೆ ಬಂದವು. ಈ ನಗರಗಳು ಕೇವಲ ವ್ಯಾಪಾರದ ಕೇಂದ್ರವಾಗಿರದೆ, ಕೈಗಾರಿಕೆ, ಆಡಳಿತ ಮತ್ತು ಧಾರ್ಮಿಕ ಕೇಂದ್ರಗಳಾಗಿದ್ದವು.

ಈ ಹಿನ್ನೆಲೆಯಲ್ಲಿ ಇಂದು ಸಾಮಾನ್ಯ ಹಳ್ಳಿಯಾಗಿ ಉಳಿದಿರುವ ಕಳಿಕಟ್ಟೆಯು ಕ್ರಿ.ಶ. ೧೧-೧೪ನೇ ಶತಮಾನದಲ್ಲಿ ಯಾವ ರೀತಿ ಪಟ್ಟಣವಾಗಿ ಮಾರ್ಪಾಟಾಯಿತು ಎಂಬುದನ್ನಿಲ್ಲಿ ಗಮನಿಸಲಾಗಿದೆ. ಈ ಪ್ರಬಂಧವು **ಕಳಿಕಟ್ಟೆಯ ಶಾಸನಗಳು - ಒಂದು ಅಧ್ಯಯನ**, ಎಂಬ ನನ್ನ ಲೇಖನವನ್ನು ಆಧರಿಸಿದೆ. *೧ ಕಳಿಕಟ್ಟೆಯು ಪ್ರಸ್ತುತ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿ ಹೋಬಳಿ ಕೇಂದ್ರವಾಗಿರುವ ಕಣಕಟ್ಟೆ. ಶಾಸನಗಳು*೨ ಕ್ರಿ.ಶ. ೯-೧೫ನೇ ಶತಮಾನದವರೆಗೆ ಇದನ್ನು ಕಳಿಕಟ್ಟೆ ಅಥವಾ ಕಳಿಕಟ್ಟ ಎಂದು ಉಲ್ಲೇಖಿಸಿವೆ.

ಕಳಿಕಟ್ಟೆಯನ್ನು ಪ್ರಪ್ರಥಮ ಬಾರಿಗೆ ಕ್ರಿ.ಶ. ೮೯೦ರ ಅರಕೆರೆ ಶಾಸನವು*೩ ಉಲ್ಲೇಖಿಸಿದೆ. ಈ ವೀರಗಲ್ಲು ಶಾಸನದ ಪ್ರಕಾರ ಆಸಂಧಿನಾಡಿನ ಶ್ರೀಮುತ್ತರ, ನೊಳಂಬರೊಡನೆ ಯುದ್ಧದಲ್ಲಿ ಹೋರಾಡಿ ಕಳಿಕಟ್ಟೆಯಲ್ಲಿ ಸತ್ತಾಗ, ಅವನ ಸಂತತಿಯವರು ಗಂಗರಾಜ ಸತ್ಯವಾಕ್ಯ ರಾಚಮಲ್ಲ ಪೆರ್ಮಾಡಿಯಿಂದ ಕಳಿಕಟ್ಟೆ

---

* ಇತಿಹಾಸ ಉಪನ್ಯಾಸಕ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ - ೫೭೪ ೧೯೯

ಮತ್ತು ಅರಕೆರೆ ಗ್ರಾಮಗಳನ್ನು ಕಲ್ನಾಡಾಗಿ** ಪಡೆದರು. ಹೀಗೆ ಕಲ್ನಾಡಾಗಿ ಕೊಟ್ಟ ಕಳಿಕಟ್ಟೆಯು ಕ್ರಿ.ಶ. ೧೧೨೯-೩೦ರ ವೇಳೆಗೆ ಹೊಯ್ಸಳರ ಸಾಮಂತ ಸಿಂಗರಸನ ಆಳ್ವಿಕೆಗೆ ಒಳಪಟ್ಟಿತು. *೪ ಈ ಸಮಯಕ್ಕೆ ಕಳಿಕಟ್ಟೆಯು ಮಗರೆ ೩೦೦ರ ಪ್ರಥಮ ಮತ್ತು ಪ್ರಮುಖ ಗ್ರಾಮವಾಗಿತ್ತು. *೫ ಮಗರೆ-೩೦೦ರ ರಾಜ್ಯವನ್ನು ಇಂದಿನ ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕು ಪ್ರಾಂತ್ಯವೆಂದು ಗುರುತಿಸಲಾಗಿದೆ.

ಕ್ರಿ.ಶ. ೮೯೦ರಿಂದ ೧೧೨೯-೩೦ರ ಮಧ್ಯೆ ಕಳಿಕಟ್ಟೆಯನ್ನು ಯಾವ ಶಾಸನಗಳೂ ಉಲ್ಲೇಖಿಸಿಲ್ಲ. ಈ ಕಾರಣದಿಂದಾಗಿಯೇ ಏನೋ ಚಟ್ಟೋಪಾಧ್ಯಾಯರು ಕಳಿಕಟ್ಟೆ ಗ್ರಾಮವು ಮಗರೆ ೩೦೦ರ ಪ್ರಮುಖ ಗ್ರಾಮವಾಗಿ ಹೇಗೆ ಮಾರ್ಪಾಟಾಯಿತು ಎಂದು ನಮಗೆ ಗೊತ್ತಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಮಾರ್ಪಾಟಿಗೆ ಅವರು ಎರಡು ಪ್ರಬಲ ಕಾರಣಗಳನ್ನು ಕೊಟ್ಟಿದ್ದಾರೆ. ಅವುಗಳೆಂದರೆ ಒಂದನೆಯದು ಕೃಷಿಯ ವಿಸ್ತರಣೆ ಮತ್ತು ಎರಡನೆಯದು ಹೊರಗಿನ ರಾಜಕೀಯ ಅಧಿಕಾರ ಹೇರಿಕೆ. *೬ ಆದರೆ ಇವೆರಡು ಅಂಶಗಳಿಂದಾಗಿಯೇ ಒಂದು ಗ್ರಾಮವು ನಗರವಾಗಿ ಪರಿವರ್ತನೆಯಾಗಲು ಸಾಧ್ಯವಿಲ್ಲ. ಇವುಗಳ ಜೊತೆಗೆ ಇತರ ಅಂಶಗಳು ಸಹ ಕಾರ್ಯ ನಿರ್ವಹಿಸಿವೆ. ಕ್ರಿ.ಶ. ೮೯೦ರ ವೇಳೆಗಾಗಲೇ ಕಳಿಕಟ್ಟೆಯು ಒಂದು ಪ್ರಮುಖ ಕೃಷಿ ಕೇಂದ್ರವಾಗಿತ್ತು. ಯುದ್ಧದಲ್ಲಿ ಸತ್ತಂತ ಪ್ರಸ್ತುತ ವೀರನಿಗೆ ದಾನಮಾಡಿದ ಎರಡು ಗ್ರಾಮಗಳಾದ ಅರಕೆರೆ ಮತ್ತು ಕಳಿಕಟ್ಟೆ ಸ್ಥಳೋತ್ಪತ್ತಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಈ ಗ್ರಾಮಗಳು ೯ನೇ ಶತಮಾನದಲ್ಲಿಯೇ ನೀರಾವರಿ ಸೌಲಭ್ಯವನ್ನು, ಕೆರೆ ಮತ್ತು ಕಟ್ಟೆಗಳ ರೂಪದಲ್ಲಿ ಪಡೆದದ್ದರಿಂದ ಸಾಕಷ್ಟು ಪ್ರಮಾಣದ ಉತ್ಪತ್ತಿ ಮತ್ತು ಆದಾಯವನ್ನು ಹೊಂದಿದ್ದಂತೆ ಕಾಣಬರುತ್ತದೆ. ಕಳಿಕಟ್ಟೆಯ ಮಾರ್ಪಾಟಿಗೆ ಮತ್ತೊಂದು ಕಾರಣವೇನೆಂದರೆ ೯ನೇ ಶತಮಾನದಲ್ಲಿ ಇದು ಆಸಂಧಿನಾಡಿ ನವನರಿಗೆ ವರ್ಗಾವಣೆಯಾದ ಮೇಲೆ ಅವರು ಈ ಸ್ಥಳದಲ್ಲಿ ಅಭಿವೃದ್ಧಿ ಕಾರ್ಯಗಳನ್ನು - ಅಂದರೆ ಕೆರೆ, ಕಟ್ಟೆ ಮತ್ತು ಕಾಲುವೆಗಳನ್ನು ಮಾಡಿಸಿ ಕೃಷಿಯನ್ನು ಮತ್ತಷ್ಟು ವಿಸ್ತರಿಸಿರಬಹುದು. ಕ್ರಿ.ಶ. ೧೦೦೪ರಲ್ಲಿ *೭ ಚೋಳರು ಗಂಗರನ್ನು ತಲಕಾಡಿನಿಂದ ಓಡಿಸಿದಾಗ, ಗಂಗರು ಆಸಂಧಿಯಲ್ಲಿ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಕಳಿಕಟ್ಟೆಯು ಇವರ ಆಡಳಿತದ ಪ್ರಭಾವಕ್ಕೊಳ ಪಟ್ಟಿದ್ದರಿಂದ ಈ ಸ್ಥಳವು ಇವರ ಸಮಯದಲ್ಲೂ ಸಹ ಮುಂದುವರಿದಿರಬಹುದು. ಹೊಯ್ಸಳರು ಕಲ್ಯಾಣಿ ಚಾಲುಕ್ಯರ ಪ್ರಬಲ ಮಾಂಡಲೀಕರಾದ ಮೇಲೆ ಆಸಂಧಿಯ ಗಂಗರು ಅವರ ಪ್ರಭುತ್ವವನ್ನು ಒಪ್ಪಿಕೊಂಡು ಹೊಯ್ಸಳರ ಪತನದವರೆಗೂ ಅವರ ಆಪ್ತ ಒಡನಾಡಿಗಳಾಗಿದ್ದರು. ಇವೆಲ್ಲ ಅಂಶಗಳಿಂದಾಗಿ ಕ್ರಿ.ಶ. ೮೯೦ರಲ್ಲಿ ಕಲ್ನಾಡಾಗಿ ಕೊಟ್ಟ ಕಳಿಕಟ್ಟೆಯು ಕ್ರಿ.ಶ. ೧೧೨೯-೩೦ರ ವೇಳೆಗೆ ಮಗರೆ-೩೦೦ರ ಪ್ರಮುಖ ಗ್ರಾಮವಾಗಿ ಮಾರ್ಪಾಟಾಗಿರ ಬಹುದು.

ಕಳಿಕಟ್ಟೆಯು ಪ್ರಪ್ರಥಮ ಬಾರಿಗೆ ಹೊಯ್ಸಳರ ಸಾಮಂತ ಅರಸೀಕೆರೆಯ ಸಿಂಗರಸನ ಆಳ್ವಿಕೆಗೊಳಪಟ್ಟಾಗ ಅವನು ತನ್ನ ಹೆಸರಿನಲ್ಲಿ ಸಿಂಗೇಶ್ವರ ಎಂಬ ಶಿವಾಲಯವನ್ನು ಕಟ್ಟಿಸಿ ಅದರ ದೈನಂದಿನ ನೈವೇದ್ಯ, ಅಂಗಭೋಗ, ರಂಗಭೋಗ ಮತ್ತು ತಪೋಧನರ ಆಹಾರ ಇತ್ಯಾದಿ ಸೇವೆಗಳಿಗಾಗಿ ಹಿರಿಯಕೆರೆಯ ಚಿಕ್ಕತೂಬಿನ ಬಯಲಲ್ಲಿ ೯ ಖಂಡುಗ ಗದ್ದೆ ಮತ್ತು ಅಷ್ಟೇ ಪ್ರಮಾಣದ ಬೆದ್ದಲು ಭೂಮಿಯನ್ನು ಅರಸೀಕೆರೆಯ ಕ್ರಿಯಾಶಕ್ತಿ ಪಂಡಿತರ ಕಾಲನ್ನು ತೊಳೆದು ದಾನಮಾಡಿದ. *೮ ಅರಸೀಕೆರೆಯ ಕ್ರಿಯಾಶಕ್ತಿ ಪಂಡಿತನೂ ಸಹ ೨ ಸಲಗೆ ಗದ್ದೆಯನ್ನು ಅಡುವಗೆರೆಯ ಚಿಕ್ಕತೂಬಿನ ಬಯಲಲ್ಲಿ ಇದೇ ದೇವಾಲಯಕ್ಕೆ ದಾನ ಮಾಡಿದ. *೯ ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ಕ್ರಿ.ಶ. ೧೧೨೯-೩೦ ವೇಳೆಗಾಗಲೇ ಕಳಿಕಟ್ಟೆಯಲ್ಲಿ ೨ ದೊಡ್ಡ ಪ್ರಮಾಣದ ಕೆರೆಗಳಿದ್ದು, ಸಾಕಷ್ಟು ಪ್ರದೇಶವು ನೀರಾವರಿಗೊಳಪಟ್ಟಿತ್ತು. ಕಳಿಕಟ್ಟೆಯ ಈ ಎರಡು ಪ್ರಮುಖ ಕೆರೆಗಳ ಜೊತೆಗೆ ಕ್ರಿ.ಶ. ೧೧೨೯ ಮತ್ತು ೧೨೧೩ರ ನಡುವೆ ಕೆಲವು ಹೊಸ ಕೆರೆಗಳನ್ನು ಕಟ್ಟಲಾಯಿತು. ಅವುಗಳೆಂದರೆ ಕ್ರಿ.ಶ. ೧೧೩೨ರಲ್ಲಿ ಹರಿಯೋಜನ ಕೆರೆ, *೧೦ ಕ್ರಿ.ಶ. ೧೧೮೯ರಲ್ಲಿ ಮಹದೇವನ ಕೆರೆ, *೧೧ ೧೨೦೮ರಲ್ಲಿ ಕನ್ನೆಕೆರೆ, ಬಿಟ್ಟಿಸಮುದ್ರ ಮತ್ತು ಮಂಗಯ್ಯನಕೆರೆ *೧೨ ಮತ್ತು ೧೨೧೩ರಲ್ಲಿ ಬಿಟ್ಟಿಬೋವನು ಕಟ್ಟಿಸಿದ ಕೆರೆ *೧೩ ಆಗಿವೆ. ಈ ಚಟುವಟಿಕೆಗಳು ಅಂದರೆ ಕೆರೆ, ಕಟ್ಟೆ ಕಾಲುವೆ ನಿರ್ಮಾಣದ ಕೆಲಸ, ಅವುಗಳನ್ನು ದುರಸ್ತಿಗೊಳಿಸುವುದು, ತೂಬುಗಳನ್ನು ಸೇರಿಸುವುದರಿಂದಾಗಿ ಹೆಚ್ಚು ಹೆಚ್ಚು ಪ್ರಮಾಣದ ಒಣ ಭೂಮಿಯನ್ನು ನೀರಾವರಿಗೊಳಪಡಿಸುವಲ್ಲಿ ನೆರವಾದವು. ಈ ಪ್ರಕ್ರಿಯೆಯಿಂದಾಗಿ ಇಲ್ಲಿ ಕೃಷಿ ಕ್ಷೇತ್ರದಲ್ಲಿ ಅಧಿಕ ಪ್ರಮಾಣದ ಉತ್ಪತ್ತಿಯಾಗಲಾರಂಭಿಸಿತು. ಈ ಬೆಳವಣಿಗೆಯಿಂದಾಗಿಯೇ ಏನೋ ಬಹುಶಃ ಹೊಯ್ಸಳ ಬಿಟ್ಟಿದೇವನು ಸಾಮಂತ ಸಿಂಗರಸನನ್ನು ಕ್ರಿ.ಶ. ೧೧೩೨ರಲ್ಲಿ ಅರಸೀಕೆರೆಯಿಂದೆತ್ತಿ ಕಳಿಕಟ್ಟೆಯ ಅಧಿಕಾರವನ್ನು ವಹಿಸಿಕೊಟ್ಟ. *೧೪ ಸಿಂಗರಸನನ್ನು ಏತಕ್ಕಾಗಿ ಅರಸೀಕೆರೆ ಯಿಂದ ಕಳಿಕಟ್ಟೆಗೆ ವರ್ಗಾಯಿಸಲಾಯಿತೆಂಬುದನ್ನು ಯಾವ ಶಾಸನಗಳು ಎಲ್ಲಿಯೂ ಸೂಚಿಸುವುದಿಲ್ಲ. ಬಿಟ್ಟಿದೇವನ ಈ ಕ್ರಮವು ಬಹುಶಃ ಕಳಿಕಟ್ಟೆಯು ಈ ಕಾಲದ ಒಂದು ಪ್ರಮುಖ ವ್ಯಾಪಾರ

---

** ಕಲ್ನಾಡು : ಕಾಳಗದಲ್ಲಿ ಕಾದಾಡಿ ಮಡಿದ ವೀರನ ಸ್ಮರಣಾರ್ಥವಾಗಿ ಕಲ್ಲು ನೆಟ್ಟು ಅವನ ಬಳಗಕ್ಕೆ ಕೊಟ್ಟ ದತ್ತಿ. ಆಧಾರ : **ಕನ್ನಡ ನಿಘಂಟು**, ಸಂಪುಟ. ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೬ ಪುಟ ೧೬೦೩ ಮತ್ತು
ಕೆ.ವಿ. ರಮೇಶ್ : **ಪಶ್ಚಿಮ ಗಂಗರ ಶಾಸನಗಳು**, ನವದೆಹಲಿ, ೧೯೮೪, ಪುಟ ೩೮೪

ಮಾರ್ಗದಲ್ಲಿ ಇದ್ದುದರಿಂದಲೂ ಹಾಗೂ ಈ ಪ್ರದೇಶ ಆರ್ಥಿಕವಾಗಿ ಮುಂದುವರಿಯುತ್ತಿದ್ದುದರಿಂದಲೂ ಅವನ ನೇರ ಅಧಿಕಾರವನ್ನು ಇಲ್ಲಿ ಹೇರಲು ಇರಬಹುದು. ಈ ಸ್ಥಳವು ಒಂದು ಆಯಕಟ್ಟಿನಲ್ಲಿದ್ದುದರಿಂದ ಇದರ ಮೇಲಿನ ಹಿಡಿತ ಹೊಯ್ಸಳರಿಗೆ ಅನಿವಾರ್ಯವಾಗಿದ್ದಿರಬಹುದು. ಚಟ್ಟೋಪಾಧ್ಯಾಯರು ಅಭಿಪ್ರಾಯಪಡುವಂತೆ*೧೫ ವಿಷ್ಣುವರ್ಧನನ ಈ ಕ್ರಮವು ಸಿಂಗರಸನನ್ನು ಶಿಕ್ಷಿಸಲಿಕ್ಕಾಗಲೀ ಅಥವಾ ಅವನ ಕಾರ್ಯ ಕ್ಷೇತ್ರವನ್ನು ಮಿತಿಗೊಳಿಸಲಿಕ್ಕಾಗಲೀ ಅಲ್ಲ. ಇಲ್ಲದಿದ್ದರೆ ಹೊಯ್ಸಳರು ಏತಕ್ಕಾಗಿ ಕಳಿಕಟ್ಟೆಯಲ್ಲಿ ಬಹಳ ಧೀಮಂತ ಹಾಗೂ ಗಣ್ಯವ್ಯಕ್ತಿಗಳನ್ನು ನೇಮಿಸುತ್ತಿದ್ದರು !

ಚಟ್ಟೋಪಾಧ್ಯಾಯರು ಕಳಿಕಟ್ಟೆಯ ಆಯಕಟ್ಟಿನ ಪ್ರದೇಶ ದಲ್ಲಿರುವ ಅಂಶವನ್ನು ಗಣನೆಗೆ ತೆಗೆದುಕೊಂಡಂತೆ ಕಾಣುವುದಿಲ್ಲ. ನಗರೀಕರಣಕ್ಕೆ ಅಧಿಕ ಉತ್ಪಾದನೆ ಮತ್ತು ಹೊರಗಿನ ಆಡಳಿತ ಹೇರಿಕೆಗಳೇ ಕಾರಣವಾಗುವುದಿಲ್ಲ, ಜೊತೆಗೆ ವ್ಯಾಪಾರ ಕೂಡ. ನಗರೀಕರಣಕ್ಕೆ ಮೂಲ ಪ್ರೇರಕಶಕ್ತಿ ವ್ಯಾಪಾರ ಅಥವಾ ವಾಣಿಜ್ಯ.*೧೬ ಕಳಿಕಟ್ಟೆಯು ಹೊಯ್ಸಳರ ಕಾಲದ ದಕ್ಷಿಣದ ಒಂದು ಪ್ರಮುಖ ವ್ಯಾಪಾರ ಮಾರ್ಗದಲ್ಲಿತ್ತು. ಈ ಮಾರ್ಗವು ಪಶ್ಚಿಮ ತೀರದಲ್ಲಿ ಮಂಗಳೂರಿನಿಂದ ಪ್ರಾರಂಭವಾಗಿ ಅಂಗಡಿ ಅಥವಾ ಸೊಸೆವೂರು, ಬೇಲೂರು, ಹಳೇಬೀಡು, ಹಾರನಹಳ್ಳಿ, ಅರಸೀಕೆರೆ, ಬಾಣಾವರ, ಕಳಿಕಟ್ಟೆ, ಹುಳಿಯೂರು, ಚಿಕ್ಕನಾಯಕನ ಹಳ್ಳಿ, ಕೋಲಾರ ಮತ್ತು ಅಲ್ಲಿಂದ ಅದು ಕಂಚಿಯನ್ನು ತಲುಪುತ್ತಿತ್ತು. *೧೭ ಈ ಅಂಶವು ಅಂದರೆ ಕಳಿಕಟ್ಟೆಯು ವ್ಯಾಪಾರ ಮಾರ್ಗದ ಬದಿಯಲ್ಲಿ ಇದ್ದುದರಿಂದ ಇದು ೯ನೇ ಶತಮಾನದಲ್ಲಿ ಕಲ್ನಾಡಾಗಿ ಕೊಟ್ಟ ಹಳ್ಳಿಯು ೧೨ನೇ ಶತಮಾನದ ಹೊತ್ತಿಗೆ ಒಂದು ಆಡಳಿತ ಕೇಂದ್ರವಾಗಿ, ನಂತರ ಧಾರ್ಮಿಕ ಕೇಂದ್ರವಾಗಿಯೂ ಬೆಳವಣಿಗೆಯಾದಂತೆ ಕಂಡು ಬರುತ್ತದೆ.

ಒಮ್ಮೆ ಕಳಿಕಟ್ಟೆಯು ಸಾಮಂತಾಧಿಕಾರಿಗಳ ಆಡಳಿತಕ್ಕೊಳ ಪಟ್ಟನಂತರ ಇಲ್ಲಿ ಒಂದು ಹೊಸ ಸಾಮಾಜಿಕ ವರ್ಗವು ಆಡಳಿತಾಧಿಕಾರಿಗಳ ರೂಪದಲ್ಲಿ ಅಂದರೆ ದಂಡನಾಯಕರು, ಮಹಾಸಾಮಂತರು, ನಾಯಕರು, ಪೆರ್ಗ್ಗಡೆಗಳು, ಪ್ರಭುಗಾವುಂಡ ಗಳು ಮತ್ತು ಸ್ಥಳೀಯ ಶಕ್ತಿಗಳಾದ ಮಹಾಜನರು ಮತ್ತು ಸ್ಥಾನಿಕರ ರೂಪದಲ್ಲಿ ಹುಟ್ಟಿಕೊಂಡಿತು. ಈ ಹೊಸ ಸಾಮಾಜಿಕ ವರ್ಗವು ಅಧಿಕ ಉತ್ಪಾದನೆಯನ್ನು ಸಂಗ್ರಹಿಸುವುದು ಮತ್ತು ವ್ಯಾಪಾರ ಮಾರ್ಗದ ಮೇಲೆ ತಮ್ಮ ಹಿಡಿತವನ್ನು ಸ್ಥಾಪಿಸುವುದರ ಜೊತೆಗೆ ಕೆಲವು ಕಲ್ಯಾಣ ಕಾರ್ಯಗಳನ್ನು ಅಂದರೆ ಕೆರೆ, ಕಾಲುವೆ ಮತ್ತು ದೇವಾಲಯಗಳನ್ನು ಕಟ್ಟುವುದು, ದೇವರ ವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ಮತ್ತು ಇಂತಹ ಧಾರ್ಮಿಕ ಕೇಂದ್ರಗಳಿಗೆ ಭೂಮಿ ಮತ್ತು ಹಣದ ರೂಪದಲ್ಲಿ ದಾನ ಮಾಡುವುದನ್ನು ಪ್ರಾರಂಭಿಸಿತು. ಇದರ ಮುಖ್ಯ ಉದ್ದೇಶ ಸ್ಥಳೀಯ ಪ್ರಮುಖ ಸಾಮಾಜಿಕ ವರ್ಗದವರನ್ನು ತಮ್ಮೆಡೆಗೆ ಸೆಳೆಯುವುದಾಗಿತ್ತು. ಇದಕ್ಕಾಗಿಯೇ ನಾವು ಶಾಸನಗಳಲ್ಲಿ ಇಂತಹ ಕೆಲಸಗಳನ್ನು ಮೊದಲು ಮಾಡಿದವರು ಆಡಳಿತಗಾರರು ಮತ್ತು ಪುರೋಹಿತ ವರ್ಗ ಎಂಬುದನ್ನು ಅರಿಯಬಹುದು.

ನಂತರ ಇಂತಹ ಕೆಲಸಗಳನ್ನು ವ್ಯವಸಾಯೇತರ ವರ್ಗ ಕೈಗೊಂಡಿದ್ದನ್ನು ಕಾಣಬಹುದು. ಇಲ್ಲಿಯ ಶಾಸನಗಳಿಂದ ಸಮಾಜವು ೪ ವರ್ಗಗಳಿಂದ ಕೂಡಿತ್ತೆಂದು ತಿಳಿದು ಬರುತ್ತದೆ. ಅವುಗಳೆಂದರೆ ಆಡಳಿತವರ್ಗ, ಪುರೋಹಿತ ವರ್ಗ, ವ್ಯಾಪಾರೀ ವರ್ಗ ಮತ್ತು ಉತ್ಪಾದನಾ ವರ್ಗ. ಅಂತೇ ಕ್ರಿ. ಶ. ೧೧೩೨ರಲ್ಲಿ ಸಾಮಂತ ಸಿಂಗರಸನು ಕಳಿಕಟ್ಟೆಯ ಸಮಸ್ತ ಪ್ರಜೆಗಳೊಡಗೂಡಿ ಬೆಟ್ಟದಕಲಿದೇವರ ದೇವಾಲಯವನ್ನು ನಿರ್ಮಿಸಿದ್ದು ಗಮನಾರ್ಹ. *೧೮

ಕ್ರಿ.ಶ. ೧೧೩೨ರ ನಂತರ ಇಂತಹ ಕಾರ್ಯವನ್ನು ಕುಶಲಕರ್ಮಿಗಳ ವರ್ಗ ಕೈಗೆತ್ತಿಕೊಂಡದ್ದು ಕಂಡುಬರುತ್ತದೆ. ಇವರಲ್ಲಿ ಮುಖ್ಯರಾದವರು ಶಿಲ್ಪಿಗಳು, ತೈಲಿಗರು, ನೇಕಾರರು ಮತ್ತು ಏಕ್ಕಟಿಗರು. ಈ ವರ್ಗ ಕಳಿಕಟ್ಟೆಯ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಮಹತ್ವ ಪಾತ್ರವನ್ನು ವಹಿಸಿದೆ. ಹರಿಯೋಜನ*೧೯ ಹೆಸರಿನಲ್ಲಿ ಕೆರೆಯ ಉಲ್ಲೇಖ ಕಂಡು ಬರುತ್ತದೆ. ಜೊತೆಗೆ ಹೊಯ್ಸಳ ಕಾಲದ ಪ್ರಸಿದ್ಧ ಶಿಲ್ಪಿ ದಾಸೋಜ*೨೦ ಇಲ್ಲಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡುವುದ ಕ್ಕಾಗಿಯೋ ಅಥವಾ ಹೊಸದಾಗಿ ನಿರ್ಮಿಸುವುದಕ್ಕಾಗಿಯೋ ಕಳಿಕಟ್ಟೆಯಲ್ಲಿ ನೆಲೆಸಿದ್ದ. ಕ್ರಿ.ಶ. ೧೧೫೮ರಲ್ಲಿ ಬಮ್ಮೋಜ ಮತ್ತು ಮಾಚೋಜ*೨೧ ಎಂಬ ಶಿಲ್ಪಿಗಳು ಕಮ್ಮಟೇಶ್ವರ ದೇವಾಲಯವನ್ನು ಕಟ್ಟಿ ಅದರಲ್ಲಿ ದೇವರ ಪ್ರತಿಷ್ಠಾಪನೆ ಮಾಡಿದರು. ಕಮ್ಮಟ ಎಂಬ ಪದವು ಎರಡು ಅರ್ಥಗಳನ್ನು ನೀಡುತ್ತದೆ. ಅವುಗಳೆಂದರೆ ಒಂದು ಟಂಕಶಾಲೆ ಮತ್ತು ಎರಡನೆಯದು ಒಂದು ವೃತ್ತಿಯ ಕೇಂದ್ರ. ಈ ಕಮ್ಮಟ ಯಾವುದೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ.

ಮತ್ತೊಂದು ವ್ಯವಸಾಯೇತರ ವರ್ಗವಾದ ತೈಲಿಗರು ತಮ್ಮದೇ ಆದ ಸಂಘವನ್ನು ಹೊಂದಿದ್ದು, ಇವರು ಕಲಿಗೇಶ್ವರ ದೇವರ ನಂದಾದೀವಿಗೆಗೆ ನಿರ್ದಿಷ್ಟ ಪ್ರಮಾಣದ ಎಣ್ಣೆಯನ್ನು ಕೊಡುವುದರ ಜೊತೆಗೆ ದೇವಾಲಯದ ಕಾರ್ಯಕ್ಕೆ ವರ್ಷಂ ಪ್ರತಿಯಾಗಿ ಪ್ರತಿ ಗಾಣದಿಂದ ಒಂದು ಹಣವನ್ನು ಸಂಗ್ರಹಿಸುತ್ತಿದ್ದಂತೆ*೨೨ ಜೇಡಗೊತ್ತಳಿಗಳು ಮತ್ತು ಜಗತಿ ಗೊತ್ತಳಿಗಳು ಸಹ ದೇವಾಲಯದ ನಿರ್ಮಾಣಕ್ಕೆ ಅದರ ನಿರ್ವಹಣೆಗೆ ದೈನಂದಿನ ಪೂಜಾ ವಿಧಾನಗಳಿಗೆ ತಮ್ಮ ಮಗ್ಗಗಳ ಮೇಲೆ ಸುಂಕವನ್ನು ಸಂಗ್ರಹಿಸುತ್ತಿದ್ದರು. *೨೩

ಇಂತಹ ಚಟುವಟಿಕೆಗಳು ಕ್ರಮೇಣವಾಗಿ ಉತ್ಪಾದನಾ ಅಥವಾ ವೃತ್ತಿಸಂಘಗಳನ್ನು ಸ್ಥಾಪಿಸುವುದಕ್ಕೆ ನೆರವಾದವು. ಕಳಿಕಟ್ಟೆಯಲ್ಲಿ ಮುಖ್ಯವಾಗಿ ಕಂಡುಬರುವ ಉತ್ಪಾದನಾ ಸಂಘಗಳೆಂದರೆ ಜಗತಿಗೊತ್ತಳಿ, ಜೇಡಗೊತ್ತಳಿ, ತೆಲ್ಲಿಗರು ಮತ್ತು ಶಿಲ್ಪಿಗಳು. ಕ್ರಿ.ಶ. ೧೧೪೪ರ*೨೪ ಶಾಸನದಲ್ಲಿ ಪ್ರಥಮ ಬಾರಿಗೆ ತೈಲಿಗರ ಸಂಘವನ್ನು, ೧೨೦೮ರ*೨೫ ಶಾಸನದಲ್ಲಿ ಜಗತಿಗೊತ್ತಳಿ ಸಂಘವನ್ನು ಮತ್ತು ಇದೇ ಶಾಸನದಲ್ಲಿ*೨೬ ಜೇಡಗೊತ್ತಳಿ ಸಂಘವನ್ನು ಉಲ್ಲೇಖಿಸಲಾಗಿದೆ. ಕಳಿಕಟ್ಟೆಯು ಒಂದು ಪ್ರಮುಖ ಎಣ್ಣೆ ಮತ್ತು ಬಟ್ಟೆ ಉತ್ಪಾದನಾ ಕೇಂದ್ರವಾಗಿತ್ತು.*೨೭ ಅಧಿಕ ಉತ್ಪಾದನೆಯು ನಿಸ್ಸಂದೇಹವಾಗಿ ವ್ಯಾಪಾರಕ್ಕೆ ಹೆಚ್ಚು ಪ್ರೋತ್ಸಾಹ ನೀಡಿತು. ಇದರಿಂದಾಗಿಯೇ ಕ್ರಿ.ಶ. ೧೨೧೫ರ ನಂತರ ಇಲ್ಲಿಯ ಶಾಸನಗಳಲ್ಲಿ ವ್ಯಾಪಾರೀ ವರ್ಗಗಳು ಕಾಣಿಸಿಕೊಳ್ಳುತ್ತವೆ. ಶ್ರೀಮನ್ಮಹಾವಡ್ಡವ್ಯವಹಾರಿ ಪೊಂನಚ್ಚಸೆಟ್ಟಿ, ಪೇಟೆಯ ಬೊಮ್ಮಯ್ಯ ಮತ್ತು ಪಟ್ಟಣಸ್ವಾಮಿ ಲಕ್ಕಿಸೆಟ್ಟಿ*೨೮ ಮುಂತಾದವರು ಕಳಿಕಟ್ಟೆಯ ಆರ್ಥಿಕ ಜೀವನದಲ್ಲಿ ಮಹತ್ತರ ಪಾತ್ರ ವಹಿಸಿದಂತೆ ಕಂಡು ಬರುತ್ತದೆ.

ಮೇಲಿನ ವಿವರಣೆಗಳಿಂದ ಕಳಿಕಟ್ಟೆಯು ವೃತ್ತಿ ಮತ್ತು ವ್ಯಾಪಾರ ಸಂಘಗಳಿಂದ ನಗರವಾಗಿ ಮಾರ್ಪಾಟಾದಂತೆ ತಿಳಿದು ಬರುತ್ತದೆ. ಎರಡನೆಯದಾಗಿ ಚಟ್ಟೋಪಾಧ್ಯಾಯರು ಕಳಿಕಟ್ಟೆಯು ಪಟ್ಟಣದ ಯಾವುದೇ ಲಕ್ಷಣಗಳನ್ನು ಹೊಂದಿರಲಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ.*೨೯ ಈ ಸಂದರ್ಭದಲ್ಲಿ ಪಟ್ಟಣದ ಸ್ವರೂಪ ಮತ್ತು ಲಕ್ಷಣಗಳನ್ನು ತಿಳಿದುಕೊಳ್ಳುವುದು ಅತ್ಯಂತ ಸೂಕ್ತವಾದದ್ದು. ಇದಕ್ಕೆ ಸಂಬಂಧಿಸಿದಂತೆ. ವಿ. ಗಾರ್ಡನ್ ಸೈಲ್ಡ್*೩೦ ತಮ್ಮ ಪುಸ್ತಕಗಳಾದ 'ಮ್ಯಾನ್ ಮೇಕ್ಸ್ ಹಿಮ್‌ಸೆಲ್ಫ್' ಮತ್ತು 'ನಗರಕ್ರಾಂತಿ'ಗಳಲ್ಲಿ ನಗರೀಕರಣದ ಬಗ್ಗೆ ಒಂದು ಹೊಸ ಅಲೆಯನ್ನು ಎಬ್ಬಿಸಿದವರಲ್ಲಿ ಮೊದಲಿಗರಾಗಿದ್ದಾರೆ. ಇವರು ಮೇಲ್ಕಂಡ ಪುಸ್ತಕಗಳಲ್ಲಿ ನಗರದ ಲಕ್ಷಣಗಳನ್ನು ಕೆಳಕಂಡಂತೆ ತಿಳಿಸುತ್ತಾರೆ. ನಗರಗಳು ಗಾತ್ರದಲ್ಲಿ ದೊಡ್ಡವಾಗಿದ್ದು ಹೆಚ್ಚು ಜನಸಂಖ್ಯೆಯನ್ನು ಹೊಂದಿರುತ್ತವೆ; ಕೃಷಿಯೇತರ ವರ್ಗಗಳಿಂದ ಕೂಡಿದ್ದು ಕೃಷಿಕರ ಅಧಿಕ ಉತ್ಪಾದನೆಯ ಮೇಲೆ ಅವಲಂಬಿಸಿರುತ್ತವೆ; ಪ್ರತಿ ಉತ್ಪಾದಕನು ತನ್ನ ಹೆಚ್ಚುವರಿ ಉತ್ಪನ್ನವನ್ನು ದೇವರ ಕೆಲಸಕ್ಕೆ ಕೊಡುವುದು, ದೇವಾಲಯಗಳ ನಿರ್ಮಾಣ, ಆಡಳಿತ ವರ್ಗದ ರಚನೆ, ವೈಜ್ಞಾನಿಕ ವಿಷಯಗಳ ಬೆಳವಣಿಗೆ ಮತ್ತು ವಿದೇಶ ವ್ಯಾಪಾರ, ಇಲ್ಲಿನ ರೂಢಿ.

ಅ. ಅಪ್ಪಾದೊರೈ*೩೧ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ: *ಮೊದಲನೆಯದಾಗಿ ಗ್ರಾಮಗಳು ತಮ್ಮ ಬೇಡಿಕೆಗಳನ್ನು ತಾವೇ ಪೂರೈಸಿಕೊಳ್ಳುತ್ತವೆ. ಆದರೆ ನಗರಗಳು ತಮ್ಮ ದೈನಂದಿನ ಬೇಡಿಕೆಗಳನ್ನು ಹೊರಗಿನಿಂದ ಪೂರೈಸಿಕೊಳ್ಳುತ್ತವೆ. ಕೆಲವು ನಗರಗಳು ದೊಡ್ಡ ಗ್ರಾಮಗಳಂತಿರುತ್ತವೆ. ಎರಡನೆಯದಾಗಿ ಪಟ್ಟಣಗಳಲ್ಲಿ ಅತಿಯಾದ ಜನಸಂಖ್ಯೆಯ ಕಾರಣ ಉತ್ಪಾದನೆಗೆ ಹೆಚ್ಚು ಒತ್ತು ಇರುತ್ತದೆ. ಈ ಉತ್ಪಾದನೆಯು ಮುಖ್ಯವಾಗಿ ಸ್ಥಳೀಯ ಉಪಯೋಗಕ್ಕಿಂತ ಮಾರುಕಟ್ಟೆಗಳಿಗೆ ಅಥವಾ ವ್ಯಾಪಾರಕ್ಕೆ ಮೀಸಲಾಗಿರುತ್ತದೆ.*

ಜಿ.ಆರ್. ಕುಪ್ಪುಸ್ವಾಮಿ*೩೨ ಅವರ ಪ್ರಕಾರ *"ಮಧ್ಯಕಾಲೀನ ಕರ್ನಾಟಕದ ಗ್ರಾಮೀಣ ಮತ್ತು ನಗರಗಳ ಅರ್ಥವ್ಯವಸ್ಥೆಯನ್ನು ಸ್ಪಷ್ಟವಾಗಿ ವರ್ಗೀಕರಿಸುವುದು ತುಂಬಾ ಕಠಿಣವಾದ ಕೆಲಸ. ವಾಸ್ತವ್ಯದಲ್ಲಿ ಹಲವಾರು ವಿಷಯಗಳಲ್ಲಿ ಗ್ರಾಮ ಮತ್ತು ಪಟ್ಟಣಗಳ ಜೀವನದಲ್ಲಿ ಸಾಮರಸ್ಯ ಕಂಡು ಬರುತ್ತದೆ. ಈ ವ್ಯತ್ಯಾಸ ಕೇವಲ ಶ್ರೇಣಿಯೇ ಹೊರತು ಪ್ರಕಾರದಲ್ಲಿ ಅಲ್ಲ."*

ಜಿ.ಎಸ್. ದೀಕ್ಷಿತರ*೩೩ ದೃಷ್ಟಿಯಲ್ಲಿ, *ಒಂದು ಹಳ್ಳಿಯಲ್ಲಿ ಸಂತೆಯನ್ನು ಸ್ಥಾಪಿಸುವುದರೊಂದಿಗೆ ಅದು ಪಟ್ಟಣವಾಗಿ ಮಾರ್ಪಡುತ್ತದೆ. ಅಗ್ರಹಾರಗಳ ರೀತಿ ಇವು ಸಹ ಕೆಲವೊಮ್ಮೆ ಸಂತೆ ನಡೆಸುವುದರಿಂದ ಅಥವಾ ರಾಜಾಜ್ಞೆ ಹೊರಡಿಸುವುದರ ಮೂಲಕ ಹಳ್ಳಿಗಳು ನಗರಗಳಾಗಿ ಮಾರ್ಪಾಟಾಗುತ್ತಿದ್ದವು. ಕೆಲವು ವೇಳೆ ಹಳ್ಳಿಯ ಜನತೆ ಮತ್ತು ಮುಖ್ಯಸ್ಥರು ತಮ್ಮ ಊರನ್ನು ನಗರಗಳಾಗಿ ಪರಿವರ್ತಿಸಲು ತೀರ್ಮಾನ ಕೈಗೊಳ್ಳುತ್ತಿದ್ದರು. ಕ್ರಿ.ಶ. ೧೨೫೧ರಲ್ಲಿ ಬಳೆಗಾರ ಮಲ್ಲಸೆಟ್ಟಿಯು ಒಂದು ಹಳ್ಳಿಯನ್ನು ಪಟ್ಟಣವಾಗಿ ಮಾರ್ಪಡಿಸಿದನು.*೩೪*

ಈ ಮೇಲಿನ ಅಭಿಪ್ರಾಯಗಳು ಕಳಿಕಟ್ಟೆಯು ಪಟ್ಟಣದ ಎಲ್ಲಾ ಲಕ್ಷಣಗಳನ್ನು ಹೊಂದಿತ್ತೆಂಬ ಬಗ್ಗೆ ಬೆಳಕು ಬೀರುತ್ತವೆ. ಸ್ಥಳೀಯರು ಕಳಿಕಟ್ಟೆಯನ್ನು ಒರಗಲ್ಲು ಪಟ್ಟಣವೆಂದು ಕರೆಯಲಾಗುತ್ತಿತ್ತೆಂದು ಹೇಳುತ್ತಾರೆ. ಮೇಲಾಗಿ ಇದು ಕೋಟೆಯಿಂದ ಆವರಿಸಿತ್ತೆಂದು ಸಹ ಹೇಳುತ್ತಾರೆ. ಆದರೆ ಕೋಟೆಯ ಅವಶೇಷಗಳು ಕಂಡುಬರುವುದಿಲ್ಲ.

ಕಳಿಕಟ್ಟೆಯು ಪಟ್ಟಣವಾಗಿತ್ತೆಂದು ನಿರ್ಧರಿಸಲು ನಮಗೆ ಶಾಸನಗಳ ಆಧಾರಗಳಿವೆ. ಪ್ರಪ್ರಥಮ ಬಾರಿಗೆ ಕ್ರಿ.ಶ. ೧೧೯೯ರ ಶಾಸನವು*೩೫ ಸಾಮಂತ ಸಿಂಗರಸನ ಆಳ್ವಿಕೆಯ ಕಾಲದಲ್ಲಿ ಕಳಿಕಟ್ಟೆಯ ಸಮಸ್ತ ಜಗತಿಕೊತ್ತಳಿಗಳು ಇದನ್ನು ಪಟ್ಟಣವಾಗಿ ಮಾರ್ಪಡಿಸಿದರು ಎಂದು ತಿಳಿಸುತ್ತದೆ; ಹಾಗು ಇದನ್ನು ಅಮರಾವತಿಪುರವೆಂದು*೩೬ ಬಣ್ಣಿಸಿದೆ. ಪುರವೆಂದರೆ ಪಟ್ಟಣವೆಂಬುದು ಹಲವರ ಅಭಿಪ್ರಾಯ. *೩೭ ಜಿ. ಎಸ್. ದೀಕ್ಷಿತರ*೩೮ ಪ್ರಕಾರ ಕೆಲವು ನಗರಸಭೆಗಳು ಅಲ್ಪಸಂಖ್ಯೆಯ ಕಾರ್ಯಸಮಿತಿಯ ಸದಸ್ಯರನ್ನು ಹೊಂದಿದ್ದವು. ತಲಕಾಡಿನ ನಗರಸಭೆಯ ಕಾರ್ಯಸಮಿತಿಯು ೨೫ ಸದಸ್ಯರನ್ನು ಹೊಂದಿತ್ತು. ಮುಂದುವರಿದು ಅವರು ನಕರ ಅಥವಾ ನಗರ ಎಂಬ ಪದವು ನಗರ ಮತ್ತು ನಗರಸಭೆಯನ್ನು ಸೂಚಿಸುತ್ತದೆಂದು ಅಭಿಪ್ರಾಯ ಪಡುತ್ತಾರೆ. ನಗರ ಸಮೂಹವು ಸಭೆಯ ಪೂರ್ಣ ಹೆಸರು. ಕೆಲವು ವೇಳೆ ಇದು ಕೇವಲ ಸಮೂಹವೆಂದು ಕರೆಯಲ್ಪಟ್ಟಿದೆ. *೩೯ ಕಳಿಕಟ್ಟೆಯಲ್ಲಿಯೂ ಸಹ ಇಂತಹ ಸಮೂಹಗಳಿದ್ದವು. ಉದಾಹರಣೆಗೆ ಜಗತಿಸಮೂಹ,

ಜೇಡ ಗೊತ್ತಳಿ, ಜಗತಿಗೊತ್ತಳಿ, ಅರವತ್ತು ಮಾನಸ ಎಕ್ಕಟಿಗರು ಮತ್ತು ನೂರಿಪ್ಪತ್ತು ಅಶೇಷ ಮಹಾಜನಂಗಳು. ಶಾಸನಗಳು ಈ ಗುಂಪಿನ ಸ್ವರೂಪ ಅಥವಾ ಕಾರ್ಯವನ್ನು ತಿಳಿಸುವುದಿಲ್ಲ. ಚಟ್ಟೋಪಾಧ್ಯಾಯರು*೪೦ ಜಿ.ಎಸ್. ದೀಕ್ಷಿತರ ಕೃತಿಯನ್ನು ಆಧರಿಸಿ ಜಗತಿಕೊತ್ತಳಿ ಅಥವಾ ಜಗತಿಸಮೂಹವನ್ನು ವ್ಯಾಪಾರಿವರ್ಗ ಅಥವಾ ಸಂಘ ಮತ್ತು ಎಕ್ಕಟಿಗರನ್ನು ಸೈನಿಕರೆಂದು ಅರ್ಥೈಸಿದ್ದಾರೆ. ಆದರೆ ಕನ್ನಡ ನಿಘಂಟಿನ*೪೧ ಪ್ರಕಾರ ಜಗತಿ ಅಥವಾ ಜಗತಿಕೊತ್ತಳಿ ಎಂದರೆ ಒಂದು ಸ್ಥಳದ ಪ್ರಾತಿನಿಧಿಕ ಸಭೆ ಮತ್ತು ಎಕ್ಕಟಿಗರು ಎಂದರೆ ಗೂಢಚಾರರೆಂದು ಹಾಗೂ ಜೇಡಗೊತ್ತಳಿಗಳೆಂದರೆ ನೇಕಾರರೆಂದಾಗಿದೆ. ಕರಕುಶಲಕರ್ಮಿಗಳ ಇರುವಿಕೆ ಮತ್ತು ಅವರ ಕೆಲಸಕಾರ್ಯಗಳು ಕಳಿಕಟ್ಟೆಯನ್ನು ಕೃಷಿ ಆರ್ಥಿಕತೆಯಿಂದ ಕೃಷಿಯೇತರ ಆರ್ಥಿಕತೆಯೆಡೆಗೆ ಒಯ್ದಿದ್ದುವು.

ಇದಲ್ಲದೆ ಕಳಿಕಟ್ಟೆಯನ್ನು ಪಡೆದು ಆಳಿದ ಆಡಳಿತ ಗಾರರಾಗಲಿ ಅಥವಾ ದಂಡನಾಯಕರಾಗಲಿ ಅಥವಾ ಸಾಮಂತ ರಾಗಲಿ, ಸಾಮಾನ್ಯವಾಗಿ ಎಲ್ಲರೂ ಪ್ರತಿಷ್ಠಿತ ವರ್ಗಕ್ಕೆ ಮತ್ತು ಪ್ರಸಿದ್ಧ ನಗರಗಳಿಗೆ ಸೇರಿದವರಾಗಿದ್ದು, ಚಟ್ಟೋಪಾಧ್ಯಾಯರು ಭಾವಿಸುವಂತೆ*೪೨ ಅವರುಗಳು ಸಾಮಾನ್ಯ ವರ್ಗಕ್ಕೆ ಸೇರಿದವರಲ್ಲ ಮತ್ತು ಸ್ಥಳೀಯರಲ್ಲ. ಸಿಂಗರಸ ಕಳಿಕಟ್ಟೆಯಲ್ಲಿ ಆಡಳಿತ ಪ್ರಾರಂಭಿಸುವ ಮೊದಲು ಅರಸೀಕೆರೆಯ ಆಡಳಿತಗಾರನಾಗಿದ್ದನು. ಅರಸೀಕೆರೆಯನ್ನು ಶಾಸನಗಳು ದಕ್ಷಿಣದ ಐಯ್ಯಾವೊಳೆ*೪೩ ಮತ್ತು ಸರ್ವಜ್ಞಪುರ*೪೪ ಎಂದು ಉಲ್ಲೇಖಿಸಿವೆ. ಅದೇ ರೀತಿ ಸಾಮಂತ ಗೋವಿದೇವನು ಹುಳಿಯಾರು ಪಟ್ಟಣದ ಪುರವರಾಧೀಶ್ವರ. *೪೫ ಇವನು ಹೊಯ್ಸಳ ವಿಷ್ಣುವರ್ಧನ ಮತ್ತು ಅವನ ಮಗ ಒಂದನೆಯ ನರಸಿಂಹನ ಕಾಲದಲ್ಲಿ ಅವರ ಯುದ್ಧಗಳಲ್ಲಿ ವಿಶಿಷ್ಟ ಪಾತ್ರವಹಿಸಿ ಅವರ ಶತ್ರುಗಳಾದ ಉಚ್ಚಂಗಿ ಪಾಂಡ್ಯರನ್ನು ಮತ್ತು ಹಾನಂಗಲ್ಲು ಕದಂಬರನ್ನು ಸೋಲಿಸಿ ತುಂಗಭದ್ರಾ ನದಿಯ ಪ್ರದೇಶಗಳಿಗೆ ದಾರಿಮಾಡಿಕೊಟ್ಟನು. *೪೬ ಹಾಗೆಯೇ ಕ್ರಿ. ಶ. ೧೧೫೪ರಲ್ಲಿ ಮಹಾಸಾಮಂತ ಘುಸಣಿ ಮಹದೇವನಾಯಕ*೪೭ ೧೧೯೮ರಲ್ಲಿ ಸಾಮಂತ ಸೋಮಯ್ಯ ನಾಯಕ*೪೮ ೧೨೦೮ರಲ್ಲಿ ಕುಮಾರ ಪಂಡಿತಯ್ಯ ದಂಡನಾಯಕ*೪೯ ಮತ್ತು ೧೨೧೩ರಲ್ಲಿ ಬಲ್ಲಾಳನ ರಾಣಿ ಉಮಾದೇವಿಯ ಮಹಾಸಾಮಂತ ಕೆಚ್ಚನ ಮಜೆಯನಾಯಕ*೫೦ ಹೀಗೆ ಕಳಿಕಟ್ಟೆಯನ್ನು ಆಳಿದ ಇವರೆಲ್ಲರೂ ಜನಸಾಮಾನ್ಯರೇ? ಕಳಿಕಟ್ಟೆಯನ್ನು ಇಂತಹ ಪ್ರತಿಷ್ಠಿತ ದಂಡ ನಾಯಕರಿಗೆ ವಹಿಸುವಲ್ಲಿ ಅದು ಒಂದು ಆಯಕಟ್ಟಿನ ಪ್ರದೇಶದಲ್ಲಿದ್ದು ಅತ್ಯಂತ ಪ್ರಮುಖ ಪ್ರದೇಶವಾಗಿದ್ದಿರಬೇಕು.

ಮೂರನೆಯದಾಗಿ ಚಟ್ಟೋಪಾಧ್ಯಾಯರು, ಕಳಿಕಟ್ಟೆಯಲ್ಲಿ ಸ್ಥಾನಿಕರಿಗೂ ಮತ್ತು ಮಹಾಜನಗಳಿಗೂ ಇದ್ದ ವಿವಾದವನ್ನು ಹೊರಗಿನವರಾದ ಶ್ರೀಮನ್ಮಹಾವಡ್ಡವ್ಯವಹಾರಿ, ಪೇಟೆಯ ಬೊಮ್ಮಯ್ಯ ಮತ್ತು ಪಟ್ಟಣಸ್ವಾಮಿ ಲಕ್ಕಿಸೆಟ್ಟಿ ಇವರುಗಳ ಸಮ್ಮುಖದಲ್ಲಿ ಪರಿಹರಿಸಲಾಯಿತೆಂದು ಅಭಿಪ್ರಾಯ ಪಟ್ಟಿದ್ದಾರೆ. *೫೧

ಆದರೆ ಕ್ರಿ.ಶ. ೧೨೧೫ರ ಶಾಸನವು*೫೨ ಸ್ಪಷ್ಟವಾಗಿ ವಡ್ಡವ್ಯವಹಾರಿ ಮತ್ತಿತರ ವ್ಯಾಪಾರೀವರ್ಗ ಕಳಿಕಟ್ಟೆಗೆ ಸೇರಿದವರೆಂದು ತಿಳಿಸುತ್ತವೆ. ಶಾಸನದಲ್ಲಿ ವ್ಯಕ್ತಿಗಳನ್ನು ಯಾವ ಊರಿನವರೆಂದು ಗುರುತಿಸಬಹುದು. ಉದಾಹರಣೆಗೆ ಕಳಿಕಟ್ಟೆಯ ವಡ್ಡವ್ಯವಹಾರಿ ಪೊನ್ನಚ್ಚಸೆಟ್ಟಿ ಮತ್ತು ಬಿನಗೌಡ, ಪೇಟೆಯ ಬೊಮ್ಮಯ್ಯ, ಪಟ್ಟಣಸ್ವಾಮಿ ಲಕ್ಕಿಸೆಟ್ಟಿ, ಹುಳಿಯಾರ ನಾಡಪ್ರಭು, ಬೀಟೇಶ್ವರದ ಮಾಧಜೀಯ ಮತ್ತು ಕಿತ್ತನಕೆರೆಯ ಕಲ್ಲಜೀಯ ಎಂದು ಸ್ಪಷ್ಟವಾಗಿ ಉಲ್ಲೇಖಿಸಿದೆ. ಇದರಿಂದ ವಡ್ಡವ್ಯವಹಾರಿ ಪೊನ್ನಚ್ಚಸೆಟ್ಟಿ ಮತ್ತು ಪಟ್ಟಣಸ್ವಾಮಿ ಲಕ್ಕಿಸೆಟ್ಟಿ ಮೂಲತಃ ಕಳಿಕಟ್ಟೆಗೆ ಸೇರಿದವರೆಂದು ದೃಢವಾಗಿ ಹೇಳಬಹುದು. ಆ ಕಾಲದ ಇತರ ವಡ್ಡವ್ಯವಹಾರಿಗಳೆಂದರೆ ಬಾಣಾವರದ ದಾಸಿಸೆಟ್ಟಿ ಮತ್ತು ಕಮ್ಮಟಚಟ್ಟಿಸೆಟ್ಟಿ*೫೩ ಅರಸೀಕೆರೆಯ ದಾಮೋಧರ ಸೆಟ್ಟಿ*೫೪ ಮತ್ತು ಕುಂಜಣಾಂಬಿ ಸೆಟ್ಟಿ*೫೫ ಈ ಎಲ್ಲಾ ಅಂಶಗಳಿದ್ದರೂ ಸಹ ಚಟ್ಟೋಪಾಧ್ಯಾಯರು ಕಳಿಕಟ್ಟೆಯಲ್ಲಿ ವ್ಯಾಪಾರೀವರ್ಗ ಮತ್ತು ನಗರಸಭೆ ಇರಲಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಮೇಲಿನ ಆಧಾರಗಳಿಂದ ಚಟ್ಟೋಪಾಧ್ಯಾಯರ ನಿಲುವನ್ನು ಸ್ಪಷ್ಟವಾಗಿ ನಿರಾಕರಿಸಬಹುದು.

ಕಳಿಕಟ್ಟೆಯು ಒಂದು ಪಟ್ಟಣವೆಂದು ನಿರ್ಧರಿಸಿದ ಮೇಲೆ, ಮಧ್ಯಕಾಲದ ನಗರೀಕರಣದ ಮುಖ್ಯ ಕಾರಣಗಳ್ನು ತಿಳಿದು ಕೊಳ್ಳುವುದು ಅತ್ಯಂತ ಸೂಕ್ತವಾದುದು. ಕಳಿಕಟ್ಟೆಯ ನಗರೀಕರಣ ಪ್ರಕ್ರಿಯೆಯು ಈ ಅವಧಿಯಲ್ಲಿ ಬರುವುದರಿಂದ ಇದು ಅತ್ಯಂತ ಸಮಂಜಸವಾದುದು.

ಅಪ್ಪಾದೊರೆಯವರು ನಗರೀಕರಣಕ್ಕೆ ಸುಮಾರು ಏಳು ಅಂಶಗಳು ಕಾರಣವೆಂದು ಅಭಿಪ್ರಾಯ ಪಡುತ್ತಾರೆ. *೫೬ ಅವುಗಳೆಂದರೆ ದೇವಾಲಯಗಳ ಇರುವಿಕೆ, ನದಿ ಅಥವಾ ಸಮುದ್ರದ ಸಮೀಪ, ಆಡಳಿತದ ಅನುಕೂಲಕ್ಕಾಗಿ ಸ್ಥಳದ ಆಯ್ಕೆ, ವ್ಯಾಪಾರ ಮಾರ್ಗ, ವಾಣಿಜ್ಯ, ಸಂತೆ ನಡೆಸುವುದು ಮತ್ತು ವಿಹಾರಾರ್ಥ ಸ್ಥಳಗಳು.

ವಿಜಯ್‌ಕುಮಾರ್ ಠಾಕೂರ್ ಸುಮಾರು ಹದಿನಾರು ಅಂಶಗಳು ನಗರೀಕರಣಕ್ಕೆ ಕಾರಣೀಭೂತವೆಂದು ಅಭಿಪ್ರಾಯ ಪಟ್ಟಿದ್ದಾರೆ. *೫೭ ಅವುಗಳೆಂದರ ಆಹಾರ ಪೂರೈಕೆಯಲ್ಲಿ ಹೆಚ್ಚಳ, ಜನಸಂಖ್ಯೆ ಹೆಚ್ಚಳ, ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗ, ವೃತ್ತಿ ವೈಶಿಷ್ಟ್ಯತೆ ಅಥವಾ ಕೌಶಲ್ಯತೆ, ವ್ಯಾಪಾರ ಮತ್ತು ಮಾರುಕಟ್ಟೆ, ಸಮಾಜದಲ್ಲಿ ವರ್ಗ ರಚನೆ, ಧರ್ಮ, ವಿಹಾರಾರ್ಥವಾಗಿ ಪ್ರಯಾಣ ಮಾಡುವುದು, ವಿದ್ಯಾಭ್ಯಾಸ, ಶ್ರೀಮಂತ ಜಮೀನ್ದಾರರು, ಚಿಲ್ಲರೆ ವ್ಯಾಪಾರಿಗಳು, ಆಡಳಿತ, ರಕ್ಷಣೆ, ಯುದ್ಧಗಳು, ನೀರಾವರಿ ಸೌಲಭ್ಯ, ಭೌಗೋಳಿಕ ನೆಲೆ ಮತ್ತು ವೈಯಕ್ತಿಕ ಆಸಕ್ತಿ.

ಆರ್. ಚಂಪಕಲಕ್ಷ್ಮಿಯವರು ಸುಮಾರು ಒಂಭತ್ತು ಅಂಶಗಳನ್ನು ನಗರೀಕರಣಕ್ಕೆ ಪ್ರೇರಕಶಕ್ತಿಗಳೆಂದು ಅಭಿಪ್ರಾಯ ಪಡುತ್ತಾರೆ. *೫೮ *ಅವುಗಳೆಂದರೆ ಕೃಷಿಯ ವಿಸ್ತರಣೆ, ತಂತ್ರಜ್ಞಾನ ಮತ್ತು ನೀರಾವರಿ ಸೌಲಭ್ಯ, ಕಾರ್ಮಿಕ ವರ್ಗ, ಅಧಿಕ ಉತ್ಪಾದನೆ, ಅಧಿಕ ಉತ್ಪಾದನೆಯನ್ನು ಸಂಗ್ರಹಿಸುವುದು, ಅಧಿಕ ಉತ್ಪಾದನೆ ಯನ್ನು ಸಂಗ್ರಹಿಸಲು ಸಂಸ್ಥೆಗಳ ರಚನೆ ಮತ್ತು ಆಡಳಿತ ವ್ಯವಸ್ಥೆ.*

ರಾಬರ್ಟ್ ಮ್ಯಾಕಾಡೆಮ್‌ರವರು *೫೯ ಸ್ಥಿರವಾದ ವ್ಯಾಪಾರ, ಕುಶಲಕರ್ಮಿಗಳು ಮತ್ತು ವ್ಯಾಪಾರಿಗಳು, ಸ್ಥಿರವಾಗಿ ನೆಲೆಸುವುದು, ವೃತ್ತಿಯಲ್ಲಿ ವೈಶಿಷ್ಟತೆ, ವ್ಯಾಪಾರ ಮಾರ್ಗಗಳು ನಗರಗಳ ಹುಟ್ಟು ಮತ್ತು ಬೆಳವಣಿಗೆಗೆ ಇತ್ಯಾದಿ ಹಂತಗಳಲ್ಲಿ ಕಾರ್ಯ ನಿರ್ವಹಿಸುತ್ತವೆಂದು ಅಭಿಪ್ರಾಯ ಪಟ್ಟಿದ್ದಾರೆ.

ಈ ಮೇಲೆ ತಿಳಿಸಿದ ಅಂಶಗಳಲ್ಲೆಲ್ಲ ಬಹಳ ಮುಖ್ಯ ವಾದವುಗಳೆಂದರೆ ಕೃಷಿಯ ವಿಸ್ತರಣೆ ಮತ್ತು ಅಧಿಕ ಉತ್ಪಾದನೆ, ಬಲಿಷ್ಠ ಆಡಳಿತ ರಚನೆ, ನದಿ ಅಥವಾ ಸಮುದ್ರದ ಅಥವಾ ನೀರಿನ ಸಾಮೀಪ್ಯ, ಕುಶಲಕರ್ಮಿಗಳ-ಮತ್ತು ವ್ಯಾಪಾರಿಗಳ ಇರುವಿಕೆ, ವ್ಯಾಪಾರ ಮತ್ತು ವಾಣಿಜ್ಯ ಮತ್ತು ಕೊನೆಯದಾಗಿ ಧಾರ್ಮಿಕ ಸಿದ್ಧಾಂತ. ಈ ಎಲ್ಲಾ ಕಾರಣಗಳನ್ನು ಅಥವಾ ಅಂಶಗಳನ್ನು ಕಳಿಕಟ್ಟೆಯ ನಗರೀಕರಣದ ಪ್ರಕ್ರಿಯೆಯಲ್ಲಿ ಸ್ಪಷ್ಟವಾಗಿ ಕಾಣ ಬಹುದು.

**ಇಡೀ ನಗರೀಕರಣದ ಪ್ರಕ್ರಿಯೆಗಳಲ್ಲೊಂದಾದ ಪ್ರಾಥಮಿಕ ನಗರೀಕರಣದಲ್ಲಿ ಪಟ್ಟಣಗಳ ಹುಟ್ಟುವಿಕೆ ಅಥವಾ ಬೆಳವಣಿಗೆಯು ಆಂತರಿಕ ಅಥವಾ ಸ್ಥಳೀಯ ಅಭಿವೃದ್ಧಿಯಿಂದಾಗುತ್ತದೆ. *೬೦ ಆಂತರಿಕ ಅಭಿವೃದ್ಧಿಯೆಂದರೆ ಒಂದು ಸ್ಥಳದ ಮಣ್ಣಿನ ಫಲವತ್ತತೆ ಮತ್ತು ನೀರಾವರಿ ವ್ಯವಸ್ಥೆಗಳಿಂದ ಅಲ್ಲಿಯ ಆರ್ಥಿಕ ಮತ್ತು ಸಾಮಾಜಿಕ ಜೀವನದ ಪ್ರಗತಿ. ವಿ. ಗಾರ್ಡನ್ ಸೈಲ್ಡ್‌ರವರು *೬೧ ಮೆಸಪೊಟೋಮಿಯಾದ ನಗರೀಕರಣಕ್ಕೆ ಅಲ್ಲಿಯ ಭೂಮಿಯ ಫಲವತ್ತತೆಯೇ ಕಾರಣವೆಂದಿದ್ದಾರೆ. ಕಳಿಕಟ್ಟೆಯೂ ಆಳುವ ಅರಸರ ಗಮನವನ್ನು ಸೆಳೆಯಿತು. ಇದರಿಂದಾಗಿ ಇದು ಮೊದಲು ಹೊಯ್ಸಳರ ಆಡಳಿತ ಕೇಂದ್ರವಾಗಿ ನಂತರ ಧಾರ್ಮಿಕ ಕೇಂದ್ರವಾಗಿ ಮಾರ್ಪಟ್ಟಿತು.**

ಆರ್ಥಿಕ ಸಂಪನ್ಮೂಲಗಳನ್ನು ಸಂಗ್ರಹಿಸುವಲ್ಲಿ ಮತ್ತು ವಿತರಿಸುವಲ್ಲಿ ಧಾರ್ಮಿಕ ಸಿದ್ಧಾಂತಗಳು ಅತ್ಯಂತ ಪ್ರಮುಖ ಪಾತ್ರ ವಹಿಸಿದವು. *೬೨ ಧಾರ್ಮಿಕ ಕೇಂದ್ರಗಳು ತಮ್ಮದೇ ಆದ ಉಗ್ರಾಣಗಳನ್ನು ಮತ್ತು ದಾಖಲೆಗಳನ್ನು ಹೊಂದಿದ್ದವು. ಕಳಿಕಟ್ಟೆಯಲ್ಲಿ ಹೊರಗಿನ ಆಡಳಿತ ಹೇರುವುದರೊಂದಿಗೆ ಆಡಳಿತವರ್ಗವು ಅಲ್ಲಿ ದೇವಾಲಯಗಳನ್ನು ಮತ್ತು ಕೆರೆಗಳನ್ನು ಕಟ್ಟಲು ಮುಂದಾಯಿತು. ಈ ಕ್ರಮದಿಂದಾಗಿ ಒಂದು ಕಡೆ ರಾಜ್ಯದ ಆದಾಯ ಹೆಚ್ಚಾಗತೊಡಗಿತು. ಮತ್ತೊಂದೆಡೆ ಧಾರ್ಮಿಕ ಕೇಂದ್ರಗಳು ದಾನ ಮತ್ತು ಭಕ್ತಿಯ ರೂಪದಲ್ಲಿ, ಉತ್ಪಾದನಾ ಕೇಂದ್ರಗಳಿಂದ ಅಧಿಕ ಉತ್ಪತ್ತಿಯನ್ನು ಸಂಗ್ರಹಿಸಲಾರಂಭಿಸಿದವು. ಕ್ರಿ.ಶ. ೧೧೨೯ ಮತ್ತು ೧೨೨೭ರ ನಡುವೆ ಕಳಿಕಟ್ಟೆಯಲ್ಲಿ ಕೆಲವು ಹೊಸ ದೇವಾಲಯಗಳನ್ನು ಕಟ್ಟಲಾಯಿತು. ಅವುಗಳೆಂದರೆ ಸಿಂಗೇಶ್ವರ *೬೩ ಕಲಿಗೇಶ್ವರ, *೬೪ ಬೆಟ್ಟದ ಕಲಿಗೇಶ್ವರ *೬೫ ಜಗತೀಶ್ವರ, *೬೬ ನೀಲೇಶ್ವರ *೬೭ ಕಮ್ಮಟೇಶ್ವರ *೬೮ ಮತ್ತು ಚನ್ನಕೇಶವ *೬೯ ಇವುಗಳಲ್ಲಿ ಕೆಲವು ಈಗಲೂ ಸುಸ್ಥಿತಿಯಲ್ಲಿವೆ. ನೀಲೇಶ್ವರ ಮತ್ತು ಜಗತೀಶ್ವರ *೭೦ ದೇವಾಲಯಗಳಲ್ಲಿ ದೇವರ ಭಂಡಾರವನ್ನು ಸ್ಥಾಪಿಸಲಾಯಿತು. ಕಾಲಕ್ರಮೇಣ ಇಂತಹ ಧಾರ್ಮಿಕ ಸಂಸ್ಥೆಗಳು ಆಡಳಿತ ಮತ್ತು ಪುರೋಹಿತಶಾಹಿ ವರ್ಗಗಳ ಹಿಡಿತಕ್ಕೊಳಪಟ್ಟವು. ಅಂತಿಮವಾಗಿ ಇಂತಹ ಸಂಸ್ಥೆಗಳು ಮಠಾಧೀಶರ ಅಧಿಪತ್ಯಕ್ಕೊಳಗಾಗಿ ಆ ಮಠಾಧೀಶರು ಅಥವಾ ಸ್ಥಾನಿಕರು ಇಡೀ ದೇವಾಲಯದ ಸ್ಥಿರ ಮತ್ತು ಚರ ಆಸ್ತಿಗಳ ಮಾಲೀಕರಾದರು. ಇಂತಹ ಬೆಳವಣಿಗೆಗಳು ಮಧ್ಯಯುಗೀನ ಕಾಲದ ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿ ತೀವ್ರ ಬದಲಾವಣೆಗಳನ್ನು ಉಂಟುಮಾಡಿದವು. ಇದಲ್ಲದೆ ದೇವಾಲಯಗಳಲ್ಲಿ ನಾನಾ ಬಗೆಯ ಪೂಜಾವಿಧಾನಗಳಾಗಿ ಅಂಗಭೋಗ, ರಂಗಭೋಗ, ನೈವೇದ್ಯ, ಚೈತ್ರ, ಪವಿತ್ರ, ಬ್ರಾಹ್ಮಣರ ಮತ್ತು ಅತಿಥಿ ಅಭ್ಯಾಗತರ ಆಹಾರ, ನಂದಾದೀವಿಗೆ ಇತ್ಯಾದಿಗಳು ಅಡಕಗೊಂಡವು. ಸರಳ ಪೂಜಾ ವಿಧಾನಗಳ ಬದಲು ಹೆಚ್ಚು ಆದಾಯವನ್ನು ತರುವಂತಹ ಪೂಜಾ ವಿಧಾನಗಳು ಹುಟ್ಟಿಕೊಂಡವು. ಇದರ ಜೊತೆಗೆ ದೇವಾಲಯ ಸಂಕೀರ್ಣಗಳು ಸಹ ಹುಟ್ಟಿಕೊಂಡವು. ಪರಿವಾರ ದೇವತೆಗಳಿಗೂ ಸಹ ದೇವಾಲಯದಲ್ಲಿ ಪ್ರತ್ಯೇಕ ಗರ್ಭಗುಡಿಗಳನ್ನು ನಿರ್ಮಿಸಲಾಯಿತು. ಇದರಿಂದಾಗಿ ಪುರೋಹಿತ ವರ್ಗಕ್ಕೆ ಹೆಚ್ಚು ಪ್ರಮಾಣದಲ್ಲಿ ಉದ್ಯೋಗಾವಕಾಶ ದೊರೆತು, ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಉತ್ತಮಗೊಳ್ಳಲಾರಂಭಿಸಿದವು. ಇದರಿಂದ ಮತ್ತಷ್ಟು ಪೂಜಾವಿಧಾನಗಳು ಬೆಳೆದು ಭೂಮಿ, ಧವಸಧಾನ್ಯ ಮತ್ತು ನಗದು ರೂಪದಲ್ಲಿ ಆದಾಯ ಹೆಚ್ಚಿತು. ಇಂತಹ ಕಾರ್ಯಾಚರಣೆಗಳು ಕಳಿಕಟ್ಟೆಯಲ್ಲಿ ಸಾಕಷ್ಟು ಪ್ರಮಾಣದ ವಸ್ತು ವಿನಿಮಯಕ್ಕೆ ಪ್ರೋತ್ಸಾಹ ನೀಡಿತು. ಈ ವಸ್ತು ವಿನಿಮಯವೇ ವ್ಯಾಪಾರ ಅಥವಾ ವಾಣಿಜ್ಯ. ಈಗಲೂ ಸಹ ಕಳಿಕಟ್ಟೆಯಲ್ಲಿ ಮೂರು ತ್ರಿಕೂಟ ದೇವಾಲಯಗಳು ಸುಸ್ಥಿತಿಯಲ್ಲಿವೆ. ಹೊಯ್ಸಳರ ಪ್ರಸಿದ್ಧ ಶಿಲ್ಪಿ ದಾಸೋಜ *೭೧ ಇಲ್ಲಿಯ ಜಗತೀಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದಂತೆ ಕಂಡು ಬರುತ್ತದೆ. ಮೇಲಾಗಿ ಶೃಂಗೇರಿಮಠದ ಅಧಿಪತಿ ಶಂಕರ ಭಾರತೀಯವರು ಇಲ್ಲಿ ಸ್ವಲ್ಪ ಕಾಲ ನೆಲೆಸಿದ್ದರೆಂದು ೧೫ನೇ ಶತಮಾನದ ಶಾಸನವೊಂದು *೭೨ ತಿಳಿಸುತ್ತದೆ. ಇದರಿಂದಾಗಿ ಕಳಿಕಟ್ಟೆಯು ಒಂದು ಧಾರ್ಮಿಕ ಕೇಂದ್ರವಾಗಿದ್ದು ''ದೇವಾಲಯ ನಗರೀಕರಣದ'' ಅಂಶಗಳನ್ನು ಹೊಂದಿತ್ತೆಂದು ಕಂಡು ಬರುತ್ತದೆ.

ನದಿಯ, ಸಮುದ್ರದ ಅಥವಾ ನೀರಿನ ಸಾಮೀಪ್ಯವು ನಗರೀಕರಣದ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ,

ಎಂಬುದಕ್ಕೆ ಉದಾಹರಣೆ (ಚಾಲುಕ್ಯರ ರಾಜಧಾನಿ ಬಾದಾಮಿ ಹೀಗಿಲ್ಲದಿದ್ದುದೂ ಗಮನಾರ್ಹ), ಎಂದರೆ ಹೊಯ್ಸಳರ ಪ್ರಮುಖ ರಾಜಧಾನಿಗಳಲ್ಲಿ ಒಂದಾದ ಒಂದು ಕೆರೆಯ ಪಕ್ಕದಲ್ಲಿದ್ದ ದೋರಸಮುದ್ರವಾಗಿದೆ. ಈ ರಾಜಧಾನಿ ದೋರಸಮುದ್ರವು ಮೊದಲು ಗ್ರಾಮವಾಗಿದ್ದು ನಂತರ ಆಡಳಿತ ಕೇಂದ್ರವಾಯಿತು. *೭೩ ಇದೇ ರೀತಿ ಕಳಿಕಟ್ಟೆಯು ಮೂರು ತೂಬುಗಳುಳ್ಳ, ಸಾಕಷ್ಟು ಭೂಮಿಗೆ ನೀರೊದಗಿಸುವ ಒಂದು ದೊಡ್ಡ ಕೆರೆಯ ಬದಿಯಲ್ಲಿದೆ. ಈ ಕಾರಣಕ್ಕಾಗಿಯೇ ಇದನ್ನು ೯ನೇ ಶತಮಾನದಲ್ಲಿ ಆಸಂಧಿನಾಡಿನ ಶ್ರೀಮುತ್ತರನಿಗೆ ಕಲ್ನಾಡಾಗಿ ನೀಡಿದ್ದಿರಬಹುದು.

ಈಗಾಗಲೇ ಹೇಳಿರುವಂತೆ ಕಳಿಕಟ್ಟೆಯಲ್ಲಿ ಕುಶಲಕರ್ಮಿಗಳ ಮತ್ತು ವ್ಯಾಪಾರೀ ವರ್ಗಗಳ ಉಪಸ್ಥಿತಿಯು ಮತ್ತೊಂದು ನಗರೀಕರಣಕ್ಕೆ ಪುಷ್ಟಿ ನೀಡುವ ಅಂಶವಾಗಿದೆ. ಕಳಿಕಟ್ಟೆಯ ವ್ಯಾಪಾರದ ಚಟುವಟಿಕೆಗಳನ್ನು ಇಲ್ಲಿಯ ಶಾಸನಗಳಿಂದ ಅರಿಯಬಹುದು. ಶಾಸನಗಳಲ್ಲಿ ಕಂಡು ಬರುವ ಕೆಲವು ಪದಗಳಾದ ಗಾಣದೆರೆ, ಮಗ್ಗದೆರೆ, ಜೊತೆಗೆ ಶ್ರೀಮನ್ಮಹಾವಡ್ಡವ್ಯವಹಾರಿ ಹೊಂನ್ನಚ್ಚಸೆಟ್ಟಿ, ಪೇಟೆಯ ಬೊಂಮ್ಮಯ್ಯ ಮತ್ತು ಪಟ್ಟಣಸ್ವಾಮಿ ಲಕ್ಕಿಸೆಟ್ಟಿ - ಇವು ಸ್ಪಷ್ಟವಾಗಿ ವ್ಯಾಪಾರದ ಚಟುವಟಿಕೆಗಳನ್ನು ತಿಳಿಸುತ್ತವೆ. ಸಾಮಾನ್ಯವಾಗಿ ಹೊಯ್ಸಳರ ಕಾಲದಲ್ಲಿ ಮಹಾವಡ್ಡವ್ಯವಹಾರಿಗಳು ಆಯಾತ ಮತ್ತು ನಿರ್ಯಾತದ ವ್ಯಾಪಾರದಲ್ಲಿ ಭಾಗವಹಿಸುತ್ತಿದ್ದರು. ಕಳಿಕಟ್ಟೆಯ ಕೆಲವು ವ್ಯಾಪಾರ ಸಂಘಗಳಾದ ಜೇಡಗೊತ್ತಳಿ, ಜಗತಿಸಮೂಹ ಅಥವಾ ಜಗತಿಗೊತ್ತಳಿ, ತೆಲ್ಲಿಗರು ಮತ್ತು ಅರವತ್ತು ಮಾನಸ ಏಕ್ಕಟಿಗರು- ಇಲ್ಲಿಯ ವಾಣಿಜ್ಯ ಚಟುವಟಿಕೆಗಳ ಬಗ್ಗೆ ಹೆಚ್ಚು ಪುಷ್ಟಿ ನೀಡುತ್ತವೆ. ಈಗಾಗಲೇ ಹೇಳಿರುವಂತೆ ಮುಖ್ಯವಾಗಿ ಕಳಿಕಟ್ಟೆಯು ಹೊಯ್ಸಳರ ಕಾಲದ ಒಂದು ದಕ್ಷಿಣದ ಪ್ರಮುಖ ವ್ಯಾಪಾರ ಮಾರ್ಗದಲ್ಲಿತ್ತು ಎಂಬುದು ಗಮನಾರ್ಹ. *೭೪

ಪಟ್ಟಣಗಳ ಉಗಮಕ್ಕೆ ಕೇವಲ ಅಧಿಕ ಉತ್ಪಾದನೆ ಮತ್ತು ವ್ಯಾಪಾರ ಸಂಘಗಳೇ ಕಾರಣವಲ್ಲ; ಜೊತೆಗೆ ವ್ಯಾಪಾರ ಮಾರ್ಗಗಳು ಕೂಡ. ಇವು ವ್ಯಾಪಾರದ ಕುಸಿತ, ಸ್ಥಳದ ಆರ್ಥಿಕ ಅಸಮ ತೋಲನ ತಡೆಯಲು, ಆಂತರಿಕ ಹಾಗೂ ಬಾಹ್ಯ ವ್ಯಾಪಾರ ಚಟು ವಟಿಕೆಗಳನ್ನು ನಿರ್ವಹಿಸಲು ಅತ್ಯಮೂಲ್ಯವಾದುವು. ಅಂತೇ ಹೊಯ್ಸಳರು ಪ್ರಾಮುಖ್ಯತೆಗೆ ಬಂದುದು, ಅಂದಿನ ರಾಜಕೀಯ ಅಸ್ಥಿರತೆಯ ಜೊತೆಗೆ ಅವರ ಸ್ಥಳವಾದ ಶಶಕಪುರ ಅಥವಾ ಅಂಗಡಿಯು ವ್ಯಾಪಾರ ಮಾರ್ಗದಲ್ಲಿದ್ದುದರಿಂದ. *೭೫ ಕಳಿಕಟ್ಟೆಯ ಶಾಸನಗಳು ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವ ಸೂಚನೆಯನ್ನು ನೀಡುವುದಿಲ್ಲ. ಆದರೆ ಒಂದು ಮಿತಿಯಲ್ಲಿ ಇದನ್ನು ಅರ್ಥ ಮಾಡಿಕೊಳ್ಳಬಹುದು.

ನಗರೀಕರಣದ ಅಂಶಗಳನ್ನು ಕಳಿಕಟ್ಟೆಗೆ ಅನ್ವಯಿಸಿ ಇದು ಹೇಗೆ ಕಲ್ನಾಡಿನಿಂದ ಒಂದು ಆಡಳಿತ ಕೇಂದ್ರ, ನಂತರ ಧಾರ್ಮಿಕ ಕೇಂದ್ರವಾಯಿತೆಂಬುದನ್ನು ಇಲ್ಲಿ ಸಾದರಗೊಳಿಸಲಾಗಿದೆ. ಅಂದರೆ ಕಳಿಕಟ್ಟೆಯು ಚಟೋಪಾಧ್ಯಾಯರು ಭಾವಿಸುವಂತೆ ಒಂದು ಹಳ್ಳಿಯಾಗಿರದೆ ಅದು ಮಧ್ಯಯುಗೀನ ಕಾಲದ ಪಟ್ಟಣವಾಗಿ ತ್ತೆಂಬುದನ್ನು ಶಾಸನಾಧಾರಗಳಿಂದ ಮಂಡಿಸಲಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಹನುಮನಾಯಕ: 'ಕಳಿಕಟ್ಟೆಯ ಶಾಸನಗಳು- ಒಂದು ಅಧ್ಯಯನ', ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಂಡಿಸಿದ ಪ್ರಬಂಧ (ಬೆಂಗಳೂರು, ೧೯೯೨, ಅಪ್ರಕಟಿತ).

*೨. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ಅರಸೀಕೆರೆ ಸಂಖ್ಯೆ ೪೦ರಿಂದ ೫೪, ಸಂಪುಟ ೧೫, ಅರಸೀಕೆರೆ ಸಂಖ್ಯೆ ೨೧೫ ಮತ್ತು ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ಸ್, ೧೯೩೭, ಅ ಸಂಖ್ಯೆ ೪

*೩. ಅದೇ, ಸಂಪುಟ ೧೫, ೧೯೪೩ ಅ. ಸಂಖ್ಯೆ ೨೧೫

*೪. ಅದೇ, ಸಂಪುಟ ೫, ಅ. ೪೧

*೫. ಬ್ರಜುದುಲಾಲ್ ಚಟ್ಟೋಪಾಧ್ಯಾಯ: ಆಸ್‌ಪೆಕ್ಟ್ಸ್ ಆಫ್ ರೂರಲ್ ಸೆಟಲ್‌ಮೆಂಟ್ಸ್ ಎಂಡ್ ರೂರಲ್ ಸೊಸೈಟಿ ಇನ್ ಅರ್ಲಿ ಮೆಡಿವಲ್ ಇಂಡಿಯಾ, (ನ್ಯೂಡೆಲ್ಲಿ, ೧೯೯೦), ಪುಟಗಳು ೯೩-೧೨೪

*೬. ಅದೇ., ಪುಟ ೧೦೦

*೭. ಬಿ. ಲೂಯಿಸ್ ರೈಸ್: ಮೈಸೂರ್ ಎಂಡ್ ಕೂರ್ಗ್ ಫ್ರಮ್ ಇನ್ಸ್‌ಕ್ರಿಪ್ಷನ್ಸ್, (ನ್ಯೂಡೆಲ್ಲಿ, ೧೯೮೬), ಪುಟ ೪೮

*೮. ಜೆ.ಡಿ. ಎಮ್. ಡೆರೆಟ್ : ದಿ ಹೊಯ್ಸಳಾಸ್, ಎ ಮಿಡಿವಲ್ ಇಂಡಿಯನ್ ರಾಯಲ್ ಫ್ಯಾಮಿಲಿ, (ಆಕ್ಸ್‌ಫರ್ಡ್, ೧೯೫೭), ಪುಟ ೨೧

*೯. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ಅ. ೪೧

*೧೦. ಅದೇ.,

*೧೧. ಅದೇ., ಸಂಖ್ಯೆ ೪೫

*೧೨. ಅದೇ., ಸಂಖ್ಯೆ ೪೮

*೧೩. ಅದೇ., ಸಂಖ್ಯೆ ೪೦

*೧೪. ಅದೇ., ಸಂಖ್ಯೆ ೪೬

*೧೫. ಅದೇ., ಸಂಖ್ಯೆ ೪೫

*೧೬. ವಿಜಯ್ ಕುಮಾರ್ ಠಾಕೂರ್: ಅರ್ಬನೈಜೇಶನ್ ಇನ್ ಏನ್ಶಿಯಂಟ್ ಇಂಡಿಯಾ, (ನ್ಯೂಡೆಲ್ಲಿ, ೧೯೮೧), ಪುಟಗಳು ೪೮-೬೧

*೧೭. ಡೆರೆಟ್ : ಪೂರ್ವೋಕ್ತ, ಪುಟ ೧೪, ಎಸ್. ಗುರುರಾಜಚಾರ್: ಸಮ್ ಆಸ್‌ಪೆಕ್ಟ್ಸ್ ಆಫ್ ಎಕಾನಮಿಕ್ ಅಂಡ್ ಸೋಶಿಯಲ್ ಲೈಫ್ ಇನ್ ಕರ್ನಾಟಕ, (ಕ್ರಿ.ಶ. ೧೦೦೦-೧೩೦೦), (ಮೈಸೂರು, ೧೯೭೪), ಪುಟ ೧೨೯

*೧೮. ಎಪಿಗ್ರಾಫಿಯ ಕರ್ನಾಟಕ, ಸಂಪುಟ. ೫, ಅ. ೪೫

*೧೯. ಅದೇ

*೨೦. ಅದೇ., ಸಂಖ್ಯೆ ೫೨

*೨೧. ಅದೇ., ಸಂಖ್ಯೆ ೪೨

*೨೨. ಅದೇ., ಸಂಖ್ಯೆ ೫೫

*೨೩ ಅದೇ., ಸಂಖ್ಯೆ ೪೮

*೨೪. ಅದೇ., ಸಂಖ್ಯೆ ೫೫

*೨೫. ಅದೇ., ಸಂಕ್ಯೆ ೪೮

*೨೬. ಅದೇ., ಸಂಖ್ಯೆ ೪೦

*೨೭. ಜಿ.ಆರ್. ಕುಪ್ಪುಸ್ವಾಮಿ: ಎಕಾನಾಮಿಕ್ ಕಂಡೀಶನ್ಸ್ ಇನ್ ಕರ್ನಾಟಕ, (ಕ್ರಿ. ಶ. ೯೭೩-೧೩೩೬) (ಧಾರವಾಡ, ೧೯೭೫), ಪುಟ ೧೦೫

*೨೮. ಎಪಿಗ್ರಾಫಿಯ ಕರ್ನಾಟಕ, ಸಂ. ೫, ಸಂಖ್ಯೆ ೪೯

*೨೯. ಚಟ್ಟೋಪಾಧ್ಯಾಯ: ಪೂರ್ವೋಕ್ತ, ಪುಟ ೧೦೭

*೩೦. ವಿ ಗಾರ್ಡನ್ ಸ್ಟೈಲ್ಡ್: ಮ್ಯಾನ್ ಮೇಕ್ಸ್ ಹಿಮ್‌ಸೆಲ್ಫ್(೧೯೩೬), ದಿ ಅರ್ಬನ್ ರೆವಲ್ಯೂಶನ್ ಟೌನ್ ಪ್ಲಾನಿಂಗ್ ರೆವ್ಯೂ, ವಾಲ್ಯೂಂ ೨೧ (೧೯೫೦) ಪುಟಗಳು ೩-೧೭, ವಿ.ಕೆ. ಠಾಕೂರ್ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ; ಪೂರ್ವೋಕ್ತ, ಪುಟಗಳು ೫-೨೧

*೩೧. ಅ. ಅಪ್ಪಾದೊರೈ: ಎಕಾನಮಿಕ್ ಕಂಡೀಶನ್ಸ್ ಇನ್ ಸದರನ್ ಇಂಡಿಯಾ, ಸಂಪುಟ. ೧ (ಕ್ರಿ. ಶ. ೧೦೦೦-೧೫೦೦) ಸೆಕೆಂಡ್ ಎಡಿಶನ್, (ಮದ್ರಾಸ್, ೧೯೯೦), ಪುಟಗಳು ೫-೨೧

*೩೨. ಕುಪ್ಪುಸ್ವಾಮಿ : ಪೂರ್ವೋಕ್ತ, ಪುಟ ೯೫

*೩೩. ಜಿ.ಎಸ್. ದೀಕ್ಷಿತ್: ಲೋಕಲ್ ಸೆಲ್ಫ್-ಗೌರ್ನಮೆಂಟ್ ಇನ್ ಮೆಡಿವಲ್ ಕರ್ನಾಟಕ, (ಧಾರವಾಡ, ೧೯೬೪), ಪುಟಗಳು ೧೪೦-೧೪೧

*೩೪ ಅದೇ., ಪುಟ ೧೪೦

*೩೫. ಎಪಿಗ್ರಾಫಿಯ ಕರ್ನಾಟಕ, ಸಂಪುಟ ೫, ಅ. ೪೮

*೩೬. ಅದೇ.

*೩೭ ಅಪ್ಪಾದೊರೈ: ಪೂರ್ವೋಕ್ತ, ಪುಟ. ೩೪೮, ಠಾಕೂರ್: ಪೂರ್ವೋಕ್ತ, ಪುಟಗಳು ೨೧-೨೨

*೩೮. ದೀಕ್ಷಿತ್: ಪೂರ್ವೋಕ್ತ, ಪುಟಗಳು ೧೫೨-೩

*೩೯. ಅದೇ., ಪುಟ ೧೪೫

*೪೦. ಚಟ್ಟೋಪಾಧ್ಯಾಯ: ಪೂರ್ವೋಕ್ತ, ಪುಟ ೧೦೨

*೪೧. ಕನ್ನಡ ನಿಘಂಟು- ಸಂಪುಟ ೩., ಕನ್ನಡ ಸಾಹಿತ್ಯ ಪರಿಷತ್ತು, (ಬೆಂಗಳೂರು, ೧೯೭೭)

*೪೨. ಚಟ್ಟೋಪಾಧ್ಯಾಯ: ಪೂರ್ವೋಕ್ತ, ಪುಟ ೧೦೨

*೪೩. ಎಪಿಗ್ರಾಫಿಯ ಕರ್ನಾಟಕ, ಸಂಪುಟ ೫, ಅ. ೭೯

*೪೪. ಅದೇ., ಸಂಖ್ಯೆ ೮೨

*೪೫. ಅದೇ. ಸಂಖ್ಯೆ ೫೫

*೪೬. ಡೆರೆಟ್: ಪೂರ್ವೋಕ್ತ, ಪುಟ ೬೨

*೪೭. ಎಪಿಗ್ರಾಫಿಯ ಕರ್ನಾಟಕ, ಸಂಪುಟ. ೫, ಅ. ೪೨

*೪೮. ಅದೇ., ಸಂಖ್ಯೆ ೪೮

*೪೯. ಅದೇ., ಸಂಖ್ಯೆ ೪೦

*೫೦. ಅದೇ., ಸಂಖ್ಯೆ ೪೬

*೫೧. ಚಟ್ಟೋಪಾಧ್ಯಾಯ : ಪೂರ್ವೋಕ್ತ, ಪುಟ ೧೧೩

*೫೨. ಎಪಿಗ್ರಾಫಿಯ ಕರ್ನಾಟಕ, ಸಂಪುಟ. ೫, ಅ. ೪೯

*೫೩. ಅದೇ., ಸಂಖ್ಯೆ ೨೨.

*೫೪. ಅದೇ., ಸಂಖ್ಯೆ ೮೨

*೫೫. ಅದೇ., ಸಂಖ್ಯೆ ೧೦೮
*೫೬. ಅಪ್ಪಾದೊರೈ: ಪೂರ್ವೋಕ್ತ, ಪುಟಗಳು ೩೩೮-೩೪೩
*೫೭. ಠಾಕೂರ್: ಪೂರ್ವೋಕ್ತ, ಪುಟಗಳು ೪೮-೬೧
*೫೮. ಆರ್. ಚಂಪಕಲಕ್ಷ್ಮಿ: ಟ್ರೇಡ್, ಐಡಿಯಾಲಜಿ ಅಂಡ್ ಅರ್ಬನೈಜೇಶನ್, ಸೌತ್ ಇಂಡಿಯಾ, ಕ್ರಿ. ಪೂ. ೩೦೦ ರಿಂದ ಕ್ರಿ. ಶ. ೧೩೦೦ (ನ್ಯೂಡೆಲ್ಲಿ, ೧೯೯೬), ಪುಟ ೩
*೫೯. ರಾಬರ್ಟ್ ಮ್ಯಾಕಾಡಮ್: ಎವಲ್ಯೂಶನ್ ಆಫ್ ಅರ್ಬನ್ ಸೊಸೈಟಿ, ಅರ್ಲಿ ಮೆಸಪೊಟೋಮಿಯ ಅಂಡ್ ಪ್ರಿ-ಹಿಸ್ಪಾನಿಕ್ ಮೆಕ್ಸಿಕೋ, ಅಲ್ಡೈನ್, (ಚಿಕಾಗೋ, ೧೯೬೫) - ೧೨೬-೨೭, ಚಂಪಕಲಕ್ಷ್ಮಿ: ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ, ಪೂರ್ವೋಕ್ತ, ಪುಟ ೪
*೬೦. ರಿಚರ್ಡ್ ಬಾಷಮ್: ಅರ್ಬನ್ ಅಂಥ್ರೋ ಪಾಲಜಿ, ಚಂಪಕಲಕ್ಷ್ಮಿ: ಪುಸ್ತಕದಲ್ಲಿ ಉಲ್ಲೇಖಿಸಲಾಗಿದೆ, ಪೂರ್ವೋಕ್ತ, ಪುಟ ೫.
*೬೧. ವಿ ಗಾರ್ಡ್‌ನ್ ಸ್ಯಲ್ಡ್: ವಾಟ್ ಹ್ಯಾಪನ್ಡ್ ಇನ್ ಹಿಸ್ಟರಿ, (ಪೆಂಗ್ವಿನ್, ನ್ಯೂಯಾರ್ಕ್, ೧೯೪೨), ಪುಟಗಳು ೭೮-೮೦
*೬೨. ಆ್ಯಡಂ: ಪೂರ್ವೋಕ್ತ, ಚಂಪಕಲಕ್ಷ್ಮಿ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ, ಪೂರ್ವೋಕ್ತ, ಪುಟ ೭
*೬೩. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ಅ. ೪೧
*೬೪. ಅದೇ., ಸಂಖ್ಯೆ ೫೫
*೬೫. ಅದೇ., ಸಂಖ್ಯೆ ೪೫
*೬೬. ಅದೇ., ಸಂಖ್ಯೆ ೫೨
*೬೭. ಅದೇ., ಸಂಖ್ಯೆ ೪೬
*೬೮. ಅದೇ., ಸಂಖ್ಯೆ ೪೨
*೬೯. ಮೈಸೂರ್ ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, ೧೯೩೭, ಎ.ಕೆ. ೫
*೭೦. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ಅ. ೫೦
*೭೧. ಅದೇ., ಸಂಖ್ಯೆ ೪೭
*೭೨. ಎಸ್. ಶೆಟ್ಟಾರ್: ದಿ ಹೊಯ್ಸಳ ಟೆಂಪಲ್ಸ್, (ಧಾರವಾಡ, ೧೯೯೨), ಪುಟಗಳು ೯೯-೧೦೦
*೭೩. ಮೈಸೂರ್ ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, ೧೯೩೭, ಎ.ಕೆ. ೩
*೭೪. ಡೆರೆಟ್: ಪೂರ್ವೋಕ್ತ, ಪುಟಗಳು ೩೪-೫
*೭೫. ಅದೇ., ಪುಟ ೧೪, ಗುರುರಾಜಾಚಾರ್: ಪೂರ್ವೋಕ್ತ, ಪುಟ ೧೨೯

ಬಿ. ಎಸ್. ರಾಮಭಟ್ಟ*

# ಕೆಳದಿ ಅರಸರ ಕಾಲದ ಸಂಗೀತ ಮತ್ತು ನೃತ್ಯ ಪರಂಪರೆ

ಕೆಳದಿ ಸಂಸ್ಥಾನ ಮಲೆನಾಡಿನಲ್ಲಿ ಹುಟ್ಟಿ ೨೬೩ ವರ್ಷಗಳ ಕಾಲ ಪ್ರಗತಿ ಸಾಧಿಸಿ ಇತಿಹಾಸದಲ್ಲಿ ಸೇರಿಹೋದ ಸಂಸ್ಥಾನ. ಇವರ ಆಡಳಿತ ಕಾಲದಲ್ಲಿ ಭಾಷೆ ಮತ್ತು ವಿವಿಧ ಕಲೆಗಳು ಸಮೃದ್ಧವಾಗಿ ಬೆಳೆಯಿತು. ರಸಿಕರಾದ ಅರಸರು ಸಾಹಿತ್ಯದೊಂದಿಗೆ ಸಂಗೀತ ಮತ್ತು ನೃತ್ಯಕ್ಕೆ ವಿಪುಲವಾಗಿ ಪ್ರೋತ್ಸಾಹ ನೀಡಿದರು, ಬೆಳೆಸಿದರು. ಈ ಸಂಸ್ಥಾನ ಕಾಲದಲ್ಲಿ ಸಂಗೀತವನ್ನು ಕರಗತ ಮಾಡಿಕೊಂಡ ವಿದ್ವಾಂಸರು ಇದನ್ನು ಇತರ ಕಡೆಗಳಲ್ಲಿಯೂ ಪ್ರಸಾರ ಮಾಡಿರುವ ಸಾಧ್ಯತೆಯಿದೆ.

ಹಿನ್ನೆಲೆ : ಕೆಳದಿ ಸಂಸ್ಥಾನ ಹಾಗೂ ಮಲೆನಾಡಿಗೆ ಸಂಗೀತ ಕ್ಷೇತ್ರದಲ್ಲಿ ಪ್ರಾಚೀನವಾದ ಹಿನ್ನೆಲೆಯಿದೆ. ಇದು ಹಂತಹಂತವಾಗಿ ಬೆಳೆದು ಬಂದಿರುವ ಕಲೆ. ಕ್ರಿ.ಶ. ೫ನೆಯ ಶತಮಾನದ ಕದಂಬ ಶಾಂತಿವರ್ಮನ ತಾಳಗುಂದ ಶಾಸನದಲ್ಲಿ*೧ ಬನವಾಸಿಯ ಮನೆ ಮನೆಗಳಲ್ಲಿ ಇಂಪಾಗಿ ಗಾನ ಕೇಳಿಬರುತ್ತಿದ್ದ ಸಂಗತಿ; ಶಿವಮೊಗ್ಗಾ ಸನಿಹದ ತುಂಗಾತೀರದ ಕುರುವದಲ್ಲಿ ಕ್ರಿ. ಶ. ೫-೬ನೇ ಶತಮಾನದಲ್ಲಿದ್ದನೆನ್ನಲಾದ ಮತಂಗನ (ಇವನ ಆಶ್ರಮವಿದ್ದ ನೆಲೆ ವಟಬೈದನ ಹಳ್ಳಿ ಎಂಬುದು ಕುರುವ ಶಾಸನೋಕ್ತ*೨) ಬೃಹದ್ದೇಶಿ ಗ್ರಂಥದಲ್ಲಿ ರಾಗಗಳ ನಿರೂಪಣೆ (ಶಿಲಪ್ಪದಿಕಾರಂ ನಲ್ಲಿಯೂ ಪ್ರಸ್ತಾಪಗೊಂಡಿದೆ; ಕುರುವದ ೧೦ನೆಯ ಶತಮಾನದ ಕಾಳಾಮುಖರ ಶಾಸನೋಕ್ತ ಮತಂಗ ಇವನೆಯೆ ಎಂದು ಶೋಧಿಸ ಬೇಕಿದೆ); ಗಂಗ ಶಿವಮಾರನ (ಹೊಂಬುಂಜದ ಶಾಸನೋಕ್ತ) 'ಗಜಾಷ್ಟಕ'ದಲ್ಲಿ ಹೇಳಿರುವ ಮಹಿಳೆಯರ ಸಮೂಹಗಾನದ ಸಂಗತಿ; ಶಿವಮೊಗ್ಗಾ ಜಿಲ್ಲೆಯ ಸ್ಥಳನಾಮಗಳಾದ ವೇಣುಪುರ, ಬಿದಿರೂರು, ಕೊಳಲಹಳ್ಳಿ, ಗೆಜ್ಜೇನಹಳ್ಳಿ, ಜಾಗಟಗಾರು, ತಾಳಗುಂದ ಇತ್ಯಾದಿಗಳು; ಸಹ್ಯಾದ್ರಿಖಂಡದ ತುಂಗಭದ್ರಾ ಮಹಾತ್ಮ್ಯಯಲ್ಲಿ ಪ್ರಸ್ತಾಪಿತ ೨೭ ರಾಗ ಮತ್ತು ಅವುಗಳ ಲಕ್ಷಣಗಳು ಕುಪಟೂರಿನ ಶಾಸನದಲ್ಲಿ*೩ ಜನರ ಸಂಗೀತ ಪ್ರಿಯತೆಯ ಬಗ್ಗೆ ಉಕ್ತವಾಗಿರುವ ಸಾಲು; ೧೧ನೇ ಶತಮಾನದಲ್ಲಿ ಆಳುತ್ತಿದ್ದ ಹೊಂಬುಜದ ವೀರಶಾಂತರನ ಸಂಗೀತ ಪರಿಣತಿ*೪; ಶಿವಮೊಗ್ಗದ ಮಂಡಳಿಯನ್ನಾಳುತ್ತಿದ್ದ ಗಂಗರ ಭುಜಬಲಗಂಗನ ರಾಣಿ ಶಾಸನೋಕ್ತ*೫ ಬಾಚಲದೇವಿಯ ಸಂಗೀತ ನೈಪುಣ್ಯ; ೧೦ನೇ ಶತಮಾನದ ಶಾಸನೋಕ್ತ, ಬಂದಳಿಕೆಯ ಬಸದಿಯ ಜಿನಮುನಿ ಸಮ್ಮುಖ ಸಂಗೀತಗೋಷ್ಠಿ*೬; ಕ್ರಿ. ಶ. ೧೧ನೇ ಶತಮಾನದ ಚಾಲುಕ್ಯರ ಬಳ್ಳಿಗಾವೆಯ ಶಾಸನದಲ್ಲಿ ಉಕ್ತವಾದ ಸಂಗೀತ-ವಾದ್ಯ ವೃತ್ತಿ*೭; ಹಾಗೂ ಅಲ್ಲಿನ ಮಹಾವಿದ್ಯಾಲಯ ದಲ್ಲಿ ಕಥಕ ಗಾಯಕರಿಗೆ ನೀಡುತ್ತಿದ್ದ ಶಿಕ್ಷಣ*೮; ಯಕ್ಷಗಾನ ಸಂಬಂಧದ ಮತಂಗನ ನೃತ್ಯಕೃತಿ ಜಕ್ಕಣಿ*೯ ಹಾಗೂ ಇದನ್ನು ಸಂಸ್ಕರಿಸಿ ಸಾಂಗಗೊಳಿಸಿದ ಕೆಳದಿ ಅರಸರ ಪ್ರಯತ್ನ; ಬಳ್ಳಿಗಾವೆಯ ಅಲ್ಲಮಪ್ರಭುವು, ಮೃದಂಗವಾದನ ನೈಪುಣ್ಯದಿಂದ ಮಾಯೆಯನ್ನು ಆಡಿಸಿದ ರೀತಿ*೧೦; ಪುರಂದರದಾಸರೂ ತೀರ್ಥಹಳ್ಳಿ ಪ್ರಾಂತ್ಯದವರೆಂಬ ಕಪಟರಾಳ ಕೃಷ್ಣರಾಯರ*೧೧ ಹಾಗೂ ಆದ್ಯರಾಮಾಚಾರ್ಯರ*೧೨ವಾದ ಇತ್ಯಾದಿಗಳು ಈ ಶಿವಮೊಗ್ಗ ಜಿಲ್ಲೆಗಿರುವ ಸಂಗೀತದ ಪ್ರಾಚೀನ ಹಿನ್ನೆಲೆಯನ್ನು ಕುರಿತು ಹೇಳುವಂತಿವೆ.

## ಸಂಗೀತ

ಕೆಳದಿಯ ಅರಸು ಹಿರಿಯ ವೆಂಕಟಪ್ಪನಾಯಕ ೧೫೮೩-೧೬೩೦)ನನ್ನು ಸರಸಸಂಗೀತಲೋಲ, ಎಂದು ಕೆಳದಿ ನೃಪ ವಿಜಯದಲ್ಲಿ ಹೇಳಿದೆ. *೧೩ ಇವನು ತನ್ನ ಆಸ್ಥಾನಕವಿ ತಿರುಮಲ ಭಟ್ಟನಿಂದ 'ಗೀತಗೌರಿ' ಎಂಬ ಸಂಸ್ಕೃತ ಗ್ರಂಥವನ್ನು ಬರೆಸಿದ್ದಾನೆ.

ಹಿರಿಯ ಬಸಪ್ಪನಾಯಕ(೧೬೯೮-೧೭೧೫)ನನ್ನು 'ಬುಧನ್ ನೀತಿಜ್ಞಾನಂ ಅವಿವೈಣಿಕಾನ್' ಎಂದರೆ ವೀಣೆ ನುಡಿಸುವುದರಲ್ಲಿ ವಿದ್ವಾಂಸನೆಂದು ವೀರಶೈವಾನಂದ ಚಂದ್ರಿಕೆಯಲ್ಲಿ ಹೇಳಿದೆ. ಇವನು ಬರೆದ ಶಿವತತ್ವರತ್ನಾಕರದ ಒಂದನೆಯ ಕಲ್ಲೋಲದಲ್ಲಿ ಸಪ್ತಸ್ವರಗಳ ವಿವರಣೆಯಿದೆ. ಸಂಗೀತಶಾಸ್ತ್ರಕ್ಕೆ ಇದೊಂದು

* ನಿವೃತ್ತ ಉಪನ್ಯಾಸಕರು, ಸಂ. ೭೫, ಹೌಸಿಂಗ್‌ಬೋರ್ಡ್ ಕಾಲೋನಿ, ಮೇದರಕೇರಿ ರಸ್ತೆ, ವಿನೋಬನಗರ, ಶಿವಮೊಗ್ಗ - ೫೭೭ ೨೦೪

ಆಧಾರ ಗ್ರಂಥವೆನಿಸಿದೆ. ಇದೇ ಅರಸನ ಆಸ್ಥಾನಲ್ಲಿದ್ದನೆಂದು ಹೇಳಿರುವ ವೆಂಕಾಮಾತ್ಯನನ್ನು ''ಗಾಂಧರ್ವ ಕಲಾಧುರಂಧರ'' ಎಂದು ಕರೆದಿದೆ*೧೮. ವೆಂಕಟಪ್ಪನಾಯಕನ ಕಾಲದಲ್ಲಿ ಇಕ್ಕೇರಿಗೆ ಬಂದಿದ್ದ ಪ್ರವಾಸಿ ಪೆಟ್ರೋಡೆಲ್ಲೆವಾಲೆಯು ತಾನು ದೇವಾಲಯದಲ್ಲಿ ಸಂಗೀತ ಗೋಷ್ಠಿಯನ್ನು ನೋಡಿರುವುದಾಗಿ ಬರೆದಿದ್ದಾನೆ.

ಕೆಳದಿ ಅರಸರ ಕಾಲದಲ್ಲಿ ತಮಿಳುನಾಡು ಮತ್ತು ಇತರ ಕಡೆಗಳಿಂದ ಕೆಲವು ವೈದಿಕ ಕುಟುಂಬಗಳು ರಾಜ್ಯಕ್ಕೆ ಬಂದಿರುವಂತೆ ತಿಳಿಯುತ್ತದೆ. ಈ ಕುಟುಂಬಗಳಿಗೆ ಅರಸರು ಅಗ್ರಹಾರದಲ್ಲಿ ಜಮೀನನ್ನು ದಾನವಾಗಿ ನೀಡಿ ವೃತ್ತಿಯನ್ನು ಹಾಕಿಸಿ ಪೋಷಿಸಿದರು. ಶಾಸನಗಳಲ್ಲಿ ತಮಿಳುನಾಡಿನ ಕುಂಭಕೋಣೆಯ ಈಶ್ವರ ಭಟ್ಟರಿಗೆ*೧೫ ತಂಜಾವೂರಿನ ತಿಗಳ ವೆಂಕಟೇಶ್ವರ ಅವಧಾನಿಗಳಿಗೆ*೧೬ ಮಧುರೆಯ ಬ್ರಹ್ಮಣ್ಯಭಟ್ಟರಿಗೆ, ಗದುಗಿನ ಮಹಾಬಲಾರಾಧ್ಯರಿಗೆ ೧೭* ಮಳಿಯಖೇಡದ (ಮಾನ್ಯಖೇಟ) ಗಡ್ಡದ ಮಾಧವದಾಸರ ಆರಾಧ್ಯಭಟ್ಟರಿಗೆ*೧೮ ತೊಂಡ ಮಂಡಲದ ವೆಂಕಟಾವಧಾನಿಗಳಿಗೆ*೧೯ ಸತ್ಯಮಂಗಲ ರುದ್ರನಾರಾಯಣ ಶಾಸ್ತ್ರಿಗಳಿಗೆ ಆಂಧ್ರದ ಗೋದಾವರಿ ಗಂಗಾಧರಿ ಪಾರ್ವತಿನಾಥ ಭಟ್ಟರಿಗೆ*೨೦ ವೃತ್ತಿಯನ್ನು ನೀಡಿದ್ದಾರೆ. ಈ ಮನೆತನಗಳು ಸಂಗೀತವನ್ನು ಕಲಿತು ತಮ್ಮ ತಮ್ಮ ಪ್ರದೇಶಗಳಲ್ಲಿ ಪ್ರಸಾರ ಮಾಡಿರಬಹುದು. ಈ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ. ಕವಿ ಲಿಂಗಣ್ಣನ ದಕ್ಷಾಧ್ವರ ವಿಜಯದಲ್ಲಿ ''ವೀಣೆವಿಡಿದು, ಪ್ರವಾಳತುಂಬಿ, ಪದಮುಖಶಿಖೆಗಳನಾರೈದು, ತಂತ್ರಿಗಳಂ ತೀಡಿ ಸರಿಗಮಪದನಿಗಳೆಂಬ ಸಪ್ತ ಸ್ವರಗಳಂ ಕಳೆಯೇರಿಸಿ'' ಎಂದು ವೀಣೆಯನ್ನು ಕುರಿತು ಹೇಳಿದ್ದಾನೆ. ಹಾಗೆಯೇ ಈ ಕೃತಿಯಲ್ಲಿಯೂ ಹಿಂದೋಳ, ಮಾಳವ, ಕೌಶಿಕ ಮುಂತಾದ ಸ್ವರಗಳ ವಿವರಣೆಯಿದೆ. ಅರಸರ ಆಸ್ಥಾನದ ಅಪ್ಪಯ್ಯ ಮತ್ತು ವೆಂಕಕವಿಯು ಸ್ವತಃ ಹಾಡಬಲ್ಲ ಸಂಗೀತ ವಿದ್ವಾಂಸರೆಂದು ತಿಳಿಯುತ್ತದೆ. ''ಇವರು ದೇಶಕಾಲಪಾತ್ರವ ನೋಡಬೇಡ, ಕಾಷಾಯಾಂಬರ ಧಾರಣೆಬೇಡ, ಮೌನಬೇಡ, ಮಣಿ ಮಾಲಿಕೆ ಬೇಡ, ಧ್ಯಾನಬೇಡ. ಪಶುವಧೆಗಳು ಬೇಡ'' ಎಂದು ರಸವತ್ತಾಗಿ ಹಾಡಿದ್ದಾರೆ.*೨೧ ಈ ಕವಿಗಳ ಕಾಲದಲ್ಲಿ ''ಸುಮ್ಮನೆ ಬೀಸಿದರೆ ಬೀಳೋದೆ ಈ ಕಲ್ಲು। ನಾಗರ ಸ್ವರದಂತೆ ದನಿ ಎತ್ತಿ ಹಾಡಿದರೆ ಸುಮ್ಮನೆ ಬೀಳ್ವದು ಈ ಕಲ್ಲು'' ಎಂಬ ಜನಪದ ಹಾಡೊಂದು ಅಂದಿನ ಸಂಗೀತದ ಜನಪ್ರಿಯತೆಯನ್ನು ತೋರಿಸುತ್ತದೆ*೨೨.

ಕ್ರಿ.ಶ. ೧೬೨೮ರಲ್ಲಿ ಗೋವಿಂದದೀಕ್ಷಿತರು ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಪ್ರದೇಶದಲ್ಲಿ ಪ್ರವಾಸಮಾಡಿದರು. ಇವರು ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದರು. ಜಗನ್ನಾಥದಾಸರ ಶಿಷ್ಯರಾದ ಕರ್ಜಗಿ ವಿಠಲ ದಾಸರ ಪರಂಪರೆಯ ಭೀಮೇಶವಿಠಲ ಮತ್ತು ಶ್ರೀನಿವಾಸ ವಿಠಲ ಎಂಬುವರು ಹೊನ್ನಾಳಿಯಲ್ಲಿ ನೆಲಸಿ ದಾಸಸಾಹಿತ್ಯ ಮತ್ತು ಸಂಗೀತಕ್ಕೆ ಸೇವೆಸಲ್ಲಿಸಿದರು. *೨೩ ಹೀಗೆಯೇ ಮತ್ತೊಬ್ಬ ಹರಿದಾಸರು ಮತ್ತು ಸಂಗೀತಗಾರರಾದ ಗೋಪಾಲ ದಾಸರು ಕ್ರಿ.ಶ.೧೭೧೭ರಲ್ಲಿ ಮಲೆನಾಡಿನಲ್ಲಿ ಸಂಚರಿಸಿ ಅಲ್ಲಲ್ಲಿ ಗೋಷ್ಠಿಗಳಲ್ಲಿ ಹಾಡಿದರು.

## ನೃತ್ಯ

ಮಲೆನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ನೃತ್ಯವು ಒಂದು ಜನಪ್ರಿಯ ಕಲೆಯಾಗಿತ್ತು. ವಿಜಯನಗರ ಕಾಲದ ಆರಗದ ಕ್ರಿ. ಶ. ೧೪೬೪ರ ಶಾಸನದಲ್ಲಿ ಗೌತಮ ಗೋತ್ರದ ಸೋಮನ ಮಗನಾದ ಮಾಯಿಭಟ್ಟನನ್ನು ''ಭರತ ಶಾಸ್ತ್ರ ವಿಚಾರವಿತ್ ಸೋಮನಾತ್ಮಜೋ ಮಾಯಿಭಟ್ಟ'' ಎಂದು ಕರೆದಿದೆ. ಇವನು ಸುಪ್ರಸಿದ್ಧ ನೃತ್ಯ ಪಟುವಾಗಿದ್ದನು. *೨೪

ಕೆಳದಿ ಅರಸರ ಕಾಲದಲ್ಲಿಯೂ ನೃತ್ಯಕ್ಕೆ ಪ್ರೋತ್ಸಾಹವಿತ್ತು. ಇದು ಅಪಾರ ಜನಪ್ರಿಯತೆ ಗಳಿಸಿತ್ತು. ಅರಸರು ವಿದೇಶೀಯರು ತಮ್ಮ ಆಸ್ಥಾನಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ನೃತ್ಯವನ್ನು ಏರ್ಪಡಿಸುತ್ತಿದ್ದರು. ೨೫-೨-೧೬೩೭ರಲ್ಲಿ ಇಕ್ಕೇರಿ ಅರಮನೆಗೆ ಭೇಟಿ ನೀಡಿದ್ದ ಇಂಗ್ಲೆಂಡಿನ ಪ್ರವಾಸಿ ಪೀಟರ್‌ಮಂಡಿಯು ಅಂದ ಚೆಂದದ ಆಭರಣಗಳಿಂದ ಮತ್ತು ಹೂವುಗಳಿಂದ ಅಲಂಕರಿಸಿಕೊಂಡ ನೃತ್ಯಗಾತಿಯರು ರಾಜನ ಎದುರು ಅಸ್ಥಾನದಲ್ಲಿ ನರ್ತಿಸುತ್ತಿದ್ದರು ಎಂದು ಬರೆದಿದ್ದಾನೆ.*೨೫ ರಾಜನ ಆಸ್ಥಾನವಲ್ಲದೆ ದೇವರ ಉತ್ಸವ, ಅರಸನ ಪಟ್ಟಾಭಿಷೇಕ ಮುಂತಾದ ಸಮಾರಂಭದಲ್ಲಿ ದೇವದಾಸಿಯರು ಮತ್ತು ಬೆಲೆವೆಣ್ಣುಗಳು ನೃತ್ಯ ಮಾಡುತ್ತಿದ್ದರೆಂದು ಉಲ್ಲೇಖಿಸಿದ್ದಾನೆ. ಸೋಮಶೇಖರನಾಯಕನ ದರ್ಬಾರಿನಲ್ಲಿ ಪುಟ್ಟತಾಯಿ ಮತ್ತು ಜಂಬುಖಂಡಿ ಚೆನ್ನಿ ಎಂಬ ಪ್ರಸಿದ್ಧ ನೃತ್ಯಗಾತಿಯರಿದ್ದರು. *೨೬ ನರ್ತಕಿಯರು ಚಿನ್ನದ ನಡುಪಟ್ಟಿ, ಕಾಲುಬಳೆ, ಕಂಠಾಭರಣ, ಚಿನ್ನದ ಎಡೆಪಟ್ಟಿಕೆ ಧರಿಸುತ್ತಿದ್ದರು. ನವರತ್ನಗಳ ಹಾರವು ಥಳಥಳಿಸುತ್ತಿತ್ತು. ಈ ಆಭರಣಗಳೆಲ್ಲವೂ ದೇವದಾಸಿಯರ ಮನೆತನಕ್ಕೆ ರಾಜರು ಮೆಚ್ಚಿನೀಡಿದ ಬಹು ಮಾನವಾಗಿತ್ತು. ಇವರ ನೃತ್ಯವು ಮೋರಿಸ್ ನೃತ್ಯದಂತೆ ಮತ್ತು ಕೊಯಲಿಯಸ್ ರ್‍ಹೋಡಿ ಜಿನಸ್ ವರ್ಣಿಸಿರುವ ''ಬಿಬನಿ'' ನೃತ್ಯದಂತೆ ಇದ್ದವೆಂದು ಇಂಗ್ಲೆಂಡಿನ ಇನ್ನೊಬ್ಬ ಪ್ರವಾಸಿ ಬೆಲ್ಲಾವೆಲ್ಲಾ ಎಂಬುವನು ಹೇಳಿದ್ದಾನೆ. *೨೭ ಶಾಸ್ತ್ರೀಯವಲ್ಲದ ಹಲವಾರು ಜಾನಪದ ನೃತ್ಯಗಳು ಅರಸರ ಕಾಲದಲ್ಲಿ ಅಭಿನಯಿ ಸಲ್ಪಡುತ್ತಿತ್ತು. *೨೮

ಒಟ್ಟಿನಲ್ಲಿ ಸು. ಕ್ರಿ. ಶ. ೫ನೆಯ ಶತಮಾನದಿಂದ ಮುಂದೆ ಕೆಳದಿ ಅರಸರ ಕಾಲದವರೆಗೂ ಸಂಗೀತ ಮತ್ತು ನೃತ್ಯವು ಪರಂಪರಾಗತವಾಗಿ ಮುಂದುವರೆದು ಬಂದಿದೆ. ನಂತರವೂ ನಿರರ್ಗಳವಾಗಿ ಈ ಜಿಲ್ಲೆಯಲ್ಲಿ ಹರಿಯುತ್ತ ಬಂದಿದೆ. ಇದು ಒಂದು ಪಕ್ಷಿ ನೋಟವಷ್ಟೆ. ಇಲ್ಲಿನ ಸಂಗೀತ ಮತ್ತು ನೃತ್ಯ ಪರಂಪರೆಯ ಸಂಶೋಧನೆ ಹೆಚ್ಚು ನಡೆಯಬೇಕಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎ. ಕ. viii., ಶಿಕಾರಿಪುರ ೧೭೬, ತಾಳಗುಂದ, ಕ್ರಿ. ಶ. ಸು. ೪೫೦
*೨. ಅದೇ., ಹೊನ್ನಾಳಿ ೮, ಕುರುವ, ಕ್ರಿ. ಶ. ೧೨೨೮
*೩. ಅದೇ., ಸೊರಬ ೨೬೧, ಕುಪಟೂರು, ಕ್ರಿ. ಶ.?
*೪. ಅದೇ., ನಗರ ೪೮, ಪೊಂಬುಚ, ಕ್ರಿ. ಶ. ೧೧೧೦.
*೫. ಅದೇ., ಶಿವಮೊಗ್ಗ ೧೬, ಬನ್ನಿಕೆರೆ, ಕ್ರಿ. ಶ ೧೧೦೨.
*೬. ಅದೇ., ಸೊರಬ ೨೬೧, ಕುಪಟೂರು, ಕ್ರಿ. ಶ. ?
*೭. ಅದೇ., ಶಿಕಾರಿಪುರ ೧೦೬, ಬಳ್ಳಿಗಾವೆ, ಕ್ರಿ. ಶ. 1062.
*೮. ಅದೇ.; ಶಾಸನ.
*೯. ಸಾಹಿತ್ಯ ಭಾರತಿ, ಪು.೧೧೧
*೧೦. ಬನವಾಸಿ (ಗ್ರಂಥ), ಪು. ೧೨.
*೧೧. ಕಪಟರಾಳ್ ಕೃಷ್ಣರಾವ್: ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಮೈಸೂರು, ೧೯೭೦, ಪು. ೨೬೨
*೧೨. ಆದ್ಯರಾಮಾಚಾರ್ಯ: ದಾಸಶ್ರೇಷ್ಠ ಪುರಂದರ ದಾಸರು, ಪು. ೫೭
*೧೩. ಕೆಳದಿನೃಪವಿಜಯ., ಪು. ೩೦.
*೧೪. ಸಾ. ಶಿ. ಮರುಳಯ್ಯ: ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಪು. ೧೧೨.
*೧೫. ಕೆಳದಿ ವೆಂಕಟೇಶ ಜೋಯ್ಸ: ಕೆಳದಿ ಅರಸರ ಶಾಸನ ಸಂಪುಟ, ಪು. ೧೮೬.
*೧೬. ಅದೇ ಗ್ರಂಥ.
*೧೭. ಎ. ಕ.vii., ತೀರ್ಥಹಳ್ಳಿ ೫, ಕ್ರಿ. ಶ. ೧೨೦೪.
*೧೮. ಟಿಪ್ಪಣಿ ೧೫ ರಂತೆ.
*೧೯. ಎ. ಕ.vi., ಶೃಂಗೇರಿ ೧೧, ಕ್ರಿ.ಶ. ೧೬೫೨.
*೨೦. ಟಿಪ್ಪಣಿ ೧೫ರಂತೆ.
*೨೧. ಸಾ. ಶಿ. ಮರುಳಯ್ಯ : ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಪು.೨೪೮.
*೨೨. ಬಿ. ಆರ್. ನಾಗರತ್ನ: 'ಕೆಳದಿ ಅರಸರ ಕಾಲದ ಕಲೆಗಳು', ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ, ಪು. ೪೭೮
*೨೩. ಪುಂಡರೀಕ ವಿಠಲ, ಪು. ೭೧.
*೨೪. ಟಿಪ್ಪಣಿ ೧೭ರಂತೆ ೨೦೬, ಕ್ರಿ. ಶ. ೧೪೬೪.
*೨೫. ಪ್ರವಾಸಿ ಕಂಡ ಇಂಡಿಯ, ಪು. ೩೩೩-೩೩೪.
*೨೬. ಕೆಳದಿಪಾಲಿಟಿ. ಪು. ೪೨.
*೨೭. ಟಿಪ್ಪಣಿ ೨೫ ಪುಟ ೨೪೪.
*೨೮. ಇದೇ ಪುಟ ೨೪೬.

ತಮಿಳ್ ಸೆಲ್ವಿ*

# ಕವಿ ಕಂದರ್ಪ ಮತ್ತು ಬಾಳಚಂದ್ರ ಮುನಿ - ಒಂದು ಪರಿಶೀಲನೆ

ಕವಿಕಂದರ್ಪ ಮತ್ತು ಬಾಳಚಂದ್ರ ಮುನಿಯ ಬಗ್ಗೆ ಗಮನಿಸಬೇಕಾದ ಕೆಲವು ಮಹತ್ವದ ವಿಷಯಗಳು ಅರೆತಿಪ್ಪೂರಿನಲ್ಲಿರುವ ಶಾಸನಗಳಿಂದ ತಿಳಿದು ಬರುತ್ತವೆ. ಕನ್ನಡ - ಸಂಸ್ಕೃತ ಉಭಯ ಭಾಷಾ ಪಂಡಿತ ಕವಿ ಕಂದರ್ಪ ವಿರಚಿತ ಕ್ರಿ.ಶ. ೧೨೦೪ರ ಶಾಸನಗಳ*೧ ರೀತ್ಯಾ ಅವನಿಗೆ 'ಚತುರ್ಭಾಷಾ ಕವಿ ಚಕ್ರವರ್ತಿ' ಎಂಬ ಬಿರುದಿತ್ತು. ಇವನ ಕುರಿತ ಶಾಸನ ಸಾಲುಗಳಿವು :

ಪೇಟ್ಬನೊಲ್ಪು ಶಾಸನಮಂ ಪೀಯೂಷ ಸಮಸೂಕ್ತಿ
ಚಾತುರ್ಭಾಷಾ ಕವಿಚಕ್ರವರ್ತಿ ಕವಿ ಕಂದರ್ಪ
ವಿದ್ವಜ್ಜನ ಸಮ್ಮತ ಸ್ಫುಟ ಪದಾರ್ಥಾಳಂ ಕ್ರಿಯಾ ಸಂಕುಳ
ವಹಮಪ್ಪಂತಿರ ಪೇಟ್ಬನಿಂತೀ ಕವಿ ಕಂದರ್ಪ ಬುಧಾದೀಶ್ವರಂ*೨

ಇದರ ಪ್ರಕಾರ ಕವಿ ಕಂದರ್ಪನು ಕನ್ನಡ ಸಂಸ್ಕೃಗಳಲ್ಲದೆ ಇನ್ನೂ ಬೇರೆ ಎರಡು ಭಾಷೆಗಳಲ್ಲೂ ಪ್ರವೀಣನಾಗಿದ್ದ. ಆದರೆ ಆತನಿಗೆ 'ಕವಿಕಂದರ್ಪ', 'ಕವಿಚಕ್ರವರ್ತಿ' ಎಂಬ ಬಿರುದುಗಳನ್ನು ನೀಡಿದ್ದು ಯಾರು? ಆತನಿಂದ ರಚಿತವಾದ ಕೃತಿಗಳು ಯಾವುವು ಎಂಬುದು ತಿಳಿದಿಲ್ಲ. ನಂತರ ಮುಂದೆ ಬಂದ ಯಾವ ಕೃತಿಯಲ್ಲೂ ಆತನು ಉಕ್ತನಾಗಿಲ್ಲ. 'ಕವಿಚಕ್ರವರ್ತಿ' ಎಂಬ ಬಿರುದು ಗಳಿಸಿದ್ದ ಒಬ್ಬ ಕವಿ ಹೀಗೆ ನಗಣ್ಯನಾದುದು ಹೇಗೆ?

ಪ್ರಸ್ತುತ ಲೇಖನದ ವಿಷಯ ಈ ಕವಿಕಂದರ್ಪನು ಮಂಡ್ಯ ಜಿಲ್ಲೆ ಮದ್ದೂರು ತಾಲೂಕಿಗೆ ಸೇರಿದ ಅರೆತಿಪ್ಪೂರಿನವನೆಂದು ತಿಳಿಸುವುದು ಹಾಗೂ ಜೈನಧರ್ಮದ ಪ್ರಸಿದ್ಧ ಮುನಿಗಳಲ್ಲಿ ಒಬ್ಬನಾದ ಬಾಲಚಂದ್ರಯತಿ ಈ ಕವಿಕಂದರ್ಪನ ಮಗನೂ ಶಿಷ್ಯನೂ ಆಗಿದ್ದನೆಂದು ಹೇಳುವುದೇ ಆಗಿದೆ.

ಅರೆತಿಪ್ಪೂರಿನ ಒಂದು ಶಾಸನ ಕಂದರ್ಪ ಮತ್ತು ಬಾಳಚಂದ್ರ ಮುನಿಯ ಸಂಬಂಧವನ್ನು ತಿಳಿಸುವ ರೀತಿ ಇದು : **ಸ್ವಸ್ತಿ ವುಭಯ ಭಾಷಾ ಕವಿ ಚಕ್ರವರ್ತಿ ಕಂದರ್ಪ ದೇವರ ಮದವಳಿಗಿ ಸೊಂನ್ನಾದೇವಿಯರ ಮಗ ಕಾಣೂರ್ಗಣ ತಿಳಕನುಮಪ್ಪ ಬಾಳಚಂದ್ರ ದೇವರುಂ ತಂಮ ಗುರುಗಳಿಗೆ ಪರೋಕ್ಷವಾಗಿ ಮಾಡಿದ ಪ್ರತಿಷ್ಠೆ.** *೩

ಉಭಯ ಭಾಷಾ ಕವಿ ಚಕ್ರವರ್ತಿಯಾದ ಕಂದರ್ಪದೇವ ಮತ್ತು ಸೊಂನ್ನಾದೇವಿಯರ ಪುತ್ರ ಬಾಳಚಂದ್ರಮುನಿ, ಕಾಣೂರ್ಗಣಕ್ಕೆ ತಿಳಕಪ್ರಾಯನಾಗಿದ್ದ ಅವನು ತನ್ನ ಗುರುಗಳಿಗೆ ಪರೋಕ್ಷವಾಗಿ ಪ್ರತಿಷ್ಠಾಕಾರ್ಯ ಮಾಡಿದನೆಂಬುದು ಇಲ್ಲಿ ವಿದಿತ.

ಶಾಸನ ರೀತ್ಯಾ ಕವಿಕಂದರ್ಪ, ಸೊಂನ್ನಾದೇವಿಯರ ಮಗ ಬಾಳಚಂದ್ರನೆಂಬುದೇನೋ ಸರಿ. ಆದರೆ ಆ ಬಾಳಚಂದ್ರನ ಗುರು ಯಾರು? ಎಂಬ ಪ್ರಶ್ನೆಯೇಳುತ್ತದೆ. ಜೈನಧರ್ಮದಲ್ಲಿ ಸುತ-ಮಗ ಎಂದರೆ ಶಿಷ್ಯ ಎಂಬ ಅರ್ಥವೂ ಉಂಟು. ಶಾಸನದಲ್ಲಿ ಕವಿಕಂದರ್ಪನು ಬಾಲಚಂದ್ರನಿಗೆ ಗುರು ಎಂದಿದೆ. ಅಂತಾಗಿ ಕವಿ ಕಂದರ್ಪನು ಬಾಳಚಂದ್ರನಿಗೆ ತಂದೆ ಮತ್ತು ಗುರು ಎರಡೂ ಆಗಿದ್ದನು. ಬಾಲ್ಯದ ವಿದ್ಯಾಭ್ಯಾಸವನ್ನು ಬಾಲಚಂದ್ರ ತನ್ನ ತಂದೆಯಿಂದಲೇ ಕಲಿತಿದ್ದನು. ನಂತರ 'ನಯಕೀರ್ತಿ' ಈತನ ಗುರುವಾಗಿದ್ದನು. ಇಲ್ಲಿನ ಮತ್ತೊಂದು ಶಾಸನವು **ತಿಪ್ಪೂರ ಕವಿಕಂದರ್ಪ** ಎಂದು ಹೇಳುತ್ತಿರುವುದರಿಂದ ಅವನೂ ತಿಪ್ಪೂರಿನವನೇ ಎಂಬುದು ಸ್ಪಷ್ಟ. ಕವಿಕಂದರ್ಪ ನಿಧನ ಹೊಂದಿದ ನಂತರ ಆತನ ಸ್ಮರಣಾರ್ಥ ಬಾಳಚಂದ್ರ ಒಂದು ಜಿನಾಲಯವನ್ನು ನಿರ್ಮಿಸಿ, ಜಿನಮೂರ್ತಿಯೊಂದನ್ನು ಪ್ರತಿಷ್ಠಾಪಿಸಿದ್ದಾನೆ. ತಿಪ್ಪೂರಿನ ಜಿನಗುಡ್ಡದ ಮೇಲೆ ಹೊಂಡದ ಬಳಿ ಬಿದ್ದಿರುವ ಭಗ್ನಗೊಂಡ ಜಿನಬಿಂಬದ ಪೀಠದ ಮೇಲೆ ಮೇಲ್ಸೂಚಿತ ಶಾಸನವಿರುವುದರಿಂದ ಬಾಳಚಂದ್ರನೇ ಅದನ್ನೂ ಪ್ರತಿಷ್ಠಾಪಿಸಿದ್ದು ಎಂಬುದು ಖಚಿತ. ಕವಿಯ ಮೂಲಸ್ಥಳ ತಿಪ್ಪೂರು ಆಗಿರುವಲ್ಲಿ ಅಲ್ಲಿಯೆ ಪ್ರತಿಷ್ಠಾಪನೆ ಆಗಿರುವುದು, ತೀರ ಗಮನಾರ್ಹ.'ಶ್ರೀ ಕಂದರ್ಪ ಕಾವ್ಯಂ' ಎಂದಿರುವ ಕಳ್ಳಿಹಾಳು*೪ ಶಾಸನೋಕ್ತ ಹಾಗೂ ಬಹುಶಃ ಆ ಶಾಸನಕವಿ ತಿಪ್ಪೂರು ಶಾಸನೋಕ್ತ **ಕಂದರ್ಪ**, ಈ ಶಾಸನ ಹೇಳುತ್ತಿರುವ **ಕವಿ ಕಂದರ್ಪನೂ** ಒಬ್ಬನೇ ಕಂದರ್ಪನಿಗೆ ಅನ್ವಯವೆನಿಸುತ್ತದೆ.

ಕವಿಕಂದರ್ಪನು ಜೈನ ಕವಿಯಾಗಿದ್ದು ಜನ್ನನ (ಕ್ರಿ.ಶ. ಸು. ೧೨೦೦-೧೨೩೦) ಪತ್ನಿ ಲಕುಮಾದೇವಿಯ ಗುರುವೆಂದು

---

*. ಸಂಶೋಧನ ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂ.ವಿ.ವಿ. ಬೆಂಗಳೂರು - ೫೬೦ ೦೫೬

ಅನಂತನಾಥಪುರಾಣದಿಂದ ತಿಳಿಯುತ್ತದೆ. 'ಕಂದರ್ಪದೇವ'ನ ಹೆಸರಿರುವ ತಿಪ್ಪೂರಿನ ಎರಡೂ ಶಾಸನಗಳೂ ತೇದಿಯನ್ನೊಳಗೊಂಡಿಲ್ಲವಾದ್ದರಿಂದ ಈತನ ಕಾಲವನ್ನು ಲಿಪಿ ವಿನ್ಯಾಸದ ಆಧಾರದಿಂದ ೧೨-೧೩ನೇ ಶತಮಾನಕ್ಕಿಡಬಹುದು; ಮತ್ತು ಈ ಆಧಾರಗಳಿಂದ ಕವಿಕಂದರ್ಪನು ೧೩ನೇ ಶತಮಾನದವನೆನ್ನಬಹುದು. 'ಕರ್ನಾಟಕ ಕವಿಚರಿತೆ'ಕಾರರು ಮೂವರು ಬಾಲಚಂದ್ರರನ್ನು ಗುರುತಿಸಿದ್ದಾರೆ. ಕ್ರಿ. ಶ. ೧೧೮೧ರ ಸುಮಾರಿನ ಜೈನಕವಿ ಮೊದಲನೇ ಬಾಲಚಂದ್ರನು 'ಜಿನಸ್ತುತಿ'ಯ ಕರ್ತೃ ಹಾಗೂ 'ಪ್ರಾಭೃಕಕತ್ರಯ', 'ತತ್ವಾರ್ಥ', 'ಪರಮಾತ್ಮ ಪ್ರಕಾಶಿಕೆ' ಮೊದಲಾದ ಗ್ರಂಥಗಳ ವ್ಯಾಖ್ಯಾನ ಕರ್ತೃ. ಈತನ ಗುರು ಶ್ರವಣಬೆಳಗೊಳ ಶಾಸನದ ರೀತ್ಯಾ ಕ್ರಿ.ಶ. ೧೧೮೧ರ **ನಯಕೀರ್ತಿ***೫ ಈತನನ್ನು ***ಆಧ್ಯಾತ್ಮಿ ಬಾಳಚಂದ್ರ*** ಎಂದೂ ಕರೆಯುತ್ತಿದ್ದರು. ಶ್ರವಣಬೆಳಗೊಳದ ೪೫೬ನೇ ಶಾಸನದಲ್ಲಿ*೬ ಉಕ್ತನಾಗಿ ಕ್ರಿ. ಶ. ೧೨೮೨ ರಲ್ಲಿದ್ದ ***೨ನೇ ಬಾಲಚಂದ್ರ***ನು 'ಉದ್ಯೋಗಸಾರ' ಎಂಬ ಉಪಲಬ್ಧ ಕೃತಿಯ ಕರ್ತೃ ಎಂದು ಕವಿಚರಿತೆಯಲ್ಲಿದೆ.

ಕ್ರಿ.ಶ. ಸು. ೧೨೭೩ರಲ್ಲಿದ್ದ ***ಮೂರನೇ ಬಾಲಚಂದ್ರ***ನನ್ನು *ಬಾಳಚಂದ್ರ ಪಂಡಿತ* ಎಂದೂ ಕರೆಯುತ್ತಿದ್ದರು. ಈತ 'ದ್ರವ್ಯ ಸಂಗ್ರಹ ಸೂತ್ರ'ಕ್ಕೆ ಕರ್ನಾಟಕ ಟೀಕೆಯನ್ನೂ, 'ಪಂಚಪರಮೇಷ್ಠಿಗಳ ಬೊಲ್ಲಿ' ಯನ್ನೂ ರಚಿಸಿದ್ದಾನೆ. ಹೀಗೆಲ್ಲ ಇರುವಲ್ಲಿ ಈ ಮೂರೂ ಜನ ಬಾಲಚಂದ್ರರಲ್ಲಿ ತಿಪ್ಪೂರು ಶಾಸನ ಹೇಳುವ ಬಾಳಚಂದ್ರ ಯಾರು?

ಬಾಲಚಂದ್ರನ ತಂದೆ ಕವಿಕಂದರ್ಪನು ಕ್ರಿ. ಶ. ೧೨೦೪ ರಲ್ಲಿದ್ದನೆಂದು ಬೆಳಗಾವಿಯ ಶಾಸನಗಳು ತಿಳಿಸುವುದರಿಂದ ಸುಮಾರು ಅದೇ ಕಾಲದ ಸ್ವಲ್ಪ ಹಿಂದು-ಮುಂದಿನ ವರ್ಷಗಳಲ್ಲೇ ಬಾಲಚಂದ್ರನ ಕಾಲಾವಧಿಯು ಇರಬೇಕು. ಹೀಗೆನ್ನಲು ಮತ್ತೊಂದು ಆಧಾರ, ಹೊಯ್ಸಳರ 'ವೀರ ಬಲ್ಲಾಳ'ನ, ಕ್ರಿ.ಶ. ೧೧೭೩ - ೧೨೨೦, ಈ ಅವಧಿಯ ಆಳ್ವಿಕೆಯ ಕಾಲದ ಬಾಲಚಂದ್ರನನ್ನು ಗುರುತಿಸಬೇಕು. ಕ್ರಿ.ಶ. ೧೧೮೧ರ ಶ್ರವಣಬೆಳಗೊಳ ಶಾಸನವು ಹೆಸರಿಸುವ ಬಾಲಚಂದ್ರನೇ ಪ್ರಸ್ತುತ ಶಾಸನೋಕ್ತ ಬಾಲಚಂದ್ರನೂ ಹೌದು. ಈ ಮಾತಿಗೆ ಇನ್ನೊಂದು ಶಾಸನವೂ ಮುಂದಿನಂತೆ ಪುಷ್ಟಿ ಕೊಡುತ್ತದೆ.

*'... ಶಕ ೧೧೦೦ ಹೇಮಳಂಬಿ ಸಂವತ್ಸರದಲ್ಲಿ ವೀರಬಲ್ಲಾಳ ಹೊಯ್ಸಳ ದೇವ ರಾಜ್ಯಾಭ್ಯುದಯಾರ್ತ್ಥನ್ನಿಜ **ಗುರುಗಳಪ್ಪಧ್ಯಾತ್ಮಿ ಬಾಳಚಂದ್ರ** ದೇವರ ಕಾಲಂ ತೊಳೆದು ಧಾರಾಪೂರ್ವಕಂ ಬಿಟ್ಟ ಸೀಮೆ. ...* *೭

ತಿಪ್ಪೂರಿನ 'ಬಾಳಚಂದ್ರನ' ಉಲ್ಲೇಖವಿರುವ ಶಾಸನವೂ ವೀರಬಲ್ಲಾಳನ ಕಾಲದ್ದೇ ಆಗಿದೆ. ಕವಿಚರಿತ್ರೆಯೂ ಮೊದಲನೇ ಬಾಲಚಂದ್ರನನ್ನು 'ಆಧ್ಯಾತ್ಮಿ ಬಾಳಚಂದ್ರ'ನೆಂದಿದೆ. ಆಧ್ಯಾತ್ಮಿ ಬಾಳಚಂದ್ರನ ಉಲ್ಲೇಖವಿರುವ, ವೀರಬಲ್ಲಾಳನ ಕಾಲಾವಧಿಯ ಈ ಶಾಸನದ ಕಾಲ ಕ್ರಿ. ಶ. ೧೧೭೮. ಇದರಿಂದ ತಿಪ್ಪೂರಿನ ಶಾಸನ ಮತ್ತು ನಾಗಮಂಗಲ ಶಾಸನ*೮ ಹೇಳುತ್ತಿರುವ ಬಾಲಚಂದ್ರರಿಬ್ಬರೂ ಒಬ್ಬನೇ ಎಂಬುದು ನಿಶ್ಚಿತ.

ಉಳಿದ ಇಬ್ಬರು ಬಾಲಚಂದ್ರರು ವೀರಬಲ್ಲಾಳನ ಆಡಳಿತಾವಧಿಯ ನಂತರದವರು ಈ ಕಾರಣದಿಂದಲೂ ಒಂದನೇ ಬಾಲಚಂದ್ರನನ್ನು ನಾವು ಕವಿ ಕಂದರ್ಪನ ಮಗ/ಶಿಷ್ಯನೆಂದು ಗುರುತಿಸಬಹುದು. (ತಂದೆಯ ನಂತರ ನಯಕೀರ್ತಿ ಈತನ ಗುರು).

ಬಾಳಚಂದ್ರನಿಗೆ ಒಬ್ಬ ಮಗನಿದ್ದನೆಂದು ತಿಪ್ಪೂರಿನ ಶಾಸನ ತಿಳಿಸುತ್ತದೆ. ಈ ಶಾಸನ ತ್ರುಟಿತಗೊಂಡಿರುವುದರಿಂದ ಆತನ ಮಗನ ಹೆಸರು ಅಸ್ಪಷ್ಟವಾಗಿದೆ.

*'ತಿಪ್ಪೂರ ಕವಿಕಂದರ್ಪರ ಸಿಷ್ಯ ಬಾಳಚಂದ್ರ ದೇವರ ಮಕ್ಕಳು ಗುಂಮ.... ನು.... ಕಂದರ್ಪ....ನ ಮಕ್ಕಳು.....* *೯

ಇಲ್ಲಿ ತ್ರುಟಿತಗೊಂಡಿರುವ ಬಾಲಚಂದ್ರನ ಮಗನ ಹೆಸರು 'ಗುಂಮ....' ಎಂಬುದು ಬಹುಶಃ 'ಗುಂಮಟಣ್ಣ' ಇರಬಹುದೇ? ಎಂಬುದು ಪರಿಶೀಲನಾರ್ಹ. ಬಾಲಚಂದ್ರನಿಗೆ ಮಗನಿದ್ದ ವಿಷಯ ಬೇರ್‍ಯಾವ ಶಾಸನದಲ್ಲೂ ಇಲ್ಲವಾದ್ದರಿಂದ ಈ ಬಗ್ಗೆ ಖಚಿತವಾಗಿ ಹೇಳಲಾಗದಿದ್ದರೂ ಆತನಿಗೊಬ್ಬ ಮಗನಿದ್ದ ಅಂಶವೇ ಗಮನಾರ್ಹವಾಗಿದೆ. ಕವಿ ಕಂದರ್ಪ ಮತ್ತು ಬಾಲಚಂದ್ರರು ಶ್ರಾವಕ-ಸಂನ್ಯಾಸಿಗಳಾಗಿದ್ದರೆನ್ನುವುದರಲ್ಲಿಯೂ ಅನುಮಾನವಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಬಾಂಬೆ ಪ್ರೆಸಿಡೆನ್ಸಿಯ ಬೆಳಗಾವಿಯಲ್ಲಿ ಲಭ್ಯವಾದ ಈ ಶಾಸನಗಳು ಪ್ರಸ್ತುತ ಬ್ರಿಟಿಷ್ ಮ್ಯೂಸಿಯಂನಲ್ಲಿವೆ.
*೨. ಎಪಿಗ್ರಾಫಿಯಾ ಇಂಡಿಕಾ XIII., ಪು. ೧೫-೩೬
*೩. ಎ. ಕ.VII., ಪು. ೨೮೩
*೪. ಧಾರವಾಡ ಜಿಲ್ಲೆ ಹಾವೇರಿ ತಾಲ್ಲೂಕು ಕಳ್ಳಿಹಾಳಿನ ದುರ್ಗಾಪರಮೇಶ್ವರಿ ದೇಗುಲ ಬಳಿಯ ಶಾಸನ
*೫. ಎಪಿಗ್ರಾಫಿಯಾ ಕರ್ನಾಟಿಕ II., ಪು. ೩೮
*೬. ಅದೇ., ಪು. ೨೭೭
*೭. ಎಪಿಗ್ರಾಫಿಯಾ ಕರ್ನಾಟಿಕ VII., ಪು. ೨೦೦, ನಾಗಮಂಗಲ ೧೧೮
*೮. ನಾಗಮಂಗಲ ಮತ್ತು ತಿಪ್ಪೂರುಗಳೆರಡೂ ಮಂಡ್ಯ ಜಿಲ್ಲೆಯಲ್ಲಿರುವ ಸ್ಥಳಗಳೆಂಬುದೂ ಗಮನಾರ್ಹ.
*೯. ಎ. ಕ. VII., ಪು. ೨೮೦.

ಎಸ್. ವಿ. ಸುಜಾತ* ಡಾ॥ ಶ್ರೀನಿವಾಸ ಹಾವನೂರ**

# ಕರ್ನಾಟಕದ ಜೈನೀಯ ಅಧ್ಯಯನಕ್ಕೆ ಜೈನೇತರರ ಕೊಡುಗೆ

ಒಂದು ಮತಧರ್ಮದ ಚಾರಿತ್ರಿಕ ಅಧ್ಯಯನವನ್ನು ಆ ಮತದವರು ಕೈಗೊಳ್ಳುವುದು ಸಹಜವಾದದ್ದು. ಆದರೆ ಅನ್ಯಮತೀಯರು ಹಾಗೆ ಮಾಡಿದರೆ ಅದು ನಾಡಿನ ಸಂಸ್ಕೃತಿ ಸಂವರ್ಧನೆಗೆ ಪೋಷಕವಾಗುವುದು. ಕರ್ನಾಟಕದ ಜೈನೀಯ ಅಧ್ಯಯನವನ್ನು ಅತಿ ಹೆಚ್ಚಿನ ವ್ಯಾಪ್ತಿಯಲ್ಲಿ ಜೈನೇತರರು ಮಾಡಿರುವುದು ಕನ್ನಡನಾಡಿನ ವೈಶಿಷ್ಟ್ಯ ಹಾಗೂ ಹಿರಿಮೆ.

ಚರಿತ್ರೆಯ ದೃಷ್ಟಿಯಿಂದ ಈ ಅಧ್ಯಯನವನ್ನು *ಶಾಸನಗಳ ವ್ಯಾಸಂಗ, ಕವಿಗಳ ಕಾಲ, ದೇಶ ನಿರ್ಣಯ, ಧಾರ್ಮಿಕ ವಿವೇಚನೆ ಮತ್ತು ಶಿಲ್ಪಕಲಾ ವಿಚಾರ*, ಈ ನಾಲ್ಕು ನಿಟ್ಟಿನಲ್ಲಿ ಪರಿಗಣಿಸಬೇಕು. ಬಿ. ಎಲ್. ರೈಸ್ ಶಾಸನಗಳನ್ನು ಸಂಗ್ರಹಿಸತೊಡಗಿದ ಹಾಗೂ ರೆ॥ ಕಿಟ್ಟೆಲ್ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ ೧೮೭೪ನೆಯ ವರ್ಷದಿಂದ ಕನ್ನಡದಲ್ಲಿ ಜೈನೀಯ ಅಧ್ಯಯನ ಆರಂಭವಾಯಿತೆನ್ನಬೇಕು. ಅನಂತರ ಅಧ್ಯಯನದ ಆಕರಗಳ ಪ್ರಕಟಣೆ ಸಾಗಿಬಂದಿತು. ಆರ್. ನರಸಿಂಹಾಚಾರ್ಯರು 'ಕರ್ಣಾಟಕ ಕವಿ ಚರಿತೆ' ಯ ಮೂರು ಸಂಪುಟಗಳನ್ನು ಹೊರತಂದ ವರ್ಷದವರೆಗೆ (೧೯೦೭) ಇದರ ಮೊದಲ ಘಟ್ಟವೆಂದು ತಿಳಿಯಬೇಕು. ಕವಿಚರಿತೆಯ ಮೊದಲ ಸಂಪುಟದಲ್ಲಂತೂ ಜೈನಕವಿಗಳದೇ ಹೆಚ್ಚಳ.

ಇಲ್ಲಿಂದ ಮುಂದೆ ಈ ಆಕರಗಳನ್ನು ಆಧರಿಸಿದ ಅಧ್ಯಯನ ಮುಂದುವರೆಯಿತು. ಶಾಸನಗಳು ಸಂಗ್ರಹವಾದಂತೆ, ಅವುಗಳನ್ನು ಆಧರಿಸಿ ಜೈನಧರ್ಮವನ್ನು ಅನುಸರಿಸಿದ ಹಾಗೂ ಪ್ರೋತ್ಸಾಹ ನೀಡಿದ ರಾಜಮನೆತನಗಳ ಇತಿಹಾಸ ರಚನೆಯಲ್ಲಿ ಜೈನೇತರರ ಕೊಡುಗೆ ಗಮನಾರ್ಹವಾದುದಾಗಿದೆ. ತಲಕಾಡಿನ ಗಂಗರ ಬಗೆಗೆ ಕೆ. ಎಂ.ಕೃಷ್ಣರಾವ್, ಪಶ್ಚಿಮ ಗಂಗರ ಬಗೆಗೆ ಡಾ॥ಬಿ. ಷೇಕ್ಅಲಿ, ರಾಷ್ಟ್ರಕೂಟರ ಬಗ್ಗೆ ಡಾ॥ ಎ. ಎಸ್. ಅಳ್ತೇಕರ್ ಅವರು ವಿಸ್ತಾರವಾದ ಅಧ್ಯಯನ ನಡೆಸಿದ್ದಾರೆ. ಪ್ರಾದೇಶಿಕವಾಗಿ ಜೈನಧರ್ಮದ ಚರಿತ್ರೆ, ಪ್ರಭಾವ ಕುರಿತು ತುಳುನಾಡು ಮತ್ತು ದಕ್ಷಿಣಕನ್ನಡ ಜಿಲ್ಲೆಗಳ ವ್ಯಾಪ್ತಿಯಲ್ಲಿ ನಡೆದಿರುವ ಅಧ್ಯಯನ ಉಲ್ಲೇಖಾರ್ಹ. ಡಾ॥ ಕೆ. ಗುರುರಾಜಭಟ್ಟರು ತುಳುನಾಡಿನ ಬಸ್ತಿಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳನ್ನು ಕುರಿತು ಸುಮಾರು ೪೦ ಉಲ್ಲೇಖಗಳನ್ನು ನೀಡಿದ್ದಾರೆ. ಕೆ. ಜಿ. ವಸಂತಮಾಧವ ಅವರ ಹಲವಾರು ಲೇಖನಗಳಲ್ಲಿ ಜೈನಧರ್ಮದ ವಿವಿಧ ವಿಚಾರಗಳ ಅಭ್ಯಾಸ ಕಂಡುಬರುತ್ತದೆ.

೧೮೮೯ರಲ್ಲಿ ಬಿ. ಎಲ್. ರೈಸ್ ಅವರು ಶ್ರವಣಬೆಳ್ಗೊಳದ ೧೪೪ ಶಾಸನಗಳನ್ನು ಪ್ರತ್ಯೇಕ ಸಂಪುಟವಾಗಿ ಪ್ರಕಟಿಸಿದ್ದು, ೧೯೨೩ರಲ್ಲಿ ಆರ್.ನರಸಿಂಹಾಚಾರ್ಯರು ಅದನ್ನು ಮತ್ತೆ ಪ್ರಕಟಿಸಿದಾಗ ೫೦೦ ಶಾಸನಗಳನ್ನೊಳಗೊಂಡಿತ್ತು. ೧೯೭೩ರಲ್ಲಿ ಪ್ರಕಟಿಸಿದ ಮೂರನೇ ಆವೃತ್ತಿಯಲ್ಲಿ ೫೬೩ ಶಾಸನಗಳು ಸಂಗ್ರಹಗೊಂಡಿರುವುದೇ ಅಲ್ಲದೆ ಡಾ॥ ಬಾ. ರಾ. ಗೋಪಾಲ್ ಅವರು ಶ್ರವಣಬೆಳ್ಗೊಳದ ಬಸದಿಗಳು, ಅವುಗಳ ನಿರ್ಮಾಣ, ಉದ್ಧಾರಗಳಿಗೆ ಕಾರಣಕರ್ತರಾದ ಶ್ರೀಮಂತರು, ರಾಜವಂಶದವರ ಇತಿಹಾಸ, ಜೈನಮುನಿಗಳು, ಶ್ರಾವಕರು ಇವರ ಬಗ್ಗೆಯೂ ಬೆಳಕು ಚೆಲ್ಲುವ ಉಪಯುಕ್ತವಾದ ಹಾಗೂ ವಿಸ್ತಾರವಾದ ಪೀಠಿಕೆ ರಚಿಸಿದ್ದಾರೆ. ಇವಲ್ಲದೆ ಭಟ್ಕಳದ ಪಾರ್ಶ್ವನಾಥ ಬಸದಿ, ಶಾಸನಗಳಲ್ಲಿ ಕಂಡುಬರುವ ಕುಂದ ಕುಂದಾಚಾರ್ಯ, ಸಮಂತ ಭದ್ರ, ಭದ್ರಬಾಹು, ಚಾವುಂಡರಾಯರ ವಿಚಾರ, ಲಕ್ಷ್ಮೇಶ್ವರದ ಪರಿಚಯ ಮುಂತಾದ ಮಹತ್ವಪೂರ್ಣ ವಿಚಾರಗಳ ಬಗ್ಗೆ ಡಾ॥ ಬಾ. ರಾ. ಗೋಪಾಲ್ ಅವರು ಅಭ್ಯಾಸ ಮಾಡಿದ್ದಾರೆ. ಡಾ॥ ಪಿ. ಬಿ. ದೇಸಾಯಿ ಅವರ *Jainism In South India*, ಕೆ. ಜಿ. ಕುಂದಣಗಾರ ಅವರ Inscriptions In Northern Karnataka and Kolhapur *State* ಬಿ. ಎ. ಸಾಲೆತೊರೆ ಅವರ Medieval Jainism ಕರ್ನಾಟಕದ ಜೈನಧರ್ಮದ ಇತಿಹಾಸದ ವ್ಯಾಪಕ ಪರಿಚಯ ಮಾಡಿಕೊಡುತ್ತವೆ.

---

* ಪರವಾಗಿ: ಆಶ್ರಯ ಅಪಾರ್ಟ್‌ಮೆಂಟ್ಸ್, ೩೬, ವಿನಾಯಕ ಲೇಔಟ್, ೧ನೇ ಮೆಯಿನ್, ವಿಜಯನಗರ ಪಶ್ಚಿಮ, ಬೆಂಗಳೂರು - ೫೬೦ ೦೪೦

ಶಾಸನಗಳಲ್ಲಿ ಕಂಡುಬರುವ ಜೈನಮತ ಪಂಗಡಗಳು, ತತ್ತ್ವ, ರಾಜವಂಶಗಳು, ಪ್ರೋತ್ಸಾಹ, ಮುನಿಗಳ ತಪಸ್ಸು ಧರ್ಮ ಪ್ರಸಾರ, ಕೊನೆಗೆ ಅವನತಿ ಇವುಗಳ ಅಧ್ಯಯನದ ಮೂಲಕ ಕರ್ನಾಟಕದಲ್ಲಿ ಜೈನಧರ್ಮದ ವಿಸ್ತೃತ ಇತಿಹಾಸದ ಪರಿಚಯ ವನ್ನು ೧೯೬೬ರಲ್ಲಿ ಪ್ರಕಟವಾದ ತಮ್ಮ ''ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ''ದ ಮೂಲಕ ಮಾಡಿಕೊಟ್ಟವರು ಡಾ॥ ಎಂ. ಚಿದಾನಂದಮೂರ್ತಿ. ನಂತರವೂ ಮುಂದುವರೆದ ಅವರ ಸಂಶೋಧನೆಗಳ ಪರಿಣಾಮವಾಗಿ ಹಳೆಯಬೆಳ್ಗೊಳವೇ ಮೂಲ ಶ್ರವಣಬೆಳ್ಗೊಳ ಎಂದು ತಿಳಿದು ಬಂದಿತು. ಜಿನವಲ್ಲಭನ ಶಾಸನ, ಬುಕ್ಕನ ಶಾಸನ, ನಾಗಚಂದ್ರ ಕಟ್ಟಿಸಿದ ಬಸದಿ, ಶಾಸನಗಳಲ್ಲಿ ಕಂಡುಬರುವ ಪಂಪನ ಕಾವ್ಯಭಾಗಗಳು ಇತ್ಯಾದಿ ವಿಚಾರಗಳ ಬಗ್ಗೆ ಅಧ್ಯಯನ ನಡೆಸಿ ಹೊಸ ಅಂಶಗಳನ್ನು ಪ್ರಕಟಿಸಿರುವವರು ಡಾ॥ ಎಂ. ಎಂ. ಕಲುಬುರ್ಗಿ ಮತ್ತು ಡಾ॥ ಎಂ. ಚಿದಾನಂದ ಮೂರ್ತಿ. ೧೯೬೫ರಲ್ಲಿ ಪ್ರಕಟವಾದ ಎಸ್. ಶ್ರೀಕಂಠಶಾಸ್ತ್ರಿಗಳ ''ಹೊಯ್ಸಳ ವಾಸ್ತುಶಿಲ್ಪ'' ಕೃತಿಯಿಂದ ಶ್ರವಣಬೆಳ್ಗೊಳ, ಕಂಬದಹಳ್ಳಿ, ಬೆಳ್ಳೂರುಗಳ ಬಸದಿಗಳ ಶಿಲ್ಪಗಳ ವೈಶಿಷ್ಟ್ಯದ ಪರಿಚಯ ದೊರೆಯುತ್ತದೆ. ಕರ್ನಾಟಕದ ಜೈನಶಿಲ್ಪ, ಬಸದಿಗಳನ್ನು ಕುರಿತಂತೆ ಡಾ॥ ಅ. ಸುಂದರ, ಡಾ॥ ಎ. ವಿ. ನರಸಿಂಹಮೂರ್ತಿ ಅವರ ಅಧ್ಯಯನಗಳ ಜೊತೆಗೆ ೮೦ ಹಾಗೂ ೯೦ರ ದಶಕಗಳದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಗಳಲ್ಲಿ ಮಂಡಿತ ಪ್ರಬಂಧಗಳನ್ನೂ ಗಮನಿಸಿದರೆ, ಒಂದೊಂದು ಪ್ರದೇಶದ ಜೈನಶಾಸನಗಳು, ಬಸದಿಗಳ ಅಭ್ಯಾಸ ನಡೆದಿದ್ದು, ಅಲ್ಲಿಯೂ ಜೈನೇತರರ ಪಾತ್ರವಿದೆ ಎಂದು ತಿಳಿಯುತ್ತದೆ.

ಜೈನಸಾಹಿತ್ಯದ ಚರಿತ್ರೆಯಂತೆ, ಜೈನಕಾವ್ಯ, ಶಾಸ್ತ್ರಕೃತಿಗಳ ಸಂಪಾದನೆ, ಅಧ್ಯಯನ, ವಿಮರ್ಶೆ ಇವುಗಳಿಗೂ ಕನ್ನಡನಾಡಿನ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವಿದೆ. ಈ ಕ್ಷೇತ್ರದಲ್ಲಿ ಶ್ರಮಿಸಿದವರು ಹಾಗೂ ಮಹತ್ವದ ಕಾಣಿಕೆ ಕೊಟ್ಟವರು ಬಹುತೇಕ ಜೈನೇತರರೇ ಆಗಿದ್ದಾರೆ. ಅನೇಕ ಸಾಹಿತ್ಯಚರಿತ್ರಕಾರರು ಜೈನಯುಗ ಎಂದೇ ವರ್ಗೀಕರಣ ಮಾಡಿದ್ದಾರೆ. ಧರ್ಮವು ಕನ್ನಡಕಾವ್ಯಗಳ ರಚನೆಗೆ ಪ್ರೇರಕವಾದರೂ ಸಾಹಿತ್ಯದ, ಕಾವ್ಯಗಳ ಅಧ್ಯಯನಕ್ಕೆ ಕಟ್ಟು ಪಾಡಾಗಲಿಲ್ಲ. ಧಾರ್ಮಿಕ ಪ್ರೇರಣೆಯಿಂದ ರಚಿತವಾದ ಸಾಹಿತ್ಯ ಕೃತಿಗಳಲ್ಲಿ ಮತಧರ್ಮಗಳಿಗೆ ಸಂಬಂಧಿಸಿದ ವಿಷಯವೇ ಗಣನೀಯ ಪ್ರಮಾಣದಲ್ಲಿರುವುದರಿಂದ ಆ ವಿಷಯದಲ್ಲಿ ಸಾಕಷ್ಟು ಪರಿಶ್ರಮ ಇಲ್ಲದೆ ಆ ಕೃತಿಗಳ ಸಂಪಾದನೆ, ವಿಮರ್ಶೆ ಮಾಡುವುದು ಕಷ್ಟ. ಹೀಗಿರುವಾಗ ಈ ಹೆಚ್ಚಿನ ಹೊರೆ ಹೊತ್ತು ಶ್ರಮಿಸಿದವರಲ್ಲಿ ಬಹಳಷ್ಟು ವಿದ್ವಾಂಸರ ಕೊಡುಗೆ ಮೌಲಿಕವೆನಿಸುತ್ತದೆ.

ಈ ಕ್ಷೇತ್ರದಲ್ಲಿ ಮೊತ್ತಮೊದಲಿಗೆ ಕಾವ್ಯಕೃತಿಗಳನ್ನು ಪ್ರಕಟಿಸಿದವರು, ಮುಂದಿನ ಅಧ್ಯಯನಕ್ಕೆ ಬುನಾದಿ ಹಾಕಿದವರು ಒಂದು ವರ್ಗ - ೧೯ನೇ ಶ.ದ ಕೊನೆಯ ಭಾಗದಲ್ಲಿ ಮೈಸೂರಿನ ಎಂ. ಎ. ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್ ಅವರು ಕಾವ್ಯಮಂಜರಿ, ಕಾವ್ಯಕಲಾನಿಧಿ ಪತ್ರಿಕೆಗಳ ಮೂಲಕ, ಆನಂತರ ಕೃತಿರೂಪದಲ್ಲಿ ಪ್ರಕಟಿಸಿದ ಗದಾಯುದ್ಧ, ಮಲ್ಲಿನಾಥ ಪುರಾಣ, ಅರ್ಧನೇಮಿಪುರಾಣ, ಯಶೋಧರಚರಿತೆ ಮುಂತಾದವು.

ಎಂ. ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಉಗ್ರಾಣ ಮಂಗೇಶರಾವ್ ಮುಂತಾದ ಹಿರಿಯರು ಸ್ವಂತ ಪರಿಶ್ರಮದಿಂದ ಸಂಶೋಧನೆ, ಅಧ್ಯಯನಕಾರ್ಯ ನಡೆಸಿದರು. ಗೋವಿಂದ ಪೈ ಅವರು ಕರ್ನಾಟಕಕ್ಕೆ ಜೈನಧರ್ಮದ ಆಗಮನವನ್ನು ಕುರಿತು, ಶ್ರುತಕೇವಲಿ ಭದ್ರಬಾಹುವಿನ ಜೊತೆ ಶ್ರವಣಬೆಳ್ಗೊಳಕ್ಕೆ ಬಂದವನು ಮೌರ್ಯವಂಶ ಸ್ಥಾಪಕ ಚಂದ್ರಗುಪ್ತನಲ್ಲ, ಅವನ ಮೊಮ್ಮಗ ಅಶೋಕನ, ಮೊಮ್ಮಗ ಸಂಪ್ರತಿ ಚಂದ್ರಗುಪ್ತ ಎಂದು ಸಿದ್ಧ ಮಾಡಿದ್ದಾರೆ. ಅರಿಕೇಸರಿಯ ವಂಶದ ಚರಿತ್ರೆ ರಚಿಸಿದರಲ್ಲದೆ ಪಂಪರಾಮಾಯಣದ ಪದ್ಯಗಳನ್ನು ಬಿಜಾಪುರದ ಶಾಸನಗಳಲ್ಲಿ, ನಾಗಚಂದ್ರನ ಕಾವ್ಯಗಳಲ್ಲಿ ಉಲ್ಲೇಖಿತರಾದ ಜೈನಯತಿಗಳ ಹೆಸರುಗಳನ್ನು ಶ್ರವಣಬೆಳ್ಗೊಳದ ಶಾಸನಗಳಲ್ಲಿ, ಮಲ್ಲಿನಾಥ ಪುರಾಣದ ನಾಯಕನೊಡನೆ ಚಾಲುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಸಮೀಕರಣಗಳನ್ನು ಗುರುತಿಸಿದ್ದಾರೆ. ತುಳುನಾಡಿಗೆ ಜೈನಧರ್ಮದ ಆಗಮನ, ಕಾರ್ಕಳದ ಗುಮ್ಮಟಬೆಟ್ಟದ ಶಾಸನಗಳು, ಮಹಾವೀರನ ಪರಿನಿರ್ವಾಣದ ಕಾಲ, ಇವುಗಳ ಬಗ್ಗೆ ವಿಚಾರ ಮಾಡಿ ನಿರ್ಣಯಗಳನ್ನು ಮಂಡಿಸಿದ್ದಾರೆ. ಮುಳಿಯ ತಿಮ್ಮಪ್ಪಯ್ಯ ಅವರ ''ನಾಡೋಜ ಪಂಪ'' ಆಗ ಇದ್ದ ಸೀಮಿತ ಸಾಮಗ್ರಿಗಳಲ್ಲೇ ಆಳವಾದ ಅಧ್ಯಯನದ ಫಲವಾಗಿದ್ದು ಇಂದಿಗೂ ಮೌಲಿಕವೂ ಆಧಾರಭೂತವೂ ಆದ ಗ್ರಂಥವಾಗಿದೆ. ರತ್ನಾಕರವರ್ಣಿಯ ಭರತೇಶವೈಭವವನ್ನು ಉಗ್ರಾಣ ಮಂಗೇಶರಾಯರು ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ. ಕೆ. ವೆಂಕಟರಾಯಾಚಾರ್ಯ, ಎ. ವೆಂಕಟ ಸುಬ್ಬಯ್ಯ ಅವರುಗಳು ಕವಿ ಕಾಲ ವಿಚಾರ, ಸ್ಥಳ, ಕೃತಿ ಮುಂತಾದವುಗಳ ಬಗ್ಗೆ ಹೊಸಮಾತು ಹೇಳಿದ್ದಾರೆ. ಇವು ಒಟ್ಟಾರೆ ಕನ್ನಡ ನಾಡಿನ ಚರಿತ್ರೆಯ ರಚನೆಗೂ ಕೊಡುಗೆ ಎನಿಸಿವೆ.

ಇಲ್ಲಿಂದ ಮುಂದೆ ಇಂಗ್ಲೀಷ್ ಸಾಹಿತ್ಯದ ಪ್ರಭಾವದಿಂದ ಶಾಸ್ತ್ರೀಯವಾಗಿ ಕೃತಿಸಂಪಾದನೆ ಮಾಡುವ ಪರಿಪಾಠ ಬೆಳೆದುಬಂದಿತು. ಜೊತೆಗೆ ಕಾವ್ಯಸಂಗ್ರಹಗಳು, ಮರು ಸಂಪಾದನೆಗಳು, ಆಳವಾದ ಸಮೀಕ್ಷಾ ಲೇಖನಗಳು, ಹೊಸಮಾತು ಹೇಳುವ ಪ್ರಬಂಧಗಳು ಇವುಗಳನ್ನು ಮತ್ತೊಂದು ವರ್ಗವಾಗಿ ಗಮನಿಸಬಹುದು. ಡಿ.ಎಲ್.ಎನ್, ತೀ.ನಂ.ಶ್ರೀ, ತ.ಸು. ಶಾಮರಾವ್ ಮುಂತಾದವರು ವಡ್ಡಾರಾಧನೆ, ಪಂಪ ರಾಮಾಯಣ ಸಂಗ್ರಹ, ಗದಾಯುದ್ಧ ಸಂಗ್ರಹ, ವರ್ಧಮಾನ ಪುರಾಣ, ಅಜಿತಪುರಾಣ ಸಂಗ್ರಹ ಇತ್ಯಾದಿ ಕಾವ್ಯಗಳನ್ನು

ಅಚ್ಚುಕಟ್ಟಾಗಿ ಸಂಪಾದಿಸಿ ಉಪಯುಕ್ತವಾದ ಪೀಠಿಕೆಯನ್ನೂ ರಸಗ್ರಹಣ ದೃಷ್ಟಿಯ ವಿಮರ್ಶೆಗಳನ್ನೂ ಬರೆದು ಜೈನಕಾವ್ಯಗಳನ್ನೂ ಶಾಸ್ತ್ರಕೃತಿಗಳನ್ನೂ ಜನಪ್ರಿಯಗೊಳಿಸಿದರು.

ವಿಶ್ವವಿದ್ಯಾಲಯಗಳು ಸ್ಥಾಪಿತಗೊಂಡ ನಂತರ ಸಂಸ್ಥಾ ಮಟ್ಟದಲ್ಲಿ ಕೃತಿಗಳ ಪ್ರಕಟಣೆ, ಅಧ್ಯಯನಗಳು ವ್ಯಾಪಕವಾಗಿ ನಡೆಯತೊಡಗಿದವು. ಮದರಾಸು ವಿಶ್ವವಿದ್ಯಾಲಯದ ಮೂಲಕ ಎ. ವೆಂಕಟರಾವ್, ಎಚ್. ಶೇಷಅಯ್ಯಂಗಾರ್, ಎಂ. ಮರಿಯಪ್ಪ ಭಟ್ಟರು ಸಂಪಾದಿಸಿದ ನೇಮಿನಾಥಪುರಾಣ, ಜೀವಸಂಬೋಧನೆ, ಪುಷ್ಪದಂತಪುರಾಣ ಮುಂತಾದವು ಉಲ್ಲೇಖಾರ್ಹ. ಜೈನತತ್ವಗಳಿಂದ ಕೂಡಿದ ಕಾವ್ಯಗಳು, ಕೃತಿಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವಂಥ ಪರಿಭಾಷಾಕೋಶಗಳನ್ನು ಸಿದ್ಧಪಡಿಸಿದವರು ಜೈನೇತರರೇ ಆಗಿದ್ದಾರೆ. ಮ. ಪ್ರ. ಪೂಜಾರ, ತ. ಸು. ಶಾಮರಾಯರು (ಷ. ನಾಗರಾಜಯ್ಯ ಅವರೊಂದಿಗೆ) ಇವರ ಕೋಶಗಳೇ ಅಲ್ಲದೆ ಆದಿಕವಿ ಪಂಪನ ಎರಡೂ ಕಾವ್ಯಗಳಿಗೆ ಕೋಶರೂಪದ ದೀಪಿಕೆ ರಚಿಸಿ ಕಾವ್ಯದ ರಸಾಸ್ವಾದನೆಗೆ ಅನುವು ಮಾಡಿಕೊಟ್ಟಿರುವವರು ಡಿ. ಎಲ್. ಎನ್. ಮತ್ತು ತ. ಸು. ಶಾಮರಾಯರು.

ಇಲ್ಲಿಂದ ಮುಂದೆ ಒಂದು ನಿರ್ದಿಷ್ಟವಾದ ವಿಷಯವನ್ನು, ಕವಿಯನ್ನು ಅಥವಾ ಸಾಂಸ್ಕೃತಿಕ ಸ್ಥಳವನ್ನು ಕೇಂದ್ರವಾಗಿರಿಕೊಂಡು ಸಮಗ್ರ ವಿವೇಚನೆ ನಡೆಸಿ ಪಿಎಚ್.ಡಿ. ಮಟ್ಟದಲ್ಲಿ ಅಭ್ಯಾಸ ಮಾಡುವ ಕೆಲಸವೂ ಗಮನಾರ್ಹವಾಗಿ ನಡೆಯತೊಡಗಿತು. ೧೯೭೩ರಲ್ಲಿ ಪ್ರಕಟವಾದ ಟಿ. ವಿ.ವೆಂಕಟಾಚಲಶಾಸ್ತ್ರಿಗಳ ಕನ್ನಡ ನೇಮಿನಾಥಪುರಾಣಗಳ ತೌಲನಿಕ ಅಧ್ಯಯನ ಇದಕ್ಕೆ ಒಂದು ಮಾದರಿಯಾಗಿದೆ. ೧೯೭೭ರಲ್ಲಿ ಪ್ರಕಟವಾದ ಡಾ॥ ಬಿ. ವ್ಹಿ. ಶಿರೂರ ಅವರ ಶ್ರವಣಬೆಳ್ಗೊಳ -ಒಂದು ಸಾಂಸ್ಕೃತಿಕ ಅಧ್ಯಯನ ಆ ಸ್ಥಳದ ಸಮಗ್ರ ಪರಿಚಯ ಮಾಡಿಕೊಡುತ್ತದೆ. ಶರಣಮ್ಮ ಅವರ ಪುಲಿಗೆರೆಯನ್ನು ಕುರಿತ ಅಧ್ಯಯನ, ಚೆನ್ನಕ್ಕ ಎಲಿಗಾರ ಅವರ ಬಂಕಾಪುರ ಅಧ್ಯಯನಗಳಲ್ಲಿ ಆ ಸ್ಥಳಗಳಲ್ಲಿನ ಜೈನಧರ್ಮದ ಇತಿಹಾಸ, ವೈಭವ, ಪ್ರಭಾವಗಳನ್ನು ಕುರಿತ ವಿವರಗಳು ದೊರೆಯುತ್ತವೆ.

ಜೈನ ಹಸ್ತಪ್ರತಿಗಳನ್ನು ಕುರಿತು ಆಕರ ಮಾಹಿತಿ ದೊರಕಿಸಿಕೊಟ್ಟವರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಬಿ. ಆರ್. ಹಿರೇಮಠ ಪ್ರಮುಖರು. ಸೃಜನಶೀಲ ಸಾಹಿತ್ಯಪ್ರಕಾರಗಳಲ್ಲಿಯೂ ಜೈನಕೃತಿಗಳನ್ನು ಆಧರಿಸಿದ, ಜೈನವ್ಯಕ್ತಿಗಳನ್ನು ಕುರಿತು ನಾಟಕ, ಕಾದಂಬರಿ ಇತ್ಯಾದಿಗಳು ರಚಿತವಾಗಿದ್ದು ಅನೇಕ ಜೈನೇತರರು ಇಲ್ಲಿಯೂ ಕೃಷಿಗೈದಿದ್ದಾರೆ. ಎಂ. ಎನ್. ಕಾಮತ್, ಬಿ. ಎಂ. ಶ್ರೀ ಅವರ ಗದಾಯುದ್ಧ ನಾಟಕ, ತ.ರಾ.ಸು ಅವರ ಶಿಲ್ಪಶ್ರೀ, ಕೆ. ವಿ. ಅಯ್ಯರ್ ಅವರ ಸಾಂತಲಾ, ಸಿ. ಕೆ. ನಾಗರಾಜ ರಾಯರ ಪಟ್ಟಮಹಾದೇವಿ ಶಾನ್ತಲಾದೇವಿ ಜನಪ್ರಿಯತೆಯೊಂದಿಗೆ ಮೌಲಿಕತೆಯನ್ನೂ ಸಾಧಿಸಿವೆ.

***ಒಂದು ಮತದ ಕುರಿತು ಆ ಮತದವರೇ ಅಭ್ಯಾಸ ಮಾಡಿ ಬರೆದಾಗ ಸ್ವನಿಷ್ಠತೆ, ಪಕ್ಷಪಾತತನ ಕಂಡುಬಂದರೆ ಅದು ಸಹಜವೆನಿಸೀತು. ಅದೇ ಅನ್ಯಮತೀಯರು ಈ ಕೆಲಸದಲ್ಲಿ ತೊಡಗಿದರೆ ಅದರ ಪರಿಣಾಮ ಎರಡು ರೀತಿಯಲ್ಲಿ ಆಗುವ ಸಂಭವವಿದೆ. ಒಂದು, ಆ ಅನ್ಯಮತೀಯರು ಪರಮತನಿಂದನೆಯಲ್ಲಿ ತೊಡಗಬಹುದು. ಆದರೆ ಜೈನೀಯ ಅಧ್ಯಯನದ ವಿಚಾರದಲ್ಲಿ ಇದರ ಶೇಕಡಾ ೧ರಷ್ಟು ಕೂಡಾ ಕಂಡುಬರುವುದಿಲ್ಲ. ಅದಕ್ಕೆ ಪ್ರತಿಯಾಗಿ ಜೈನಮತದ ಬಗ್ಗೆ ಗೌರವ ಭಾವನೆಯನ್ನು ಇಟ್ಟುಕೊಂಡು ಜೈನೇತರರು ಅಧ್ಯಯನ ಮಾಡಿದ್ದಾರೆ. ಜೊತೆಗೇ ವಸ್ತುನಿಷ್ಠತೆಯನ್ನೂ ಕಾಯ್ದುಕೊಂಡಿದ್ದಾರೆ. ಇದೊಂದು ಅಪೂರ್ವವಾದ ಸಂಯೋಗ.***

ಡಾ॥ ರಾಧಾ ಕೃಷ್ಣಮೂರ್ತಿ*

# ವೀರಶೈವ ಸಂಸ್ಕೃತಿಯ ಆಕರ ಗ್ರಂಥ : 'ಶಿವ ತತ್ತ್ವರತ್ನಾಕರ'

ಕೆಳದಿ ಅರಸನಾದ ಬಸಪ್ಪನಾಯಕನಿಂದ ರಚಿಸಲ್ಪಟ್ಟಿರುವ ಬೃಹದಾಕಾರದ ಸಂಸ್ಕೃತ ಗ್ರಂಥ ಶಿವತತ್ತ್ವರತ್ನಾಕರದಲ್ಲಿ ವೈವಿಧ್ಯ ಮಯವಾದ ಹಲವಾರು ವಿಷಯಗಳು ನಿರೂಪಿಸಲ್ಪಟ್ಟಿವೆ. ಈ ಗ್ರಂಥದಲ್ಲಿ ಧರ್ಮ, ದರ್ಶನ, ಇತಿಹಾಸ, ವಿಜ್ಞಾನ, ಸಂಗೀತ, ನೃತ್ಯ, ಸಾಹಿತ್ಯ, ಆಯುರ್ವೇದ, ಗಜಶಾಸ್ತ್ರ, ಯುದ್ಧಶಾಸ್ತ್ರ, ಪಾಕಶಾಸ್ತ್ರ, ಔಷಧಿಶಾಸ್ತ್ರ, ಭೂಗೋಳ, ಜ್ಯೋತಿಷ್ಯ ಮುಂತಾದ ಅನೇಕ ವಿಷಯಗಳು ದೊರಕುತ್ತವೆ. ಆದುದರಿಂದ ಇದು 'ಸಂಸ್ಕೃತ-ವಿಶ್ವಕೋಶ'' ಎಂಬ ಖ್ಯಾತಿಯನ್ನು ಪಡೆದಿದೆ. ''ಮಾನಸೋಲ್ಲಾಸ'' ಮುಂತಾದ ಇತರ ಸಂಸ್ಕೃತ - ಜ್ಞಾನ ಕೋಶಗಳಿಗಿಂತ, ಶಿವ ತತ್ತ್ವರತ್ನಾಕರದಲ್ಲಿ ಕಂಡು ಬರುವ ವಿಶೇಷತೆಗಳೇನೆಂದರೆ, ಇದರಲ್ಲಿ ಕೆಳದಿರಾಜ್ಯ, ವಿಜಯನಗರರಾಜ್ಯ ಇವುಗಳ ಇತಿಹಾಸದ ವಿವರಣೆಗಳು ದೊರೆಯುತ್ತವೆ. ಮತ್ತು ವೀರಶೈವ ಧರ್ಮದ ಇತಿಹಾಸ, ಈ ಸಂಪ್ರದಾಯಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಹಾಗೂ ವೀರಶೈವ ಸಂಸ್ಕೃತಿ ಮುಂತಾದ ವಿಷಯಗಳ ಮೇಲೆ ಈ ಗ್ರಂಥ ಬೆಳಕು ಬೀರುತ್ತದೆ. ಕೆಳದಿ ಅರಸರು ಶೈವಭಕ್ತರು, ಶ್ರದ್ಧಾವಂತರಾದ ವೀರಶೈವರು. ಒಂಬತ್ತು ಕಲ್ಲೋಲಗಳಲ್ಲಿ ವಿಭಕ್ತವಾದ ಈ ಮೇರು ಗ್ರಂಥದಲ್ಲಿ ನೂರಾ ಎಂಟು ತರಂಗಗಳಲ್ಲಿ ೧೩,೦೦೦ಕ್ಕಿಂತ ಹೆಚ್ಚು ಸಂಸ್ಕೃತ ಶ್ಲೋಕಗಳಿವೆ. ಈ ಗ್ರಂಥದ ಪ್ರಾರಂಭದಿಂದ ಕೊನೆಯವರೆಗೂ ಶೈವ ಸಂಪ್ರದಾಯ ಮತ್ತು ವೀರಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ಹಲವಾರು ವಿಷಯಗಳು ಅಲ್ಲಲ್ಲಿ ಸಂದರ್ಭಗಳಿಗೆ ಅನುಗುಣವಾಗಿ ಉಲ್ಲೇಖಿತವಾಗಿವೆ. ಈ ಬೃಹತ್ ಗ್ರಂಥವನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿದರೆ ಇದು ವೀರಶೈವ ಇತಿಹಾಸ ಮತ್ತು ಸಂಸ್ಕೃತಿಯ ಆಕರ ಗ್ರಂಥ ಎಂದು ಸ್ಪಷ್ಟವಾಗುತ್ತದೆ.

ಗ್ರಂಥದ ಪ್ರಾರಂಭದಲ್ಲಿಯೇ ಶಿವಲಿಂಗ ಪ್ರಾರ್ಥನೆಯನ್ನು ಸಲ್ಲಿಸಿ ಬಸವಪ್ಪನಾಯಕನು ವೀರಶೈವಮತದ ಪರಮ ಮುಖ್ಯವಾದ ಅಂಶ ಶಿವಲಿಂಗ ಉಪಾಸನೆಯನ್ನು ಗುರುತಿಸಿದ್ದಾನೆ:

**ಶ್ರೀಯೈನಃ ಶಿವಲಿಂಗ ಸ್ಯಾತ್ ಸರ್ವಾದಿ ಗುರುನಿರ್ಮಲಮ್,**
**ಅಂತರ್ಯಾಮಿ ಅಖಿಲಾಧಾರಂ ಸಚ್ಚಿದಾನಂದ ವಿಗ್ರಹಮ್.**

ಅನಂತರ ಶಿವೋಪಾಸನೆ, ಶಿವಶಕ್ತಿ ಪ್ರಾರ್ಥನೆ, ನಂದಿಕೇಶ್ವರ ವಂದನೆಯನ್ನು ಮಾಡಿ ವೀರಭದ್ರ ಪ್ರಾರ್ಥನೆಯನ್ನು ಭಕ್ತಿ ಪೂರ್ವಕ ಮಾಡಿ ವೀರಶೈವ ಗುರುಗಳ ಪ್ರಾರ್ಥನೆಯನ್ನು ಮಾಡಿದ್ದಾನೆ. ಪರಮಶಿವನ ತತ್ಪುರುಷ ಮುಖದಿಂದ ಆವಿರ್ಭವಿಸಿದ ರೇವಣಸಿದ್ಧ ಗುರು, ಅಘೋರ ಮುಖದಿಂದ ಹೊರಹೊಮ್ಮಿದ ಮರುಳಸಿದ್ಧೇಶ ಗುರುಗಳು, ವಾಮದೇವ ವದನದಿಂದ ಬಂದ ಪೂಜಿತಾಚಾರ್ಯರು (ಪಂಡಿತಾಚಾರ್ಯರು) ಮತ್ತು ಸದ್ಯೋಜಾತ ಮುಖದಿಂದ ಜನ್ಮತಾಳಿದ ಏಕೋರಾಮ ಗುರುಗಳಿಗೆ ವಂದನೆ ಸಲ್ಲಿಸಲ್ಪಟ್ಟಿದೆ. ಮರುಳಸಿದ್ಧೇಶ ಗುರುಗಳಿಂದ ಆಚಾರ್ಯ ಪರಂಪರೆಯನ್ನು ಒಂದು ಶ್ಲೋಕದಲ್ಲಿ ಹೇಳಲಾಗಿದೆ:

ಆಸೀತ್ ಉಜ್ಜಯಿನೀಪತಿಃ ಮರುಳಸಿದ್ಧೇಶೋ ಗುರುಃ
ಪ್ರಸ್ಫುರತ್ - ಪಾ ದೇಶೋಽಥವಸಂತದೇವ ಮಹಿತಶ್ರೀ
ಮಲ್ಲಿಕಾದ್ಯಾರ್ಜುನೌ, ವೀರಶ್ಚೀನಪರಸ್ತತೋ ಗುರುಪ್ರದ
ಸ್ವಾಮಿ ವಸಂತಸ್ತತಃ, ತಸ್ಮಾದುನ್ನತ ಚನ್ನವೀರ ವಿಭುಃ
ಇತಿ ಆಚಾರ್ಯ ಪಾರಂಪರೀ (I ೧.೭)

ಈ ರೀತಿ ಈ ಶ್ಲೋಕದಲ್ಲಿ ವೀರಶೈವ ಆಚಾರ್ಯರ ಪರಂಪರೆಯ ಉಲ್ಲೇಖವಾಗಿದೆ.

ಈ ಗ್ರಂಥದಲ್ಲಿ ಸುಪ್ರಸಿದ್ಧ ವೀರಶೈವ ಸಂತರಾದ ಬಸವೇಶ್ವರ ಅವರ ಜೀವನವನ್ನು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಭಾರತೀಯ - ಧಾರ್ಮಿಕ ಇತಿಹಾಸಕ್ಕೆ ಕೆಳದಿ ಬಸವಪ್ಪನಾಯಕನ ಈ ಕೊಡುಗೆ ಬಹಳ ಮಹತ್ವಪೂರ್ಣವಾದುದು. ಈ ಲೋಕದಲ್ಲಿ ಧರ್ಮ ರಕ್ಷಣೆಗಾಗಿ ಅವತಾರ ತಾಳಿದ ಸಾಕ್ಷಾತ್ ಶಿವನೆ ಬಸವೇಶ್ವರ ಎಂದು ಹೇಳಿ ವೀರಶೈವ ಮತದ ಉದ್ಗಮ ಪರಮಶಿವನಿಂದಲೆ ಆಗಿದೆ ಎಂಬ ವಿಷಯವನ್ನು ಸೂಚಿಸಿದ್ದಾರೆ.

---

*. 'ಶುಭೋದಯ', ೩೮, ಹನ್ನೊಂದನೇ ಮುಖ್ಯ ರಸ್ತೆ, ಮಲ್ಲೇಶ್ವರಂ ಪಶ್ಚಿಮ, ಬೆಂಗಳೂರು - ೫೬೦ ೦೫೫

ಧರ್ಮ ಪ್ರವೃತ್ತಿಂ ಶಿಥಿಲಾಂ ವಿಲೋಕ್ಯ ಚ ಸಮಂತತಃ
ಅವತೀರ್ಯ ದಯಾವಶ್ಯೋ ಭಗವಾನ್ ಬಸವೇಶ್ವರಃ
ವೀರಧರ್ಮ ಸಂಸ್ಥಾಪಯಾಮಾಸ ಸರ್ವಮೇವಧರಾತಲ
ವೀರಶೈವ ಮತಂ ಸ್ಥಾಪ್ಯ ಪ್ರಕಾಶನಂ ಅಕರೋತ್
(IV ೮, ೧೧, ೧೨)

ಪುರಾಣದಲ್ಲಿ ಪರಮಶಿವನ ವಾಹನವಾದ ಋಷಭನೆ ಮರುಜನ್ಮದಲ್ಲಿ ನಂದಿಕೇಶ್ವರನಾಗಿ ಜನ್ಮ ಪಡೆದು ಮತ್ತು ಈ ನಂದಿಯೆ ವೀರಶೈವ ಮತಪ್ರತಿಪಾದಕರಾದ ಬಸವೇಶ್ವರರ ರೂಪದಲ್ಲಿ ಆವಿರ್ಭವಿಸಿದರು ಎಂದು ಹೇಳಿ ವಿಸ್ತಾರವಾಗಿ ಲಿಂಗಪುರಾಣದಲ್ಲಿ ಕಂಡುಬರುವ ನಂದಿಕೇಶ್ವರನ ಕಥೆಯನ್ನು ವಿವರಿಸಿದ್ದಾರೆ. ಪುರಾಣದ ಶಿಲಾದಿಯ ಕಥೆಯನ್ನು ಹೇಳಿ ಶಿಲಾದನ ಮಗನಾಗಿ ನಂದಿಕೇಶ್ವರನು ಅಯೋನಿಜ ಪುತ್ರನಾಗಿ ಆವಿರ್ಭವಿಸಿದ ಕಥೆಯ ನಂತರ ವೀರಶೈವ ಮತದ ಪ್ರತಿಪಾದಕರಾದ ಬಸವೇಶ್ವರರ ಜನ್ಮ ಮತ್ತು ಜೀವನವನ್ನು ವರ್ಣಿಸಿದ್ದಾರೆ. ಇದರಲ್ಲಿಯೂ ಕೂಡ ಕೆಲವು ಪೌರಾಣಿಕ ತತ್ತ್ವಗಳು ಹೇಳಲ್ಪಟ್ಟಿವೆ. ಕೈಲಾಸಪತಿಯಾದ ಶಿವನು ನಾರದನ ಮಾತುಗಳನ್ನು ಕೇಳಿ ಭೂಮಿಯ ಮೇಲೆ ಪುನಃ ಶಿವಭಕ್ತಿಯನ್ನು ಸ್ಥಾಪಿಸಲು ಪರಮಶಿವಭಕ್ತನಾಗಿ ನಂದಿಯೆ ಜನ್ಮ ಪಡೆಯಬೇಕು ಎಂದು ಆಜ್ಞೆ ಮಾಡುತ್ತಾರೆ.

ನಾರದನ ಮಾತುಗಳು ಹೀಗೆ ಇವೆ :

ದೇಶಂ ಸಮುನ್ಸೃಜ್ಯ ತದಲ್ಪಭಕ್ತಿಂ
ಪ್ರವಿಶ್ಯ ಕರ್ಣಾಟಮಹೀ ವಿಭಾಗಮ್
ತತ್ರಾಪಿ ದೃಷ್ಟ್ವಾ ಶಿವಭಕ್ತಿದೂರಾನ್
ತತ್ರಾಸ ಚೇತಸ್ತರಸಾ ಮದೀಯಮ್ (೪/೯/೯)

ಪುನಃ ಪುನಃ ದುರ್ಮತ ದರ್ಶನಾನಿ
ಭವೇಯುಃ ಇತ್ಯೇವ ವಿಶಂಕಮಾನಃ
ಮಹೀತಲಾ ಲೋಕನ ಮಂದಹರ್ಷಃ
ಸಯಾಮಿ ಮಾಂ ಸಾಂಪ್ರತಮಾಗತೋಽಸ್ಮಿ ।

ಶಿವನು ನಂದಿಗೆ ಈ ರೀತಿ ಆಜ್ಞಾಪಿಸಿದನು :

ಪುತ್ರತ್ವಂ ಅಸಾಧ್ಯ ತಥೋಃ ಪೃಥಿವ್ಯಾಂ
(ಮಾಧವ ದಂಪತಿ) ಮಾದಾಂಬ
ಶ್ರೀವೀರ ಮಹೇಶ್ವರ ತಂತ್ರದಾರ್ಢ್ಯಂ
ವಿಧ್ಯೇಹಿ ವಿದ್ವನ್ ವಿವಿಧ್ಯೈಃ ವಿಹಾರೈ
ಪ್ರಹತ್ಯ ಪಾಖಂಡ ಮತ ಪ್ರವೃತ್ತಾನ್

ಬಸವೇಶ್ವರನ ಜನ್ಮ, ವಿವಾಹ, ರಾಜಕೀಯ ಪ್ರವೇಶ ಧರ್ಮ ಪ್ರಚಾರ ಮುಂತಾದ ಎಲ್ಲಾ ವಿವರಗಳು ಸಂಸ್ಕೃತ ಕಾವ್ಯ ರೂಪದಲ್ಲಿ ವರ್ಣಿಸಲ್ಪಟ್ಟಿವೆ.

ಲಿಂಗಧಾರಣ ಸಂಸ್ಕಾರವೂ ಹೇಳಲ್ಪಟ್ಟಿದೆ :

ಶೃಣತಾಂ ಪಿತರೌ ಪ್ರೇರಣಾ ಸಂಗಮೇಶೋ ಗುರುಃ ಮಮ
ಲಿಂಗಸ್ಯ ಧಾರಣಂ ವೀರಶೈವಾ ದೀಕ್ಷಾಂ ಚ ಕಾರಯನ್

ಬಸವೇಶ್ವರರು ವೀರಶೈವ ಮತ ಪ್ರಚಾರ ಮಾಡುತ್ತಿದ್ದರು. ತಮ್ಮ ರಾಜ್ಯಕ್ಕೆ ಹಿಂತಿರುಗಿ ಹೋಗುವ ಸಮಯದಲ್ಲಿ ಅವರ ಗಣಗಳಿಗೆ ಸೂಚನೆ ಕೊಟ್ಟರು. ಆಗ ಬಸವೇಶ್ವರರು ಹೀಗೆ ಹೇಳುತ್ತಾರೆ :

ಸಿಂಹಾಸನಂ ನರಪತೇಃ ಉದ್ಭವಿಷ್ಯತಿ ಕಿಂಚನ
ತದ್ಭಕ್ತಿ ವ್ಯತ್ಯಯಾದೇವ ಕ್ರಮಾತ್ ಸಂಕೋಚಮೇಷ್ಯತಿ
ಅನಂತರಂ ಮಲ್ಲರಾಷ್ಟ್ರೇ ಮನ್ನಾಮ್ನಾಖ್ಯಾತಿ ಮೇಯಿವಾನ್
ಮಮಾನುಗ್ರಹ ಪಾತ್ರಂ ಚ ಭಕ್ತಃ ಕಶ್ಚಿತ್ ಉದ್ಭೇಷ್ಯತಿ
ರಾಮೇಶ್ವರ ಪ್ರಸಾದೇನ ತದ್ವರಂಯಾಃ ಚಪ್ರತಿಕ್ಷಣಮ್
ಏಧೆರನ್ ಬಹುರಾಜ್ಯ ಶ್ರೀ ಬಲಕೀರ್ತಿ ಪರಾಕ್ರಮೈಃ
ವೀರಶೈವ ಮತಾಚಾರಾನ್ ಆಚರಿಷ್ಯಂತಿ ದೀಕ್ಷಿತಾಃ
ವತ್ಸ್ಯಾಂತಿ ಗುರುಲಿಂಗ ಶ್ರೀಜಂಗಮೇಷು ಅತಿಭಕ್ತ್ಯಃ॥
ತೇಷಾಂರಾಷ್ಟ್ರೇ ಕೃತಯುಗ ಧರ್ಮಶ್ಚ ಸ್ಥಿತಿಮೇಷ್ಯತಿ
ತತ್ರ ದುರ್ಭಿಕ್ಷವಾರ್ತಾಂ ಚ ನೈವ ಶ್ರೋಷ್ಯತಿ ಕಶ್ಚನ,
ತತ್ರಗತ್ವಾವೀರಶೈವನಿಷ್ಠಾಂ ಆಲಂಬ್ಯ ಖೇಲಿತ
ಇತ್ಯಮುಂ ಉಪದಿಶ್ಯ ತಾನ್ ನಿಜಂ ಸ್ಥಾನಂ ಅಪದ್ಯತ॥
(IV-೯)

ಈ ಸಂದರ್ಭದಲ್ಲಿ ಮಲ್ಲಿದೇಶದ ವರ್ಣನೆಯನ್ನು ಗ್ರಂಥಕರ್ತೃ ಮಾಡಿದ್ದಾನೆ :

ರಮ್ಯಂ ವನವಸಾದೇಶ ಕುಟಜಾದ್ರಯೋಃ ಯದಂತರಮ್
ಮಲ್ಲದೇಶ ಇತಿಖ್ಯಾತೋದೇಶಃ ಸೋಽಯಂ ಸಮೃದ್ಧಿಮಾನ್
ತುಂಗಭದ್ರಾದಯೋಯತ್ರ ಪರಿತಃ ಸರಿತಃ ಶುಭಾಃ
ಸ್ವಪಯೋಬಿಂದು ಸಂಬಂಧ ನಿರ್ಧೂತಾಖಿಲ ಪಾತಕಾಃ
ಸ್ವಯಂ ವ್ಯಕ್ತಿಂ ಅವಾಪ್ತಾನಿ ಶಿವಲಿಂಗಾನಿ ಭೂರಿಶಃ
ರಾಮೇಶ್ವರಾದೀನಿ ಇಷ್ಟಾರ್ಥ್ಯಾನ್ ದಿಶಂತಿ ಸ್ವೈಕಚೇತಸಾಮ್,
ಯತ್ರಸರ್ವೇಪಿ ಮನುಜಾಃ ಶಿವಲಿಂಗಾರ್ಚನಾ ಪರಾಃ
ತನ್ನಾಮಾಸಕ್ತ ರಚನಾಃ ತತ್ ಧ್ಯಾನಾಮೀಲಿತೇಕ್ಷಣಾಃ
ವಿಭೂತಿರೇಖಾ ವಿಲ ಸಲ್ಲಲಾಟ ಫಲಕಾಂತರಾ
ರುದ್ರಾಕ್ಷ ಮಾಲಿಕೋದ್ ಭಾಸಿ ಹೃದೋಯತ್ರಾಖಿಲಾನರಾಃ
ಆಶಮಾಯತ್ರ ವಿವಿಧಾ ವಿನಿ ರ್ಧೂತಾ ಅತಿಥಿಶ್ರಮಾಃ
ರುದ್ರ ಏಕಾದಶಿನೀ ಶೈವಾಗಮ ಪಾಠ ಶಿವಾಂಕಿತಾಃ

ಶಿವಭಕ್ತನ ಕರ್ತವ್ಯ ಶಿವಾರ್ಚನೆ ಒಂದೇ ಅಲ್ಲದೇ ತನ್ನ ಭಕ್ತಿಭಾವದ ಆಧಾರದಿಂದ ದೇಶಕ್ಕೆ, ಜನರಿಗೆ ಮುಖ್ಯವಾಗಿ ಬಡಜನರಿಗೆ ಯಾವುದಾದರೊಂದು ರೀತಿಯಲ್ಲಿ ಸೇವೆ ಮಾಡುವುದು ಒಬ್ಬ ವೀರಶೈವನ, ಮುಖ್ಯವಾಗಿ ವೀರಶೈವ ಜನರ ಪರಮ ಕರ್ತವ್ಯವಾಗಿತ್ತು. ಕೆಳದಿ ಅರಸರು ವಿವರಣೆಗಳನ್ನು ಹೇಳುವಾಗ ಅವರು ಧಾರ್ಮಿಕ ಸಂಸ್ಥೆಗಳನ್ನು ದೇವಾಲಯಗಳಿಗೆ, ಮಠಗಳಿಗೆ

ಧನಧಾನ್ಯಗಳ ದಾನ ಮಾಡಿ ಧರ್ಮ, ಶಿಕ್ಷೆ, ಕಲೆ ಮುಂತಾದ ಎಲ್ಲಾ ಕ್ಷೇತ್ರಗಳನ್ನು ಸಮೃದ್ಧಗೊಳಿಸುತ್ತಿದ್ದರು.

ವೀರಶೈವರಾಗಿ ಇದ್ದರೂ ಕೂಡ ಇತರ ಮತಗಳ ಸಂಪ್ರದಾಯಗಳ ವಿಕಾಸಕ್ಕಾಗಿ ಪ್ರೋತ್ಸಾಹ ನೀಡುತ್ತಿದ್ದರು. ಧರ್ಮದ ಕ್ಷೇತ್ರದಲ್ಲಿ ಸಹನಶೀಲತೆ ಬಹಳ ಮುಖ್ಯವಾದ ಒಂದು ಅಂಶ. ಸದಾಶಿವನಾಯಕ, ಚೆನ್ನಮ್ಮಾಜಿ ಮುಂತಾದವರು ಹಲವಾರು ಅಗ್ರಹಾರಗಳನ್ನು ನಿರ್ಮಿಸಿ ಬ್ರಾಹ್ಮಣರ ವೇದಾಧ್ಯಯನಕ್ಕೆ ಸಹಾಯ ಮಾಡುತ್ತಿದ್ದರು. ಜಂಗಮರಿಗಾಗಿ ಮಠಗಳನ್ನು ಸ್ಥಾಪಿಸಿದ್ದರು. ದೇವಾಲಯ ನಿರ್ಮಾಣಕ್ಕೆ ಧನಸಹಾಯ ಮತ್ತು ಪ್ರೋತ್ಸಾಹ ನೀಡುತ್ತಿದ್ದರು.

ಪೌರಾಣಿಕ ಶೈಲಿಯಲ್ಲಿ ವಿಜಯನಗರ ಸಾಮ್ರಾಜ್ಯದ ಇತಿಹಾಸಗಳನ್ನು ಹೇಳುವಾಗ ಬಸವಪ್ಪನಾಯಕರು ವಿದ್ಯಾರಣ್ಯರ ಕೊಡುಗೆಯನ್ನು ಉಲ್ಲೇಖಿಸಿದ್ದಾರೆ. ವಿದ್ಯಾರಣ್ಯರ ಜೀವನದ ಬಗ್ಗೆ ಹೇಳುವಾಗ ಅವರು ಪೂರ್ವಾಶ್ರಮದಲ್ಲಿ ಶಿವಧರ್ಮ ಎಂಬ ಹೆಸರನ್ನು ಪಡೆದಿದ್ದರೆಂದಿದೆ.. *ಶಂಕರಾಚಾರ್ಯರ ರೇವಣಸಿದ್ಧ ಸಂಪ್ರದಾಯದ ಪರಂಪರೆಗೆ ಸೇರಿದ ಗುರುವಿನಿಂದ ವಿದ್ಯಾರಣ್ಯರು ಶ್ರೀವಿದ್ಯಾ ಉಪಾಸನೆಯಲ್ಲಿ ದೀಕ್ಷೆ ಸ್ವೀಕರಿಸಿದ್ದರು ಮತ್ತು ಷೋಡಶಾಕ್ಷರಿ ಮಂತ್ರದ ದೀಕ್ಷೆ ಪಡೆದಿದ್ದರು. ಶ್ರೀ ಚಕ್ರ ಪೂಜೆ ಮಾಡುತ್ತಿರುವಾಗ ಮಾತಂಗೀ ದೇವಿಯ ದರ್ಶನ ಪಡೆದು ದೇವಿಯ ಆಜ್ಞೆಯ ಪ್ರಕಾರ ಸಂನ್ಯಾಸ ಸ್ವೀಕರಿಸಿದ್ದರು. ವಿದ್ಯಾರಣ್ಯ ಎಂಬ ಹೆಸರನ್ನು ಪಡೆದು ಗುರುಗಳಿಂದ ಚಂದ್ರಮೌಳೀಶ್ವರ ಲಿಂಗವನ್ನು ಪಡೆದರು ಎಂಬ ವೃತ್ತಾಂತ ಹೇಳಲ್ಪಟ್ಟಿದೆ. ಈ ಲಿಂಗವನ್ನು ರೇವಣಸಿದ್ಧರು ಪೂಜೆಮಾಡುತ್ತಿದ್ದರು. ಅನಂತರ ವಿದ್ಯಾರಣ್ಯರು ದೇವಿಯ ಆಜ್ಞೆ ಪಡೆದು ಶ್ರೀ ಚಕ್ರರೂಪದಲ್ಲಿ ನಗರವನ್ನು ನಿರ್ಮಿಸಿದರು – ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು – ಎಂದು ಈ ಎಲ್ಲಾ ವಿಷಯಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.* ಇದರಿಂದ ಶೃಂಗೇರಿಯಲ್ಲಿ ಪ್ರಾರಂಭದಲ್ಲಿ ರೇವಣಸಿದ್ಧ ಸಂಪ್ರದಾಯ ಪ್ರಚಲಿತವಾಗಿತ್ತು ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗ ರೇವಣಸಿದ್ಧರಿಂದ ಪೂಜಿಸಲ್ಪಟ್ಟ ಲಿಂಗ ಎಂದು ತಿಳಿದು ಬರುತ್ತದೆ.

'ಶಿವತತ್ತ್ವರತ್ನಾಕರ' ವೀರಶೈವ ಮತದ ಆಕರ ಗ್ರಂಥ ಮಾತ್ರವಲ್ಲ ಅದು ಎಲ್ಲಾ ಭಾರತೀಯ ಧರ್ಮಗಳ ಆಕರಗ್ರಂಥ ಎಂದು ಹೇಳಬಹುದು. ಕೆಳದಿ ಅರಸರು ಮಾಡಿದ ಧಾರ್ಮಿಕ ಕಾರ್ಯಗಳ ವಿವರಣೆಯಿಂದ ಹಲವಾರು ವಿಷಯಗಳು ಪ್ರಕಟವಾಗುತ್ತವೆ. ಕರ್ನಾಟಕದಲ್ಲಿ ಬ್ರಾಹ್ಮಣರಿಗೆ ಅಗ್ರಹಾರಗಳು, ಜಂಗಮರಿಗೆ ಮಠಗಳು, ವಿರಕ್ತರಿಗೆ ಮಠಗಳು, ಅನೇಕಾನೇಕ ಶಿವಾಲಯಗಳ ನಿರ್ಮಾಣ, ಪುರಾತನ ದೇವಾಲಯಗಳ ಜೀರ್ಣೋದ್ಧಾರ, ದೇವಾಲಯಗಳಿಗೆ ಧನ ಸಹಾಯ ಮುಂತಾದ ಹಲವಾರು ವಿಷಯಗಳು ಸ್ಪಷ್ಟಪಡಿಸಲ್ಪಟ್ಟಿವೆ.

ಕೆಳದಿಯ ವೆಂಕಟಪ್ಪನಾಯಕನು ವೀರಶೈವ ಮತದ ಜಂಗಮಗುರುಗಳನ್ನು ಪರಮಶಿವನ ಚರರೂಪ ಎಂದು ಭಾವಿಸಿ ಅವರ ಪಾದಪೂಜೆ ಮಾಡುವ ಪದ್ಧತಿಯನ್ನು ಪ್ರಾರಂಭಿಸಿದನು. ವೀರಶೈವ ಸಂಪ್ರದಾಯದಲ್ಲಿ ದಾಸೋಹಂ ಮತವನ್ನು ಪ್ರಚಲಿಸಿದನು, ಎಂದು ಹೇಳಲ್ಪಟ್ಟಿದೆ. ಶಿವಪ್ಪನಾಯಕನ ಧಾರ್ಮಿಕ ಉತ್ಸಾಹದ ಉಲ್ಲೇಖವೂ ಇದೆ. ಕಾಶೀ ಕ್ಷೇತ್ರದಲ್ಲಿ ಆತನು ಅನೇಕ ದಾನಧರ್ಮಗಳನ್ನು ಮಾಡಿದನು. ಕಾಶಿಯ ಕಪಿಲಧಾರಾ ಎಂಬ ಕೆರೆಯನ್ನು ಸ್ವಚ್ಛಗೊಳಿಸಿದನು.

ಆಲಯದೇವತೆಗಳಿಗೆ ಸುವರ್ಣಾಭರಣಗಳ ಅರ್ಪಣೆ, ದೀಪಮಹೋತ್ಸವದ ಯೋಜನೆ, ಷೋಡಶ ಉಪಚಾರಗಳ ಆಚರಣೆ, ಅನ್ನದಾನ, ಸುವರ್ಣದಾನ, ಭೂಮಿದಾನ, ತುಲಾಪುರುಷ ಆಚರಣೆ, ಯಾತ್ರ-ಯಜ್ಞಾದಿಗಳು ಎಂದು ನೂರಾರು ಧಾರ್ಮಿಕ ಕಾರ್ಯಗಳ ವಿವರಣೆ ಈ ಗ್ರಂಥದಲ್ಲಿ ಲಭ್ಯವಿದೆ.

ಬಸಪ್ಪನಾಯಕನು ಸ್ವತಃ ವೀರಶೈವ ಭಕ್ತನಾಗಿದ್ದ ಕಾರಣದಿಂದ ತನ್ನ ಗ್ರಂಥದಲ್ಲಿ ವೀರಶೈವ ಮತಕ್ಕೆ ಮಾತ್ರವಲ್ಲದೆ ಸಾಮಾನ್ಯವಾಗಿ ಶೈವಮತಕ್ಕೆ ಸಂಬಂಧಪಟ್ಟ ಆಧ್ಯಾತ್ಮಿಕ, ಧಾರ್ಮಿಕ ಮತ್ತು ಸಾಮಾಜಿಕ ಅಂಶಗಳನ್ನು ಅಲ್ಲಲ್ಲಿ ಸಂದರ್ಭೋಚಿತವಾಗಿ ವರ್ಣಿಸಿದ್ದಾನೆ.

ಈ ವಿಷಯಗಳು – ನಿರಂಜನಾದಿ ಪ್ರಪಂಚಿಕ ಸೃಷ್ಟಿಕ್ರಮಗಳು, ಅನಾದಿ ಭಕ್ತಲಕ್ಷಣ, ಭಕ್ತ, ಗುರು-ಲಿಂಗ, ಚರ, ಶೇಷ, ತೀರ್ಥ ಲಕ್ಷಣಗಳು, ಭಕ್ತಾಂಗಗಳು, ಅನಾದಿ ಜಂಗಮ ಸ್ವರೂಪ, ನಿರಂಜನ ಸ್ವರೂಪ, ಶೂನ್ಯಲಿಂಗ ಸೃಷ್ಟಿ, ನಿಷ್ಕಲ ಲಿಂಗ ಉದ್ಭವ, ಮಹಾಲಿಂಗ ಸ್ವರೂಪ, ಪ್ರಣವಲಿಂಗ, ವಿಭೂತಿ ಮಹಿಮೆ, ರುದ್ರಾಕ್ಷಿಧಾರಣೆ ವಿಭಿನ್ನ ದೀಕ್ಷೆಗಳು, ಗುರುಶಿಷ್ಯ ಸಂಬಂಧ, ಷಟ್‌ಸ್ಥಲ ಸಿದ್ಧಾಂತ, ಜನರ ಸೇವೆ ಇತ್ಯಾದಿ ನೂರಾರು ವಿಷಯಗಳಿಂದ **ಶಿವತತ್ತ್ವ ರತ್ನಾಕರವು** ಶೈವಮತದ ಮತ್ತು ***ವಿಶೇಷವಾಗಿ ವೀರಶೈವ ಮತದ ಆಕರಗ್ರಂಥ*** ಎಂದು ಹೇಳಬಹುದು. ಈ ವಿವರಣೆಗಳ ಮೂಲಕ ಶೈವರ ಸಂಸ್ಕೃತಿ, ಸಾಮಾಜಿಕ ಆಚರಣೆ ಮುಂತಾದವು ಸ್ಪಷ್ಟವಾಗುತ್ತವೆ.

ಅನೇಕ ವಿಷಯಗಳ ಆಕರ ಗ್ರಂಥವಾಗಿರುವ ಕಾರಣದಿಂದ ಶಿವತತ್ತ್ವರತ್ನಾಕರ ನಿಜವಾಗಿಯೂ ಒಂದು ಅಕ್ಷಯ ರತ್ನಾಕರ ಎಂದು ಹೇಳಬಹುದು.

ಡಾ॥ ಮೃತ್ಯುಂಜಯ ರುಮಾಲೆ *

# ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲ ವಿಚಾರ – ಮತ್ತೊಂದು ಆಧಾರ

ಹನ್ನೆರಡನೇ ಶತಮಾನದ ಶರಣರಿಂದ ರೂಪುಗೊಂಡ ಧಾರ್ಮಿಕ - ಸಾಮಾಜಿಕ ಸ್ಥಿತ್ಯಂತರ ಕನ್ನಡನಾಡಿನ ಸಮಗ್ರ ಚರಿತ್ರೆಗೆ ಒಂದು ಸಾಮಾಜಿಕ ಅಭಿಮುಖೀಕರಣ ನೀಡಿದ ಘಟ್ಟವೆನಿಸಿದೆ. ಸ್ಥಗಿತ ಮತ್ತು ಸ್ಥಾಪಿತ ಮೌಲ್ಯಗಳನ್ನು ಚಲನಶೀಲ ಮತ್ತು ಪುನರಾವಲೋಕನ ಪ್ರಕ್ರಿಯೆಗೆ ಒಳಪಡಿಸಿದ್ದು ಈ ಶತಮಾನದಲ್ಲಿ ಮಹತ್ವ ಪಡೆದಿದೆ. ಶರಣತತ್ತ್ವವನ್ನು ಪ್ರಚುರ-ಪ್ರಕಟ-ಪಡಿಸಲೋಸುಗ ಹದಿನೈದನೇ ಶತಮಾನದಲ್ಲಿ (ಪ್ರೌಢದೇವರಾಯನ ಕಾಲ) ನೂರೊಂದು ವಿರಕ್ತರಿಗೆ, ವೀರಶೈವ ಕವಿಗಳಿಗೆ ಆಶ್ರಯನೀಡಿ ವೀರಶೈವ ಸಾಹಿತ್ಯ ರಚನೆಗೆ ಎಡೆದೊರೆತದ್ದು ವೀರಶೈವ ಧಾರ್ಮಿಕ ಚರಿತ್ರೆಯಲ್ಲಿ ಮತ್ತೊಂದು ಮಹತ್ತರವಾದ ಅಂಶವಾಗಿದೆ.

ಎಡೆಯೂರಿನ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲ; ಶರಣರ ವಿಚಾರಗಳನ್ನು ಧರ್ಮೋ-ಸಾಂಸ್ಕೃತಿಕತೆಯ ತಳಹದಿಯಲ್ಲಿ ವ್ಯಾಪಕಗೊಳಿಸಿದ ಕಾಲವಾಗಿದೆ. ಈ ಒಂದು ಪ್ರಮುಖ ಹಿನ್ನೆಲೆಯಲ್ಲಿ ಸಿದ್ಧಲಿಂಗರ ಕಾಲ ವೀರಶೈವ ಧಾರ್ಮಿಕ ಚರಿತ್ರೆಯಲ್ಲಷ್ಟೇ ಅಲ್ಲ ಆ ಕಾಲದ ಕನ್ನಡನಾಡಿನ ಧಾರ್ಮಿಕ - ಸಾಂಸ್ಕೃತಿಕ ಚರಿತ್ರೆಯಲ್ಲೇ ಪ್ರಮುಖ ಸ್ಥಾನ ಪಡೆದಿದೆ.

ಬಸವಯುಗ ಶರಣವಿಚಾರಗಳ ಧಾರ್ಮಿಕ-ಸಾಮಾಜಿಕ - ಸಾಂಸ್ಕೃತಿಕ ಪ್ರಧಾನವೂ ನೂರೊಂದು ವಿರಕ್ತರ ಯುಗ ಸಾಹಿತ್ಯ ರಚನೆ - ಪ್ರಕಟನ - ಸಂಪಾದನ ಪ್ರಧಾನವೂ ಸಿದ್ಧಲಿಂಗರ ಯುಗ ಧರ್ಮ-ತತ್ತ್ವ-ಪ್ರಯೋಗ-ಪ್ರಯೋಗ ಪ್ರಧಾನವಾಗಿಯೂ ಸಾಮಾಜಿಕ ಸ್ವಾಸ್ಥ್ಯ ಸನ್ನದ್ಧವಾಗಿ ಮುನ್ನಡೆದಿವೆ.

ಮೂರನೇ ಯುಗ ಸಂಪೂರ್ಣವಾಗಿ ಸಿದ್ಧಲಿಂಗರ ಕರ್ತೃತ್ವಶಕ್ತಿಯಿಂದ ತುಂಬಿಕೊಂಡಿದೆ. ಆದರೆ ಇವರ ಕಾಲ ಕನ್ನಡದ ಅನೇಕ ಕವಿಗಳ ಕಾಲದಂತೆ ಕಾಲನಗರ್ಭದಲ್ಲಿ ಅಡಗಿದೆ. ಸಿದ್ಧಲಿಂಗರ ಕಾಲ ವಿದ್ವಾಂಸರ ಸಂಶೋಧನಾತ್ಮಕ ಚರ್ಚೆಗೆ ಗ್ರಾಸವಾಗಿದೆ. ಈವರೆಗೆ ನಡೆದ ಅವರ ಕಾಲವಿಚಾರ ಹೀಗಿದೆ:

* ಬಸವಪ್ಪ ವೀರಪ್ಪ ಕೋಟಿ (ನಿರಂಜನ ಜಂಗಮ ವಂಶದರ್ಪಣ) - ಕ್ರಿ. ಶ. ೧೨೮೧-೧೩೮೧
* ಸಿ. ಮಹಾದೇವಪ್ಪ (ಸಿದ್ಧಲಿಂಗ ಶಿವಯೋಗಿ, ಮೈ.ವಿ.ವಿ.) - ಕ್ರಿ. ಶ. ೧೪೦೦-೧೪೭೦
* ಸಿ. ಮಹಾದೇವಪ್ಪ {ಕರ್ನಾಟಕ ಲೋಚನ (೮-೨) ೧೯೯೫}- ಕ್ರಿ. ಶ. ೮-೩ -೧೪೮೭
* ಆರ್. ಸಿ. ಹಿರೇಮಠ (ಷಟ್‌ಸ್ಥಲ ಪ್ರಭೆ) - ಕ್ರಿ. ಶ. ೧೪೦೦ ಮತ್ತು ಅದರ ಪೂರ್ವದ ಒಂದೆರಡು ದಶಕಗಳು.
* ಎಚ್. ದೇವಿರಪ್ಪ (ಪ್ರಬುದ್ಧ ಕರ್ನಾಟಕ ೩೦-೪) - ಕ್ರಿ. ಶ. ೧೪೫೦-೧೫೦೦
* ಆರ್. ನರಸಿಂಹಾಚಾರ್ಯರು (ಕರ್ನಾಟಕ ಕವಿಚರಿತೆ) - ಕ್ರಿ. ಶ. ೧೪೭೦
* ಶಿವಮೂರ್ತಿ ಶಾಸ್ತ್ರಿಗಳು (ಸಿದ್ಧಲಿಂಗ ಶಿವಯೋಗಿ, ಮೈ.ವಿ.ವಿ) - ಸು. ೧೫ನೇ ಶತಮಾನ
* ಎಂ. ಆರ್. ಶ್ರೀ (ಪ್ರಬುದ್ಧ ಕರ್ನಾಟಕ ೩೦-೧) - ಕ್ರಿ. ಶ. ೧೫೬೧
* ಎಲ್. ಬಸವರಾಜು (ವಚನಕಾರ ಸಿದ್ಧಲಿಂಗಯತಿ, ಬೆಂ.ವಿ.ವಿ. ೧೯೭೨) - ಕ್ರಿ. ಶ. ೧೫೦೦-೧೫೮೪
* ಎಂ. ಎಂ. ಕಲಬುರ್ಗಿ (ಮಾರ್ಗ-೧) - ಕ್ರಿ. ಶ. ೧೬ನೇ ಶತಮಾನದ ಮೂರನೇ ಪಾದ
* ಎಸ್. ಶಿವಣ್ಣ (ಪ್ರಬುದ್ಧ ಕರ್ನಾಟಕ ೫೭-೪, ೧೯೭೬) - ಕ್ರಿ. ಶ. ೧೫೬೧
* ಬಿ. ಆರ್. ಹಿರೇಮಠ (ವೀರಶೈವ ಸಂಶೋಧನೆಗಳು) - ಕ್ರಿ. ಶ. ೧೬ನೇ ಶತಮಾನ

ಸಿದ್ಧಲಿಂಗ ಶಿವಯೋಗಿಗಳ ಕಾಲವು ಕ್ರಿ. ಶ. ೧೩ ನೇ ಶತಮಾನದ ೮ನೇ ದಶಕದಿಂದ ೧೬ನೇ ಶತಮಾನದ ೩ನೇ ದಶಕದವರೆಗೂ ಹೊಯ್ದಾಡಿದ್ದರೂ ೧೫ ಮತ್ತು ೧೬ನೇ

---

*. ಕನ್ನಡ ವಿಭಾಗ, ವಿಜಯನಗರ ಕಾಲೇಜ್, ಹೊಸಪೇಟೆ-೫೮೩ ೨೦೧



B

ಶತಮಾನಗಳಲ್ಲಿ ಇದು ಗಟ್ಟಿಯಾಗಿ ನಿಲ್ಲುತ್ತದೆ. ಅದರಲ್ಲೂ ಕ್ರಿ.ಶ. ೧೪೪೦ ಎಂಬ ಒಂದು ವಾದ, ಕ್ರಿ. ಶ. ೧೫೬೧ ಎಂಬ ಮತ್ತೊಂದು ವಾದ ನಿರ್ದಿಷ್ಟತೆಯನ್ನು ಪ್ರತಿಪಾದಿಸುತ್ತವೆ.

ಸಿದ್ಧಲಿಂಗ ಶಿವಯೋಗಿಗಳು ಹದಿನೈದನೇ ಶತಮಾನಕ್ಕೆ ಸಂಬಂಧಿಸಿದವರು ಎಂಬ ಮತ್ತೊಂದು ಆಧಾರವನ್ನು ಇಲ್ಲಿ ಗಮನಿಸಬಹುದು.

ಜಿ. ಎಂ. ಉಮಾಪತಿಶಾಸ್ತ್ರಿಯವರು ತಾವು ಸಂಪಾದಿಸಿದ '*ಹಂಪೆ ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಗುರುಪರಂಪರೆ*' ಎಂಬ ಕೃತಿಯ ಪ್ರಸ್ತಾವನೆಯಲ್ಲಿ, "**ಪಂಪಾ ವಿರೂಪಾಕ್ಷನ ಸಮೀಪದಲ್ಲಿಯೇ ತುಂಗಭದ್ರೆಯ ತಟದ ಪುಣ್ಯಾರಣ್ಯದಲ್ಲಿ ತೋಂಟದಾರ್ಯರು ಶಿವಯೋಗದ ಸಾಧನೆಯಲ್ಲಿ ಕೆಲವು ದಿನ ತಂಗಿದ್ದರು. ಪ್ರೌಢದೇವರಾಯನು ಅವರ ದರ್ಶನ ಪಡೆದು ವೀರಶೈವದ ನಡೆ-ನುಡಿಯಲ್ಲಿದ್ದುದಲ್ಲದೆ, ಹಂಪೆಯ ವಿರೂಪಾಕ್ಷೇಶ್ವರನ ರಥೋತ್ಸವದ ಕಾಲದಲ್ಲಿ ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ಪರಂಪರೆಯ ಗುರುಗಳನ್ನು ಸನ್ಮಾನಿಸಿ, ಅವರನ್ನು ಬೇರೊಂದು ರಥದಲ್ಲಿ ಮೆರೆಯಿಸಿದ ಪ್ರಸಂಗ ರೋಮಾಂಚಕಾರಿಯಾಗಿದೆ. ಸಂಸ್ಕೃತ ಚಂಪೂಕಾವ್ಯವೊಂದರಲ್ಲಿ ಈ ರಥೋತ್ಸವ ಸನ್ನಿವೇಶ ಚಿತ್ರಿತವಾಗಿದೆ.**" - ಎಂದು 'ವಿರೂಪಾಕ್ಷ ವಸಂತೋತ್ಸವ ಚಂಪೂ'ವನ್ನು ಹೆಸರಿಸುತ್ತಾರೆ. ಈ ಅಂಶದ ಪ್ರಕಾರ ತೋಂಟದ ಸಿದ್ಧಲಿಂಗರು ಪ್ರೌಢದೇವರಾಯನ ಕಾಲ (ಕ್ರಿ. ಶ. ೧೪೨೪-೧೪೪೬)ದಲ್ಲಿ ಹಂಪೆಯಲ್ಲಿದ್ದರೆಂಬ ಅಭಿಪ್ರಾಯ ಬರುತ್ತದೆ.

ಆದರೆ, ಸಂಸ್ಕೃತ ಕವಿ ಅಹೋಬಲ ವಿರಚಿತ ' ವಿರೂಪಾಕ್ಷ ವಸಂತೋತ್ಸವ ಚಂಪೂ' - ಎಂಬ ಸಂಸ್ಕೃತ ಕೃತಿಯನ್ನು ಅವಲೋಕಿಸಿದಾಗ ಹಂಪೆಯ ಸುತ್ತಮುತ್ತಲಿನ ಕೆಲವು ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಂಶಗಳು ಸ್ಪಷ್ಟವಾಗಿ ತಿಳಿಯುವುದರ ಜೊತೆಗೆ ಜಿ. ಎಂ. ಉಮಾಪತಿ ಶಾಸ್ತ್ರಿಯವರು ಹೇಳುವಂತೆ ಆ ಕೃತಿಯಲ್ಲಿ ತೋಂಟದಸಿದ್ಧಲಿಂಗರ ಉಲ್ಲೇಖವಿರದೆ, ಆ ಮೆರವಣಿಗೆ ವಿದ್ಯಾರಣ್ಯರದು ಎಂಬ ಅಂಶವೂ ತಿಳಿಯುತ್ತದೆ.

ಕವಿ ಅಹೋಬಲನ ಕಾಲ ಖಚಿತವಾಗಿ ತಿಳಿಯದು; ಆದರೆ ಕೃತಿಯಲ್ಲಿ ಕೆಲವು ಅಂತಃಸಾಕ್ಷ್ಯಗಳಿವೆ. ಅದರ ಮೂಲಕ ಪರಿಹಾರ ಕಾಣಬಹುದು.

ಸ್ವತಃ ಕವಿ ಅಹೋಬಲನೇ ಉಪಸ್ಥಿತನಾಗಿದ್ದ 'ವಿರೂಪಾಕ್ಷ ವಸಂತೋತ್ಸವ' ಸಂದರ್ಭದಲ್ಲಿ ಮತ್ತೆ ಕೆಲವು ಐತಿಹಾಸಿಕ ಮಹತ್ವ ವ್ಯಕ್ತಪಡಿಸುವ ಅಂಶಗಳಿರುವುದು ಕೃತಿಯ, ಕವಿಯ ಮತ್ತು ಕೆಲವು ವಕ್ತಿಗಳು ಕಾಲಗಣನೆಗೆ ನೆರವು ನೀಡುತ್ತವೆ.

ಅಹೋಬಲನ ಉಲ್ಲೇಖದ ಪ್ರಕಾರ ಅಲ್ಲಿದ್ದ ಗಣ್ಯರೆಂದರೆ ಪ್ರಮುಖವಾಗಿ ವಿಜಯನಗರ ರಾಜ. *(ಇಲ್ಲಿ ಕವಿ ಭಾಗವಹಿಸಿದ ಯಾವ ಗಣ್ಯರ ಹೆಸರನ್ನೂ ಸೂಚಿಸಿಲ್ಲ. ಆದರೆ, ಅವರು ಎಲ್ಲಿಂದ ಬಂದವರು ಎಂದು ಮಾತ್ರ ತಿಳಿಸುತ್ತಾನೆ. ಕೃತಿಯ ಸಂಪಾದಕರಾದ ಆರ್. ಎಸ್. ಪಂಚಮುಖಿಯವರು ಈ ರಾಜ ಒಂದನೆಯ ಅಥವಾ ಎರಡನೆಯ ದೇವರಾಯನಿರಬಹುದು ಎಂದು ಊಹಿಸುತ್ತಾರೆ. ಆದರೆ ಇದೊಂದು ನಿರಾಧಾರ ಊಹೆ).* '**ಅಶ್ವಪತಿ**' ಎಂದು ಕರೆಯಲ್ಪಡುತ್ತಿದ್ದ ಕಾಶ್ಮೀರ ದೇಶದ ರಾಜ, '**ಶಿವಲಿಂಗಧಾರಿ**' ಯಾಗಿದ್ದ ಸಿರ್ಸಿದೇಶದ ರಾಜ, ಸಿದ್ಧರಾಮೇಶ್ವರರ ಭಕ್ತನೂ ಕವಿಗಳ ಪ್ರಶಂಸೆಗೆ ಒಳಗಾದವನೂ ಆದ ಬಳ್ಳಾರಿ ನಗರದ ರಾಜ, ಹಿಂದೆ ವಿಜಯ ನಗರದ ಸೇನಾಪತಿಯಾಗಿದ್ದು ಈ ಕಾಲದ ರಾಜದುರ್ಗನಗರದ (ರಾಯದುರ್ಗದ ರಾಜ?) ರಾಜ, ಜಾತಿಯಿಂದ ಬೇಡರವನಾಗಿದ್ದ ಚಿತ್ರಶಿಲಾ ನಗರದ (ಬಹುಶಃ ಚಿತ್ರದುರ್ಗ ವಿರಬಹುದೇ?) ರಾಜ, ಹರಪುರದ ರಾಜ (ಹರಪನಹಳ್ಳಿಯ ರಾಜನೇ?)- ಮುಂತಾದ ಗಣ್ಯರು ಈ ವಸಂತೋತ್ಸವದಲ್ಲಿ ಭಾಗವಹಿಸಿದ್ದರು. ವಿಶೇಷವೆಂದರೆ ಶಿವಪಾರ್ವತಿಯರ ಉತ್ಸವ ಮೂರ್ತಿಗಳ ಮೆರವಣಿಗೆಯ ವಿರೂಪಾಕ್ಷ ವಸಂತೋತ್ಸವದ ಅಂಗವಾಗಿ '**ಭೂಸುರ ಗುರುಗಳಾದ ವಿದ್ಯಾರಣ್ಯ ಯತಿವರೇಣ್ಯ**'ರನ್ನೂ ರಥದಲ್ಲಿ ಕುಳ್ಳಿರಿಸಿ ಅವರ ಭಕ್ತರು, ಅನುಯಾಯಿಗಳು ಮೆರವಣಿಗೆ ಮಾಡಿಸಿದರು. ಈ ಸಂದರ್ಭದಲ್ಲಿ ಭಾಗವಹಿಸಿದ್ದ ಗಣ್ಯರು ಮುಖ್ಯರು (ಅಂದರೆ ಬಹುಶಃ ಪಾಳೆಯಗಾರರು) ಬಹುತೇಕ ಎಲ್ಲರೂ ವೀರಶೈವ ಧರ್ಮಾನುಯಾಯಿಗಳು.

ವಸಂತೋತ್ಸವದ ಸಂದರ್ಭದಲ್ಲಿ ಭಾಗವಹಿಸಿದ್ದ ರಾಜರ ಕಾಲಮಾನಗಳನ್ನು ಹೀಗೆ ಪರಿಶೀಲಿಸಬಹುದು:

ಬಳ್ಳಾರಿಯಿಂದ ಬಂದಿದ್ದ ಗಣ್ಯ, ಬಳ್ಳಾರಿಯ ಪಾಳೆಯಗಾರ ಕ್ರಿ. ಶ. ೧೬೩೦-೧೭೭೪ ರವರೆಗೆ ಬಳ್ಳಾರಿಯ ಪಾಳೆಯಗಾರರು ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ವ್ಯಾಪ್ತಿಯಲ್ಲಿ ಆಡಳಿತ ನಡೆಸುತ್ತಿದ್ದರು. ಇವರು ವಿಜಯನಗರದ ರಕ್ಷಕರೆಂದು ಕೀರ್ತಿತ ರಾಗಿದ್ದರು. ಇವರು ಶ್ರೀ ರೇವಣಸಿದ್ಧರ ವರದಿಂದ ಜನಿಸಿದ ಸೊನ್ನಲಾಪುರದ ಶ್ರೀ ಸಿದ್ಧರಾಮ ದೇವರನ್ನು ತಮ್ಮ ಆರಾಧ್ಯ ದೇವತೆಯೆಂದು ಬಗೆದು ಭಕ್ತಿ ಪ್ರದರ್ಶಿಸಿದವರು. ದಾನ ಶಾಸನಗಳಲ್ಲಿ 'ಶ್ರೀ ಸಿದ್ಧರಾಮದೇವರ ಪ್ರಸನ್ನ' ರೆಂದು ಅಂಕಿತ ಗೊಂಡವರು *೧

ಅಹೋಬಲನೂ ವಸಂತೋತ್ಸವದಲ್ಲಿ ಭಾಗವಹಿಸಿದ ಗಣ್ಯನನ್ನು '**ಶ್ರೀ ಸಿದ್ಧರಾಮೋ ಪ್ರಸಾದಾನುಗುಣೋ....**' ಎಂದೂ, ಕವಿ ಪ್ರಶಂಸಿತನೂ ದಕ್ಷನೂ ಎಂದೂ ಉಲ್ಲೇಖಿಸುತ್ತಾನೆ.

ಬಳ್ಳಾರಿ ಪಾಳೆಯಗಾರರಲ್ಲೇ ಇಂಥ ಸದಭಿರುಚಿಯ ಪಾಳೆಯಗಾರ ಚಿಕ್ಕನಾಯಕನ ಮಗನಾದ ದೇವಪ್ಪನಾಯಕ. ಈತನ ಕಾಲ ಕ್ರಿ. ಶ. ೧೬೯೨-೧೭೦೭. ಬಹುಶಃ ಈತನೇ ಹಂಪೆಯ ಉತ್ಸವದಲ್ಲಿ ಭಾಗವಹಿಸಿದವನಿರಬಹುದು !

ವಸಂತೋತ್ಸವದಲ್ಲಿ ಭಾಗವಹಿಸಿದ ಮತ್ತೊಬ್ಬ ಗಣ್ಯ, '**ದ್ವಿಜರಾಜಶೇಖರ ಲಿಂಗಧಾರಿ**'ಯಾದ ಸಿರ್ಸಿ ದೇಶದ ರಾಜ. ಇವನು ಲಿಂಗಾಯತ ರಾಜ. ಸೋಂದೆ ಅರಸರಿಗೆ ಮತ್ತು ವಿಜಯನಗರದ ಅರಸರಿಗೆ ಕ್ರಿ. ಶ. ೧೪೪೦ರಿಂದಲೇ ರಾಜಕೀಯ

ಸಂಬಂಧಗಳಿದ್ದವು. ಸಿರ್ಸಿಯ ಸೋಂದೆಯ ಅರಸರು ವೀರಶೈವಧರ್ಮ ಅವಲಂಬಿತರಾದುದು ರಘುನಾಥನಾಯಕನ (ಕ್ರಿ.ಶ. ೧೬೧೩-೩೮) ಕಾಲದಲ್ಲಿ. ಇವನ ಮಗ ಮಧುಲಿಂಗ ನಾಯಕ ಪೂರ್ಣ ಪ್ರಮಾಣದ ವೀರಶೈವರಾಜ. ಇಲ್ಲಿಂದ ಸೋಂದೆ ಮನೆತನವು ಪೂರ್ಣವಾಗಿ ವೀರಶೈವ ಮಾರ್ಗದಲ್ಲಿ ಸಾಗಿತು. ಸೋಂದೆ ಅರಸರಲ್ಲೇ ಪ್ರಖ್ಯಾತಿ ಪಡೆದಿರುವ ಇಮ್ಮಡಿ ಸದಾಶಿವರಾಯ (ಕ್ರಿ. ಶ. ೧೬೮೭-೧೭೧೫); ವೀರಶೈವ ಧರ್ಮ ಪ್ರಸಾರಕ್ಕಾಗಿ ಪ್ರವಾಸಾಸಕ್ತನಾಗಿದ್ದುದನ್ನು ಗಮನಿಸಿದರೆ 'ವಸಂತೋತ್ಸವ'ದಲ್ಲಿ ಭಾಗವಹಿಸಿದ ರಾಜ ಇಮ್ಮಡಿ ಸದಾಶಿವರಾಯನೇ ಇರಬಹುದು.

ಭಾಗವಹಿಸಿದ ಹರಪುರದ (ಹರಪನಹಳ್ಳಿ?) ರಾಜ ಮತ್ತೊಬ್ಬ ಗಣ್ಯ. ದಾದಯ್ಯನಾಯಕನ ವಂಶದಲ್ಲಿ ಮುಮ್ಮಡಿನಾಯಕನ ತಮ್ಮನಾದ ಬಸವಂತನಾಯಕನು (ಕ್ರಿ. ಶ. ೧೬೮೭-೧೭೦೫) ವೀರಶೈವ ಮತವನ್ನು ಅಂಗೀಕರಿಸಿದ್ದವನು. ಹೊಸಪೇಟೆ ಶ್ರೀ ಕೊಟ್ಟೂರು ಸ್ವಾಮಿ ಮಠಕ್ಕೆ ದಾನದತ್ತಿ ನೀಡಿ ಭಕ್ತಿ ತೋರಿಸಿದ ಇವನು ವಸಂತೋತ್ಸವದಲ್ಲಿ ಭಾಗ ವಹಿಸಿದ್ದಿರುವುದು ಸಹಜವಿದೆ.

-ಈ ಮೂವರಲ್ಲದೇ ಅನೇಕ ಸ್ಥಳಗಳಿಂದ ಬಂದ ರಾಜರು, ಗಣ್ಯರು ಈ ಉತ್ಸವದಲ್ಲಿ ಭಾಗವಹಿಸಿದ್ದರು. ಈ ಕೃತಿಯ ಮತ್ತು ಉತ್ಸವದ ಒಂದು ನಿರ್ದಿಷ್ಟ ಕಾಲಮಿತಿಯ ಒಂದು ತುದಿ ಸೋಂದೆಯ ರಘುನಾಥ ನಾಯಕನ ಕಾಲವಾದ ಕ್ರಿ. ಶ. ೧೬೧೩-೩೮. ಸೋಂದೆಯ ಈ ಅರಸನ ಕಾಲವೇ ವೀರಶೈವಕ್ಕೆ ಪರಿವರ್ತನೆ ಗೊಂಡ ಕಾಲವಾದ್ದರಿಂದ 'ಲಿಂಗಧಾರಿ' ರಾಜ ಭಾಗವಹಿಸಿದ್ದ ಈ ಉತ್ಸವ ಇದಕ್ಕಿಂತಲೂ (ಕ್ರಿ. ಶ. ೧೬೧೩-೩೮) ಪೂರ್ವದಲ್ಲಿ ಸದ್ಯದ ಉತ್ಸವ ನಡೆದಿರಲಿಕ್ಕಿಲ್ಲ ಎಂಬುದು ಸ್ಪಷ್ಟವಿದೆ. ಕಾಲಮಿತಿಯ ಮತ್ತೊಂದು ತುದಿ ಬಳ್ಳಾರಿ ಪಾಳೆಯಪಟ್ಟಿನ ಕಾಲಾವಧಿಯಾದ ಕ್ರಿ.ಶ. ೧೬೩೦-೧೭೭೪. ಪ್ರಸ್ತುತ ಉತ್ಸವ ಕ್ರಿ. ಶ. ೧೬೧೩ ರಿಂದ ೧೭೭೪ ರ ಒಳಗೆ ಜರುಗಿದೆ. ಅಂದರೆ ವಿಜಯನಗರ ಪತನವಾದ ೧೫೬೫ರ ನಂತರದಲ್ಲಿ ನಡೆದಿದೆ. ಈ ಉತ್ಸವದಲ್ಲಿ ಭಾಗವಹಿಸಿದ ಗಣ್ಯರೆಲ್ಲರೂ ಪಾಳೆಯಗಾರ ರಾಗಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ.

'ವಿರೂಪಾಕ್ಷ ವಸಂತೋತ್ಸವ ಚಂಪೂ'ವಿನ ಈ ಘಟನೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲಕ್ಕೆ ಸಂಬಂಧಿಸಿದಂತೆ ಪಾತ್ರವಹಿಸಿರುವುದೊಂದು ವಿಶೇಷ. ಬಳ್ಳಾರಿ ಪಾಳೆಯ ಗಾರರಲ್ಲೇ ಸಾಂಸ್ಕೃತಿಕ ವ್ಯಕ್ತಿತ್ವ ಪಡೆದಿರುವ ದೇವಪ್ಪನಾಯಕನ ಕಾಲ ಕ್ರಿ. ಶ. ೧೬೯೨-೧೭೦೭. ಇವನು ದಾನವೀರ, ಗುರುಭಕ್ತ*೨ ಇವನು ಹಂಪೆ, ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಗುರುಪರಂಪರೆಗೆ ದಾನದತ್ತಿಗಳನ್ನು ನೀಡುತ್ತಾ ಬಂದವನು. ಇವನ ಕಾಲದಲ್ಲಿ ಶ್ರೀಮಠದಲ್ಲಿ ಶ್ರೀ ಮರಿಮಹಾಂತ ಸ್ವಾಮಿಗಳು (ಕ್ರಿ. ಶ. ೧೬೬೨) ಮತ್ತು ಶ್ರೀ ಮರಿ ಕೊಟ್ಟೂರು ಸ್ವಾಮಿಗಳು (ಕ್ರಿ ಶ. ೧೭೦೭) ಪಟ್ಟದಲ್ಲಿದ್ದರು. ಈ ಇಬ್ಬರು ಜಗದ್ಗುರುಗಳು ಶ್ರೀಮಠದ (ಕ್ರಮವಾಗಿ) ಏಳು ಮತ್ತು ಎಂಟನೇ ಜಗದ್ಗುರುಗಳು. ಈ ಜಗದ್ಗುರು ಪರಂಪರೆ ಪ್ರಾರಂಭವಾದುದು *ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳವರಿಂದ. ಇವರ ಕಾಲ ಕ್ರಿ. ಶ. ೧೫೧೮.* ಬಳ್ಳಾರಿ ಪಾಳೆಯಗಾರರ ಮೂಲ ಪುರುಷ (ಬಾಲ) ಹನುಮಪ್ಪನಾಯಕ ಮೊದಲು ವಿಜಯನಗರದ ಸೇನಾಪತಿ ಯಾಗಿದ್ದು ಪತನಾನಂತರ ಸ್ವತಃ ಪಾಳೇಪಟ್ಟು ಕಟ್ಟಿಕೊಂಡು ಆಡಳಿತ ನಡೆಸಿದ. ಬಾಲಹನುಮಪ್ಪನಾಯಕನು ಪರಮ ತಪಸ್ವಿಗಳಿದ್ದ ಶ್ರೀಮಠಕ್ಕೆ ನೀಡಿದ ದಾನಪತ್ರವೊಂದರ ಒಕ್ಕಣೆ ಹೀಗಿದೆ:

> ಶ್ರೀಮತ್ಪರಮ ಕೈಲಾಸ ಸಿಂಹಾಸನಾರೂಢ ಪರಶಿವ
> ಲೀಲಾಕೃತ ಕಳೇವರಮಪ್ಪ ನಂದೀಶಾದಿ ರುದ್ರ ಪ್ರಮಥ
> *ಗಣಂಗಳ ಸಾಂಪ್ರದಾಯ ವಿಡಿದೊಪ್ಪುವ ತೋಂಟದ*
> *ಸಿದ್ಧಲಿಂಗಾರ್ಯರ* ಕೃಪಾಪ್ರಸನ್ನರಾದ ತದ್ಗುರು
> ಬೋಧಾಮೃತ ರಸವಾಂತು ಉಪದೇಶಿಸುವಲ್ಲಿ

-ಎಂಬಿತ್ಯಾದಿಯಿಂದ ಸಾಮಾನ್ಯವಾಗಿ ಪ್ರಾರಂಭವಾಗುತ್ತದೆ. ಅಲ್ಲದೇ ಈ ಮಠದ ನಂತರದ ಶ್ರೀಗಳು ಶ್ರೀಸಿದ್ದೇಶ್ವರ ಸ್ವಾಮಿಗಳು (ಕ್ರಿ. ಶ. ೧೫೨೧) ಮತ್ತು ನಾಲ್ಕನೆಯ ಶ್ರೀಗಳು ಶ್ರೀ ಸಿದ್ಧಲಿಂಗ ಸ್ವಾಮಿಗಳು (ಕ್ರಿ. ಶ. ೧೫೯೯) ಎಂಬುದು ಇದೆ.

ಶ್ರೀ ವಿರಕ್ತ ತೋಂಟದಾರ್ಯರು 'ಸಿದ್ಧೇಶ್ವರ ಪುರಾಣ'ದಲ್ಲಿ:

> 'ಪಂಪಿನಿಂದಖಿಲ ದೇಶಂಗಳಂ ನೋಡುತ್ತ
> ಲಿಂಪಿನಿಂದ ವಿಮುಕ್ತ ಸೌರಾಷ್ಟ್ರ ನೀಲ ಕಂ-
> *ಠಂ ಪರ್ವತಂ ಕೊಲ್ಲಿಪಾಕ ಕೇತಾರ ದ್ರಾಕ್ಷಾರಾಮ ಗೋಕರ್ಣವು*
> ಪಂಪೆ ಶ್ರಿವಗಂಗೆ ರಾಮೇಶ್ವರಂ ಪೊನ್ನಾಂಬ
> ಲಂ ಪಿರಿದೆನಿಪ....'

-ಎಂದು ಹೇಳಿರುವುದರಿಂದ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಹಂಪೆಗೆ ಬಂದು ಹೋಗಿರುವುದು ಸ್ಪಷ್ಟವಿದೆ. ಪ್ರೌಢದೇವರಾಯನ ಕಾಲದಲ್ಲಿ (೧೪೨೪-೧೪೪೬) ಬಂದು ಹೋಗಿರುವುದಕ್ಕೆ ಸಾಕ್ಷಿ ಇಲ್ಲ. ಆದ್ದರಿಂದ ಕ್ರಿ. ಶ. ೧೪೪೬ ರಿಂದ ಶ್ರೀಕಪ್ಪಿನ ಚನ್ನಬಸವಸ್ವಾಮಿಗಳ ಕಾಲವಾದ ಕ್ರಿ. ಶ. ೧೫೧೮ರ ವರೆಗಿನ ಕಾಲಾವಧಿಯಲ್ಲಿ ಶ್ರೀ ಸಿದ್ಧಲಿಂಗರು ಬಂದು ಹೋಗಿರಬಹುದು; ಆದ್ದರಿಂದ ಅವರ ಕಾಲ ಕ್ರಿ. ಶ. ೧೪೪೬ರಿಂದ ಕ್ರಿ. ಶ. ೧೫೧೮ರ ಒಳಗೆ ಎಂಬುದು ಈ ಮೂಲಕ ಸ್ಪಷ್ಟಗೊಳ್ಳುತ್ತದೆ.

**ಆಧಾರ ಸೂಚಿ ಮತ್ತು ಟಿಪ್ಪಣಿಗಳು**

*೧ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಗುರು ಪರಂಪರೆ, ಪುಟ vii- ಮತ್ತು ಜಹಗೀರುದಾನ ಪತ್ರ, ಪುಟ- ೧೪

*೨ ಜಗದ್ಗುರು ಕೊಟ್ಟೂರು ಸ್ವಾಮಿ ಗುರು ಪರಂಪರೆ, ಪುಟ - vii

ಡಾ॥ ನೀಲತ್ತಹಳ್ಳಿ ರಾಮಶೇಷನ್*

# ಸ್ವಾದಿಯ ಪೂಜ್ಯಶ್ರೀ ವಾದಿರಾಜರ ಕನ್ನಡ ಕೃತಿ ಸಂಚಯ – ಒಂದು ಸಾಂಸ್ಕೃತಿಕ ಅವಲೋಕನ

ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಪಟಿಕಾಕೃತಿಂ ।
ಆಧಾರಸ್ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ॥
ಅಭಂಗುರ ಕಲಾದಾನ ಸ್ಥೂಲ ಲಕ್ಷ್ಯತ್ವಮಿಾಯುಷೇ ॥
ತುಂಗಾಯ ಮಹತೇ ತಸ್ಮೈ ತುರಾಗಾಯ ಮುಖೇನಮಃ ॥
ತಪೋಭಕ್ತಿ ವಿರಕ್ತ್ಯಾದಿ ಸದ್ಗುಣೌಘಕರಾನಹ ।
ವಾದಿರಾಜಗುರೂನ್ ವಂದೇ ಹಯಗ್ರೀವ ಪದಾಶ್ರಯಾನ್ ॥

ಕನ್ನಡ ಸಾಹಿತ್ಯದ ಸುದೀರ್ಘ ಇತಿಹಾಸದಲ್ಲಿ ಕನ್ನಡ ನುಡಿಗಟ್ಟನ್ನು-ಜನರ ಬಳಕೆ ಮಾತನ್ನು-ಮಾಧ್ಯಮವಾಗಿರಿಸಿ ಕೊಂಡು, ತಮ್ಮ ಸಮಾಜ ಸುಧಾರಣಾ ಕಾರ್ಯ – ಸಂಸ್ಕೃತಿ ಪೋಷಣ-ಸಂವರ್ಧನ ಕಾರ್ಯವನ್ನು ನಡೆಸಿದ, ಒಂದು ಆಂದೋಲನವನ್ನೇ ನಡೆಸಿದ ಪ್ರಮುಖರು – ವಚನ ಸಾಹಿತ್ಯ ಸಂಪದವನ್ನು ಅಭಿವ್ಯಕ್ತಿಯಾಗಿಸಿದ ಶಿವಶರಣರು ಹಾಗೂ ಹರಿಭಕ್ತಿ ಪ್ರಸರಿಸಿದ ಕನ್ನಡದ ಹರಿದಾಸರು.

ಈ ದೃಷ್ಟಿಯಿಂದ ಸ್ವಾದಿಯ ಶ್ರೀ ವಾದಿರಾಜರ ಕನ್ನಡ ಕೃತಿಗಳಲ್ಲಿ ಕಾಣಬರುವ ಸಾಂಸ್ಕೃತಿಕ ಸೆಲೆ-ಅದೇ ಆ ಕೃತಿಗಳ ಸ್ಥಾಯಿ ನೆಲೆ.

ಕನ್ನಡ ನಾಡಿನ ಹರಿದಾಸ ಶ್ರೇಣಿಯಲ್ಲಿ ನಾವು ಸ್ಮರಿಸುವ ಶ್ಲೋಕ ಹರಿದಾಸ ಹೃದಯವನ್ನೇ ಚಿತ್ರಿಸುತ್ತದೆ :

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯ್ಯಾಯ ವಿಜಯಾರ್ಯ್ಯಾಯತೇ ನಮಃ ॥

ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರಲ್ಲಿ ಅಗ್ರಗಣ್ಯರು, ಮುಳುಬಾಗಿಲಿನ ಶ್ರೀ ಪಾದರಾಜರು (ಕ್ರಿ. ಶ. ೧೪೦೪-೧೫೦೨). ಅವರ ಶಿಷ್ಯರಾಗಿದ್ದು, ವಿಜಯನಗರದ ರಾಜಮನೆತನದ ಮೇಲೆಯೂ ತಮ್ಮ ಪ್ರಭಾವವನ್ನು ಬೀರಿದವರು ವರ್ಚಸ್ವಿ ಶ್ರೀ ವ್ಯಾಸರಾಯರು (ಕ್ರಿ. ಶ. ೧೪೪೭-೧೫೩೯). ವ್ಯಾಸರಾಯರು ಸಂಘಟಿಸಿದ 'ದಾಸಕೂಟ'ದ ಪ್ರಮುಖರಾದ ಪುರಂದರದಾಸರು. ದಾಸರಲ್ಲಿ ಕವಿಗಳೆನಿಸುವ ಕನಕದಾಸರು, ಪುರಂದರರು (ಕ್ರಿ. ಶ. ೧೪೮೪-೧೫೬೪) ವಿಜಯನಗರ ಪತನಾನಂತರ ಹರಿದಾಸರ ಛಿದ್ರಗೊಂಡ ಬದುಕು, ತತ್ತರಿಸಿದ ಧರ್ಮ – ಮತ್ತೆ ಕ್ರಿ. ಶ. ೧೫೯೫-೧೬೭೧ರಲ್ಲಿದ್ದ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನದಿಂದ ಸ್ಫೂರ್ತಿಯೊದಗಿ ಮೂಡಿಬಂದ ಚೀಕಲ ಪರಿವಿಯ ವಿಜಯದಾಸರು (ಸುಳಾದಿಗಳ ದಾಸರೆಂದೇ ಪ್ರಸಿದ್ಧ) ಹಾಗೂ ಅವರ ಮೂಲಕ ಹರಿದಾಸ ಸಾಹಿತ್ಯದ ಎರಡನೆಯ ಹಂತ ಇತ್ತೀಚಿನ ಶ್ರೀ ಗುರುಗೋವಿಂದ ವಿಠಲರ ತನಕ ಮುಂದುವರಿಯಿತು.

ಮಠಾಧೀಶರಾದ ಶ್ರೀ ನರಹರಿತೀರ್ಥರು, ಶ್ರೀ ಶ್ರೀ ಪಾದ ರಾಜರು, ಶ್ರೀ ವ್ಯಾಸರಾಯರು ಯಾವ ರೀತಿಯಲ್ಲಿ ಸಂಸ್ಕೃತ ಕನ್ನಡಗಳ-ಉಭಯ ಭಾಷಾ ವಿದ್ವಾಂಸರೆನ್ನಿಸಿ, ದಾಸ ಸಾಹಿತ್ಯಕ್ಕೆ ಸೇವೆ ಹೇಗೆ ಸಲ್ಲಿಸಿದರೋ ಅದೇ ರೀತಿಯಲ್ಲಿ ಹೆಸರಿಗೆ ತಕ್ಕಂತೆ ವಾದಿರಾಜರೇ ಆಗಿದ್ದುದು ಜತೆಗೆ ಮಠಾಧೀಶರಾಗಿ, ಸಂಸ್ಕೃತ ಕನ್ನಡಗಳಲ್ಲಿ ತಮಗಿದ್ದ ಪ್ರಭುತ್ವ, ತಿಳಿಗನ್ನಡ ನುಡಿಗಟ್ಟನ್ನು ಪದನರಿತು ಹದವಾಗಿ ಅಭಿವ್ಯಕ್ತಿಸುವ ಮನೋಧರ್ಮ ಉಳ್ಳವರಾಗಿದ್ದವರು ಸೋದೆಯ ಶ್ರೀ ವಾದಿರಾಜಸ್ವಾಮಿಗಳು. ಸಂಸ್ಕೃತದಲ್ಲಿ ಅವರ **ಯುಕ್ತಿಮಲ್ಲಿಕಾ** ಶಾಸ್ತ್ರ ಪ್ರಮೇಯಗಳಿಂದ ಕೂಡಿ ಉಪಾದೇಯವೆನ್ನಿಸುವಂತೆ, **ಸರಸಭಾರತೀವಿಲಾಸ, ರುಕ್ಮಿಣೀಶ ವಿಜಯ**, ಕಾವ್ಯರಸಾಸ್ವಾದನೆಯನ್ನು ಬಯಸುವ ರಸಿಕರಿಗೆ ಆಪ್ಯಾಯಮಾನವೆನ್ನಿಸುತ್ತವೆ. ಶಾಸ್ತ್ರದ ನಿಶಿತಮಾರ್ಗ – ಸಾಹಿತ್ಯದ ಸರಸ ಸರಣಿ – ವಾದಿರಾಜರಿಗೆ ಸಹಜವಾಗಿಯೇ ಫಲಿಸಿದ್ದವು. ಹಾಗೆಯೆ ಅವರ ಅದ್ಭುತ ತರ್ಕದಿಂದಾಗಿ **ಪ್ರಸಂಗಾಭರಣ ತೀರ್ಥ**ರೆಂದೇ ವಿಜಯನಗರದರಸರಿಂದ ಬಿರುದು ಸಂದಿತ್ತು. ಇದೊಂದು ಮುಖ. ಮಠಾಧಿಪತಿಗಳಾಗಿ ಮಡಿ ಮಾಡದೆ, ವಾದಿರಾಜರು ನಡಸಿದ ಸಮಾಜ ಸುಧಾರಣೆ – ಧಾರ್ಮಿಕ ಕಾರ್ಯಗಳು ಅಷ್ಟೇ ಮಹತ್ವದವು. ಉಡುಪಿಯ ಪರ್ಯಾಯ ವ್ಯವಸ್ಥೆ, ಧರ್ಮಸ್ಥಳ ಕ್ಷೇತ್ರದಲ್ಲಿ ಶ್ರೀ ಮಂಜುನಾಥದೇವರ ಪ್ರತಿಷ್ಠೆ, ಅಲ್ಲಿದ್ದ ಬ್ರಾಹ್ಮಣ-ಜೈನ, ಅರಸು ಧರ್ಮಸಮನ್ವಯ, ದಕ್ಷಿಣ ಕನ್ನಡದ 'ಮಟ್ಟು' ಗ್ರಾಮದವರನ್ನು 'ಚಕ್ರಾಂಕನ' ಮಾಡಿ, ತಮ್ಮೊಂದಿಗೆ

---

* ಭಾರತೀಯ ಜೀವ ವಿಮಾನಿಗಮ, ಮೈಸೂರು ವಿಭಾಗ ಕಚೇರಿ, ಮೈಸೂರು – ೫೭೦ ೦೧೦

ಸೇರಿಸಿಕೊಂಡದ್ದು, ಅನ್ಯಮತಿಯರಾದ ಕೆಲವು ಪಂಗಡದವರಿಗೆ ವೈಷ್ಣವ ದೀಕ್ಷೆಯಿತ್ತು ಪ್ರೀತಿಯಿಂದ ಕಂಡದ್ದು, ಅಸ್ಪೃಶ್ಯರೆನ್ನಿಸಿಕೊಂಡವರಲ್ಲೂ ತೋರಿದ ಪ್ರೀತಿ, ಇವುಗಳೆಲ್ಲವೂ ಈಗಿನ ಕಾಲಮಾನಕ್ಕೆ ಅಷ್ಟೇನೂ ಸುಧಾರಣೆ ಅನ್ನಿಸದಿದ್ದರೂ ಅಂದಿನ ಕಾಲಕ್ಕೆ (ಕ್ರಿ ಶ. ೧೪೮೦-೧೬೦೦) ಅವು ಖಂಡಿತಾ ಬೆಲೆಯುಳ್ಳ ಸುಧಾರಣಾ ಕಾರ್ಯಗಳೆಂದೆ ಪರಿಗಣಿಸಬೇಕಾಗುತ್ತದೆ.

ವಾದಿರಾಜರ ಬದುಕಿನ ಅವಧಿ ಕ್ರಿ. ಶ. ೧೪೮೦-೧೬೦೦. ೧೨೦ ವರ್ಷಗಳ ನಿಡಿದಾದ ಬದುಕು. ಕುಂದಾಪುರದ ಸಮೀಪ ಆನೆಗುಡ್ಡೆ-ಕುಂಭಾಸಿ ಸುಪ್ರಿಸಿದ್ಧ ಗಣಪತಿ ಕ್ಷೇತ್ರ. ಅಲ್ಲಿಗೆ ಸನಿಹವಿರುವ ಹೂವಿನಕೆರೆ ಗ್ರಾಮದಲ್ಲಿದ್ದ ರಾಮಾಚಾರ್ಯ - ಸರಸ್ವತೀದೇವಿಯರ ಕಿರಿಯ ಮಗನಾಗಿ, ಅಂದು ಉಡುಪಿ ಮಠಾಧೀಶರಾಗಿದ್ದ ಶ್ರೀ ವಾಗೀಶತೀರ್ಥರ ಆಶೀರ್ವಾದ ಬಲದಿಂದ ಜನಿಸಿದ ಭೂವರಾಹ ನಾಮಾಂಕಿತ ಬಾಲಕ, ಸ್ವಾಮಿಗಳ ಅನವರತ ಕೃಪೆಗೆ ಪಾತ್ರನಾದ. ಎಂಟು ವರ್ಷಕ್ಕೇ 'ಭೂವರಾಹ'ನಿಗೆ ಸನ್ಯಾಸ ದೀಕ್ಷೆ ವಾದಿರಾಜರೆಂಬ ಅರ್ಥವತ್ತಾದ ಅಭಿದಾನ. ಆ ಸಂದರ್ಭದಲ್ಲೆ ಅವರು ರಚಿಸಿರುವ ಒಂದು ಉಗಾಭೋಗ, ಮುಂದೆಯೂ ಅವರು ಹೇಗೆ ತಮ್ಮ ಸಾರ್ಥಕ ಬದುಕನ್ನು ನಡೆಸಿದರೆಂಬುದರ ದ್ಯೋತಕವೆನಿಸುತ್ತದೆ.

ಗುರುಭಕುತಿ ಬೇಕು ಹಿರಿಯರ ಕರುಣೆ ಬೇಕು
ಹರಿಕಥಗಳ ನಿತ್ಯ ಕೇಳುತಿರಬೇಕು
ಮುಕುತಿಬೇಕು ವಿಷ್ಣುವಿನಾರಾಧನೆ ಬೇಕು
ವರಮಂತ್ರಜಪಬೇಕು ತಪಬೇಕು ಪರಗತಿಗೆ
ಶಿರಿಹಯವದನನ ಪರಮಾನುಗ್ರಹಬೇಕು
ವಿಷಯ ನಿಗ್ರಹಬೇಕು.

ವಾದಿರಾಜಸ್ವಾಮಿಗಳ ಕೀರ್ತನ ಸಂಪದವನ್ನು ಗಮನಿಸಿದಾಗ ಸಾವಿರಾರು ಕೃತಿಗಳನ್ನು ಅವರು ರಚಿಸಿರುವರೆನ್ನಲಾದರೂ, ಈವರೆಗೆ ದೊರೆತಿರುವುವು ನೂರಾರು ಮಾತ್ರ. ಅವರ ಬಿಡಿಬಿಡಿಯಾದ ಕೀರ್ತನೆಗಳದ್ದು ಒಂದು ವರ್ಗವೆನ್ನಿಸಿದರೆ, ದೀರ್ಘಕೃತಿಗಳಾದ ವೈಕುಂಠವರ್ಣನೆ, ಲಕ್ಷ್ಮೀಶೋಭಾನೆ, ಸ್ವಪ್ನಪಟ, ಗರುಡಕ್ರಿಯೆ, ತತ್ವಸುವ್ವಾಲಿ, ಭ್ರಮರಗೀತೆ, ನಾರದಕೊರವಂಜಿ ಮುಂತಾದುವನ್ನು ಬೇರೊಂದು ವರ್ಗವಾಗಿ ಪರಿಗಣಿಸಬಹುವಾಗಿದೆ. ಒಂದು ಮಾತು ಹೇಳುವುದಾದರೆ, ಅವರ ಎಲ್ಲ ಕೃತಿಗಳಲ್ಲೂ ದೈವಭಕ್ತಿ, ತಾವು ನಂಬಿದ ಶಾಸ್ತ್ರ ನಿಷ್ಠೆ, ತಿಳಿಗನ್ನಡ ದೇಸಿಯಲ್ಲಿ ತಿಳಿಸುವ ಪ್ರಭುತ್ವ, ನಿಚ್ಚಳವಾಗಿ ತೋರಿಬರುತ್ತವೆ.

ಪ್ರತಿಷ್ಠಿತ ವಿದ್ಯಾವಂತ, ಪಾಂಡಿತ್ಯಮದದಿಂದ ಬೀಗಿ, ನಾನಾ ಪ್ರಾಂತ್ಯಗಳನ್ನು ತಿರುಗಿ, ವಿಷಯವಾಸನೆಯಿಂದ ವಿವೇಕಗೆಟ್ಟು-ಹದಗೆಟ್ಟ ಬದುಕಿನ ಚಿತ್ರವೇ ಒಂದು ಕೃತಿಯಲ್ಲಿ ಮೂಡುತ್ತದೆ.

ವಿಷಯಾಸೆ ಬಿಡಲೊಲ್ಲದೊ ದೇವ
ವಸುದೇವಸುತ ನಿನ್ನ ವಶವಾಗೋತನಕ ॥
.....................................

ಓದಿದೆನು ವಿದ್ಯೆಗಳ ಓದನದ ಬಯಕೆಯಲಿ
ವೇದಶಾಸ್ತ್ರಗಳನ್ನು ಪಠಿಸಿ ನಟಿಸಿ...''

ಎಂಬುವಲ್ಲಿ ವ್ಯರ್ಥಕಾಲಹರಣದ ಬಗ್ಗೆ ವಾದಿರಾಜರ ಕಳಕಳಿ.

**ಸಕಲ ಸಾಧನ-ಮುಕುತಿಗೆ ಸಾಧನ-ಹರಿಧನ-** ಆ ಪಾರಮಾರ್ಥಿಕ ಸಂಪತ್ತು ವಾದಿರಾಜರಿಗೆ ಬೇಕಾಗಿರುವುದು. ಅಂದರೆ, ಇಲ್ಲಿ, ಬದುಕು ಬೇಡವೆಂದಲ್ಲ - ಪಲಾಯನವಾದವೂ ಇಲ್ಲ. ಮಾನವ ಜನ್ಮವನ್ನು ಯಾವರೀತಿಯಲ್ಲಿ ಸಾರ್ಥಕಗೊಳಿಸಿಕೊಳ್ಳಬೇಕೆಂಬ ಕಳಕಳಿ ಮಾರ್ದನಿಗೊಡುತ್ತದೆ.

ವಾದಿರಾಜರ 'ಭಕ್ತಿಮೊರೆ'! ಇದರ ಜೊತೆಗೆ ''ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದ ಸೇವನಂ ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ'' ಎಂಬ ನವವಿಧ ಭಕುತಿಯಲ್ಲಿ ವಾದಿರಾಜರಿಗೆ ತುಂಬು ವಿಶ್ವಾಸ.

*ಭಕುತಿ ಕಡಲೆ ಜ್ಞಾನ ವೈರಾಗ್ಯ ಬೆಲ್ಲದ*
*ಮುಕುತಿ ಆನಂದ ಸುಖದ ಕ್ಷೀರ ಲಡ್ಡಿಗೆ*
*ಯುಕುತಿ ಧಾನ್ಯ ಕೊಟ್ಟು ನೀನು ಎಲ್ಲ ಮಾತಲಿ*
*ಶಕುತಿ ಸಂತೋಷ ಮಹಿಮ ತೋರ ಬಂದೆಯ*

– ಎಂಬೀ ಸಾಲಿನಲ್ಲಿ ವಾದಿರಾಜರು, ತಮ್ಮ ಆರಾಧ್ಯದೇವತೆ ಹಯಗ್ರೀವರಿಗೆ, ಅರ್ಪಿಸುವ ಹಯಗ್ರೀವ ನೈವೇದ್ಯದ ಬಣ್ಣನೆಯೂ ಮೂಡಿ ಬಂದಿದೆ. ಎಲ್ಲ ಪದಾರ್ಥಗಳ ಮುಕುತಿ ಸಾಧನ ಒಂದೊಂದು ಪರಿಕರವೆಂದೇ ಅವರ ಭಾವನೆ.

ವಾದಿರಾಜರು ತಾವು ಪರ್ಯಟನ ಕೈಗೊಂಡು ಕಂಡ ಅನೇಕ ತೀರ್ಥ-ಕ್ಷೇತ್ರ-ಪರಿಸರ ಎಲ್ಲ ವರ್ಣಿಸುವ *ತೀರ್ಥಪ್ರಬಂಧ* ವೆಂಬ ಕೃತಿಯನ್ನೇ ರಚಿಸಿದ್ದಾರೆ.

ತಿರುಪತಿಯ ಶ್ರೀನಿವಾಸದೇವರನ್ನು ಕುರಿತ ಅನೇಕ ಕೀರ್ತನೆಗಳಲ್ಲಿ ಒಂದು - ಸುಳಾದಿ- ಒಂದು ಕವಿತೆ, ಭಾವರಸ ಸ್ಪಂದಿಯೆ ಆಗಿದೆ.

**ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ**
**ಗಿರಿಯ ತಿಮ್ಮರಾಯನ ಚರಣಗಳ ಕಂಡೆನಾ**
**ಅರುಣ ತಳದಲಿಪ್ಪ ಅಂಕುಶ ಧ್ವಜ ವಜ್ರದಿ**
**ಸುರುಚಿರ ದೇಚಗಳ ಸೊಬಗ ಕಂಡೆನಾ**

ಹೀಗೆಯೆ ಉಡುಪಿಯ ಶ್ರೀ ಕೃಷ್ಣನನ್ನು ಕುರಿತ ಕೀರ್ತನೆಗಳು, ಬಾಲನೇನೆ ನಿನ್ನ ಮಗನು ಗೋಪಾಲಕೃಷ್ಣನು, ಯಶೋದೆ ಕೃಷ್ಣನನ್ನಾಡಿಸುವ ಕೃತಿ, ಇದೇ ತೆರನಾಗಿ ದಶಾವತಾರ ನಿರೂಪಣದ ಕೃತಿಗಳನೇಕ ವಾದಿರಾಜರ ಕವಿಹೃದಯ - ಅಲ್ಲಿರುವ ಸಂಸ್ಕೃತಿ ರಸಾಸ್ವಾದನೆ ಮಾಡಿಸುವಂಥವು.

*ಬಿಟ್ಟಕಣ್ಣನು ಮುಚ್ಚಲೊಲ್ಲನೆ ದೊಡ್ಡ*
*ಬೆಟ್ಟಕ್ಕೆ ಬೆನ್ನೊತ್ತಿ ನಿಂದನೇ ಬಲು*

ಸಿಟ್ಟಿನಲಿ ಕೋರೆಹಲ್ಲ ಕಿರಿದನ ಈಗ
ಗಟ್ಟಿ ಉಕ್ಕಿನ ಕಂಬವೊಡೆದು ಬಂದನೆ ರಂಗ

ಬತ್ತಲೆ ನಾರಿಯರ ಅಪ್ಪಿದ ಹೋಗಿ
ಉತ್ತಮ ಅಶ್ವವ ಹತ್ತಿದ
ಹತ್ತವತಾರವ ತೋರಿದ ದಿಟ್ಟ
ಮೂರ್ತಿ ನಮ್ಮ ಚೆಲುವ ಶ್ರೀ ಹಯವದನ

- ಎಂಬೀ ಕೃತಿ ವಾದಿರಾಜರ ನಿರೂಪಣ ವೈವಿಧ್ಯ, ಚಮತ್ಕೃತಿಗೆ ಸಾಕ್ಷ್ಯವೀಯುತ್ತದೆ.

ತಾಳ್ಮೆ-ಸೈರಣೆ-ಸಹನೆ- ಸಂಸ್ಕೃತಿಯ ಒಂದು ಲಕ್ಷಣ ''ತಾಳುವಿಕೆಗಿಂತ ತಪವು ಇಲ್ಲ'' ಎಂಬುದು ವಾದಿರಾಜರ ಒಂದು ಕೃತಿ :

ನಕ್ಕು ನುಡಿವರ ಮುಂದೆ ಮುಚ್ಚರಿಸದೆ ತಾಳು,
ಅಕ್ಕರವ ಮಾಡುವರ ಅಕ್ಕರದಿ ತಾಳು,
ಉಕ್ಕೋ ಹಾಲಿಗೆ ನೀರು ಇಕ್ಕಿದಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು''

- ಎಂಬಲ್ಲಿ ಒತ್ತುಗೊಟ್ಟಿರುವ ಸಾಲು ಎಷ್ಟು ನೈಜ ವೆನಿಸುವುದಲ್ಲವೆ?

ಜೋಜೋ ಜೋಜೋ ಜೋಜೋ ಮುಖ್ಯಪ್ರಾಣ
ಜೋಜೋ ಜೋಜೋ ಮಲೆವರ ಗಂಟಲಗಾಣ

- ಎಂಬುವದು ಪ್ರಾಣದೇವರನ್ನು ಕುರಿತ ಹಾಗೂ ಅವತಾರವೆಂದು ಆದ ಹನುಮ-ಭೀಮ-ಮಧ್ವರನ್ನು ಕುರಿತ ಕೃತಿಯೂ ಹೌದು.

ಜಾನಪದ ಸೊಗಡು-ಬೆಡಗು-ಧಾಟಿಯ ಮೂಲಕ ಸಾಂಸ್ಕೃತಿಕ ಅವಲೋಕನಕ್ಕೆ ಅವಕಾಶವೀಯುವ ಕೃತಿಗಳನೇಕ ವಾದಿರಾಜರು ವಾಚಿಸಿದ್ದಾರೆ. ಅಂಥ ಒಂದು ಸಾಲು ಇಲ್ಲಿ ಗಮನಿಸುವ-

ದಿಮ್ಮಿಸಾಲೆ ರಂಗ ದಿಮ್ಮಿಸಾಲೆ
ದಿಮ್ಮಿ ಸಾಲೆನ್ನಿರೊ ಗೋಮಕ್ಕಳೆಲ್ಲ ನೆರದು
ಗೋಪಾಲನನೇರಿ ಮೇಲೆ ಒಪ್ಪಿ ಭಸ್ಮಸೂಸುತ

ಎಳೆಗಣ್ಣಿನ ಬಾಲೇರರು ಹರುಷದಿಂದ ಬಂದು ನಿಂತು
ವರದ ಕೇಶವನ ಮೇಲೆ ಪರಿದು ಸೂಸಿ ಭಸ್ಮವ

....ವಾದಿರಾಜಗೊಲಿದು ಬಂದು ಸೋದೆಪುರದಲ್ಲಿ ನಿಂದ
ಮೋದಿ ಹಯವದನನ ಮೇಲೆ ಪರಿಸೂಸಿ ಭಸ್ಮವ....

ವಾದಿರಾಜರ ''ಧವಳಗಂಗೆಯ ಗಂಗಾಧರ ಮಹಲಿಂಗ ಮಾಧವನ ತೋರಿಸೈಯ ಗುರುಕುಲೋತ್ತುಂಗ'', ''ಮಾವನ್ನಗೆದ್ದ ಮನೋಹರ ಮೂರ್ತಿ'', ಎಂದೆಲ್ಲ ಸಾಧುಸಜ್ಜನರಿಗೆ ಸುರ ಚಕ್ರವರ್ತಿಯಾದ ಮುಕ್ಕಣ್ಣನನ್ನು ಕುರಿತು ಹಾಡಿದ ಸ್ತುತಿ-ವಿಶಿಷ್ಟ ತೆರನಾದ್ದು. ಶ್ರೀ ರಂಗನಾಥನು ಕುದುರೆಯೇರಿ ಬರುವ ವೈಹಾಳಿಯ ವರ್ಣನೆಯ ವಿವರ, ಶ್ರೀ ವಾದಿರಾಜರ ರಸಾರ್ದ್ರ ಹೃದಯದ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ. ಸ್ವಾಮಿಯ ಮೆರವಣಿಗೆ, ಸಾಲುದೀವಟಿಗೆ, ಹಗಲುಬತ್ತಿ ವೈಭವ, ನಾನಾ ವಾದ್ಯ ಮೇಳ-ನರ್ತನ ಎಲ್ಲ ಸಂಸ್ಕೃತಿ ಚಿತ್ರಣ. ಇನ್ನು ನೈವೇದ್ಯದ ವೈಖರಿಯೊ!

ಹಚ್ಚನೆ ಹಸರು ಬೇಳೆ
ಮುಟ್ಟಿ ತಂದ ಕೆನೆ ಮೊಸರು ಮಿಸಲು ಬೆಣ್ಣೆಯು
ಅಚ್ಚತುಪ್ಪದಿ ಪಕ್ವವಾದ ಅತಿರಸ ಹುಗ್ಗಿಗಳು
ಮೆಚ್ಚಿ ಉಂಡು ಪಾನಕ ನೀರು ಮಜ್ಜಿಗೆಗಳು

ಕೀಚಕನ ವಧೆ ಕುರಿತ ಕೀರ್ತನೆ, ಒಂದು ದೃಶ್ಯವನ್ನೇ ಚಿತ್ರಿಸುತ್ತ, ಪರಸತಿ ಬಯಕೆ - ಸಂಹಾರದ ಫಲಶ್ರುತಿ ಹಾಡುತ್ತದೆ. ಹಾಗೆಯೆ ಶ್ರೀ ಹರಿಯ ಮೋಹಿನಿರೂಪನ್ನು ಕಂಡು ಮರುಳಾದ ಹರನ ಪ್ರಸಂಗ - ಅಲ್ಲಿನ ಕೆಲವು ಸಾಲುಗಳು ವೈವಿಧ್ಯ ವೆನಿಸುತ್ತವೆ.

ತೆಂಗಿನ ತಿಳಿಗೊಳ ನಿಂಬೆಕಿತ್ತಲೆ ಬಾಳೆ
ಹೊಂಬಾಳೆ ಅಡಕೆ ಬನಗಳು
........................................
ಅಮ್ಮಾಲೆ ಆಡೋಳು ಒಮ್ಮೊಮ್ಮೆನೋಡೋಳು
ತನ್ನೊಳಗೆ ತಾನು ನಗುವೋಳು
ತನ್ನೊಳತಾನು ನಗುವೋಳು ಬೊಮ್ಮನ
ಮಗನ ಮರುಳು ಮಾಡಿ ನಡೆದಳು

- ಎಂಬಲ್ಲಿರುವ ಪ್ರಾಸವೈವಿಧ್ಯ, ''ತೆಂಗಿನ ತಿಳಿಗೊಳ'' ವೆಂಬಲ್ಲಿ ಸೀಯಾಳದ ಗಾತ್ರ, ವಿಶಿಷ್ಟ ತೆರನಾಗಿ ಮನವರಿಕೆ ಯಾದೀತು.

ಶ್ರೀ ಹರಿಯನ್ನು ಹಯವದನನ ಮಾತಿನ ಮೂಲಕ ದರ್ಶಿಸುವ ವಾದಿರಾಜರ ಒಂದು ಕೀರ್ತನೆಸಾಲು ಅವರ ಕಲ್ಪನೆಯ ಮಹತಿಗೆ ಸಾಕ್ಷಿ:

ಕ್ಷೀರಾಂಬುಧಿಯನ್ನೆ ತೊಟ್ಟಿಲು ಮಾಡಿ
ಓ ರಂತೆ ನಾಲ್ಕು ವೇದಗಳ ನೇಣನ ಮಾಡಿ
ಧೀರಶೇಷನು ಬಂದು ಹಾಸಿಗೆ ಹಾಸಲು
ನಾರಿಯರೊಡನೆ ಮಲಗಿದೆಯೊ ಹಯವದನ

- ಎಂಬುವ ಜೋಗುಳ ಅಷ್ಟೇ ಮನೋಜ್ಞ.

ತಾವು ನಂಬಿ, ನೆಚ್ಚುವ ಹರಿಸರ್ವೋತ್ತಮತ್ವದ ಪ್ರತಿಪಾದನೆ, ಮಧ್ವಮತ ನಿಷ್ಠೆ ವಾದಿರಾಜರ ಕೃತಿಗಳಲ್ಲಿ ಹಾಸು ಹೊಕ್ಕಾಗಿರುವ ಅಂಶ. ಅದರ ಜತೆಗೇ ಬಳಸುವ ಕನ್ನಡ ನುಡಿಗಟ್ಟು ಮನನೀಯ ವೆನ್ನಿಸುತ್ತದೆ.

ಶ್ರೀ ನಿವಾಸನಾಮಸುಧಾರಸ
ಏನುರುಚಿಯೋ ಕಾಣೆ ಜೇನುತುಪ್ಪದಂತೆ
ಸಕ್ಕರೆ ಬೆರಸಿದ ಚೊಕ್ಕಾಪಾನಕದಂತೆ
ಮುಕ್ಕು ಮಾಣಿಸುತಿದೆ ರಕ್ಕಸಾರಿಯ ಧ್ಯಾನ

– ಇಲ್ಲಿ 'ಸಕ್ಕರೆ' ಪದ ಬಳಕೆಯಾಗಿರುವುದು ಗಮನೀಯ.

ವಾದಿರಾಜರ ಕೆಲವು ಸಾಲುಗಳಂತು ಸಮಯೋಚಿತ ಚಿಂತನಶೀಲ ಸೂಕ್ತಕಗಳಾಗುತ್ತವೆ :

''ಡಿಲ್ಲಿಯ ರಾಯನ ಬಳಿಗೆ ಪೋಗಿ ಫುಲ್ಲಿಗೆಯ ಬೇಡುವರೆ''
''ಕೊಗಳತೆಗೆ ಕೊಂಚ ದೂರವೊ ಹರಿಯ ಪುರ''
''ನಲ್ಲನಿಲ್ಲದ ಸತಿ ಚೆಲುವಿದ್ದು ಫಲವೇನು
ಬಲ್ಲವರಿಲ್ಲದ ಸಭೆಯಿದ್ದು ಫಲವೇನು''
''ಕೆಸರ ತೊಳೆದನೀರು ಕೆಸರ ಬಾಧಿಪುದೆ ತಾ
ಮಸವೈರಿ ಸೂರ್ಯನೊಳು ತಮವೆ ''

ವಾದಿರಾಜರ ಜಾನಪದ ಸೊಗಡುಳ್ಳ ಅನೇಕ ಪದಗಳು ಇವೆ. ತುಳು ಹಾಗೂ ತೆಲುಗು ಪದ್ಯಗಳ ಸಾಲುಗಳನ್ನು ಅವರು ಸುಲಲಿತವಾಗಿ ರಚಿಸಬಲ್ಲರು. ಸುವ್ವಿಪದ ನಮ್ಮ ಹಳ್ಳಿಯ ಸಂಸ್ಕೃತಿ ನೆಲೆಯಾದ ಜಾನಪದದ ಒಂದು ಅವಿಭಾಜ್ಯ ಅಂಶ ಎನಿಸಬಹುದಾದ ಹಾಡು–

ಸುವ್ವಿ ಸುವ್ವಿ ನಮ್ಮ ಶ್ರೀ ರಮಣಗೆ ಸುವ್ವಿ
ಸುವ್ವಿಸುವ್ವಿ ನಮ್ಮ ಭೂರಮಣಗೆ ಸುವ್ವಿ
ಸುವ್ವಿ ಎಂದು ಪಾಡಿ ಸಜ್ಜನರೆಲ್ಲ ಕೇಳಿ
..............................................
ಅತ್ತೆಸೊಸೆಯರಿದ್ದಾಗ ಮನೆಯೊಳು ಮತ್ಸರವು
ಕತ್ತೆನಾಯಿಗಳಂತೆ ಬೆರಸಲು ಸುವ್ವಿ
ಕತ್ತೆ ನಾಯಿಗಳಂತೆ ಬೆರಸಲು ಅದರಿಂದ
ಪ್ರತ್ಯೇಕ ದೇವರ ಇರವು ಸುವ್ವಿ........
..............................................

ಹೀಗೆಯೇ 'ಕೋಲುಪದ' ಗಮನಿಸುವ :

ಕಾಮವತ್ತನ ಕೋಲೆ ನೀ
ಸ್ತಿಮ ಚರಿತ್ರನ ಕೋಲೆ
ಶ್ಯಾಮಲಗಾತ್ರದ ಕೋಲೆನಮ್ಮ
ಕಾಮಿತವಿತ್ತನ ಕೋಲೆ

ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲೆ

ವಾದಿರಾಜನಿಗೊಲಿದು ಸೋದೆಪುರದಿನಿಂದು
ಮೋದಿತ್ರಿವಿಕ್ರಮನ ಕೋಲೆ ಕೋಲು

'ನಾರದಕೊರವಂಜಿ' – ವಾದಿರಾಜರ ಒಂದು ಕಥನಕಾವ್ಯ. ಇಲ್ಲಿ ಲೀಲಾಜಾಲವಾಗಿ ತೆಲುಗನ್ನು ಬೆರಸುವ ವಾದಿರಾಜರ ಭಾಷಾ ಸಂಪತ್ತು ಗಮನಿಸುವಂಥದು.

ಶಂಖ ಚಕ್ರಯುಗಲ
ಪಂಕಜ ನಾಭುಂಕು ಪಂಕಜಮುಖಿ ನೀವು
ಪಾಣಿಗ್ರಹಣಮು ಚೇಸಿ ಕೊಡೆನಮ್ಮಾ
ಚೆಲುವಾ ನಾ ಮಾಟಾ ನೀಕು ಪುಚ್ಚಾ
ಚೆಲುವಾ ನಾ ಮಾಟ

ಹೆಣ್ಣುಮಕ್ಕಳು ಗುಂಡು ವೃತ್ತಾಕಾರದಲ್ಲಿ ನಿಂತು ಹಾಡುವ, ನರ್ತಿಸುವ ಜಾನಪದ ನೃತ್ಯ – ಗುಬ್ಬಿಹಾಡು

ಗುಬ್ಬಿಯೊಳೊ ಗೋವಿಂದ ಗೋವಿಂದಾ
ಗೋವಿಂದ ಗೋವಿಂದಾನೆಂದು ನೆನೆಯಿರೊ ಗುಬ್ಬಿಯೊಳು

– ಎಂದು ಮುಂದರಿದು ಕೇಶವನ ೨೪ ನಾಮಗಳನ್ನು ವರ್ಣಿಸುತ್ತದೆ.

ವಾದಿರಾಜರ, ವಾಗ್ವಿಲಾಸ – ಪ್ರಾಸ ನರ್ತನಗೈವಂತೆ ಮಾಡುತ್ತದೆ : ಬೊಮ್ಮ ನಿಮ್ಮ ಹೆಮ್ಮೆಗಿಮ್ಮೆ ಸುಮ್ಮನೆ ಕಮ್ಮು ಕಿಮ್ಮೆನ್ನ ಬೇಡ ರಮ್ಯ ರಮೇಶ ಹಯವದನ ಅಮ್ಮಮ್ಮ ನಿಮ್ಮ ಗುರುವಲ್ಲದೆ ಹಮ್ಮು ಉಮೇಶ ನಿಮಗೆ ಪರಬೊಮ್ಮವಿದಿರ ದಮ್ಮದಯ್ಯ ನೆಮ್ಮಿ ಇವನ ಧರ್ಮದಿರವ ಭಸುಮ್ಮಾಸುರನ ಗೆಲ್ಲೆಯ ತಮ್ಮ ತಮ್ಮ ಸೀಮೆಲೊಳ್ಮಿಕ್ಕ ಸುಮ್ಮನಸರ ಸಮ್ಮೋಹವನು....

ಸಿರಿಗನ್ನಡ ಸೊದೆಯೀವ ಸ್ವಾದಿಯ ವಾದಿರಾಜರ ಕನ್ನಡ ಕೃತಿರಚನೆಗಳು ಹೀಗೆ ಸಾಂಸ್ಕೃತಿಕ ಅಧ್ಯಯನಕ್ಕೆ ತಮ್ಮದೇ ಆದ ಆಕರವೊದಗಿಸುತ್ತವೆ.

ವಾದಿರಾಜರು ತಮ್ಮ ಪ್ರಿಯ ಅರಸಪ್ಪನಾಯಕನ ಮಗಳ ಮಾಂಗಲ್ಯಭಾಗ್ಯ ಉಳಿಸಲೆಂದು ಹಾಡಿದ ಸಾಂಗತ್ಯ ಧಾಟಿಯ ಹಾಡು, ''ಲಕ್ಷ್ಮೀಶೋಭನ ಹಾಡು (ಪದ)'' ಸುಪ್ರಸಿದ್ಧ. ಇದೊಂದು ಭಕ್ತಿಸ್ಪಂದಿ ಕಾವ್ಯ ಆದಂತೆಯೆ ಜಾನಪದದ ಸೊಗಡನ್ನೂ ಹೊಂದಿದೆ.

ಸೋ ಎನ್ನಿರೇ ಸೋಬಾನವೆನ್ನಿರೇ..... ಎಂದೇ ಶ್ರುತಿಸೊಲ್ಲು.
ಶೋಭನವೆನ್ನಿ ಸುಗುಣನಿಗೆ
ಶೋಭನವೆನ್ನಿರಿ ತ್ರಿವಿಕ್ರಮರಾಯಗೆ
ಶೋಭನವೆನ್ನಿರಿ ಸುರಪ್ರಿಯಗೆ

ಕ್ಷೀರಸಾಗರದಲ್ಲಿ ಲಕ್ಷ್ಮೀದೇವಿ ಉದಯಿಸಿ ದಳೆಂಬಲ್ಲಿಂದ ಕತೆಯಾರಂಭ. ಅನಂತರ ಹರಿಗೆ ಆಕೆ ಒಲಿದು, ವಧುವಾದದ್ದು. ಒಟ್ಟಾರೆ ಈ ಪದ್ಯಗಳಲ್ಲಿ ವಾದಿರಾಜರ ಕವಿಹೃದಯ ಸಹೃದಯರ ಮನವೆಬ್ಬಿಸುತ್ತದೆ.ಒಂದು ಮಂಗಲದ ಸಾಲಿನಿಂದ ವಾದಿರಾಜರ ಕನ್ನಡಕೃತಿಗಳ ಕುರಿತ ಈ ಅವಲೋಕನಕ್ಕೆ ಫಲಶ್ರುತಿ ಹಾಡಬಹುದು.

ಜಯಮಂಗಳಂ ನಿತ್ಯ ಶುಭ ಮಂಗಳಂ
ವೈಕುಂಠವಾಸನಿಗೆ ವಾಣೀಶಗ್ವಲಿದವಗೆ
ಲೋಕದಲ್ಲಿ ಪ್ರಹ್ಲಾದಗ್ವಲಿದ ಲಕ್ಷ್ಮೀಶಗೆ
ಪ್ರಾಕೃತದಲಿ ವಸುದೇವ ಪುತ್ರನೆಂದೆನಿಸಿ
ಜೋಕೆಲಿ ಗೋಕುಲಕೆ ಜಾರಿ ಬಂದವಗೆ

ಪ್ರೊ|| ಜಿ. ಎಸ್. ದೀಕ್ಷಿತ್*

# ಕಲ್ಯಾಣ ಕ್ರಾಂತಿಯ ಕಾಲ

ಕಲ್ಯಾಣ ಕ್ರಾಂತಿಯು ೧೧೬೭-೬೮ರಲ್ಲಿ ನಡೆಯಿತೆಂದು ಸದ್ಯದ ತಿಳಿವಳಿಕೆಯು. ಇದಕ್ಕೆ ಇರುವ ಒಂದೇ ಒಂದು ಆಧಾರವೆಂದರೆ ಬಿಜ್ಜಳನ ಕೊನೆಯ ಶಾಸನ ೧೧೬೮ರದು. *೧ ಇದಾದ ಮೇಲೆ ಅವನ ಶಾಸನಗಳು ಇಲ್ಲದಿರುವುದರಿಂದ ಅವನ ಕೊಲೆ ೧೧೬೮ರಲ್ಲಿ ಆಗಿರಬೇಕು; ಅದಕ್ಕೆ ಸ್ವಲ್ಪ ಮುಂಚೆ ಬಸವಣ್ಣನವರು ಮತ್ತು ಶರಣರು ಬೇರೆ ಬೇರೆ ಕಡೆ ಹೋದರು; ಆಗ ಕಲ್ಯಾಣದಲ್ಲಿ ಕ್ಷೋಭೆಯಾಯಿತು; ಆ ಪಟ್ಟಣವು ಕೆಟ್ಟು ಹಾಳಾಯಿತು; ಈ ಬೆಳವಣಿಗೆಗೆ ಎಲ್ಲರೂ ಕಲ್ಯಾಣಕ್ರಾಂತಿ ಯೆನ್ನುತ್ತಾರೆ. ಇದು ೧೧೬೮ರಲ್ಲಿ ಆಯಿತೆಂದು ಎಲ್ಲರೂ ಒಪ್ಪಿಕೊಂಡ ಹಾಗೆ ಕಾಣುತ್ತದೆ.

೧೧೬೮ರಲ್ಲಿ ಬಿಜ್ಜಳನ ಕೊನೆಯ ಶಾಸನ ದೊರಕುವುದರಿಂದ ಮತ್ತು ಮುಂದೆ ಅವನ ಶಾಸನವಿಲ್ಲದಿರುವುದರಿಂದ ಅವನೇ ಇಲ್ಲವೆಂದು ಹೇಳುವುದು ಅಷ್ಟು ಸಮಂಜಸವಲ್ಲ. ಅವನು ೧೧೮೪ರ ವರೆಗು ಜೀವಿಸಿದ್ದ ಮತ್ತು ಆಗ ಅವನ ಕೊಲೆ ಮತ್ತು ಕಲ್ಯಾಣ ಕ್ರಾಂತಿ ಆಯಿತೆಂದು ಹೇಳಲು ಹೆಚ್ಚು ನಂಬಲರ್ಹ ಆಧಾರ ವಿದೆಯೆಂದು ತೋರಿಸುವುದೇ ಈ ಪ್ರಬಂಧದ ಉದ್ದೇಶ.

ಇದನ್ನು ತಿಳಿದುಕೊಳ್ಳಲಿಕ್ಕೆ ಕಲ್ಯಾಣದಲ್ಲಿ ಕಲಚುರಿಗಳ ಆಳಿಕೆ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯ. *೨ ಮಹಾಮಂಡಳೇಶ್ವರ ಬಿಜ್ಜಳನು ಬಲಿಷ್ಠನಾದುದರಿಂದ ಮತ್ತು ಅವನ ಚಕ್ರವರ್ತಿ ಚಾಳುಕ್ಯ ಮೂರನೆ ತೈಲಪನು ಬಲಹೀನ ನಾದುದರಿಂದ ಅವನನ್ನು ಬದಿಗೊತ್ತಿ ಅವನ ಸಿಂಹಾಸನವನ್ನು ಬಿಜ್ಜಳನು ಆಕ್ರಮಿಸಿದುದು ಎಲ್ಲರಿಗೂ ತಿಳಿದ ವಿಷಯ. ಈ ಆಕ್ರಮಣವನ್ನು ಚಾಳುಕ್ಯ ವಂಶಜರು ಮತ್ತು ಅವನಿಗೆ ನಿಷ್ಠಾವಂತರಾದ ಅಧಿಕಾರಿಗಳು ಸಹಿಸಿರಲಿಲ್ಲ. ಇದಲ್ಲದೆ ಬಿಜ್ಜಳನ ಮನೆತನದಲ್ಲಿಯೇ ಅವನ ತಮ್ಮ, ಕೆಲವು ಮಕ್ಕಳು, ಒಬ್ಬ ಮೊಮ್ಮಗ - ಇವರೆಲ್ಲಾ ಬಿಜ್ಜಳನ ಮಾದರಿಯನ್ನು ಅನುಸರಿಸಿ ಅವನ ವಿರುದ್ಧ ದಂಗೆಯೆದ್ದರು. ಪರಿಸ್ಥಿತಿಯನ್ನು ಸುಧಾರಿಸುವುದು ತನ್ನಿಂದ ದುಸ್ತರವೆಂದು ೧೧೬೭ರಲ್ಲಿ ಬಿಜ್ಜಳನು ಪದತ್ಯಾಗ ಮಾಡಿ ತನ್ನ ಸ್ಥಾನದಲ್ಲಿ ತನ್ನ ಮಕ್ಕಳಲ್ಲಿ ಸಮರ್ಥನು, ತನಗೆ ಬೇಕಾದವನು ಆದ ಸೋವಿದೇವನಿಗೆ ಪಟ್ಟವನ್ನು ಕಟ್ಟಿದನು. *೩

ಈ ಬದಲಾವಣೆಯಿಂದ ಪರಿಸ್ಥಿತಿಯು ಸುಧಾರಿಸಲಿಲ್ಲ. ದಾಯಾದಿಗಳಲ್ಲಿ ಮತ್ತು ಸಹೋದರರಲ್ಲಿ ತಿಕ್ಕಾಟವು ನಡದೇ ಇತ್ತು. ಅದೇ ವೇಳೆಯಲ್ಲಿ ಬಸವಣ್ಣನವರ ಚಳವಳಿಯು ನಡೆದಿತ್ತು. ಹೀಗೆ ರಾಜಕೀಯ ಮತ್ತು ಧಾರ್ಮಿಕ ಘರ್ಷಣೆಗಳು ಕಲ್ಯಾಣದಲ್ಲಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದವು. ಈ ಪರಿಸ್ಥಿತಿಯಿಂದ ಕಲಚುರಿಗಳ ಬಲವು ಕುಂದುತ್ತಾ ಬಂದಿತು. ಧಾರ್ಮಿಕ ವಿರೋಧಿಗಳನ್ನು ಎದುರಿಸಲು ಬಿಜ್ಜಳನು ತನ್ನನ್ನು ತಾನು ತೊಡಗಿಸಿಕೊಂಡು ರಾಜಕೀಯ ವಿರೋಧಿಗಳನ್ನು ಎದುರಿಸಲು ತನ್ನ ಮಕ್ಕಳಿಗೆ ಬಿಟ್ಟ ಹಾಗೆ ಕಾಣುತ್ತದೆ.

ಇದು ಆಂತರಿಕ ಪರಿಸ್ಥಿತಿಯಾದರೆ, ಬಾಹ್ಯ ಪರಿಸ್ಥಿತಿಯೂ ಕಲಚುರಿಗಳಿಗೆ ಅಷ್ಟೆ ಪ್ರತಿಕೂಲವಾಗಿತ್ತು. ಸೇವುಣರು ಮತ್ತು ಹೊಯ್ಸಳರು ಕಲಚುರಿಗಳನ್ನು ನಾಶಮಾಡಲು ಹವಣಿಸುತ್ತಿದ್ದರು. ಅನೇಕ ಸಲ ಅವರನ್ನು ಸೋಲಿಸಿ ಬಲಹೀನರನ್ನಾಗಿ ಮಾಡಿದ್ದರು. ಹೀಗೆ ಆಂತರಿಕ ಮತ್ತು ಬಾಹ್ಯ ಪರಿಸ್ಥಿತಿಗಳು ಕಲಚುರಿಗಳಿಗೆ ವಿರುದ್ಧವಾಗಿದ್ದವು. ಇಂತಹ ಸಮಯಕ್ಕೆ *೪ ಕಾಯುತ್ತಿದ್ದ ಚಾಲುಕ್ಯ ಮೂರನೇ ತೈಲಪನ ಮಗ ನಾಲ್ಕನೆಯ ಸೋಮೇಶ್ವರನು ಕಲ್ಯಾಣದ ಮೇಲೆ ೧೧೮೪ರಲ್ಲಿ ದಾಳಿ ಮಾಡಿದನು. *೫ ಹೀಗೆ ದಾಳಿ ಮಾಡಲಿಕ್ಕೆ ಇನ್ನು ಒಂದು ಪ್ರಮುಖ ಕಾರಣವಿತ್ತು. ಕಲುಚುರಿಗಳ ಮಹಾ ಪ್ರಧಾನ ಮತ್ತು ಸೇನಾಪತಿ ಬರ್ಮರಸ ಅಥವಾ ಬಮ್ಮಯ್ಯ ಅತ್ಯಂತ ಸಮರ್ಥನೆಂದು ಹೆಸರುವಾಸಿಯಾಗಿದ್ದ. ಈತನು ಕಲಚುರಿಗಳು ಸೋಲುವುದು, ಚಾಲುಕ್ಯರು ಗೆಲ್ಲುವುದು ಖಚಿತವೆಂದು ತಿಳಿದು, ಸೋಲುವ ಕಲಚುರಿ ಪಕ್ಷವನ್ನು ಬಿಟ್ಟು ಗೆಲ್ಲುವ ಚಾಲುಕ್ಯ ಪಕ್ಷವನ್ನು ಸೇರಿದನು. ಮತ್ತು ಚಾಲುಕ್ಯರಲ್ಲಿ ಅದೇ ಪ್ರಮುಖಸ್ಥಾನವನ್ನು ಗಳಿಸಿ ನಾಲ್ಕನೆಯ ಸೋಮೇಶ್ವರನ ರಾಜ್ಯ ಸ್ಥಾಪನ ಕಾರ್ಯದಲ್ಲಿ ಮುಖ್ಯ ಪಾತ್ರವನ್ನು ವಹಿಸಿದನು.

* 'ಸ್ವಸ್ತಿ', ನಂ. ೧, ನವೋದಯ ನಗರ, ಧಾರವಾಡ - ೫೮೦ ೦೦೩

೧೧೮೪ರ ಅಣ್ಣಿಗೇರಿ ಶಾಸನದಲ್ಲಿ **ಕಲಜುರಿ ಕುಳಕಾಳಾನಳ** ಅಂದರೆ ಕಲಚುರಿ ಕುಲಕ್ಕೆ ಕಾಡ್ಕಿಚ್ಚು ಎಂದೆನಿಸಿಕೊಂಡನು *೫ ಮತ್ತು ಅಬ್ಬಲೂರು ಶಾಸನದಲ್ಲಿ *೬ **ತ್ರಿಭುವನಮಲ್ಲ ಸೋಮೇಶ್ವರ ದೇವಂ ಸಕಳ ಚಮೂನಾಥ ಶಿರೋಮಣಿಯುಂ ಚಾಲುಕ್ಯರಾಜ್ಯ ಪ್ರತಿಷ್ಠಾಪಕನವು** ಕುಮಾರ ಬಮ್ಮಯ್ಯನೆಂದು ಮೆರೆದನು ಎಂದಿದೆ. ಕಲಚುರಿಗಳ ಕುಲನಾಶವಾಗಲಿಕ್ಕೆ ಈ ಬಮ್ಮಯ್ಯನೇ ಮುಖ್ಯ ಕಾರಣ.

ಈ ಬಮ್ಮಯ್ಯ ಬೇರೆ ಯಾರೂ ಅಲ್ಲದೆ ಪಂಡಿತಾರಾಧ್ಯ ಚರಿತ್ರೆ ಮುಂತಾದ ವೀರಶೈವ ಪುರಾಣಗಳಲ್ಲಿ ಬಿಜ್ಜಳನ ಕೊಲೆಗಾರನೆಂದು ಹೆಸರಾದ ಜಗದೇವ ಮೊಲ್ಲ ಬೊಮ್ಮಯ್ಯಗಳಲ್ಲಿ ಕೊನೆಯವನಾದ ಬಮ್ಮಯ್ಯನೆಂದು ನನ್ನಮತ. ೧೧೮೪ರ ಅಣ್ಣಿಗೇರಿ ಶಾಸನದಲ್ಲಿ ಇವನನ್ನು ಮೇಲೆ ಹೇಳಿದ ಹಾಗೆ ಕಲಚುರಿ ಕುಳಕಾಳಾನಳನೆಂದು ಕರೆದಿರುವುದಲ್ಲದೆ ಇವನ ತಮ್ಮ ನಾರಸಿಂಹನು ಬಿಜ್ಜಳನ ಮಗ ಸಂಕಮನನ್ನು ಕೊಂದನೆಂದು, **ಸಂಕಮನಂ ಕೊಂದ ನಾರಸಿಂಹ ಸಮ ಸಮರದೊಳ್** ಎಂದು ಸ್ಪಷ್ಟವಾಗಿ ಹೇಳಿದೆ. ಹೀಗೆ ೧೧೮೪ರಲ್ಲಿ ಬಿಜ್ಜಳನು ಮತ್ತು ಅವನ ಸಂತತಿಯವರು ಬಮ್ಮಯ್ಯ ಮತ್ತು ನಾರಸಿಂಹ ಮತ್ತು ಜಗದೇವ ಮತ್ತು ಮಲ್ಲಯ್ಯ ಅಥವಾ ಮಲ್ಲದೇವ ಇವರಿಂದ ಹತರಾದರು. ಈ ಹತ್ಯಾಕಾಂಡ ೧೧೮೪ರಲ್ಲಿ ಆಗಿದ್ದುದರಿಂದ ಕಲ್ಯಾಣ ಕ್ರಾಂತಿಯು ಆಗ ಆಯಿತೆನ್ನಬಹುದು.

ಈ ಅಭಿಪ್ರಾಯವನ್ನು ಒಪ್ಪಿಕೊಂಡರೆ ಎರಡು ಪ್ರಶ್ನೆಗಳು ಉದ್ಭವಿಸುತ್ತವೆ - (೧) ೧೧೮೪ರ ವರೆಗು ಬಿಜ್ಜಳನು ಜೀವಂತ ವಿದ್ದನೆಂದು ಹೇಳುವುದಕ್ಕೆ ಬೇರೆ ಏನಾದರೂ ಆಧಾರವಿದೆಯೆ? (೨) ಮತ್ತು ೧೧೬೭ರಲ್ಲಿ ಪದತ್ಯಾಗ ಮಾಡಿದ ಬಿಜ್ಜಳನು ೧೧೮೪ರ ವರೆಗು ಏನು ಮಾಡುತ್ತಿದ್ದ?

ಬಿಜ್ಜಳನು ೧೧೮೪ರ ವರೆಗು ಜೀವಂತವಿದ್ದನೆನ್ನುವುದಕ್ಕೆ ಏನುಸಾಕ್ಷಿ ಎಂದು ಕೇಳಿದರೆ ಬಿಜ್ಜಳನ ಸಾವಿಗೂ ಬಸವಣ್ಣನವರು ಐಕ್ಯರಾದುದಕ್ಕೂ ಕೆಲವೇ ತಿಂಗಳು ಅಂತರವಿತ್ತೆಂದು ಮುಕ್ತಿ ಕಂಠಾಭರಣದ ಹೇಳಿಕೆಯಿಂದ ಊಹಿಸಿದೆ. *೭ ನಾವು ಈ ಅಂತರ ೧ ವರ್ಷ ಅಥವಾ ೧ ೧/೨ ವರ್ಷವೆಂದು ಇಟ್ಟುಕೊಳ್ಳಬಹುದು. ಬಸವಣ್ಣನವರು ೧೧೮೫-೮೬ರಲ್ಲಿ ಐಕ್ಯರಾಗಿದ್ದು ಅವರ ಅಭಿಮಾನಿ ಮತ್ತು ಅನುಯಾಯಿ ಮಲ್ಲಿಕಾರ್ಜುನಪಂಡಿತಾರಾಧ್ಯರು ಐಕ್ಯರಾಗುವುದಕ್ಕೆ ಸಮಾರು ೧ ವರ್ಷ ಮುಂಚೆ ಎಂದು ಪಂಡಿತರ ಚರಿತ್ರೆಯಿಂದ ನಾವು ತಿಳಿದುಕೊಳ್ಳಬಹುದು. *೫ ಪಂಡಿತರ ಕೊನೆಯ ಶಾಸನ ೧೧೮೭ ಅಕ್ಟೋಬರಿನದು. ಇದು ಸಂಗಮೇಶ್ವರದಲ್ಲಿದೆ. *೯ ಅದರ ಹತ್ತಿರದ ನೆಲ್ಲಚೂರಿನಲ್ಲಿ ಅವರ ಸಮಾಧಿ ಇದೆ. ಅವರ ಸಮಕಾಲೀನರು ಮತ್ತು ಸಮವಯಸ್ಕರಾದ ಬಸವಣ್ಣನವರು ೧ ಅಥವಾ ೧ ೧/೨ ವರ್ಷ ಮುಂಚೆ ಐಕ್ಯರಾದುದನ್ನು ಅದೇ ಚರಿತ್ರೆಯು ಹೇಳುತ್ತದೆ. *೧೦ ಅಂದರೆ ಅವರು ಐಕ್ಯವಾದುದು ೧೧೮೫-೮೬ರಲ್ಲಿ. ಅವರಿಗೆ ಒಂದು ವರ್ಷ ಅಥವಾ ಒಂದೂವರೆ ವರ್ಷ ಮುಂಚೆ ಬಿಜ್ಜಳನು ೧೧೮೪ರಲ್ಲಿ ಹತನಾಗಿರಬೇಕು. ಆದ್ದರಿಂದ ಕಲ್ಯಾಣ ಕ್ರಾಂತಿ ಅದೇ ವೇಳೆಗೆ ಆಯಿತೆಂದು ಹೇಳಬಹುದು.

ಬಿಜ್ಜಳನು ೧೧೬೮ರಿಂದ ೧೧೮೪ರವರೆಗು ಏನು ಮಾಡುತ್ತಿದ್ದನೆನ್ನುವ ಪ್ರಶ್ನೆಯನ್ನು ಉತ್ತರಿಸಲು ಅವನಿಗೂ ಬಸವಣ್ಣನವರಿಗೂ ಇದ್ದ ಸಂಬಂಧದ ತಿಳಿವಳಿಕೆ ಅವಶ್ಯ. ಅವರಿಬ್ಬರಿಗೂ ವಯಸ್ಸಿನಲ್ಲಿ ವಿಶೇಷ ಅಂತರವಿದ್ದಹಾಗೆ ಕಾಣುವುದಿಲ್ಲ. ಇಬ್ಬರೂ ಸು. ೧೧೩೨ರಲ್ಲಿ ಮಂಗಳವಾಡದಲ್ಲಿ ತಮ್ಮ ಸಾರ್ವಜನಿಕ ಕಾರ್ಯವನ್ನು ಆರಂಭಿಸಿದರು- ಬಿಜ್ಜಳನು ಮಹಾಮಂಡಳೇಶ್ವರನಾಗಿ, ಬಸವಣ್ಣನವರು ಅವನ ಆಸ್ಥಾನದಲ್ಲಿ ಕರಣಿಕರಾಗಿ ಇಬ್ಬರೂ ಮಂಗಳವಾಡದಲ್ಲಿ ಅನ್ಯೋನ್ಯವಾಗಿದ್ದರು. ಬಿಜ್ಜಳನು ಬಸವಣ್ಣನವರ ಕೆಲಸವನ್ನು ಮೆಚ್ಚಿ ಕೊನೆಗೆ ಅವರಿಗೆ ಮಂತ್ರಿಪದವಿಯನ್ನು ಕೊಟ್ಟನು. ಕ್ರಮೇಣ ಅವರಲ್ಲಿ ವಿರಸ ಉಂಟಾಗಿ ಬಸವಣ್ಣನವರು ಕಲ್ಯಾಣಕ್ಕೆ ಸು. ೧೧೪೮ರಲ್ಲಿ ಹೊರಟು ಹೋದರು. ಬಿಜ್ಜಳನು ೧೧೫೨ರಲ್ಲಿ ಕಲ್ಯಾಣದಲ್ಲಿ ಚಕ್ರವರ್ತಿಯಾದನು ಮತ್ತು ೧೧೬೭ರಲ್ಲಿ ಪದತ್ಯಾಗ ಮಾಡಿ ೧೧೮೪ರಲ್ಲಿ ಹತವಾದನು. ಬಸವಣ್ಣನವರು ಅದೇ ವರ್ಷ ಎರಡನೆಯ ಸಲ ಕೂಡಲಸಂಗಮಕ್ಕೆ ಹೋದರು.

ಬಸವಣ್ಣನವನು ೩೬ ವರ್ಷ ಕಲ್ಯಾಣದಲ್ಲಿದ್ದರೆಂದು ಮುಕ್ತಿ ಕಂಠಾಭರಣದಲ್ಲಿ ಹೇಳಿದೆ. *೧೧ ೧೧೮೪ರಲ್ಲಿ ಕಲ್ಯಾಣ ಬಿಟ್ಟಿದ್ದರೆ ಕಲ್ಯಾಣಕ್ಕೆ ಅವರು ೧೧೪೮ರಲ್ಲಿ ಬಂದಿರಬೇಕು. ೧೧೬೮ರಲ್ಲಿ ಕಲ್ಯಾಣಕ್ರಾಂತಿ ಆಯಿತೆಂದು ಇಟ್ಟುಕೊಂಡರೆ ೩೬ ವರ್ಷ ಕಲ್ಯಾಣದಲ್ಲಿರಬೇಕಾದರೆ ಅವರು ಅಲ್ಲಿಗೆ ೧೧೩೨ರಲ್ಲಿ ಬಂದಿರಬೇಕಾಗುತ್ತದೆ. ನಾವು ಮೇಲೆ ನೋಡಿದ ಹಾಗೆ ೧೧೩೨ರಲ್ಲಿ ಬಂದಿದ್ದರೆ ಮಾತ್ರ ಅಲ್ಲಿ ೧೬ ವರ್ಷವಿದ್ದು ಕರಣಿಕ ಪದವಿಯಿಂದ ಮಂತ್ರಿ ಪದವಿಗೆ ಏರಲು ಅವಕಾಶವಿರುತಿತ್ತು. ೧೧೬೮ರಲ್ಲಿ ಕ್ರಾಂತಿ ಆಗಿದ್ದರೆ ಮಂಗಳವಾಡದಲ್ಲಿ ಅವರಿಗೆ ಇರಲು ಅವಕಾಶವಿರುತ್ತಿರಲಿಲ್ಲ. ಆದ್ದರಿಂದ ಈ ಕಾರಣದಿಂದಲೂ ೧೧೮೪ರಲ್ಲಿ ಕ್ರಾಂತಿ ಆಯಿತೆನ್ನುವುದು ಸೂಕ್ತ.

ಬಿಜ್ಜಳ ೧೧೬೮ರಿಂದ ೧೧೮೪ರವರೆಗು ಕಲ್ಯಾಣದಲ್ಲಿ ಏನುಮಾಡುತ್ತಿದ್ದನೆನ್ನುವ ಪ್ರಶ್ನೆಗೆ ಈಗ ಉತ್ತರ ಹೇಳಬಹುದು. ಈ ಉತ್ತರ ಬಸವರಾಜ ದೇವರ ರಗಳೆ *೧೨ ಮತ್ತು ಬಸವ ಪುರಾಣಗಳಲ್ಲಿದೆ. ಮೊದಲನೆಯದರ ಪ್ರಕಾರ ಬಿಜ್ಜಳನಿಗೆ ಬಸವಣ್ಣನವರ ಸುಧಾರಣಾ ಚಳವಳಿ ಸರಿತೋರಲಿಲ್ಲ. ಆತನು ಕಟ್ಟಾಸನಾತನಿ. ಚಳವಳಿಯನ್ನು ನಿಲ್ಲಿಸೆಂದು ಎಷ್ಟು ಹೇಳಿದರು ಬಸವಣ್ಣ ಕೇಳಲಿಲ್ಲ. ಈ ಚಳವಳಿಯು ಮುಂದುವರಿಯಿತು. ಬಸವಪುರಾಣದ ಪ್ರಕಾರ ಬಿಜ್ಜಳನಿಂದ ಸುಧಾರಕರಾದ

ಹರಳಯ್ಯ - ಮಧುವಯ್ಯ ಇವರ ಕೊಲೆಯಾಯಿತು. ಕೊನೆಗೆ ಈ ಕೊಲೆ ಬಿಜ್ಜಳನ ಕೊಲೆಯಲ್ಲಿ ಪರಿಣಮಿಸಿತು. ಮತ್ತು ಈ ಕೊಲೆ ಚಾಳುಕ್ಯರಿಗೂ ಮತ್ತು ಕಲಚುರಿಗಳಿಗೂ ನಡೆದ ಕೊನೆಯ ಯುದ್ಧದ ಮುಖ್ಯ ಭಾಗವಾಯಿತು. ಇದು ಆಗಿದ್ದು ೧೧೬೮ರಲ್ಲಿ. ಆದ್ದರಿಂದ ಮೇಲೆ ಹೇಳಿದ ಹಾಗೆ ಕಲ್ಯಾಣಕ್ರಾಂತಿ ೧೧೬೮ರಲ್ಲಿ ಆಯಿತು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ARSIE 1935, No. 58

*೨. ದೇಸಾಯಿಪಾಂಡುರಂಗರಾಯರು : **ಕರ್ನಾಟಕದ ಕಲಚುರಿಗಳು**, ಅಧ್ಯಾಯಗಳು ೭ ಮತ್ತು ೧೦.

*೩ EC VII, SK 92

*೪ SII IX, Pt 1, No. 277

*೫ SII XV, No. 59

*೬ EI V, PP. 245 ff

*೭ P.B. Desai : **Basaveswara and his times**, P. 288

*೮ **ಪಂಡಿತಾರಾಧ್ಯ ಚರಿತ್ರೆ**, ಸೋಮನಾಥ ವಿರಚಿತ

*೯ **Telengana Inscriptions**, II, No. 14

*೧೦ **ಪಂಡಿತಾರಾಧ್ಯ ಚರಿತ್ರೆ** - ದೀಕ್ಷಾ ಮತ್ತು ಮಹಿಮಾ ಪ್ರಕರಣಗಳು

*೧೧ **ಮುಕ್ತಿಕಂಠಾಭರಣ.**, ಪು. ೭೭, ಪದ್ಯ ೧೧೭

೧೨. **ಬಸವರಾಜದೇವರ ರಗಳೆ.**, ಸ್ಥಳ ೧೦, ಪುಟ ೬೭-೬೯.

ಟಿ. ಎಸ್. ಹಳೆಮನೆ *

# ಮಠಗಳು ಮತ್ತು ಅವುಗಳ ಸಮಾಜೋ - ಧಾರ್ಮಿಕ ಪದ್ಧತಿಗಳು

ಸಾಮಾನ್ಯವಾಗಿ ಗುರುಪೀಠಗಳು ಶಾಶ್ವತವಾಗಿರುವ ನೆಲೆಗಳಿಗೆ 'ಮಠ' ಎನ್ನುವುದು ಇದೆ. ಉದಾಹರಣೆಗೆ ಶೃಂಗೇರಿಮಠ ಸ್ವರ್ಣವಲ್ಲಿಮಠ ಇತ್ಯಾದಿ. ಇನ್ನು ತಾತ್ಕಾಲಿಕವಾಗಿ ಗುರುಪೀಠಕ್ಕೆ ಆಸ್ಪದವೀಯುವ ದೇವಾಯತನಗಳಿಗೂ ಈ 'ಮಠ' ಎನ್ನುವುದು ಕಂಡು ಬರುತ್ತದೆ. ಮಠಾಧಿಪತಿಗಳು ಸಾಮಾನ್ಯವಾಗಿ ಬಾಲ್ಯದಿಂದಲೇ ಸನ್ಯಾಸ ದೀಕ್ಷೆ ಪಡೆದು ಸಾಕಷ್ಟು ಭಾರತೀಯವಾದ ವೇದ ವಿದ್ಯೆಯನ್ನು ಕುಲಿತು ಮಠಗಳಲ್ಲಿ ಮೊದಲಿನಿಂದಲೂ ಆರಾಧಿಸಿ ಬರುತ್ತಿರುವ ದೇವರ ನಿತ್ಯ ನೈಮಿತ್ತಿಕ ಐಚ್ಚಿಕ ಪೂಜಾವಿಧಿಗಳ ನೇತೃತ್ವ ವಹಿಸಿ ಮಠಕ್ಕೆ ಬರತಕ್ಕ ಆಯವ್ಯಯಗಳನ್ನು ಸರಿಯಾಗಿಸಿಕೊಂಡು ಹೋಗುವ ವ್ಯಕ್ತಿಗೆ ಮಠಾಧಿಪತಿ ಎನ್ನಲಾಗುತ್ತಿದೆ.

ಅದ್ವೈತ ಸಿದ್ಧಾಂತದ ಪ್ರತಿಪಾದಕರಾದ ಶ್ರೀ ಆದಿ ಶಂಕರಾಚಾರ್ಯರು ಮಠಗಳಿಗೆ ತಮ್ಮದೇ ಆದ ಒಂದು ಸ್ವರೂಪ ನೀಡಿ ದೇಶದ ನಾಲ್ಕು ದಿಕ್ಕುಗಳಲ್ಲಿ - ದಕ್ಷಿಣದಲ್ಲಿ ಶೃಂಗೇರಿ, ಉತ್ತರದಲ್ಲಿ ಬದರಿ, ಪಶ್ಚಿಮದಲ್ಲಿ ದ್ವಾರಕಾ ಮತ್ತು ಪೂರ್ವದಲ್ಲಿ ಪುರಿ ಅಥವಾ ಜಗನ್ನಾಥಗಳಲ್ಲಿ ತಮ್ಮ ಸಿದ್ಧಾಂತದ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಇವುಗಳ ಜೊತೆಗೆ ಇನ್ನೂ ಹಲವು ಉಪಮಠಗಳನ್ನು ಸ್ಥಾಪಿಸಿದರು. ಈ ಪೀಠಗಳು ನದೀ ತೀರಗಳಲ್ಲಿ ತೀರ ಪ್ರಶಾಂತ ವಾತಾವರಣದಲ್ಲಿ ಸ್ಥಾಪನೆಗೊಂಡವು.

'ಗುರು' ಎಂದರೆ ಬೋಧಕ. ಆದರೆ ಮಠಗಳ ಬಗ್ಗೆ ಹೇಳುವಾಗ 'ಗುರು' ಎಂದರೆ ಸನ್ಯಾಸ ದೀಕ್ಷೆ ಪಡೆದು ಭಾರತೀಯ ವಿದ್ಯೆಗಳ ಪೂರ್ಣಜ್ಞಾನ ಪಡೆದು ಅರ್ಹತೆಯನ್ನು ಸಂಪಾದಿಸಿದವರು ಎಂದರ್ಥ. ಇವರದು ನಿಯಮಬದ್ಧ ಜೀವನ. ಯಾವ ಸಂದರ್ಭದಲ್ಲಿಯೂ ನಿತ್ಯಾನುಷ್ಠಾನಕ್ಕೆ ಭಂಗವಿರದು. ಬಿಡುವಿಲ್ಲದ ಕಾರ್ಯಗಳೆಡೆಯಲ್ಲಿ, ಪ್ರಯಾಣದ ಒತ್ತಡದ ಸಂದರ್ಭದಲ್ಲಿ ಅಷ್ಟೇ ಅಲ್ಲದೇ, ಅಸ್ವಾಸ್ಥ್ಯದ ಕಾಲದಲ್ಲಿ ಕೂಡ ಇವರ ಆಶ್ರಮ ಧರ್ಮದ ನಿಯಮಗಳಿಗೆ ಮತ್ತು ತಪೋನಿಷ್ಠೆಗೆ ಚ್ಯುತಿ ಬರುವಂತಿಲ್ಲ.

ಇನ್ನು ಜಗದ್ಗುರು ಪೀಠಗಳ ಅಸ್ತಿತ್ವಕ್ಕೆ ಇನ್ನೂ ಒಂದು ಕಾರಣವನ್ನು ನೀಡಬಹುದು. ಸನ್ಯಾಸ ಸ್ವೀಕರಿಸಿದಾತ ವಿದ್ಯಾ ಪ್ರಸಾರಾದಿ ಮಠದ ಕಾರ್ಯಗಳನ್ನು ಸರಿದೂಗಿಸಿಕೊಳ್ಳುವುದು ಕಠಿಣವಾಗಬಹುದು. ಸಂಸಾರಿಕನಿಗೆ ತನ್ನ ಸಂಸಾರದ ಹೊಣೆಗಾರಿಕೆ ಬೀಳಬಹುದಾದ್ದರಿಂದ ಚರ-ಸ್ಥಿರಾಸ್ಥಿಗಳ ಜೊತೆಗೆ ಸಾರ್ವಜನಿಕರ ಕಾಣಿಕೆಗಳಿಂದ ಬೆಳೆದು ಬರುವಂತಹ ಮಠಗಳ ಸಂಪತ್ತು ದುರ್ವ್ಯವಹಾರಕ್ಕೆ ಒಳಗಾಗಲು ಎಡೆಯಿರುವುದರಿಂದ ಮಠಾಧಿಪತಿಗಳಿಗೆ ಸನ್ಯಾಸದೀಕ್ಷೆ ಕೊಡಲಾಗುತ್ತದೆ.

**ಸಾಮಾಜಿಕವಾಗಿ ಹೇಳುವುದಾದರೆ ಮಠಗಳು ಸಮಾಜಕ್ಕೆ, ಸಮಾಜದ ಶಿಷ್ಯರಿಗೆ ಮಾರ್ಗದರ್ಶಕವಾಗಿವೆ. ಸಮಾಜ-ಶಿಷ್ಯರು ದಾರಿತಪ್ಪಿದಾಗ ಅವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಠಾಧಿಪತಿಗಳು, ಮಠಗಳು ಸೂಚಿಸಿರುವುದನ್ನು ಕಾಣುತ್ತೇವೆ. ಈ ಕೆಲಸವನ್ನು ಹವ್ಯಕ, ಮಾಧ್ವ, ವೈಷ್ಣವ, ವೀರಶೈವ ಹೀಗೆ ಎಲ್ಲ ಮಠಗಳು ಮಾಡುವುದನ್ನು ಕಾಣಬಹುದು.** ಇಂತಹ ಮಠಗಳಿಗೆ ಎಲ್ಲ ಸಮಾಜದ ಶಿಷ್ಯರು, ಸ್ತ್ರೀ-ಪುರುಷರು ನಡೆದುಕೊಳ್ಳುತ್ತಿರುವುದನ್ನು ನಾವು ಕಾಣುತ್ತೇವೆ. ಶಿಷ್ಯರು ತಪ್ಪನ್ನೆಸಗಿದಾಗ, ಧರ್ಮ-ವಿರೋಧಿ ಸಮಾಜ ವಿರೋಧಿ ಕೃತ್ಯಗಳನ್ನು ಮಾಡಿದಾಗ ಮಠಗಳು, ಮಠಾಧಿಪತಿಗಳು ಅಂತಹ ಜನರನ್ನು ಶಿಕ್ಷೆಗೆ ಒಳಪಡಿಸುತ್ತಿದ್ದವು. ಅಂತಹ ಅಪರಾಧಿಗಳು ಮಠಾಧಿಪತಿಗಳಲ್ಲಿ ಕ್ಷಮೆ ಕೇಳುವುದು ಅಥವಾ ದೇಶಬಿಟ್ಟು (ಮಠದವ್ಯಾಪ್ತಿಯಿಂದ) ಹೋಗುವುದು. ಈ ಎರಡರಲ್ಲಿ ಒಂದನ್ನು ಒಪ್ಪಿಕೊಳ್ಳಬೇಕಾಗುತ್ತಿತ್ತು. ಇದರಿಂದ ಸಮಾಜದಲ್ಲಿ ಅಪರಾಧಗಳು ಕಡಿಮೆಯಾಗಿತ್ತು. ಆದರೆ ಇಂದು ಅಂತಹ ಶಿಕ್ಷೆಗಳು ತೀರ ಕಡಿಮೆಯಾಗಿರುವುದನ್ನು ಕಾಣಬಹುದು.

ಇನ್ನು ಮಠಗಳ ಆಡಳಿತಕ್ಕಾಗಿ ವಿವಿಧ ಅಧಿಕಾರಿಗಳು ಇರುತ್ತಿದ್ದರು. ಉದಾ: ಶ್ಯಾನುಭೋಗ, ಪಾರುಪತ್ಯಗಾರ, ರಾಯಸಿಗ ಇತ್ಯಾದಿ. ಇವರು ಜನರಿಂದ ಕಾಣಿಕೆಯನ್ನು ಸಂಗ್ರಹಿಸಿ ಮಠಗಳ ಆಡಳಿತಕ್ಕೆ ಸಹಕರಿಸುತ್ತಿದ್ದರು.

* ಇತಿಹಾಸ ವಿಭಾಗ, ಎಂ.ಎಂ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಶಿರಸಿ, (ಉ.ಕ)- ೫೮೧ ೪೦೨

ಮಠಗಳು ಕೇವಲ ಧಾರ್ಮಿಕ ಕೇಂದ್ರಗಳಷ್ಟೇ ಆಗಿರದೇ ಶೈಕ್ಷಣಿಕ ಸಾಂಸ್ಕೃತಿಕ ಕೇಂದ್ರಗಳಾಗಿಯೂ ಮಹತ್ವದ ಪಾತ್ರ ನಿರ್ವಹಿಸುತ್ತಿದ್ದವು. ಇಂತಹ ಕೇಂದ್ರಗಳಲ್ಲಿ ಗುರುವಾದವರು ಶಿಷ್ಯರಿಗೆ ವೇದ, ವೇದಾಂಗ, ನ್ಯಾಯ, ತರ್ಕ, ಆಗಮಗಳು ಇತ್ಯಾದಿ ವಿಷಯಗಳನ್ನು ಹೇಳಿಕೊಡುತ್ತಿದ್ದರು. ಮಠಗಳು ಸಾಂಸ್ಕೃತಿಕವಾಗಿ ಕೂಡ ಶ್ರೀಮಂತವಾಗಿದ್ದವು. ಮಠಗಳಲ್ಲಿ ವಿವಿಧ ಧಾರ್ಮಿಕ ಮತ್ತು ಸಾಂಸ್ಕೃತಿಕ ಉತ್ಸವಗಳಾದ ಗಣೇಶ ಚತುರ್ಥಿ, ನವರಾತ್ರಿ, ಶತರುದ್ರಾಭಿಶೇಕ ಪರ್ಜನ್ಯ, ರಾಮಜಯಂತಿ ಇತ್ಯಾದಿಗಳು ಆಚರಿಸಲ್ಪಡುತ್ತವೆ. ಮಠಗಳು ಕಾಲಕಾಲಕ್ಕೆ ರಾಜಾಶ್ರಯವನ್ನು ಪಡೆದುಕೊಳ್ಳುತ್ತಿದ್ದುದನ್ನು ಕಾಣಬಹುದು. ಉದಾಹರಣೆಗೆ, ಟೀಪು ಸುಲ್ತಾನ ಮತ್ತು ಹೈದರಲಿ, ವಿಜಯನಗರ ಮತ್ತು ಕೆಳದಿಯ ಅರಸರು, ಮೈಸೂರಿನ ಒಡೆಯರು, ಬ್ರಿಟಿಷ್ ಕಮೀಶನರಗಳು ಮುಂತಾದವರು ಶೃಂಗೇರಿ ಮಠಕ್ಕೆ, ರಾಮಚಂದ್ರಾಪುರ ಮಠಕ್ಕೆ ಹಾಗೂ ಸ್ವರ್ಣವಲ್ಲಿ ಮಠಕ್ಕೆ ಕಾಲಕಾಲಕ್ಕೆ ಉಂಬಳಿ ಕೊಟ್ಟಿರುವುದು ದಾಖಲೆಗಳಿಂದ ಕಂಡುಬರುತ್ತದೆ. ಮಠಾಧಿಪತಿಗಳು ಬೇರೆ ಬೇರೆ ಸ್ಥಳಗಳಿಗೆ ಸಂಚಾರ ಹೊರಟಾಗ ಮಾರ್ಗದಲ್ಲಿ ತಡೆಯಾಗದಂತೆ ಆಯಾ ಸರ್ಕಾರದಿಂದ ಕೊಡಲ್ಪಟ್ಟ ರಹದಾರಿಗಳು ಪ್ರಾಚೀನ ಮಠಗಳಲ್ಲಿ ಕಂಡುಬರುತ್ತವೆ. ಹೈದರಲಿ, ಟೀಪುಸುಲ್ತಾನರಿಂದ ಹಿಡಿದು ಕಂಪನಿ ಸರ್ಕಾರದವರೆಗೂ ಸರ್ಕಾರದಲ್ಲಿ ತಮ್ಮ ವರ್ಚಸ್ಸನ್ನು ಕೆಲವು ಮಠಗಳು ಕಾಪಾಡಿಕೊಂಡು ಬಂದಿರುವುದನ್ನು ನಾವು ಕಾಣಬಹುದು.

ಮಠಗಳು ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಚಾರ ಪ್ರಚೋದಕವಾದ ಗ್ರಂಥಗಳ ರಚನಾಕಾರ್ಯವನ್ನು ಕೈಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಮಠಗಳು ಕಲೆ ಮತ್ತು ವಾಸ್ತುಶಿಲ್ಪ ಮೂರ್ತಿಶಿಲ್ಪ, ಇವುಗಳಲ್ಲಿ ಕೂಡ ಶ್ರೀಮಂತವಾಗಿರುವುದನ್ನು ಕಾಣುತ್ತೇವೆ.

ಡಾ॥ ಎ. ಕೆ. ಶಾಸ್ತ್ರಿ *

# ಸ್ವರ್ಣವಲ್ಲೀ ಮಠಕ್ಕೆ ಸೋದೆಯ ಮಧುಲಿಂಗ ನಾಯಕರು ನೀಡಿದ ಧರ್ಮಸಾಧನಗಳು

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಶ್ರೀ ಸ್ವರ್ಣವಲ್ಲೀ ಮಠದ ಪೂರ್ವಚರಿತ್ರೆ ಆದಿ ಶಂಕರಾಚಾರ್ಯರಷ್ಟೇ ಪುರಾತನವಾದುದು. ಒಂಬತ್ತನೆಯ ಶತಮಾನದ ಆದಿಯಲ್ಲಿ ಶ್ರೀಮಠ ಕಾಶಿಯಲ್ಲಿ ಸ್ಥಾಪನೆಯಾದ ನಂತರ, ಕಾಲಕ್ರಮೇಣ, ಉಜ್ಜಯಿನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ ಮತ್ತು ಇಂದಿನ ಸ್ವರ್ಣವಲ್ಲಿಗೆ ಸ್ಥಳಾಂತರಿಸಲ್ಪಟ್ಟಿತು. *೧ ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷಪದವು ಸ್ಥಿರವಾಗಲೆಂದು, ಸೋದೆಯ ಇಮ್ಮಡಿ ಅರಸಪ್ಪ ನಾಯಕರು ಸ್ವರ್ಣವಲ್ಲೀ ಪೀಠದಲ್ಲಿ ೩೪ನೆಯವರಾದ ಶ್ರೀ ಚಂದ್ರಶೇಖರ ಸರಸ್ವತಿಗಳಿಗೆ ಶಾ. ಶ. ೧೪೭೮ (ಕ್ರಿ.ಶ. ೧೫೫೬)ರಲ್ಲಿ, ಶಾಲ್ಮಲೀ ತೀರದ ವಿಶಾಲವಾದ ಸ್ಥಳದಲ್ಲಿ ಮಠ, ಚಂದ್ರಶಾಲೆ, ಶ್ರೀ ಲಕ್ಷ್ಮೀನರಸಿಂಹ, ಶ್ರೀ ಚಂದ್ರ ಮೌಳೀಶ್ವರ, ಶ್ರೀಶಾರದಾ, ಶ್ರೀ ಗಣಪತಿ, ಶ್ರೀ ವ್ಯಾಸಾದಿಗಳಿರುವ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ, ಶ್ರೀ ಸ್ವರ್ನವಲ್ಲೀ ಮಠ ಎಂದು ನಾಮಧೇಯವಿಟ್ಟು ಪೂಜೆ, ವಿನಿಯೋಗ ನಿತ್ಯದಲ್ಲಿ ನಡೆಯಲೆಂದು ಸೋದಾ ಗ್ರಾಮಕ್ಕೆ ಹೊನ್ನೆಹಳ್ಳಿಗ್ರಾಮ ಎಂದು ಹೆಸರಿಸಿ, ೫೨ ಗ್ರಾಮಗಳನ್ನು ಶ್ರೀಮಠಕ್ಕೆ ಉಂಬಳಿಯಾಗಿ ಕೊಟ್ಟರೆಂದು ಶಾಸನವೊಂದರಿಂದ ತಿಳಿದು ಬರುತ್ತದೆ. *೨ ಅಂದಿನಿಂದ ಇಂದಿನವರೆಗೂ ಸ್ವರ್ಣವಲ್ಲಿಯಲ್ಲೇ ಮಠವಿದ್ದು, ಅದೊಂದು ಮಹಾಸಂಸ್ಥಾನವಾಗಿ ಬೆಳೆದು ಬಂದಿದೆ. ಸೋದೆಯರಸರು, ಹೈದರ, ಟಿಪ್ಪುಸುಲ್ತಾನ, ಬ್ರಿಟಿಷ್ ಆಡಳಿತ ವರ್ಗ ಮತ್ತು ಸಂಸ್ಥಾನದ ಸಕಲ ಪ್ರಜೆಗಳು ಸ್ವರ್ಣವಲ್ಲೀ ಮಠದ ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸಿದರೆಂದು ಶ್ರೀಮಠದ ಚಾರಿತ್ರಿಕ ದಾಖಲೆಗಳು *೩ ಖಚಿತಪಡಿಸುತ್ತವೆ.

ಸುಧಾಪುರ (ಅಮೃತಪುರ), ಸೋಮದಾಪುರ, ಸೋವದೆ, ಸೊದೆ, ಸೋದೆ, ಸೊಂದಾಭಿದಾನ (ಸೋಂದಾನಗರ), ಸೋಂದಾ, ಸೂಂದಾ, ಸ್ವಾದಿ ಇತ್ಯಾದಿ ಹೆಸರುಗಳಿಂದ ಪೂರ್ವದಲ್ಲಿ ಉಲ್ಲೇಖಿಸಲ್ಪಟ್ಟ ಸೋದೆ ರಾಜ್ಯ ಕ್ರಿ. ಶ. ೧೫೩೦ರಿಂದ ಕ್ರಿ. ಶ. ೧೭೬೩ರ ವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯರಸರ ಸಂಬಂಧವನ್ನರಿಯಲು ಉಳಿದೆಲ್ಲ ಆಕರ ಸಾಮಗ್ರಿಗಳಿಗಿಂತ ಶ್ರೀಮಠದಲ್ಲಿ ಲಭ್ಯವಾದ ೪೬ ಚಾರಿತ್ರಿಕ ದಾಖಲೆಗಳು *೪ ಹೆಚ್ಚು ಉಪಯುಕ್ತ. ಈ ಲೇಖನವು ಶ್ರೀ ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯ ಮಧುಲಿಂಗ ನಾಯಕರ ಸಂಬಂಧಕ್ಕೆ ಸೀಮಿತವಾಗಿರುವದರಿಂದ, ಅದಕ್ಕೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳನ್ನು ಮಾತ್ರ ಬೆಳಕಿಗೆ ತರಲು ಇಲ್ಲಿ ಪ್ರಯತ್ನಿಸಲಾಗಿದೆ. ಕ್ರಿ. ಶ. ೧೬೩೮ರಿಂದ ಕ್ರಿ. ಶ. ೧೬೭೨ರ ವರೆಗೆ ಮಧುಲಿಂಗ ನಾಯಕರು ರಾಜ್ಯಭಾರ ಮಾಡಿದರು. ಸ್ವರ್ಣವಲ್ಲೀ ಪೀಠದಲ್ಲಿ ೩೮, ೩೯, ೪೦, ೪೧, ೪೨ ಮತ್ತು ೪೩ನೆಯ ಸ್ವಾಮಿಗಳಾಗಿ, ಕ್ರಮವಾಗಿ, ಶ್ರೀ ಬೃಹದ್ಗಂಗಾಧರೇಂದ್ರ ಸರಸ್ವತೀ (ಕ್ರಿ. ಶ. ೧೬೪೮-೧೬೫೩), ಶ್ರೀ ಸರ್ವಜ್ಞೇಂದ್ರ ಸರಸ್ವತೀ (ಕ್ರಿ. ಶ. ೧೬೫೩-೧೬೫೪), ಶ್ರೀ ರಾಮಚಂದ್ರ ಸರಸ್ವತೀ (ಕ್ರಿ. ಶ. ೧೬೫೪-೧೬೫೬), ಶ್ರೀ ಸರ್ವಜ್ಞೇಂದ್ರ ಸರಸ್ವತೀ (ಕ್ರಿ. ಶ. ೧೬೫೬-೧೬೬೮), ಶ್ರೀ ಮಾಧವೇಂದ್ರ ಸರಸ್ವತೀ (ಕ್ರಿ. ಶ. ೧೬೬೮-೧೬೭೨) ಮತ್ತು ಶ್ರೀ ಸರ್ವೆಜ್ಞೇಂದ್ರ ಸರಸ್ವತೀ (ಕ್ರಿ. ಶ. ೧೬೭೨-೧೬೭೮). ಇವರು ಮಧುಲಿಂಗ ನಾಯಕರ ಸಮಕಾಲೀನರು. ಸೋದೆಯ ಮಧುಲಿಂಗ ನಾಯಕರು ಸ್ವರ್ಣವಲ್ಲೀ ಮಠಕ್ಕೇ ನೀಡಿದ ಒಟ್ಟೂ ೪ ಧರ್ಮಸಾಧನಗಳು *೫ ಲಭ್ಯವಾಗಿದೆ. ಅವುಗಳ ಸಾರಾಂಶ ಇಂತಿದೆ:

ಶಾ.ಶ. ೧೫೭೬ನೆಯ ಜಯ ಸಂವತ್ಸರದ ಮಾಘ ಬ. ೩೦ (೨೬-೨-೧೬೫೫), ಸೋಮವಾರದಂದು ಕಾಣಾಚೆಯಾಗಿ (ಪಿತ್ರಾರ್ಜಿತವಾಗಿ) ತಾವು ಆಳಿ ಬರುತ್ತಿದ್ದ ಕರೂರು ಸೀಮೆಯೊಳಗಿನ ಅಡಕಳ್ಳಿ ಮಠದ ಧರ್ಮ, ಆ ಮಠದ ಕಾಲು ಮಠಗಳು ಮತ್ತು ಧರ್ಮದ ಭೂಮಿಯನ್ನು ಸೋದೆಯ ಮಹಾಪ್ರಭು ಮಧುಲಿಂಗ ನಾಯಕರು ಶ್ರೀ ಹೊನ್ನೇಹಳ್ಳಿ (ಸ್ವರ್ಣವಲ್ಲೀ) ರಾಮಚಂದ್ರ ಸರಸ್ವತೀ ಶ್ರೀಪಾದಂಗಳಿಗೆ ದತ್ತಿಯಾಗಿ ನೀಡಿದರು. *೬ ಅಡಕಳ್ಳಿ ಮಠದ ನೀಲಕಂಠ ವಡೆಯರು

* ಟಿ. ಎಸ್. ಎಸ್. ರೈಸ್‌ಮಿಲ್ ಕಳಗೆ, ಶಿರಸಿ (ಉ. ಕ. ), - ೫೮೧ ೪೦೨

ಯತಿಯ ಆಚಾರಕ್ಕೆ ಅಲ್ಲದ ಕೃತ್ಯಗಳನ್ನು ಮಾಡುತ್ತ ಭ್ರಷ್ಟರಾಗಿ, ಶಿಷ್ಯಪರಿಗ್ರಹವಿಲ್ಲದೆ ಮುಕ್ತರಾದ ಸಂಬಂಧ, ಆ ನೀಲಕಂಠ ವಡೆಯರು ಸ್ವರ್ಣವಲ್ಲೀ ಮಠದ ಸಂಪ್ರದಾಯಕ್ಕೆ ಸೇರಿದವ ರೆಂಬುದನ್ನು ಕಂಡು, ಆ ಸ್ವಾಸ್ಥಿ (ಸ್ವಾಸ್ಥ್ಯ) ಮತ್ತು ಮಠ, ಇವು ಸ್ವರ್ಣವಲ್ಲಿಗೆ ಸಲ್ಲುವದರಿಂದ, ಅವುಗಳನ್ನೆಲ್ಲ ಸ್ವರ್ಣವಲ್ಲೀ ಶ್ರೀಗಳವರಿಗೆ ಒಪ್ಪಿಸಿರುವದಾಗಿ ಮಧುಲಿಂಗ ನಾಯಕರ ಈ ದಾನಶಾಸನದ ಪಟ್ಟೆಪ್ರತಿಯಲ್ಲಿ ಉಲ್ಲೇಖಿಸಲಾಗಿದೆ. ಅರಸು ಮನೆತನದ ಶ್ರೇಯೋಭಿವೃದ್ಧಿಯಾಗುವಂತೆ ಪ್ರಾರ್ಥಿಸುತ್ತ, ಪೂರ್ವಪ್ರಮಾಣ ಅಡಕಳ್ಳಿ ಮಠದ ನರಸಿಂಹದೇವರ ಸೇವೆಯನ್ನು ನಡೆಸಿಕೊಂಡು ಬರುವಂತೆ ಮಧುಲಿಂಗ ನಾಯಕರು ಪ್ರಾರ್ಥಿಸಿ ಕೊಂಡರು. ಶ್ರೀರಾಮಚಂದ್ರ ಸರಸ್ವತಿಗಳು ಜ್ಞಾನವಿದ್ಯಾತಪೋ ಬಲಿಷ್ಠರಾಗಿದ್ದು, ವೇದಶಾಸ್ತ್ರ ಸಂಪನ್ನರೂ, ವೇದಾಂತ ತತ್ವಚಿಂತಕರೂ ಆಗಿದ್ದರು.

ಶ್ರೀ ರಾಮಚಂದ್ರ ಸರಸ್ವತಿಗಳ ನಂತರ ಸ್ವರ್ಣವಲ್ಲೀ ಪೀಠದಲ್ಲಿ ೪೧ನೆಯ ಗುರುಗಳಾಗಿ ವಿರಾಜಿಸಿದವರು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು. ಗಂಗಾಧರೇಂದ್ರ ಸರಸ್ವತಿಗಳು ವಿದೇಶಗತರಾಗಿ*೭ ಹೋದ ಸಂಬಂಧ, ಸ್ವರ್ಣವಲ್ಲೀ ಮಠಕ್ಕೆ ಸಲ್ಲುವ ಸ್ವಾಸ್ತಿಗಳನ್ನು ಪೂರ್ವಮರ್ಯಾದೆಯಂತೆ ಆಳಿ ಅನುಭವಿಸಿಕೊಂಡು ಬರುವಂತೆ ಮಧುಲಿಂಗ ನಾಯಕರು ಶಾ.ಶ. ೧೫೭೯ನೆಯ ಹೇಮಳಂಬಿ ಸಂವತ್ಸರದ ಪ್ರಥಮ ಶ್ರಾವಣ ಶು. ೭ (೭-೭-೧೬೫೭), ಮಂಗಳವಾರದಂದು, ಹೊನ್ನೇಹಳ್ಳಿಯ ಸವಜ್ಞ (ಸರ್ವಜ್ಞೇಂದ್ರ) ಸರಸ್ವತೀ ಸ್ವಾಮಿಗಳಿಗೆ ಧರ್ಮಸಾಧನವನ್ನು ಬರೆಸಿಕೊಟ್ಟರು. *೮

ಶ್ರೀಮಾಧವೇಂದ್ರ ಸರಸ್ವತಿಗಳ ಶಿಷ್ಯರಾದ ಶ್ರೀಸರ್ವಜ್ಞೇಂದ್ರ ಸರಸ್ವತಿಗಳು ಸ್ವರ್ಣವಲ್ಲೀ ಪೀಠದಲ್ಲಿ ೪೨ನೆಯ ಸ್ವಾಮಿಗಳು. ಮಧುಲಿಂಗ ನಾಯಕರು, ನರಸಿಂಹ ದೇವರ ಅಭಿಷೇಕ, ಪೂಜೆ, ನೈವೇದ್ಯ ಮತ್ತು ನಂದಾದೀಪ್ತಿ (ನಂದಾದೀಪ) ಬಗ್ಗೆ, ಹೊನ್ನೇಹಳ್ಳಿಯ ಸರ್ವಜ್ಞೇಂದ್ರ ಸರಸ್ವತಿಗಳಿಗೆ, ಪ್ರಾಕು ಬಿಟ್ಟ ಮೂಶಿಕಿ ಗ್ರಾಮವನ್ನು, ಶಾ.ಶ. ೧೫೯೪ನೆಯ ಪರಿಧಾವಿ ಸಂವತ್ಸರದ ಭಾದ್ರಪದ ಶು. ೧೦ (೨೨-೮-೧೬೭೨), ಗುರುವಾರದಂದು ರಾಯಸಪಟ್ಟೆ*೯ಯನ್ನು ಬರೆಸಿಕೊಟ್ಟರು. ದಾನಶಾಸನದ ಪ್ರಾರಂಭದಲ್ಲಿ ಗುರುಗಳ ಬಿರುದಾವಳಿಗಳಿದ್ದು, ನಂತರ,.... **ಪ್ರಾಕು ಬಿಟ ಮೂಶಿಕಿ ಗ್ರಾಮವಂನ್ನು । ಶ್ರೀ ನುರಸಿಹ್ವ ದೇವರ ಅಭಿಷೇಕ ಪೂಜೆ ವೈವೆದ್ಯ। ನಂದಾದಿಪ್ತಿ ಬಗ್ಯೆ । ದೆವರ ಭಿಕ್ಷಾ ಸ್ವಾಸ್ತಿಗೆ ಸಾಹಾ ಬಿಟ ಗ್ರಾಮವಂನ್ನು॥ ಪೂರ್ವದಲ್ಲಿ ಆಳಿ ಬಂದ ಆಳಿಕೆ ಪ್ರಮಾಣು।ಭೂಮಿ ಮನೆ ತ್ರೋಟ ಗದ್ದೆ। ತ್ತೆಂಗು ಶಿಂಗಾರ ನಿರು ದಾರ್ರಿ ನೆಲ್ಲೆ ಹೊಲ್ಲ । ಬೆಟ ಚಿಟೆ । ಹಕ್ಕಲ್ಲು ಹಳಿಗಾನ್ನು। ಕಾನು ಕಾಡಾರಂಭ ಮುಂತ್ತಾಗಿ ಯಿದಕ್ಕೆ ಬಂದ ವಳಕೊಡು ಹೊರಕೊಡು । ಸೊಪಿನ ಬೆಟ್ಟ ಅಕ್ಷಿ ಆಗಾಮೆ ಮುಂತ್ತಾಗಿ ಯೆನ್ನು ಉಂಟಾದ್ದನ್ನು । ಪೂರ್ವ ದಾರ್ರಿಭ್ಯ । ನಡದು ಬಂದ ಪ್ರಮಾಣು ಅನುಭವಿಶಿಕೊಂಡು । ಶ್ರೀ ನ್ರುರಶಿಹ್ವದೆವರ ಸೆವೆನ್ನು । ನಡಶಿ ಕೊಂಡು । ದೆವರ ಭಿಕ್ಷಾಸ್ವಾಸ್ಥಿಯನ್ನು ಆಗುವಮಾಡ್ಡಿಕೊಂಡು । ದೆವರ (ಪೀಠದಲ್ಲಿರುವ ಸ್ವಾಮಿಗಳ) ಶಿಷ್ಯ ಪಾರಂಪರೆಯಾಗಿ ನಂಮ ವಂಶ ಪಾರಂಪರೆಯಾಗಿ। ಆಳ್ ಅನ್ನುಭವಿಶಿಕೊಂಡು। ಆ ಚಂದ್ರಾರ್ಕ ಸ್ಥಾಯಿಗಳಾಗಿ ಸರ್ವಬಾಧಾ ಪರ್ರಿಹಾರವಾಗಿ । ಅನ್ನುಭವಿಶಿ ಸುಖದಲ್ಲಿ । ಯಿಹದು....** ಎಂದು ಉಲ್ಲೇಖಿಸಲಾಗಿದೆ. ದಾನಶಾಸನದ ಕೊನೆಯಲ್ಲಿ ಸಾಕ್ಷಿಗ್ರಂಥಗಳನ್ನು ನಮೂದಿಸಲಾಗಿದೆ.

ಶಾ. ಶ. ೧೫೯೪ನೆಯ ಪರಿಧಾವಿ ಸಂವತ್ಸರದ ಭಾದ್ರಪದ ಶು. ೧೦ (೨೨-೮-೧೬೭೨), ಸೋಮವಾರ, ಸೋದೆಯ ಮಹಾಪ್ರಭು ಮಧುಲಿಂಗ ನಾಯಕರು ಶ್ರೀ ಸರ್ವಜ್ಞೇಂದ್ರ ಸರಸ್ವತೀ ಶ್ರೀಪಾದಂಗಳಿಗೆ ಬಿಟ್ಟ ಸ್ವಾಸ್ಥಿಯ ಗ್ರಾಮುಗಳು ಇಂತಿವೆ: ಹಶಿಹುಲ್ಲುಮನೆ, ಡಬಕುಳಿ ಗ್ರಾಮ, ಕೂಮನೆ ಮನೆ ಗ್ರಾಮ, ಹುಲ್ಲದೇವರಸರು ಗ್ರಾಮ, ಕೊಣೆಸರು, ಅರಸಾಪುರ ಗ್ರಾಮ, ಗೊ(ಗೋ)ಳಿ ಕೊಪ್ಪ ಗ್ರಾಮ, ಮೊದೂರ ಗ್ರಾಮ, ವೊ (ಓ) ಣಿಕೆರೆ ಗ್ರಾಮ, ಮೊದೂರು ಭತ್ತಗ್ರಾಮ, ಗೊಣಸರ ಗ್ರಾಮ, ಶೀಗೆಹಳ್ಳಿ ಗ್ರಾಮ, ಮುಶಿಕೆ ಗ್ರಾಮ, ಮಂಜುಗುಣಿ ನೆಕಾರಕನ ಮನೆ, ಕರೂರು ಸೀಮೆಯೊಳಗಿನ ಬೊಪ್ಪನಹಳ್ಳಿ ಒಳಗಿನ ಕಕ್ಕೋಡು ಗ್ರಾಮ, ಅಡಕಳ್ಳಿ ಕೊಡಸೊಗೆ, ಕೊಡಲೆಗದ್ದೆ ಗ್ರಾಮ, ಶಿಂಗನಮನೆ, ಮುಂಡಿಗೆಸರು, ದೊಣಿಗಾರು, ನೈರೂರು, ಕರುಮನೆ, ಕಪ್ಪೆಗದ್ದೆ, ಕುಂಭರಾಳು, ಅರಗಡಿ, ತೋಟಿಕೊಪ್ಪ, ಬಾಳಗಾರು, ಹಾಸಪುರಗದ್ದೆ, ಕವಡಿಕೆರೆ, ಬೆಳಖಂಡ, ಗರಾಸ, ಸಬಗೆರೆ, ಹಲಸಖಂಡ, ಜಡ್ಡಿಗದ್ದೆ, ಫಾಂಡೆಮನೆ, ಕುನ್ನಗದ್ದೆ, ಕಡುವಿನಕೆರೆ, ಬೊಮ್ಮನಕೊಪ್ಪ, ಅಣಲಗಾರು, ಲಿಂಗದಬೈಲು, ಗೋಪನಮನೆ, ಕಮೆನಗೋಳಿ, ಗದ್ದೆಮಠ, ಕೊನಸುಗುಳಿ, ಶಿಂಗದಮನೆ, ಬಿಗಾರು, ತಟ್ಟಿಗಾರು, ಹೆಗ್ಗಾರು, ಹೆಗಡೆಕಟ್ಟು, ಅರಗೋಡು, ನಾಗರಕುರು, ಹಿತ್ತಲತೋಟ, ಜಂಬೆಕೊಪ್ಪ, ಮಂತಕುಳಿಯೊಳಗೆ ಭತ್ತಗ್ರಾಮ, ಶಿವಲಮನೆ, ಗುಂಡಿಗದ್ದೆ, ಬರ್ತನಹಳ್ಳಿ ಒಳಗಿನ ಕೋಟೆಮನೆ, ಶೀಗೆಮನೆ, ಮಣ್ಣಕುಳಿ,ಉಮ್ಮಚಿಗೆ, ವೊತ್ತೀಸರು, ಹಲಸಿನಕೊಪ್ಪ, ಹುಣಸೆಮನೆ, ಸಂಪೆಸರುವು, ವನಿಕೆಮನೆ, ಹಿರಿಸರುವು, ಹಾಸಣಿಗೆ ಮಠ, ಆಗರಳ್ಳಿ, ಹಿಂಡಸಿ, ತಟ್ಟೀಸರುವು, ಬಾಳೂರು ಮಠಕ್ಕೆ ಉತ್ತಾರ ಚಿಲ್ಲೂಗದ್ದೆ, ದಡ್ಡಕಚರಿಕೆ. *೧೦

ಅವಾಂತರ ವೇಳೆಯಲ್ಲಿ, ಸ್ವರ್ಣವಲ್ಲೀ ಮಠಕ್ಕೆ ಪ್ರಾಕಾರಭ್ಯ ಧರ್ಮಮೂಲವಾಗಿ ನಡೆದು ಬರುತ್ತಿದ್ದ ರಾಯಸಪಟ್ಟೆಗಳು ನಾಶವಾಗಿ ಹೋದವೆಂದು ಸ್ವಾಮಿಗಳು ಮಧುಲಿಂಗ ನಾಯಕರಿಗೆ ತಿಳಿಸಿದ್ದರಿಂದ, ನಾಯಕರು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳಿಗೆ ಪ್ರಾಕು ಪ್ರಾಕಾರಕ್ಕೆ ಮೂಲ ಸಾಧನ ಪಟ್ಟೆಯನ್ನು ಬರೆಸಿದರೆಂದು ಮೇಲ್ಕಾಣಿಸಿದ ಮೂಲಸಾಧನದ ಪಟ್ಟೆಯಲ್ಲಿ ನಮೂದಿಸಲಾಗಿದೆ.

ಮಧುಲಿಂಗ ನಾಯಕರು ಸ್ವರ್ಣವಲ್ಲೀ ಮಠಕ್ಕೆ ನೀಡಿದ ಧರ್ಮ ಶಾಸನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕೆಲವೊಂದು ಮುಖ್ಯ ಅಂಶಗಳು ಬೆಳಕಿಗೆ ಬರುತ್ತವೆ.

ದಾಖಲೆಗಳು ಮೂಲ ದಾಖಲೆಗಳಾಗಿರದೆ ಶಿಲಾ ಶಾಸನಗಳ ಪ್ರತಿಗಳಾಗಿದ್ದು, ಆದರೆ ಇಂದು ಮೂಲ ಶಾಸನಗಳನ್ನೆಲ್ಲ ಗುರುತಿಸಿ ಓದುವ ಕಾರ್ಯ ದುಸ್ತರವಾದುದರಿಂದ, ಲಭ್ಯವಿರುವ ಈ ಚಾರಿತ್ರಿಕ ದಾಖಲೆಗಳ ಪ್ರಯೋಜನವನ್ನು ಪಡೆಯಬಹುದಾಗಿದೆ. ಪ್ರಮಾಣ ಬದ್ಧ ಪ್ರಸ್ತುತ ದಾಖಲೆಗಳನ್ನು ಅವಲೋಕಿಸಿದಾಗ, ದಾಖಲೆಗಳ ಪಾಠಗಳಲ್ಲಿಯ ಕೆಲವು ಭಾಷಾದೋಷಗಳನ್ನು ಗೌಣವಾಗಿ ಪರಿಗಣಿಸಬಹುದಾಗಿದೆ. ಉದಾಹರಣೆಗಾಗಿ, ಧ್ಯನ (ಧ್ಯಾನ) ನಿರುತ್ತರಾದ (ನಿರತರಾದ), ಸರಸ್ವತ್ತಿ (ಸರಸ್ವತೀ), ಶಿಮೆ (ಸೀಮೆ), ಕಾಲ್ಲು ಮಠಗಳು (ಕಾಲು ಮಠಗಳು), ಸಹಿರಂಣ್ಯೊದಕ (ಸಹಿರಣ್ಯೋದಕ), ಕುತ್ತೆಗಳ (ಕೃತ್ಯಗಳ), ಪ್ರಾಕ್ಕು(ಪಾಕು), ಸ್ರೆಯೋಭಿಉಧಿ (ಶ್ರೇಯೋಭಿವೃದ್ಧಿ), ಪಟೆ (ಪಟ್ಟೆ), ಪ್ರತ್ತಿ (ಪ್ರತಿ), ಇತ್ಯಾದಿ. ದೊರೆತ ಕೆಲವು ಮೂಲ ಶಿಲಾಶಾಸನಗಳ ಪಾಠಗಳನ್ನು ಮತ್ತು ದಪ್ಪನೆಯ ಉರಟಾದ ಕಾಗದಗಳಲ್ಲಿ ಬರೆದಿಟ್ಟ ಅವುಗಳ ಪ್ರತಿಗಳನ್ನು ಹೋಲಿಸಿದಾಗ, ದಾಖಲೆಗಳಲ್ಲಿಯ ಪಾಠಗಳು ಪ್ರಮಾಣಬದ್ಧವಾದವುಗಳೆಂದು ಖಚಿತವಾಗುತ್ತದೆ. ಸೋದೆಯರಸರ ಕಾಲದಲ್ಲಿ ಶ್ರೀ ಸ್ವರ್ಣವಲ್ಲೀ ಮಠವು ಉಚ್ಛ್ರಾಯ ಸ್ಥಿತಿಯಲ್ಲಿದ್ದುದನ್ನು ಗಮನಿಸಿದಾಗ, ಉಲ್ಲೇಖಿತ ಸೋದೆಯರಸರ ಕಾಲದ ಧರ್ಮಸಾಧನಗಳು ಪ್ರಮಾಣಬದ್ಧವಾದವುಗಳೆಂದು ಧಾರಾಳವಾಗಿ ಒಪ್ಪಿಕೊಳ್ಳ ಬಹುದು. ಕಾಲ, ಭಾಷೆ, ಲಿಪಿ ಮತ್ತು ಅಂದಿನ ಆಗು ಹೋಗುಗಳೆಲ್ಲವೂ ದಾಖಲೆಗಳಲ್ಲಿಯ ಅಂಶಗಳನ್ನು ಪುಷ್ಟೀಕರಿಸುತ್ತವೆ.

ಕರ್ನಾಟಕದ, ಪ್ರಸ್ತುತದಲ್ಲಿ ಸೋದೆಯರಸರ ಧರ್ಮ ಶಾಸನಗಳಲ್ಲಿ ಕ್ರಮಬದ್ಧತೆ ಮತ್ತು ಅಚ್ಚುಕಟ್ಟುತನ ಕಂಡು ಬರುವಂತೆ, ಮಧುಲಿಂಗ ನಾಯಕರ ಶಾಸನಗಳಲ್ಲಿಯೂ ಈ ಅಂಶಗಳು ವ್ಯಕ್ತವಾಗುತ್ತವೆ. ಪ್ರಾರಂಭದಲ್ಲಿ ಶಿವನನ್ನು ಸ್ತುತಿಸಿ, ನಮಿಸಲಾಗಿದ್ದು, ನಂತರ ದಾನಶಾಸನವನ್ನು ನೀಡಿದ ನಿರ್ದಿಷ್ಟ ಕಾಲವನ್ನು ನಮೂದಿಸಲಾಗಿದೆ. ಉದಾಹರಣೆಗಾಗಿ, ಶ್ರೀನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ । ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೭೬ನೆಯ ಜಯ ಸಂ॥ ರದ ಮಾಘ ಬ ೩೦ ಯಲ್ಲು । ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯವರ್ಯ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರಿಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯನ ಧಾರಣ ಸಮಾಧ್ಯಷ್ಟಾಂಗ ಯೋಗಾಚರಣ ನಿರುತ್ತರಾದ ಶ್ರೀಮಧೊಂನೆಹಳಿ ರಾಮಚಂದ್ರ ಸರಸ್ವತ್ತಿ ಶ್ರೀಪಾದಂಗಳಿಗೆ॥ ॥ ಶ್ರೀಮಂಸಾಳ್ವ ಮಹಾಪ್ರಭು ಸೋದೆಯ ಮಧುಲಿಂಗ ನಾಯಕರು ಬರಶಿಕೊಟ ಪಟಿಕ್ರಮವೆಂತ್ತೆಂದರೆ ।...... ಇತ್ಯಾದಿಯಾಗಿ ಶಾಸನ ಮುಂದುವರಿಯುತ್ತದೆ. ಸ್ವರ್ಣವಲ್ಲೀ ಮಠದ ಗುರುಗಳ ಬಿರುದಾವಳಿಗಳನ್ನೂ ಶಾಸನಗಳಲ್ಲಿ ಗಮನಿಸಬಹುದಾಗಿದೆ. ನಂತರದಲ್ಲಿ, ಧರ್ಮಶಾಸನವನ್ನು ಯಾವ ಕಾರಣಕ್ಕಾಗಿ ನೀಡಲಾಯಿತು. ದಾನಮಾಡಲಾದ ಭೂಮಿಯ ವಿವರ, ಇತ್ಯಾದಿಗಳ ನಿರೂಪಣೆ.

ಇನ್ನುಳಿದ ಧರ್ಮ ಶಾಸನಗಳಂತೆ ಮಧುಲಿಂಗ ನಾಯಕರ ಶಾಸನಗಳ ಅಂತ್ಯದಲ್ಲಿ ಸಾಕ್ಷಿಗ್ರಂಥಗಳನ್ನು ಬರೆಯಲಾಗಿದೆ. ಉದಾಹರಣೆಗಾಗಿ. *೧೧

೧. *ಆದಿತ್ಯ ಚಂದ್ರಾವನಿಲ್ಲೋ ನಲಶ್ಚದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।*

*ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮ್ಮೋಪಿ ಜಾನಾತಿ ನರಸ್ಯ ವೃತ್ತಮ್ ॥*

{ಸೂರ್ಯ-ಚಂದ್ರ, ಗಾಳಿ-ಬೆಂಕಿ, ಆಕಾಶ, ಭೂಮಿ ನೀರು, ಹೃದಯ, ಯಮ, ಹಗಲು, ರಾತ್ರಿ ಮತ್ತು ಇವೆರಡರ ಸಂಧಿಕಾಲ (ಪ್ರಾತಃಕಾಲ, ಸಾಯಂಕಾಲ) ಅಲ್ಲದೆ ಧರ್ಮ ಇವು ಮನುಷ್ಯನ ನಡತೆಯನ್ನು ತಿಳಿದಿರುತ್ತವೆ.}

೨. *ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಮ್ ।*

*ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಮ್ ॥*

{ದಾನ ಹಾಗೂ ರಕ್ಷಣೆ ಇವುಗಳಲ್ಲಿ ದಾನಕ್ಕಿಂತ ರಕ್ಷಣೆ ಮೇಲು; ದಾನದಿಂದ ಸ್ವರ್ಗವನ್ನು ಪಡೆಯುತ್ತಾನೆ; ರಕ್ಷಣೆಯಿಂದ ಶಾಶ್ವತವಾದ {ನಾಶವಿಲ್ಲದ} ಪದವಿಯನ್ನು ಪಡೆಯುತ್ತಾನೆ.}

೩. *ಸ್ವದತ್ತಾಂ ಪರದತ್ತಾಂ ವಾ ಯೋ ಹರೇಚ್ಚ ವಸುಂಧರಾಂ ।*

*ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥*

(ತಾನೇ ದಾನ ಮಾಡಿದ ಅಥವಾ ಅನ್ಯರು ದಾನಮಾಡಿದ ಭೂಮಿಯನ್ನು ಯಾವನು ಅಪಹರಿಸುತ್ತಾನೋ ಅವನು ಅರವತ್ತು ಸಾವಿರ ವರ್ಷಗಳವರೆಗೆ ಹೊಲಸಿನಲ್ಲಿಯ ಕ್ರಿಮಿಯಾಗಿ ಜನಿಸುತ್ತಾನೆ)

೪. *ನ ವಿಷಂ ವಿಷಮಿತ್ಯಾಹುಃ ಬ್ರಹ್ಮಸ್ವಂ ವಿಷಮುಚ್ಯತೇ ।*

*ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರ - ಪೌತ್ರಕಮ್ ॥*

{ವಿಷವು {ನಿಜವಾಗಿ} ವಿಷವಲ್ಲವೆಂದು {ತಿಳಿದವರು} ಹೇಳುತ್ತಾರೆ. ಆದರೆ ಬ್ರಾಹ್ಮಣರ ಸೊತ್ತು ವಿಷವೆಂದು ಹೇಳಲ್ಪಡುತ್ತದೆ. ವಿಷವು ಒಬ್ಬನನ್ನು ಕೊಲ್ಲುತ್ತದೆ. ಆದರೆ ಬ್ರಹ್ಮಸ್ವವು {ಬ್ರಾಹ್ಮಣನ ಸೊತ್ತು} ಮಕ್ಕಳು, ಮೊಮ್ಮಕ್ಕಳನ್ನು ನಾಶಮಾಡುತ್ತದೆ.}

ಸೋದೆಯರಸರು, ಪ್ರಸ್ತುತದಲ್ಲಿ ಮಧುಲಿಂಗ ನಾಯಕರು ಶ್ರೀ ನರಸಿಂಹ ದೇವರ ಪೂಜೆ, ಅಭಿಷೇಕ, ನೈವೇದ್ಯ ಮತ್ತು ನಂದಾದೀಪದ ಬಗ್ಗೆ, ಸ್ವರ್ಣವಲ್ಲೀಮಠದ ಗುರುಗಳಿಗೆ ಭೂದಾನ ಮಾಡಿ, ಧರ್ಮವನ್ನು ರಕ್ಷಿಸಿದರೆಂದು ಅವರ ಧರ್ಮಶಾಸನಗಳಿಂದ ಸ್ಪಷ್ಟವಾಗುತ್ತದೆ. ಸೋದೆಯರಸರು ವೀರಶೈವ, ಜೈನ ಮತ್ತು ಮಾಧ್ವ ಮಠಗಳಿಗೂ ಧರ್ಮಶಾಸನಗಳನ್ನು ನೀಡಿದರೆಂಬ ಅಂಶವನ್ನು ಗಮನಿಸಿದಾಗ ಮತ್ತು ಅದಕ್ಕೆ ಸಾಕ್ಷಿಯಾಗಿ, ಸ್ವಾದಿಯ ಪ್ರದೇಶದಲ್ಲಿ ಇಂದಿಗೂ ಆ ಮತಗಳ ಮಠಗಳು ಅಸ್ತಿತ್ವದಲ್ಲಿ ಇರುವದನ್ನು ಅರಿತಾಗ, ಸಕಲ ಮತಧರ್ಮದವರನ್ನು ಕೇವಲ ರಕ್ಷಿಸಿದ್ದಲ್ಲದೆ, ಪೋಷಿಸಿದರೆಂದೂ ತಿಳಿದುಬರುತ್ತದೆ. *೧೨

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಶ್ರೀ ಸ್ವರ್ಣವಲ್ಲೀ ಮಠದ ಗುರುಪರಂಪರೆಯಲ್ಲಿ ೩೮ನೆಯವರಾದ ಶ್ರೀ ಬೃಹದ್ಗಂಗಾಧರೇಂದ್ರ ಸರಸ್ವತಿಗಳು (ಕ್ರಿ. ಶ. ೧೬೪೮-೧೬೫೩) ರಚಿಸಿದ ‘ಜ್ಞಾನದೀಪಿಕಾ’ ಎಂಬ ಚಾರಿತ್ರಿಕ ಕಾವ್ಯದಲ್ಲಿ ಸ್ವರ್ಣವಲ್ಲೀ ಮಠದ ಪೂರ್ವವೃತ್ತಾಂತವಿದೆ. ಅದೇ ರೀತಿ, ಸು. ಕ್ರಿ. ಶ. ೧೮೮೦ರ ಚಾರಿತ್ರಿಕ ದಾಖಲೆಯೊಂದರಲ್ಲಿಯೂ ಶ್ರೀಮಠದ ಪೂರ್ವ ವೃತ್ತಾಂತವಿದೆ. (ಸ್ವ. ದಾ. ೨೨೪ : ಡಾ॥ ಎ. ಕೆ. ಶಾಸ್ತ್ರಿ, ‘ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು, ಸಂ. ೧’, ಕರ್ನಾಟಕ ರಾಜ್ಯಪತ್ರಾಗಾರ, ಬೆಂಗಳೂರು, ೧೯೯೭)

*೨. ಸ್ವ. ದಾ. ೬, ೭.

*೩. ಅದೇ ಗ್ರಂಥ.

*೪. ಸ್ವ. ದಾ. ೫-೫೦.

*೫. ಸ್ವ. ದಾ. ೨೪, ೨೫, ೩೦, ೩೧.

*೬. ಸ್ವ. ದಾ. ೨೪.
ಶ್ರೀ ರಾಮಚಂದ್ರ ಸರಸ್ವತಿಗಳು ಸ್ವರ್ಣವಲ್ಲೀ ಪೀಠದಲ್ಲಿ ೪೦ನೆಯ ಗುರುಗಳಾಗಿದ್ದರೆಂದು ಸ್ವ. ದಾ. ೨೨೪ನೆಯ ದಾಖಲೆ ಮತ್ತು ಇತರ ದಾಖಲೆಗಳು ಖಚಿತ ಪಡಿಸುತ್ತವೆ. ಪೂರ್ವೋಲ್ಲೇಖಿತ ‘ಜ್ಞಾನದೀಪಿಕೆ’ಯೂ ಇದೇ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

*೭. ಪೀಠವನ್ನಲಂಕರಿಸದೆ ಕೇವಲ ಪರಿವ್ರಾಜಕ ಸನ್ಯಾಸಿಗಳಾಗಿದ್ದರೆಂದು ಅರ್ಥೈಸಬಹುದು.

*೮. ಸ್ವ. ದಾ. ೨೫

*೯. ಸ್ವ. ದಾ. ೩೦.

*೧೦. ಸ್ವ. ದಾ. ೩೧

*೧೧. ಸ್ವ. ದಾ. ೩೦.

*೧೨. ಹೆಚ್ಚಿನ ಮಾಹಿತಿಗಾಗಿ, ಲೇಖಕರು ಸಂಪಾದಿಸಿದ ‘ಶಿರಸಿ ತಾಲೂಕಾ ದರ್ಪಣ’ದಲ್ಲಿಯ ಆರನೆಯ ಅಧ್ಯಾಯ ಮತ್ತು ಗದುಗಿನ ವೀರಶೈವ ಸಂಸ್ಥೆಯವರು ೧೯೯೫ರಲ್ಲಿ ಪ್ರಕಟಿಸಿದ ‘ಸ್ವಾದಿ ಅರಸುಮನೆತನ’ ಎಂಬ ಗ್ರಂಥಗಳನ್ನು ಓದಿರಿ.

ಡಾ॥ ಕೆ. ಜಿ. ವಸಂತ ಮಾಧವ*

# ವಿದೇಶಿ ದಾಖಲೆಗಳ ಹಿನ್ನೆಲೆಯಲ್ಲಿ ಸ್ವಾದಿರಾಜ್ಯದ ಸಾಂಸ್ಕೃತಿಕ ಮಾಹಿತಿಗಳು (೧೬೭೨-೧೭೬೭)

ಕ್ರಿ. ಶ. ೧೬೭೨ರ ನಂತರ ಘಟ್ಟದ ಮೇಲಿದ್ದ ಸ್ವಾದಿರಾಜ್ಯವು ಕರಾವಳಿಯ ಕಡೆಗೆ ಪ್ರಸರಿಸಿ ೧೬೮೦ರ ನಂತರ ಈ ಕರಾವಳಿ ಪ್ರದೇಶದಲ್ಲಿ ಪ್ರಬಲಗೊಂಡಿತ್ತು. ಮಿರ್ಜಾನ ಉತ್ತರದಿಂದ ಕೆಮೊರಾಮ್ಸವರೆಗಿನ ಪ್ರದೇಶವು ಸ್ವಾದಿ ರಾಜ್ಯಕ್ಕೆ ಸೇರಿತ್ತು. ಈ ರಾಜ್ಯ ಕರಾವಳಿ ಕಡೆಗೆ ಹರಡಿದ್ದುದರಿಂದ ಸ್ವಾದಿ ಅರಸು ಮನೆತನದವರಿಗೆ ವಿದೇಶಿಯರ ಸಂಪರ್ಕ ಉಂಟಾಯಿತು. *೧

ವ್ಯಾಪಾರಸ್ಥ ವಿದೇಶಿಯರು ತಮ್ಮ ಹಿತಾಸಕ್ತಿಯಿಂದ ಈ ರಾಜ್ಯವನ್ನು ಸಂದರ್ಶಿಸಿ, ಮತ್ತು ಕೇಳಿ ತಿಳಿದು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿದ್ದರು. ಈ ಅಭಿಪ್ರಾಯಗಳಲ್ಲಿ ಕೆಲವು ಇಲ್ಲಿನ ಸಾಂಸ್ಕೃತಿಕ, ಮುಖ್ಯವಾಗಿ ಸಾಮಾಜಿಕ ಮತ್ತು ಧಾರ್ಮಿಕ ಸಂಗತಿಗಳನ್ನು ರಸವತ್ತಾಗಿ ತಿಳಿಸುತ್ತವೆ. ಇಲ್ಲಿ ಅಧ್ಯಯನಕ್ಕೆ ತೆಗೆದುಕೊಂಡ ವಿದೇಶಿ ಆಕರಗಳಲ್ಲಿ ದಾಖಲೆ ಪತ್ರಗಳು ಮತ್ತು ಪ್ರವಾಸಿ ವರದಿಗಳು ಮುಖ್ಯವಾಗಿವೆ. ಆಂಗ್ಲ ಭಾಷೆಯ ದಾಖಲೆ ಪತ್ರಗಳಲ್ಲಿ ಗಮನಾರ್ಹವಾದವುಗಳು ಅಪ್ರಕಟಿತ. ಬೊಂಬಾಯಿ ಮತ್ತು ಕಾರವಾರ ಭಂಡಶಾಲೆಯ ಕಾಗದ ಪತ್ರಗಳು (ಇದು ಮಹಾರಾಷ್ಟ್ರ ಸರಕಾರದ ಪತ್ರಗಾರ ಬೊಂಬಾಯಿಯಲ್ಲಿದೆ- ಪ್ರಕಟಿತ ಇಂಗ್ಲೀಷ್ ಫ್ಯಾಕ್ಟರಿ ಇನ್ ಇಂಡಿಯ I & III) ತಲಚೇರಿ ಕನ್ಸ್‌ಲ್ಟೇಶನ್, ಪೋರ್ಚುಗೀಸ್ ದಾಖಲೆ ಪತ್ರಗಳು, ಇವುಗಳು ಮುಖ್ಯವಾಗಿ ಡಾನ್‌ವರ್ಸ್‌ನ ಸಂಗ್ರಹ ಮತ್ತು ಬಿ. ಎಸ್. ಶಾಸ್ತ್ರಿಯವರ ಬರಹಗಳಲ್ಲಿವೆ. ಈ ಸ್ವಾದಿ ರಾಜ್ಯದ ಕೆಲವು ಸಾಂಸ್ಕೃತಿಕ ಸಂಗತಿಗಳನ್ನು ವಿದೇಶಿ ಪ್ರವಾಸಿಗಳಾದ ಫ್ರಾಯರ್ (frayer 1076) ಜ್ಯೆಮಿಲಿ ಕರೇರಿ (Gemilli Careri 1695) ಅಲೆಕ್ಸಾಂಡರ್ ಹ್ಯಾಮಿಲ್ಟನ್ (೧೭೨೦) ತಮ್ಮ ವರದಿಗಳಲ್ಲಿ ತಿಳಿಸಿದ್ದಾರೆ. ಈ ಎಲ್ಲಾ ವರದಿಗಳನ್ನು ಗ್ಲೆಸ್ಗೊದ ಹ್ಯಾರಲೂಟ ಸೊಸೈಟಿಯವರು ಪ್ರಕಟಿಸಿದ್ದಾರೆ.

### ಸ್ವಾದಿರಾಜ್ಯದ ಸಂಸ್ಕೃತಿ

ಈ ರಾಜ್ಯದ ಸಾಂಸ್ಕೃತಿಕ ಜೀವನ ಹಳೆಯ ಸಾಂಪ್ರದಾಯಿಕ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿತ್ತು. ಹೊಸ ವಿಚಾರಗಳನ್ನು ಮತ್ತು ಹೊರಗಿನ ಜನರ ವಿಚಾರ ತಿಳಿಯುವ ಮಾಹಿತಿಗಳನ್ನು ಸ್ಥಳೀಯರು ತೀರಾ ಅಲಕ್ಷಿಸಿದ್ದರು. ಆದರೆ ಕೆಲವು ಸಂದರ್ಭಗಳಲ್ಲಿ ಕಸಬುಗಾರರು ವಿದೇಶಿಯರೊಡನೆ ನಿರ್ದಿಷ್ಟ ಮಟ್ಟದಲ್ಲಿ ಸಂಪರ್ಕವನ್ನು ಹೊಂದಿದ್ದರು. ಇವರಲ್ಲಿ ಮುಖ್ಯರಾದವರು ಸಾಲೆಗಾರರು. ಇವರು ಅತ್ಯಂತ ನಾಜೂಕಾದ ಬಟ್ಟೆಗಳನ್ನು ನೇಯುತ್ತಿದ್ದು ವಿದೇಶಿಯರು ಬಹಳ ಮೆಚ್ಚಿಕೊಂಡಿದ್ದರು. ಇಂತಹ ನೇಕಾರರಿಗೆ ಕಾರವಾರ ಭಂಡಶಾಲೆಯ ಅಧ್ಯಕ್ಷ ಹೆಚ್ಚಿಗೆ ಪ್ರೋತ್ಸಾಹವನ್ನು ಕೊಟ್ಟಿದ್ದನೆಂದು ಭಂಡಶಾಲೆಯ ಪತ್ರದಲ್ಲಿ ನಮೂದಿಸಿದೆ. ಈ ಸಂಪರ್ಕದಿಂದ ಭಂಡಶಾಲೆಗೆ ಸ್ವಲ್ಪ ನಷ್ಟವಾದರೂ, ಇದನ್ನು ಗಣನೆಗೆ ತೆಗೆದುಕೊಂಡಿಲ್ಲ. *೨

ಸ್ವಾದಿರಾಜ್ಯದಲ್ಲಿನ ದೇವಾಲಯಗಳಲ್ಲಿ ನಡೆಯುವ ರಥೋತ್ಸವ, ಹಳ್ಳಿಗಳಲ್ಲಿ ನಡೆಯುವ ಭೂತೋತ್ಸವ ನೃತ್ಯ, ಕೋಳಿ ಅಂಕ ಮತ್ತು ಜನಸಾಮಾನ್ಯರ ನೃತ್ಯ ಇತ್ಯಾದಿಗಳು ಇಲ್ಲಿನ ಸಾಂಸ್ಕೃತಿಕ ಜೀವನವನ್ನು ಪ್ರತಿಬಿಂಬಿಸಿವೆಯೆಂದು ಕ್ರಿ. ಶ. ೧೬೭೬ರಲ್ಲಿ ಬಂದ ಆಂಗ್ಲ ಪ್ರವಾಸಿ ಫ್ರಾಯರ್ ತಿಳಿಸಿದ್ದು ಗಮನಾರ್ಹ. ಅಂಕೋಲದಲ್ಲಿ ಜೋಗಿಗಳಿಂದ ನಡೆಯುತ್ತಿದ್ದ ಭೂತನೃತ್ಯ ಪೂಜೆ ಮತ್ತು ಸುತ್ತಮುತ್ತಲಿನ ಹಳ್ಳಿಯಲ್ಲಿ ನಡೆಯುವ ಕೋಳಿ ಅಂಕ ಜನಾಕರ್ಷಣೀಯವಾಗಿತ್ತೆಂದು ಇದೇ ಪ್ರವಾಸಿ ಹೇಳಿದ್ದಾನೆ. ಹಳ್ಳಿಯ ಜನರು ದೈವಗಳನ್ನು ಭಕ್ತಿಯಿಂದ ಪೂಜಿಸುವುದು ಆಕರ್ಷಣೀಯವಾಗಿತ್ತು. ಇನ್ನೊಂದು ವಿಸ್ಮಯಗೊಳಿಸಿದ ಸಂಗತಿ ಶಿವೇಶ್ವರದಲ್ಲಿ ಕನ್ನೆಯರು ತಮ್ಮ ಕನ್ಯತ್ವವನ್ನು ದೇವರಿಗೆ ಅರ್ಪಿಸುವುದು. ಈ ರಾಜ್ಯದಲ್ಲಿನ ಲಿಂಗವಂತರಲ್ಲಿ ಜೋಗಿಯರು ಮತ್ತು ಜಂಗಮರು ಇದ್ದಾರೆ. ಈ ಜೋಗಿಗಳನ್ನು ಗೃಹಸ್ಥ ಲಿಂಗಾಯತರು ಮನೆಗೆ ಕರೆದುಕೊಂಡು ಹೋಗಿ ಅವರ ಪಾದ ಪೂಜೆ ಮಾಡುವ ಪದ್ಧತಿಯನ್ನು ಫ್ರಾಯರ್ ಗಮನಿಸಿದ್ದಾನೆ. ಲಿಂಗಾಯತರು ಶವ ಹೂಳುವುದನ್ನು ಇವನು

---

* ಆರಾಧನಾ, ಪಾವಂಜೆ, ಹಳೆಯ ಅಂಗಡಿ - ೫೭೪ ೧೪೬

ತಿಳಿಸಿದ್ದಾನೆ. ಹೆಂಡತಿ ಗಂಡನನ್ನು ಅನುಸರಿಸುತ್ತೇನೆಂದರೆ ಆಕೆಯನ್ನು ಜೀವಸಹಿತ ಹೂಳುತ್ತಾರೆ. ಮೊದಲು ಕುತ್ತಿಗೆಯವರೆಗೆ ಮಣ್ಣನ್ನು ಹೇರಿ ಆಮೇಲೆ ಕೆಲವು ಕ್ರಿಯೆಗಳನ್ನು ಮಾಡಿದ ಮೇಲೆ ಕುತ್ತಿಗೆಯನ್ನು ತಿರುಚಿ ಇದರ ಮೇಲೆ ಮಣ್ಣನ್ನು ಹಾಕುತ್ತಾರೆ (ಇದು ಸ್ವಾದಿ ರಾಜ್ಯದ ಗಡಿಪ್ರದೇಶದಲ್ಲಿ ಹೆಚ್ಚು ರೂಢಿಯಲ್ಲಿದ್ದಿತು). ಸಹಗಮನ ಪದ್ಧತಿ ಮತ್ತು ಸಹಗಮನ ಹೊಂದಿದ ಸ್ತ್ರೀಯರಿಗೆ ಸ್ಮಾರಕ ನೆಡುವ ಕ್ರಮ ಇದ್ದದ್ದನ್ನು ಪ್ರವಾಸಿ ಫ್ರಾಯರ್ ಹೇಳಿದ್ದಾರೆ. *೩

ಸ್ವಾದಿರಾಜ್ಯದಲ್ಲಿ ದನಗಳಿಗೆ ಹೆಚ್ಚು ಗೌರವ ಸಲ್ಲಿಸುತ್ತಿದ್ದರು. ಇವುಗಳನ್ನು ಹಿಂಸಿಸಿದರೆ ಅಥವಾ ವಧೆ ಮಾಡಿದರೆ ಅವರು ಸಹಿಸುವುದಿಲ್ಲ. ವಿದೇಶಿಯರು ಇದನ್ನು ಗಮನದಲ್ಲಿಟ್ಟು ಕೊಳ್ಳಬೇಕೆಂದು ಇಂಗ್ಲೀಷ್ ಭಂಡಶಾಲೆಯ ಅಧಿಕಾರಿ ತಮ್ಮವರಿಗೆ ಎಚ್ಚರ ಕೊಟ್ಟದ್ದನ್ನು ಅಲ್ಲಿನ ದಾಖಲೆಯಲ್ಲಿ ಹೇಳಿದೆ. *೪ ಸ್ವಾದಿ ಹಳ್ಳಿಗಳಿಂದ ಆವರಿಸಿದ ಈ ಸ್ವಾದಿ ರಾಜ್ಯದಲ್ಲಿ ಮಣ್ಣಿನ ಮನೆಗಳೇ ಹೆಚ್ಚು. ಇವುಗಳಲ್ಲಿ ಹೆಚ್ಚಿನವು ಗುಡಿಸಲುಗಳೇ. ರಾಜ್ಯದ ಕೆಲವು ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳಿವೆ. ಆದರೆ ಇವುಗಳು ಹಾಳು ಬಿದ್ದ ಸ್ಥಿತಿಯಲ್ಲಿವೆ. ಗ್ರಾಮಗಳಲ್ಲಿ ಕೆಲವು ವಿಚಿತ್ರವಾದ ದೇವರು ಮತ್ತು ದೇವಸ್ಥಾನಗಳು ಇವೆ. ಇವುಗಳ ಪಕ್ಕದಲ್ಲಿ ಸ್ಮಾರಕಗಳಿದ್ದು ಇವುಗಳನ್ನು ಸ್ಥಳೀಯರು ಹೆಚ್ಚು ಆಸಕ್ತಿ ಮತ್ತು ಭಕ್ತಿಯಿಂದ ಪೂಜಿಸುವುದನ್ನು ಕ್ರಿ. ಶ. ೧೬೯೪ರಲ್ಲಿ ಬಂದ ಜೈಮಿಲಿ ಕರೇರಿ ತಿಳಿಸಿದ್ದಾನೆ. ಇಂತಹ ಒಂದು ದೇವಸ್ಥಾನ ಕೊಕರಹಳ್ಳಿಯಲ್ಲಿದ್ದುದ್ದನ್ನು ಈ ಪ್ರವಾಸಿ ನೋಡಿ ತನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಇಲ್ಲಿನ ಕಲ್ಲಿನ ಪೀಠದ ಮೇಲೆ ತಾಮ್ರದ ಗುಮ್ಮಟ ಅದರ ಮೇಲೆ ಮನುಷ್ಯನ ಮುಖವಿದ್ದ ತಗಡು ಇದಕ್ಕೆ ಹೊದಿಸಿದನ್ನು ನೋಡಿ ಇದು ಯಾರೋ ಹೆಸರಾಂತ ವ್ಯಕ್ತಿಯೊಬ್ಬನ ಸಮಾಧಿಯೆಂದು ಇವನು ನಿರ್ಣಯಿಸಿದ್ದಾನೆ. ಈ ರಾಜ್ಯದಲ್ಲಿ ಕೋತಿ (ಮಂಗಗಳು)ಗಳಿಗೆ ದೇವಸ್ಥಾನ ಕಟ್ಟಿ ಅವುಗಳ ಪೂಜೆ ಪುನಸ್ಕಾರ ನಡೆಯುತ್ತಿರುವುದನ್ನು ನೋಡಿ ಇವನು ವಿಸ್ಮಯ ಪಟ್ಟಿದ್ದಾನೆ. ರಾಜ್ಯದ ಗಡಿಯಲ್ಲಿ ಕಾವಲುಗಾರರು ಇದ್ದು ಇವರು ದುಡ್ಡು ಕೀಳುವುದರಲ್ಲಿ ಬಹಳ ಪ್ರವೀಣರು. ಹಳ್ಳಿಗಳಲ್ಲಿ ಆಗಿಂದಾಗ್ಗೆ ಸಂತೆಗಳು ನಡೆಯುತ್ತಿದ್ದು ಇವುಗಳಿಗೆ ಹೆಚ್ಚಿನ ಜನರು ಬರುತ್ತಿದ್ದು, ವ್ಯಾಪಾರದೊಂದಿಗೆ ಸಾಂಸ್ಕೃತಿಕ ಚಟುವಟಿಕೆಗಳು ವಿನಿಮಯ ನಡೆಯುತ್ತಿದ್ದದ್ದನ್ನು ಜೈಮಿಲಿ ಕರೇರಿ (೧೬೯೭)ಯ ವರದಿಯಲ್ಲಿ ಹೇಳಿದೆ. ಸ್ವಾದಿಯ ರಾಜ್ಯದ ಭಾಗವಾಗಿದ್ದ ಪೊಂಡಾದಲ್ಲಿ ಸಹಗಮನ ಪದ್ಧತಿ ವಿಚಿತ್ರ ರೀತಿಯಲ್ಲಿ ನಡೆಯುತ್ತಿದ್ದುದನ್ನು ಇದರ ದುರುಪಯೋಗವನ್ನು ಪುರೋಹಿತರು ತಮ್ಮ ಹಿತಾಸಕ್ತಿಗೆ ಉಪಯೋಗಿಸುತ್ತಿದ್ದದ್ದನ್ನು ಈ ಪ್ರವಾಸಿ ಹೆಚ್ಚು ಒತ್ತಿಹೇಳಿದ್ದಾನೆ ಅಫೀಂ ಸೇದುವುದು ಇಲ್ಲಿನ ಜನರ ಹವ್ಯಾಸವಾಗಿತ್ತು. ಈ ರಾಜ್ಯ ಪರ್ವತ ಪ್ರದೇಶವಾಗಿದ್ದು ಪ್ರಯಾಣಕ್ಕೆ ಕಠಿಣವಾಗಿದೆಯೆಂದು ಜೈಮಿಲಿ ಕರೇರಿ ತಿಳಿಸಿದ್ದಾನೆ. *೫

ಸ್ವಾದಿರಾಜ್ಯದಲ್ಲಿ ನರಬಲಿ, ಸ್ತ್ರೀ ಮತ್ತು ಮಕ್ಕಳನ್ನು ಮಾರುವುದನ್ನು ಕಾರವಾರ ಭಂಡಶಾಲೆಯ ಕೆಲವು ಪತ್ರಗಳು ಉಲ್ಲೇಖಿಸಿವೆ. ಉದಾ. ಕ್ರಿ. ಶ. ೧೬೭೭ರ*೬ ವರ್ಷ ಭಂಡಶಾಲೆಯ ಪತ್ರವೊಂದರಲ್ಲಿ ಸ್ವಲ್ಪ ಹಣಕ್ಕೋಸ್ಕರ ಹೆಂಗಸರನ್ನು ಮತ್ತು ಮಕ್ಕಳನ್ನು ಸ್ವಾದಿ ರಾಜನು ಬಲಿಕೊಡುತ್ತಿದ್ದನೆಂದೂ ಉಲ್ಲೇಖಿಸಿ, ಇಲ್ಲಿನ ಜನಸಾಮಾನ್ಯರ ಜೀವನಕ್ಕೆ ಬೆಲೆಯೇ ಇಲ್ಲವೆಂದು ಹೇಳಿರುವುದನ್ನು ವಿಮರ್ಶಿಸುವ ಅಗತ್ಯವಿದೆ.

ಜ್ಯೋತಿಷ ಮತ್ತು ಮಾಂತ್ರಿಕರು ಇಲ್ಲಿ ಹೆಚ್ಚು ಪ್ರಭಾವ ಶಾಲಿಗಳಾಗಿದ್ದರೆಂದು ಆಂಗ್ಲ ದಾಖಲೆಗಳು ಮತ್ತು ಕ್ರಿ. ಶ. ೧೭೦೦ರಲ್ಲಿ ಬಂದ ಹೆಮಿಲ್ಟನ್ ವರದಿಯು ತಿಳಿಸುತ್ತದೆ. ಇಷ್ಟಲ್ಲದೆ ಆಂಗ್ಲ ಅಧಿಕಾರಿಗಳು ಈ ಜೋಯಿಸರೊಂದಿಗೆ ಸಲಹೆಗಳನ್ನು ಕೇಳುತ್ತಿದ್ದರೆಂದು ಈ ದಾಖಲೆಗಳಿಂದ ತಿಳಿದು ಬರುತ್ತದೆ. *೭ ಸ್ವಾದಿರಾಜ್ಯದ ಕೆಲವು ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳ ಬಗ್ಗೆ ಪೋರ್ಚುಗೀಜ ದಾಖಲೆಗಳು ಅಲ್ಲಲ್ಲಿ ಹೇಳಿವೆ. ಇವರ ದಾಖಲೆಗಳು ಮುಖ್ಯವಾಗಿ ಒಪ್ಪಂದ ಮತ್ತು ಪತ್ರಕಗಳಾಗಿವೆ. ಕೆಲವು ಪತ್ರಗಳು ಗೋವಾ ಪತ್ರಾಗಾರದಲ್ಲಿವೆ.

ಕೆಲವು ಪತ್ರ ದಾಖಲೆಗಳನ್ನು ಭಂಗಾಜಾಪಿರೇರಾ ಅವರು ಸಂಪಾದಿಸಿದ್ದು ಅವು ಆರ್ಕೈವೊ ಪೋರ್ತುಗೀಜ ಓರಿಯಂಟಲ್ ಎಂಬ ಶೀರ್ಷಿಕೆಯಲ್ಲಿವೆ. ಈ ಪ್ರಬಂಧದಲ್ಲಿ ತಿಳಿಸಿದ ಹೆಚ್ಚಿನ ಸಂಗತಿಗಳು ದಿ॥ ಶಾಸ್ತ್ರಿ ಬಿ. ಎಸ್. ಅವರ ಬರಹಗಳಿಂದ ಎರವು ಪಡೆದಿದೆ. *೮ ಇಲ್ಲಿ ಗುಲಾಮ ಪದ್ಧತಿ ಬಳಕೆ ಇದ್ದ ಬಗ್ಗೆ ಪೋರ್ತುಗೀಜ ದಾಖಲೆ ತಿಳಿಸಿದ್ದನ್ನು ಆಂಗ್ಲ ಪತ್ರವು ದೃಢೀಕರಿಸಿದೆ. ಸಕಾಲದಲ್ಲಿ ಸಾಲ ತೀರಿಸದವರನ್ನು ಗುಲಾಮರನ್ನಾಗಿ ಮಾಡುವ ಪದ್ಧತಿ ಇಲ್ಲಿ ಇದ್ದಿತ್ತು. ದೇವದಾಸಿ ಪದ್ಧತಿ ಇಲ್ಲಿ ಹೆಚ್ಚು ರೂಢಿಯಲ್ಲಿದೆ. ಇಷ್ಟಲ್ಲದೆ ಕ್ರೈಸ್ತ ದೇವದಾಸಿಗಳ ಉಲ್ಲೇಖ ಅಲ್ಲಲ್ಲಿ ಪೋರ್ತುಗೀಜ ದಾಖಲೆಗಳಲ್ಲಿವೆ. ಬೇಗಾರ ಪದ್ಧತಿ ಇಲ್ಲಿ ಇದ್ದದ್ದು ಇವರ ದಾಖಲೆಯಲ್ಲಿ ಉಲ್ಲೇಖವಿದೆ. *೯

ಕೆಲವು ದಾಖಲೆಗಳಲ್ಲಿ ಸ್ವಾದಿರಾಜ್ಯದ ಧಾರ್ಮಿಕ ಸ್ಥಿತಿ ಮತ್ತು ಕ್ರೈಸ್ತ ಮತದ ಪ್ರಚಾರ ಮತ್ತು ಸ್ಥಳೀಯರ ಪ್ರತಿಕ್ರಿಯೆಗಳು ಮೂಡಿ ಬಂದಿವೆ. ಪೋರ್ತುಗೀಜರು ಇಲ್ಲಿ ಕ್ರೈಸ್ತ ಮತ ಪ್ರಚಾರ ಮಾಡಲು ಬಹಳ ಆಸಕ್ತಿ ವಹಿಸಿದ್ದರು. ಇದರಿಂದಾಗಿ, ಅಂಕೋಲಾ, ಸುಂಕೇರಿ, ಶಿವೇಶ್ವರ, ಮತ್ತು ಕಾರವಾರಗಳಲ್ಲಿ ಕ್ರೈಸ್ತ ಇಗರ್ಜಿಗಳು ಸ್ಥಾಪಿತವಾದುವು. ಈ ಮತಪ್ರಚಾರಕರು ಈ ರಾಜ್ಯದಲ್ಲಿ ಸ್ವತಂತ್ರವಾಗಿ ಓಡಾಡಿ ಕೆಲವು ವಿಶೇಷ ವಿನಾಯಿತಿಗಳನ್ನು ಪಡೆದರು. ಅಲ್ಲದೆ ಈ ಧರ್ಮಾಧಿಕಾರಿಗಳು ನ್ಯಾಯ ತೀರ್ಮಾನ ಮಾಡುವ ವಿಶಿಷ್ಟ ಹಕ್ಕುಗಳನ್ನು ಪಡೆದರು. ಇದರೊಂದಿಗೆ ಇವರುಗಳು ಕೆಲವು ವಿಶಿಷ್ಟ ಹಕ್ಕುಗಳನ್ನು ರಾಜರಿಂದ ಪಡೆದರು. *೧೦ ಧಾರ್ಮಿಕಸೌಹಾರ್ದವನ್ನು ಸ್ವಾದಿರಾಜರು ಸಾಮಾನ್ಯವಾಗಿ ಮನಗಂಡಿದ್ದರು. ಆದರೆ ಕ್ರೈಸ್ತ

ಮತಪ್ರಚಾರ ವೈಖರಿ ಸ್ಥಳೀಯರಿಗೆ ಅತೃಪ್ತಿಯನ್ನುಂಟು ಮಾಡಿ ಕೆಲವು ಅಹಿತಕರ ಘರ್ಷಣೆಗಳು ನಡೆದದ್ದನ್ನು ಕೆಲವು ಪೋರ್ತುಗೀಜ ದಾಖಲೆಗಳು ಅಲ್ಲಲ್ಲಿ ಹೇಳಿದ್ದು ಗಮನಾರ್ಹ. ಉದಾ : ಕ್ರಿ. ಶ. ೧೭೫೨ರಲ್ಲಿ ಶಿವೇಶ್ವರದಲ್ಲಿ ಸ್ಥಳೀಯರಿಗೂ ಮತ್ತು ಕ್ರೈಸ್ತರಿಗೂ ಘರ್ಷಣೆ ನಡೆಯಿತು. ಇದಕ್ಕೆ ಮುಖ್ಯ ಕಾರಣ ಕ್ಯಾಥೋಲಿಕ್ ಧಾರ್ಮಿಕ ಮೆರವಣಿಗೆ ಹಿಂದು ದೇವಸ್ಥಾನದ ಬಳಿಸಾಗಿ ಈ ದೇವಸ್ಥಾನದ ಧಾರ್ಮಿಕ ಕಟ್ಟಳೆಗೆ ಅಡ್ಡಿ ಮಾಡುತ್ತಿತ್ತು. ಇದನ್ನು ನಿಲ್ಲಿಸಬೇಕೆಂದು ಜನರು ಸ್ವಾದಿ ರಾಜ್ಯದ ಅಧಿಕಾರಿಗಳಿಗೆ ಮನವಿ ಮಾಡಿಕೊಂಡರು. ಇದನ್ನು ಒಪ್ಪಿ ಸ್ವಾದಿ ಅಧಿಕಾರಿಗಳು ಈ ಮೆರವಣಿಗೆಯನ್ನು ನಿಲ್ಲಿಸಬೇಕೆಂದು ಚರ್ಚು ಅಧಿಕಾರಿಗಳನ್ನು ಕೇಳಿಕೊಂಡರು. ಆದರೆ ಈ ಚರ್ಚು ಅಧಿಕಾರಿಗಳು ಇದನ್ನು ಗಮನಿಸದೆ ಮೆರವಣಿಗೆಯನ್ನು ತೆಗೆದುಕೊಂಡು ಹೋದರು. ಇದನ್ನು ಸ್ವಾದಿ ಅಧಿಕಾರಿಗಳು ತಡೆಹಿಡಿದರು. ಪರಿಣಾಮವಾಗಿ ಕಲಹ ಉಂಟಾಗಿ ಈ ಇಗರ್ಜಿಗೆ ಧಕ್ಕೆಯುಂಟಾಯಿತು. ಧಾರ್ಮಿಕ ಸೌಹಾರ್ದಕ್ಕೆ ಧಕ್ಕೆ ಉಂಟಾದುದನ್ನು ತಿಳಿದು ಸ್ವಾದಿರಾಜ ಪೋರ್ತುಗೀಜರೊಡನೆ ಕ್ರಿ. ಶ. ೧೭೫೫ರಲ್ಲಿ ಒಪ್ಪಂದ ಮಾಡಿ ಹಾಳುಬಿದ್ದ ಚರ್ಚನ್ನು ತನ್ನ ಸಂತ ಖರ್ಚಿನಿಂದ ಪುನರ್ನಿರ್ಮಾಣ ಮಾಡಿಕೊಟ್ಟನು. *೧೧

ಧಾರ್ಮಿಕ ದೃಷ್ಟಿಯಲ್ಲಿ ಗಮನಾರ್ಹ ಘಟನೆ ಎಂದರೆ ಪೋರ್ತುಗೀಸ ದಾಖಲೆ ಗುರುತಿಸಿದ್ದು : 'ಶುದ್ಧಿ' ಒಂದು ಧಾರ್ಮಿಕ ವಿಧಿ. ಕ್ರಿ.ಶ. ೧೭೧೪ರ ಇವರ ದಾಖಲೆಯು ಮತಾಂತರ ಹೊಂದಿದ ಕ್ರೈಸ್ತರನ್ನು ಶುದ್ಧಿಮಾಡಿ ಮತ್ತೆ ಹಿಂದುಮತಕ್ಕೆ ಸೇರಿಸಿ ಕೊಳ್ಳುತ್ತಿದ್ದುದನ್ನು ತಿಳಿಸಿದೆ. *೧೨

ಪೋರ್ತುಗೀಜ ಕೆಲವು ದಾಖಲೆಗಳಲ್ಲಿ ಮುಸ್ಲಿಂರ ವ್ಯಾಪಾರವನ್ನು ತಡೆಗಟ್ಟುವ ಪ್ರಯತ್ನವನ್ನು ಪೋರ್ತುಗೀಜರು ನಡೆಸಿದ್ದನ್ನು ಹೇಳಿದೆ. ಆದರೆ ಸ್ವಾದಿರಾಜ್ಯದಲ್ಲಿ ಮುಸ್ಲಿಂರು ವ್ಯಾಪಾರವನ್ನು ಉತ್ತಮ ರೀತಿಯಲ್ಲಿ ನಡೆಸುತ್ತಿದ್ದುದ್ದನ್ನು ವೀಕ್ಷಿಸಿದಾಗ ಪೋರ್ತುಗೀಜರ ಪ್ರಯತ್ನ ವಿಫಲವಾಯಿತೆಂದು ತಿಳಿಯಬಹುದು. ಮಹ್ಮದೀಯರು ಸ್ವಾದಿರಾಜ್ಯದ ಸೈನಿಕ ಮತ್ತು ರಾಜತಾಂತ್ರಿಕ ಸೇವೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರೆಂದು ಆಂಗ್ಲಪತ್ರ ದಾಖಲೆಗಳು ಸೂಚಿಸುತ್ತವೆ. *೧೩

ಕ್ರಿ. ಶ. ೧೭೫೦ರಲ್ಲಿ ಬರೆದ ವೈಸರಾಯಿ ಮಾರ್ಕ್ವಿಸ್ ಅಲೊರನಾ ವರದಿಯು ಸ್ವಾದಿರಾಜ್ಯದ ಸಾಂಸ್ಕೃತಿಕ ಇತಿಹಾಸವನ್ನು ತಿಳಿಸುವಲ್ಲಿ ಗಮನಾರ್ಹ. ಈ ರಾಜ್ಯದಲ್ಲಿ ಶೆಣ್ವೆ, ಕಂಮಟಿ ಮತ್ತು ಪ್ರಭುಗಳು ಕಾರವಾರ ಅಂಕೋಲಾ ಮತ್ತು ಹೊನ್ನಾವರಗಳಲ್ಲಿನ ವ್ಯಾಪಾರವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ಇದರಿಂದ ಇವರುಗಳೊಂದಿಗೆ ವಾಣಿಜ್ಯ ಮೈತ್ರಿ ಹೊಂದುವ ಅವಶ್ಯಕತೆ ಇದೆ, ಎಂದು ಈ ವೈಸರಾಯಿ ಮನಗಂಡಿದ್ದಾನೆ. ಇಲ್ಲಿನ ಕ್ರೈಸ್ತರು ತಮ್ಮ ವೈರಿಗಳಿಗೆ ನಿಷ್ಠರಾಗಿ ಅವರಲ್ಲಿ ಧಾರ್ಮಿಕ ಶಿಥಿಲತೆಯು ಇದ್ದದ್ದನ್ನು ತೋರಿದ ಬಗ್ಗೆ ಈ ವರದಿಯು ತಿಳಿಸುತ್ತದೆ. *೧೪

## ಉಪಸಂಹಾರ

ಸ್ವಾದಿರಾಜ್ಯದ ಸಾಂಸ್ಕೃತಿಕ ಮಾಹಿತಿಗಳನ್ನು ತಿಳಿಸುವ ವಿದೇಶಿ ಆಕರಗಳು ತಮ್ಮದೆಯಾದ ದೃಷ್ಟಿಕೋನದಿಂದ ನೋಡಿರುವುದನ್ನು ಗಮನಿಸಬೇಕು. ಹೆಚ್ಚಿನ ದಾಖಲೆಗಳು ಸ್ಥಳೀಯ ಸಂಸ್ಕೃತಿಯ ಹಿನ್ನೆಲೆಯನ್ನು ಮತ್ತು ಅವುಗಳ ಅಧ್ಯಯನವನ್ನು ಆಳವಾಗಿ ನಡೆಸಲಿಲ್ಲ. ನಡೆಸುವ ಪ್ರಯತ್ನವನ್ನೂ ಮಾಡಿಲ್ಲ. ಈ ವಿದೇಶಿಯರು ಉಪಯೋಗಿಸುತ್ತಿದ್ದ ದುಭಾಷಿಗಳನ್ನು ವ್ಯಾಪಾರಕ್ಕೆ ಸೀಮಿತ ಗೊಳಿಸಿದ್ದರು. ಕೆಲವು ಕಡೆಗಳಲ್ಲಿ ವಿದೇಶಿಯರು ತಮ್ಮ ಅಜ್ಞಾನವನ್ನು ಪ್ರಕಟಿಸಿ ಸ್ಥಳೀಯ ಸಾಂಸ್ಕೃತಿಕ ಮಾಹಿತಿಗಳನ್ನು ತಿಳಿಸಿದ್ದಾರೆ. ಉದಾ: ಗೋವು ಮತ್ತು ಹನುಮಂತರ ಪೂಜೆಗಳ ಹಿನ್ನೆಲೆಯನ್ನು ತಿಳಿಯದೇ ಇವುಗಳನ್ನು ತಿರುಚಿ ಹೇಳಿದ್ದಾರೆ. ಧಾರ್ಮಿಕ ಕಟ್ಟಳೆಗಳನ್ನು ವಿಕೃತವಾಗಿ ತಿಳಿಸಿದ್ದಾರೆ. ಈ ಹಿನ್ನಲೆಯಲ್ಲಿ ವಿದೇಶಿ ಆಕರಗಳನ್ನು ಜಾಗರೂಕತೆಯಿಂದ ಪುನರ್ವಿಮರ್ಶಿಸುವ ಅಗತ್ಯ ಇದೆ. ವಿದೇಶಿ ಆಕರಗಳಲ್ಲಿ ತಿಳಿಸಿದ ಸಂಗತಿಗಳನ್ನು ಸ್ಥಳೀಯ ದಾಖಲೆಗಳೊಂದಿಗೆ ತುಲನಾತ್ಮಕ ಅಧ್ಯಯನ ನಡೆಸುವ ಅವಶ್ಯಕತೆ ಇದೆ.

ವಿದೇಶಿ ದಾಖಲೆಗಳಲ್ಲಿ ಮೂಡಿ ಬಂದ ಸ್ವಾದಿ ರಾಜ್ಯದ ಸಾಂಸ್ಕೃತಿಕ ಮಾಹಿತಿಗಳು ವಿಪುಲವಾಗಿದ್ದರೂ ಇವುಗಳಲ್ಲಿ ಕೆಲವು ಸಂಗತಿಗಳು ನೈಜತೆಗೆ ದೂರವಾಗಿವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ ಡಾನವರ್ಸ ಅಭಿಪ್ರಾಯದಂತೆ ಕ್ರಿ. ಶ. ೧೫೩೨ರಲ್ಲಿ ಪೋರ್ತುಗೀಸರು ಸ್ವಾದಿರಾಜನೊಡನೆ ಒಪ್ಪಂದ ಮಾಡಿಕೊಂಡರೆಂದು ಕ್ರಿ. ಶ. ೧೬೦೨ರಲ್ಲಿ ಡಚ್ಚರು ಈ ರಾಜ್ಯವನ್ನು ಆಕ್ರಮಿಸಿದಾಗ ಇವರನ್ನು ಸ್ವಾದಿರಾಜ ಪೋರ್ತುಗೀಜರ ಸಹಾಯದಿಂದ ಹೊಡದಟ್ಟಿದನೆಂದು ತಿಳಿಸಿದ್ದಾರೆ. ನೋಡಿ Danvers - The Portuguese in India Vol - II ಪು. ೧೨೩. ಇದು ನಂಬಲರ್ಹ. ಏಕೆಂದರೆ ಆ ಕಾಲದಲ್ಲಿ ಸ್ವಾದಿ ರಾಜ್ಯ ಘಟ್ಟದ ಮೇಲಿನಷ್ಟಕ್ಕೆ ಸೀಮಿತವಾಗಿತ್ತು.

*೨ Fawatt **English Factories in India,** Vol - I, P. 294

*೩ ಡಾ II ಜೊನ್ ಫ್ರಾಯರ ವರದಿ Calcutta weekly English Man (1873 London) PP. 442-425; ಹೆಚ್ಚಿನ ವಿವರ ನಾಗೇಗೌಡ: ಪ್ರವಾಸಿ ಕಂಡ ಇಂಡಿಯಾ - ಭಾಗ ೭ (ಮೈಸೂರು ೧೯೮೩) ಪು. ೧೯೭, ೨೦೬, ೨೦೭-೨೦೮.

*೪ Factory Records of Surat 91 - ಕಾರವಾರದಿಂದ ಸೂರತ್ತಿಗೆ ತಾ. ೧೫.೯.೧೬೮೪ರಂದು ಬರೆದ ಪತ್ರ, M. A. Desai: Chitta kula-Karwar (Bombay : 1969) P. 53

*೫ ಜ್ಯೆಮಿಲಿ ಕರೇರಿ Indian Travels of Careri: (Ed) S. N. Sen, New Delhi, 1949, PP. 209+210, 212, 214, 216; ನೋಡಿ : ನಾಗೇಗೌಡ - ಅದೇ ಗ್ರಂಥ, ಪುಟ ೧೧೮-೧೨೨.

*೬ Bombay Factory Records Vo. 27; P. 27 - ಅದೇ, V - III ಹೆಚ್ಚಿನ ವಿವರಕ್ಕೆ ನೋಡಿ ದೇಸಾಯಿ ಎಂ. ಎ: ಅದೇ ಗ್ರಂಥ, ಪು. ೬೦

*೭ Hamilton: **New Account of East India,** Vol - I., PP. 147-8

*೮ **The Portuguese in Kanara** (Bombay) ೧೯೬೯ ಅಪ್ರಕಟಿತ ಪ್ರಬಂಧ; ಕೆಳದಿ ಅರಸರೂ ಹಾಗೂ ಪೋರ್ತುಗೀಜರು (ಧಾರವಾಡ ೧೯೭೨), **Studies in Indo-portugeuse History** (Bangalore 1981), ಸ್ವಾದಿ ಅರಸರ ಆಕರ ಸಾಮಗ್ರಿ ಪೋರ್ತುಗೀಜ ದಾಖಲೆ, ಸ್ವಾದಿ ಅರಸು ಮನೆತನ (ಸಂ) ಎಂ. ಎಂ. ಕಲಬುರ್ಗಿ ಮತ್ತು ಅ. ಸುಂದರ, ಗದಗ, ೧೯೯೫)

*೯ **Surat Factory Records**(91)1684; ತಾ. ೧೭-೧೨-೧೬೮೩ರಂದು ಸೂರತ್ತಿನಿಂದ ಕಾರವಾರಕ್ಕೆ ಬರೆದ ಪತ್ರ Vol 126-1, PP. 15-16. ದೇಸಾಯಿ ಎಂ. ಎ. ಪು. ೫೬

*೧೦ Danvers : ***The Portuguese in India*** Vol II, PP. 372, 377-43

*೧೧ ಸ್ವಾದಿ - ಅರಸು ಮನೆತನ, ಪು. ೪೭-೪೯.

*೧೨ ಅದೇ ಗ್ರಂಥ, ಪು. ೪೮

*೧೩ Fryer : **East India & Persia** Vol - I. (London 1909-15); Carwar factory records Vol - I Bundle 5; Desai M. A. ಅದೇ ಗ್ರಂಥ ಪು. ೮೨.

*೧೪ S. N. Sen : **Studies in Indian History** (Delhi 1993), PP. 198 - 201, 228, 229.

ಕೆಳದಿ ಗುಂಡಾಜೋಯಿಸ್ *

# ಆನಂದರಂಗಪಿಳ್ಳೈ ತಮಿಳು ದಿನಚರಿಯಲ್ಲಿ ಕೆಳದಿ ರಾಣಿಯರ ಸಂಗತಿಗಳು

ಲಿಂಗಣ್ಣಕವಿಯು ಕೆಳದಿನೃಪವಿಜಯದ ೧೧ನೆಯದ ಆಶ್ವಾಸದಲ್ಲಿ

ಕಂ ॥ ಹರಪುರದರಸನಮಂ ಭಾ
ಸುರತರ ಸವಣೂರಪತಿ ನವಾಬ ಫೌಜಂ
ಬರಿಸಿ ಬಹು ಸೈನ್ಯ ಸಹಿತಂ
ತೆರಳಿಸಿ ವರಸಬ್ಬುನೀಸ ಕೃಷ್ಣಪ್ಪನುಮಂ ॥

*ಮ ॥ ಪದುಳಿಸಿ ಮಾಯಾಕೊಂಡದೆಡೆಯೊಳ್ ಬಹು ಸೈನ್ಯ ಸಮೇತನಾಗುತು*
*ನ್ಮದದಿನಿದಿರ್ಚಿ ಮಾರ್ಮಲೆತು... ವೊಳಪೊಕ್ಕು-ಪೊರ್ದದಾ*
*ಮದಕೆರೆನಾಯಕಾಖ್ಯನೃಪನಂ ರಣದೊಳ್ ವಶಗಯ್ದು ಶಿಕ್ಷೆಗೆ*
*ಯ್ದಿದಮರಾಳಿ ಮೆಚ್ಚಲದಟಂ ಬಸವೇಂದ್ರ ಭೂಮಿಪಂ ॥*

***ವ ॥ ಇಂತು ಮೆದಕೆರೆನಾಯಕನಂ ಜಯಿಸಿದ ಮಹೋತ್ಸವ ಕಾಲದೊಳ್ ನಿಜಸೈನ್ಯ ಸಮೇತನಾಗುತ್ತುಮೆಳ್ತಂದು ಸಂದರ್ಶನಂಗೆಯ್ದ ಹರಪುರದರಸನಂ ಸನ್ಮಾನಿಸಿ ಗಜಾಶ್ವ ವಸ್ತ್ರಾಭರಣಾದಿಗಳನಿತ್ತು ಬಹು ಸಂತೋಷಂಬಡಿಸಿ ಕಳುಪಿ ರಾಜ್ಯಂಗೆಯ್ಯುತ್ತುಮಿರಲೊಂದವರಸರದೊಳ್-***

ಈ ಉಲ್ಲೇಖದಂತೆ ಇಮ್ಮಡಿ ಬಸಪ್ಪನಾಯಕನು (ಕ್ರಿ.ಶ. ೧೭೩೯-೧೭೬೫) ಹರಪುರದ ಅರಸ ಹಾಗೂ ಸವಣೂರು ನವಾಬನ ಸೈನ್ಯವನ್ನೂ ಬರಮಾಡಿಕೊಂಡು ಸಬನೀಸ ಕೃಷ್ಣಪ್ಪನನ್ನು ಹೆಚ್ಚಿನ ಸೇನೆಯೊಂದಿಗೆ ಕಳುಹಿಸಿ "ಮಾಯಕೊಂಡ" *೧ ಎಂಬಲ್ಲಿ ಅತ್ಯಧಿಕ ಸೈನ್ಯ ಹಾಗೂ ಗರ್ವದಿಂದ ಮದೋನ್ಮತ್ತನಾಗಿ ಎದುರಾಗಿ ನುಗ್ಗಿ ಬರುತ್ತಿದ್ದ ಚಿತ್ರದುರ್ಗದ ಮದೆಕೆರೆನಾಯಕನನ್ನು ಯುದ್ಧದಲ್ಲಿ ಸೆರೆಹಿಡಿದು ಶಿಕ್ಷಿಸಿದ ಸಂಗತಿಗಳಿವೆ. ಈ ವಿಜಯ ಮಹೋತ್ಸವ ಸಂದರ್ಭದಲ್ಲಿ ಸೈನ್ಯ ಸಹಿತ ಕೆಳದಿ ಅರಸನನ್ನು ಸಂದರ್ಶಿಸಲು ಬಂದ ಹರಪುರದ ರಾಜನನ್ನು ಸನ್ಮಾನಿಸಿ ಅವನಿಗೆ ಆನೆ, ಕುದುರೆ, ವಸ್ತ್ರಾಭರಣಾದಿಗಳನ್ನಿತ್ತು ಕೆಳದಿ ದೊರೆಯು ಬಹು ಸಂತೋಷ ಪಡಿಸಿ ಕಳುಹಿಸಿದನು.

'ಮಾಯಕೊಂಡ' ಕದನವನ್ನು ಕುರಿತ ಹಲವು ಆಕರಗಳು ಮತ್ತು ಮದರಾಸಿನ ಚಂದಾಸಾಹೇಬನನ್ನು ಕುರಿತು ಸಂಗತಿಗಳು ಬರ್ಹಾನ್ಸ್‌ನ ತುರ್ಖಾಕಿ ವಾಲಾಜಾಹಿ, ಚಿತ್ರದುರ್ಗದ ಪಾಳೆಯಗಾರರು (ಎಂ. ಎಸ್. ಪುಟ್ಟಣ್ಣ ಚಿತ್ರದುರ್ಗದ ವಂಶಾವಳಿ)*೨ ಎಚ್. ಡಾಡ್‌ವೆಲ್ ಸಂಪಾದಿತ ಆನಂದರಂಗ ಪಿಳ್ಳೈಯ ತಮಿಳು ದಿನಚರಿ, ಪುರಾತತ್ತ್ವ ವರದಿ ಹಾಗೂ ಇತರೆಡೆ ಡಚ್, ಇಂಗ್ಲಿಷ್, ಸಾಮಗ್ರಿಗಳಲ್ಲಿ ಲಭಿಸುತ್ತವೆ. ಕ್ರಿ. ಶ. ೧೭೪೮ರಲ್ಲಿ ಜರುಗಿದ 'ಮಾಯಕೊಂಡ' ಯುದ್ಧದಲ್ಲಿ ಕರ್ನಾಟಕವನ್ನು ಆಕ್ರಮಿಸಲು ಪ್ರವೇಶಿಸಿದ ಮದರಾಸಿನ ಚಂದಾಸಾಹೇಬನ ಸಹಾಯವನ್ನೂ ಚಿತ್ರದುರ್ಗದವರು ಪಡೆದುಕೊಂಡುದು ವ್ಯಕ್ತಪಡುತ್ತದೆ. ಈ ಕದನದಲ್ಲಿ ಚಂದಾಸಾಹೇಬನ ಹಿರೇಮಗ ಅಬಿದ್ ಸಾಹೇಬನೂ ಹತನಾದನು. ಇದು ಕೆ.ನೃ.ವಿ. ಪ್ರಕಾರ ವಿಭವ ಸಂ ॥ ದ ಫಾಲ್ಗುಣದಲ್ಲಿ (೧೭೪೯)ರಲ್ಲಿ ಜರುಗಿತು. ಈ ವಿಜಯದ ಸಂಕೇತವಾಗಿ ಕೆಳದಿ ದೊರೆಯು ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಿಗೆ ೧೮-೨-೧೭೪೯ರಂದು ಬೆಳ್ಳಿಯ ತಟ್ಟೆಯೊಂದನ್ನು ಕಾಣಿಕೆ ಅರ್ಪಿಸಿದುದು ಈಗಲೂ ಇದೆ. *೩ ೧೭೪೯ನೇ ಮೇನಲ್ಲಿ ಮದಕೆರೆ ನಾಯಕನ ಮಗ ಕಸ್ತೂರಿ ರಂಗಪ್ಪನಾಯಕನು ಮೋತಿಖಾನ್ ಹಾಗೂ ಮುಜಫರ್ ಜಂಗ್‌ನೊಂದಿಗೆ ಸಂತೆಬೆನ್ನೂರನ್ನು ಆಕ್ರಮಿಸಲು ಅವನನ್ನು ಪಲಾಯನಂಗೈಸಿದನು *೪.

ಮದರಾಸಿನ ಚಂದಾಸಾಹೇಬನ ಕುರಿತು ವಿಪುಲವಾದ ಮೋಡಿ ಲಿಪಿಯ ದಾಖಲೆಗಳು ಪಾಂಡಿಚೆರಿಯ ಪತ್ರಾಗಾರ ಇಲಾಖೆಯಲ್ಲಿ ನನ್ನ ಸಂಶೋಧನೆಯಲ್ಲಿ ಕಂಡುಬಂದಿವೆ. ಮದರಾಸಿನ ಆರ್ಕಾಟ್ ನವಾಬರ ಈಗಿನ ಪುರಾತನ ಮನೆಯಲ್ಲಿಯೂ ಪುರಾತನ ಸಾಮಗ್ರಿಗಳಿದ್ದು ಅವುಗಳ ಸಮೀಕ್ಷಾ ಸಂಶೋಧನೆ ಅಗತ್ಯ. *೫ ಆಂಗ್ಲೇಯ ಸರಕಾರದ ಕಾಲದಲ್ಲಿದ್ದ ಡಚ್ ಚಾರಿತ್ರಿಕ ದಾಖಲೆಯೊಂದು ಕೆಳದಿ ದೊರೆ ಇಮ್ಮಡಿ ವೆಂಕಟಪ್ಪನಾಯಕನ ಕಾಲದಲ್ಲಿ (೧೬೬೦-೬೧) ಸಿಲೋನ್‌ನಲ್ಲಿ ಕೊಲಂಬೊದಿಂದ ಮೆಣಸಿನಕಾಳು ವಾಣಿಜ್ಯೋದ್ಯಮ

---

* ಕೆಳದಿ ಮ್ಯೂಸಿಯಂ, ಕೆಳದಿ, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

ವ್ಯವಹಾರಗಳ ಕುರಿತು ಪತ್ರ ವ್ಯವಹಾರವೊಂದು ಗಮನಾರ್ಹವಾಗಿದ್ದು, ದಿ. ೩.೧.೧೬೬೧ರಂದು ಡಚ್ ವೈಸ್‌ರಾಯಿ ಮೆಟ್ಸುಕ್ಯಾರ್‌ನು (Matsyukyar) ಅಮೋಘ ಉಡುಗೊರೆಯೊಂದಿಗೆ ಲೀನ್‌ಡೆರ್ತ್ಜ್ (Leendert Leendertz) ವರ್ತಕನ ಸಂಗಡ ಕಳಿಸಿದ ನಿರೂಪ ಈ ರೀತಿಯಿದೆ:

" I have received the letter from your Excellency and am glad to note that you have ordered Mr Ryklof Van Goens to come to these districts to fulfil the contract closed with Leendertz, but so far he has not been able to carry out his war plan but he promises to do so afterwards. However the two elephants which your excellency sent me as present were not necessary considering the good friendship and unanimity that exists between us. However since your Excellency sends them so cordially I have accepted them with pleasure. I am sending herewith a small counter presents "

Dt.: 3-1-1661 Sd/- Venkatappa Nayaka *೬

**ಆನಂದರಂಗಪಿಳ್ಳೆಯ ತಮಿಳು ದಿನಚರಿ**

೧೯೨೨ರಲ್ಲಿ ಮದರಾಸ್ ಸರಕಾರದ ಪತ್ರಾಗಾರ ಇಲಾಖೆ ಮುಖ್ಯಾಧಿಕಾರಿ ಎಚ್. ಡಾಡ್‌ವೆಲ್‌ರವರು ಸಂಪಾದಿಸಿದ ಆನಂದರಂಗಪಿಳ್ಳೆಯ ತಮಿಳು ದಿನಚರಿಯು ದಕ್ಷಿಣ ಭಾರತದ ಇತಿಹಾಸಕ್ಕೆ ವಿಪುಲವಾಗಿ ಆಕರಗಳನ್ನು ನೀಡುತ್ತದೆ. ಈ ದಿನಚರಿಯ ಬೃಹತ್ ಸಂಪುಟಗಳಲ್ಲಿ ಕರ್ನಾಟಕ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಇಂಗ್ಲಿಷ್, ಫ್ರೆಂಚ್, ಡಚ್ ಆಕರಗಳೂ ಒಳಗೊಂಡಿವೆ. ವಿಶೇಷವಾಗಿ ಕೆಳದಿ ಇತಿಹಾಸಕ್ಕೆ ತಮಿಳುನಾಡು, ಕೇರಳ, ಮಹಾರಾಷ್ಟ್ರಗಳೊಂದಿಗೆ ಹಿಂದಿ, ಇಂಗ್ಲಿಷ್, ಫ್ರೆಂಚ್, ಡಚ್, ಪರ್ಷಿಯನ್ ಭಾಷೆಗಳಲ್ಲಿರುವ ಆಕರಗಳೂ ಕೃತಿಗಳ ಪೂರ್ಣ ಅವಲೋಕನಕ್ಕೆ ತೀರ ಅಗತ್ಯ. ತಮಿಳು ದಿನಚರಿಯಲ್ಲಿ ಉಲ್ಲೇಖಿಸಿದ ಚಂದಾಸಾಹೇಬನ ಆದಿಯಾಗಿ ಕೆಳದಿ ರಾಣಿಯರ ಸಂಗತಿಗಳು ಗಮನಾರ್ಹವಾಗಿದ್ದು VI ಮತ್ತು VIIನೇ ಸಂಪುಟದಲ್ಲಿನ ಪ್ರಕೃತ ದಿನಚರಿಯ VIII ನೆಯ ಸಂಪುಟದಲ್ಲಿ ಕಂಡುಬರುವ ಕೆಳದಿ ಇತಿಹಾಸದ ಅಂಶಗಳನ್ನು ಮಾತ್ರ ನಿರೂಪಿಸಲು ಪ್ರಯತ್ನಿಸಲಾಗಿದೆ. (ಅನುಬಂಧ ನೋಡಿ)

ದಿನಚರಿಗಳಲ್ಲಿ ಕಂಡುಬರುವ ವ್ಯಕ್ತಿನಾಮಗಳು, ಸ್ಥಳನಾಮಗಳು ಆದಿಯಾಗಿ ತಮಿಳುನಾಡು – ಕರ್ನಾಟಕ ಹಾಗೂ ದಕ್ಷಿಣ ಭಾರತದ ಪ್ರಾಂತೀಯ ಆಡಳಿತದಲ್ಲಿ ಮಧ್ಯಕಾಲೀನ ಯುಗದ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸಗಳನ್ನು ಕುರಿತು ಆಕರಗಳನ್ನು ಉಪಯೋಗಿಸಿಕೊಳ್ಳಲು ಇಂತಹ ಸಂಪುಟಗಳು ಯೋಗ್ಯರೀತಿಗಳಲ್ಲಿ ಸಹಾಯ ಮಾಡಬಲ್ಲವು. ಕರ್ನಾಟಕ – ತಮಿಳುನಾಡು ಸಂಬಂಧ ಕುರಿತು ಇತಿಹಾಸ ಕೃತಿಗಳು, ಮೂಲ ಆಕರಗಳ ಕೊರತೆಯಿಂದ ಜಡವಾಗಿವೆಯೆಂದೇ ಹೇಳಬಹುದು. ಪ್ರಜಾವಾಣಿಯ ವರದಿಯೊಂದರಲ್ಲಿ ಕಂಡುಬಂದಂತೆ, ಈ ಕುರಿತ ಅಪಾರ ದಾಖಲೆಗಳನ್ನು ತಮಿಳು ನಾಡಿನಲ್ಲಿ ಅಧಿಕಾರ ವರ್ಗವು ಸುಟ್ಟು ಹಾಕಿರುವುದು ಇತಿಹಾಸಕ್ಕೆ ನಷ್ಟವೆ. ಇಂತಹುದರಲ್ಲಿ ಮೂಲ ತಮಿಳಿನಲ್ಲಿದ್ದ ಆನಂದರಂಗಪಿಳ್ಳೆಯ ದಿನಚರಿಗಳನ್ನು ಡಾಡ್‌ವೆಲ್‌ರವರು ಪರಿಷ್ಕರಿಸಿ ವಿದ್ವಾಂಸರಿಗೆ ಮಹೋಪಕಾರ ಮಾಡಿದ್ದಾರೆ. ಈ ದಿಸೆಯಲ್ಲಿ ಆಗಬೇಕಾದ ಸಂಶೋಧನೆಗಳು ಅಪಾರವಾಗಿವೆ. ಅಳಿದುಳಿದ ಅಡ್ಯಾರ್ ಗ್ರಂಥಾಲಯದ ಸಾಮಗ್ರಿಗಳು, ಡಚ್, ಇಂಗ್ಲೀಷ್ ಮತ್ತು ಫ್ರೆಂಚ್ ದಾಖಲೆಗಳು, ಪಾಂಡಿಚೆರಿ ಪತ್ರಾಗಾರದಲ್ಲಿರುವ ಅಮೂಲ್ಯ ಸಂಗ್ರಹಗಳು ಪ್ರಾಮಾಣಿಕ ವಿದ್ವಾಂಸರ ಆಗಮನವನ್ನು ನಿರೀಕ್ಷಿಸುತ್ತಿವೆ. ಆನಂದರಂಗಪಿಳ್ಳೆಯು ಕೆಳದಿ ಲಿಂಗಣ್ಣ ಕವಿಯಂತೆಯೇ *೭ ಸಂಗ್ರಹಿಸಿದ ಐತಿಹಾಸಿಕ ಸಂಗತಿಗಳು ಕುತೂಹಲಕರಗಳಾಗಿವೆ. ಕೆಳದಿ ಇತಿಹಾಸವನ್ನು ಕುರಿತು ದಿ. ೯–೧೧–೧೭೫೧, ೩೧–೮–೧೭೫೨ರಲ್ಲಿನ ಬಿದನೂರಿನ ಹರಕಾರ, ವಕೀಲರ ಇನಾಯತ್ ನಾಮಗಳು, *೮ ತಾಡಪತ್ರಿ, ದುಪ್ಪಟ್ಟಿ, ಪಲಂಕಿನ್ ಬಾಲಕ ಮುಂತಾದ ಸಾಮಾಜಿಕ ನಿರೂಪಣೆಗಳು, *೯ *ಕೇರಳದ ಕಣ್ಣಾನೂರು ಕೆಳದಿ ರಾಜ್ಯಕ್ಕೆ ಸೇರಿದ್ದ* ಕುರಿತು ಮಾಹಿತಿಗಳು ಮುಂತಾದ ಸಂಗತಿಗಳು ಗಮನಾರ್ಹವಾದುವುಗಳು.

**ಉಪಸಂಹಾರ**

ತಮಿಳುನಾಡಿನಲ್ಲಿ ಕರ್ನಾಟಕ – ತಮಿಳುನಾಡು ಸಂಬಂಧದ ಇತಿಹಾಸಗಳನ್ನು ಆಧರಿಸಿ ಅಧ್ಯಯನ ಯೋಗ್ಯವನ್ನಾಗಿಸಲು ಉಪಲಬ್ಧವಿರುವ ಆಕರಗಳ ಸೂಚಿ (catalogue) ಕುರಿತು ಕಂಪ್ಯೂಟರ್ ಯುಗದಲ್ಲಿ ಎಂದಿಗಿಂತ ಹೆಚ್ಚಿನ ಸಂಶೋಧನೆ ಈಗ ಅಗತ್ಯ. ದೇಶೀಯ ಸಂಸ್ಥಾನಗಳ ಇತಿಹಾಸದಲ್ಲಂತೂ ಇದು ಕೈಬಿಡುವಂತಿಲ್ಲ. ಆನಂದರಂಗಪಿಳ್ಳೆಯು ಕೆಳದಿ ಸಂಸ್ಥಾನ ಹಾಗೂ ಈ ಅರಸರ ಸ್ಥಾನಮಾನವನ್ನು ಕುರಿತು ದಿ. ೩೧–೮–೧೭೫೨ ರ ದಿನಚರಿಯಲ್ಲಿ –

"He then said that tomorrow some one must receive the **Bednur vakil,** bring him in, and arrange a lodging for him. I observed that it was not fitting for me to go out to meet him, but that Madananda pandit or some one else might be sent. He then told Madananda pandit to go. He replied, 'Bednur is a large state and should be treated with as much respect as the **Raja of Mysore**.' So he told me to receive and bring him

in, being unwilling to oppose him, I agreed and came home.'

ಈ ಉಲ್ಲೇಖವು ಕೆಳದಿಯ ಸ್ಥಾನವು ಮೈಸೂರಿನಂತೆಯೆ ಹೆಚ್ಚಾದ ಉನ್ನತ ಪರಂಪರೆಗಳಿಂದ ಗೌರವ ಸ್ಥಾನ ಪಡೆದಿರುವುದನ್ನು ಗೌರ್‍ನರ್ ಜನರಲ್ಲನು ಇದರ ಹಿರಿಮೆಯನ್ನು ಪ್ರಸ್ತಾಪಿಸಿರುವುದನ್ನು ತೋರುತ್ತದೆ.

ಅನುಬಂಧ - ೧

**ಆನಂದರಂಗಪಿಳ್ಳೆಯ ದಿನಚರಿಗಳು**

ತಾರೀಖು ೧೮-೯-೧೭೫೧ರಲ್ಲಿಯ ವಿವರಗಳು.

*I hear that polur Muhammad Alikhan who fled to Vellore has written to the Governor that, when the English army, encamped at Arcot, marched against Timiri Fort, he sent his son, with a small force belonging to Murtaza Ali Khan of Vellore, and Govinda Rao, Hailat Khan, Sardar Khan's son, Saiyid Khan and other forces; that these drove off the English army in disorder when they attacked Timiri, with a loss of 4 or 5 Europeans and 7 or 8 sepoys killed and a few Europeans and sepoys wounded, who have taken shelter at Arcot; moreover they took an English flag and a camel laden with shot, arms etc., and declared that, if reinforcements were sent quickly, the enemy should be driven out of the Arcot Killa. The messengers were given a present of 6 rupees and a reply was written as follows: - 'You have done wisely, and I will send reinforcements, you should march with all your available troops, Murtaza Alikhan and the Killedars, mansabdars etc., and subdue the enemy'.*

*This evening a letter came from Mahe saying that, in spite of all assistance afforded to the Raja of Kolattanad the English and the **Ikkeri people** were helping his enemies who had become very powerful, so that more troops were needed,*

ದಿ. ೯-೧೧-೧೭೫೧ರ ದಿನಚರಿಯ ಸಂಗತಿಗಳು

*When I went to the Governor this morning, he ordered me to send for the four messengers who have come from the **Rani of Bednur,** and tell them to inform their mistress that the affair about which they had been sent could not be taken into consideration, but that, if she desired the friendship of the French, she must grant them certain territory, and that she should consider both the misfortunes which had befallen Nasir Jang and others by reason of their hostility towards us, and the prosperity that had attended chanda Sahib, Hidayat Muhi-ud-din Khan, salabath Jang and others owing to their friendship with us. He also ordered me to get 100 rupees from parasurama Pillai for the messengers,*

*When I informed the messengers of this they replied that our people had seized part of their country, by force, but that though they could have recovered it with ease, they had not done so, for the sake of retaining our friendship and supposing that we had acted thus by reason of matters having been misrepresented. Therefore, (they said) they had written the whole matter, in order that we might understand all things and give such orders as might be necessary; but if they were asked to give up the very purpose with which they had been sent, they could say nothing more except that, although the English had offered their help, it had been declined out of regard for our friendship. The Governor replied, 'whom have the English ever helped? They have already betrayed Anwar-ud-din -Khan, and Nasir Jang; and now they are about to treat Muhammad Ali Khan in Trichinopoly in the like manner. They are indeed clever in persuading men to trust them and under a pretence of help, they drain them of their money and abandon them in midstream. That is all they are capable of'. So saying the Governor again ordered me to give them a hundred rupees and despatch them, with his letters to the **Rani of Bednur** and the a dalavi.*

*He them asked me if he should send any presents to the Rani of Bednur. I said, 'Presents should not be sent by her harkaras, but we should send them by our own people after the harkaras have gone away; or perhaps you might desire M. Louct, the chief at Mahe, to send some. That would be best.' He agreed and told me to remind him the next time he was writing to Mahe. I said I would do so and went to my office, telling a company's peon to ask chinna Parasurama Pillai to give 100 rupees to the* ***Bednur harkaras.***

### *ದಿ ೧೧-೯-೧೭೫೨ ರ ದಿನಚರಿ ( ಅಪೂರ್ಣ ಭಾಗ )*

*Two vakils, father and son, from* ***Bednur*** *today visited the Governor by means of Madame. They gave her and the Governor the following presents from their Raja:*

*A pair of Tadpatri* ***dupattis*** *said to be worth 200 rupees; two logs of sandalwood; seasoned arecanut; altar etc.,*

*They then delivered their Raja's message and took leave. They are said to have proposed to be present daily at the darbar so long as they stayed here, to which the Governor agreed. He also promised them a daily batta of five rupees according to custom.*

### *ದಿ ೧೦-೪-೧೭೫೩ರ ದಿನಚರಿಯ ಸಂಗತಿಗಳು*

*When I went to the Governor's this morning and reported the news, he asked me if Bhaji Rao had really crossed the Kistna, and added. 'Bhaji Rao was hastening to Satara after settling the Mysore and* ***Bednur*** *affairs, as his younger brother who had marched into Guzerat, had been surrounded by the Subahdar. I have received news to this effect. He must have crossed the Kistna by now and reached Satara'. I replied that, as he had received the news by letter it must be true.*

*He then asked if plenty of grain was being brought in I replied that large quantities were coming by land and sea. After talking about other matters, I went to my office.*

ಅನುಬಂಧ - ೨

**ದಿನಚರಿಗಳಲ್ಲಿ ಕಂಡುಬರುವ ಸ್ಥಳನಾಮ, ವ್ಯಕ್ತಿನಾಮಗಳು**

I. ೧೮-೯-೧೭೫೧: ಪೋಲೂರ್ ಮುಹಮ್ಮದ್ ಆಲಿಖಾನ್, ವೆಲ್ಲೋರು, ತಿಮಿರಿ ಕೋಟೆ, ವೆಲ್ಲೋರಿನ ಮುರ್ತಜಾ ಆಲಿಖಾನ, ಗೋವಿಂದರಾವ್, ಹೈಲತ್‌ಖಾನ್, ಸರ್ದಾರ್‌ಖಾನನ ಮಗ ಸೈಯೀದ್ ಖಾನ್, ಆರ್ಕಾಟ್ ಕಿಲ್ಲೆ, ಕಿಲ್ಲೆದಾರ, ಮನಸಬ್‌ದಾರ, ಮಾಹೆ, ಕೋಲತ್ತನಾಡಿನ ರಾಜ, ಇಕ್ಕೇರಿ.

II. ೯-೧೧-೧೭೫೧ : ಬಿದನೂರಿನ ರಾಣಿ, ಫ್ರೆಂಚರು, ನಾಸಿರ್‌ಜಂಗ್, ಚಂದಾ ಸಾಹೀಬ್, ಹಿದಾಯತ್ ಮುಹಿ ಯುದ್ದೀನ್ ಖಾನ್, ಸಲಬತ್‌ಜಂಗ್, ಪರಶುರಾಮ ಪಿಳ್ಳೈ, ಕೋಲಸ್ತ್ರಿ, ತಲಚೇರಿ, ಲೋಗನ್, ಬಿದನೂರು, ಅನ್ವರುದ್ದೀನ್‌ಖಾನ್, ನಾಸಿರ್‌ಚಂಗ್, ಮುಹಮ್ಮದ್ ಆಲಿಖಾನ್, ತಿರುಚಿನಾಪಳ್ಳಿ, ಬಿದನೂರಿನ ರಾಣಿ, ದಳವಾಯಿ, ಹರಕಾರರು, ಮಾಹೆ ಅಧಿಕಾರಿ ಎಂ. ಲೋವೆಟ್, ಚಿನ್ನಪರಶು ರಾಮಪಿಳ್ಳೈ, ಬಿದನೂರು ಹರಕಾರರು.

III. ೩೧-೮-೧೭೫೨ : ಮುಹಮ್ಮದ್ ಆಲಿಖಾನ್, ತಿರುಕ್ಕಂಜಿ, ಪುರಾಣನ್‌ಕುಪ್ಪವ್, ಅರಿಯನ್‌ಕುಪ್ಪವ್, ಅಲಿಸಪಕ್ಕವ್ ವಿಲ್ಲಿಯನಲ್ಲೂರ್, ಓಡಿಯಂಪಟ್ಟು, ರಂಗಪಿಳ್ಳೈ, ಲಕ್ಷ್ಮಣ ನಾಯಕನ ಛತ್ರ, ವಾಲುಡಾವೂರು, ಕೋನಪ್ಪರಂಗಿ, ಎಂ. ಕೆರ್ಜೀನ್, ಲಕ್ಷ್ಮಣನಾಯಕನ ಛತ್ರ, ವಾಲುಡಾವೂರು, ಪಾಳೆಯಗಾರ, ಮದರಾಸ್ ರಸ್ತೆ, ಮೊಗಲ್‌ರು, ಪಲಂಕಿನ್, ಹರಕಾರರು, ಬಾದಷಹನ ಪರ್‌ವಾನಾ, ಸಲಬತ್ ಜಂಗ್, ಎಂ. ಬುಸ್ಸೀ, ಸೋಲೈತಾಂಡವನ ಛತ್ರ, ಸೆಂಟ್ ಪಾಲ್ಸ್ ಚರ್ಚು, ಮನಸಬ್ದಾರ್, ನೈನಿಯ ಪಿಳ್ಳೈ ಛತ್ರ, ಎಂ. ರೆನಾಲ್ಟ್ಸ ಕಚೇರಿ, ದಿವಾನ್ ಸಾಹೇಬ, ದೆಹಲಿ, ದಕ್ಷಿಣದ ಸುಬೇದಾರ, ಮಸುಲೀ ಪಟ್ಟಣ, ನವಾಬ್ ಗೌರ್ನರ್ ಜನರಲ್ ಮಹಾರಾಜಾ ಸಾಹೇಬ, ರಾಮದಾಸ ಪಂಡಿತ, ಬಾದಷಹನ ವೈಭವದ ಪರ್ವಾನಾ, ಮನ್ಸೂರ್ ಅಲಿಖಾನ್, ಭಾಜೀರಾವ್, ಸಲಭತ್ ಜಂಗ್, ಯುಸುಫ್ ಬಾಶಿ ಖಾನ್, ಆರ್ಕಾಟ್, ಮುಹಮ್ಮದ್ ಆಲಿಖಾನ್, ನವಾಬ್ ಸಾಹಿಬ್, ಡೂಪ್ಲೆ, ಹೇಮಂತ್ ಡೂಪ್ಲೆ, ಫರ್ಮಾನ್, ಘಾಜಿಯುದ್ದೀನ್, ನವಾಬ್ ಗೌರ್ನರ್ ಜನರಲ್ ಸಬತ್ ಜಂಗ್ ಸಾಹಿಬ್ ಅವರ್ಗಳ್, ಸಯಿದ್ ಲಷ್ಕರ್‌ಖಾನ್, ಇನಾಯತ್ ನಾಮಾ, ನವಾಬ್ ಜನರಲ್ ಸಾಹಿಬ್ ಅವರ್ಗಳ್, ಬಾದಷಹನ ಪರ್ವಾನಾ, ಬಾಶಿ, ತಹಮಾಸ್ಪ್‌ಕ್ಯೂಲಿಖಾನ್, ಮಹಮ್ಮದ್ ಶಾ, ಚೋಬ್‌ದಾರ್, ಎಂ. ಡಿಲಾರ್ಚ್, ಮದಾನಂದ ಪಂಡಿತ್, ಸಯಿದ್ ಮಹಮ್ಮದ್, ಪರ್ಷಿಯನ್ ಮುಲ್ಲಾ, ಮೊಗಲ್ ಹರಕಾರರು, ತಿರುಕ್ಕಂಜಿ, ತುರ್ರಾ, ಸರ್‌ಪೇಚ್, ಬಿದನೂರು ವಕೀಲ, ಮೈಸೂರು ರಾಜ.

IV. ೧೧-೯-೧೭೫೨ : ಪುಟ ೨೦೮- ರಾಜಾ ಸಾಹೇಬ*೧೦, ಫಾತಿ ಆಲಿಖಾನ್, ಪಾಪಯ್ಯಪಿಳ್ಳೆ, ಅಮಲ್ದಾರ, ಬಾದಷಹನ ಪರ್ವಾನಾ, ಎಂ. ಡಿಲಾರ್ಚ್, ಎಂ. ಡು. ಬಾನ್‌ಸೆಟ್, ಬಿದನೂರಿನ ವಕೀಲರು, ತಾಡಪತ್ರಿ, ದುಪ್ಪಟ್ಟಿ, ಪಲಂಕಿನ್ ಬಾಲಕ, ದೋಸ್ತ್ ಮಹಮ್ಮದ್, ಮಹಮ್ಮದ್ ಆಲಿಖಾನ್, ಯುರೋಪಿಯನ್ ಜೆಂಟಲ್‌ಮನ್, ಮಹಮ್ಮದ್ ಆಲಿಖಾನ್, ಫೋರ್ಟ್ ಸೆಂಟ್ ಡೇವಿಡ್.

V. ೧೨-೯-೧೭೫೨ : (ಪುಟ ಸಮರ್ಪಕವಿಲ್ಲ) ಮಹಮ್ಮದ್ ಆಲಿಖಾನ್

Vi. ೧೦-೪-೧೭೫೩ - ಭಾಜಿರಾವ್, ಕಿಸ್ನಾ, ಸಾತಾರಾ, ಮೈಸೂರು, ಬಿದನೂರು, ಗುಜರಾತ್, ಸುಬೇದಾರ

( ಈ ಸಂಶೋಧನೆಯಲ್ಲಿ ನೆರವಾದ ಜಪಾನಿನ ಡಾ॥ ಹಿರೋಸಾಕ, ಮದರಾಸಿನ ಡಾ॥ ಸ್ಯಾಮುಯೆಲ್, ಡಾ॥ ಗೋಪಾಲ ಕೃಷ್ಣ, ಪಾಂಡಿಚೆರಿ ಪತ್ರ ಲೇಖಾಧಿಕಾರಿ ಡಾ॥ ಹರನಾಥ್ ಬಾಬು, ರಾಜ್ಯ ಪತ್ರ ಲೇಖಾಧಿಕಾರಿ ಶ್ರೀ ಸಿ. ದೇವರಾಜ್, ಪಾಂಡಿಚೆರಿಯಲ್ಲಿದ್ದ ಶ್ರೀ ನಾಗರಾಜ್, ಬಿ.ಇ., ಇಂಜಿನೀಯರ್, ಎಲ್ ಅಂಡ್ ಟಿ ಇವರುಗಳಿಗೆ ನನ್ನ ಕೃತಜ್ಞತೆಗಳು. )

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ 'ಮಾಯ ಕೊಂಡ' - ಚಿತ್ರದುರ್ಗದಿಂದ ಪಶ್ಚಿಮದಲ್ಲಿ ೨೦ ಮೈಲಿ ದೂರದಲ್ಲಿರುವ ಒಂದು ಹಳ್ಳಿ
ಈ ಯುದ್ಧವು ೨೪-೩-೧೭೪೮ರಲ್ಲಿ ಜರುಗಿತು. (ಕುಂಬಾ ಸದಾಶಿವಪ್ಪ : ಹರಪನಹಳ್ಳಿ ಪಾಳೆಯಗಾರರು, ಪು. ೨೯, ಕ.ಸಾ.ಪ, ೧೯೯೬

*೨ ೧೧ನೇ ಅಧ್ಯಾಯದಲ್ಲಿ ಮಾಯಕೊಂಡದ ಘನಚಕ್ರ ಲಡಾಯಿ ಶಖ ೧೬೩೦ರ ವಿವರಣೆಯ ಈ ಅಪ್ರಕಟಿತ ಕೃತಿಯನ್ನು ಚಿತ್ರದುರ್ಗದ ಶ್ರೀ ಎಚ್. ಶ್ರೀಶೈಲಾರಾಧ್ಯರು, ಒದಗಿಸಿದ್ದಕ್ಕಾಗಿ ಅವರಿಗೆ ಕೃತಜ್ಞತೆಗಳು.

*೩ ಮೈಸೂರು ಪುರಾತತ್ವ ವರದಿ ೧೯೪೪ ಮತ್ತು ಕೆಳದಿ ಶಾಸನ ಸಂಪುಟ

*೪ Burhans Tuzak-i-Waljahi, pp. 136-37

*೫ ಕರ್ನಾಟಕ ಇತಿಹಾಸದ ಬೃಹತ್ ಸಂಪುಟಗಳ ಅಪಾರ ದಾಖಲೆಗಳನ್ನು ತಮಿಳು ನಾಡು ಸರಕಾರ ಸುಟ್ಟು ಹಾಕಿರುವುದಾಗಿ ಪ್ರಜಾವಾಣಿ ಪತ್ರಿಕೆ ವರದಿಮಾಡಿದೆ: ದಿ. ೧೯-೧೨-೧೯೭೪, ಪು. ೪, ಕಾಲಂ - ೧.

*೬ Batavia Dag Register : Extracts in the journal of the Bombay Historical Society 1929; vol II, PP. 248-249. ಮೂಲ ಪ್ರತಿಯ ಜರಾಕ್ಸ್ ಪ್ರತಿಯನ್ನು ಕೆಳದಿ ಸಂಶೋಧನಾಲಯದಲ್ಲಿ ಪ್ರದರ್ಶಿಸುವ ಪ್ರಯತ್ನ ಸಾಗಿದೆ.

*೭ ಶಿವತತ್ವರತ್ನಾಕರದಲ್ಲಿಲ್ಲದ 'ಮಾಯಕೊಂಡ' ಕದನದ ಇತಿಹಾಸವನ್ನು ಕಲೆಹಾಕಿದ ಲಿಂಗಣ್ಣನ ಸಂಶೋಧನೆಯೂ ಗಮನಾರ್ಹ.

*೮ ಇನಾಯತ್ ನಾಮ > ಶಿಫಾರಸು ಪತ್ರ ಅಥವಾ ಮುಖ್ಯಾಧಿಕಾರಿಗಳ ಲಿಖಿತ ಆದೇಶಗಳು.

*೯ ಅನುಬಂಧ ನೋಡಿರಿ.

*೧೦ Son of Chanda Saheb?See QJMS, Vol XXXVI No. 1, July 1945, Page 50. (Mysore Navy in the 15th Century)

ಡಾ॥ ವೆಂಕಟೇಶ ಜೋಯಿಸ್ ಮತ್ತು ಕೆಳದಿಗುಂಡಾ ಜೋಯಿಸ್*

# ಕೆಳದಿ ಇತಿಹಾಸದಲ್ಲಿ ಧರ್ಮಪರಿವರ್ತನದ ವಿಷಯಗಳು ಮತ್ತು ವರ್ತಕ ಶ್ರೇಣಿಯಲ್ಲಿ ಮಿಡಜಿ ಬಾಳೇರಿ ಮನೆತನ

ಕ್ರಿ.ಶ. ೧೫೬೦ರಲ್ಲಿ ಗೋವಾದಲ್ಲಿ ಪೋರ್ಚುಗೀಸರು ಹಾವಳಿಯನ್ನೆಸಗಿ ಬಲಾತ್ಕಾರದ ಧರ್ಮ ಪರಿವರ್ತನ ಹಾಗೂ ಮತಾಂತರಗಳಿಂದ ಹಿಂದೂ ದೇವ ದೇವತೆಗಳು ಹಾಗೂ ಸಾರಸ್ವತರು ಧಾರ್ಮಿಕ ವಿಪ್ಲವಗಳಿಂದ ಕಂಗೆಡುವಂತಾಯಿತು. ಪೋರ್ಚುಗೀಸರು ಗೋವೆಯಲ್ಲಿ ನಡೆಸಿದ ಭಯಂಕರ ರಾಕ್ಷಸೀ ಹಾವಳಿಯನ್ನು ಕುರಿತು ದಿ॥ ಮಂಚೇಶ್ವರ ಗೋವಿಂದ ಪೈರವರು ಕ್ರೈಸ್ತ ಗ್ರಂಥಗಳನ್ನು ಆಧರಿಸಿ ಈ ರೀತಿ ಉಲ್ಲೇಖಿಸಿದ್ದಾರೆ:

In the year 1560 AC The Jesuits proceeded to evangelize in the province of Salsette*೧ which became thense foreward the chief field of their labours, the village of cortalim being the first to witness the celebration of mass by them. The conversion of the inhabitants of this province was indeed very rapid, hundreds and thousands of them being baptized almost every year. Owing to this several churches were erected on the ruins of Hindu temples, 280 of which are said to have been razed to the ground in 1567.

Also the ruins of 200 idol temples which Viceroy de Noronha totally demolished that no memory might remain of monuments of such gross idolatry.

There were also jews who had their own synagogues and their own mode of worship but the Hindus were not allowed the public exercise of their religion*೨

ಇಲ್ಲಿ ಹೇಳಿದ Salsette ಗೋವೆಯಲ್ಲಿರುವ ಸಾಸಷ್ಟಿ ಪ್ರಾಂತ. ಪೋರ್ಚುಗೀಸರ ಮುನ್ನ ಹಿಂದೂಗಳಿಗೆ ಸೇರಿದ್ದ ಈ ಪ್ರಾಂತ್ಯದಲ್ಲಿ ಕುಲದೇವತೆಗಳ ದೇವಾಲಯಗಳು ವಿಪುಲವಾಗಿದ್ದುವು. ಅದಕ್ಕೆ ಬದಲಾಗಿ ಈಗ ಅಲ್ಲಿ ಇಗರ್ಜಿಗಳು ನೆಲೆಗೊಂಡಿವೆ. *೩ ಇಂತಹ ವಿಪ್ಲವ ಕಾಲದಲ್ಲಿ ಗೋವೆಯನ್ನು ಈ ಕೆಳಗಿನ ವೈಸ್‌ರಾಯಿಗಳು ಆಳುತ್ತಿದ್ದುದು ವ್ಯಕ್ತಪಡುತ್ತದೆ. *೪

೧. ಡೊಂ ಕಾಂಸ್ಟಾಂಟಿಂಗ್ ಡಿ ಬ್ರಗಾಂಜಾ ಕ್ರಿ.ಶ. ೧೫೫೮-೧೫೬೧ (Dom Constanting De Braganza)
೨. ಡೊಂ ಫ್ರಾನ್ಸಿಸ್ಕೊ ಕಂಟಿನ್ಹೋ ಕೊಂಡೆ ಡಿ ರೆಡಂಡೋ (Dom Fransisco Continho conde de Redond) ಕ್ರಿ. ಶ. ೧೫೬೧-೧೫೬೪
೩. ಡೊಂ ಆಂಟೋನಿಯೋ ಡಿ ನರೋನ್ಹಾ (Dom Antonio De Naronha) ಕ್ರಿ. ಶ. ೧೫೬೪-೧೫೬೮

**ಸಾರಸ್ವತ ಬ್ರಾಹ್ಮಣರಿಗೆ ಕೆಳದಿ ಅರಸರ ಆಶ್ರಯ**

ಶಿವ-ಶಕ್ತಿಯರ ಉಪಾಸಕರಾದ ಮೂಲ ಗೋವಾ ದಾಕ್ಷಿಣಾತ್ಯ ಸಾರಸ್ವತರಲ್ಲಿ ಸಾರಸ್ವತ ವೈಷ್ಣವ, ಗೌಡ ಸಾರಸ್ವತ ಸ್ಮಾರ್ತ ಮತ್ತು ಚಿತ್ತಾಪುರ ಸಾರಸ್ವತರು ಎಂಬ ವಿಭಾಗಗಳಿವೆ. ಆದರೆ ಸಾಂಸ್ಕೃತಿಕವಾಗಿ ಯಾವ ಭೇದವೂ ಇಲ್ಲದಿರುವುದರಿಂದ ಇವರೆಲ್ಲ ಗೌಡ ಸಾರಸ್ವತ ಬ್ರಾಹ್ಮಣರೇ ಆಗಿದ್ದಾರೆ. ಕನ್ನಡಿಗರಿಗೆ ಕೊಂಕಣಿಗರೆಂದು ಪರಿಚಿತರಾಗಿದ್ದಾರಷ್ಟೆ. ವಿಜಯನಗರದ ಅರಸರ ಕಾಲದಲ್ಲಿ ಕರಾವಳಿಯ ಮಂಗಳೂರು ಬಾರ್ಕೂರುಗಳಿಗೆ ಅಧಿಪತಿಯಾಗಿದ್ದ ಸದಾಶಿವನಾಯಕನ ತರುವಾಯ ಆಳಿದ ಅರಸರಲ್ಲಿ ಚಿಕ್ಕಸಂಕಣ್ಣನಾಯಕನ ಕಾಲದಲ್ಲಿ ಕ್ರಿ.ಶ. ೧೫೬೫ರ ರಕ್ಕಸಗಿ-ತಂಗಡಗಿ ಘೋರ ಯುದ್ಧದ ಪರಿಣಾಮವಾಗಿ ವಿಜಯನಗರಕ್ಕಾದ ಆಘಾತದಿಂದ ಕೆಳದಿಯು ಸ್ವಾತಂತ್ರ್ಯವನ್ನು ಪಡೆಯಿತು. ಸರಿಸುಮಾರಾಗಿ ಪಡುಗಡಲ ಪ್ರಾಂತ್ಯಗಳ ಅಧಿಪತಿಗಳಾಗಿದ್ದ ಕೆಳದಿ ಅರಸರು ಗೋವಾಪ್ರಾಂತ್ಯಗಳಿಂದ ವಲಸೆ ಬಂದ ಆಗಂತುಕರಿಗೆ

---

* ಕೆಳದಿ ಮ್ಯೂಸಿಯಮ್, ಕೆಳದಿ, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

ಆಶ್ರಯ ನೀಡಿ ಹೊನ್ನಾವರ, ಭಟಕಳ, ಬಸರೂರು, ಬಾರಕೂರು, ಬ್ರಹ್ಮಾವರ, ಮೂಲ್ಕಿ, ಮಂಗಳೂರು, ಉಲ್ಲಾಳ ಮುಂತಾದ ಊರುಗಳಲ್ಲಿ ನೆಲಸಲು ಅನುವು ಮಾಡಿಕೊಟ್ಟರು. ಈ ಮೊದಲು ವೈದಿಕ ಕರ್ಮಕಾಂಡ, ಪೌರೋಹಿತ್ಯಗಳಿಗೆ ಹೆಚ್ಚಿನ ಗಮನವಿತ್ತಿದ್ದ ಈ ಜನ ಜೀವನಾಧಾರಕ್ಕಾಗಿ ವಿವಿಧ ವೃತ್ತಿಗಳನ್ನು ಅರಸತೊಡಗಿದರು. ಕೆಳದಿ ಅರಸರು ಅರಮನೆಯ ಉಸ್ತುವಾರಿ, ಲೆಕ್ಕಪತ್ರಗಳ ದಾಖಲೆ, ಊರ ಆಡಳಿತ, ವಾಣಿಜ್ಯೋದ್ಯಮ ವ್ಯವಹಾರಗಳು, ಹಲವು ದ್ವಿಭಾಷಿಗಳಿಗೆ ವಿದೇಶೀಯರೊಂದಿಗೆ ಒಡಂಬಡಿಕೆಗಳನ್ನು ಏರ್ಪಡಿಸುವುದು ಮುಂತಾದ ಹುದ್ದೆಗಳು ಇವರಿಗೆ ಗೊತ್ತುಮಾಡಿ ನೇಮಿಸಿಕೊಂಡರು. ಕ್ರಿ.ಶ. ೧೫೮೬-೧೬೨೯ರಲ್ಲಿ ಕೆಳದಿಯನ್ನಾಳಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ವಿಠ್ಠಲ ಶೆಣ್ಯೆ, ವಿದೇಶೀಯ ವ್ಯವಹಾರದ ಅಧಿಕಾರಿಯಾಗಿ ನಿಯಮಿಸಲ್ಪಟ್ಟಿದ್ದನು. ಈತನು ಪೋರ್ಚುಗೀಸ್ ಭಾಷೆಯನ್ನು ಅರಿತಿದ್ದು, ಕೆಳದಿ ರಾಜಧಾನಿಗೆ ಕ್ರಿ.ಶ. ೧೬೨೩ರಲ್ಲಿ ಆಗಮಿಸಿದ್ದ ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲವಲ್ಲೆಗೆ ಈ ರಾಜ್ಯದ ಪರಿಚಯ ಮಾಡಿಕೊಟ್ಟಿದ್ದನು. ಇಟಲಿ ಪ್ರವಾಸಿಯು ಸ್ವದೇಶಕ್ಕೆ ಮರಳುವಾಗ ವಿಠ್ಠಲ ಶೆಣ್ಯೆ ನೀಡಿದ್ದ ಕನ್ನಡ ಓಲೆಗರಿ ಹಸ್ತ ಪ್ರತಿಯೊಂದು ಇಟಲಿಯಲ್ಲಿದೆ. *೫ ಸುಮಾರು ಕುಳಾವಿ ಪಂಗಡಗಳಲ್ಲಿ ಕೆಳದಿ ಅರಸರ ಆಶ್ರಯದಲ್ಲಿ ವಾಣಿಜ್ಯೋದ್ಯಮ ವ್ಯವಹಾರದಲ್ಲಿ ಮಿರ್ಜಾನ್ ಕೋಟೆಯಲ್ಲಿ ವರ್ತಕರಾಗಿದ್ದ ಕೋಡಕಣಿ ಬಾಳೇರಿ ಮನೆತನವೂ ಒಂದಾಗಿದೆ. ಕೆಳದಿ ಅರಸರ ಕಾಲದಲ್ಲಿದ್ದ ಸಾರಸ್ವತ ಅಧಿಕಾರಿಗಳ ಹಾಗೂ ಕುಳಾವಿ ಕುಟುಂಬ ಪಂಗಡಗಳ ಕುರಿತು ಅನುಬಂಧದಲ್ಲಿ ನೀಡಲಾಗಿದೆ.

### ಮಿಡಜಿ ಬಾಳೇರಿ ಮನೆತನ

ಗೋವೆಯಿಂದ ವಲಸೆ ಬಂದ ಗೌಡ ಸಾರಸ್ವತ ಬ್ರಾಹ್ಮಣರು ಪರಂಪರಾಗತವಾಗಿ ಭಕ್ತಿಯಿಂದ ಪೂಜಿಸುತ್ತಿದ್ದ ಕುಲದೇವರುಗಳನ್ನೂ ಪೋರ್ಚುಗೀಸರ ಹಾವಳಿಗೆ ಅವಕಾಶ ಕೊಡದೆ ಕಷ್ಟಪಟ್ಟು ತಮ್ಮೊಂದಿಗೆ ತಂದರು. ಆರ್ಯಾದುರ್ಗಾ, ಮಹಾಗಣಪತಿ, ಮಹಾಮಾಯಾ, ಲಕ್ಷ್ಮೀನಾರಾಯಣ *೬ ಕಾತ್ಯಾಯಿನಿ, ರವಳನಾಥ ಮುಂತಾದ ಕುಲದೇವರುಗಳೊಂದಿಗೆ ಗೋವೆಯಿಂದ ವಲಸೆ ಬಂದ ಕುಟುಂಬಗಳಲ್ಲಿ ಕೆಳದಿ ಅರಸರ ಆಶ್ರಯ ಗಳಿಸಿದ್ದವರಲ್ಲಿ ಮಿಡಜಿ ಕೋಡಕಣಿಯಲ್ಲಿ ಮಿಡಜಿ ಬಾಳೇರಿ ಮನೆತನವೂ ಒಂದಾಗಿತ್ತು. ವಿಠ್ಠಲ ಶೆಣ್ಯೆಯಿಂದ ಆರಂಭಗೊಂಡು ಸಾರಂಗದ ಶಾಂತಯ್ಯ, ಧಾರೇಶ್ವರ ಕುಟುಂಬ, ನಾರಾಯಣ ಪೈ*೭ ರಾಮಪ್ಪೈ, ಗಣೇಶ ಮಲ್ಯ, ರಾಮಚಂದ್ರಮಲ್ಯ, ಮಲ್ಲಪ್ಪ ಮಲ್ಯ, (Mallapa maloe in the Dutch Document) ಮಿರ್ಜಾನ್‌ನಲ್ಲಿರುವ ದೇವರಸ ಶೆಣ್ಯೆ, ವಿಠಲ ಮಲ್ಯ (Vitala maloe 20.4.1697) ಕೆಳದಿ ಅರಸರಲ್ಲಿ ಗೋವಾ ನಿಯೋಗಿ ದಾಮರಸ ಪ್ರಭು, ನಾರಾಯಣ ಪ್ರಭು, ಹರಿಕಮ್ಮಿ (ಹರಿ ಕಾಮತ್) ಮುಂತಾದವರು ಅನೇಕ ಹುದ್ದೆಗಳಲ್ಲಿದ್ದರು. ಇವಲ್ಲದೆ ಕೆಳದಿ ಅರಸರ ಅಧೀನದಲ್ಲಿ ವಾಣಿಜ್ಯೋದ್ಯಮಕ್ಕೆ ಸಂಬಂಧಪಟ್ಟಂತೆ ಪ್ರತಿಷ್ಠಿತ ವರ್ತಕ ಶ್ರೇಣಿಯೂ ಇದ್ದಿತು.

ಹೊನ್ನಾವರ, ಬಸವರಾಜ ದುರ್ಗ, ಮಿರ್ಜಿ ಮುಂತಾದ ಪ್ರದೇಶಗಳು, ಪರ್ಷಿಯಾ ಅರೇಬಿಯಾ ಮುಂತಾದ ಪ್ರದೇಶಗಳಿಗೆ ಅಕ್ಕಿ, ಮೆಣಸು ರಫ್ತು ಹಾಗೂ ಕುದುರೆಗಳನ್ನು ಆಮದು ಮಾಡಿಕೊಳ್ಳುವ ಪ್ರಸಿದ್ಧ ತಾಣಗಳಾಗಿದ್ದುವು. ಮರಾಠರು ಮಿಡಜಿ (ಮಿರ್ಜಾನ್) ಯಿಂದ ದಕ್ಷಿಣಕ್ಕಿರುವ ಎಲ್ಲಾ ಬಂದರುಗಳನ್ನು ಲೂಟಿ ಮಾಡಿದ್ದರೆಂದೂ ಗೋವೆಯಲ್ಲಿ ಸಿಕ್ಕಿದ ಕ್ರಿ.ಶ. ೧೭೫೬ನೆಯ ಇಸವಿ ಪತ್ರಗಳಿಂದ ತಿಳಿದು ಬರುವುದಾಗಿ ಡಾ॥ ವಸಂತ ಮಾಧವ ಅಭಿಪ್ರಾಯಪಟ್ಟಿದ್ದಾರೆ. *೮ ಬುಕನನ್ ಪ್ರಕಾರ ಫಲವತ್ತಾದ ಮಿರ್ಜಾನ್ ಹಾಗೂ ಬಸವರಾಜದುರ್ಗ ಪ್ರದೇಶಗಳು ಅಕ್ಕಿ ವ್ಯಾಪಾರದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದು ಕಾಲಕ್ರಮದಲ್ಲಿ ವಿನಾಶ ಹೊಂದಿದವು. ೧೬೩೧ರಲ್ಲಿ ಬಂಗಾರ ಹಾವಳಿಲಕ್ಷ್ಮಣನು ಸೆರೆಯಲ್ಲಿದ್ದಾಗ ದಾಮರಸ ಪೈ ಕೆಳದಿ ಶಿವಪ್ಪನಾಯಕನನ್ನು ಪ್ರಾರ್ಥಿಸಿ ಅವನ ಸೆರೆ ಬಿಡಿಸಿದನು. ಅಘನಾಶಿನಿಯು ಸಮುದ್ರಕ್ಕೆ ಸೇರುವ ನೆಲೆಯ ಸನಿಹದ ಮಿಡಿಜಿ (ಮಿರ್ಜಾನ್) ಬಳಿಯ ಉತ್ತರ ದಂಡೆಗಿರುವ ಕೋಡಕಣಿಯಲ್ಲಿ ಕಾಳು ಮೆಣಸು ದಾಸ್ತಾನು ಮಾಡುತ್ತಿದ್ದ ಬಣಸಾಲೆ ಹಿತ್ಲು ಎಂಬ ನೆಲೆ, ಬಣಸಾಲೆ ಅಂಗಡಿ ಹಾಗು ಮೂಲ ನಿಸಾನ್ ಈ ಪ್ರದೇಶದಲ್ಲಿದೆ. ಅಕ್ಕಿ, ಕಾಳುಮೆಣಸು ಇತ್ಯಾದಿ ಸಾಂಬಾರ ಪದಾರ್ಥಗಳು, ಈ ಕೇಂದ್ರದ ಮೂಲಕ ಹಾಗೂ ಬಸವರಾಜ ದುರ್ಗದ ಮೂಲಕ ಪರ್ಷಿಯಾ, ಅರೇಬಿಯಾ, ಮಸ್ಕತ್ ಮುಂತಾದ ವಿದೇಶಗಳಿಗೆ ಅಕ್ಕಿ ರಫ್ತು ಮಾಡುವಲ್ಲಿ ವಿಷ್ಣು ಬಾಳೇರಿ ಮನೆತನದ ಪೂರ್ವಿಕರು ಪ್ರಮುಖ ಪಾತ್ರ ವಹಿಸಿ ಆ ವರ್ತಕ ಶ್ರೇಣಿಯಲ್ಲಿದ್ದ ದೋಣಿಯ ಮೂಲಕ ಸರಬರಾಜು ಮಾಡುತ್ತಿತ್ತೆಂದು ಕಾಣುತ್ತದೆ. ನಾಗ್ವೆ ಸಂಸ್ಥಾನದ ಇತಿಹಾಸದಲ್ಲಿ ಹಾಗೂ ಸಾರಸ್ವತರ ಉಪನಾಮಗಳಲ್ಲಿ ಒಂದಾದ ಶೆಣ್ಯೆ ಪಂಗಡಗಳಲ್ಲಿ ಭಾಳೆ ಮನೆತನವೂ ಒಂದಾಗಿದ್ದು ಕಾಲಕ್ರಮೇಣ ಬಾಳೇರಿ ಎಂಬುದಾಗಿ ಕರೆಯಲ್ಪಡುತ್ತಿದೆ. *೯ ಇದಕ್ಕೆ ಪೂರಕವಾಗಿರುವಂತೆ ಹೊನ್ನಾವರದ ಶ್ರೀ ವಿಷ್ಣು ಬಾಳೇರಿ ಅವರಲ್ಲಿರುವ ಶಾಸನ ಪ್ರತಿಗಳು ಹಲವು ಮಾಹಿತಿಗಳನ್ನು ಒದಗಿಸುತ್ತವೆ.

### ಹೊನ್ನಾವರ ಶ್ರೀ ವೆಂಕಟೇಶ ದೇವಾಚಾ ತಾಮ್ರಪಟ್ಟಾ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಾಂಭವೇ ॥
ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ

*೧೫೮೫ನಯ ಶುಭಕೃತು ಸಂವತ್ಸರದ ಜೇಷ್ಠ ಶುದ್ಧ ೧೫ ರಲ್ಲು ಶ್ರಿಮತು ಹೊನ್ನಾವರದ ರಾಮಚಂದ್ರಮಲ್ಯನು ಪ್ರತಿಷ್ಠೆ ಮಾಡಿದ ಶ್ರೀ ವೆಂಕಟೇಶ ದೇವರ ದೇವತಾ ಕಟ್ಟಳೆಗ ಶ್ರೀ ದೇವೂರ ಮುರಾರಿ ಕೊಟ ಕೊಳಾಹಳ ವಿಶುಧ ವೈದಿಕ ದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಪರಾಯಣರಾದ ಕೆಳದೆ ಸಂಕಂಣನಾಯಕರ ಪ್ರಪೌತ್ರರೂ ಸಿದ್ದನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರು ಭದ್ರಪ್ಪನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ - ಪ್ರಾಕು ದ್ವಿಪುರವಾಗಿ ನಡೆದುಬರುತ್ತಿದ್ದ ಸ್ವಾಸ್ಥೆ ಚಂದಾವರದ ಸೀಮೆ ಕರಿಕೆರಗರಣತಿ ಗ್ರಾಮದಿಂದ ವಡಗೇರೆ ಸ್ಥಳದಯಾಲಿದ ಮುಡನಟ್ಟಿನಮಕ್ಕಿ ಬೀಜ ಮುಡೆ ೧೨ ಕೆ ೯೨ಲ್ಲು ಗ ೨೯ಳ ಹುಟ್ಟುವಳಿ ವಿಕಾರಿ ಸಂವತ್ಸರದಲ್ಲೂ ಬರೆಸಿದ ಪ್ರಮಾಣ ಅಕ್ಕಿ ಮುಡೆ ೩೦ ಇದಕ್ಕೆ ಬಂದ ಹಕ್ಕಲಿಗೆ ಸಹಾ. ಚತುರ್ಗಡಿ ವಿವರ - ಮೂಡಲು ಗುಡ್ಡೆ ನೀರರುಕಲ ಗಡಿ ತಂಕಲು ಗುಂಡಿ ಬೈಲಸ್ತಳದ ಗುಡ್ಡೆ ನೀರರಕಲು ಗಡಿ ಪಡವಲು ರಯಿಾಲಿ ಹಿತ್ತಲಿನ ತೊತ್ತಿನಲು ನಟ್ಟ ವಾಮನಮುದ್ರಕಲು ಬಡಗಲು ಗುಡ್ಡೆ ನೀರರಕಲು ಗಡಿ ಇಂತಿ ಚುತುರ್ಗಡಿ ಸೀಮೆಯೊಳಗಾದ ಭೂಮಿಯಲ್ಲಿ ತೆಂಗು ಅಡಕ್ಕೆ ಗದ್ದೆ ಹಕ್ಕಲು ಸಹಾ ಆಗಾಮೆ ಮಾಡಿಕೊಂಡು ಆದ ಉತ್ಪತ್ತಿಯಂನು ರಾಮಚಂದ್ರಮಲ್ಯರ ಮುಖಾಂತರ ದೇವತಾ ಕಟ್ಟಲೆ ಕಂದಾಚಾರ ಮುಂತಾದ ಧರ್ಮಕ್ಕೆ ಶಿವಾರ್ಪಿತವಾಗಿ ಬಿಟ್ಟ ಧರ್ಮಶಾಸನಾ ॥ಆದಿತ್ಯ ಚಂದ್ರಾ - - ಮತ್ತು ದಾನ ಪಾಲನ -- ಶ್ಲೋಕಗಳಿದ್ದು 'ಶ್ರೀ ಸದಾಶಿವ' ಎಂದು ವಪ್ಪಿಸಿದ ತಾಮ್ರ ಶಾಸನದ ಪ್ರತಿ ಎಂದಿದೆ.

ಕೆಳದಿ ಭದ್ರಪ್ಪ ನಾಯಕನ ಕಾಲ ಕ್ರಿ. ಶ. ೧೬೬೨-೬೪. ಈ ಶಾಸನ ೧೬೬೩ ರದಾಗಿದ್ದು, ಇದನ್ನು ಕುರಿತು ಡಾ॥ವಸಂತ ಮಾಧವರವರು ತಮ್ಮ Western Karnataka, Its Agrarian Relations 1500-1800 A. D. ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. *೧೦

**ಮಿರ್ಜಾನ್ ಕೋಟೆ**

ಕ್ರಿ. ಶ. ೧೫೩೦ ರಲ್ಲಿ ಮಿರ್ಜಾನ್ ಕೋಟೆ ಪ್ರಸಿದ್ಧ ವ್ಯಾಪಾರ ಹಾಗೂ ವಾಣಿಜ್ಯೋದ್ದಿಮೆ ಕೇಂದ್ರವಾಗಿದ್ದು ಪೋರ್ತುಗೀಸರು ಪಾಲೇಸಾಲ್ ೫೦೦ ಬೇಲ್ ಅಕ್ಕಿಯನ್ನು ಕೊಳ್ಳುತ್ತಿದ್ದರು. ಪೋರ್ತುಗೀಸ್ ಪ್ರವಾಸಿ ಡಿ ಬಾರಸ್‌ನು ವಿಜಯನಗರ ಆಧಿಪತ್ಯಕ್ಕೆ ಈ ಪ್ರದೇಶವು ಸೇರಿದ್ದೆಂದು ಹೇಳಿದ್ದಾನೆ. ೧೬೯೯ ರಲ್ಲಿ ಇದು ಫ್ರೆಂಚರಿಗೆ ವ್ಯಾಪಾರ ಕೇಂದ್ರವಾಯಿತು. ಹ್ಯಾಮಿಲ್‌ಟನ್ನನು ಮೆಣಸಿನ ಕಾಳು ಅಕ್ಕಿ ಹಾಗೂ ಇತರೆ ಪದಾರ್ಥಗಳ ರಫ್ತು ಮತ್ತು ಕುದುರೆ, ಆಯುಧಗಳ ಆಮದುಗಳ ಬಂದರು ಮಿರ್ಜಾನ್‌ನಲ್ಲಿತ್ತೆಂದು ಹೇಳಿದ್ದಾನೆ. ೧೬೭೬ರಲ್ಲಿ ಇದು ಕೆಳದಿ ರಾಣಿ ಚೆನ್ನಮ್ಮಾಜಿಯ ಆಡಳಿತಕ್ಕೊಳಪಟ್ಟಿತು. ಆ ಕಾಲದ ಮಾರುಕಟ್ಟೆ ಹಾಗೂ ದರ್ಬಾರ್ ಹಾಲಿನ ಅವಶೇಷಗಳು ಈಗಲೂ ಕಾಣಸಿಗುತ್ತವೆ. ಪುರಾತನ ಕೋಟೆಯ ಅವಶೇಷಗಳ ಬಹು ಭಾಗಗಳು ಹತ್ತು ಎಕರೆ ಪ್ರದೇಶವನ್ನಾಕ್ರಮಿಸಿಕೊಂಡು ಕೋಡಕಣಿ ಗ್ರಾಮದಲ್ಲಿವೆ. ಕ್ರಿ. ಶ. ೧೬೯೪ರ ಶಾಸನ ಪ್ರತಿಯೊಂದು ಬಾಳೇರ ಮನೆತನದ *೧೧ ಪೂರ್ವಿಕರು ಹಳದೀಪುರದ ಸಮೀಪ ಬಸವರಾಜದುರ್ಗದಲ್ಲಿ ಪುರೋಹಿತರಾಗಿದ್ದರೆಂದು ತಿಳಿಸುತ್ತದೆ. ಹಳದೀಪುರದಲ್ಲಿ ಕೆಳದಿ ಬಸಪ್ಪನಾಯಕನಿಂದ ಅಗ್ರಹಾರವೊಂದು ನಿರ್ಮಿಸಲ್ಪಟ್ಟಿತೆಂದೂ ವಿಷ್ಣುಸಭಾಹಿತರೂ ಇಲ್ಲಿದ್ದರೆಂದೂ ಮಾಹಿತಿಯೊಂದು ಹೇಳುತ್ತದೆ.

**ಬಸವರಾಯದುರ್ಗ ( ನವಿಲೆಯ ಗಡ )**

ಕೆಳದಿ ನೃಪವಿಜಯದಲ್ಲಿ ಕವಿ ಲಿಂಗಣ್ಣನು -

*ಇಂತು ನಿರ್ವಾಣಯ್ಯನ ಸಹೋದರನಾದ ಚನ್ನ ಬಸವಪ್ಪನೊಡನೆ ಸೇನಾಸಮೂಹಮಂ ತೆರಳ್ಚಿ ಕಳುಹಿ ಕಡಲೆಡೆಯೊಳಸೆವ ನವಿಲೆಗಡಮಂ ಸಾಧಿಸಿಯಾಗಡಕ್ಕೆ ಬಸವರಾಜದುರ್ಗಮೆಂದು ಸ್ವನಾಮಾಂಕಿತಮಂ ರಚಿಸಿ ಬಲ್ಪುಗೈಸಿದನಂತುಮಲ್ಲದೆ.* *೧೨ - ಎಂದಿದ್ದಾನೆ.

ಇದು ಕ್ರಿ. ಶ. ೧೬೯೬-೧೭೧೪ರಲ್ಲಿ ಕೆಳದಿಯನ್ನಾಳಿದ ಹಿರಿಯ ಬಸಪ್ಪನಾಯಕನ ಕಾಲ. ಬಸವರಾಜದುರ್ಗದೊಂದಿಗೆ ಮಿರ್ಜಾನ್ ಪ್ರದೇಶಗಳು ಪ್ರಸಿದ್ಧ ನೌಕಾ ನೆಲೆಯಾಗಿ ಪ್ರಮುಖ ಕೇಂದ್ರವಾದುವು. ೧೬೨೯-೧೬೪೫ರವರೆಗೆ ಆಳಿದ ಕೆಳದಿ ವೀರಭದ್ರನಾಯಕನ ಕಾಲದಿಂದ ಅಕ್ಕಿ, ಮೆಣಸು ಹಾಗೂ ಕುದುರೆಗಳ ರಫ್ತು- ಆಮದು ವಾಣಿಜ್ಯೋದ್ಯಮವು ೧೭೬೩ರ ವರೆಗೂ ಅವ್ಯಾಹತವಾಗಿ ಬೆಳೆದುಕೊಂಡು ಬಂದಿತು. *೧೩ ೧೬೪೫-೧೬೬೦ರಲ್ಲಿ ಆಳಿದ ಶಿವಪ್ಪನಾಯಕನ ಕಾಲದಲ್ಲಿ ಅಕ್ಕಿ-ಮೆಣಸಿನ ವ್ಯಾಪಾರಗಳು ಮುಕ್ತ ಮಾರುಕಟ್ಟೆಯಲ್ಲಿ ಸಾಗಿದುವು. *೧೪ ೧೭೦೨ ನೇ ಮಾರ್ಚಿಯಲ್ಲಿ ಪೋರ್ತುಗಿಸರು ಕೆಳದಿ ಅಧಿಪತಿಗೆ ಪತ್ರ ಬರೆದು ಅರಬರ ಪ್ರಭಾವವನ್ನು ತಗ್ಗಿಸಲು ಪ್ರಾರ್ಥಿಸಿಕೊಂಡರು. ೧೫-೨-೧೭೦೧ರಲ್ಲಿಯೂ ಆಂಟೋನಿಯೋ ಲೂಯಿಸನು ಕೆಳದಿ ದೊರೆಗೆ ಅಕ್ಕಿ ಸರಬರಾಜು ಮಾಡಿದ ಬಾಬ್ತು ಪೂರ್ತಿ ಹಣ ಪಾವತಿಸುವುದಾಗಿಯೂ ಅರೇಬಿಯನ್ನರು ಶತ್ರುಗಳಾಗಿದ್ದರಿಂದ ಸಹಾಯ ಮಾಡಬಾರದಾಗಿಯೂ ಕೇಳಿಕೊಂಡಿದ್ದನು. ವೀರಭದ್ರ ನಾಯಕನ ಆದೇಶದಂತೆ **ವಿಠಲಶೆಣೈ ಹಾಗೂ ಅಪ್ಪಾಜಿಶೆಣೈ ಮುಖಾಂತರ ಮೂರು ಜಹಜುಗಳು ಮೆಕ್ಕಾ ಮತ್ತು ಮಸ್ಕಟ್‌ಗಳಿಗೆ ಹೋಗಿ ಬಂದ ಕುರಿತು ಮಾಹಿತಿಗಳಿವೆ;** ಕೆಳದಿ ರಾಜ್ಯಕ್ಕೆ ಕುದುರೆಗಳನ್ನು ಸರಬರಾಜು ಮಾಡಿದ ಕುರಿತು ದಾಖಲೆಗಳೂ ಇವೆ. *೧೫ ವಿಠಲಮಲ್ಯನು ೧೬೭೧ರಲ್ಲಿ ತನ್ನ ದೊರೆ ಕೆಳದಿ ಅಧಿಪತಿಯ ಮಾರ್ಗದರ್ಶನದಲ್ಲಿ ಪೋರ್ತುಗೀಸರೊಂದಿಗೆ ಏರ್ಪಡಿಸಿದ ಒಪ್ಪಂದವೊಂದರಲ್ಲಿ ಅಬಲರು, ಹಿಂದೂಗಳು ಹಾಗೂ ಗೋವುಗಳನ್ನು ಹಿಂಸಿಸಕೂಡದೆಂದೂ ಮತಾಂತರವನ್ನು ಬಹಿಷ್ಕರಿಸಿರುವುದಾಗಿಯೂ ತಪ್ಪಿದಲ್ಲಿ ಕ್ರೈಸ್ತಧರ್ಮಕ್ಕನುಸರಿಸಿ ಶಿಕ್ಷಿಸುವ ಅಧಿಕಾರ ವಿರುವುದಾಗಿ ಎಚ್ಚರಿಸಿ *೧೬ ನಮೂದಿಸಲಾಗಿದೆ. ೧೭೧೪ - ೧೭೩೯ರವರೆಗೆ

ಆಳಿದ ಇಮ್ಮಡಿ ಸೋಮಶೇಖರ ನಾಯಕನ ಕಾಲದಲ್ಲಿ ಅರೇಬಿಯಾದ ಮಾಹಿತಿಯೊಂದು-

"A letter of the English factory at Karwar, reveals the anxiety of the English to make a contract with the ruler of Bednur (KELADI) for the procurement of rice - "The rice that we have in our ware house being very old and worme eaten .................We have ordered Vincajee to contact for three hundred thousand Bassalore bales of new rice this years crops, for our stores." *೧೭

ಈ ಸಂದರ್ಭದಲ್ಲಿ ಮಲ್ಲಪ್ಪನ ಸೋದರ ನಾರಾಯಣ ಮಲ್ಯನು ಗೋವೆಯಲ್ಲಿ ರಾಯಭಾರ ನಡೆಸಿ ಸೋಮಶೇಖರನಿಗೆ ನೆರವಾದನು. *೧೮ ಮೇಲ್ಕಂಡ ಹಲವು ದಾಖಲೆಗಳಲ್ಲಿ ಕಂಡು ಬರುವ ಮಿರ್ಜೀ-ಕೋಡಕಣಿ ಬಾಳೇರಿ ಕುಟುಂಬದ ವಂಶ ವೃಕ್ಷದಲ್ಲಿ ನಾರಾಯಣ ಹಾಗೂ ವೆಂಕಾಜೀ (venkatesh!)ನ ಹೆಸರುಗಳು ಕಂಡುಬರುತ್ತವೆ. *೧೯

*ಕೆಳದಿ ವರ್ತಕ ಶ್ರೇಣಿಯಲ್ಲಿ ಬಾಳೇರಿ ಮನೆತನ ಎಂದು ಕರೆಯಲ್ಪಡುತ್ತಿದ್ದ ಹಳದಿಪುರದಲ್ಲಿಯೂ ಈ ಮನೆತನದ ಕುಟುಂಬವಿತ್ತು. *೨೦ ಬಸವರಾಜ ದುರ್ಗದಲ್ಲಿರುವ ಅರಮನೆಯಲ್ಲಿ ಬಾಳೇರಿ ವಂಶೀಕರು ಪುರೋಹಿತರಾಗಿದ್ದು ಕಾಲಕ್ರಮೇಣ ಕೆಳದಿ ಅರಸರ ಆಶ್ರಯದ ಮೇರೆಗೆ ಅಕ್ಕಿ ರಫ್ತು ವ್ಯಾಪಾರ ವ್ಯವಹಾರದ ವರ್ತಕ ಶ್ರೇಣಿಗೆ ಮಿರ್ಜಾನ್ ಹತ್ತಿರ ಇರುವ ಕೋಡಕಣಿಗೆ ಬಂದು ನೆಲಸಿರುವುದಾಗಿ ತಿಳಿದುಬಂದಿದೆ. ಕೋಡಕಣಿಯಲ್ಲಿ ಶ್ರೀ ವಿಷ್ಣು ಬಾಳೇರಿರವರೊಂದಿಗೆ ಕ್ಷೇತ್ರ ಕಾರ್ಯಮಾಡಿದಾಗ ಬಾಳೇರಿ ವಂಶೀಕರ ಅವಶೇಷಗಳೂ ಹಾಗೂ ದೋಣಿಗಳಲ್ಲಿ ಅಕ್ಕಿಗಳನ್ನು ಸಾಗಿಸುತ್ತಿದ್ದ ವಿಶಿಷ್ಟ ಮಾಹಿತಿಗಳೂ ಲಭಿಸಿದುವು. ಈ ಮನೆತನದ ಪುರಾತನ ಮನೆಯ ಹಲವು ಅವಶೇಷಗಳು ಧರ್ಮಸ್ಥಳ ಹಾಗೂ ಉಡುಪಿ ಶ್ರೀವಿಜಯನಾಥಶೆಣೈ ವಸ್ತುಸಂಗ್ರಾಹಾಲಯದಲ್ಲಿರುವುದಾಗಿ ತಿಳಿದುಬರುತ್ತದೆ. ಇವರಲ್ಲಿರುವ ಹಲವು ತಾಮ್ರಶಾಸನಗಳು ಚಾರಿತ್ರಿಕ ದಾಖಲೆಗಳು ಗೋವಾದ ಪರ್ತಗಾಳಿ ಜೀವೋತ್ತಮ ಮಠ *೨೧ ಹಾಗೂ ಅಂಕೋಲೆಯ ಶ್ರೀ ಲಕ್ಷ್ಮೀನಾರಾಯಣ ಶ್ರೀ ಮಹಾಮಾಯಾ ದೇವಾಲಯದಲ್ಲಿ ಉಪಲಬ್ಧವಿವೆ. *೨೨ ಪರ್ತಗಾಳಿ ಕಾನಕೋನದ ಸಮೀಪ ''ಬಾಳಿ'' ಎಂಬ ಊರಿದ್ದು ಅಲ್ಲಿಯೂ ಹಲವು ಕುಟುಂಬಗಳು ನೆಲಸಿರುವುದಾಗಿ ಕಂಡುಬರುತ್ತದೆ. ಕೋಡಕಣೆಯಲ್ಲಿರುವ ಬಾಳೇರಿ ಕುಟುಂಬಗಳ ಪೂರ್ವಿಕರು ಕೈಯಿಂದ ಭತ್ತಕುಟ್ಟಿ ಉತ್ತಮ ತರಗತಿಯ ಅಕ್ಕಿಯನ್ನು ತಯಾರಿಸಿ ಹುಲ್ಲಿನ ಮೂಡೆಗಳಲ್ಲಿ ಸಿದ್ಧಪಡಿಸಿ ರವಾನಿಸುವ ಉತ್ಪಾದನಾ ಕೇಂದ್ರಗಳಾಗಿದ್ದುವು. ಇವರಿಗೆ ಮಿರ್ಜಾನ್‌ನಲ್ಲಿ ತೆಂಗು, ಅಡಕೆ ಹಾಗೂ ಭತ್ತ ಬೆಳೆಯುವ ಭೂಮಿಗಳಿದ್ದು ಸುಮಾರು ೪೦ ಮನೆಗಳಿದ್ದುದು ಕಂಡು ಬರುತ್ತದೆ. ಈ ವಂಶೀಕರಲ್ಲಿ ಒಬ್ಬರು ಸನ್ಯಾಸಿಗಳಾಗಿದ್ದು ವಿಠ್ಠಲ ದೇವಾಲಯ ನಿರ್ಮಿಸಿದ್ದುದೂ ಕಂಡುಬರುತ್ತದೆ. ಈ ಹಿಂದೆಯೆ ಹೇಳಿರುವಂತೆ ಇಲ್ಲಿರುವ ಕಾಳು ಮೆಣಸು ದಾಸ್ತಾನು ಕೋಠಿಗೆ ಬಣಸಾಲೆ ಹಿತ್ಲು ಎಂಬುದಾಗಿ ವಾಡಿಕೆಯಿದೆ. ಇದರ ಸಮೀಪವೇ ಇರುವ ಬಣಸಾಲೆ ಅಂಗಡಿಯು ಕಾಳು ಮೆಣಸನ್ನು ಗುತ್ತಿಗೆಗೆ ಪಡೆದು ಸಂಗ್ರಹಿಸಿ, ಸಂಸ್ಕರಿಸಿ ಮಾರಾಟ ಹಾಗೂ ರಫ್ತು ಮಾಡುತ್ತಿತ್ತೆಂದು ತಿಳಿದುಬರುತ್ತದೆ. ಹಡಗು ದೋಣಿ ಕೇಂದ್ರದ ನದೀ ದಂಡೆಯೂ ಇದರ ಸಮೀಪವೇ ಇದೆ. ಈ ಮನೆತನದಲ್ಲಿ ಉಪಲಬ್ಧವಿರುವ ಓಲೆಗರಿ ಗ್ರಂಥಗಳು ಹಾಗೂ ಪ್ರಾಚೀನ ಹಸ್ತಪ್ರತಿಗಳಲ್ಲಿ ಭಾಗವತ, ಭಕ್ತಮಾಲಾ ಮಾಹಾತ್ಮ್ಯಮ್, ತುಕಾರಾಮ ಅಭಂಗಗಳೂ ಕಂಡುಬಂದಿವೆ.*

## ಉಪಸಂಹಾರ

*ಪಡುಗಡಲೊಡೆಯರಾದ ಕೆಳದಿ ಅರಸರ ರಾಜ್ಯದಲ್ಲಿ ಸ್ವಾಭಾವಿಕವಾಗಿಯೇ ರಾಜ್ಯಾದಾಯವು ಗಮನಾರ್ಹವಾಗಿತ್ತು. ರಾಜ್ಯಾದಾಯ ಹಾಗೂ ಪ್ರಜೆಗಳ ನೆಮ್ಮದಿಗಾಗಿ ಶ್ರಮಿಸಿದ ಕೆಳದಿ ಅರಸರಿಗೆ ಎಲ್ಲರಂತೆ ಕೊಂಕಣ ಪ್ರಾಂತ್ಯದ ವರ್ತಕ ಶ್ರೇಣಿಗಳೂ ರಾಜ್ಯದ ಹಿತರಕ್ಷಣೆಗೆ ಸಹಾಯಕವಾಗಿದ್ದು ಅಪಾರವಾಗಿ ಶ್ರಮಿಸಿದುವು. ವರ್ತಕ ಶ್ರೇಣಿಗಳಲ್ಲಿ ದೊಡ್ಡ ಸಾಹುಕಾರರಾದಿಯಾಗಿ ದಳ್ಳಾಳಿಗಳವರೆಗೆ ವ್ಯಾಪಾರೋದ್ಯಮ ದಲ್ಲಿ ವಿಶಿಷ್ಟ ಶ್ರೇಣಿಗಳಿದ್ದುವು. ಕೊಂಕಣ ಪ್ರಾಂತದಲ್ಲಿ ವಿರ್ಜಿ ವೋರಾ, ಅಬ್ದುಲ್ ಗಫೂರ್, ಉತ್ತಮ ಶ್ರೇಣಿ ವರ್ತಕರಾಗಿದ್ದರು. ನಾರಾಯಣ ಶೆಣ್ವೆಯು ಇಂಗ್ಲೀಷ್ ಕಂಪೆನಿಗೆ ದಳ್ಳಾಳಿಯಾಗಿದ್ದನು. ಇವನಂತೆ ಚೆನ್ನಿದಾಸ್, ಬೆಮುಲ್‌ದಾಸ್, ರಾಮಚಂದ್ರ, ಹರಿಮೆಹ್ತ, ವಾಗ್ಜೀ, ಮಲಬಾರ್‌ನಲ್ಲಿ ರಾಮಪ್ರಭು, ಬಚೋಕ್ಕಾಪ್ರಭು(?) ನಾನ್ನಾ (ನಾರಾಯಣ?) ಪ್ರಭುಗಳಿದ್ದುದೂ ಕಂಡುಬರುತ್ತದೆ. *೨೩ ಇಂತಹ ವರ್ತಕ ಶ್ರೇಣಿಯಲ್ಲಿ ಕೆಳದಿ ರಾಜ್ಯದ ವಾಣಿಜ್ಯೋದ್ದಿಮೆ ಯಲ್ಲಿ ಮಿಡಜಿ ಬಾಳೇರಿಮನೆತನವೂ ಒಂದಾಗಿದ್ದು ಅಧ್ಯಯನಯೋಗ್ಯವೆನಿಸಿದೆ. ಕೆಳದಿ ಅರಸರ ಕಾಲದಲ್ಲಿ ಅರೇಬಿಯಾ ಮಸ್ಕಟ್ ಮುಂತಾದ ಕೊಲ್ಲಿ ದೇಶದ ವಾಣಿಜ್ಯೋದ್ಯಮ ಇತಿಹಾಸದ ಅಧ್ಯಯನ ಎಂದಿಗಿಂತಲೂ ಈಗ ಹೆಚ್ಚಿನ ಅಗತ್ಯವಾಗಿದೆ. ಇದಕ್ಕೆ ಪರ್ಷಿಯ ಮತ್ತು ಅರೇಬಿಯಾ ಭಾಷೆಯಲ್ಲಿ ಜ್ಞಾನವೂ ಅಗತ್ಯವೆಂಬುದು ಒತ್ತಿ ಹೇಳಬೇಕಾಗಿಲ್ಲವಷ್ಟೆ?* ಗೋವಾದ ಪಿಸುರ್ಲಂಕರ್‌ರಂತಹ ತರುಣ ವಿದ್ವಾಂಸರು ಇಂತಹ ಜ್ಞಾನ ಸಾಹಸಕ್ಕೆ ಕೈಹಾಕಬಲ್ಲವರು. ವಿದ್ವಾಂಸರ ಗಮನಕ್ಕೆ ಬಾರದ ಇಂತಹ ಹೊರನಾಡಿನ ಕೆಳದಿ ಇತಿಹಾಸದ ಆಕರಗಳಲ್ಲಿ ಐತಿಹಾಸಿಕ ಪ್ರಜ್ಞೆಯೊಡನೆ ವೈಜ್ಞಾನಿಕ ಸಾಧಾರ ಹಾಗೂ ಶಾಸ್ತ್ರೀಯ ಸಂಶೋಧನೆಗಳನ್ನು ಯುವಜನಾಂಗ ಕೈಗೊಳ್ಳುವಂತಾಗಲಿ.

(ನಮ್ಮ ಸಂಶೋಧನೆಯಲ್ಲಿ ನೆರವಾದ ಹೊನ್ನಾವರದ ವಿಷ್ಣು ಬಾಳೇರಿರವರಿಗೆ ಕೃತಜ್ಞತೆಗಳು ಸಲ್ಲುತ್ತವೆ.)

ಅನುಬಂಧ - ೧

**ಕೆಳದಿ ಚೆನ್ನಮ್ಮಾಜಿಯವರು - ಕೊಂಕಣಿಗರ ರಘುಚಂದ್ರ ಒಡೆಯರ ಶಿಷ್ಯ ಲಕ್ಷ್ಮೀನಾರಾಯಣ ಸನ್ಯಾಸಿಗಳ ಮಠಕ್ಕೆ ನೀಡಿದ ನಿರೂಪ**

*ರಕ್ತಾಕ್ಷಿ ಸಂವತ್ಸರದ ಪುಷ್ಯಶು ೧೩ ಲ್ಲೂ ಶ್ರೀಮತ್ ಕೆಳದಿ ಚೆನ್ನಮ್ಮಾಜಿಯವರೂ ಮುತ್ತೂರ ವೆಂಕಂಣಗೆ ಬರಸಿ ಕಳುಹಿದ ಕಾರ್ಯ ಗೋಕರ್ಣದ ಕೊಂಕಣಿಗ ರಘುಚಂದ್ರ ವಡೇರ ಶಿಷ್ಯ ಲಕ್ಷ್ಮೀನಾರಾಯಣ ಸಂನ್ಯಾಸಿಗಳ ಮಠಕ್ಕೆ ಪ್ರಾಕು ಉತ್ತಾರವಾಗಿದ್ದ ಸ್ವಾಸ್ಥೆವಳಗೆ ಗ ೬೦ ಅರುವತ್ತು ವರಹ ಅರಮನೆ ಹವಾಲೆಯಾಗಿದೆ. ಪಾಲಿಸಿಕೊಳ್ಳಬೇಕೆಂದು ವೆಂಕಟೇಶ ಮಲ್ಲನೂ ಹೇಳಿಕೊಂಡ ಸಂಮಂಧ ಯಿಾತನ ಕೈಯ್ಯ ಅರಮನೆಗೆ ಕಾಣಿಕೆ ಗ ೧೨೦ ನೂರಿಪ್ಪತ್ತು ವರಹನ ತೆಗದುಕೊಂಡು ಮಿಡಿಜೆ ಸಿಮೆ ಬಾವಿಕೊಡಲ ಗ್ರಾಮದಿಂದ ಗ ೩೬ ಮೂವತ್ತಾರು ವರಹಾನ ಸ್ವಾಸ್ಥೆಯನೂ ಶಿವಾರ್ಪಿತವಾಗಿ ಬಿಟ್ಟಿಧವೆ ರೆಖೆ ಪ್ರಮಾಣ ಭೂಮಿಯ ವಿಂಗಡಿಸಿಕೊಟ್ಟು ಯಿಾ ಕಾಗದವ ಸೆನಬಾವರ ಕಡಿತಕ್ಕೆ ಬರಸಿ ತಿರಿಗಿ ಯಿಾವರ (ಸಂನ್ಯಾ)ಸಿಗಳ ವಶಕ್ಕೆ ಕೊಡುವದಾಗಿ--*

ಮೊಹರು ಇದೆ,

ಅನುಬಂಧ - ೨

Sree Nagve Samsthan

*List of kulavi 43 families*

Achary, Baindur, Baleri, Bhandari, Bhandarkar, Bhat, Churya, Dempo, Ghode, Hanumattekar, Hattiyangadi, Honavar, Kalavar, Kalyanpur, Katkar , Kini, Kodakani, Kosta, Kumtakar, Mahale, Murdeswar, Mallya (Nandavar, Puttur, Kalyanpur, Uggelbet) Manglurkar, Mesta, Padti, Patkar, Padukone, Prabhu, Nagvekar(GSB), Nagvekar(Sthali), Nagvekar(Sonar), Nayak, Pangal Nayak, Pai (Athere, Brahmavar, Herenjal, Karkar, Haradi), Rao, Savkar, Shenvi, Shenai, Shet, viura, Vombatkere, Usapkar.

Shri Lakshminarayana Maha Maya Temple, Hanumatta, Ankola - 581357.

ಅನುಬಂಧ - ೩

**ಕೆಳದಿ ಅರಸರ ಕಾಲದಲ್ಲಿ ಆಶ್ರಯ ಪಡೆದ ಗೌಡಸಾರಸ್ವತರು**

| ಸಂಖ್ಯೆ | ಅರಸರು | ಗೌಡಸಾರಸ್ವತರು | ಅಧಿಕಾರ | ಇತರೆ |
|---|---|---|---|---|
| ೧ | ಹಿರಿಯ ವೆಂಕಟಪ್ಪ ನಾಯಕ<br>೧೫೮೩-೧೬೩೦ | ವಿಠ್ಠಲ ಶೆಣ್ಯೈ ( ೧೬೨೩ ) | ನಿಯೋಗಿ | |
| ೨ | ವೀರಭದ್ರ ನಾಯಕ<br>೧೬೩೦-೧೬೪೫ | ರಾಮಪ್ಪೈ | ನಿಯೋಗಿ | |
| ೩ | ಶಿವಪ್ಪನಾಯಕ<br>೧೬೪೬-೧೬೬೧ | ರಾಮಪ್ಪೈ, ವಿಠ್ಠಲಶೆಣ್ಯೈ<br>೧೬೩೧, ಅಪ್ಪಾಜಿ ಶೆಣ್ಯೈ | ನಿಯೋಗಿ | |
| ೪. | ಇಮ್ಮಡಿ ವೆಂಕಟಪ್ಪ ನಾಯಕ<br>೧೬೬೧-೧೬೬೭ | ರಾಮಾಜಿ ಶೆಣ್ಯೈ, ಕೊಠಾರಿ, | | |
| ೫. | ಭದ್ರಪ್ಪನಾಯಕ<br>೧೬೬೨-೧೬೬೪ | ರಾಮಚಂದ್ರ ಮಲ್ಯ<br>ಮಲ್ಲಪ್ಪ ಮಲ್ಯ<br>೧೬೬೪ | ಮಂತ್ರಿ? | |
| ೬. | ಹಿರಿಯ ಸೋಮಶೇಖರ ನಾಯಕ<br>೧೬೬೩-೧೬೭೧ | ನಾರಾಯಣ ಮಲ್ಯ<br>೧೬೬೪-೬೯<br>( ನಾರಾಯಣ ನಾಡಕರ್ಣಿ )<br>( ವಿಠಲ ಮಲ್ಯ )<br>( ೨೦.೪.೧೬೭೧? ) | ವರ್ತಕ ಹಾಗೂ<br>ನಿಯೋಗಿ | ಆಸ್ಥಾನ ವರ್ತಕ ಮತ್ತು ನಿಯೋಗಿ- ಈತನು ಅರಸನ ಆಪ್ತನಾಗಿದ್ದನು. ಈತನಿಗೆ ಬೆಳ್ಳಿಯ ಆಭರಣ ಹಾಗೂ ಹಳದೀಪುರದಲ್ಲಿ ಉಂಬಳಿ ಜಮೀನುಗಳೂ ಲಭಿಸಿದುವು. |

| | | | | |
|---|---|---|---|---|
| ೭. | ರಾಣಿ ಚೆನ್ನಮ್ಮಾಜಿ ೧೬೭೨-೧೬೯೮ | ಮಲ್ಲಪ್ಪಮಲ್ಯ | ನಿಯೋಗಿ | |
| ೮. | ಹಿರಿಯ ಬಸಪ್ಪನಾಯಕ ೧೬೯೮-೧೭೧೫ | ದಾಮರಸ ಪ್ರಭು ೧೭೦೭ | | ಈತನ ಕಾಲದಲ್ಲಿ ಗೋಕರ್ಣ, ಮಿರ್ಜಾನ್ ದೇವಸ್ಥಾನ ಹಾಗೂ ಊರನ್ನು ಜೋಸೆಫ್ ಪೆರೈರರೆ ರೆಬ್ರೀಕನು ಹಾಳುಗೆಡವಿದನು. |
| ೯. | ಇಮ್ಮಡಿ ಸೋಮಶೇಖರ ನಾಯಕ, ೧೭೧೫-೧೭೩೯ | ನಾರಾಯಣ ಪ್ರಭು ೧೭೩೪ ಸುಂದರದಾಸ, ವಿಷ್ಣುದಾಸ (೧೭೨೮?) | | ನೌಕಾ ಮಾಲೀಕ ಮತ್ತು ವ್ಯಾಪಾರಿ |
| | | ರಘುನಾಥ ಒಡೆಯ | | ಮಂಗಳೂರಿನ ಅಧಿಕಾರಿ |
| ೧೦. | ಇಮ್ಮಡಿ ಬಸಪ್ಪ ನಾಯಕ (೧೭೩೯-೧೭೫೫) | ಹರಿ ಕಮ್ತಿ (ಹರಿ ಕಾಮತ್ ೧೭೪೦?) | | |
| ೧೧. | ? | ಧಾರೇಶ್ವರ್ ಲಕ್ಷ್ಮಯ್ಯ | | |
| ೧೨. | ? | ಚಂದಾವರ ನಾನಯ್ಯ | | ವತ್ಸಗೋತ್ರ ಕುಮಟ ಶ್ಯಾನುಭೋಗ? |

ಅನುಬಂಧ – ೪

## EXTRACTS FROM ARCHIVS OPORTUGUESE ORIENTAL, III, pt I, No. 275

The letter is as follows :

"King of Canara and the Arabs,

Sir,

*After the departure of the two ships that I have sent last year to that kingdom, I have news that Canara persuaded by the Arabs and being afraid of their powerful army, with which they passed the coast, they resolved to deny access to the state, facilities of trade. Under the pretext of asking to return what they had seized, Governor Almo Taza More, expected that the Arabs were victorious and went with an army to Carregar to fill in with rice as agreed before. This facilitated more the boldness of closing the ports to us knowing that one 'Galiot' and 2 mauchuas had been caught with arecat, the Canarese resolved to seize in their ports two captains of the ships and mauchuas and 16 or 18 soldiers and sailors who were on board. After handcuffing them, they took gold and silver, from the merchants and some parangies of the Cafila, who could not get out of the ports immediately. But having heard that the Canarese and our armies were fighting the rest of the parangies and a part of the soldiers and sailors began to cut the communication.*

Goa, 4th December, 1704"

ಅನುಬಂಧ – ೫

## PUBLIC DEPARTMENT DAIRY No. 30 B/1757 (C. 453)

*...........The president further informed the Board, that he was last might advised from more, under the 4th*

*Ultimo, that the young Rajah of Bednure, had been murdered by his Mother in Law on the 17th July, she having previously dismissed the Regent, that the present Government, is disputed, and the Marrattas have seized on Merjee Fort, which has been about forty (40) years, subject to Bednure; RESOLVED therefore, to avoid any Risque, which may attend this change of Government, that a Vessel be sent, to bring up what pepper Mr. Ryley, may have provided.*

*Recd. in the Bombay castle* *Sd/-*
*Tuesday the 6th of September, 1757.*

**ಅನುಬಂಧ – ೬**

॥ ಗೋವೆ ವಿಜರೆಯರಾದ । ಶ್ರೀ ಯಾರು

॥ ಕೊಂಡಿದ ಸಂದಮೀಲರಿಗೆ

॥ ಶ್ರೀ ಮತ್ಸಕಲ ಗುಣ ಸಂಪ್ಪಂನರಾದ ರಾಜಮಾಂನ್ಯ ರಾಜ ಶ್ರೀ।

॥ ವೆಂಕಟ್ಟೆಶ ಮಲ್ಯೆ। ಗಣೇಶ ಸೇನಬೋವನು ಮಾಡುವ ಸಲಾಮು.

ಬಾಜಿತ್ತ ಸಲಾಮು । ನಾಲು ಪರ್ರಿಣಾಮದಲ್ಲುಆಯಿಧವೆ। ನಿಂಮ ಭ್ಯೆರ

ಶಾಲಿಗಳಿಗೆ ಹರವತ್ತ ಮೆಹರವಾನಿಕೆಯಿಂದ ಬರಶಿ ಕಳಹಾ ಹಾಗೆ ಮಾಡ್ಸ

ಬೇಕು। ಮೊದಲು ನಿಮಗೆ ವಂದು ಕಾಗದ ಬರಸಿ ಕಳುಹಿದಕ್ಕೆ । ನೀಉ ನಮಗೆ ಬರ

ದ ಉತ್ರದ ಕಾಗದ । ಯಿ ಬಗ್ಗ ರಾ। ನೂರ ಹೊರ್ದೆರ್ರಿಗೆ ಬರೆದ ಕಾಗದ ಸಾಹಯಿಲ್ಲು

ಬಂದಲ್ಲಿ ಊಕಾಗದಗಳೂ। ಹುಜೂರ್ರಿಗೆ ಕಳುವಿಸಿದ್ದಲ್ಲಿ । ಊಕಾಗದ

ಗಳು। ವಪ್ಪಿಸಿ ಯಿ ಬಗ್ಗ ರಾ । ನೂರಪ್ಪಿಲಾಡೆರು ಬಾಹಗಳವಾಗಿ। । ಅರ್ರಿಕೆ ಮಾಡಿದ

ರ್ರಿಂದ ನಿಮಗೆ ಊ ಹಾ ಕಾರ್ಯದ ಬಗ್ಗು । ನಿಂಮಿಂದ ಊಹಾ ಕಾರ್ಯದ ಬಗ್ಗ

ಸಾಹರಾ । ಅಪ್ಪಣೆ ಪಾಲಿಶಿ। ಮಂಗಲೂರಧಿ ಕೊಡಗೆ ವಿಂಗಡದಲ್ಲು ನಿರೂಪ

ಬರದು ಬಂದಧ । ಊ ಅಭಿಪ್ರಾಯಕ್ಕೆಲ್ಲಾ । ಊಧಿಕೂರನು ನಿಮಗೆ ಬರಶಿಕಳು ।

ಹಾದ್ದರ್ರಿಂದ ಶ್ರುತವಾಧಿತು । ಯಿ ಸಂಸ್ಥಾನಕ್ಕು । ಊ ಸಂಸ್ಥಾನಕ್ಕು । ಯೆಭಿಲಾಸೆ

ಯಾನ ದಿನೆದಿನೆ ಅತ್ತಿಶಯವಾಗಿಗಿಡುಸುವಲ್ಲಿ । ನೀ ಊ ಸಮರ್ಥರಾಗಿಧ್ದಿರ್ರಿ।

ಯಿ ಬಗೆ ನಿಮಗೆ ವಿಶೇಷ ಬರವದನು । ಯಿತ್ಲಿಧಿಕೂರೆನು ಯಿ ಬಗ್ಗ ಹಿರುದಾರ

ಭ್ಯ ಬಾವಂಳವಾಗಿ ಕಷ್ಟಬತ್ತಿಲಿ ನಡದ ಬಳಯವೆಂಬುಗಂ ನೀಉಲು ಬಲ್ಲಿರ್ರಿಬರೆದ

ಊದ್ಯಾಂತ ಅಭಿಪ್ರಾಯ ಉ ಪರಂಬರ್ರಿಕೆ ಮಾಡಿ ಮನಸಿಗೆ ತಂದು ಉಭಯ

॥ ಸಂಸ್ಥಾನದ ಸ್ನೇಹಾಭಿವ್ರಡಿಯೂ ಮೊದಲಿನಿಂದ ವಿಶೇಷವಾಗಿ ನಂಮವರ್ರಿರಿ

ಗೆಧಿಕೂರ ಬರಸಿ ಕಳುಹಿದಕ್ಕೆಲ್ಲಾ ಸರಂಜಾಮೆಯಾಸಾಂದರ್ರಿ ಬರಶಿ ಕಳಹರ್ರೀತಿ

ಮಾಡ್ಸಬೇಕು । ಮತ್ತೆ ಕದೆಕಾರ್ಯಕ್ಕೆ ನಿಂಮ ಬ್ಯೆರ ಭುಶಾಲಗೆಳಿಗೆ। ಹರವತ್ತ

ಮೆಹರವಾನಿಕೆಯಿಂದ ಬರ್ರ್ಯಕಳುವಿಸುತ್ತ ಬಾಹಾಗೆ ಮಾಡ್ಸಬೇಕು। ಯಿ ನ್ತಿ

ಸಾಲಾಮು।

*(ಲೇಖಕರು ನೀಡಿದ್ದ ಮೂಲ ಪ್ರತಿಯ ಜೆರಾಕ್ಸ್ ನಕಲನ್ನು ಇಂದಿನ ಕನ್ನಡ ಲಿಪಿಯ ರೂಪಕ್ಕೆ ರೂಪಾಂತರಿಸಿ ಇಲ್ಲಿ ನೀಡಿದೆ-ಸಂ.)*

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. (a) Salsette > ಸಾಸಷ್ಟಿ; ಉಡುಪಿ ಶ್ರೀಕೃಷ್ಣ ಮಠದಲ್ಲಿರುವ ೩೦೨ ನೆಯ ಶಾಸನದಲ್ಲಿ 'ಸೀಸಷ್ಟಿ' ಉಲ್ಲೇಖವಿದೆ. ಮಂ. ಗೋ. ಪೈ. ಸಂ.ಸಂ. ಉ. ೧೯೯೫ ಪು. ೬೪೪. (b) ಗಂಗೊಳ್ಳಿ ಮಲ್ಯರ ಮಠದ ಕೆಳದಿ ಅರಸರ ಶಾಸನವನ್ನು ನೋಡಿರಿ (ಕ್ರಿ. ಶ. ೧೬೬೨).

*೨. Jose Nicolan da Fonsecas sketch of the city of Goa - (Ibid p. 622)

*೩. Cortalim(ಕುಶಸ್ಥಳ)ದಲ್ಲಿದ್ದ ಹಿಂದೂ ದೇವಾಲಯಕ್ಕೆ ಬದಲಾಗಿ ಇಗರ್ಜಿ ಇರುವುದನ್ನು ಈಗಲೂ ಕಾಣಬಹುದು.

*೪. Extracted from Mr. Danvers work "The Protuguese in India vol. II".

*೫. ಇಟಲಿ ಪ್ರವಾಸಿ ಪಿಯತ್ರೋ ಡೆಲ್ಲ ವಲ್ಲೆಯು-ವಿಠಲ ಶೆಣೈ ಕೆಳದಿ ರಾಜಧಾನಿಯಲ್ಲಿ ಕೈಗೊಂಡ ಪ್ರವಾಸಿ ಕಥನಗಳ ಹಲವು ಮಾದರಿ ಚಾರಿತ್ರಿಕ ದಾಖಲೆಗಳನ್ನು ಇಟಲಿಯ ತ್ರಿಯೇಸ್ತೆ ವಸ್ತುಸಂಗ್ರಹಾಲಯದಿಂದ ತರಿಸಿದ್ದು ಪ್ರದರ್ಶನದಲ್ಲಿರುವುದನ್ನು ಕೆಳದಿ ಇತಿಹಾಸ ಸಂಶೋಧನಾಲಯ ದಲ್ಲಿ ಅವಲೋಕಿಸಬಹುದು.

*೬. ಅಂಕೋಲಾದಲ್ಲಿರುವ ಲಕ್ಷ್ಮೀನಾರಾಯಣ ಶ್ರೀ ಮಹಾಮಾಯಾ ದೇವಾಲಯ. ಇಲ್ಲಿರುವ ಸುಂದರ ಪ್ರಾಚೀನ ವಿಗ್ರಹ ಹಾಗೂ ಕಟ್ಟಡಗಳು ವಾಸ್ತುಶಿಲ್ಪದ ಅಧ್ಯಯನಕ್ಕೆ ಯೋಗ್ಯವಾಗಿವೆ.

*೭. ಈತನಿಗೆ ಕೆಳದಿ ಸೋಮಶೇಖರನಾಯಕನು ಹಳದೀಪುರದಲ್ಲಿ ಬೆಳ್ಳಿ ಆಭರಣದೊಂದಿಗೆ ಭೂಮಿಯನ್ನೂ ಉಂಬಳಿಯಾಗಿತ್ತನು. Dakshinatya Saraswats p. 93; ಹಳದೀಪುರ, ಹಟ್ಟಿಯಂಗಡಿ, ಉದ್ಯಾವರ- ಮಧ್ಯಕಾಲೀನ ಯುಗದಲ್ಲಿದ್ದ ಬಂದರು ಪ್ರದೇಶಗಳು.

*೮. ಇತಿಹಾಸ ದರ್ಶನ ಸಂ ೨, ೧೯೮೭, 'ಕರಾವಳಿ ಕರ್ನಾಟಕದ ಕೆಲವು ಅಪರೂಪ ದಾಖಲೆ ಪತ್ರಗಳು' - ಲೇಖನ ನೋಡಿರಿ.

*೯. Kudva: Dakshinatya Saraswats. p. 185; ಈ ಸಂದರ್ಭದಲ್ಲಿ ಒಂದು ಮಾತು: 'ಕೆಳದಿ ನೃಪವಿಜಯ' ಎಂಬುದಕ್ಕೆ ಬದಲಾಗಿ 'ಕೆಳದಿ ವೀರಪ್ಪ ವಿಜಯ'ವೆಂದೂ, 'ಲಿಂಗಣ್ಣ ಕವಿಗೆ' ಬದಲಾಗಿ 'ಕೊಂಗಣ ಕವಿ' ಎಂಬುದಾಗಿ ವಿ. ಎನ್. ಕುಡ್ವಾರವರು ಈ ಕೃತಿಯಲ್ಲಿ ಉಲ್ಲೇಖಿಸಿರುವುದು ತಪ್ಪಾಗಿದೆ. ಪುಟ ೯೮; ಕುಂಟಪಂಕ್ತಿ ೧, ನೋಡಿರಿ.

*೧೦. A note on Coniages, Page 185; W. A., IAR, 1500-1800 A. D.

*೧೧. ಈಗ 'ಬಾಳೇರಿ' ಎಂದಾಗಿದೆ. ಪಲ್ಲವರ ಕಾಲದ ೮ನೆಯ ಶತಮಾನದ ಹಳದೀಪುರದ ತಾಮ್ರ ಶಾಸನವೊಂದು ಚಿತ್ರಾಪುರ ಮಠದಲ್ಲಿದೆ (ಉ. ಕ. ಗೆ. ಪು. ೧೧೨) ಉತ್ತರ ಕನ್ನಡ ಜಿಲ್ಲೆಯ ಗ್ರಂಥಕಾರರು: ಎನ್. ಕೆ. ಹೆಗ್ಗಡೆ - ಐ. ಎಸ್. ಭಟ್ಟ, ಪುಟ. ೧೩೦.

*೧೨. ಕೆ. ನೃ. ವಿ X ಆಶ್ವಾಸ, ಕ. ಸಾ. ಪ, ೧೯೭೭.

*೧೩. Extracts from Courteen papers (M. S. Rawl) A. 299, fols 188-189.

*೧೪. ಲಿಯನಾರ್ಡೋ ಪಾಯಿಸ್ ಹೇಳಿದಂತೆ ಕೆಳದಿ ರಾಜ್ಯದ ವಿಸ್ತೀರ್ಣ ಕಾರವಾರ ಅಂಕೋಲ-ಮಿರ್ಜಾನ್‌ನಿಂದ ಕಾಸರಗೋಡಿನವರೆಗೆ ಈ ಕಾಲದಲ್ಲಿ ವಿಸ್ತರಿಸಿತು.

*೧೫. (a) Archivo protuguese oriental III pt I, No. 95.
(b) Extracts from Voyages of Weddels Fleet, State papes, Dom chas I ccli No. 3
(c) Treaty Document (Pazes-e-Tratados No 1, Ano de 1671, fols 17-19)

*೧೬. Treaty between Somasekhara Nayaka and the Protuguese; Pazes-E-Tratados No 1-1671.

*೧೭. Carwar Factory letter book No 29-A letter No 21, p 30 (Nov 27, 1721).

*೧೮. English Factories in India by William Foster (1618-1619) and by charles fauccette (1670-1677-1661-1664-p. 342) -ಕೆಳದಿ ಅರಸರು ಹಾಗೂ ಪೋರ್ತುಗೀಸರು - ಪು. ೧೧೭.

*೧೯. ಬಾಳೇರಿ ಮನೆತನದ ವಂಶವೃಕ್ಷ ನೋಡಿರಿ (ಅನುಬಂಧ); Malabar coast 1972ರಲ್ಲಿ ವರ್ತಕ ನಾರಾಯಣ ಮಲ್ಯನ ಸಂಗತಿಯಿದೆ.

*೨೦. ಹಳದೀಪುರದ ಕುಟುಂಬದ ಶಾಖೆಯೊಂದು ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿರುವುದೂ ಕಂಡುಬರುತ್ತದೆ.

*೨೧. ಪರ್ತಗಾಳಿ (ಗೋವಾ) ಮಠದಲ್ಲಿರುವ ಮಿಡಿಜೆ ಕುರಿತು ಇರುವ ಚಾರಿತ್ರಿಕ ದಾಖಲೆಯೊಂದಕ್ಕೆ ಅನುಬಂಧ ನೋಡಿರಿ. ಕರ್ನಾಟಕ ಸರಕಾರದ ವತಿಯಿಂದ ಸಂಶೋಧನೆಗಾಗಿ ಗೋವಾ ಪರ್ತಗಾಳಿ ಮಠಕ್ಕೆ ೧೯೭೫ರಲ್ಲಿ ನಾನು ಹೋಗಿದ್ದಾಗ ಶ್ರೀ ಶ್ರೀಗಳು ಚಾರಿತ್ರಿಕ ದಾಖಲೆ ಸೂಚಿ ನೀಡಲು ಅನುಮತಿ ನೀಡಿದ್ದರಿಂದ ಇದನ್ನು ಸಿದ್ಧಪಡಿಸಿ ಸರಕಾರಕ್ಕೆ ಸಲ್ಲಿಸಲಾಗಿದೆ.

*೨೨. ಶ್ರೀ ವಿಷ್ಣು ಬಾಳೇರಿರವರು ಇದಕ್ಕೆ ಧರ್ಮದರ್ಶಿಗಳಾಗಿದ್ದಾರೆ.

*೨೩. 7-9-12-1984ರಲ್ಲಿ U.G.C. Seminars on Konkan Society, University of Poona ದಲ್ಲಿ ಸಾದರ ಪಡಿಸಿದ Social and Religious life of Konkan during the Keladi Rulers, (K. Gunda Jois ಪ್ರಬಂಧ) ಮತ್ತು Konkan as a point of contact between India and the world through Trade (Faizi O Hashmi, Jawaharlal Nehru University, New Delhi) ನೋಡಿರಿ.

ಡಾ॥ ಎಂ. ಜಿ. ಚಂದ್ರಕಾಂತ್ ಮತ್ತು ಎಂ. ಜಿ. ನಾಗರಾಜ್ *

# ಕೊಡಗಿನ ದೊಡ್ಡವೀರರಾಜೇಂದ್ರ ಒಡೆಯನ ಶಿಸ್ತು, ಹುಕುಂನಾಮೆ-ನಿರೂಪಗಳು

ಕೊಡಗು ಹಾಗು ಕೊಡಗಿನಾಚೆಯ ಇತಿಹಾಸಕಾರರ ವಲಯದಲ್ಲಿ ಸಾಮಾನ್ಯವಾಗಿ ೨ನೇ ಲಿಂಗರಾಜೇಂದ್ರ ಒಡೆಯನ (ಕ್ರಿ.ಶ. ೧೮೧೧-೨೦) ಶಿಸ್ತು, ಹುಕುಂನಾಮೆಗಳ ಬಗ್ಗೆ ಮಾತ್ರ ಪ್ರಸ್ತಾಪಿಸಿರುವುದುಂಟು. ಅವನಿಗೂ ಮುಂಚೆ ಅವನ ಅಣ್ಣ, ದೊಡ್ಡವೀರರಾಜೇಂದ್ರ ಒಡೆಯನ ಕಾಲದ (ಕ್ರಿ. ಶ. ೧೭೮೧-೧೮೦೯) ಶಿಸ್ತು ಮತ್ತು ಹುಕುಂನಾಮೆಗಳಲ್ಲಿ, ಫೈಯುರಿಹನು (Fiurih E. V) ಹುಕುಂನಾಮೆಯ ಬಗ್ಗೆ ಮಾತ್ರ ಪ್ರಸ್ತಾಪಿಸಿರುವುದನ್ನು ಬಿಟ್ಟರೆ ಅನ್ಯರು ಈವರೆಗೆ ಆ ಬಗ್ಗೆ ಗಮನಿಸಿದಂತಿಲ್ಲ.

ಶಿಸ್ತು ಎಂಬ ಪದ 'ಸಿಸ್ತ' ಎಂಬ ಪರ್ಶಿಯನ್ ಭಾಷಾ ಶಬ್ದದ ನಮ್ಮ ದೇಶೀಯ ರೂಪವಾಗಿ ಬಳಕೆಯಾಗಿದೆ. 'ಸಿಸ್ತ' ಎಂದರೆ ಆಧುನಿಕ ಪಾರಿಭಾಷಿಕ ಅರ್ಥದಲ್ಲಿ ಪ್ರಮಾಣ ಭೂತವಾದ ಭೂಕಂದಾಯದ ದರ ಎನ್ನುವುದಿದೆ; ಗದ್ದೆ, ಬೆದ್ದಲು, ತೋಟವೆಂದು ಮೂರು ಪ್ರಕಾರದ ವಿಂಗಡಣೆಯಲ್ಲಿ ಮತ್ತೂ ಉಪಪ್ರಕಾರಗಳಿದ್ದು ನೀರಾಸರೆ - ಲಭ್ಯತೆ, ಬೆಳೆದ ಬೆಳೆಗಳು, ಮಣ್ಣಿನ ಸ್ವಭಾವ, ಇವುಗಳನ್ನು ಅವಲಂಬಿಸಿ ವಿಂಗಡನೆ ಮಾಡಿ ಭೂಮಿಯನ್ನು ಅಳೆಯಲು ವಿವಿಧ ಮಾನಗಳನ್ನು ಬಳಸಿರುವುದಿದೆ; ಇವುಗಳನ್ನು ಆಧರಿಸಿ ಭೂಕಂದಾಯ ನಿಗದಿ ಮಾಡುವ ಪದ್ಧತಿ,*೧ ನಮ್ಮಲ್ಲಿ ಬೆಳೆದು ಬಂದ ಪರಂಪರೆಯ ಒಂದು ಅವಸ್ಥೆ ಎನ್ನಬೇಕು.

'ಶಿಸ್ತು' ಎಂದರೆ ಗುರಿ, ಲಕ್ಷ್ಯ, ಹಾಗು ಕಂದಾಯ, ತೆರಿಗೆ ಎಂಬ ಅರ್ಥಗಳನ್ನು ರಾಜೇಂದ್ರನಾಮೆಯಿಂದ ಹೆಕ್ಕಿ ಕನ್ನಡ-ಕನ್ನಡ ನಿಘಂಟು ನೀಡಿದೆ; ಕಂದಾಯ ಬಾಕಿ ನಿಂತ ಕುಳಗಳ ದಾಖಲೆಯ ಪುಸ್ತಕ-ಕಟ್ಟು ಎಂದೂ ನಮೂದಿಸಿದೆ. *೨ ಕೊಡಗಿನ ಹಿನ್ನೆಲೆಯನ್ನು ಗಮನಿಸಿದರೆ ಮೇಲ್ಸೂಚಿತ ಅರ್ಥಗಳ ಜೊತೆಗೆ ಅಳತೆಮಾನಗಳ, ಭೂಮಾಪನ ದಾಖಲೆಗಳ ಹಾಗು ಜನಜೀವನದ ಸಾಂಸ್ಕೃತಿಕ ದಾಖಲೆಯ ಕಟ್ಟಿನ ಹಸ್ತಲಿಖಿತ ಪುಸ್ತಕವಾಗಿಯೂ ಈ ವೀರರಾಜೇಂದ್ರ ಒಡೆಯನ 'ಶಿಸ್ತು' ಕಾಣಬರುತ್ತದೆ. ಅದರ ಮೇಲೆ ನಮ್ಮ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆ, ಮೈಸೂರು, ಕೆಳದಿ, ವಿಜಯನಗರ, ಹಾಗು ಕೊಡಗನ್ನು ಆಳಿದ ಪ್ರಾಚೀನ ಅರಸುವಂಶಗಳ ಆಡಳಿತ ಪದ್ಧತಿಯ ಈ ಸಂಬಂಧದ ಅಂಶಗಳ ಪ್ರಭಾವ ಕಾಣಬರುತ್ತದೆ. ಇದು ಹುಕುಂನಾಮೆ, ನಿರೂಪಗಳಿಗೂ ಅನ್ವಯವೆ. ಅಂತಾಗಿ ಪರಂಪರೆಯತ್ತ ತುಸುಗಮನ.

ಭೂಮಿಯನ್ನು ಅಳೆಯಲು ನೇಗಿಲು ಅಥವಾ ಬೀಜವರಿ ಪದ್ಧತಿ ಹಳೆಯದೆ. ಭೂಮಾಪನ ಪದ್ಧತಿ ಋಗ್ವೇದದ ಕಾಲದಲ್ಲಿ ರೂಢಿಗಿತ್ತು; ಅದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಉಕ್ತವಿದೆ; ಹಾಗು ಶಾತವಾಹನರಲ್ಲಿನ ಭೂಮಾಪನ ಅಧಿಕಾರಿ ರಜ್ಜುಕ ಉಕ್ತವಾಗಿರುವಲ್ಲಿ ಅದರ ಹಳಮೆಯ ಅರಿವಾಗುತ್ತದೆ. ಜೊತೆಗೆ ಅಶೋಕನ ೪ನೆಯ ಸ್ತಂಭಶಾಸನದಿಂದ ಹೊಲಗದ್ದೆಗಳಿಗೆ ಹಗ್ಗದಳತೆಗಳ ಬಳಕೆ ಮಾಡಿ ಕಂದಾಯ ನಿಗದಿ, ಖಾರವೇಲನ ಹಾಥಿಗುಂಫಾ ಶಾಸನದಿಂದ ಮೌರ್ಯರ ಹಿಂದಿನ ನಂದರಾಜ ಕಲಿಂಗಕ್ಕೆ ತೋಡಿಸಿದ್ದ ಕಾಲುವೆ ಹಾಗು ಖಾರವೇಲನ ಆಳಿಕೆಯ ೫ ಮತ್ತು ೧೧ನೇ ವರ್ಷಗಳಲ್ಲಿ ಕಾಲುವೆಯ ಜೀರ್ಣೋದ್ಧಾರ, ಕೆರೆಹೂಳು ತೆಗಿಸಿದ, ಪ್ರಥೂದಕ ಪ್ರದೇಶವನ್ನು ಕೃಷಿಯೋಗ್ಯ ಮಾಡಿದ, ಸಂಗತಿಗಳನ್ನು ವಿದ್ವಾಂಸರ ವಿಭಿನ್ನ ಅಭಿಪ್ರಾಯಗಳ ನಡುವೆಯೂ ಗಮನಿಸುವಲ್ಲಿ ಕೃಷಿಕ ಪರಂಪರೆಯ ನಿರ್ವಹಣೆ ಹಾಗು ಮಾಪನಗಳ ಸೂಚನೆ ಒದಗುತ್ತದೆ.

ಭೂ ಅಳತೆಯ ಮಾನಗಳಾಗಿ ಕದಂಬರ ಕಾಲಕ್ಕೆ, ನಿವರ್ತನ, ಮತ್ತ, ಕಮ್ಮ; ಚೋಳರ ಕಾಲಕ್ಕೆ ಗೇಣು (೯") ಅಡಿ (೧೦.೪೬"), ಪಿಡಿ (೪.೫"); ವಿಜಯನಗರ ಕಾಲಕ್ಕೆ 'ಶ್ರೀಪಾದ'

---

* ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು- ೫೬೦ ೦೧೦

ಆಧಾರಿತ ಪದಿನಾರಡಿಕೋಲು, ಇರುವತಟಿಕೋಲು; ಕೆಳದಿಯ ವೆಂಕಟಪ್ಪನಾಯಕನಲ್ಲಿ ಕಾಡಿಕೋಲು, ಶಿವಪ್ಪನಾಯಕನಲ್ಲಿ 'ಮುಷ್ಟಿ' ಆಧಾರಿತ ಬೆಳೆಯ ಪ್ರಮಾಣವನ್ನನುಸರಿಸಿದ ಬೀಜವರಿ ಪದ್ಧತಿಗಳು ಇದ್ದವು. *೩ ಕೆಳದಿಯಲ್ಲಂತು ವೀರಭದ್ರ ದೇಗುಲದ ಹಿಂಬದಿ ಹೊರಪಾರ್ಶ್ವದಲ್ಲಿ ಬಹುಶಃ ವೀರಭದ್ರವಿನೀತ ಸೊಂಡಿಲು ರೂಪಿ ತೋಳ್ಗಳ ಗಜ (ಲಕ್ಷ್ಮೀ) ನರಸಿಂಹನ ಇನ್ನೊಂದು ರೂಪವಾಗಿ ಬಹುದಾದ ಶಿಲ್ಪದ ಪ್ರಭಾವಳಿಯ ಬಲತಕ್ಷಣಬದಿಗೆ ಇರುವ ಭೂಮಾಪನಕೋಲೂ ಗಮನಾರ್ಹ. ರಟ್ಟನ 'ರಟ್ಟಮತಂ' ನಲ್ಲಿಯ ಸಂಗತಿಗಳು ಚಾವುಂಡರಾಯನ 'ಲೋಕೋಪಕಾರ' ದಲ್ಲಿನ ಕೃಷಿ ಸಂಬಂಧದ ಪದ್ಧತಿಗಳೂ (ಕೊಡಗಿನ ಚಂಗಾಳ್ವ ಸಚಿವ ವಂಶದ) ೨ನೇ ಮಂಗರಸನ 'ಮಂಗಾಭಿಧಾನಂ'ನಲ್ಲಿಯ ಅಳತೆಮಾನಗಳು*೪, ಕೊಡಗಿನ ಕೃಷಿಮಾಪನ ಪದ್ಧತಿಗಳ ಪರಂಪರೆಗೆ ಒತ್ತು ಗೊಡುವಂತಿವೆ. ಅಳತೆಗೋಲಿನ ಶಾಸನೋಲ್ಲೇಖ ಕದಂಬ ಹಾಗು ಗಂಗರ ನಂತರವೆ ಎಂದಿರುವ ಶ್ರೀ ಎಸ್. ರಾಜೇಂದ್ರಪ್ಪ ಅವರು ಬಾದಾಮಿ ಚಾಲುಕ್ಯರ ಕುರುಗೋಡು ಶಾಸನವನ್ನಾಧರಿಸಿ ಅಳತೆ ಕೋಲಿನ ಪ್ರಥಮ ಉಲ್ಲೇಖವಾಗಿ 'ಮತ್ತರ್' ನ ಭೂಪ್ರಮಾಣ ೧ಕ್ಕೆ ೩.೭೫ ಎಕರೆ ಸಮ*೫ ಎಂದು ಗಣಿತಶಾಸ್ತ್ರೀಯವಾಗಿ, ಪ್ರತಿಪಾದಿಸಿದ್ದಾರೆ. ಆದರೆ ಕೊಡಗಿನ ಶಾಸನಗಳಲ್ಲಿ 'ಮತ್ತರು' ಎಂಬ ಮಾನದ ಹೆಸರು ಕಾಣಬರದೆ, ೧೦೦ ಭಟ್ಟಿಭೂಮಿ ಎಂದರೆ ೩ ಎಕರೆಗೆ ಸರಾಸರಿಯಲ್ಲಿ ಸಮನಾಗುವ ಮಾನವು ಹಾಲೇರಿ ಅರಸರ ಕಾಲದಲ್ಲಿ ಬಳಕೆಗಿದ್ದುದು ಕಾಣುತ್ತದೆ. ಇದರ ಪೂರ್ವಸ್ವರೂಪವು, ಗಂಗರ ಕೊಡಗಿನ ಶಾಸನಗಳಲ್ಲಿ ಕಾಣಬರುತ್ತದೆ. ನಂತರ ಪರ್ಯಾಯರೂಪಗಳೂ ಚಾಲ್ತಿಯಲ್ಲಿದ್ದುದು ಕಾಣುತ್ತದೆ. ಕೊಡಗಿನ ಬಿಳಿಯೂರು (ಗಂಗ) ಶಾಸನದಲ್ಲಿ ಎಣ್ಬುನೂರು ಬತ್ತಮುಂ, ಕೋತೂರು ಶಾಸನದಲ್ಲಿ ನೂಱುಭತ್ತಮುಮಂ*೬ ಎಂದಿರುವುದು '೮೦೦ಭಟ್ಟಿ, ೧೦೦ಭಟ್ಟಿ' ಎಂಬವುಗಳ ಪ್ರಾಚೀನ ರೂಪವೆ.

ಕೊಂಗಾಳ್ವರ ಕಾಲದಲ್ಲಿ ಪತ್ತು ಖಣ್ಡುವೆ, ಭೂಮಿ ಖಣ್ಡುಗ, ನೂಱು ಕಣ್ಡುಗ, ಐಗುಳಭತ್ತ; ಚಂಗಾಳ್ವರ ಕಾಲದಲ್ಲಿ ಗದ್ದೆ೩, ಗದ್ದೆ೫, ಕೊಣಂ (ಕೊಳಗ), ಸ೨ (ಸಲಗೆ), ಇತ್ಯಾದಿ ಕೃಷಿಮಾನಗಳು ಶಾಸನಗಳಲ್ಲಿ ಉಕ್ತವಾಗಿವೆ. ಇವರ ಜೊತೆಗೆ ಹಾನುಗಲ್ಲು ಕದಂಬರ ಶಾಸನವೂ ಸೇರಿದಂತೆ, ಗದ್ದೆಯ ಬಗೆಗಳಾಗಿ ಹೂವಿನಗದ್ದೆ, ಕಾರಗದೆ, ಹಳ್ಳಗದ್ದೆ ಪರೆಯಗದೆ, ಮಾವಿನಮಕ್ಕಿ, ತೋಱೆಗಜ್ಜೆ ಇತ್ಯಾದಿಯಾಗಿ ಶಾಸನೋಕ್ತಗೊಂಡಿವೆ. ಹಾಲೇರಿ ಅರಸರ ಕಾಲಕ್ಕೆ *ಬೀಜವರಿಭಟ್ಟಿ, ಬೆಳೆಯುವ ಭಟ್ಟಿ, ಬೀಜಭಟ್ಟಿ, ಭತ್ತಭಟ್ಟಿ* ಇತ್ಯಾದಿ ರೂಪಗಳು ಶಾಸನಗಳಲ್ಲಿದ್ದು, ಗದ್ಯಾಣ, ವರಹಗಳು ಕಂದಾಯದ ನಾಣ್ಯಮಾನಗಳಾಗಿ ಕಾಣಿಸಿಕೊಂಡಿವೆ. *೭

ದೊಡ್ಡವೀರರಾಜೇಂದ್ರ ಒಡೆಯನ ಕಾಲಕ್ಕೆ ಇವೆಲ್ಲ ನಿಖರವಾಗಿ ಒಂದು ರೂಪ ತಳೆದಿರುವುದು, 'ಶಿಸ್ತು'ವಿನಲ್ಲಿ ನಮೂದಿತವಾಗಿರುವುದು ಕಾಣಬರುತ್ತದೆ.

ಕೆಳದಿ ಅರಸರಲ್ಲಿ ಅಳತೆಕೋಲುಗಳ ಬಳಕೆ ಹೆಚ್ಚಾಗಿದ್ದು ಮೂಲಮಾನವಾಗಿ ಮುಷ್ಟಿ, ಕೈ ಉದ್ದ, ಗೇಣು, (೧೬ ಅಥವಾ ೧೮), ಅಡಿಗಳು ರೂಢಿಗಿದ್ದುವು. ಬೆಳೆವ ಭತ್ತದ ಪ್ರಮಾಣವನ್ನನುಸರಿಸಿ ಪರಿಮಾಣವನ್ನು ಹೇಳುವ ಬೀಜವರಿ ಪದ್ಧತಿ ಇದ್ದು, ಬೀಜವರಿ ಖಂಡುಗವನ್ನು 'ಮಾರು' (ಕೈ ಅಲ್ಲ) ಎಂಬ ಮಾನದೊಡನೆ ಹೊಂದಿಸಲಾಗಿತ್ತು. ಅದು ಮೂರು ಬೀಜವರಿ ಖಂಡುಗ (೧ ಬೀಜವರಿ = ೪ ಎಕರೆ)ಕ್ಕೆ ಸಮ ಎಂದರೆ ಒಂದು ಮಾರು ೧೨ ಎಕರೆಗೆ ಸಮ ಎನಿಸಿತ್ತು. ಅಂತಾಗಿ 'ಮಾರು' ಅಲ್ಲಿ ಮನುಷ್ಯನ 'ಕೈ' ಮಾರು ಎಂಬರ್ಥಕ್ಕೆ ಮಿತಿಗೊಂಡಿರಲಿಲ್ಲ. ಅದೇ ಕೊಡಗಿನ ದೊಡ್ಡವೀರರಾಜೇಂದ್ರ ಒಡೆಯನ ಹಾಗು ೨ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ಅವರ ಕೈಯ ಮಾರು (ಅಷ್ಟು ಉದ್ದದ ಬಿದಿರಿನ ದೊಣ್ಣೆ) ಮೂಲಮಾನ ಅಳತೆಗೋಲಾಗಿ ಭೂಮಾಪನಕ್ಕೆ ಬಳಸಲಾಗುತ್ತಿತ್ತು. ಅದು ಬೀಜವರಿ ಭಟ್ಟಿ (ಭತ್ತ ಬೆಳೆವ ನಿರ್ದಿಷ್ಟ ಮಾನದ ಜಾಗ) ಮಾಪನ ಲೆಖ್ಖಾಚಾರಕ್ಕೆ ಹೊಂದಿಸಲಾಗಿತ್ತು. ಅದರಂತೆ ವೀರರಾಜೇಂದ್ರ ಕೋಲು; ಲಿಂಗ ರಾಜೇಂದ್ರಕೋಲು ಎಂಬ ಅಳತೆಮಾನಗಳಿದ್ದವು.

*೧ ವೀರರಾಜೇಂದ್ರ ಕೋಲು = ೮ ವೀ. ರಾ. ಗಜ*
*೮ ವೀ.ರಾ.ಗಜ = ೮ × ೨೮ ವೀ. ರಾ. ಅಂಗುಲ*
*೨೨೪ ವೀ. ರಾ. ಅಂಗುಲ= ೧೮ ಅಡಿ ೮ ಅಂಗುಲ*
*೧ ವೀ.ರಾ.ಗಜ=೨೮ ವೀ. ರಾ. ಅಂಗುಲ*
*೫೩೬ $^{1}/_{4}$ ವೀ. ರಾ. ಕೋಲು = ೧೦೦ ಭಟ್ಟಿ =೩ ಎಕರೆ*
*೧ ಎಕರೆ ≈ ೩೩ $^{1}/_{3}$ ಭಟ್ಟಿ.*

- ಇದು ಲಿಂಗರಾಜನಿಗೆ ಪ್ರೇರಣಾ ಮಾದರಿ ಆಯಿತು.

*೧ ಲಿಂಗರಾಜೇಂದ್ರ ಕೋಲು= ೮ ಲಿಂ.ರಾ.ಗಜ*
*೮ ಲಿಂ.ರಾ.ಗಜ = ೮×೨೪ ಲಿಂ. ರಾ. ಅಂಗುಲ*
*೧೯೨ ಲಿಂ.ರಾ. ಅಂಗುಲ= ೧೬ ಅಡಿ.*
*೧ ಲಿಂ.ರಾ. ಗಜ=೨೪ ಲಿಂ.ರಾ. ಅಂಗುಲ*

೬೯೫ $^{1}/_{3}$ ಲಿಂ.ರಾ. ಕೋಲು=೧೦೦ ಭಟ್ಟಿ ≈ ೩ ಎಕರೆ. ಇತ್ಯಾದಿ ಮಾನಗಳು ರೂಪುಗೊಂಡವು.

ಅಕ್ಬರನಲ್ಲಿಯೂ ಅಳತೆಗೋಲುಗಳಿದ್ದುವು. ಮೈಸೂರಿನಲ್ಲಿ ಭತ್ತದ ಗದ್ದೆಯ ಬೀಜವರಿ ಪದ್ಧತಿ ಪ್ರಕಾರವಿದ್ದು ಖಂಡುಗ ಮಾನವಿತ್ತು; ಅಳಿವಕೋಲು ೧೮ ಅಡಿ ಉದ್ದದ ಮಾನವಾಗಿತ್ತು. ೧ ಎಕರೆ=೧ $^{1}/_{3}$ ಖಂಡುಗ ಬೀಜವರಿ ಎನಿಸಿತ್ತು. ಪೂರ್ಣಯ್ಯನವರ ಕಾಲದಲ್ಲಿ ಮಾನಗಳ ಪ್ರಮಾಣಗಳನ್ನು ಹೆಚ್ಚಿಸಿರುವುದು ಕಾಣ

ಬರುತ್ತದೆ. ಈ ಉದಾಹರಣೆಗಳನ್ನು ಗಮನಿಸಿದರೆ ಕೊಡಗಿನಲ್ಲಿಯ ಆರ್ಥಿಕ ವ್ಯವಹಾರಗಳು ನೆರೆಹೊರೆ ರಾಜ್ಯಗಳ ಮಾದರಿಗಳಿಗೆ ಸ್ಪಂದಿಸಿರುವುದು ಕಾಣಬರುತ್ತದೆ. ಆದರೆ ಸ್ವಂತಿಕೆಯನ್ನು ಉಳಿಸಿಕೊಂಡು ಸ್ವಂತಮಾನಗಳನ್ನು ರೂಪಿಸಿದ್ದು ಗಮನಾರ್ಹ.

ಇನ್ನು ವೀರರಾಜೇಂದ್ರ ಕೋಲಿನ ಅಂಗುಲದ ಉದ್ದ ಪರಿಮಾಣ ಲಿಂಗರಾಜೇಂದ್ರಕೋಲಿನದಕ್ಕಿಂತ ಹೆಚ್ಚು. ಭಿನ್ನರಾಶಿಯ ವಿಭಾಗಗಳು (೮) ಹೆಚ್ಚು. ನಿಖರತೆ ಹೆಚ್ಚು. ಆದರೂ ಸಾಮಾನ್ಯರ ಬಳಕೆಗೆ ಕಷ್ಟ. ಲಿಂಗರಾಜೇಂದ್ರ ಕೋಲಿನಲ್ಲಿ ವಿಭಾಗಗಳು (೪) ಕಡಿಮೆ, ಪೂರ್ಣಾಂಕಗಳಿಗೆ ಹೆಚ್ಚು ಹೊಂದಾಣಿಕೆ ಇದೆ. ಒಟ್ಟಿನಲ್ಲಿ ವೀರರಾಜೇಂದ್ರ ಒಡೆಯನ ಕಾಲದ ಮಾನಗಳನ್ನು ಪರಿಷ್ಕರಿಸಿ ಮುಂದುವರಿಸಿದ್ದು ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ಆಗಿದೆ. ಮತ್ತೆ 'ಭಟ್ಟಿ' ಎಂದರೆ ಭತ್ತ ಬೆಳೆವ ವಿಸ್ತಾರದ ಭೂಮಿಯೂ ಹೌದು; ಅಳೆವ ಪ್ರಮಾಣವೂ ಹೌದು. ಸಾಂದರ್ಭಿಕವಾಗಿ ಅದನ್ನು ಅರ್ಥಮಾಡಿಕೊಳ್ಳಬೇಕು. ಇವುಗಳಲ್ಲಿ ಧಾನ್ಯದ ಅಳತೆಯ ಮಾನವಾಗಿ ಹೇಳುವಾಗ ನೂರು ಸೇರಿಗೆ ಸಮನಾದ ಪಾಟಭಟ್ಟಿ (೧); ಎಂಭತ್ತು ಸೇರಿಗೆ ಸಮನಾದ ಹೇರುಭಟ್ಟಿ (೧) ಎಂಬ ಎರಡು ಬಗೆ ಭಟ್ಟಿಮಾನಗಳಿದ್ದು ಪಾಟಭಟ್ಟಿಯ ಮೌಲ್ಯ, ಹೇರುಭಟ್ಟಿಯ ಮೌಲ್ಯಕ್ಕಿಂತ ಹೆಚ್ಚಿದ್ದುದು ಕಾಣಬರುತ್ತದೆ. ಹೇರುಭಟ್ಟಿಯ ಮಾನಗಳು ಅರಮನೆಯಿಂದ ದಾನದತ್ತಿ ಕೊಡುವ ವ್ಯವಹಾರಕ್ಕೆ, ಪಾಟಭಟ್ಟಿ ಅಳತೆಗಳು ಅರಮನೆಯಿಂದ ಕೊಳ್ಳುವ ವ್ಯವಹಾರಕ್ಕೆ ಸಂಬಂಧ ಗೊಂಡಿದ್ದವು.

'ಶಿಸ್ತು'ವಿನಲ್ಲಿ ಶಿಸ್ತುಸಂಖ್ಯೆ, ವರ್ಗದ ಹೆಸರು, ಭಟ್ಟಿಪ್ರಮಾಣ, ಒಂದು ಬೈಲು(ಗದ್ದೆ)ವಿಗೂ ಇನ್ನೊಂದು ಬೈಲುವಿಗೂ ಇರುವ ಅಂತರ, ಬೈಲುವಿನ ಹಕ್ಕುದಾರ, ಗದ್ದೆಯ ಠಾಣೆಕಲ್ಲು(ಗಡಿ)ಗಳ ವಿವರ, ರೈತವಾರಿ ವರ್ಗ ಪದ್ಧತಿಗನುಗುಣವಾಗಿ ವಿವಿಧ ಬಗೆಯ ಹಿಡುವಳಿ (ವರ್ಗದಾರರ ಹೆಸರು ಸಹಿತ)ಗಳಾದ ಬಾಣೆ, ಬಾರಿಕೆ, ಹಿತ್ಲುಮನೆ, ಊರುಗುಪ್ಪೆ, ಊರುಡುವೆ, ದೇವರಕಾಡು, ಜಮ್ಮಮಲೆ, ಗದ್ದೆ, ಒಂಟಿಹೊಲ ಇತ್ಯಾದಿಗಳ ನಮೂದನೆಯೂ ಇದೆ; ಜಮ್ಮ ಹಾಗು ಸಾಗುಭೂಮಿಗೆ ನಿಗದಿತ ಕಂದಾಯ ದರದ ನಮೂದೂ ಇದೆ; ಸೈನಿಕ ಅಥವಾ ಅರಮನೆ ಸೇವೆ ಸಲ್ಲಿಸಿದವರಿಗೆ ಜಮ್ಮಭೂಮಿ (ವಂಶಪಾರಂಪರ್ಯದ ಹುಟ್ಟು ಹಕ್ಕಿನ ಭೂಮಿ)ಯಾಗಿ ನೀಡಿಕೆ ಹಾಗು ಅದಕ್ಕಾದ ರಿಯಾಯಿತಿ ದರದ ಕಂದಾಯದ ನಮೂದೂ ಕೂಡ ಇದೆ. ಇದಕ್ಕೆ 'ಹುಕುಂ' ರೂಪದ ನಿರೂಪಗಳೂ ಚಾಲ್ತಿಗಿದ್ದುದು ಕಂಡು ಬರುತ್ತದೆ.

ವೀರರಾಜೇಂದ್ರಒಡೆಯನ ನಾಡುವಾರು 'ಶಿಸ್ತು' ದಾಖಲೆ ಇಂದಿಗೂ ಕಾಣಬರುತ್ತದೆ.*೮ ಅದರ ಅಪ್ರಕಟಿತ ಪುಟದ ಒಂದು ಉದಾಹರಣೆಯನ್ನು ಭಾಗಶಃ ಇಂದಿನ ರೂಪದಲ್ಲಿ ಇಲ್ಲಿ ಮುಂದಿನಂತೆ ನೀಡಿದೆ:



( ರಾಜಮುದ್ರ )

ವಿ

ಶ್ರೀ ರುದ್ರ
ಮಹಾರಾಜ ವೀರರಾಜೇಂದ್ರ
ವಡೆಯರ್‍ರು ಸಂಮಸ್ತಾನ ಕೊಡಗು

ಶ್ರೀಮತು ॥ ನಂಮ ಅರಮನೆ ಶೀಮೆವಳಿತವಾದ ನಂಜರಾಯಪಟ್ನಣ ಯರಡೊಳೆ ಸ್ತಳವೆಂದಾವೆ ತೊರ್‍ರೆನೂರ್‍ರು ಶಿರಂಗಾಲ ಮುಂತಾ(ದ) ಸ್ತಳದ ರಹಿತರ್‍ರಿಗೆ ಸಹಾ ಅರಮನೆಯಿಂದ ನೇಮಿಶಿಕೊಟ್ಟುಯಿರ್‍ರುವಂತ್ತಾ ಜಂಮದ ಭೂಮಿಗಳು ಸಾಗಿನ ಭೂಮಿಗಳು ಕುಳನಷ್ಟವಾದ ಭೂಮಿಗಳು ಹೊಲಗಳು ಸಾರ್‍ರಿಗೆ ಮುಂತ್ತಾದ ಭೂಮಿಗಳಂನ್ನು ಅಳದು ಶಿಸ್ತು ನೆಮಕವಾದ್ದು ವೀರರಾಜೇಂದ್ರ ಅಂಗುಲ ೨೮ಕ್ಕೆ ವೀರರಾಜೇಂದ್ರ ಗಜ ೧ ಅಂತ್ತಾ ವೀರರಾಜೇಂದ್ರಗಜ ಲಕ್ಕೆ ಅಳತ್ತೆ ಕೊಲು ೧ಲ್ಲು ಅಳತೆಯಾದ್ದು ಯಿ ಬಗೆ ಭೂಮಿಯಲ್ಲು ಬರತಕ್ಕ ಭತ್ತದ ವಿವರ ಹೊಲ ಸಾರ್‍ರಿಗೆ ಶಿಸ್ತು ಮುಂತಾಗಿ ಶಿಸ್ತು ಮೊಕರೂರ್‍ರು ಆದ್ದು ಅಳತೆಯಾದ್ದು ಕಲಿಸಂದ ೪೯೦೭ನೆ ಕ್ರೋದನ ಸಂವತ್ಸರದಲ್ಲು ಕುಳವಾರ್‍ರಿ ಪ್ರಕಾರಾ

| | | |
|---|---|---|
| ಹೊಸಪಟ್ನಣದಾಗ್ರಾಮ ೧ಕ್ಕೆ | ೧೬೫ | ೭॥೦ ಮೂವೆಗಂಣಹಾಽಲ್ಲು |
| ನಂಜರಾಯಪಟಣದಾಕಾಳೆ | | ಕಾಳಗಉಡನ ಬಸವೆಗಉಡ ಸಾನೆ |
| ಗಉಡನಾಬಸವೆಗಉಡಗೆ | . | ................................ |
| ತೋರಣ ಕಲ್ಲು ನೆಟ್ಟುಕೊಟ್ಟು | | |
| ಯಿರ್‍ರುವ ಉಂಬಳಿ | | |

................................

ಕ್ರಿ. ಶ. ೧೮೦೭ರ ಈ 'ಶಿಸ್ತು'ವಿನಲ್ಲಿ ನಂಜರಾಯಪಟ್ಟಣ ತಾಲೂಕಿನ ಕಾವೇರಿ ಹೊಳೆ ತೀರದ ತೊರೆನೂರು, ಶಿರಂಗಾಲ ಗ್ರಾಮಗಳ ರೈತರಿಗೆ ದೊಡ್ಡ ವೀರರಾಜೇಂದ್ರ ಒಡೆಯನ ಕಾಲದಲ್ಲಿ

ಜಮ್ಮ ಭೂಮಿ, ಸಾಗುಭೂಮಿ, ಕುಳ ನಷ್ಟವಾದ ಭೂಮಿ, ಹೊಲ-ಸಾರಿಗೆ ಇತ್ಯಾದಿ ಭೂಮಿಗಳನ್ನು ವೀರರಾಜೇಂದ್ರ ಅಳತೆ ಮಾನಗಳಲ್ಲಿ ಅಳೆದು ದಾಖಲಿಸಲಾಗಿದೆ. ಬೆಳೆವ ಭತ್ತದ ಪ್ರಮಾಣಗಳನ್ನೂ ದಾಖಲಿಸಿದೆ. ಅಳತೆಗಳ ಭಾಗ, ಸಂಖ್ಯಾ ಸೂಚಕಗಳು, ನಾಣ್ಯಮಾನಗಳಾದ ಗದ್ಯಾಣ ವರಹ, ಹಣ, ಅಡ್ಡ ಹಾಸೆ, ಬೇಳೆ ಇತ್ಯಾದಿ ಆರ್ಥಿಕ ಪಾರಿಭಾಷಿಕ ಶಬ್ದಗಳನ್ನು ಹಾಗು ಸಂಕೇತಗಳನ್ನು ನಿಖರ ಗದ್ಯಭಾಗವಾಗಿ ದಾಖಲಿಸಿರುವುದು ಅಂದಿನ ಆರ್ಥಿಕ ಹಾಗು ಕೃಷಿ ವ್ಯವಸ್ಥೆಯ ಅಚ್ಚುಕಟ್ಟುತನವನ್ನು ತೋರುತ್ತದೆ.

'ಹುಕುಂ' ಎಂದರೆ ಅಪ್ಪಣೆ, ಆಣತಿ; 'ನಾಮೆ' ಎಂದರೆ ದಾಖಲೆ ಎಂದರ್ಥವಿದೆ. ಹುಕುಂನಾಮೆ, ಹಾಗಾಗಿ ಲಿಖಿತ ಅಪ್ಪಣೆಗಳ ಸಂಗ್ರಹ ದಾಖಲ ಆಗಿದೆ. ಜೊತೆಗೆ ದಾಖಲೆಗೊಂಡ ನಿರೂಪ ಎಂಬ ಧ್ವನಿಯುಕ್ತ ಅರ್ಥವನ್ನು ಹೊಂದಿದೆ. ಇದು ಕೇವಲ ಒಡೆಯ ಮಾಡುವ ಆಣತಿ, ದುಡಿಯುವವ ಪಾಲಿಸಬೇಕಾದ ಆಣತಿ ಎಂದಷ್ಟಕ್ಕೆ ಸೀಮಿತಗೊಳ್ಳುವುದಿಲ್ಲ ಎಂಬುದು ದೊಡ್ಡವೀರರಾಜೇಂದ್ರ ಕಾಲದ ಹುಕುಂನಾಮೆ ಹಾಗು ನಿರೂಪಗಳನ್ನು ಗಮನಿಸಿದರೆ ತಿಳಿಯುತ್ತದೆ. (ಇದು ಲಿಂಗರಾಜೇಂದ್ರ ಒಡೆಯನಲ್ಲೂ ಕಾಣಬರುತ್ತದೆ- ಅವುಗಳಲ್ಲಿ ಜನಭಾಷೆಯ, ಜನಬದುಕಿನ ಸಂಗತಿಗಳು ಹಾಗು ಆಡಳಿತವನ್ನು ನೇರ್ಪುಗೊಳಿಸುವ ಪ್ರಯತ್ನಗಳ ನಮೂನೆ ಕಾಣಬರುತ್ತದೆ.) ಈ ರಾಜನ ಹುಕುಂನಾಮೆಯು ರಿಕಾರ್ಡ್ ರೂಂನಲ್ಲಿ ಇಂದು ಲಭ್ಯವಾಗದಿದ್ದರೂ ಫೈರಿಹನು ೧೮೯೯ರ ತನ್ನ ಕೊಡಗು ರೆವಿನ್ಯೂ ಮಾನ್ಯುಯಲ್ (ಪುಟ. ೧೬೮)ನಲ್ಲಿ 'ಗಟ್ಟಿಜಮ್ಮ'ದ ಬಗ್ಗೆ ಜೆ. ಬಿ. ಲೈಲ್‌ನನ್ನು ಉದ್ಧೃತ ಮಾಡುತ್ತ **Hukumnama of Veerarajendra** ಎಂದು ಎರಡೆರಡು ಬಾರಿ ನಮೂದಿಸಿ, ಅದರ ಅನುವಾದ ಭಾಗವನ್ನು ನೀಡಿರುವುದೇ, ಅದರ ಅಸ್ತಿತ್ವದ ಸಾಕ್ಷಿ ಆಗಿದೆ. ಆ ಹುಕುಂನಾಮೆಯ ೧೭ನೇ ಪ್ಯಾರಾದಲ್ಲಿ ಜಮ್ಮ ರೈತರ ಹಕ್ಕುಗಳ ಬಗ್ಗೆ ಇದ್ದ ಹುಕುಮನ್ನು ಆಂಗ್ಲಭಾಷೆಯಲ್ಲಿ ಜೆ. ಬಿ. ಲೈಲ್‌ನು ೧೮೮೫ರಲ್ಲಿ ಅನುವಾದಿಸಿರುವುದನ್ನು ಫೈರಿಹನು ಹೀಗೆ ನಮೂದಿಸಿದ್ದಾನೆ*೯:

*Translation of an extract from the 17th paragraph of the **Hukumnama of Veerarajendra :***

*If the Jama* (probably a Coorg corruption of the Sanskrit word Jenum, birth) ryots saying that they do not require their old land voluntarily resign!* (synonymous with Nazire) and the house upon it and demand other land as **Jama**, a handfull of the soil (gatti) should be received from them as a mark of their relinquishment of their right and when the land and house which they wish to take or given to them, **nazar kanike** should be received as follows:*

*If they take land equal (in extent) to that which they give up no **nazar kanike** is received. But if what is given to them be more than that which they relinquished, a **nazar kanike** of 2 1/2 **bhadri pagodas** per 100 bhattis should be received and a handful of soil should be given to them. If in conformity with orders (any person) takes land as Jama newly (is included for the first time in the Jama class of ryots) a **nazar kanike** of 2 1/2 bhadri pagodas should be received from him and a handful of soil of the land should be given to him as Jama.*

ಅಂದರೆ ವೀರರಾಜೇಂದ್ರ ಒಡೆಯನ ಹುಕುಂನಾಮೆಯು ಗಟ್ಟಿಜಮ್ಮದ ಸಂಬಂಧ ಹೊರಡಿಸಿರುವ ಹುಕುಮಿನ ರೀತ್ಯಾ, ಜಮ್ಮರೈತರು ತಮಗಿರುವ ಹಳೇಜಮೀನು ಅಥವಾ ಮನೆಯನ್ನು ಸ್ವಯಿಚ್ಛೆಯಿಂದ ಬಿಟ್ಟುಕೊಟ್ಟು, ಬೇಡಿಕೆ ಸಲ್ಲಿಸಿ, ಬದಲು ಬೇರೊಂದು ಜಮೀನನ್ನು ಜಂಮವಾಗಿ ಪಡೆಯಬಹುದು. ಜಮ್ಮ ರೈತರು ಭೂಮಿಯ ಮೇಲಿನ ಹಕ್ಕನ್ನು ಬಿಟ್ಟುಕೊಡುವ ಸಂಕೇತವಾಗಿ ಒಂದು ಹಿಡಿ ಮಣ್ಣನ್ನು (ಗಟ್ಟಿ) ಪಡೆಯುವವನಿಗೆ ನೀಡಬೇಕು. ಅಥವಾ ಇಚ್ಛಿಸುವ ಜಮೀನು ಹಾಗು ಮನೆಯನ್ನು ಪಡೆಯುವಲ್ಲಿ 'ನಜರುಕಾಣಿಕೆ' ನೀಡಬೇಕು. ಅಂದರೆ ತ್ಯಜಿಸಿದ ಜಮೀನಿನ ಪ್ರಮಾಣಕ್ಕಿಂತ ಹೆಚ್ಚಿನ ಬದಲಿ ಜಮೀನು ಪಡೆದಿದ್ದರೆ, ೧೦೦ ಭಟ್ಟಿಗೆ ೨ ೧/೨ ಭಟ್ಟಿ ಪಗೋಡಗಳಂತೆ ನಜರು ಕಾಣಿಕೆ ನೀಡಬೇಕು.

ಹೀಗೆಲ್ಲ ರೂಪುಗೊಂಡ ವೀರರಾಜೇಂದ್ರ ಒಡೆಯನ ಹುಕುಂನಾಮೆಯ ಮಾರ್ಗದರ್ಶಿ ಆಣತಿಗಳು ಲಿಂಗರಾಜೇಂದ್ರ ಒಡೆಯನಿಗೆ ಮುಂದೆ ಮಾರ್ಗದರ್ಶಕವಾಗಿ ಅವನ ಹುಕುಂ ನಾಮೆಯ ೫೪ ಆಣತಿಗಳು ರೂಪುಗೊಳ್ಳಲು ಪೋಷಕ ಪ್ರೇರಣೆಯನ್ನು ಒದಗಿಸಿದುವು. ಈ ಹುಕುಮುಗಳ ಅನ್ವಯಗಳು, ರಾಜನಿಂದ ದತ್ತವಾಗಿರುವ ನಿರೂಪಗಳಲ್ಲಿ ಅಡಕವಾಗಿವೆ. ಈ ದೃಷ್ಟಿಯಿಂದ ಕೆಲ ಅಪ್ರಕಟಿತ ನಿರೂಪಗಳನ್ನು ಗಮನಿಸಬಹುದು.

ಮಹಾರಾಜ ವೀರರಾಜೇಂದ್ರ।

ವಡೆರ್ರಾ ಸಮುಸ್ತಾಂನ್ ಕೊಡಗು।

ಶ್ರೀಮತು ॥ ॥ ಅರಮನೆ ಶಿಮೆ ವಳತವಾದ ಚೆಟ್ಟಿಯತ್ತ ಮೂರ್ನಾಡು ಪೈಕಿ ಕುತ್ತಾನಾಡು ಗ್ರಾಮದ ಕಾಳಿಂಗಳ ಮಾದೂನಿಗೆ ಅಪ್ಪನೆ ಕೊಡಿಸ್ತ

ಸನದು ಬುದ್ಧಿ ನಿರೂಪು। ಆದಾಗಿ ನಿನ್ನು ಸಂನಿದಾನಕ್ಕೆ ಬಂದೂ
ಆರಂಬದ ಬಗ್ಗೆ ಆಽ
ಳು ಕಾಳು ಯಿಲ್ಲ ಯಂತ್ತಾ ಅರ್‍ರಿಕೆ ಮಾಡಿಕ್ಹೊಂಡದರ್‍ರಿಂದ ಯಿಾಗ ನಿನಗೆ
ಅಪ್ಪಣೆ ಕೊ
ಡ್ಸಿಯಿರ್‍ರುವದು ಬೆಪ್ಪುನಾಡ ಅರಮನೆ ಪಂಣುದ ಕೆಂಬಟ್ಟೆ ಹೊಲೆರ ಕರ್‍ರಂಬ ಗಂ
ಡು ಜನ ೧ಯಿವನ ತಂಗಿ ಹೆಂಣು ಜನ ನಾಲ್ಕು ವರ್‍ರುಷದ ಹೆಂಣು ಹುಡುಗಿ ೧
ಅಂತ್ತು
ಜನ ೩ ಮೂರ್‍ರೂ ಜನವಂನ್ನೂ ನಿನಗೆ ಜಂಮಕ್ಕೆ ಅಪ್ಪಣೆ ಕೊಡ್ಸಿ
ಯಿರ್‍ರುವದರ್‍ರಿಂದಾ
ಯಿಾ ಹೊಲೆರಂನ್ನು ನಿಂನ ಮನೆಯಲ್ಲಿ ಯಿಟ್ಟುಕೊಂಡು ನಿಂನ ಪುತ್ರ ಪಾಉತ್ರ
ಪಾರಂಪರ್‍ರೆ
ಯವಾಗಿ ಮನೆ ಬದುಕು ಮಾಡ್ಸಿಕೊಳುತ್ತಾ ಸ್ವಾಮಿಕಾರ್‍ಯ ಮುಖ್ಯವಾಗಿ
ನಡೆಕೊಳುವದಾ
ಗಿ ಯಂಬ ಸನದು ನಿರೂಪಕ್ಕೆ ಅಪ್ಪಣೆ ಪ್ರಕಾರ ಕಲಿಸಂದ ೪೯೦೧ನೇ
ಶಿದ್ದಾರ್‍ತ್ತಿ ಸಂ।
ಯಿಾ ಪುಶ್ಯ ತಾರ್‍ರೀಕು ೫ನೇ ಬುದುವಾರಾ ಕಾಸಾ ರಹಸ್ಯದ ಕಂಬಯನ
ಬರಹಾ।

ಈ ರಾಜನ ಕಾಲದಲ್ಲಿ ಕಲಿಸಂವತ್ಸರವನ್ನು ನಮೂದಿನುವ ಪದ್ಧತಿ ಇದ್ದು ಕ್ರಿ. ಶ. ೧೮೦೦ರ ಈ ನಿರೂಪದ ಸಂಗತಿ ವೀರರಾಜೇಂದ್ರಒಡೆಯನ ಹುಕುಂನಾಮಾದ ಅನ್ವಯವಾಗಿತ್ತೆನ್ನಲು ಲಿಂಗರಾಜೇಂದ್ರ ಒಡೆಯನ ಹುಕುಂನಾಮೆಯ ೧೧, ೧೨, ೨೯, ಆಣತಿಗಳಲ್ಲಿ ಬರುವ ಇಂತದೇ ಸಂದರ್ಭದ ಉಲ್ಲೇಖಗಳನ್ನು ಹೋಲಿಸಿದರೆ ತಾರ್ಕಣೆ ದೊರೆಯುತ್ತದೆ. ಸದ್ಯದ ನಿರೂಪದಲ್ಲಿ ನಾಡಿನ ರೈತನೊಬ್ಬ ಆರಂಬದ ನೆರವಿಗಾಗಿ ಅರಿಕೆ ಮಾಡಿಕೊಂಡುದುದಕ್ಕೆ ಅರಮನೆ ಖಾಸಗಿ ಕೃಷಿ ಜಮೀನಿನ (ಪಣ್ಯ) ತರದಲ್ಲಿದ್ದ ದಲಿತ ಕೃಷಿಕಾರರ ಸೇವೆಯನ್ನು ವಂಶಪಾರಂಪರ್ಯವಾಗಿ ಪಡೆದುಕೊಳ್ಳಲು ನಾಡಿನ ಆಡು ಮಾತಿನಲ್ಲಿ ಸನ್ನದು ನೀಡಿದ ಸಂಗತಿ ಇದೆ. ಆದರೆ ಹೀಗೆ ಬಿಟ್ಟುಕೊಡುವಲ್ಲಿ ರೈತರ ಮನೆತನ, ನೆಲೆ ಹಾಗು ಕೃಷಿ ದುಡಿಮೆಗಾರರ ಸಂಪೂರ್ಣ ವಿವರವನ್ನು ಹಾಗು ಅವರ ರಕ್ಷಣೆಯ ಭಾರವನ್ನು ಮುಂದೆ ದುಡಿಮೆಗಾರರನ್ನು ದಿಕ್ಕಾಪಾಲು ಮಾಡದಿರುವಂತೆ ನಮೂದಿಸಿ ಪಡೆದ ರೈತರಿಗೆ ಆಂತರಿಕ ನಿಬಂಧನೆಯನ್ನು ಸೂಚಿಸಿರುವುದು ಒಡೆಯನ ಆಡಳಿತದ ದಕ್ಷತೆ, ದೂರದೃಷ್ಟಿಯ ಸಂಕೇತವೆನಿಸುತ್ತದೆ. ಇಲ್ಲಿ ಕೇವಲ ಜೀತ ಎಂಬ ದೃಷ್ಟಿ ಇಲ್ಲದೆ, ಮನೆಮಕ್ಕಳಂತೆ ದುಡಿಮೆಗಾರರನ್ನು ನೋಡಿಕೊಳ್ಳುತ್ತಿದ್ದ ವಾತಾವರಣವಿದ್ದುದು ತಿಳಿಯುತ್ತದೆ. ಇಂದಿಗೂ ಕೊಡಗಿನ ಅನೇಕ ಪ್ರಾಚೀನ ಮನೆತನಗಳಿಗೆ ವಿದ್ಯಾವಂತ ದುಡಿಮೆಗಾರರಾಗಿಯೂ ಪೂರ್ವಪರಂಪರೆಯ ವಾತ್ಸಲ್ಯ, ಪ್ರೀತಿಗಳನ್ನು ದಕ್ಕಿಸಿಕೊಂಡು ಬರುತ್ತಿರುವ ಸಾಕಷ್ಟು ಉದಾಹರಣೆಗಳಿವೆ. ಜೆ. ಬಿ. ಲ್ಯಲ್‌ನು ಗಮನಿಸಿರುವ ಹುಕುಂನಾಮೆಯ ೧೭ನೇ ಪ್ಯಾರಾದ ಅನ್ವಯವೋ ಎಂಬಂತೆ ಗಟ್ಟಿಜಮ್ಮದ ಇನ್ನೊಂದು ಅಪ್ರಕಟಿತ ನಿರೂಪವನ್ನು ಈಗ ಗಮನಿಸಬಹುದು:

ಮಹಾರಾಜ ವೀರರಾಜೇಂದ್ರ
ವಡೆರ್‍ರು ಸಮುಸ್ತ್ಥಾನ ಕೊಡಗು

ಶ್ರೀಮತು ॥ ॥ ಅರಮನೆ ಶಿಮೆ ವಳಿತವಾದ ಕಾಂತ್ತ ಮುರ್ನಾಡು
ಪಯಿಕಿ ಕಿಗ್ಗಾಲು ಹರ್‍ರಿಗುಂ
ದ ಗ್ರಾಮದಲ್ಲು ಯಿರ್‍ರುವ ಪೆಂಡಿ ಬನದ ರಾಮನಿಗೆ ಅಪಣೆ
ದಯಾಪಾಲಿಸ್ತ ಸನದು ಬುದಿ ನಿರೂಪ ಆದಾಗಿ
ಯಿಾಗ ನಿನಗೆ ಹೊಸ್ತಾಗಿ *ಗಟಿಜಂಮಕೆ* ಅಪ್ಪಣೆ ಕೊಡಿಶಿ ಯಿರ್‍ರುವುದು
ಯಿ ನಾಡು ಯಿದೆ ಗ್ರಾಮದಲ್ಲಿ ಕು
ಳ ನಷ್ಟವಾಗಿ ಅರಮನೆ ತರಕೆ ಸೆರ್‍ರಿದ ಕುಳುವಂಡ ಭೂಮಿ ೧ರ ಪ್ರಾಕು
ಕೆಳಿಬಟಿ ೪೦೦ಕೆ ಲೆಕವಾದ ಗದ್ದೆ
೨೮ಕೆ ಅಳತೆಯಾದು ವಿರರಾಜೆಂದ್ರ ಅಂಗುಲ೨೮ಕೆ ವಿರರಾಜೆಂದ್ರ
ಗಜ ೧ ಅಂತ್ತಾ ಗಜ ೮ಕೆ ಅಳ
ತೆ ಕೊಲು ೧ರಲ್ಲು ಅಳತೆಯಾದ ಕೊಲ್ಲು ೧೭೨೦ ///-ನೆ ಸಲೆ
*ವಿರರಾಜೇಂದ್ರ ಗಜ ೮೫೮೩ಯೆ*
೦ಟು ಸಾವಿರದ ಆೖನ್ನೂರ ಯಂಬತ್ತ ಮುರಕೆ ಬತ ಬರ್‍ರುವ ಹೆರ್‍ರುಬಟಿ
೩೫೦೭೨ ॥೦ನೆ ಹೆಚ್ಚಿಗೆ
ವಜಕಳದು ಬಟಿ। ೧೨ ॥೦ ಕಾಲು ಬಟಿಯು ಯರಡು ಅರೆ ಹಾನೆನುಳಿದು
ಶುದ ನಿಗದಿ ಕೀಳಿ ಬತ್ತ ಬರ್‍ರು
ವ ಹೆರ್‍ರು ಬಟಿ ೩೫೦ ಮುಂನ್ನೂರ್‍ರೈವತ್ತು ಯಿಾ ಕುಳದ ಬಾಣೆ ವಿವರಾ
ನರ್‍ರಿಮುತ್ತಿ ಬಾಣೆ ೧ ಕಾಡು
ಬಾಣೆ ೧ ಉಬಯಂ ಯರಡು ಯಿದಕೆ ಸೇರಿದ ತೋಟ ತೊಡಿಕೆ
ಮನೆದಳ ಮುಂತ್ತಾಗಿ ಅರಮನೆ ತರ
ದಿಂದ ನಿನಗೆ ಗಟಿ ಯೆತ್ತಿ ಶಿ ಜಂಮಕೆ ಅಪ್ಪಣೆ ಕ್ಹೊಡಿಶಿ ಯಿರ್‍ರುವದರ್‍ರಿಂದ
ಯಿಾ ಬೂಮಿಯಿಂದ ಕಾಲ
ಕಾಲಂಪ್ರತಿಯಲ್ಲು ಅರಮನೆಗೆ ಬರತ್ತಕ ಉಂಬಳಿಗಾಣಕೆಯುಂನ್ನು
ವಪಿಸುತ್ತ ಯಿಾ ಭೂಮಿಯುಂನ್ನು
ನಿಂನ ಪುತ್ರ ಪಉತ್ರ ಪಾರಂಪರ್‍ಯವಾಗಿ ಜಂಮವಾಗಿ ಅನ್ನುಭವಿಶಿಕೊಂಡು
ಸ್ವಾಮಿ ಕಾರ್‍ಯ ಮುಖ್ಯವಾಗಿ
ನಡಕೊಳುವದಾಗಿ ಯಂಬ ಸನದು ನಿರ್‍ರುಪಕೆ ಅಪಣೆ ಪ್ರಕಾರ
ಕಲಿಸಂದ ೪೯೦೭ನೆ ಕ್ರೊದನ ಸಂ।
ಯಿ ಪಾಽಲ್ಗುಣ ೨೫ನೆ ಸ್ತಿರವಾರ ಬರದಾತ ಕಾಸ ರಹಸ್ಯದ ಕಾಳು

ಕ್ರಿ. ಶ. ೧೮೦೭ರ ಈ ನಿರೂಪದಲ್ಲಿ ಹುಕುಂನಾಮೆಯ ನಿಯಮಾಣತಿಗನುಗುಣವಾಗಿ, ರೈತನೊಬ್ಬನಿಗೆ ಗಟ್ಟಿ ಜಂಮದ ಭೂಮಿ ನೀಡಿಕೆ ಸಂಬಂಧದಲ್ಲಿ, ಅರಮನೆಯ ವಶಕ್ಕೆ ಬಂದಿದ್ದ (ಹಕ್ಕುದಾರರಿಲ್ಲದೆ, ಅನಾಥವಾದ ಕುಳುವಂಡ ಮನೆತನದ ಭೂಮಿ) ಜಮೀನನ್ನು ನಿಖರವಾಗಿ ಅಳತೆಮಾಡಿ ಕೊಟ್ಟ, ವಂಶಪಾರಂಪರ್ಯವಾಗಿ ಅನುಭವಿಸುವ ಹಕ್ಕನ್ನು ಮಂಜೂರು ಮಾಡಿದ ಸಂಗತಿಯಿದೆ. ಸಲ್ಲಿಸಬೇಕಾದ ಉಂಬಳಿ ಜಮೀನು ದರವನ್ನು ಸೂಚಿಸಿ, ನಾಡಿನ ಸೇವೆಯನ್ನು ಸಲ್ಲಿಸುವ ಬಗ್ಗೆ ಹೇಳಿದೆ. ನಿರೂಪದ ಗದ್ಯದಲ್ಲಿ ಆಡಳಿತ ಭಾಷೆಯ ಸೊಗಡಿನ



ಜೊತೆಗೆ ನಾಡಿನ ಭಾಷೆಯನ್ನು, ಬದುಕನ್ನು ಅಳವಡಿಸಿಕೊಂಡಿರುವ ಬಗೆಯು ಎದ್ದು ಕಾಣುತ್ತದೆ. ಭಟ್ಟಿಯ ಮಾನಗಳ, ಸಂಕೇತಗಳ ವಿವರ, ನಿರೂಪ ಹೊರಡಿಸಿದ ಕಾಲ, ಬರದಾತನ ಹೆಸರು ಸಹಿತವಾಗಿ ನಮೂದುಗಳು ಕಾಣಬರುತ್ತವೆ. ಸೇರಿನ ಕಿರು ಹಾಗು ಭಿನ್ನರಾಶಿ ಮಾನಗಳಾಗಿ 'ಹಾನೆ'ಯನ್ನು ನೀಡಿದೆ. ಒಂದು ಹಾನೆಯು ಚಿಕ್ಕ ಪವನಿನ ೧/೫ ಭಾಗಕ್ಕೆ ಮೌಲ್ಯದಲ್ಲಿ ಸಮನಾಗಿರುತ್ತಿತ್ತು. ಅಂದರೆ ವಸ್ತು ಹಾಗು ಹಣದ ರೂಪಗಳಲ್ಲಿ ಇದು ಬಳಕೆಯಾಗುತ್ತಿದ್ದ ಬಗ್ಗೆ ವಿದಿತವಾಗುತ್ತದೆ.

ರೈತರಿಗೆ ಕೊಡುವ ಸನ್ನದು ನಿರೂಪದಲ್ಲಿ ರಾಜನ ಸ್ವಹಸ್ತವಿದ್ದು, ಅದರ ತದ್ವತ್ ಬರಹವನ್ನು ಶಿಸ್ತು-ಹುಕುಂ-ನಿರೂಪಗಳ ಪುಸ್ತಕದಲ್ಲಿ ದಾಖಲು ಮಾಡಿರುವುದು ಕಾಣಬರುತ್ತದೆ. ಅವುಗಳಲ್ಲಿ ಉದಾಹರಣೆಗೆ ಅಪ್ರಕಟಿತ ೨ ನಿರೂಪಗಳನ್ನು ಗಮನಿಸಿದರೆ ಕುತೂಹಲಕರ ಅಂಶಗಳು ಕಾಣಬರುತ್ತವೆ.

ಕ್ರಿ. ಶ. ೧೮೦೪ರ ನಿರೂಪ:

ಶ್ರೀರುದ್ರ
ಮಹಾರಾಜ ವೀರರಾಜೇಂದ್ರ
ವಡೆಯರ‍್ರು ಸಂಸ್ಥಾನ ಕೊಡಗು

ಶ್ರೀಮತು ॥ । ಅರಮನೆ ಶಿಮೆ ವಳಿತವಾದ ಕುಯಂಗೆರ‍್ರಿ ನಾಡ ಪೈಯ್ಕಿ ಕಾರುಗುಂಧ ಗ್ರಾಮದಲ್ಲು ಯಿರುವ ಅವಿ( ಮಿಾ )ಲಿ ಮಂದೈಯ್ಯನಿಗೆ ಅಪ್ಪಣೆ ದಯಾಪಾಲಿಸ್ತ
ಸಾಧನದ ಬುಧಿ ನಿರೂಪಾ ಆದಾಗಿ। ನಿನೂ ಸ್ವಾಮಿಕಾರ್ಯ್ಯ ಧುರಂಧರನಾಗಿ ನಂಮ್ಮ ಉಪ್ಪಿಗೆ
ಸರ‍್ರಿಯಾಗಿ ಆಪ್ತನಾಗಿ ನಂಮ್ಮ ತಹರಾಲು ಸ್ವಾಮಿದ್ರೋಹಿ ಜನವಂನ್ನೂ ಪತ್ತೆ ಹತ್ತಿಶಿ ಅರಮನೆ
ಗೆ ವಪ್ಪಿಸಿದ್ದರ‍್ರಿಂದ ನಿನಗೆ ಅಪ್ಪಣೆ ಕೊಡ್ಸಿಯಿಧಿತೂ। ಯಿದೆ ನಾಡು ಯಿದೆ ಗ್ರಾಮದಲ್ಲು । ಕು
ಳ ನಷ್ಟವಾಗಿ ಅರಮನೆ ಚರಾದಾಯಕ್ಕೆ ಸೆರ‍್ರಿದ 'ಬೆಳಂದಮ್ಮನ ಭೂಮಿ' ಕೆಳಿಭಟ್ಟಿ ೧೦೦೦ ವಂದುಸಾವಿರ ಭಟ್ಟಿ ಭೂಮಿ ಯಿದಕ್ಕೆ
ಸೆರ‍್ರಿದ ಗಧೆ ಬಾಣೆ ಬಾರ‍್ರಿಕೆ ತೋಟ ತೊಡಿಕೆ ವ್ರಿತ್ತಿಉ ಮನೆದಳ
ಸಹ ನಿನಗೆ ಉಂಬಳಿಯಾಗಿ ನಡೆಶಿಕೊಡುತ್ತದೆ ಆದ್ದರಿಂದಾ ಯಿಾಭೂ
ಮಿಂದ ಅರಮನೆಗೆ ಕೊಡತಕ್ಕಧರಲ್ಲಿ ೧೦೦ ನೂರ‍್ರು ಭಟ್ಟಿಭೂಮಿಗೆ ನಾಂಣ್ಯ ಗ ॥। ಮು
ಕ್ಕಾಲು ವರಹಾದ ಮೆರ‍್ರೆಗೆ ಕಾಲಕಾಲಂ ಪ್ರತಿಯಲ್ಲು ಅರಮನೆಗೆ ಉಂಬುಳಿಗಾಣಿಕೆ
ಯಂನ್ನು ವಪ್ಪಿಸುತ್ತ ಉಳಿಕೆ ಯಾವತ್ತಂನ್ನು ನಿಂನ್ನ ಪುತ್ರ ಪಉತ್ರ ಪಾರಂಪರ್ಯವಾಗಿ।
ಉಂಬುಳಿಯಾಗಿ।ಅನುಭವಿಸಿಕೊಂಡು। ಸುಖದಿಂದಾ ಸ್ವಾಮಿಕಾರ್ಯ್ಯ ಮುಖ್ಯವಾಗಿ ನ
ಡದು ಕೊಳುವದಾಗಿ ಯಂಬೀ ಸಾಧನದ ನಿರೂಪಕ್ಕೆ ಅಪ್ಪಣೆ ಪ್ರಕಾರಾ ಕಲಿಸಂದ
೪೯೦೫ನೇ ರುಧಿರೊದ್ಗಾರ‍್ರಿ ಸಂ। ಯಿಾ ಆಶ್ವಿಜ ೨೦ನೆ ಬುಧವಾರಾ ಕಾಸಾ ರಹಶ್ಯದ
ಶಂಬು ಬರಹಾ
-ಯಿಾ ನಿರೂಪಕ್ಕೆ ಕಾಸಾ ದಸಕತು ಪಾರ್ಶಿ ಬರಹ ಈದ ಮೊಹರ ಆಗಿ ಯಿಧೆ ಯಿಾ ಅಸ
ಲು ನಿರೂಪ। ಮಂದೈಯ್ಯಗೆ ಸಂತ್ಯೂ ಯಂಬುದರ ಧನದ ನಿರೂಪದ ನಕಲು
ಯಿರಲು ಬದಲಾಗಿ ಯಿ ನಿರೂಪ ಮುಂದೆ ಬರದದೆ

* * *

ಕ್ರಿ. ಶ. ೧೮೦೬ರ ನಿರೂಪ:

ಶ್ರೀರುದ್ರ
ಮಹಾರಾಜ ವಿರರಾಜೇಂದ್ರ
ವಡೆಯರ‍್ರು ಸಮಸ್ಥಾನ ಕೊಡಗು

ಶ್ರೀಮತು ॥ ॥ ಅರಮನೆ ಶಿಮೆ ವಳಿತವಾದ ಕುಯ್ಯಂಗೆರ‍್ರಿನಾಡ ಪೈಯ್ಕಿ ಕಾರ‍್ರುಗುಂದದ ಗ್ರಾಮದಲ್ಲು ಯಿರುವ ಯಿಾಶ್ವರೈಯ್ಯನಿಗೆ ಅಪ್ಪಣೆ ದಯಪಾಲಿಸ್ತಾ
ಸಾಧನದ ಬುಧಿನಿರೂಪಾ ಅದಾಗಿ ನಿನ್ನೂ ಸ್ವಾಮಿಕಾರ್ಯ್ಯ ಧುರಂಧರನಾಗಿ ನಂಮ್ಮ
ಉಪ್ಪಿಗೆ ಸರ‍್ರಿಯಾಗಿ ಯಿರ‍್ರುವದರ‍್ರಿಂದಾ ನಿನಗೆ ಅಪಣೆ ಕೊಡಿಶಿಯಿಧಿತ್ತು ಯಿದೆ ನಾ
ಡು ಯಿದೆ ಗ್ರಾಮದಲ್ಲು ಯಿರ‍್ರುವ 'ಬೆಳಂದಮ್ಮನ ಕೊಪ್ಪ'ದ ಭೂಮಿಯಂನ್ನು
ನಿನಗೆ ಜಂಮಕ್ಕೆ ಅಪ್ಪಣೆ ದಯಾಪಾಲಿಶಿ ಯಿರ‍್ರುವದರ‍್ರಿಂದಾ ಯಿಾ ಭೂಮಿ ಯಂ

ನ್ನು ನಿನಗೆ ಉಂಬಳಿಯಾಗಿ ನಡಶಿಕೊಡುತದೆ ಆದ್ದರಿಂದಾ ಯಿಾ ಭೂಮಿ ಯಿಂ

ದಾ ಅರಮನೆಗೆ ಕೊಡತಕ್ಕದ್ದರಲ್ಲಿ ೧೧೦ ನೂರು ಭಟ ಭೂಮಿಗೆ ನಾಂಣ್ಯ ಗ॥೬

ಮುಕ್ಕಾಲು ವರಹದ ಮೆರ್‍ರೆಗೆ ನಿನ್ನೂ ಮಾಡುವ ಭೂಮಿಯಿಂದಾ ಉಂಬಳಿ ಕಾ

ಣಿಕೆಯಂನ್ನೂ ಕಾಲ ಕಾಲಂ ಪ್ರತಿಯಲ್ಲು ಅರಮನೆಗೆ ವಪ್ಪಿಸುತ್ತಾ ಉಳಿಕೆ

ಯಾವತಂನ್ನೂ ನಿನ್ನಾ ಪುತ್ರಾ ಪಉತ್ರಾ ಪಾರಂಪರ್‍ಯವಾಗಿ ಉಂಬಳಿಯಾಗಿ

ಅನುಭವಿಶಿಕೊಂಡು ಸ್ವಾಮಿಕಾರ್‍ಯ್ಯ ಮುಖ್ಯವಾಗಿ ನಡಕೊಳುವದಾಗಿ ಯಿಂ

ಬ ಭೂಮಿ ಸಾಧನದ ನಿರೂಪಕ್ಕೆ ಅಪಣೆ ಪ್ರಾಕಾರ ಕಲಿಸಂದ ೪೯೦೭ನೆ

ರಕ್ತಾಕ್ಷಿ ಸಂ। ಯಿಾ ಜೇಷ್ಟ ೭ನೆ ಬುಧವಾರ ಕಾಸರಹಸ್ಯದ ಶಂಬು ಬರಹಾ

ಯಿಾ ಸಾಧನದ ನಿರ್‍ರೂಪಕ್ಕೆ ಖಾಸ ದಸ್ಕತ್ತು 'ವೀ' ಯಂಬ ವಂದು ಅಕ್ಷಾರದ ಮೊ

ಹರು ಸಹ ಆಗಿಯಿದೆ ಯಿಾ ಅಸಲು ನಿರೂಪವಂನ್ನೂ ಯಿಾ ಯಿಾಶ್ವರೈಯ್ಯಾಗೆ

ಕೊಟ್ಟುಯಿದೆ ಯಂಬ ಸಾಧನದ ನಿರೂಪದ ನಕಲು

ಯಿಾ ಪ್ರತ್ತಿ ನಿರೂಪ ಅರಮನೆಗೆ ಹಿಂದಕ್ಕೆ ವದ್ದಿಯಿದೆ ಭೂಮಿಗೆ ಬದಲಿ

ನಿರೂಪ ಆಗಿ ಪ್ರತ್ತಿ ಮುಂದೆ ಬರದದೆ

ಈ ಎರಡೂ ನಿರೂಪಗಳನ್ನು ಗಮನಿಸಿದರೆ, ಬರೆದವನು ಒಬ್ಬನೇ ವ್ಯಕ್ತಿಯಾದರೂ ಶಬ್ದಪ್ರಯೋಗ ಹಾಗು ಅಕ್ಷರಗಳಲ್ಲಿ ಕೆಲವೆಡೆ ವ್ಯತ್ಯಾಸ ತೋರಿದ್ದಾನೆ. ಭಾಷೆ ಸರಳವಾಗಿದ್ದು ಆಡಳಿತ ಭಾಷೆಯ ಯಾಂತ್ರಿಕತೆಗೆ ಪಕ್ಕಾಗದೆ ಗಮನ ಸೆಳೆಯುತ್ತದೆ. ಕೆಲವೆಡೆ ಸಜಾತಿ ದ್ವಿತ್ವಗಳ ಬದಲಿಗೆ ಮಹಾಪ್ರಾಣ ಬಳಸಿ ಶಬ್ದಗಳನ್ನು ಬರೆದಿದೆ, (ಬುದ್ದಿ ನಿರೂಪ = ಬುಧಿ ನಿರೂಪ). ಕೆಲವೆಡೆ ಶಬ್ದಸ್ಖಾಲಿತ್ಯವಿದ್ದರೂ ಅರ್ಥಕ್ಕೆ ಭಂಗ ಬರುವುದಿಲ್ಲ. ಕೆಲವೆಡೆ, ದೀರ್ಘಗಳನ್ನು ಒತ್ತುಗಳನ್ನು ಸಾಂದರ್ಭಿಕವಾಗಿ ಊಹಿಸಿ ಕೊಳ್ಳಬೇಕಾಗುತ್ತದೆ.

ನಿರೂಪದ ವಸ್ತುವಾಗಿ, ಅರಮನೆ ಸೀಮೆಯಲ್ಲಿನ ನಾಡು, ಗ್ರಾಮ, ನಿರ್ದಿಷ್ಟ ವ್ಯಕ್ತಿಗಳು, ಅವರು ಸಲ್ಲಿಸಿದ ಸೇವೆ, ಅದಕ್ಕಾಗಿ ಉಂಬಳಿಯಾಗಿ, ಜಮ್ಮವಾಗಿ ನೀಡಿದ್ದು, ಸಲ್ಲಿಸಬೇಕಾದ ಉಂಬಳಿಗಾಣಿಕೆಯ ದರ, ಚಲಾವಣೆಯ ನಾಣ್ಯ, ಕಲಿವರ್ಷದಲ್ಲಿ ಸೂಚಿಸುವ ನಿರ್ದಿಷ್ಟ ಸಂವತ್ಸರ, ಮಾಸ, ವಾರ, ದಿನಗಳ ನಮೂದು, ನೀಡಿದ ಭೂಮಿಗೆ ವ್ಯಕ್ತಿಯಿಂದ ನಿರೀಕ್ಷಿಸುವ ಪ್ರಾಮಾಣಿಕ ಸೇವೆ, ಕುಳನಷ್ಟವಾದ ಭೂಮಿಯು ಅರಮನೆಯ ಚರಾದಾಯವೆಂದು ಪರಿಗಣಿಸಿದರೂ ಮತ್ತೆ ಸೇವಾ ಪ್ರತಿಫಲವಾಗಿ ನೀಡಿರುವುದು, ಗೂಢಚಾರ ವ್ಯವಸ್ಥೆ ಹಾಗು ಅಮ್ಮಕೊಡವ ಮನೆತನದ ಸ್ಥಿತಿಗತಿ ಇತ್ಯಾದಿಗಳು ಇಲ್ಲಿ ಕಾಣಬರುತ್ತವೆ. ಜೊತೆಗೆ ಬೇಲಂದಮ್ಮನ (ಅಮ್ಮಕೊಡವ) ಮನೆತನದ ಶಾಖೆಯೂ (ಬೇಲಂದಮ್ಮನಕೊಪ್ಪ) ಇರುವ ಬಗ್ಗೆ ಹೇಳಿದೆ. ಸ್ವಾಮಿ ದ್ರೋಹಿಗಳಿದ್ದ (ಪಿತೂರಿ) ಬಗ್ಗೆ ಸೂಚನೆ ದೊರಕುತ್ತದೆ. ಇಂದಿನ ಪರಿಭಾಷೆಯಲ್ಲಿ ಊಳಿಗಮಾನ್ಯದ ಸಂಕೇತವೆಂದು 'ಸ್ವಾಮಿ ಕಾರ್ಯ್ಯ ಮುಖ್ಯವಾಗಿ' ಎಂಬ ಶಬ್ದಕ್ಕೆ ಆರೋಪಿಸ ಬಹುದಾದರೂ 'ಸುಖದಿಂದಾ', 'ಪುತ್ರಾ ಪಉತ್ರಾ ಪಾರಂಪರ್ಯವಾಗಿ. ಅನುಭವಿಶಿ ಕೊಂಡು' ಎನ್ನುವುದರಲ್ಲಿ ಪ್ರಜಾಸೌಖ್ಯದ ದೃಷ್ಟಿ, ಆತ್ಮೀಯತೆ ಕಾಣಬರುತ್ತದೆ. ಅದು ಅಂದಿನ ಒಪ್ಪಿತ ಮೌಲ್ಯವಾಗಿತ್ತು. ಇದಲ್ಲದೆ ನಿರೂಪಗಳನ್ನು ಪಾರ್ಶಿ ಲಿಪಿಯಲ್ಲೂ ಬರೆವ ಪದ್ಧತಿ, ರಾಜನ ಸ್ವಹಸ್ತಾಕ್ಷರ ಸಂಕೇತ ಸಹಿತವಿರುವ ನಿರೂಪವಿದ್ದ ಸಂಗತಿಯೂ ತಿಳಿಯುತ್ತದೆ. ಹೀಗೆಯೆ ಶಿಸ್ತು ಪುಸ್ತಕದಲ್ಲಿ ಕುಳವಾರು ಬರೆದ ಸಾವಿರಾರು ನಿರೂಪಗಳ ಸಂಗ್ರಹ ಕಾಣಬರುತ್ತದೆ.

ಇದಲ್ಲದೆ ರಾಜ್ಯವು ಎದುರಿಸಿದ ಯುದ್ಧಗಳ ಕಾರಣ, ಶ್ರೀರಂಗಪಟ್ಟಣಕ್ಕೆ ಸುಮಾರು ೮೦ ಸಹಸ್ರ ಜನರನ್ನು, ದೊಡ್ಡ ವೀರರಾಜೇಂದ್ರ ಒಡೆಯ ಸೆರೆಯಲ್ಲಿದ್ದಾಗ ಟಿಪ್ಪೂ ಒಯ್ದಿದ್ದ ಕಾರಣ, ರಾಜ್ಯದ ಜನಸಂಖ್ಯೆ ತೀರ ಕಡಿಮೆ ಆಗಿತ್ತು. ಆ ಸಂದರ್ಭದಲ್ಲಿ ಒಡೆಯನು ಪರರಾಜ್ಯಗಳಿಂದಲೂ ಜನರು ಬಂದು ನೆಲೆಸಲು, ಹಾಲಿ ಇದ್ದವರಿಗೆ ನೆಮ್ಮದಿ ತಂದುಕೊಡಲು ಮಾಡಿದ ಪ್ರಯತ್ನಗಳ ರೂಪವಾಗಿ ತೋರಿದ ರಿಯಾಯಿತಿ, ಉತ್ತೇಜಿಸಿದ ಸಂದರ್ಭ ಇತ್ಯಾದಿಗಳು ಅವನ ಹುಕುಂನಾಮಾದಲ್ಲಿ ದಾಖಲಾಗಿದ್ದುವೆನ್ನಬೇಕು. ಇದರ ಸೂಚನೆಯು ಎ. ಜೆ. ಕರ್ಜನ್‌ವೆನ್ನನು ಲಿಂಗರಾಜೇಂದ್ರ ಒಡೆಯನಿಗೆ ಅನ್ವಯಿಸಿ 'ಲಿಂಗರಾಜೇಂದ್ರ ಒಡೆಯನ ಹುಕುಂನಾಮೆ'ಯ ಆಂಗ್ಲಾನುವಾದದ ಪ್ರಸ್ತಾವನೆಯಲ್ಲಿ*೧೦ ಬರೆದ ಮಾತುಗಳಿಂದ ಧ್ವನಿತವಾಗುತ್ತದೆ. ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ಯಾವ ಯುದ್ಧವೂ ನಡೆಯಲಿಲ್ಲವೆಂಬುದನ್ನು ಗಮನಿಸಿದರೆ ಇದಕ್ಕೆ ಮತ್ತೂ ಒತ್ತು ಸಿಗುತ್ತದೆ. ಅಲ್ಲದೆ ರಾಜ್ಯ ಕಟ್ಟುವ, ಗಂಭೀರ ಕನ್ನಡ ಭಾಷೆಯ ಹುಕುಮುಗಳ ದಕ್ಷನಿರ್ವಹಣೆಯ, ಆಡಳಿತ ವಿಚಕ್ಷಣೆಯ, ಸಾಮಾಜಿಕ - ರಾಜಕೀಯ - ಸಾಂಸ್ಕೃತಿಕ ಮುತ್ಸದ್ದಿತನದ, ಜನನೆಮ್ಮದಿ ಕುರಿತ ಕಾಳಜಿಯೊಡನೆ ಕೊಡಗಿನ ಸಾಂಸ್ಕೃತಿಕ ವೈಶಾಲ್ಯವನ್ನು ಬೆಳೆಸಿದ ದೊಡ್ಡವೀರರಾಜೇಂದ್ರ ಒಡೆಯನ ಪ್ರಾಮಾಣಿಕ ಚಾಲನೆಗಳನ್ನು ಅದು ನಿದರ್ಶಿಸುತ್ತದೆ.

***The Provisions of several Hukums evince an anxiety to prevent emigration and to encourge immigrants with the former object, Ukkadas or frontier guard houses were maintained at the principle points of Exit (47th Hukum) and persons leaving Coorg were required to provide themselves with passports (37 th Hukum).***

***Those who settled found a liberal Scale of concession attached to the opening of wet land and were assisted with loans of Cattle and money.***

-ಇದು ಈ ಮೊದಲೆ ಹೇಳಿದಂತೆ ಲಿಂಗರಾಜೇಂದ್ರ ಒಡೆಯನ ಹುಕುಂನಾಮೆಗೆ ಸಂಬಂಧಿಸಿದುದಾದರೂ, ದೊಡ್ಡ ವೀರರಾಜೇಂದ್ರ ಒಡೆಯನ ಆಡಳಿತ ಕಾಲದ ಸಂದರ್ಭಗಳಿಗೇ ಪೂರ್ಣಾನ್ವಯಗೊಳ್ಳುತ್ತವೆ. ಲಿಂಗರಾಜೇಂದ್ರ ಒಡೆಯನ ಕಾಲಕ್ಕೆ ಅದರ ಮುಂದುವರಿಕೆಯಾಗಿ ಇನ್ನಷ್ಟು ಹುಕುಮುಗಳ ಸೇರ್ಪಡೆ ಆಗಿ ಸಮಗ್ರಗೊಂಡಿತೆನ್ನಬೇಕು. ಹೀಗಾಗಿ ಮೊದಲಿನಿಂದಲೂ ಇದ್ದ ವಿವಿಧ ಜನಾಂಗಗಳವರೊಡನೆ ಹೊರಗಿನಿಂದ ಬಂದು ನಿಂತು ಆ ಕಾಲಕ್ಕೆ ಸೇರ್ಪಡೆಗೊಂಡವರೂ ಕೊಡಗಿನ ಅಭಿವೃದ್ಧಿಗೆ ಅರ್ಪಿಸಿಕೊಂಡು ದುಡಿದುದನ್ನು ಮರೆಯುವಂತಿಲ್ಲ.

ಒಟ್ಟಾರೆ ಆಡಳಿತಕ್ರಮ, ಆರ್ಥಿಕ ಮೌಲ್ಯ ಹಾಗು ಉತ್ಪನ್ನಗಳು, ರೈತರ ಹಿತ, ಕೃಷಿನಿರ್ವಹಣೆ, ಅರಣ್ಯ ಸಂರಕ್ಷಣೆ, ನೆರೆ-ಹೊರೆರಾಜ್ಯಗಳೊಡನೆಯ ಸೌಹಾರ್ದ ಸಂಬಂಧಗಳು, ಜನಭಾಷೆ, ಸಂಸ್ಕೃತಿ-ಬದುಕು, ಧಾರ್ಮಿಕ ಸಾಮರಸ್ಯ, ನೈತಿಕ ನೆಲೆಗಳ ನಿರ್ವಹಣೆ, ಮಾನವೀಯ ಸಂಬಂಧಗಳ ನೇರ್ಪು, ಕನ್ನಡ ಸಂಸ್ಕೃತಿಯ ವೈಶಾಲ್ಯ ಇವೆಲ್ಲ ಇಲ್ಲಿದ್ದ ಎಲ್ಲ ಜನಾಂಗಗಳ ನಡುವೆ ಸಮನ್ವಯಗೊಂಡಿದ್ದುದಕ್ಕೆ ಈ ಒಡೆಯನ ಶಿಸ್ತು-ಹುಕುಂನಾಮೆ-ನಿರೂಪಗಳಲ್ಲಿ ವಿಪುಲ ಸಾಕ್ಷ್ಯ ದೊರಕುತ್ತದೆ. ನಾಡುವಾರಾಗಿ ವಿಂಗಡಿಸಿ ಈ ಒಡೆಯನು ನೀಡಿರುವ ನಿರೂಪಗಳ ಸಂಖ್ಯೆ ಅನೇಕ ಸಾವಿರದಷ್ಟು ಇರುವುದೇ ಇದಕ್ಕೆಲ್ಲ ಒತ್ತು ನೀಡುತ್ತದೆ. ಈ ದೃಷ್ಟಿಯಿಂದ ಹಾಲೇರಿ ಅರಸುವಂಶಾಡಳಿತ ಕಾಲದ ಸಾಂಸ್ಕೃತಿಕ ಸಂಚಯವೆನಿಸಿ, ಶಾಸ್ತ್ರೀಯ ತಳಹದಿಯ ದಾಖಲೆಗಳಾಗಿ ಇವು ಉಳಿದು ಬಂದಿವೆ.

ಈ ಒಡೆಯ ಕಟ್ಟಿದ 'ವೀರರಾಜೇಂದ್ರಪೇಟೆ'ಯು ಇಂದು 'ವಿರಾಜಪೇಟ್' ಎಂದು ಹ್ರಸ್ವಗೊಂಡು ಅವನ ನೆನಪನ್ನು ಆಕಸ್ಮಿಕ ತರುವುದನ್ನು ಬಿಟ್ಟರೆ ಕೊಡಗಿನ ಪ್ರಗತಿಗೆ ದುಡಿದ ಅವನ ಅಮೂಲ್ಯ ಸಾಧನೆಗಳ ಬಗ್ಗೆ ಇನ್ನಾವ ಸ್ಮಾರಕವೂ ಅವನ ಹೆಸರಿನಲ್ಲಿ ಇಂದು ಕೊಡಗಿನಲ್ಲಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧ ಡಾ॥ ಕೆ. ಎನ್. ಚಿಟ್ನೀಸ್ : 'ಕೆಳದಿ ಶಿವಪ್ಪನಾಯಕನ ಶಿಸ್ತು', **ಕೆಳದಿ ಸಂಸ್ಥಾನ-ಸಮಗ್ರ ಅಧ್ಯಯನ,** (ಸಂ) ಡಾ॥ ಎಂ. ಎಂ. ಕಲಬುರ್ಗಿ, ಬಿ. ಎಸ್. ರಾಮಭಟ್ಟ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ, ೧೯೯೪ ಪು. ೧೮೬

*೨ (i) **ಕೊಡಗು ಸಂಸ್ಥಾನದ ರಾಜೇಂದ್ರನಾಮೆ** (೨ನೆಯ ಮುದ್ರಣ) : (ಸಂ) ಡಿ. ಎನ್. ಕೃಷ್ಣಯ್ಯ, ಎಂ. ಎಸ್. ಸುಬ್ಬರಾಯ, ಮಡಿಕೇರಿ, ೧೯೫೯, ಪು. ೪೯-ಫಿರಂಗಿಯಿಂದ ಖಾಸಾ ವೀರರಾಜೇಂದ್ರ ಒಡೆಯರವರೇ **ಶಿಸ್ತು**ನೋಡಿ ಕೋಟೆಗೆ ಇಡುತ್ತಿದ್ದರು; ಪು. ೧೨೦-ಅಮರ **ಮಾಗಣೆ ಯರಡು ಸಾವಿರ ಶಿಸ್ತಿ**ನದು ಇದೆ.

(ii) **ಕನ್ನಡ ಕನ್ನಡ ನಿಘಂಟು** (ಸಂಪುಟ ೮): ಕನ್ನಡ ಸಾಹಿತ್ಯ ಪರಿಷತ್ತು, ೧೯೯೫ ಪು. ೮೧೨೪

*೩ ಡಾ॥ ಕೆ. ಎನ್. ಚಿಟ್ನೀಸ್ : ಪೂರ್ವೋಕ್ತ, ಪು. ೧೮೮

*೪ G. R. Kuppu Swamy :***Economic Conditions in Karnataka,*** Dharwar, 1975, P. 3

*೫ ಶಿ. ರಾಜೇಂದ್ರಪ್ಪ : 'ಮತ್ತರ್‌ನ ಆಧುನಿಕ ಭೂಪ್ರಮಾಣ ನಿರ್ಧರಿಸಲು ಸಾಧ್ಯವೇ?', **ಇತಿಹಾಸ ದರ್ಶನ,** ಸಂ. ೬/೧೯೯೧, ಬೆಂಗಳೂರು ಪು. ೧೩೬; **ಶಾಸನ ಸಂಪದ** (೧೯೮೭) ಪು. ೧೪೬ರಲ್ಲಿ **ಮತ್ತರ ವೊಂದಕ್ಕೆ** ೧ ರಿಂದ ೮ ಎಕರೆ ಪ್ರಮಾಣವನ್ನು ಹೇಳಿರುವ ಸಂದರ್ಭದಲ್ಲಿ, ಮೇಲಿನ ಲೇಖನದಲ್ಲಿನ ಪ್ರತಿಪಾದನೆಯು ಖಚಿತ ಸನಿಹಕ್ಕೆ ಸಾಗುವಂತಿರುವುದು ಗಮನಾರ್ಹ.

*೬. ಎ. ಕೆ. ೧ (ಹೊಸತು), ಕೊಡಗು ಜಿಲ್ಲೆ, ಮೈಸೂರು ವಿ.ವಿ., ೧೯೭೨- ಬಿಳಿಯೂರು ೯೬ (ಕ್ರಿ. ಶ. ೮೮೮), ಕೋತೂರು ೯೭ (೯ನೇ ಶ.ಮಾ)

*೭ ಅದೇ, ಹೊಸಹಳ್ಳಿ ೪೯ (ಕ್ರಿ. ಶ. ೧೦೭೦), ಮುಳ್ಳೂರು ೭೨ (ಕ್ರಿ. ಶ. ೧೦೫೮), ಮೋರಿಕಲ್ಲು ೪೭ (೧೧ನೇ ಶತಮಾನ), ನಂದಿಗುಂದ ೮೭ (ಕ್ರಿ. ಶ. ೧೧೭೫), ಮುಳ್ಳೂರು ೮೦ (ಕ್ರಿ. ಶ. ೧೨೯೬), ನಿಡುತ ೮೪ (ಕ್ರಿ. ಶ. ೧೨೭೮), ಯಡೂರು ೬೨ (ಕ್ರಿ. ಶ. ೧೯೫), ಮಾದಾಪುರ ೩೨ (ಕ್ರಿ .ಶ. ೧೭೯೬)

*೮ ಮಡಿಕೇರಿ ಅರಮನೆಯ ಜಿಲ್ಲಾಧಿಕಾರಿಗಳ ಕಛೇರಿಯ ರೆವಿನ್ಯೂ ದಾಖಲೆಗಳ ಸಂಗ್ರಹಾಗಾರ (ರಿಕಾರ್ಡ್ ರೂಂ) ದಲ್ಲಿ ಸುರಕ್ಷಿತವಾಗಿ ಇದನ್ನಿಟ್ಟಿರುವುದು ಶ್ಲಾಘನೀಯ. ಈ ಕಟ್ಟನ್ನು ನೋಡಲು ಅವಕಾಶ ನೀಡಿದ ಜಿಲ್ಲಾಧಿಕಾರಿಗಳಿಗೂ, ವಿಭಾಗಾಧಿಕಾರಿಗಳು ಹಾಗು ಮುನಿಸಿಪಲ್ ತಹಸೀಲ್ದಾರ್ ಶ್ರೀ ಟಿ. ಸಿ. ತಮ್ಮಯ್ಯ ಮತ್ತು ಕೇಂದ್ರ ಗ್ರಂಥಾಲಯದ ಶ್ರೀ ನಾಡಿಗೇರ್ ಅವರಿಗೂ ನನ್ನ ಕೃತಜ್ಞತೆಗಳು.

*೯ Fiurih. E. V : ***The Coorg Revenue Manual of 1899*** (corrected upto January 1954), Mysore, 1954, P. 168

*೧೦ ***The Hukumnama of Lingarajendra wodeyar the Raja of Coorg*** : (Translated) A. J. Curgenven, Mercara, 1911, Introduction-P.2

ಪ್ರೊ॥ ಪಿ. ಡಿ. ನಾಯ್ಕ *

# ಬಿಳಗಿ ಅರಸು ಮನೆತನದ ಹೊಸ ನೆಲೆಗಳು

ಹದಿನಾಲ್ಕನೇ ಶತಮಾನದಲ್ಲಿ ಉತ್ತರದ ಇಸ್ಲಾಮಿಕ್ ದಾಳಿಗಳು ದಕ್ಷಿಣಭಾರತದ ಮೇಲೆ ಅಪ್ಪಳಿಸಿದ ಪರಿಣಾಮವಾಗಿ ದಕ್ಷಿಣ ಭಾರತದ ಸಂಸ್ಕೃತಿಯು ಅವನತಿಯ ಅಂಚಿನಲ್ಲಿತ್ತು. ಆಗ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಗೊಂಡು ದಕ್ಷಿಣ ಭಾರತದ ಸಂಸ್ಕೃತಿಗೆ ಪುನರ್‌ಜನ್ಮ ನೀಡಿತು. ಅದೇ ಸಂದರ್ಭದಲ್ಲಿ ವಿಜಯನಗರಕ್ಕೆ ಬೆಂಬಲವಾಗಿ ಅನೇಕ ಅರಸುಮನೆತನಗಳು ಜನ್ಮವೆತ್ತಿ ಹೆಗಲಿಗೆ ಹೆಗಲು ಸೇರಿಸಿದವು. ಅಂತಹ ಉದಾಹರಣೆಗಳಲ್ಲಿ ವಿಜಯನಗರದ ಮಾನ್ಯತೆ ಪಡೆದು ಅದರ ಸಾಮಂತಿಕೆಯಲ್ಲಿ ಪ್ರಾಬಲ್ಯಕ್ಕೆ ಬಂದ ಉ.ಕ. ಜಿಲ್ಲೆಯ ಸಿದ್ದಾಪುರ ತಾಲೂಕಿನ 'ಬಿಳಗಿ ಅರಸು ಮನೆತನ' ಮಹತ್ವದ್ದೆನಿಸಿದೆ. ಆಧುನಿಕ ದಿನಗಳಲ್ಲಿ ಪ್ರಾದೇಶಿಕ ಅಧ್ಯಯನಕ್ಕೆ ಗಮನದೊರೆತ ಈ ಸಂದರ್ಭದಲ್ಲಿ ಬಿಳಗಿ ಅಧ್ಯಯನ ಗಮನಾರ್ಹವಾಗುತ್ತದೆ.

### ಐತಿಹಾಸಿಕ ಹಿನ್ನೆಲೆ

ಮೂಲತಃ ಜೈನ ಸಂಪ್ರದಾಯದವರಾದ ಬಿಳಗಿ ಅರಸರು ಭಟ್ಕಳದ ಹಾಡುವಳ್ಳಿಯ ಹಿನ್ನೆಲೆಯಿಂದ ಬಂದವರೆಂಬ ಪ್ರತೀತಿ ಇದೆ. ಅಂಡಣ್ಣ ಎಂಬ ಐತಿಹಾಸಿಕ ವ್ಯಕ್ತಿ ವಿಜಯನಗರದ ಮಾನ್ಯತೆ ಪಡೆದು ಸಿದ್ದಾಪುರ ತಾಲೂಕಿನ ಐಶ್ವರ್ಯಪುರ (ಇಂದಿನ ಐಸೂರು)ದಲ್ಲಿ ಕ್ರಿ. ಶ. ೧೪೨೦ರ ಸುಮಾರಿಗೆ ರಾಜ್ಯ ಸ್ಥಾಪಿಸಿದ. ಈ ಕುಟುಂಬದ ಮೂರನೇ ಅರಸು ೧ನೇ ನರಸಿಂಹನ ಕಾಲದಲ್ಲಿ (೧೪೯೦) ಐಶ್ವರ್ಯಪುರದಿಂದ ಶ್ವೇತಪುರಕ್ಕೆ(ಇಂದಿನ ಬಿಳಗಿ) ರಾಜಧಾನಿಯನ್ನು ಬದಲಾಯಿಸಲಾಯಿತು. ಅಂದಿನಿಂದ ೧೮ನೇ ಶತಮಾನದವರೆಗೆ ೧ನೇ ನರಸಿಂಹ ೧ನೇ ಘಂಡೇಂದ್ರ (೧೪೪೦-೧೫೦೦)ವೀರಾಂಬಿಕೆ (೧೫೪೦) ರಂಗರಾಜ (೧೫೭೦-೭೩) ೨ನೇ ಘಂಡೇಂದ್ರ (೧೫೮೧) ೩ನೇ ಘಂಡೇಂದ್ರ, ೪ನೇ ಘಂಡೇಂದ್ರ (೧೬೩೧) ಶಿವಪ್ಪ (೧೬೬೫-೧೬೬೭) ೨ನೇ ಶಿವಪ್ಪ (೧೬೭೪) ಸೋಮಶೇಖರ (೧೭೧೦-೧೭೧೬) ೨ನೇ ಸೋಮಶೇಖರ (೧೭೬೯) ಮುಂತಾದವರು ಬಿಳಗಿಯ ಉನ್ನತಿಗಾಗಿ ದುಡಿದು ಕೆಳದಿ, ಸೋಂದೆ, ಗೇರುಸೊಪ್ಪ ಮುಂತಾದ ಅರಸರೊಂದಿಗೆ ಹಲವು ಬಗೆಯ ಸಂಬಂಧಗಳನ್ನು ಬೆಳೆಸಿಕೊಂಡರು.

ಹೈದರನ ದಾಳಿಗೆ ನಲುಗಿದ ಬಿಳಗಿ ಮುಂದೆ ಬ್ರಿಟೀಷರ ಆಕ್ರಮಣಕ್ಕೆ ತುತ್ತಾಗಿ ಚರಿತ್ರೆಯಿಂದ ಕಣ್ಮರೆಯಾಯಿತು. ಬಿಳಗಿ ಅರಸರಿಂದ ನಿರ್ಮಿತಗೊಂಡಿವೆ ಎಂದು ದಾಖಲೆಗಳಲ್ಲಿ ಹೇಳಲಾದ ನೂರಾರು ಸ್ಮಾರಕಗಳಲ್ಲಿ ಕೆಲವು ಮಾತ್ರ ಇಂದಿನ ಬಿಳಗಿ, ಐಸೂರು, ಇಟಗಿ, ಭುವನಗಿರಿ, ಸಿದ್ದಾಪುರ, ಬೇಡ್ಕಣಿ, ಕ್ಯಾದಗಿ ಮುಂತಾದ ಸ್ಥಳಗಳಲ್ಲಿ ಕಂಡುಬಂದಿದ್ದು ಮಿಕ್ಕವೆಲ್ಲವು ಬಿಳಗಿ ಸುತ್ತಲೂ ವ್ಯಾಪ್ತವಾದ ಹಳ್ಳಕೊಳ್ಳ, ಗುಡ್ಡ, ಅರಣ್ಯಗಳಲ್ಲಿ ಅಡಗಿಕೊಂಡಿವೆ. ಅಂತಹ ಸ್ಮಾರಕಗಳನ್ನು ಸಂಶೋಧಿಸಿದಲ್ಲಿ ಮಾತ್ರ ಬಿಳಗಿಯ ಪೂರ್ಣಪ್ರಮಾಣದ ಚರಿತ್ರೆಯನ್ನು ತಿಳಿಯಬಹುದಾಗಿದೆ.

ಬಿಳಗಿ ಚರಿತ್ರೆಗೆ ಸಂಬಂಧಿಸಿದ ಕೇವಲ ಬೆರಳೆಣಿಕೆಯಷ್ಟು ದಾಖಲೆಗಳು ಪ್ರಕಟಗೊಂಡಿರುವುದರಿಂದ ಪೂರ್ಣ ಪ್ರಮಾಣದ ಅಭ್ಯಾಸ ಅಸಾಧ್ಯ. ಸಂಶೋಧನೆಯುದ್ದಕ್ಕೂ ಕ್ಷೇತ್ರಕಾರ್ಯಕ್ಕೆ ಅತ್ಯಂತ ಮಹತ್ವ ನೀಡಿ ಉ.ಕ. ಮತ್ತು ಶಿವಮೊಗ್ಗ ಜಿಲ್ಲೆಗೆ ಸೇರಿದ ಸುಮಾರು ನೂರಾರು ಗ್ರಾಮಗಳನ್ನು, ಅರಣ್ಯಪ್ರದೇಶವನ್ನು ಸುತ್ತಿ ಅತ್ಯಂತ ಮಹತ್ವದ ನೆಲೆಗಳನ್ನು ಪತ್ತೆ ಹಚ್ಚಲಾಗಿದೆ. ಆಗ ಕಂಡ ಹೊಸ ನೆಲೆಗಳಲ್ಲಿರುವ ಸ್ಮಾರಕಗಳಿಗೂ, ಬಿಳಗಿಯಲ್ಲಿರುವ ಸ್ಮಾರಕಗಳಿಗೂ ನೇರ ಹೋಲಿಕೆಗಳಿರುವುದರಿಂದ ಮತ್ತು ಆ ಎಲ್ಲ ನೆಲೆಗಳೂ ಬಿಳಗಿ ಸಂಸ್ಥಾನದ ಮೇರೆಗಳೊಳಗೆ ಇರುವುದರಿಂದ ಅವು ಬಿಳಗಿ ಅರಸುಮನೆತನಕ್ಕೆ ಸೇರಿದವುಗಳಾಗಿವೆ ಎನ್ನುವುದರಲ್ಲಿ ಸಂಶಯವಿಲ್ಲ.

**ಸಿಂಗುಮನೆ ಕೋಟೆ :** ಸಿದ್ದಾಪುರ ತಾಲೂಕಿನ ದಕ್ಷಿಣ ಹಾಗೂ ಪಶ್ಚಿಮ ದಿಕ್ಕಿನಲ್ಲಿ ಇಂದಿನ ಹುಕ್ಕಳಿ ಗ್ರಾಮದಲ್ಲಿ ಸಹ್ಯಾದ್ರಿ ಪರ್ವತಾವಳಿಯ ಅನೇಕ ಶಿಖರ-ಶ್ರೇಣಿಗಳಲ್ಲಿ ಉ.ಕ. ಜಿಲ್ಲೆಯಲ್ಲಿ

---

* ಇತಿಹಾಸ ವಿಭಾಗ, ಎಸ್. ಡಿ. ಎಂ. ಕಾಲೇಜ್, ಹೊನ್ನಾವರ (ಉ.ಕ)

ಅತಿ ಎತ್ತರದ ಪರ್ವತಗಳಲ್ಲೊಂದಾದ ಹುಕ್ಕಳಿ ಗುಡ್ಡದ ಪಕ್ಕದ ಅಡವಿಯಲ್ಲಿ ಸಿಂಗುಮನೆ ಕೋಟೆಯಿದೆ. ಕೋಟೆಗೆ ಹೋಗಲು ಸ್ಥಳೀಯರ ನೆರವು ಅತ್ಯಗತ್ಯ. ಬಿಳಗಿ ವಂಶಾವಳಿಯಲ್ಲಿ ೧ನೇ ನರಸಿಂಹ ಹಾಗೂ ೧ನೇ ಘಂಡೇಂದ್ರನ ಕಾಲದಲ್ಲಿ ರಚಿತವಾಗಿದೆ ಎನ್ನಲಾದ ಕೋಟೆಯು ಇದೆಂದು ತಿಳಿದು ಬರುತ್ತದೆ. (ಕ್ರಿ. ಶ. ೧೫೩೦-೧೫೪೦). ಸುಮಾರು ೯೦೦ ಚ.ಮೀಗಳಷ್ಟು ವಿಸ್ತೀರ್ಣ ಹೊಂದಿದ ಈ ಕೋಟೆ ಸ್ಥಳೀಯವಾಗಿ ದೊರೆಯುವ ಗುಡ್ಡದ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದೆ. ಕೋಟೆಯ ಸುತ್ತಲೂ ೮.೧೫ ಮೀ. ಆಳವಾದ ಕಂದಕವನ್ನು ಹಾಗೂ ೧೨ ಕಾವಲು ದುರ್ಗಗಳನ್ನು ನಿರ್ಮಿಸಲಾಗಿದೆ. ಮೂರು ದಿಕ್ಕಿನಿಂದ ಇದಕ್ಕೆ ಪ್ರವೇಶವಿದ್ದರೂ ಮುಖ್ಯ ಪ್ರವೇಶದ್ವಾರವನ್ನು ಪತ್ತೆಹಚ್ಚುವದು ಕಷ್ಟ.

ಕೋಟೆಯ ಮಧ್ಯದಲ್ಲಿ (೩೦ x ೧೨) ಚ. ಮೀ. ಅಳತೆಯ ಮೂರು ಹಂತದ ಕೆರೆಯೊಂದಿದೆ. ಈ ಕೆರೆಯ ಸುತ್ತಲೂ ಸುಮಾರು ೩೦ ಮೀ ಮೇಲ್ಭಾಗದಲ್ಲಿ ೫೦ಕ್ಕೂ ಹೆಚ್ಚಿನ ಮಣ್ಣು ಹಾಗೂ ಕಲ್ಲಿನಿಂದ ನಿರ್ಮಿಸಲಾದ ನಿವೇಶನಗಳ ಅವಶೇಷಗಳಿವೆ. ಒಂದು ನಿವೇಶನದಲ್ಲಿ ದೊರೆತ ಕಬ್ಬಿಣದ ಖಡ್ಗವೊಂದು ಬಿಳಗಿ ಕಾಲದ ಸೈನಿಕ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಈ ಕೋಟೆಯ ಕೆರೆ ಸುತ್ತಲಿನ ಹಲವಾರು ಗ್ರಾಮಗಳಿಗೆ ಮತ್ತು ಕಾಡುಮೃಗಗಳಿಗೆ ಇಂದಿಗೂ ನೀರಿನ ಆಶ್ರಯವಾಗಿ ಮುಂದುವರೆದಿದೆ. ಕೋಟೆಯ ಪಶ್ಚಿಮದಲ್ಲಿ ಇರುವ ಎತ್ತರದ ಕಾವಲುದುರ್ಗದ ಮೇಲೆ ನಿಂತರೆ ಒಂದು ಕಡೆ ಇಕ್ಕೇರಿ ಸಂಸ್ಥಾನದ, ಮತ್ತೊಂದೆಡೆ ಗೇರುಸೊಪ್ಪಾಕ್ಕೆ ಸೇರಿದ ಪ್ರದೇಶಗಳನ್ನು ಅಲ್ಲದೇ ಲಿಂಗನಮಕ್ಕಿ ಮತ್ತು ಶರಾವತಿ ಟೇಲರೀಸ ಜಲಾನಯನದ ಪ್ರದೇಶಗಳನ್ನು ವೀಕ್ಷಿಸಬಹುದು.

ಈ ಕೋಟೆಯ ರಚನೆಯ ಉದ್ದೇಶ ಇಕ್ಕೇರಿ ಕೆಳದಿಯ, ಗೇರುಸೊಪ್ಪೆಯ ಹಾಡುವಳ್ಳಿಯ ಅರಸರ ದಾಳಿಗಳನ್ನು ಮತ್ತು ವಿದೇಶಿಯರ ದಾಳಿಗಳ ಮುನ್ಸೂಚನೆ ಪಡೆಯುವ ಉದ್ದೇಶ ದಿಂದಲೇ ರಚಿತಗೊಂಡಿದೆ ಎಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಇದು ಬಿಳಗಿ ಸೈನಿಕರಿಗೆ ತರಬೇತಿ ನೀಡುವ ಕೇಂದ್ರವು ಆಗಿರಬೇಕು. ಈ ಕೋಟೆಯನ್ನು ಸ್ವಚ್ಛಗೊಳಿಸಿ, ಉತ್ಖನನ ನಡೆಸಿದರೆ ಬಿಳಗಿ ಅರಸೂತ್ತಿಗೆ ಬಗ್ಗೆ ಹೆಚ್ಚಿನ ಮಾಹಿತಿ ದೊರಕುವುದರ ಜೊತೆಗೆ ಜಿಲ್ಲೆಯ ಪ್ರಮುಖ ಪ್ರವಾಸಿ ತಾಣವಾಗಿ ಮಾರ್ಪಡುವುದರಲ್ಲಿ ಸಂಶಯವಿಲ್ಲ.

**ಹೊಸಾಳಮಕ್ಕಿ ಜೈನಬಸದಿ ಮತ್ತು ಗಣಪತಿ ಗುಡಿ :** ಸಿಂಗುಮನೆ ಕೋಟೆಯಿಂದ ೧ ಕಿ. ಮೀ. ಅಂತರದಲ್ಲಿ ಸಿಂಗುಮನೆ ಊರಿಗೆ ಹೊಂದಿಕೊಂಡು ಹೊಸಾಳಮಕ್ಕಿಯೆಂಬ ಚಿಕ್ಕ ಊರೊಂದಿದೆ. ಸ್ಥಳೀಯರು ಇದನ್ನು ಬಸದಿಯೆಂದೇ ಕರೆಯುತ್ತಾರೆ. ಇಲ್ಲಿ ೪.೫೦ಮೀ, ೮.೪೦ಮೀ. ವಿನ್ಯಾಸದ ಜಂಬಿಟ್ಟಿಗೆಯಿಂದ ನಿರ್ಮಾಣಗೊಂಡ ದರೋಡೆಕೋರರ ದಾಳಿಗೊಳಪಟ್ಟ ಗುಡಿಯೊಂದಿದೆ. ಸ್ಥಳೀಕರು ಇದನ್ನು ಶಿವ ದೇವಾಲಯವೆಂದೇ ತಿಳಿದು ವಾರ್ಷಿಕ ಪೂಜೆ ಸಲ್ಲಿಸುತ್ತಾರೆ. ಗರ್ಭಗುಡಿಯಲ್ಲಿರುವ ಮೂರ್ತಿಯನ್ನು ಅಪಹರಿಸಲಾಗಿದೆ. ಆದರೆ ಆ ಗುಡಿಯ ಗೋಡೆಯ ಮೇಲೆ ಪದರು ಶಿಲೆಯಲ್ಲಿ ರಚಿಸಿದ ಜಿನಶಾಸನವೊಂದಿದೆ. ಅದರ ಅಕ್ಷರಗಳೆಲ್ಲವೂ ನಾಶಗೊಂಡಿವೆ. ಇದರ ಮೇಲಿರುವ ತೀರ್ಥಂಕರರ ಉಬ್ಬುಶಿಲ್ಪ ಇದೊಂದು ಜೈನಸ್ಮಾರಕವೆಂದು ಸ್ಪಷ್ಟಪಡಿಸುತ್ತದೆ. ಗರ್ಭಗುಡಿಯಲ್ಲೊಂದು ಮರ ಬೆಳೆದು ಒಳಭಾಗವೆಲ್ಲ ಅಸ್ತವ್ಯಸ್ತಗೊಂಡಿದೆ. ಮೇಲ್ಛಾವಣಿ ಕುಸಿದು ಬಿದ್ದಿದ್ದು ಇದಕ್ಕೆ ಊರಹೆಂಚಿನಿಂದ ಮಾಡಿದ ಮುಚ್ಚಿಗೆ ಇತ್ತೆಂಬುದು ಸ್ಮಾರಕದ ಸುತ್ತಲೂ ಬಿದ್ದ ಊರಹೆಂಚಿನ ಅವಶೇಷಗಳಿಂದ ತಿಳಿದುಬರುತ್ತದೆ. ಈ ಬಸದಿಯ ಹಿಂಭಾಗದಲ್ಲಿ ಜಟಗೇಶ್ವರನ ಉಬ್ಬುಶಿಲ್ಪವೊಂದಿದ್ದು ಬಲಗೈಯ್ಯಲ್ಲಿ ಎತ್ತಿಹಿಡಿದ, ಎಡಗೈಯಲ್ಲಿ ಇಳಿಬಿಟ್ಟ ಗದೆಯಾಕಾರದ ಆಯುಧವಿದ್ದರೆ, ಸೊಂಟದಲ್ಲಿ ಬಾಕುವೊಂದಿದೆ. ಊರ ಜನ ಇದನ್ನು "ಜಟಿಗ್" ಎಂದೇ ಪೂಜಿಸುತ್ತಾರೆ. ಈ ಬಸದಿಯ ಬಲಭಾಗದಲ್ಲಿ ೫ × ೫ ಚ. ಅಡಿ ಅಳತೆಯ ಚೌಕಾಕಾರದ ಬಾವಿಯೊಂದಿದೆ. ಇದು ಸುಮಾರು ೨೫ ಅಡಿ ಆಳವಾಗಿದೆ.

ಮೇಲಿನ ಸ್ಮಾರಕದ ಎಡಭಾಗದಲ್ಲಿ ಸುಮಾರು ೧೦೦ಮೀ. ಅಂತರದಲ್ಲಿ ಸಂಪೂರ್ಣ ಕುಸಿದುಬಿದ್ದ ಜಂಬಿಟ್ಟಿಗೆಯ ಸ್ಮಾರಕವೊಂದರ ಅವಶೇಷಗಳಿವೆ. ಸ್ಥಳೀಯರಿಗೆ ಗೊತ್ತಿರುವಂತೆ ಅದೊಂದು ಗಣಪತಿ ದೇವಾಲಯದ ಅವಶೇಷ. ಬಹಳ ಕಾಲದವರೆಗೆ ಅಲ್ಲಿ ಎರಡೂವರೆ ಅಡಿ ಎತ್ತರವಾದ ಸುಂದರ ಗಣೇಶನ ವಿಗ್ರಹವೊಂದು ಅನಾಥವಾಗಿತ್ತು. ಅಳವಳ್ಳಿ ಗ್ರಾಮಸ್ಥರು ಆ ವಿಗ್ರಹವನ್ನು ಕೊಂಡೊಯ್ದು ಅಲ್ಲಿ ಚಿಕ್ಕ ಗುಡಿಯೊಂದನ್ನು ಕಟ್ಟಿ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ಅಳವಳ್ಳಿಯಲ್ಲಿ ವಿಚಾರಿಸಿದಾಗ ಮೇಲಿನ ವಿಗ್ರಹವನ್ನು ಹೊಸಾಳ-ಮಕ್ಕಿಯಿಂದಲೇ ತಂದ ಸಂಗತಿ ತಿಳಿದು ಬಂತು.

ಹೊಸಾಳಮಕ್ಕಿಯ ಪಕ್ಕದ ಹೊಲದಲ್ಲಿ ಇತ್ತೀಚೆಗೆ ಕೆಲಸ ಮಾಡುವಾಗ ತಲೆ ಇಲ್ಲದ ಭಿನ್ನ ಗಣೇಶನ ವಿಗ್ರಹವೊಂದು ದೊರೆತಿದ್ದು ೧ ಅಡಿ ೨ ಇಂಚು ಎತ್ತರವಾಗಿದೆ. ಹೊಸಾಳಮಕ್ಕಿಯ ಹತ್ತಿರವೇ ಇರುವ ವಿಶಾಲ ಪ್ರದೇಶದಲ್ಲಿ ಹಲವಾರು ಮಣ್ಣಿನ ಗೋಡೆಗಳ ಅವಶೇಷಗಳು ಕಂಡುಬರುತ್ತವೆ. ಊರಹಿರಿಯರ ಪ್ರಕಾರ ಬಿಳಗಿ ಅರಸರ ಕಾಲದಿಂದ ಸುಮಾರು ೮೦-೯೦ವರ್ಷದ ಹಿಂದಿನ-ರೆಗೆ ಅಲ್ಲಿ ಜಾತ್ರೆಯೊಂದು ನಡೆಯುತ್ತಿದ್ದು ಈಗ ನಿಂತು ಈ ಪ್ರದೇಶ ಪಾಳುಬಿದ್ದಿದೆ.

**ಸಾಲೆಗದ್ದೆ :** ಹೊನ್ನಾವರ ತಾಲೂಕಿನ ಮಹಿಮೆ ಗ್ರಾಮದ ದಟ್ಟಡವಿಯಲ್ಲಿರುವ ಈ ಊರು ಸಿದ್ದಾಪುರ ತಾಲೂಕಿನ ಗಡಿಯಲ್ಲಿದೆ. ಬಿಳಗಿ ಅರಸರು ಐಸೂರನ್ನು ತಮ್ಮ

ರಾಜಧಾನಿಯನ್ನಾಗಿಸಿ ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿಯೇ ಇಲ್ಲಿ ಕೆಲ ಸ್ಮಾರಕಗಳನ್ನು ನಿರ್ಮಿಸಿದಂತಿದೆ. ಐಸೂರಿನಿಂದ ಸುಮಾರು ೩ ಗಂಟೆಗಳ ಕಾಲ್ನಡಿಗೆಯ ಪ್ರಯಾಣ ಮಾಡಿದರೆ ಸಾಲೆಗದ್ದೆಯನ್ನು ತಲುಪಬಹುದು. ಐಸೂರಿನ ಸುತ್ತಲಿನ ಕೆಲ ಯುವಕರು ಬೇಟೆಯಾಡಲು ಹೋದ ಸಂದರ್ಭದಲ್ಲಿ ಇಲ್ಲಿ ಇರುವ ಕೆಲ ಸ್ಮಾರಕಗಳನ್ನು ಕಂಡು ತಿಳಿಸಿ, ಮಾರ್ಗದರ್ಶನ ಮಾಡಿದಾಗಲೇ ಅಲ್ಲಿ ಹೋಗಿ ಶೋಧಿಸಲು ಸಾಧ್ಯವಾಯಿತು. ಇಲ್ಲಿ ಒಕ್ಕಲಿಗ ಕುಟುಂಬವೊಂದು ನೆಲೆಸಿದ್ದು ಅವರ ತೋಟದ ಮೇಲಿರುವ ಬಯಲಿನಲ್ಲಿ ದ್ರಾವಿಡ ಶೈಲಿಯ ಮಂಟಪವನ್ನು ಹೋಲುವ ಸುಂದರ ಗುಡಿಯಿದೆ. ಈ ಗುಡಿಯ ರಚನೆ ವೈಶಿಷ್ಟ್ಯಪೂರ್ಣವಾಗಿದೆ. (೧೮ × ೧೮) ಚ. ಅಡಿ ಅಳತೆಯ ಚೌಕಾಕಾರದ ಜಂಟಿಟ್ಟಿಗೆಯ ಕಲಾತ್ಮಕ ಗೋಡೆಯ ಒಳಗೆ ೨ ಅಡಿ ಅಗಲವಿರುವ ಪ್ರದಕ್ಷಿಣಾಪಥ ಮತ್ತು (೮×೮) ಚ. ಅಡಿ ಅಳತೆಯ ಗರ್ಭಗುಡಿಯಿದೆ. ಗರ್ಭಗುಡಿಯನ್ನು ಸ್ಥಳೀಯರಿಂದ ಹೊಳೆಕಲ್ಲುಗಳಿಂದ ನಿರ್ಮಿಸಲಾಗಿದ್ದು, ಮೇಲಿನಿಂದ ಜಂಬಿಟ್ಟಿಗೆಯ ಗೋಡೆ ಕಟ್ಟಲಾಗಿದೆ. ಈ ಗೋಡೆಗಳ ರಚನೆ ಬಿಳಗಿಯ ಮುಸುಕಿನ ಬಾವಿಯ ಒಳಗೋಡೆಗಳ ಶೈಲಿಯನ್ನು ಹೋಲುತ್ತದೆ. ಗರ್ಭಗುಡಿಯ ಮೇಲ್ಛಾವಣಿಯಲ್ಲಿ ಸುಂದರ ಕಮಲದ ಕೆತ್ತನೆಯ ಮುಚ್ಚಿಗೆಯಿದೆ. ದೇವಾಲಯದ ಪ್ರವೇಶದ ಮೆಟ್ಟಲುಗಳ ಎರಡೂ ಪಾರ್ಶ್ವದಲ್ಲಿ ಆನೆಗಳ ಚಿತ್ರವಿರುವ ಪಿಡೆಸ್ಟಾಲ್‌ಗಳನ್ನು ನಿರ್ಮಿಸಿದ್ದು, ಇವು ಇಟಗಿಯ ಪಾರ್ವತೀಗುಡಿಯ ಮುಖ್ಯಮಂಟಪವನ್ನು ಹೋಲುತ್ತವೆ. ಈ ದೇವಾಲಯದ ಮುಚ್ಚಿಗೆ ಐಹೊಳೆಯ ಲಾಡಖಾನಾ ಗುಡಿಯ ನೆನಪು ತರುತ್ತದೆ.

ಈಗ ಗುಡಿ ಸಂಪೂರ್ಣ ಕೊಳ್ಳೆ ಹೊಡೆಯಲ್ಪಟ್ಟಿದೆ. ಗರ್ಭಗುಡಿಯಲ್ಲಿರುವ ವಿಗ್ರಹವನ್ನು ಅಪಹರಿಸಿ ಸುಮಾರು ೧೦ ಅಡಿ ಆಳ ಅಗೆಯಲಾಗಿದೆ. ಎದುರಿಗಿರುವ ಧ್ವಜಕಟ್ಟೆಯನ್ನು ಸಹ ಕಿತ್ತು ತೆಗೆಯಲಾಗಿದೆ. ಇದರಿಂದಾಗಿ ಇದು ಯಾವ ಗುಡಿಯೆಂದು ಪತ್ತೆ ಹಚ್ಚುವುದು ಕಷ್ಟವಾಗಿದೆ. ಈ ದೇವಾಲಯದ ಪಕ್ಕದಲ್ಲಿ ಅತ್ಯಾಕರ್ಷಕ ಬಾವಿಯೊಂದಿದ್ದು, ಕೆಳಭಾಗದಿಂದ ಮೇಲ್ತುದಿಯ ವರೆಗೆ ಜಂಟಿಟ್ಟಿಗೆಯನ್ನು ಸುಂದರ ಶೈಲಿಯಲ್ಲಿ ಜೋಡಿಸಲಾಗಿದೆ. ಇಂತಹ ಬಾವಿಗಳು ಬಿಳಗಿ ಸಂಸ್ಥಾನದ ಇತರ ಯಾವ ಭಾಗದಲ್ಲಿಯೂ ಕಂಡುಬರುವುದಿಲ್ಲ. ಈ ಗುಡಿಯ ಹಿಂಭಾಗದ ದಟ್ಟಡವಿಯಲ್ಲಿ ಅಸ್ತವ್ಯಸ್ತಗೊಂಡ ಕೋಟೆಯ ಅವಶೇಷಗಳು ಕಂಡುಬಂದಿದ್ದು ಸಿಂಗುಮನೆ ಕೋಟೆಯನ್ನು ನೆನಪಿಗೆ ತರುತ್ತದೆ.

**ದಸೂರು** : ಮಸುರು, ಅಥವಾ ದಸೂರ ಎಂಬ ಹೆಸರು ಐಸೂರಿಗೆ ಇತ್ತು, ಎಂಬ ಸಂಗತಿ ಕೆಲದಾಖಲೆಗಳಲ್ಲಿ ಚರ್ಚಿತವಾಗಿದ್ದರೂ ಸಹ, ಐಸೂರಿನಿಂದ ಸುಮಾರು ೧೨ ಕಿ. ಮೀ. ಅಂತರದಲ್ಲಿ ಸಿದ್ದಾಪುರದ ಪಶ್ಚಿಮಗಡಿಯಲ್ಲಿ ದಸೂರು ಎಂಬ ಐತಿಹಾಸಿಕ ಸ್ಥಳವೊಂದಿದೆ. ಇದು ಸಹ ದಟ್ಟಡವಿಯಲ್ಲಿರುವ ನೆಲೆಯಾದ್ದರಿಂದ ಇತಿಹಾಸಕಾರರಿಂದ ದೂರವಿದೆ. ಐಸೂರು ರಾಜಧಾನಿಯಾಗಿದ್ದ ಸಮಯದಲ್ಲಿ ಇದೊಂದು ಸೈನಿಕ ವೀಕ್ಷಣೆಯ ಹಾಗೂ ತರಬೇತಿ ನೀಡುವ ಕೇಂದ್ರವಾಗಿರಬೇಕು. ಇಲ್ಲಿಯ ಅರಣ್ಯದಲ್ಲಿ ಗುಡ್ಡೆಕಲ್ಲುಗಳಿಂದ ನಿರ್ಮಿಸಿದ ಕೋಟೆಯ ಅವಶೇಷವಿದ್ದು ಇದು ಸಹ ಸಿಂಗುಮನೆ ಕೊಡೆಯಂತೆ ಸಮುದ್ರ ಮಟ್ಟದಿಂದ ೨೦೦೦ ಅಡಿಗಳಷ್ಟು ಎತ್ತರದಲ್ಲಿದೆ.

ಕೋಟೆಯ ಕೆಳಭಾಗದಲ್ಲಿ ಇಂದಿನ ವ್ಯವಸಾಯ ಭೂಮಿ ಇರುವ ವಿಶಾಲ ಪ್ರದೇಶದಲ್ಲಿ ಶಿಸ್ಟೋಸ ಕಲ್ಲುಗಳಿಂದ ನಿರ್ಮಿಸಿದ ಭವ್ಯ ದೇಗುಲವೊಂದು ಸಂಪೂರ್ಣ ದಾಳಿಗೊಳಪಟ್ಟು ಕುಸಿದುಬಿದ್ದಿದೆ. ಈ ಸ್ಮಾರಕದ ಬಾಗಿಲುಗಳು ಐದು ಅಡಿ ಎತ್ತರವಿದ್ದು ಬಿಳಗಿ ಶೈಲಿಯಲ್ಲೆ ಆರಂಭದ ಶೈಲಿಯಲ್ಲಿ ನಿರ್ಮಾಣಗೊಂಡ ಸ್ಮಾರಕ ಎಂಬ ಸಂಗತಿ ವ್ಯಕ್ತವಾಗುತ್ತದೆ. ಇಲ್ಲಿಯೂ ಸಹ ಮೂರ್ತಿಯನ್ನು ಅಪಹರಿಸಿರುವುದರಿಂದ ಯಾವ ಗುಡಿ (ಜೈನ ಅಥವಾ ಹಿಂದು) ಎಂಬುದನ್ನು ಪತ್ತೆಹಚ್ಚುವುದು ಕಷ್ಟ. ಈ ಸ್ಮಾರಕದ ಸುತ್ತಲು ಹಲವಾರು ಮಣ್ಣಿನ ಗೋಡೆಗಳ ಅವಶೇಷಗಳಿದ್ದು ಉತ್ಖನನ ನಡೆಸಿದರೆ ಮಾತ್ರ ಇಲ್ಲಿಯ ಚರಿತ್ರೆಯನ್ನು ತಿಳಿಯಲು ಸಾಧ್ಯ. ಒಟ್ಟಾರೆ ಐಸೂರಿಗೂ, ದಸೂರಿಗೂ ಹತ್ತಿರದ ಸಂಬಂಧ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಇಲ್ಲಿ ಯಾವುದೇ ಶಾಸನಗಳು ಕಂಡುಬರುವುದಿಲ್ಲ.

**ಕೊಡ್ಲಿ** : ಇಂದಿನ ಹೊನ್ನಾವರ ತಾಲೂಕಿಗೆ ಸೇರಿದ ಹಾಗೂ ಸಿದ್ದಾಪುರ ಗಡಿಯಲ್ಲಿರುವ ಕೊಡ್ಲಿಯು ಸಹ್ಯಾದ್ರಿ ಬೆಟ್ಟಗಳ ಮಧ್ಯ ಅಡಗಿ ಸಂಪರ್ಕ ಮಾಧ್ಯಮಗಳಿಂದ ದೂರವೇ ಇರುವ ಈ ಸ್ಥಳವನ್ನು ತಲುಪಬೇಕಾದರೆ ಸಿದ್ದಾಪುರ ತಾಲೂಕಿನ ಕೊಡಿಗದ್ದೆಯಿಂದ ಸುಮಾರು ಎರಡರಿಂದ ಮೂರು ಗಂಟೆಗಳ ಕಾಲ ಕಾಲ್ನಡಿಗೆಯ ಪ್ರಯಾಣ ಬೇಕು. ಇಲ್ಲಿರುವ ಮೂರು ಬೆಟ್ಟಗಳ ನಡುವಿನ ಕಣಿವೆಯನ್ನು ಲೆಟರೆಟ್ ಕಲ್ಲುಗಳಿಂದ ಸುಮಾರು ಐವತ್ತು ಅಡಿ ಎತ್ತರದ ಕೋಟೆಯಾಕೃತಿಯ ಪೀಠಿಕೆ ನಿರ್ಮಿಸಿ ಅದರ ಮೇಲೆ ಮೂರುಗುಡಿಗಳ ಸಂಕೀರ್ಣವನ್ನು ರಚಿಸಲಾಗಿದೆ. ಇಲ್ಲಿನ ಪ್ರಧಾನ ಗುಡಿ ಶಿವಾಲಯವಾಗಿದ್ದು, ಇಂದು ರಾಮಲಿಂಗೇಶ್ವರ ಎಂಬ ಹೆಸರಿನಿಂದ ಪೂಜಿಸಲ್ಪಡುತ್ತದೆ. ಇದರ ಪಕ್ಕದಲ್ಲಿ ಪಾರ್ವತಿ ಹಾಗೂ ಗುರುತು ಹಿಡಿಯಲಾಗದ ಶಿಥಿಲಾವಸ್ಥೆಯ ಎರಡು ಗುಡಿಗಳಿವೆ. ನಿರ್ಜನ ಪ್ರದೇಶದಲ್ಲಿರುವ ಈ ದೇವಾಲಯದ ಸಂಕೀರ್ಣ ಬಹಳ ಹಿಂದೆಯೇ ಕಳ್ಳರ ಇಲ್ಲವೆ ದಾಳಿಕೋರರ ಅತ್ಯಾಚಾರಕ್ಕೊಳಪಟ್ಟು ಸ್ಮಾರಕಗಳೆಲ್ಲವೂ ಛಿದ್ರ ಛಿದ್ರಗೊಂಡಿವೆ. ಸಂಪೂರ್ಣ ಶಿಲಾಮಯವಾದ ಶಿವದೇವಾಲಯ ಗುರುತು ಹಿಡಿಯಲಾಗದ ಸ್ಥಿತಿ ತಲುಪಿತ್ತು. ಗರ್ಭಗುಡಿಯಿಂದ ಲಿಂಗವನ್ನು ಕಿತ್ತು ಹೊರವಲಯಕ್ಕೆ ತಂದರು. ಅದನ್ನು

ಕೊಂಡೊಯ್ಯುವಲ್ಲಿ ಕಳ್ಳರು ವಿಫಲರಾಗಿದ್ದಾರೆ. ಗುಡಿಯ ಎದುರಿಗೆ ಕಡಾಯಿ ಹಿಡಿದ ಎರಡು ಕಂಬಗಳು ವಿಚಿತ್ರ ಭಂಗಿಯಲ್ಲಿವೆ. ಈ ಗುಡಿಯ ಒಳಭಾಗ ಇಟಗಿ ರಾಮೇಶ್ವರ ಗುಡಿಯನ್ನು ಹೋಲುತ್ತದೆ. ಸಿದ್ದಾಪುರದ ಹಳ್ಳಿಯೊಂದರಿಂದ ಕೊಡ್ಲಿಗೆ ಹೋಗಿ ನೆಲೆಸಿರುವ ಶ್ರೀ ವೆಂಕಟ್ರಮಣ ವಿಠ್ಠಲ ರೈಕರ ಎಂಬುವವರು ಸ್ವ-ಖರ್ಚಿನಿಂದ ಗುಡಿಯ ಜೀರ್ಣೋದ್ಧಾರ ನಡೆಸಿ, ಪ್ರತಿವರ್ಷಕ್ಕೊಮ್ಮೆ ಸಮಾರಾಧನೆ ನಡೆಸುತ್ತ ಬಂದಿದ್ದಾರೆ. ಗುಡಿಯ ಸುತ್ತಲಿನ ವಿಶಾಲ ಪ್ರದಕ್ಷಿಣಾಪಥದಲ್ಲಿ ಮಹಿಷ ಮರ್ದಿನಿ, ಸಪ್ತಮಾತ್ರಿಕೆ, ಜಟಿಗ ಮುಂತಾದ ಉಬ್ಬು ಶಿಲ್ಪಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಇಲ್ಲಿ ಲಿಂಗಮುದ್ರೆ ಹಾಗೂ ನಂದಿಯ ಚಿತ್ರವಿರುವ ಸುಂದರ ಶಿಲಾ ಶಾಸನದ ಮೇಲ್ಭಾಗವಿದ್ದು, ಬರವಣಿಗೆ ಇದ್ದ ಕೆಳಭಾಗವನ್ನು ತುಂಡರಿಸಿ ಕೊಂಡೊಯ್ಯಲಾಗಿದೆ ಇಲ್ಲವೆ ಅರಣ್ಯದೊಳಗೆ ಎಸೆಯಲಾಗಿದೆ.

ಕೊಡ್ಲಿ ದೇವಾಲಯದ ಇನ್ನೊಂದು ಆಕರ್ಷಣೆಯೆಂದರೆ ಪ್ರಧಾನ ದ್ವಾರದಿಂದ ಸುಂದರವಾಗಿ ನಿರ್ಮಾಣಗೊಂಡ ಮೆಟ್ಟಿಲುಗಳ ಮೇಲೆ ಸುಮಾರು ೬೦-೭೦ ಅಡಿ ಕೆಳಗಿಳಿದರೆ ಒಂದು ಕೃತಕಗುಹೆ ನಮ್ಮನ್ನು ಸ್ವಾಗತಿಸುತ್ತದೆ. ೪-೭ ಅಡಿ ಅಗಲ ಮತ್ತು ೫.೯ ಅಡಿ ಎತ್ತರದ ಬಾಗಿಲೊಳಗೆ ೨ ಅಡಿ ಅಗಲ ಮತ್ತು ೫೪ಅಡಿ ಉದ್ದವಿರುವ (ಒಬ್ಬ ಮನುಷ್ಯ ನಡೆದಾಡುವಷ್ಟು) ಗುಹೆ ರಚಿತಗೊಂಡಿದ್ದು ಗುಹೆಯ ನಾಲ್ಕೂಬದಿಗಳನ್ನು ಕಲ್ಲಿನ ಹಲಗೆಗಳಿಂದ ಶೃಂಗರಿಸಲಾಗಿದೆ. ಗುಹೆಯ ತುದಿ ನೈಸರ್ಗಿಕ ಕಲ್ಲನ್ನು ಕಡಿದು ಒಂದು ಗರ್ಭಗುಡಿಯನ್ನು ನಿರ್ಮಿಸಲಾಗಿದೆ. ಇಲ್ಲೊಂದು ಚಿಕ್ಕ ಲಿಂಗವಿದೆ. ಈ ಗರ್ಭಗುಡಿ ಸರಿಯಾಗಿ ರಾಮಲಿಂಗೇಶ್ವರ ಗರ್ಭಗುಡಿಯ ಕೆಳಭಾಗದಲ್ಲಿರುವುದು ವೈಶಿಷ್ಟ್ಯದ ಸಂಗತಿ ಯಾಗಿದೆ. ಇಲ್ಲಿ ನೈಸರ್ಗಿಕವಾದ ಪವಿತ್ರ ಜಲಧಾರೆಯೊಂದು ಅನುದಿನವೂ ಗರ್ಭಗುಡಿಯ ತುಂಬಾ ತುಂತುರು ಹನಿಯನ್ನು ಪಸರಿಸುತ್ತಿದೆ. ಸಂಪೂರ್ಣ ಕತ್ತಲೆಯಿಂದ ಆವೃತ್ತವಾದ ಈ ಸುಂದರ ಸ್ಥಳವನ್ನು ನೋಡಬೇಕಾದರೆ ಕೃತಕ ಬೆಳಕಿನ ಅವಶ್ಯಕತೆಯಿದೆ. ಗುಹೆಯ ಎದುರುಭಾಗದಲ್ಲಿ ಹಲವಾರು ನಾಗಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದಕ್ಕೆ ಹೊಂದಿಕೊಂಡು ಚಿಕ್ಕ ನದಿಯೊಂದು ಹರಿದಿದ್ದು ಅದುವೇ ಸಂಪೂರ್ಣ ದೇವಾಲಯ ಸಂಕೀರ್ಣಕ್ಕೆ ನೀರಿನ ಆಸರೆಯಾಗಿದೆ.

ಕೊಡ್ಲಿಗಿಯ ಅರಣ್ಯದಲ್ಲಿರುವ ಕೋಟೆಯ ಸ್ಮಾರಕಗಳು ಹೊರವಲಯದಲ್ಲಿರುವ ಸಾಲೆಗದ್ದೆ ದೇವಾಲಯವನ್ನು ಹೋಲುತ್ತದೆ. ಇಲ್ಲಿರುವ ಗುಡಿ ವಿಷ್ಣು ದೇವಾಲಯವೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಅದು ಕೊಳ್ಳೆಹೊಡೆಯಲ್ಪಟ್ಟಿದ್ದು ಚಿತ್ತದಗಿಡಗಳಿಂದ ಸುತ್ತುವರೆದಿರುವುದರಿಂದ ಯಾವ ಗುಡಿ ಯೆಂದು ತೀರ್ಮಾನಿಸುವುದು ಕಷ್ಟಕರವಾಗಿದೆ. ಒಟ್ಟಾರೆ ಬಿಳಗಿ ಶೈಲಿಗೂ ಇಲ್ಲಿಯ ಶೈಲಿಗೂ ಒಂದೇ ರೀತಿಯ ಹೋಲಿಕೆಗಳಿದ್ದು ಇದು ಬಿಳಗಿ ಸಂಸ್ಥಾನದ ಕಲಾಕೇಂದ್ರವೆನ್ನುವುದರಲ್ಲಿ ಸಂದೇಹವಿಲ್ಲ.

ಅವರಗುಪ್ಪಾ : ಸಿದ್ದಾಪುರದ ಪಕ್ಕದಲ್ಲೇ ಇರುವ ಅವರಗುಪ್ಪಾ ಬಿಳಗಿಯ ಸಾಂಸ್ಕೃತಿಕ ಅಧ್ಯಯನಕ್ಕೊಂದು ಮಹತ್ವದ ನೆಲೆಯಾಗಿದೆ. ಈ ಊರಿನ ಹೊರವಲಯದಲ್ಲಿ ಮಣ್ಣಿನ ಕೋಟೆಯ ಅವಶೇಷಗಳು ಸುತ್ತುವರೆದಿವೆ. ಊರೊಳಗಿನ ಸುಂದರ ಈಶ್ವರ ದೇವಾಲಯ ಅದರೆದುರಿಗಿರುವ ನಂದಿಮಂಟಪ, ಪಕ್ಕದಲ್ಲಿರುವ ಎರಡು ಮಹಿಷಮರ್ದಿನಿಯ ವಿಗ್ರಹಗಳು, ಗಣೇಶ, ನಾಗ, ನಂದಿ, ಧ್ವಜಸ್ತಂಭ ಮುಂತಾದವು ಅಧ್ಯಯನಕ್ಕೆ ಯೋಗ್ಯ ಆಕರಗಳಾಗಿವೆ. ದ್ಯಾವಮ್ಮನ. ಗುಡಿಯೆನ್ನುವ ಸ್ಥಳದಲ್ಲಿ ಬಯಲಲ್ಲಿರುವ ಆರು ಉಬ್ಬುಶಿಲ್ಪದ ಮೂರ್ತಿಗಳು ಒಂದರ ಪಕ್ಕದಲ್ಲೊಂದಿವೆ. ಇವುಗಳಲ್ಲಿ ಐದು ವಿಗ್ರಹಗಳು, ಸ್ತ್ರೀ ದೇವತೆಗಳಾಗಿದ್ದು ಆರನೇಯದು ವೀರಭದ್ರನ ವಿಗ್ರಹವಾಗಿದೆ. ಸ್ತ್ರೀದೇವತೆಗಳಿಗೆ ನಾಲ್ಕು ಕೈಗಳಿದ್ದು, ಕತ್ತಿ, ಢಮರು, ತ್ರಿಶೂಲ, ಅಭಯಹಸ್ತ ಮುಂತಾದ ಸಂಕೇತಗಳಿವೆ. ಊರಲ್ಲಿರುವ ವೀರಭದ್ರ ಗುಡಿಯಲ್ಲಿ ರುವ ವೀರಭದ್ರ ವಿಗ್ರಹ ಸುಮಾರು ೫ ಅಡಿಗಳಷ್ಟು ಎತ್ತರವಾಗಿದ್ದು, ಬಿಳಗಿ ಸಂಸ್ಥಾನದಲ್ಲಿ ಇದುವರೆಗೆ ದೊರೆತ ವೀರಭದ್ರ ವಿಗ್ರಹಗಳಲ್ಲಿಯೇ ಅತೀ ಎತ್ತರದ್ದಾಗಿದೆ. ಇದರ ಪಕ್ಕದಲ್ಲಿರುವ ಮಾರಿಗುಡಿ, ಗ್ರಾಮದೇವರಗುಡಿ ಅಲ್ಲಿರುವ ಬಣ್ಣದ ಚಿತ್ರಗಳು, ಊರ ತುಂಬೆಲ್ಲ ಇರುವ ಹಲವಾರು ಮಹಾಸತಿ ಹಾಗೂ ವೀರಗಲ್ಲುಗಳು ಸಾಂಸ್ಕೃತಿಕ ಅಧ್ಯಯನಕ್ಕೆಂದು ಮಹತ್ವದ ಆಧಾರಗಳಾಗಿವೆ.

ಅವರಗುಪ್ಪಾದ ಚನ್ನಪ್ಪ ದೇವಪ್ಪಾನಾಯ್ಕ ಜಂಬಳ್ಳಿ ಎಂಬುವವರ ಮನೆತನ ಪುರಾತನ ಕಾಲದಿಂದಲೂ ಬಿಳಗಿ ಸಂಸ್ಥಾನದ ಸೇವೆಯಲ್ಲಿ ಮುಂದುವರಿದುಕೊಂಡು ಬಂದಿದೆ ಯಂತೆ. ಬಿಳಗಿ ಅರಸರೇ ನೀಡಿದ ಎರಡು ಖಡ್ಗಗಳು (ಒಂದು ೩.೧೦ ಅಡಿ ಎತ್ತರವಾಗಿದ್ದರೆ ಇನ್ನೊಂದು ೪.೨ಅಡಿ ಎತ್ತರ ವಾಗಿದೆ) ೪.೬ ಅಡಿ ಎತ್ತರವಿರುವ ಒಂದು ಸುಂದರ ಊರುಗೋಲು ಇಂದಿಗೂ ಅವರ ಮನೆಯಲ್ಲಿ ನೋಡಸಿಗುತ್ತದೆ. ಊರ ಗ್ರಾಮದೇವರ ಗುಡಿಯಲ್ಲಿಯೂ ಇಂತಹ ಚಿಕ್ಕ-ಪುಟ್ಟ ಅನೇಕ ಆಯುಧಗಳು ಸಂಗ್ರಹವಿದೆ.

ಈ ಮೇಲಿನ ನೆಲೆಗಳಲ್ಲದೆ ಮಕ್ಕಿಗದ್ದೆ (ಹೊನ್ನಾವರ) ಕುಣ್ಜೆ (ಸಿದ್ದಾಪುರ) ಕಾನಳ್ಳಿ (ಸಿದ್ದಾಪುರ ಹುಕ್ಕಳ್ಳಿ ಗ್ರಾಮ) ಬರಗಾಲ (ಸಿದ್ದಾಪುರ - ವಾಜಗೇಡುಗ್ರಾಮ)ಅಲ್ಲದೆ ಬಿಳಗಿ, ಕ್ಯಾದಗಿ, ಬೇಡ್ಕಣಿ ಮುಂತಾದ ಊರುಗಳು ಅರಣ್ಯ ವಲಯಗಳಲ್ಲಿ ಗುರುತಿಸಲಾದ ಅನೇಕ ನೆಲೆಗಳು ಬಿಳಗಿ ಅರಸೊತ್ತಿಗೆಯ ಕಾಲದವುಗಳಾಗಿದ್ದು, ಅಲ್ಲಿ ವೈಜ್ಞಾನಿಕ ಅಧ್ಯಯನ ನಡೆದರೆ ಅಪೂರ್ಣಗೊಂಡ ಬಿಳಗಿ ಚರಿತ್ರೆಯನ್ನು ಪೂರ್ಣಗೊಳಿಸಲು ಸಾಧ್ಯ.

ಸಂತೇಬೆನ್ನೂರು ಸುಮತೀಂದ್ರ ನಾಡಿಗ *

# ಸಂತೇಬೆನ್ನೂರು ಪಾಳೇಗಾರರು

ಈಗಿನ ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕಿನಲ್ಲಿರುವ ಸಂತೇಬೆನ್ನೂರು ಎಂಬಲ್ಲಿ ಪಾಳೆಯಪಟ್ಟು ಕಟ್ಟಿ ಆಳಿದವರು ಸಂತೇಬೆನ್ನೂರು ಪಾಳೇಗಾರರು. ಈ ವಂಶದ ಮೂಲ ಪುರುಷ ವಿಜಯನಗರದಿಂದ ಬಂದ ಧೂಮರಾಜನೆಂದೂ, ಇಲ್ಲಿಗೆ ಸಮೀಪದ ಬಸವಾಪಟ್ಟಣಕ್ಕೆ ಬೇಟೆಗಾಗಿ ಬಂದು ಅಲ್ಲಿನ ಬೇಡರ ಯುವತಿಯನ್ನು ಮದುವೆಯಾಗಿ ಅವಳಿಂದ ಪಡೆದ ಮಕ್ಕಳಿಗೆ ಅಧಿಕಾರ ಕೊಡಲು ಒಪ್ಪಿ ಅಲ್ಲಿಯೇ ನೆಲೆ ನಿಂತು ಪಾಳೆಯಪಟ್ಟು ಕಟ್ಟಿದನೆಂದು ಹೇಳಲಾಗುತ್ತದೆ. ಈ ವಂಶದ ಹನುಮಪ್ಪನಾಯಕ ವಿಜಯನಗರದ ಅರಸರ ಬಳಿ ದಳಪತಿಯಾಗಿ ಕೆಲಸ ನಿರ್ವಹಿಸುತ್ತಿದ್ದು ಮಹಮ್ಮದೀಯ ರಾಜ್ಯಗಳೊಡನೆ ನಡೆದ ತಾಳಿಕೋಟೆ ಯುದ್ಧ (೧೫೬೫)ದಲ್ಲಿ ಪ್ರಮುಖ ಪಾತ್ರ ವಹಿಸಿದ್ದರಿಂದ ವಿಜಯನಗರದ ಅರಸು ಅಳಿಯ ರಾಮರಾಯ ಉತ್ಸಂಗಿ ವೇಂಟಕ್ಕೆ ಸಲ್ಲುವ ಮದಕರಿನಾಡಿನ ಈ ಸಂತೇಬೆನ್ನೂರನ್ನು ಅಮರ ಮಾಗಣಿಯಾಗಿ ಇವರಿಗೆ ಕೊಟ್ಟನೆಂದು ಮೆಕೆಂಜಿ ಕೈಫಿಯತ್ತು ತಿಳಿಸುತ್ತದೆ. ನಂತರ ಬಸವಾಪಟ್ಟಣದಿಂದ ಇವರು ಸಂತೇಬೆನ್ನೂರನ್ನು ತಮ್ಮ ರಾಜಧಾನಿಯಾಗಿ ಬದಲಾಯಿಸಿಕೊಂಡು ಅಲ್ಲಿಂದ ತಮ್ಮ ಆಡಳಿತ ನಡೆಸುತ್ತಿದ್ದುದಾಗಿ ದಾಖಲೆಗಳಿಂದ ತಿಳಿಯಬಹುದಾಗಿದೆ. ಈ ವಂಶದ ಆಡಳಿತ ಕಾಲದಲ್ಲಿ ಇವರು ತಮ್ಮ ರಾಜ್ಯವನ್ನು ಪೂರ್ವದಲ್ಲಿ ಚಿತ್ರದುರ್ಗದಿಂದ ಪಶ್ಚಿಮದ ಕವಲೇದುರ್ಗದವರೆಗೂ, ಉತ್ತರದಲ್ಲಿ ಹರಿಹರದಿಂದ ದಕ್ಷಿಣದ ಬಾಬಾಬುಡನ್‌ಗಿರಿ ಬೆಟ್ಟದವರೆಗೂ ವಿಸ್ತರಿಸಿದರೆಂದು ಚಾರಿತ್ರಿಕ ದಾಖಲೆಗಳು ತಿಳಿಸುತ್ತವೆ. ಇವರು ೧೬-೧೮ನೇ ಶತಮಾನಗಳಲ್ಲಿ ಮೂರು ಶತಮಾನಗಳ ಕಾಲ ರಾಜ್ಯಾಡಳಿತ ನಡೆಸಿದ್ದಾಗಿ ಐತಿಹಾಸಿಕ ದಾಖಲೆ ಹಾಗೂ ಶಾಸನಗಳಿಂದ ತಿಳಿದು ಬರುತ್ತದೆ. ಈ ಮನೆತನದ ಪೂರ್ಣ ವಂಶಾವಳಿ ನಿಖರವಾಗಿ ಮತ್ತು ಅನುಕ್ರಮವಾಗಿ ತಿಳಿದು ಬಂದಿಲ್ಲವಾದರೂ ದೊರೆತಿರುವ ಶಾಸನಾಧಾರಗಳಿಂದ, ಮೆಕೆಂಜಿ ಸಂಗ್ರಹಿಸಿದ ಕೈಫಿಯತ್ತು, ರೈಸ್ ಮತ್ತು ಹಯವದನರಾವ್‌ರವರ ಮೈಸೂರು ಗೆಜೆಟಿಯರ್ಸ್, ಕೆಳದಿ ಲಿಂಗಣ್ಣ ಕವಿಯ ಕೆಳದಿ ನೃಪವಿಜಯ ಮುಂತಾದವುಗಳಿಂದ ಸುಮಾರು ಇಪ್ಪತ್ತಕ್ಕೂ ಹೆಚ್ಚು ಜನನಾಯಕರು ಈ ವಂಶಾವಳಿಯಲ್ಲಿ ಆಡಳಿತ ನಡೆಸಿರುವುದಾಗಿ ಗೊತ್ತಾಗುತ್ತದೆ. ಈವರೆಗೆ ಬೆಂಜಮಿನ್ ಲ್ಯೂಯಿಸ್ ರೈಸರು ಈ ನಾಯಕರ ೨೬ ಶಾಸನಗಳನ್ನು ಗುರುತಿಸಿದ್ದು ಇವುಗಳಲ್ಲಿ ೨೧ ಶಿಲಾಶಾಸನಗಳು, ೫ ತಾಮ್ರದ ಶಾಸನಗಳು ಇವೆ. ಸಂತೇಬೆನ್ನೂರು ನಾಯಕರ ಶಾಸನಗಳು ಶಿವಮೊಗ್ಗ ಜಿಲ್ಲೆಯಲ್ಲಿ ೧೩, ಚಿತ್ರದುರ್ಗ ಜಿಲ್ಲೆಯಲ್ಲಿ ೫, ಚಿಕ್ಕಮಗಳೂರು(ಆಗಿನ ಕಡೂರು)ಜಿಲ್ಲೆಯಲ್ಲಿ ೮, ತುಮಕೂರು ಜಿಲ್ಲೆಯಲ್ಲಿ ೧ ಲಭ್ಯವಾಗಿ ಪ್ರಕಟಗೊಂಡಿವೆ. ಈಚೆಗೆ ಧಾರವಾಡ ಜಿಲ್ಲೆಯ ಬ್ಯಾಡಿಗಿ ತಾಲ್ಲೂಕು ಕದರಮಂಡಲಗಿಯಲ್ಲಿ ೧ ಶಾಸನ ಇರುವುದು ಬೆಳಕಿಗೆ ಬಂದಿದೆ. ಪೂನಾದ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯಲ್ಲಿ ಈ ನಾಯಕರ ಒಂದು ತಾಮ್ರಶಾಸನ ಇರುವುದನ್ನು ಕೆಳದಿ ಗುಂಡಾಜೋಯಿಸರು ಪತ್ತೆ ಮಾಡಿದ್ದಾರೆ.

ಲೂಯಿಸ್ ರೈಸರ ಶಾಸನಸಂಪುಟಗಳ ರೀತ್ಯಾ ಸಂತೇಬೆನ್ನೂರು ಪಾಳೇಯಗಾರರಾಗಿ ಹನುಮಪ್ಪನಾಯಕ, ಕೆಂಗಪ್ಪ ನಾಯಕ, ಪಿಲ್ಲಪ್ಪನಾಯಕ, ರಂಗಪ್ಪನಾಯಕ, ಮುಮ್ಮಡಿ ಹುಮಪ್ಪನಾಯಕ, ಬಸವಪ್ಪನಾಯಕ, ರಾಜಪ್ಪನಾಯಕ, ದಳನಾಯಕ, ಚಿಕ್ಕಣ್ಣನಾಯಕ, ಸರ್ಜಾಹನುಮಪ್ಪನಾಯಕ, ಸೀತಾರಾಮಪ್ಪನಾಯಕ, ನಿಚ್ಚಮದುವಣಿಗ ಹನುಮಪ್ಪನಾಯಕ ಅವರುಗಳು ಆಡಳಿತ ನಡೆಸಿದರೆಂದು ತಿಳಿದು ಬರುತ್ತದೆ. ಡಾ॥ ಕೆ. ಎನ್. ಚಿಟ್ನೀಸ್‌ರವರ 'ಫೆಡರಲ್ ಚೀಫ್ಸ್ ಇನ್ ಬಿದನೂರು' ಗ್ರಂಥದಲ್ಲಿ ಅಯ್ಯಪ್ಪನಾಯಕ ಎಂಬ ಒಬ್ಬ ಸಂತೇಬೆನ್ನೂರು ಪಾಳೇಯಗಾರನ ಹೆಸರು ಉಕ್ತವಾಗಿದೆ. ಆದರೆ ಶಾಸನಗಳಲ್ಲಿ ಅವನು ಉಕ್ತನಾಗಿಲ್ಲ. ಶಿವಮೊಗ್ಗ ೧೦೮ ನೇ ಶಾಸನದಲ್ಲಿ ಹಿರೇ ರಂಗಪ್ಪನಾಯಕ, ಶಿಕಾರಿಪುರ ೧೦೭ ನೇ ಶಾಸನದಂತೆ

---

* ವರದಿಗಾರ, ಪ್ರಜಾವಾಣಿ ದೈನಿಕ, ಸಂತೇಬೆನ್ನೂರು - ೫೭೭ ೫೫೨

ರಂಗಪ್ಪನಾಯಕ, ಹೊನ್ನಾಳಿ ೩೪ ನೇ ಶಾಸನದಂತೆ ಬಸವಪ್ಪ ನಾಯಕ ಸಂತೇಬೆನ್ನೂರು ನಾಯಕರೆಂದು ರೈಸರು ತಮ್ಮ ಪಟ್ಟಿಯಲ್ಲಿ ದಾಖಲಿಸಿದ್ದರೂ ಅವರು ಸಂತೇಬೆನ್ನೂರು ಪಾಳೇಗಾರರಾಗಿರುವ ಬಗ್ಗೆ ಅವರೇ ಸಂದೇಹ ವ್ಯಕ್ತಪಡಿಸಿದ್ದಾರೆ. ಮೆಕೆಂಜಿ ಕೈಫಿಯತ್ತಿನಂತೆ ಹುಚ್ಚಪ್ಪನಾಯಕ, ಬಿಲ್ಲಪ್ಪನಾಯಕ, ಬಾಳಪ್ಪ ನಾಯಕ, ಬಾಲಹನುಮಪ್ಪನಾಯಕ, ಇಮ್ಮಡಿ ಹನುಮಪ್ಪ ನಾಯಕ, ಹಿರೇ ಕೆಂಗಾಹನುಮಪ್ಪನಾಯಕ, ಚಿಕ್ಕ ಕೆಂಗಾ ಹನುಮಪ್ಪನಾಯಕ, ಕೃಷ್ಣಪ್ಪನಾಯಕ, ರಾಮಪ್ಪನಾಯಕ, ಪಟ್ಟಾಭಿರಾಮಪ್ಪ, ರಘುನಾಥನಾಯಕ, ಲಕ್ಷ್ಮಣಪ್ಪನಾಯಕ, ಎಂಬುವರೂ ಈ ವಂಶದ ಪಾಳೇಗಾರರಾಗಿ ಆಡಳಿತ ನಡೆಸಿರುವುದಾಗಿ ತಿಳಿದು ಬರುತ್ತದೆ. ಈ ನಾಯಕರಲ್ಲಿ ಕೆಂಗಣ್ಣ, ಕೆಂಗಪ್ಪ, ಕೊಂಗಣ್ಣ, ಹನುಮಪ್ಪ, ಕೆಂಗಾ ಹನುಮಪ್ಪ, ಸರ್ಜಪ್ಪ, ಸರ್ಜಾಹನುಮಪ್ಪ ಎಂಬ ಹೆಸರಿನ ನಾಯಕರು ಹಲವಾರು ಸಾರಿ ಬಂದಿದ್ದು ಇವರೆಲ್ಲರೂ ಬೇರೆ ಬೇರೆಯೇ ಅಥವಾ ಒಬ್ಬರೇ ಎಂಬುದಕ್ಕೆ ಇನ್ನಷ್ಟು ಆಧಾರ, ಸಂಶೋಧನೆ ಬೇಕಿದೆ.

ಸಂತೇಬೆನ್ನೂರು ಆಳುತ್ತಿದ್ದಾಗ ಬಿಜಾಪುರದ ಸುಲ್ತಾನನ ದಂಡನಾಯಕ ರಣದುಲ್ಲಾಖಾನ್ ಸಂತೇಬೆನ್ನೂರನ್ನು ವಶಪಡಿಸಿಕೊಂಡಾಗ ಇವರ ವಂಶಸ್ಥರು ತರೀಕೆರೆ - ಬಾಣಾವರಕ್ಕೆ ಹೋಗಿ ನೆಲೆಸಿದರು. ಹಾಗಾಗಿ ಮುಂದೆ ಇವರು ತರೀಕೆರೆ ಹಾಗು ಬಾಣಾವರದ ಪಾಳೇಯಗಾರರೆಂದು ಕರೆಯಲ್ಪಟ್ಟರೂ ಅಲ್ಲಿ ತಮ್ಮ ಆಡಳಿತವನ್ನು ಸಂತೇಬೆನ್ನೂರು ನಾಯಕರೆಂದು ಗುರ್ತಿಸಿಕೊಂಡು ನಡೆಸಿದರು ಮತ್ತು ಅಲ್ಲಿಂದ ಹೊರಡಿಸಿದ ಶಾಸನಗಳಲ್ಲೂ ಸಂತೇಬೆನ್ನೂರು ನಾಯಕರೆಂದೇ ಕರೆದುಕೊಂಡಿದ್ದಾರೆ. ಮೂಲತಃ ಇವರು ಬಸವಾಪಟ್ಟಣದ ಪಾಳೇಗಾರರಾಗಿದ್ದರೂ ಲಭ್ಯವಿರುವ ಎಲ್ಲಾ ಶಾಸನಗಳಲ್ಲೂ ಬಸವಾಪಟ್ಟಣದ ಪಾಳೇಗಾರರೆಂಬ ಉಲ್ಲೇಖ ಎಲ್ಲಿಯೂ ಇಲ್ಲದಿರುವುದು ಆಶ್ಚರ್ಯ ತರುತ್ತದೆ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಕರ್ನಾಟಕ ವಿಷಯ ವಿಶ್ವಕೋಶ, ಮೈಸೂರು-ಕರ್ನಾಟಕ ಗ್ಯಾಜೆಟಿಯರ್ಸ್ ಮುಂತಾದವುಗಳಲ್ಲಿ ಸಂತೇಬೆನ್ನೂರು ಚರಿತ್ರೆಯನ್ನು ಬರೆಯುವಾಗ ಬಸವಾಪಟ್ಟಣದ ಪಾಳೇಗಾರರೆಂದು ಕರೆಯಲಾಗಿದೆ. ಆದರೆ ಹೆಚ್ಚು ಪ್ರಬಲರಾಗಿ ಮತ್ತು ಹೆಚ್ಚು ಕಾಲ ಸಂತೇಬೆನ್ನೂರಿನಿಂದಲೇ ಆಡಳಿತ ನಡೆಸಿದ ಕಾರಣ ಅವರು ಶಾಸನಗಳಲ್ಲಿ ಹೇಳಿಕೊಂಡಂತೆ ಸಂತೇಬೆನ್ನೂರು ಪಾಳೇಗಾರರೆಂದೇ ಅವರನ್ನು ಗುರುತಿಸಿ ಕರೆಯುವುದು ಸಮಂಜಸ ಎನಿಸುತ್ತದೆ.

ಈ ನಾಯಕರ ಆಡಳಿತ ಭಾಷೆ ಕನ್ನಡವಾಗಿತ್ತು. ಇವರು ಮೂಲತಃ ಬೇಡರ ಜಾತಿಗೆ ಸೇರಿದ್ದ ಪುವ್ವಲ ವಂಶದದವರಾಗಿದ್ದರು. ಇವರು ಸಂತೇಬೆನ್ನೂರು ರಾಮಚಂದ್ರಸ್ವಾಮಿಯ ಪಾದಪದ್ಮಾರಾಧಕರೂ ಆಂಜನೇಯ ಸ್ವಾಮಿಯ ಪರಮ ಭಕ್ತರೂ ಆಗಿದ್ದು ಅನೇಕ ಆಂಜನೇಯ ದೇವಸ್ಥಾನಗಳನ್ನು ಕಟ್ಟಿಸಿರುವುದಕ್ಕೆ ದಾಖಲೆಗಳಿವೆ. ಅವುಗಳಲ್ಲಿ ಚಿಕ್ಕಕೋಗಲೂರಿನ ಆಂಜನೇಯ ದೇವಸ್ಥಾನ ಬಹು ವಿಸ್ತಾರವಾಗಿದ್ದು ಅದು ಭವ್ಯವೂ ಆಗಿದೆ. ಸಂತೇಬೆನ್ನೂರಿನಲ್ಲಿ ಇವರು ಕಟ್ಟಿಸಿದ ಪುಷ್ಕರಣಿಯ ವೈಭವವೂ, ಕಲಾವಂತಿಕೆಯಿಂದ ಕೂಡಿದ್ದು ಇಂದಿಗೂ ಅದು ದಕ್ಷಿಣ ಭಾರತದಲ್ಲಿ



ಅಪರೂಪದ ಶಿಲ್ಪ ಕಲಾಕೃತಿಯಾಗಿದೆ. ಈ ಪುಷ್ಕರಣಿ, ನಾಯಕರ ರಸಿಕತೆಯ ಉದಾರಹಣೆಯಾಗಿದ್ದು ಇದು ಇಂಡೋ ಅರೇಬಿಕ್ ಶೈಲಿಯಲ್ಲಿದ್ದು ಧ್ವಜಾಯದಲ್ಲಿ ೨೩೫ ಅಡಿ ಉದ್ದ, ೨೪೫ ಅಡಿ ಅಗಲ, ೩೦ ಅಡಿ ಆಳವುಳ್ಳ ಭವ್ಯ ಕೊಳವಾಗಿದೆ. ಇದರ ಮಧ್ಯೆ ಕೂಷ್ಮಾಂಡು ಶೈಲಿಯಲ್ಲಿ ನಿರ್ಮಿಸಿರುವ ವಸಂತ ಮಂಟಪ (ಕಾರಂಜಿ ಮಂಟಪ) ಸುತ್ತಲೂ ಇರುವ ಅಷ್ಟದಿಕ್ಪಾಲಕರ ಹೆಸರಿನಲ್ಲಿರುವ ಮಂಟಪಗಳನ್ನು, ತುಂಬಾ ಮನೋಹರವಾಗಿ ನಿರ್ಮಿಸಲಾಗಿದೆ. ಸಂತೇಬೆನ್ನೂರು ಬೆಳ್ಳಿನೂಡು, ಕೋಗಲೂರು, ಮೆದಿಕೆರೆ, ತಣಿಗೆರೆ, ಸಿದ್ಧನ ಮಠ, ಕುಳೇನೂರು, ಬಸವಾಪಟ್ಟಣ, ಕಂಚುಗಾರನಹಳ್ಳಿ, ಸಾಸುವೆಹಳ್ಳಿ, ಹೊಸಹಳ್ಳಿ ಮುಂತಾದ ಕಡೆ ಇವರು ಕೆರೆಗಳನ್ನು ಕಟ್ಟಿಸಿದ್ದು ಅವುಗಳ ನಿರ್ಮಾಣ ವರ್ಷವನ್ನು ಮೆಕೆಂಜಿ ತಮ್ಮ ಕೈಫಿಯತ್‌ನಲ್ಲಿ ದಾಖಲಿಸಿದ್ದಾರೆ. ಸಂತೇಬೆನ್ನೂರು

ಬಸವಾಪಟ್ಟಣ, ತರೀಕೆರೆ, ಬಾಣಾವರ, ಹರಿಹರ, ಅಜ್ಜಂಪುರ, ಕಾಮನದುರ್ಗ, ರಂಗಯ್ಯನ ಗಿರಿ, ಹನುಮಯ್ಯನ ಗಿರಿ, ಮುಂತಾದ ಕಡೆ ಇರುವ ಇವರು ಕಟ್ಟಿಸಿದ ಕೋಟೆ, ಕೊತ್ತಲಗಳು ಇನ್ನೂ ಅವಶೇಷವಾಗಿ ಉಳಿದಿವೆ.

ಇವರು ಚಿತ್ರದುರ್ಗ ಪಾಳೇಗಾರರೊಂದಿಗೆ ಮತ್ತು ಚಿತ್ತೂರು ಜಿಲ್ಲೆ ಕೆಂಗುಂದಿ ಕುಪ್ಪಂ ಮನೆತನದೊಂದಿಗೆ ನೆಂಟಸ್ತಿಕೆ ಬೆಳೆಸಿಕೊಂಡಿರುವುದಾಗಿ ತಿಳಿದು ಬಂದಿದ್ದು ಬಿಜಾಪುರ ಸುಲ್ತಾನರು, ಅವರ ದಳಪತಿ ಷಹಜಿ (ಶಿವಾಜಿ ತಂದೆ) ಸೀರಾ ನವಾಬರು. ಮರಾಠ, ಹೈದರ-ಟಿಪ್ಪು ಮೈಸೂರು ಅರಸರು, ಕೆಳದಿ, ಹರಪನ ಹಳ್ಳಿ, ಮಾಯಕೊಂಡ, ಹುಚ್ಚಂಗಿ ದುರ್ಗ, ಚಿತ್ರದುರ್ಗ, ಬೆಳಗುತ್ತಿ, ಪಾಳೇಗಾರರು ಮುಂತಾದವರೊಂದಿಗೆ ಅನೇಕ ಸಾರಿ ಯುದ್ಧ ನಡೆಸಿದ್ದರ ಪರಿಣಾಮ ಆರ್ಥಿಕವಾಗಿ ಕ್ರಮೇಣ ದುರ್ಬಲರಾಗಿ ತಮ್ಮ ಆಳ್ವಿಕೆ ಕಳೆದುಕೊಳ್ಳಬೇಕಾಗಿ ಬಂದಿರಬಹುದು.

ಇವರು ವಿಜಯನಗರದ ಅರಸರ ಅಳತೆ, ನಾಣ್ಯ ಬಳಸುತ್ತಿದ್ದುದಾಗಿ ಶಾಸನಗಳಿಂದ ತಿಳಿದು ಬರುತ್ತದೆ. ಇವರು ಕೂಡಲಿ ಶೃಂಗೇರಿ ಮಠಗಳಿಗೆ, ಸಂತೇಬೆನ್ನೂರಿನ ಸಿದ್ಧಲಿಂಗಮಠಕ್ಕೆ ದಾನದತ್ತಿ ಕೊಟ್ಟಿರುವುದಾಗಿ ತಿಳಿದು ಬರುತ್ತದೆ. ಸಂತೇಬೆನ್ನೂರು ನಿರ್ಮಿಸಿದ ಈ ವಂಶದ ಹಿರೇಕೆಂಗಾಹನಮಮಪ್ಪನಾಯಕನ ತಮ್ಮ ಚಿಕ್ಕ ಹನುಮಪ್ಪ ಹುಲಿಯೊಡನೆ ಹೋರಾಡಿ ಬಿಜಾಪುರದ ಸೆರೆಯಲ್ಲಿದ್ದ ತನ್ನ ಅಣ್ಣನನ್ನು ಬಿಡಿಸಿಕೊಂಡು ಬಂದನೆಂದು ಅವನ ಆ ಸಾಹಸಕ್ಕೆ ಮೆಚ್ಚಿ ಅವನಿಗೆ ಸರ್ಜಾ ಹನುಮಪ್ಪನಾಯಕನೆಂಬ ಬಿರುದು ಬಿಜಾಪುರದ ಸುಲ್ತಾನ ಕೊಟ್ಟನೆಂದು ಮೆಕೆಂಜಿ ಕೈಫಿಯತ್ತು ತಿಳಿಸಿದರೆ ಸರ್ಜಾ ಎಂಬ ಬಿರುದು ಹೈದರಾಲಿ ಮೈಸೂರು ಯುದ್ಧದಲ್ಲಿ ತನಗೆ ಸಹಾಯ ಮಾಡಿದ್ದಕ್ಕಾಗಿ ಈ ವಂಶದ ಹನುಮಪ್ಪನಾಯಕ ಎಂಬುವವನಿಗೆ ಕೊಟ್ಟನೆಂದು ಮೈಸೂರು ವಿಶ್ವಕೋಶದಲ್ಲಿ ತಿಳಿಸಲಾಗಿದೆ.ಸರ್ಜಾ ಬಿರುದು ಪಡೆದ ನಂತರ ಅದನ್ನು ತಮ್ಮ ಹೆಸರಿನೊಂದಿಗೆ ಈ ವಂಶಸ್ಥರು ಸೇರಿಸಿಕೊಂಡಿರುವುದನ್ನು ನಾವು ಗುರುತಿಸಬಹುದಾಗಿದೆ. ಇವರು ಮಂಜರಾಬಾದ್ ಪ್ರದೇಶವನ್ನು ಹೈದರಾಲಿ ಕಾಲದಲ್ಲಿ ಪಡೆದು ಆಡಳಿತ ನಡೆಸಿದರು. ಈ ವಂಶದ ಸರ್ಜಾ ರಂಗಪ್ಪನಾಯಕ ೩-೪ ನೇ ಮೈಸೂರು ಯುದ್ಧದಲ್ಲಿ ಭಾಗಿಯಾಗಿ ಹೆಸರುಗಳಿಸಿದ್ದ. ಟಿಪ್ಪು ಸುಲ್ತಾನ ಮಡಿದ ನಂತರ ಇಂಗ್ಲೀಷರ ದಂಡು ಮೈಸೂರು ಪ್ರಾಂತ್ಯವನ್ನು ವಶಪಡಿಸಿಕೊಂಡಿತು. ಆ ಸಮಯದಲ್ಲಿ ದೇಶದಲ್ಲಿ ತಲೆದೋರಿದ್ದ ಆಡಳಿತ ವ್ಯವಸ್ಥೆ, ಅಧಿಕಾರಿಗಳ ನಿರಂಕುಶ ದಬ್ಬಾಳಿಕೆ, ಶೋಷಣೆಗೆ ಕೆರಳಿ ಈ ವಂಶದ ಸರ್ಜಾ ರಂಗಪ್ಪ ಬೇಡ ಸಿಪಾಯಿಗಳ ಮುಂದಾಳುತನ ವಹಿಸಿ ನಗರದ ಬೂದಿಬಸಪ್ಪನ ಜೊತೆ ಸೇರಿ ಬ್ರಿಟಿಷರ ವಿರುದ್ಧ ನಡೆಸಿದ ದಂಗೆಯಲ್ಲಿ ಮುಖ್ಯ ಪಾತ್ರವಹಿಸಿದ್ದನು. ಇದಕ್ಕೆ ರಂಗಪ್ಪನಾಯಕನ ಆಡಾಉಡಿ ಎಂತಲೂ ಹೆಸರಾಯಿತು. ಇಂಗ್ಲೀಷರು ಈ ದಂಗೆ ಅಡಗಿಸಿ ಇವನೊಂದಿಗಿದ್ದ ಇವರ ಮಗ ಸರ್ಜಾ ಹನುಮಪ್ಪನಾಯಕನನ್ನು ಬೆಂಗಳೂರಿನಲ್ಲಿ ಗಲ್ಲಿಗೇರಿಸಿತು. ರಂಗಪ್ಪ ಮಾತ್ರ ಶತ್ರುಗಳೊಂದಿಗೆ ಹೋರಾಡುತ್ತಾ ವೀರ ಮರಣ ಹೊಂದಿದ (೧೮೩೨). ಇವನ ನಂತರ ಈ ಪಾಳೇಪಟ್ಟಿನ ಅಸ್ತಿತ್ವ ಕೊನೆಗೊಂಡಿತು. ಮುಂದೆ ಇವರ ಮಕ್ಕಳು ಅಂತಃಕಲಹ, ಸ್ವಜನ ಪಕ್ಷಪಾತಕ್ಕೆ ಸಿಕ್ಕಿ ಕೋರ್ಟು ಕಛೇರಿಗೆ ಅಪಾರ ಹಣ ಖರ್ಚು ಮಾಡಿದರೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲಾರದೆ ಹೋದರು. ತರೀಕೆರೆಯಲ್ಲಿ ನೆಲೆ ನಿಂತಿದ್ದ, ಈ ವಂಶದ ಕಡೆಯ ಸಂತತಿ ಸರ್ಜಾ ಹನುಮಪ್ಪನಾಯಕರು ಮಕ್ಕಳಿಲ್ಲದೆ ೧೯೪೭ರಲ್ಲಿ ತೀರಿಕೊಂಡರು. ಈಗ ಈ ವಂಶದ ವಾರಸುದಾರರು ಯಾರೂ ಇರುವುದಿಲ್ಲ.

ಹೀಗೆ ಮೂರು ಶತಮಾನಕ್ಕೂ ಹೆಚ್ಚು ಕಾಲ ವಿಜಯನಗರದ ಸಾಮಂತರಾಗಿ ನಂತರ ಸ್ವತಂತ್ರ ಪಾಳೇಯ ಗಾರರಾಗಿ ಅನಂತರ ಬಿಜಾಪುರ ಸುಲ್ತಾನರ ಅಧೀನರಾಗಿ, ಕೆಲ ಕಾಲ ಕೆಳದಿ, ಚಿತ್ರದುರ್ಗ, ಹೈದರಾಲಿಯ ಅಧೀನ ನಾಯಕರಾಗಿ ಆಳಿದ ಈ ವಂಶ ತನ್ನ ಆಡಳಿತ ಕಾಲದಲ್ಲಿ ತನ್ನದೇ ಆದ ವಿಶಿಷ್ಟತೆಯಿಂದ ಮೆರೆದು ಚಾರಿತ್ರಿಕ ದಾಖಲೆಗಳನ್ನು ಉಳಿಸಿ ಮರೆಯಾಗಿದೆ. ಈ ಪಾಳೇಗಾರರ ಬಗ್ಗೆ ಇನ್ನೂ ವ್ಯಾಪಕ ಸಂಶೋಧನೆ ಆಗಬೇಕಿದೆ.

**ಆಧಾರ ಸೂಚಿ**


*೧. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೬,೭,೧೧,೧೨
*೨. ಕರ್ನಾಟಕ, ಕನ್ನಡ ವಿಷಯ ವಿಶ್ವಕೋಶ
*೩. ಕರ್ನಾಟಕದ ಕೈಫಿಯತ್ತುಗಳು
*೪. ಹೊನ್ನ ಬಿತ್ತೇವು ಹೊಲಕ್ಕೆಲ್ಲ (ಸಂಸ್ಮರಣ ಸಂಚಿಕೆ)
*೫. ಮೈಸೂರು ಗೆಜೆಟಿಯರ್ಸ್ : (ಸಂ) ರೈಸ್ ಮತ್ತು ಹಯವದನ ರಾವ್
*೬. ಕರ್ನಾಟಕ ರಾಜ್ಯ ಗೆಜೆಟಿಯರ್ : (ಸಂ) ಡಾ॥ ಸೂರ್ಯನಾಥ ಕಾಮತ್.

ಡಾ॥ ಡಿ. ಎಸ್. ಯೋಗೀಶ್ವರಪ್ಪ*

# ಸಿರಾ ನವಾಬರು

ಸಿರಾ ತುಮಕೂರು ಜಿಲ್ಲೆಯಲ್ಲಿನ ತಾಲ್ಲೂಕು ಕೇಂದ್ರ. ರಾಷ್ಟ್ರೀಯ ಹೆದ್ದಾರಿ ೪ರಲ್ಲಿ ಬೆಂಗಳೂರಿನಿಂದ ೧೨೦ ಕಿ.ಮೀ, ತುಮಕೂರಿನಿಂದ ೫೦ ಕಿ.ಮೀ ದೂರದಲ್ಲಿದೆ. ಇದು ಸು.೧೫-೧೬ನೇ ಶತಮಾನದಿಂದ ಐತಿಹಾಸಿಕ ಸ್ಥಾನಮಾನ ಹೊಂದಿ, ಮೊದಲು ರತ್ನಗಿರಿ ಪಾಳೆಯಗಾರರ ಅಧೀನದಲ್ಲಿಯೂ, ನಂತರ ಆದಿಲ್‌ಶಾಹಿಗಳ, ಮರಾಠರ, ಮೊಗಲರ, ಹೈದರ್ ಟಿಪ್ಪೂ ಸುಲ್ತಾನರ ಅಧೀನಕ್ಕೆ ಒಳಪಟ್ಟಂತಹ ಪ್ರದೇಶ. ಇಂತಹ ಐತಿಹಾಸಿಕ ಮಹತ್ವವನ್ನು ಹೊಂದಿದ ಸಿರಾವನ್ನು ಸೀರೆನಾಡು, *೧ ಸೀರೆ ಮುನ್ನೂರು *೨ ಸಿರೆಹಸೀಮ *೩ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಸಿರಾ ಪದದ ಮೂಲವನ್ನು ಗುರುತಿಸುತ್ತಾ ಎಂ. ವಿ. ಚಿತ್ರಲಿಂಗಯ್ಯನವರು ಶಿಬಿರಕಂ - ಶಿವಿರಯಂ - ಸೀಇರಯಂ - ಸೀರ್ಯ ಎಂದು ತಿಳಿಸಿದ್ದಾರೆ. *೪ ಕೊತ್ತಶಿವಿರಂ, ದಂಡಿನ ಶಿಬಿರಗಳನ್ನು ಉದಾಹರಿಸುತ್ತಾ ದೇವನ ಸೀರ್ಯವು ದೇವನ ಸಿವಿರವೆಂದು ಸಿಬಿರವೆಂಬ ಪದದ ಮೂಲವನ್ನು ಸಮರ್ಥಿಸುತ್ತಾರೆ. ಪ್ರಾಯಶಃ ಸೀರೆ - ಸೀರೆಹಾ - ಸೀರ್ಯ ಪದಗಳನ್ನು ಶಾಸನಗಳಲ್ಲಿ ಕಾಲಾನುಕ್ರಮದಲ್ಲಿ ಗುರುತಿಸಬಹುದಾದ್ದರಿಂದ ಸೀರ್ಯದ ಸಂಸ್ಕೃತಾನುಕರಣ, ಸಿಬಿರ ಎಂದು ಗುರ್ತಿಸುವುದು ಉಚಿತವೆನಿಸುವುದು.

ಸಿರಾ ಪಟ್ಟಣ ಸ್ಥಾಪನೆಯಾಗುವುದಕ್ಕೆ ಮೊದಲು ಆ ಸ್ಥಳ ಸಂಪೂರ್ಣ ದಟ್ಟ ಅರಣ್ಯವಾಗಿತ್ತು. ಇದು ರತ್ನಗಿರಿ ಪಾಳೆಯಗಾರನಾಗಿದ್ದ ರಂಗಪ್ಪರಾಜನ ಅಧೀನದಲ್ಲಿತ್ತು. ಈ ಪಾಳೆಯಗಾರ ಬೆಳೆಯುತ್ತಿದ್ದ ಜನಸಂಖ್ಯೆಗೆ ಅನುಗುಣವಾಗಿ ವಸತಿ ಕಲ್ಪಿಸಲು ಅರಣ್ಯವನ್ನು ಸಮತಟ್ಟು ಮಾಡಲು ಆದೇಶಿಸಿದನು. ಅನೇಕ ಕುಟುಂಬಗಳು ಅಲ್ಲಿಗೆ ಸ್ಥಳಾಂತರಗೊಂಡು ತಾವರೆಕೆರೆ ಮತ್ತು ಬುಕ್ಕಾಪಟ್ಟಣ ಎಂಬ ಊರುಗಳು ನಿರ್ಮಾಣವಾದವು. ಈ ಸಮಯದಲ್ಲಿ ಗೌಳಿಗ ಜನಾಂಗಕ್ಕೆ ಸೇರಿದ ದೇವಣ ಮತ್ತು ಸಿರಿಯಪ್ಪ ಎಂಬ ಸೋದರರು ತಮ್ಮ ಆಕಳುಗಳ ಸಮೇತ ಈ ಪ್ರದೇಶಕ್ಕೆ ಬಂದರು. ಇಲ್ಲಿ ತಮಗೆ ಸಾಕಷ್ಟು ಅನುಕೂಲವಿದ್ದುದರಿಂದ ಈಗಿನ ತೋಟ ಇರುವ ಎತ್ತರವಾದ ಪ್ರದೇಶವೆನಿಸಿದ ಬೂದಿದಿಬ್ಬ ಎಂದು ಕರೆಯುವ ಸ್ಥಳದಲ್ಲಿ ಕೊಪ್ಪವನ್ನು ಹಾಕಿಕೊಂಡು ನೆಲೆನಿಂತರು. ಕ್ರಮೇಣ ರತ್ನಗಿರಿ ಪಾಳೆಯಗಾರನ ಅಪ್ಪಣೆಯನ್ನು ಪಡೆದುಕೊಂಡು ದೇವಣಸಿರಾ ಎಂಬ ಹೆಸರಿನ ಗ್ರಾಮವನ್ನು ಸ್ಥಾಪಿಸಿದರು. *೫ ಒಂದು ದಿನ ರತ್ನಗಿರಿ ಪಾಳೆಯಗಾರ ರಂಗಪ್ಪನಾಯಕನು ತನಗೆ ಸೇರಿದ್ದ ಈ ಅರಣ್ಯಪ್ರದೇಶಕ್ಕೆ ಬೇಟೆಯಾಡಲು ಬಂದು ''ದೇವಣ ಸಿರಾ''ದಲ್ಲಿ ದಣಿವಾರಿಸಿ ಕೊಂಡನು. ಅಲ್ಲಿನ ಪ್ರಕೃತಿಯಿಂದ ಸಂತೋಷಗೊಂಡು, ಅದೇ ಸಮಯಕ್ಕೆ ರಕ್ಷಣೆಯ ದೃಷ್ಟಿಯನ್ನಿಟ್ಟುಕೊಂಡು ಆ ಸ್ಥಳದಲ್ಲಿ ಕೋಟೆ ಕಟ್ಟುವ ಮನಸ್ಸು ಮಾಡಿದನು. ಈ ಸೋದರರ ಸಹಾಯವನ್ನು ಪಡೆದುಕೊಂಡು ಕೋಟೆಯ ಕೆಲಸ ಆರಂಭಿಸಿದನು. *೬ ಕೋಟೆಯ ನಿರ್ಮಾಣ ಪ್ರಗತಿಯಲ್ಲಿತ್ತು. ಇಂತಹ ಸಮಯದಲ್ಲಿಯೇ ಈ ಕೋಟೆಯು ಬಿಜಾಪುರದವರ ದಾಳಿಗೆ ಒಳಗಾಗಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು.

ಇಕ್ಕೇರಿಯನ್ನು ಕೇಂದ್ರವಾಗಿರಿಸಿಕೊಂಡು ಕೆಳದಿಯವರೂ, ಶ್ರೀರಂಗಪಟ್ಟಣದಲ್ಲಿ ಮೈಸೂರು ಒಡೆಯರೂ, ಬಿಜಾಪುರದಿಂದ ಆದಿಲ್ ಶಾಹಿಗಳೂ ಆಳ್ವಿಕೆ ಮಾಡುತ್ತಿದ್ದರು. ಸಿರಾವು ಮೈಸೂರು ಮತ್ತು ವಿಜಾಪುರ ರಾಜ್ಯಕ್ಕೂ ಮಧ್ಯಭಾಗದಲ್ಲಿದ್ದು ಆಯಕಟ್ಟಿನ ಪ್ರದೇಶವಾಗಿತ್ತು. ಬಿಜಾಪುರವನ್ನು ಕ್ರಿ.ಶ. ೧೬೨೬ರಿಂದ ೧೬೫೬ರ ವರೆವಿಗೆ ಆಳಿದ ಮಹ್ಮದ್ ಆದಿಲ್‌ಶಾನ ದಂಡನಾಯಕನೇ ರಣದುಲ್ಲಾಖಾನ್. ಇವನ ದಾಳಿಗೆ ಬಲಿಯಾದುದು ಇಕ್ಕೇರಿ. ಇದರಿಂದ ಉತ್ತೇಜಿತನಾದ ಸುಲ್ತಾನ ಮೈಸೂರನ್ನು ಗೆಲ್ಲಲು ಖಾನನನ್ನು ಕ್ರಿ.ಶ. ೧೬೩೮ರಲ್ಲಿ ಕಳುಹಿಸಿದನೆಂದು ತಿಳಿದು ಬರುತ್ತದೆ. ಈ ದಂಡಯಾತ್ರೆಗೆ ರಣದುಲ್ಲಾಖಾನನ ಜೊತೆಗೆ

---

* ರೀಡರ್, ಇತಿಹಾಸ ವಿಭಾಗ, ಶ್ರೀಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು - ೫೭೨ ೧೦೨.

ಶಿವಾಜಿಯ ತಂದೆ ಷಹಾಜಿಯನ್ನು ದ್ವಿತೀಯ ಸೇನಾಧಿಪತಿಯಾಗಿ ಕಳುಹಿಸಿದ್ದು ಗೆದ್ದ ಪ್ರದೇಶಗಳಲ್ಲೊಂದನ್ನು ಜಾಗೀರು ಕೊಡುವ ವಾಗ್ದಾನದ ಮೇಲೆ ಎಂದು ಹೇಳಲಾಗಿದೆ.*೭ ಇದರಿಂದ ಷಹಾಜಿಯು ಖಾನನ ಜೊತೆಗೂಡಿ ೫೦ ಸಾವಿರ ಕುದುರೆ, ೫೦೦ ಆನೆ, ೪ ಲಕ್ಷ ಕಾಲಾಳು ಸಮೇತ*೮ ದಕ್ಷಿಣದತ್ತ ಹೊರಟನು. ಮಾರ್ಗದುದ್ದಕ್ಕೂ ಕೆಂಗಮನ್ನೆಯ ಹನುಮ (ಬಸವಾಪಟ್ಟಣ) ತನ್ನ ಸೈನ್ಯದೊಡನೆ ಉತ್ಸಾಹದಿಂದ ಭಾಗವಹಿಸಿದನು. ಸಿರಾಕ್ಕೆ ಉತ್ತರದಲ್ಲಿದ್ದ ರಾಜ್ಯಗಳನ್ನು ಧೂಳೀಪಟ ಮಾಡಿದ ಖಾನನು ಅತ್ಯುತ್ಸಾಹದಿಂದ ಮುನ್ನುಗ್ಗಿದನು. ಹನುಮನು, ಖಾನನಿಗೆ ಸಿರಾದ ಮೇಲೆ ದಾಳಿ ಮಾಡುವಂತೆ ಪ್ರೇರೇಪಿಸಿದನು. ಕೆಂಗಹನುಮ ಬಸವಾಪಟ್ಟಣದ ಹನುಮಪ್ಪ ನಾಯಕ ಆಗಿರಬಹುದೆಂದು ಇತಿಹಾಸಕಾರರೊಬ್ಬರು ತಿಳಿಸಿದ್ದಾರೆ.*೯ ಇವನು ರತ್ನಗಿರಿ ಪಾಳೆಗಾರರಿಂದ ತನಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳಲು ಖಾನನನ್ನು ಸಿರಾದ ಮೇಲೆ ದಾಳಿ ಮಾಡಲು ಆಹ್ವಾನಿಸಿದನು ಎಂದು ರೈಸ್‌ರೂ *೧೦ ಮತ್ತು ಹಯವದನ ರಾಯರೂ*೧೧ ಅಭಿಪ್ರಾಯ ಪಡುತ್ತಾರೆ. ಕಾರಣವೇನೇ ಇರಲಿ ಸೇನಾಪತಿ ರಣದುಲ್ಲಾಖಾನನು ಕೆಂಗಹನುಮನೊಡನೆ ಸಿರಾ ಕೋಟೆಗೆ ಮುತ್ತಿಗೆ ಹಾಕಿದನು. ಆ ಕೋಟೆಯನ್ನು ಸ್ವಾಧೀನದಲ್ಲಿಟ್ಟು ಕೊಂಡಿದ್ದ ರತ್ನಗಿರಿಯ ಪಾಳೆಯ ಗಾರ ರಂಗಪ್ಪರಾಜ ಬಲವಾಗಿ ಪ್ರತಿಭಟಿಸಿದನು. ಯುದ್ಧ ಬಹಳ ದಿನಗಳ ಕಾಲ ಮುಂದುವರಿದು, ಖಾನನು ಸಿರಾವನ್ನು ಲೂಟಿ ಮಾಡಿ ರಂಗಪ್ಪನನ್ನು ಕೊಂದು ಹಾಕಿದನು. ಸಿರಾ ಮತ್ತು ಅದರ ಅವಲಂಬಿ ಪ್ರಾಂತ್ಯವನ್ನು ಗೆದ್ದು 'ಮಲ್ಲೀಕ್ ಹುಸೇನ್' ಎಂಬುವವನನ್ನು ಈ ಭಾಗಕ್ಕೆ ಸುಬೇದಾರನನ್ನಾಗಿ ನೇಮಕ ಮಾಡಿದನು.*೧೨ ಹೀಗೆ ಸಿರಾ ಮತ್ತು ರತ್ನಗಿರಿ ಸ್ವಾಧೀನ ಪಡಿಸಿಕೊಂಡು ಆಡಳಿತ ನಡೆಸುತ್ತಿದ್ದ ಕಾಲದಲ್ಲಿ ಖಾಸಿಂಖಾನ್ ಎಂಬುವನು ಸುಬೇದಾರನಿಗೂ ರತ್ನಗಿರಿಯವರಿಗೂ ರಾಜಿ ಮಾಡಿಸಿ ಎರಡು ಲಕ್ಷರಾಜ್ಯದಲ್ಲಿ ಮೂರು ಭಾಗ ಮಾಡಿ ಎರಡು ಭಾಗ ಸಿರಾದವರಿಗೂ ಉಳಿದುದನ್ನು ರತ್ನಗಿರಿಯವರಿಗೂ ಹಂಚಿಕೊಟ್ಟು ಸಿರಾದಲ್ಲಿ ಮುಸಲ್ಮಾನರ ಆಡಳಿತವನ್ನು ಭದ್ರಗೊಳಿಸಿದನು.. *೧೩ ರತ್ನಗಿರಿಯ ಪಾಳೆಯಗಾರ ಅಪೂರ್ಣಗೊಳಿಸಿದ್ದ ಕೋಟೆಯನ್ನು ಪೂರ್ಣಗೊಳಿಸಿ ಪಟ್ಟಣದ ಸುತ್ತ ಮಣ್ಣಿನ ಕೋಟೆಯನ್ನು ಕಟ್ಟಿಸಿದನು. *೧೪ ಹೀಗೆ ಜನೋಪಯೋಗಿ ಕಾರ್ಯಗಳನ್ನು ಕೈಗೊಳ್ಳುತ್ತಾ ಕ್ರಿ.ಶ. ೧೬೫೧ ರಲ್ಲಿ ನಿವೃತ್ತನಾದನು. ನಂತರ ಈ ಎಲ್ಲಾ ಪ್ರದೇಶಕ್ಕೆ ಶಿವಾಜಿಯ ತಂದೆ ಷಹಾಜಿಯನ್ನು ಜಾಗೀರ್‌ದಾರನನ್ನಾಗಿ ಮಾಡಿದಂತೆ ತಿಳಿಯುವುದು. *೧೫

ಮೊಗಲರ ಔರಂಗಜೇಬನು ದಕ್ಷಿಣ ಭಾರತದ ಮೇಲೆ ದಾಳಿ ನಡೆಸಿದಂತಹ ಸಮಯದಲ್ಲಿ ಗೋಲ್ಕಂಡ ಮತ್ತು ಬಿಜಾಪುರಗಳು ಅವನ ವಶವಾದವು. ಬಿಜಾಪುರಕ್ಕೆ ಅಧೀನವಾಗಿದ್ದ ಪ್ರದೇಶಗಳೆಲ್ಲವೂ ಮೊಗಲ್ ಸಾಮ್ರಾಟನ ಅಧೀನಕ್ಕೆ ಬಂದವು. ಈ ಪ್ರದೇಶಗಳ ಆಡಳಿತ ನಿರ್ವಹಣೆಗೆ ಕಿಲ್ಲೆದಾರರು, ಭಕ್ಷಿಗಳು, ಮನ್‌ಸಬ್‌ದಾರರು, ಸುಬೇದಾರರು ದೇಶಾಯಿಗಳು ಎಂಬ ಹೊಸ ಅಧಿಕಾರಿಗಳನ್ನು ನೇಮಿಸಿದರು. ಇಂತಹ ಸಮಯದಲ್ಲಿ ಬಸವಾಪಟ್ಟಣ, ಬೂದಿಹಾಳು, ಸಿರಾ, ಪೆನುಗೊಂಡ, ಕೋಲಾರ, ಹೊಸಕೋಟೆ, ದೊಡ್ಡಬಳ್ಳಾಪುರ ಮುಂತಾದ ಏಳುಪರಗಣಗಳಿಗೆ ಸಿರಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿ ಖಾಸಿಂಖಾನ್ ಎಂಬುವನನ್ನು ಸುಬೇದಾರನನ್ನಾಗಿ ಮಾಡಲಾಯಿತು. ಹರಪನಹಳ್ಳಿ, ಕುಂದುರ್ಪಿ, ಆನೆಗೊಂದಿ, ಬಿದನೂರು, ಚಿತ್ರದುರ್ಗ, ಮೈಸೂರು ಎಂಬ ಆಶ್ರಿತ ರಾಜ್ಯಗಳಿಂದ ಸಿರಾವು ಬೆಳಗುತ್ತಾ ಪ್ರಸಿದ್ಧಿಗೆ ಬಂದಿತು. ದಕ್ಷ ಆಡಳಿತಗಾರನಾಗಿದ್ದ ಖಾಸಿಂಖಾನನು ಸಿರಾವನ್ನು ಮೊಗಲರ ಒಂದು ಪ್ರಮುಖ ಕೇಂದ್ರ ಹಾಗೂ ಮಿಲಿಟರಿ ನೆಲೆಯನ್ನಾಗಿ ಪರಿವರ್ತಿಸಲು ಶ್ರಮಪಟ್ಟನು. ಫೌಜುದಾರಿ ದಿವಾನ್ ಎಂಬ ಬಿರುದು ಗಳಿಸಿದ್ದ ಅವನು ರಾಜ್ಯದಲ್ಲಿ ಮುಸಲ್ಮಾನ್ ರೆವಿನ್ಯೂ ಪದ್ಧತಿಯನ್ನು ಜಾರಿಗೆ ತಂದು, ಜಾಮೀಮಸೀದಿಯನ್ನು ನಿರ್ಮಿಸಿದನು. ಇದೇ ಸಂದರ್ಭದಲ್ಲಿ ಮರಾಠರ ಸಂತೋಜಿ ಘೋರ್ಪಡೆಯು ೨೦ಸಾವಿರ ಅಶ್ವದಳದೊಡನೆ ಚಿತ್ರದುರ್ಗದ ಕಡೆ ಬಂದನು. ಸಿರಾದ ಖಾಸಿಂಖಾನನೂ ಕೂಡಾ ತನ್ನ ಪ್ರಾಂತ್ಯವನ್ನು ವಿಸ್ತರಿಸಲು ತಳಕಿನಿಂದ ದೊಡ್ಡೇರಿ ತನಕ ಹಲವಾರು ಯುದ್ಧಗಳನ್ನು ಮಾಡುತ್ತಾ ದೊಡ್ಡೇರಿ ಕೋಟೆಯಲ್ಲಿ ತಂಗಿದ್ದನು. ಅಲ್ಲಿಗೆ ಆಗಮಿಸಿದ ಮರಾಠರ ಸೇನೆ ದುರ್ಗದ ಭರಮಪ್ಪನಾಯಕನ ಸಹಾಯವನ್ನು ಪಡೆದುಕೊಂಡು ದೊಡ್ಡೇರಿ ಮೇಲೆ ಆಕ್ರಮಣ ಮಾಡಿತು. ಈ ದಾಳಿಯಿಂದ ಧೃತಿಗೆಡದ ಖಾನನು ವೀರಾವೇಷದಿಂದ ಹೋರಾಡಿದರೂ ಕೂಡಾ ಫಲನೀಡದೆ ದೊಡ್ಡೇರಿ ಶತ್ರುಗಳ ವಶವಾಯಿತು. ಯುದ್ಧದಲ್ಲಿ ಕಾಸಿಂಖಾನನು ಮೃತಪಟ್ಟನು. *೧೬

ಖಾಸಿಂಖಾನನ ಮರಣಾನಂತರ ಜುಲ್ಫೀಕರ್‌ಖಾನನು ಸಿರಾದ ನವಾಬನಾದನು. ಈತ ಮೊಗಲರಿಗೆ ಸೇರಿದ್ದ ದಕ್ಷಿಣದ ಪ್ರದೇಶಗಳ ಮೇಲೆ ಅಧಿಕಾರ ಸ್ಥಾಪಿಸಿದನು. ಕರ್ನಾಟಕ - ಬಿಜಾಪುರ- ಪಾಲ್ಘಾಟ್ ಪ್ರದೇಶದಲ್ಲಿ ಮೊಗಲರ ಪ್ರಾಬಲ್ಯವನ್ನು ಎತ್ತಿಹಿಡಿಯುವುದು ಅವನ ಉದ್ದೇಶವಾಗಿತ್ತು. ಜೊತೆಗೆ ಮೊಗಲರ ಸ್ನೇಹ ಬಯಸಿ ಕಪ್ಪಕಾಣಿಕೆ ನೀಡಲು ಬಯಸಿದ್ದ ಪಾಳೆಯಗಾರರಿಂದ ವಸೂಲಿ ಮಾಡುವ ಗುರುತರ ಜವಾಬ್ದಾರಿ ಈತನ ಮೇಲಿತ್ತು, ವ್ಯಾಪಾರಕ್ಕಾಗಿ ಸೌಲಭ್ಯಗಳನ್ನು ಯಾಚಿಸಲು ಬಂದಿದ್ದ ಐರೋಪ್ಯರಿಂದ ಹಣ ವಸೂಲಿ ಮಾಡುವ ಕೆಲಸವೂ ಇವನದಾಗಿತ್ತು. ಇಷ್ಟೆಲ್ಲಾ ಅಧಿಕ ಕೆಲಸಗಳು ಇದ್ದುದರಿಂದ ಅವನು ತನ್ನ ಸಹಾಯಕ್ಕೆ ರುಸ್ತುಂ ಜಂಗ್ ಎಂಬುವವನನ್ನು ನೇಮಕ ಮಾಡಿಕೊಂಡನು. ಜುಲ್ಫೀಕರ್‌ಖಾನನು ಆರ್ಕಾಟಿಗೆ ತೆರಳಿದ ನಂತರ, ರುಸ್ತುಂಜಂಗ್‌ನು ಪಾಳೆಯಗಾರರು, ದೇಶಾಯಿಗಳನ್ನು ವಿರೋಧ ಮಾಡಿಕೊಳ್ಳದೆ

ಉಪಾಯದಿಂದ ಮೊಗಲರಿಗೆ ನೀಡಬೇಕಾಗಿದ್ದ ಹಣವನ್ನು ಅವರಿಂದ ವಸೂಲಿ ಮಾಡಿ ಸಿರಾದ ಖಜಾನೆಯನ್ನು ಭರ್ತಿ ಮಾಡಿದನು. ಇದರಿಂದ ಸಂತೋಷಗೊಂಡ ಔರಂಗಜೇಬನು ಅವನಿಗೆ ಬಹದ್ದೂರ್ ಎಂಬ ಬಿರುದನ್ನು **ಕೈಫಿಯತ್ ಖಾನ್** ಎಂಬ ಗೌರವಯುತವಾದ ಹೆಸರನ್ನು ನೀಡಿ ಸನ್ಮಾನಿಸಿ ಕಳುಹಿಸಿದನು. *೧೭ ಸಿರಾದ ಬಳಿಯಲ್ಲಿಯೇ ಮತ್ತೊಂದು ಪೇಟೆಯನ್ನು ನಿರ್ಮಿಸಿ 'ರುಸ್ತುಂಬಾದ್' ಎಂದು ಕರೆದನು. ಮತ್ತು ಪ್ರತಿ ವರ್ಷವೂ ರಾಜ್ಯದ ಲೆಕ್ಕಪತ್ರಗಳನ್ನು ದಾಖಲೆಗಳ ಸಮೇತ ಚಕ್ರವರ್ತಿಯ ಆಸ್ಥಾನಕ್ಕೆ ಕಳುಹಿಸುತ್ತಿದ್ದನು. *೧೮

. ಮೊಗಲರ ಚಕ್ರವರ್ತಿ ಔರಂಗಜೇಬನ ಕೊನೆಯಕಾಲದಲ್ಲಿ ಮೊಗಲರ ಸ್ಥಾನ ಮಾನಗಳು ಕುಗ್ಗತೊಡಗಿದವು. ಆ ವೇಳೆಗಾಗಲೇ ಮೈಸೂರು ಸಂಸ್ಥಾನ ಪ್ರಬುದ್ಧಮಾನಕ್ಕೆ ಬಂದಿತ್ತು. ಮೊಗಲರ ದುರ್ಬಲ ಸ್ಥಿತಿಗಳನ್ನು ಉಪಯೋಗಿಸಿಕೊಂಡ ಮೈಸೂರಿನ ಚಿಕ್ಕದೇವರಾಜ ಒಡೆಯರ್ ಸಿರಾದ ಮೇಲೆ ಆಕ್ರಮಣ ಮಾಡಿ ಮೊಗಲ್ ಸರ್ಕಾರಕ್ಕೆ ಸಲ್ಲಿಸಬೇಕೆಂದು ಇಟ್ಟುಕೊಂಡಿದ್ದ ಕಪ್ಪ ಕಾಣಿಕೆಯ ಹಣವನ್ನು ಲೂಟಿ ಮಾಡಿದನು. ಕ್ರಿ.ಶ. ೧೭೦೬ರಲ್ಲಿ ಫಡದುಲ್ಲಾಖಾನನು ಸಿರಾದ ನವಾಬನಾದನು. ಅವನು ನೆರೆಹೊರೆಯ ಪಾಳೆಯಪಟ್ಟುಗಳೊಂದಿಗೆ ಉತ್ತಮ ಸ್ನೇಹ ವನ್ನಿಟ್ಟುಕೊಂಡಿದ್ದು, ಚಿತ್ರದುರ್ಗದವರೊಂದಿಗೆ ವಿಶೇಷ ಬಾಂಧವ್ಯವನ್ನು ಹೊಂದಿದ್ದನು. ಇದೇ ಸಮಯದಲ್ಲಿಯೇ ರಾಯದುರ್ಗದವರು ಚಿತ್ರದುರ್ಗದವರ ಅಧೀನದಲ್ಲಿದ್ದ ಹಟ್ಟಿಕೋಟೆಗೆ ಮುತ್ತಿಗೆ ಹಾಕಿದರು. ಆದ್ದರಿಂದ ದುರ್ಗದ ಪಾಳೇಗಾರ ಭರಮಪ್ಪ ನಾಯಕನು ಮುತ್ತಿಗೆಯನ್ನು ತೆರವು ಮಾಡಿಸಲು ಹಾವನೂರು, ಗುಡ್ನೇಕೋಟೆ, ನಿಡಗಲ್ಲು, ರತ್ನಗಿರಿ, ಜರಿಮಲೆ ಪಾಳೇಗಾರರು ಗಳನ್ನು ಒಂದುಗೂಡಿಸಿ ಸಿರಾದ ನವಾಬನ ಸಹಾಯವನ್ನು ಕೇಳಿದನು. ಸಿರಾದ ಸೇನೆಯು ಒಕ್ಕೂಟ ಸೇನೆಯನ್ನು ಸೇರಿಕೊಂಡು ಹಟ್ಟಿಯ ಕಡೆಗೆ ಹೊರಟಿತು. ಈ ಸುದ್ದಿ ತಿಳಿಯುತ್ತಲೇ ರಾಯದುರ್ಗದವರು ಪಲಾಯನ ಮಾಡಿದರು. ಅವರನ್ನು ಹಿಮ್ಮೆಟ್ಟಿಸಿದ ಸೈನ್ಯ ಕೊಟ್ಟೂರು ಬಳಿ ನಡೆದ ಭೀಕರ ಕದನದಲ್ಲಿ ಪರಾಭವಗೊಳಿಸಿತು. *೧೯ ನಂತರ ಸಿರಾದ ಸೇನೆ ಹೊಳೆಹೊನ್ನೂರಿಗೆ ಮುತ್ತಿಗೆ ಹಾಕಿತು. ರಾಯದುರ್ಗದವರ ವಿರುದ್ಧದ ಹೋರಾಟದಲ್ಲಿ ಸಹಾಯ ಮಾಡಿದ್ದಕ್ಕೆ ಪ್ರತಿಯಾಗಿ ದುರ್ಗದ ಭರಮಪ್ಪನಾಯಕನು ಸ್ವತಃ ತಾನೇ ಸೇನಾ ಸಮೇತನಾಗಿ ಹೋಗಿ ಹೊಳೆಹೊನ್ನೂರನ್ನು ಗೆದ್ದು ನವಾಬನಿಗೆ ಅರ್ಪಿಸಿದನು. ಇದರಿಂದ ಸಂತೋಷಗೊಂಡ ಅವನು ದುರ್ಗದ ಪಾಳೇಗಾರನಿಗೆ ದೊಡ್ಡೇರಿಸೀಮೆ, ಜಾಜೂರುಸೀಮೆಗಳನ್ನು ಉಂಬಳಿಯಾಗಿ ನೀಡಿದನು. *೨೦ ಇವನ ನಂತರ ದಾವೂದ್ ಖಾನನು ಸಿರಾದ ನವಾಬನಾಗಿ ಕೆಲಕಾಲ ಸ್ವತಂತ್ರನಾಗಿ ಮೆರೆದು ನಿವೃತ್ತನಾದನು.

ಕ್ರಿ.ಶ. ೧೭೧೩ರಲ್ಲಿ ನಿಜಾಮ್ ಉಲ್ ಮುಲ್ಕ್ (೧ನೇ ಅಸಫ್ ಜಾಹೀ) ನಿಜಾಮನಾಗಿ ಅಧಿಕಾರ ವಹಿಸಿಕೊಂಡನು. ಈತನು ದಕ್ಷಿಣದ ಮೊಗಲರ ಎಲ್ಲಾ ಪ್ರದೇಶಗಳ ಮೇಲೆ ಆಧಿಪತ್ಯ ಸಂಪಾದಿಸಿದನು. ಮೊಗಲರ ಆಡಳಿತ ಪ್ರದೇಶಗಳು ಪರಿಸ್ಥಿತಿಯನ್ನು ಕೂಲಂಕಶವಾಗಿ ವಿವೇಚಿಸಿ ಆಡಳಿತ ಸುಧಾರಿಸಿ ದನು. ಆರ್ಕಾಟಿನ ಸಾದತ್‌ಖಾನನ ದರ್ಪವನ್ನು ಅಡಗಿಸಿ ಕ್ರಿ.ಶ. ೧೭೧೭ರಲ್ಲಿ ಸಿರಾವನ್ನು ಆರ್ಕಾಟಿನ ನಿಯಂತ್ರಣದಿಂದ ಬೇರ್ಪಡಿಸಿದನು. ಸವಣೂರು ಕಡಪಾ, ಕರ್ನೂಲುಗಳಿಗೆ ಹೊಸ ನವಾಬರನ್ನು ನೇಮಿಸಿದನು. ಇದೇ ಸಮಯದಲ್ಲಿಯೇ ಸಿರಾಕ್ಕೂ ಕೂಡಾ ಕ್ರಿ.ಶ. ೧೭೧೭ರಲ್ಲಿ ಅಮೀನ್‌ಖಾನ್ ಎಂಬುವನನ್ನು ನವಾಬನನ್ನಾಗಿ ಮಾಡಿದನು. *೨೧ ಈತ ನಿಜಾಮನ ನೇರ ನಿಯಂತ್ರಣದಲ್ಲಿ ಆಡಳಿತ ನಡೆಸಬೇಕಾಗಿತ್ತು. ಈ ಏರ್ಪಾಟನ್ನು ಒಪ್ಪದ ಸಾದತ್ ಖಾನನು ಸವಣೂರು, ಕಡಪಾ, ಕರ್ನೂಲು ನವಾಬರುಗಳೊಂದಿಗೆ ರಹಸ್ಯ ಒಪ್ಪಂದವನ್ನು ಮಾಡಿಕೊಂಡು ಸಿರಾದಮೇಲೆ ಬೀಳಲು ಅವಕಾಶಕ್ಕೋಸ್ಕರ ಕಾಯತೊಡಗಿದನು. ಹೀಗೆ ಸಿರಾವು ಆರ್ಕಾಟಿನವರ ಹಿಡಿತದಿಂದ ಮತ್ತೊಮ್ಮೆ ಮೊಗಲರ ಅಧೀನಕ್ಕೆ ಒಳಗಾಯಿತು. ಕೆಲವೇ ದಿನಗಳಲ್ಲಿ ಸ್ಥಾನ ತೆರವು ಮಾಡಿದ ಅಮೀನ್‌ಖಾನನ ನಂತರ ಎರಡನೇ ದರ್ಗಾಕೂಲಿ ಖಾನನು ಸಿರಾದ ನವಾಬನಾದನು. ತಕ್ಷಣವೇ ಇವನು ಬಾಗೂರಿನ ವರ ವಿರೋಧವನ್ನು ಎದುರಿಸಬೇಕಾಯಿತು. ಅಂದಿನ ರಾಜಕೀಯ ವಾತಾವರಣವನ್ನು ಅರ್ಥಮಾಡಿಕೊಂಡ ಖಾನನು ಚಿತ್ರದುರ್ಗದವರ ಸ್ನೇಹ ಸಂಪಾದಿಸಿ ಅವರ ಸಹಾಯವನ್ನು ಕೇಳಿದನು. ಭರಮಪ್ಪ ನಾಯಕನು ಒಪ್ಪಿ ಬಾಗೂರಿನ ಮೇಲೆ ಆಕ್ರಮಣ ಮಾಡಿದನು; ಗೆದ್ದು ಅದನ್ನು ಸಿರಾದವರಿಗೆ ಒಪ್ಪಿಸಿದನು. ಈ ಉಪಕಾರಕ್ಕೆ ಪ್ರತಿಯಾಗಿ ನವಾಬನು ಮಾವಿನಕಟ್ಟೆ ಗ್ರಾಮವನ್ನು ಭರಮಪ್ಪ ನಾಯಕನಿಗೆ ಬಿಟ್ಟುಕೊಟ್ಟನು. *೨೨ ಭರಮಪ್ಪನಾಯಕನ ನಂತರ ದುರ್ಗದಲ್ಲಿ ಹಿರಿಮದಕರಿನಾಯಕನ ಆಳ್ವಿಕೆ ಆರಂಭವಾದಾಗ ಅವನು ನವಾಬನ ಸ್ನೇಹವನ್ನು ಧಿಕ್ಕರಿಸಿ ಸಿರಾದವರಿಗೆ ಸೇರಿದ್ದ ಅಜ್ಜಂಪುರ, ದೊಂಳೆ-ಕೋಟೆಗಳನ್ನು ಗೆದ್ದುಕೊಂಡನು. ಆದರೆ ನವಾಬ ದರ್ಗಾಕೂಲಿಖಾನನು ತನ್ನ ಪ್ರಾಂತ್ಯಗಳನ್ನು ರಕ್ಷಿಸಿ ಕೊಳ್ಳುವ ಸಲುವಾಗಿ ದುರ್ಗದವರ ಮೇಲೆ ಯುದ್ಧಮಾಡ ಬೇಕಾದ ಪ್ರಸಂಗ ಒದಗಿ ಬಂದಿತು. ಕಳೆದುಕೊಂಡಿದ್ದ ಪ್ರದೇಶಗಳನ್ನು ಗೆಲ್ಲಲು ನವಾಬನು ಅಜ್ಜಂಪುರ ಕೋಟೆಗೆ ಮುತ್ತಿಗೆ ಹಾಕಿ ಅಲ್ಲಿದ್ದ ಚಿತ್ರದುರ್ಗದವರ ಅಧಿಕಾರಿಗಳನ್ನು ಓಡಿಸಿ ಕೋಟೆಯನ್ನು ಗೆದ್ದುಕೊಂಡನು. *೨೩

ಸಿರಾವನ್ನು ಆರ್ಕಾಟಿನ ಆಧಿಪತ್ಯಕ್ಕೆ ಒಳಪಡಿಸಿಕೊಳ್ಳುವ ಉದ್ದೇಶ ಹೊಂದಿದ್ದ ನವಾಬ ಸಾದತ್‌ಖಾನನು ಕ್ರಿ.ಶ. ೧೭೨೪ರಲ್ಲಿ ಸಿರಾದ ಮೇಲೆ ಆಕ್ರಮಣಮಾಡಿ ವಶಪಡಿಸಿಕೊಂಡನು. ನಂತರ ತನ್ನ ಕಡೆಯ ಅಬ್ದುಲ್ ನಭೀ ತಾಹರ್‌ಖಾನ್ ಎಂಬುವನನ್ನು

ನವಾಬನನ್ನಾಗಿ ಮಾಡಿದನು. ಹೀಗೆ ಮತ್ತೊಮ್ಮೆ ಸಿರಾದಲ್ಲಿ ಆರ್ಕಾಟಿನವರ ಆಧಿಪತ್ಯ ಸ್ಥಾಪಿತವಾಯಿತು. ತಾಹರ್‌ಖಾನನು (ಕ್ರಿ. ಶ. ೧೭೨೪-೧೭೪೨) ಆರ್ಕಾಟಿನ ನವಾಬನಿಗೆ ಪೂರ್ಣ ನಿಷ್ಠೆಯಿಂದಿದ್ದ ಕಾಲದಲ್ಲಿ ಮಹತ್ವಪೂರ್ಣ ರಾಜಕೀಯ ಘಟನೆಗಳು ಜರುಗಿದವು. ಆರ್ಕಾಟಿನ ನವಾಬನ ವ್ಯಕ್ತಿ ಸಿರಾದ ನವಾಬನಾಗಿದ್ದರಿಂದ ಅವನಿಗೆ ಮೈಸೂರಿನತ್ತ ನುಗ್ಗಲು ಒಳ್ಳೆಯ ಅವಕಾಶ ದೊರೆಯಿತು. ಇದೇ ಸಮಯದಲ್ಲಿಯೇ, ಸವಣೂರು, ಕಡಪಾ, ಕರ್ನೂಲ್‌ಗಳ ನವಾಬರು ಮೈಸೂರಿನವರ ವಿರುದ್ಧ ಒಕ್ಕೂಟ ರಚಿಸಿಕೊಂಡಿದ್ದರು. ಈ ಒಕ್ಕೂಟಕ್ಕೆ ಸಿರಾದ ನವಾಬ ತನ್ನ ಬೆಂಬಲ ಘೋಷಿಸಿ ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಪ್ರಧಾನ ಪಾತ್ರ ವಹಿಸಿ ಮೈಸೂರಿನವರನ್ನು ಪರಾಭವಗೊಳಿಸು ವುದರಲ್ಲಿ ಯಶಸ್ವಿಯಾದನು. *೨೪

ಕ್ರಿ.ಶ. ೧೭೪೨ರಲ್ಲಿ ತಾಹರ್ ಖಾನನ ಸ್ಥಾನದಲ್ಲಿ ದಿಲಾವರ್ ಖಾನನು ಸಿರಾದ ನವಾಬನಾದನು. ಈತನು ಈ ನಾಡನ್ನಾಳಿದ ನವಾಬರಲ್ಲೇ ಅತ್ಯಂತ ದಕ್ಷನೂ, ಶ್ರೇಷ್ಠನೂ ಎಂದು ಪ್ರಖ್ಯಾತಿಯಾಗಿದ್ದಾನೆ. ಈತನ ಕಾಲದಲ್ಲಿ ರಾಜಕೀಯಶಾಂತಿ, ಆರ್ಥಿಕ ಪ್ರಗತಿ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳಾದವು. ಇವನ ಆಡಳಿತಾವಧಿಯಲ್ಲಿ ಮೊಗಲರ ದಂಡನಾಯಕ ಸಲಾಬತ್ ಜಂಗನು ಮೈಸೂರು ಪ್ರಾಂತ್ಯಗಳಿಂದ ಖಂಡಣಿ ಹಣವನ್ನು ತೆಗೆದುಕೊಂಡು ಹೋಗಲು ಬಂದನು. ಸಿರಾದ ಸನಿಹದಲ್ಲಿಯೇ ಇದ್ದ ಹಾಗಲವಾಡಿಯ ದೊರೆ ಮುದ್ದಿವೀರಪ್ಪನಾಯಕನು ಅವನೊಂದಿಗೆ ಸ್ನೇಹ ಸಂಪಾದಿಸಲು ತನ್ನ ರಾಯಭಾರಿಗಳನ್ನು ಕಳುಹಿಸಿದನು. ಅದಕ್ಕೆ ಒಪ್ಪಿದ ಅವನು ಹಾಗಲವಾಡಿಗೆ ಬಂದಿಳಿದನು. ಅವನ ಸ್ವಾಗತಕ್ಕೆ ಏರ್ಪಾಟು ಮಾಡುತ್ತಿದ್ದ ಮುದ್ದಿವೀರಪ್ಪನಾಯಕನ ಮೇಲೆ ಆಕ್ರಮಣ ಮಾಡಿದನು. ಪಾಳೆಯಗಾರನು ಹಾಗಲವಾಡಿ ಬಿಟ್ಟು ಪಲಾಯನ ಮಾಡಿದನು. ನಂತರ ಹಾಗಲವಾಡಿಯನ್ನು ಸಲಾಬತ್ತನು ಕ್ರಿ.ಶ. ೧೭೫೫ರಲ್ಲಿ ಸಿರಾದ ನವಾಬನಾಗಿದ್ದ ದಿಲಾವರ್‌ಖಾನನಿಗೆ ನೀಡಿದನು. ಹಾಗಲವಾಡಿಯನ್ನು ಕಳೆದುಕೊಂಡ ಮುದ್ದಿವೀರಪ್ಪನಾಯಕನು ಸುಮ್ಮನೆ ಕೂರಲಿಲ್ಲ. ಅವನು ಮೂಗನಾಯ್ಕನಕೋಟೆಗೆ ಹೋಗಿ ಅಲ್ಲಿ ತನ್ನ ಹಳೆಯ ದಂಡನ್ನು ಕರೆಸಿಕೊಂಡು ನವಾಬನ ಮೇಲೆ ಆಕ್ರಮಣ ಮಾಡಿದನು. ಕದನದಲ್ಲಿ ಪಾಳೆಯಗಾರನ ಕೈ ಮೇಲಾಯಿತು. ನವಾಬನಿಗೆ ಸೋಲಾಯಿತು. ಕೊನೆಗೆ ನವಾಬ ಪಾಳೆಯಗಾರನೊಂದಿಗೆ ಒಪ್ಪಂದ ಮಾಡಿಕೊಂಡು ಅವನಿಗೆ "ರಾಜಾ ಜಂಗ್ ಬಹದ್ದೂರ್" ಎಂಬ ಬಿರುದನ್ನು ನೀಡಿ ಹಾಗಲವಾಡಿ ಮತ್ತು ತನ್ನ ಪ್ರದೇಶದ ಹನ್ನೆರಡು ಹಳ್ಳಿಗಳನ್ನು ದಾನವಾಗಿ ನೀಡಿದನು. *೨೫ ನೆರೆಯ ರಾಜ್ಯಗಳೊಂದಿಗೆ ಶಾಂತಿಯಿಂದಿದ್ದ ನವಾಬನ ಕಾಲದಲ್ಲಿ ಸಿರಾದಲ್ಲಿ ೫೦ ಸಾವಿರ ಮನೆಗಳಿದ್ದವು. ಅಲ್ಲಿ ಸುಂದರವಾದ ಅರಮನೆಯನ್ನು ಕೂಡಾ ನಿರ್ಮಿಸಿದನು. ಈ ಅರಮನೆಯ ಸೌಂದರ್ಯವನ್ನು ನೋಡಿದ ಹೈದರಾಲಿ, ಟಿಪ್ಪೂ ಪ್ರಭಾವಿತರಾಗಿ ಅದೇ ಮಾದರಿಯ ಅರಮನೆಯನ್ನು ಬೆಂಗಳೂರು ಮತ್ತು ಶ್ರೀರಂಗ ಪಟ್ಟಣದಲ್ಲಿ ನಿರ್ಮಿಸಿದರು. *೨೬ ಇದರಿಂದ ಸಿರಾಪಟ್ಟಣ ಅಂದಿನ ಸಾಮಾಜಿಕ ಆರ್ಥಿಕ ಕ್ಷೇತ್ರದಲ್ಲಿ ಎಷ್ಟು ಮುಂದುವರಿದಿತ್ತೆಂದು ತಿಳಿಯುತ್ತದೆ. ಇದೇ ಸಮಯದಲ್ಲಿಯೇ ಪೂನಾದ ಶ್ರೀಮಂತ ಪೇಶ್ವೆ ಬಾಲಾಜಿ ಬಾಜಿರಾವ್ ಮೈಸೂರಿನ ಪ್ರದೇಶಗಳ ಮೇಲೆ ದಾಳಿ ಮಾಡಲಾರಂಭಿಸಿದನು. ಸಿರಾದ ಮೇಲೆ ನಡೆದ ಯುದ್ಧದಲ್ಲಿ ದಿಲಾವರ್‌ಖಾನನು ಪರಾಭವ ಹೊಂದಿದನು. *೨೭ ಹೀಗೆ ಸಿರಾವು ಮರಾಠರ ಅಧೀನಕ್ಕೆ ಒಳಗಾಯಿತು. ಕ್ರಿ.ಶ. ೧೭೫೭ರಿಂದ ೧೭೬೧ರವರೆಗೆ ಇಲ್ಲಿ ಮರಾಠರು ಆಳ್ವಿಕೆ ನಡೆಸಿದರು. ಅದೇ ವರ್ಷ ಮೈಸೂರಿನ ಹೈದರಾಲಿಯು ಹೊಸಕೋಟೆಯಲ್ಲಿ ಬಸಾಲತ್‌ಜಂಗ್‌ನೊಡನೆ ಒಪ್ಪಂದ ಮಾಡಿಕೊಂಡು ಸಿರಾದ ಮೇಲೆ ದಾಳಿ ಮಾಡಿ ಅಲ್ಲಿಂದ ಮರಾಠರನ್ನು ಹೊಡೆದೋಡಿಸಿ ದನು. ಹೈದರಾಲಿಯು ಸಿರಾದ ನವಾಬನೆಂದು ಬಿರುದು ಧರಿಸಿ ಅಲ್ಲಿಂದ ಉತ್ತರಕ್ಕೆ ಇರುವ ಪ್ರದೇಶಗಳ ಮೇಲೆ ದಾಳಿ ಮಾಡಿ ಗೆದ್ದು ಮೈಸೂರು ಪ್ರಾಂತ್ಯಕ್ಕೆ ಸೇರಿಸಿಕೊಂಡನು. ಪುನಃ ಕ್ರಿ.ಶ. ೧೭೬೬ರಲ್ಲಿ ಮರಾಠರು ಮತ್ತೊಮ್ಮೆ ಸಿರಾವನ್ನು ಆಕ್ರಮಿಸಿ ಕೊಂಡರು. ಹೀಗೆ ಇದು ಮೈಸೂರು ಮತ್ತು ಮರಾಠರ ದಾಳಿಗೆ ತುತ್ತಾಗಿ ಸಾಕಷ್ಟು ಸಂಕಷ್ಟವನ್ನು ಅನುಭವಿಸಿತು. ಪುನಃ ಕ್ರಿ.ಶ. ೧೭೭೪ರಲ್ಲಿ ಟಿಪ್ಪುಸುಲ್ತಾನನು ಸಿರಾವನ್ನು ಗೆದ್ದುಕೊಂಡು ಮೈಸೂರಿನಲ್ಲಿ ವಿಲೀನಗೊಳಿಸಿಕೊಂಡನು. ಈ ಸಮಯದಲ್ಲಿ ಗಂಜಾಂನಗರವನ್ನು ವಿಸ್ತಾರಗೊಳಿಸುವ ಉದ್ದೇಶದಿಂದ ಸಿರಾದಿಂದ ೧೨ ಸಾವಿರ ಸಂಸಾರಗಳನ್ನು ಬಲವಂತದಿಂದ ಅಲ್ಲಿಗೆ ಸಾಗಿಸಿದನಂತೆ. ಈ ಗಲಭೆಗಳಿಂದ ಮತ್ತು ಮರಾಠೆಯವರ ದಾಳಿಗೆ ಸಿಕ್ಕಿ ಸಿರಾವು ೫೦ ಸಾವಿರ ಮನೆಗಳಿಂದ ಕೇವಲ ೩ ಸಾವಿರ ಮನೆಗಳಿಗಿಳಿಯಿತು. *೨೮ ಕ್ರಿ.ಶ. ೧೭೯೯ರಲ್ಲಿ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪೂ ಹತನಾದಾಗ ಸಿರಾವು ಮೈಸೂರಿನ ಒಡೆಯರಾದ ಮುಮ್ಮಡಿ ಕೃಷ್ಣರಾಜ ಒಡೆಯರ್ ರಾಜ್ಯಕ್ಕೆ ಸೇರಿತು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎಪಿಗ್ರಾಫಿಯಾ ಕರ್ನಾಟಿಕ, ಸಂ. XI, ಚಳ್ಳಕೆರೆ ೨೦

*೨. ಅದೇ., ಸಂ. XI, ಸಿರಾ-೭ ಮತ್ತು ಸಿರಾ-೫೪

*೩. ಹರತಿಸಿರಿ : (ಸಂ)ಲಕ್ಷ್ಮಣ್ ತೆಲಗಾವಿ, ಪು. ೩೦೬
*೫. ಮೆಕಂಜಿ : ಮೊಮೋರಿಸ್ ಆಫ್ ದಿ ನಾರ್ದ್ರನ್ ಪರಗಣಾಸ್ ಆಫ್ ಮೈಸೂರ್, ೧೮೦೦
*೬. ಅದೇ
*೭. ಕರ್ನಾಟಕ ಪರಂಪರೆ (ಭಾಗ-೨) - ಪು. ೩೦೭
*೮. ಗೋವಿಂದ ವೈದ್ಯ : ಕಂಠೀರವ ನರಸರಾಜ ವಿಜಯಂ, ಸಂ. ೧೦, ಪದ್ಯ-೧೦
*೯. ರಾಮೇಗೌಡ : ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಪು. ೩೦೬, ಮೈಸೂರು
*೧೦. ರೈಸ್ ಬಿ.ಎಲ್ : ಮೈಸೂರ್ ಗೆಜೆಟಿಯರ್, ಸಂ. ೨, ಭಾಗ-೩. ಪು. ೨೨೦೮
*೧೧. ಹಯವದನರಾವ್ : ಹಿಸ್ಟರಿ ಆಫ್ ಮೈಸೂರ್, ಸಂ.೧, ಪು.೨೭
*೧೨. ರೈಸ್. ಬಿ.ಎಲ್ : ಮೈಸೂರ್ ಗೆಜೆಟಿಯರ್, ಸಂ. ೨, ಪು. ೨೭
*೧೩. ಜಯ ಕರ್ನಾಟಕ, ಸಂಚಿಕೆ ೮, ಪು. ೭೯೩
*೧೪. ಮೆಕಂಜಿ- ಅದೇ.,
*೧೫. ರೈಸ್. ಬಿ.ಎಲ್: ಮೈಸೂರ್ ಗೆಜೆಟಿಯರ್, ಸಂ. ೨, ಪು. ೧೬೬
*೧೬. ಪುಟ್ಟಣ್ಣ ಎಂ.ಎಸ್. ಚಿತ್ರದುರ್ಗ ಪಾಳೆಯಗಾರರು, ಪು. ೫೩, ಕಾವ್ಯಾಲಯ ಪ್ರಕಾಶನ, ಮೈಸೂರು-೧೯೯೭
*೧೭. ಮೆಕಂಜಿ- ಅದೇ.,
*೧೮. ಅದೇ.,
*೧೯. ಪುಟ್ಟಣ್ಣ ಎಂ.ಎಸ್: ಅದೇ., ಪು. ೫೩
*೨೦. ಅದೇ., ಪು. ೫೪-೫೫
*೨೧. ಕರ್ನಾಟಕ ವಿಷಯ ವಿಶ್ವಕೋಶ, ಪು. ೧೪೧೧
*೨೨. ಪುಟ್ಟಣ್ಣ ಎಂ.ಎಸ್ : ಅದೇ, ಪು. ೫೬-೫೭
*೨೩. ಅದೇ., ಪು. ೬೪-೬೫
*೨೪. ಕರ್ನಾಟಕ ವಿಷಯ ವಿಶ್ವಕೋಶ, ಪು. ೧೪೧೧
*೨೫. ಯೋಗೀಶ್ವರಪ್ಪ ಡಿ.ಎನ್ : ಹಾಗಲವಾಡಿ ಪಾಳೆಗಾರರು ಒಂದು ಸಮಗ್ರ ಅಧ್ಯಯನ (ಅಪ್ರಕಟಿತ ಮಹಾಪ್ರಬಂಧ) ಮೈಸೂರು. ವಿ.ವಿ. ೧೯೯೭
*೨೬. ರೈಸ್ ಬಿ.ಎಲ್ : ಮೈಸೂರ್ ಗೆಜೆಟಿಯರ್, ಸಂ. ೨, ಪು. ೧೯೯
*೨೭. ಮೆಕಂಜಿ - ಅದೇ.,
*೨೮. ಅದೇ.,

ಡಾ || ಮಹಾದೇವಿ *

# ಮೈಸೂರು ಒಡೆಯರ ಕಾಲದ ಕನ್ನಡ ಸಾಹಿತ್ಯ ಪ್ರಗತಿ - ಒಂದು ಐತಿಹಾಸಿಕ ಅವಲೋಕನ ( ೧೭೦೪-೧೭೬೧ )

ಸುಮಾರು ೫೦೦ ವರ್ಷಗಳಿಗೂ ಅಧಿಕ ಕಾಲ ರಾಜ್ಯವಾಳಿ ಈಗ್ಗೆ ೫೦ ವರ್ಷಗಳ ಹಿಂದೆ ತಮ್ಮ ಅಧಿಕಾರವನ್ನು ಕಳೆದುಕೊಂಡ ಮೈಸೂರು ಒಡೆಯರು ಕನ್ನಡ ಅಭಿಮಾನಿಗಳಾಗಿದ್ದು, ಕನ್ನಡ ನಾಡು-ನುಡಿ, ಕಲೆ ಮತ್ತು ಸಾಹಿತ್ಯ ಪ್ರಗತಿಗೆ ಅಪೂರ್ವ ಸೇವೆ ಸಲ್ಲಿಸಿದ್ದಾರೆ. ಅವರು ಕವಿಗಳಿಗೆ, ವಿದ್ವಾಂಸರಿಗೆ ಮುಕ್ತ ಆಶ್ರಯ ಕಲ್ಪಿಸಿದುದೇ ಅಲ್ಲದೆ, ಕನ್ನಡ ಸಾಹಿತ್ಯ ಬೆಳವಣಿಗೆಗೆ ಹೆಚ್ಚು ಪ್ರೋತ್ಸಾಹ ನೀಡುವ ಮೂಲಕ, ಕನ್ನಡ ಸಾಹಿತ್ಯವನ್ನು ಅಭಿವೃದ್ಧಿ ಪಡಿಸಿದರು. ಹೀಗೆ ವಿಜಯನಗರ ಅರಸರ ಕಾಲದಿಂದ ಬೆಳೆದು ಬಂದ ಕನ್ನಡ ಸಾಹಿತ್ಯ ಮೈಸೂರು ಒಡೆಯರ ಪೋಷಣೆಯಲ್ಲಿ ಮಹೋನ್ನತ ಬೆಳವಣಿಗೆಯನ್ನು ಕಂಡಿತು.

ವಿಜಯನಗರ ಸಾಮ್ರಾಜ್ಯದ ಉದಾತ್ತ ಪರಂಪರೆಗಳನ್ನು ರೂಢಿಸಿಕೊಂಡು ಬಂದ ರಾಜಒಡೆಯರು ಸಾಹಿತ್ಯವನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಕವಿಗಳಿಗೆ ಪ್ರೋತ್ಸಾಹ ನೀಡಿದರು. ಅವರ ಪ್ರೋತ್ಸಾಹದಿಂದ ಕವಿ ಸಿಂಗಾರಯ್ಯಂಗಾರ್ 'ಶ್ರೀ ರಂಗಮಾಹಾತ್ಮೆ'ಯನ್ನೂ ದಂಡನಾಯಕ ತಿರುಮಲಯ್ಯಂಗಾರ್ 'ಕರ್ಣವೃತ್ತಾಂತ'ವನ್ನು ರಚಿಸುವ ಮೂಲಕ, ಕನ್ನಡ ಸಾಹಿತ್ಯ ಪ್ರಗತಿಗೆ ತಳಹದಿ ಹಾಕಿದರು. *೧ ರಾಜ ಒಡೆಯರ ಸತ್ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದ ಐದನೇ ಚಾಮರಾಜ ಒಡೆಯರು (೧೬೧೭-೧೬೩೭) ಸ್ವತಃ ಕವಿಯಾಗಿದ್ದು 'ಚಾಮರಾಜೋಕ್ತಿ ವಿಲಾಸ' ಮತ್ತು 'ಮಣಿ ಪ್ರಕಾಶ' ಎಂಬ ಕೃತಿಗಳನ್ನು ರಚಿಸಿದರು. ರಣಧೀರ ಕಂಠೀರವ ನರಸರಾಜ ಒಡೆಯರು ಮತ್ತು ದೊಡ್ಡ ದೇವರಾಜ ಒಡೆಯರು ಕೂಡ ಸ್ವತಃ ಕನ್ನಡದಲ್ಲಿ ಕೃತಿಗಳನ್ನು ಬರೆದೋ, ಬರೆಯಿಸಿಯೋ ಕನ್ನಡ ಸಾಹಿತ್ಯವನ್ನು ಅಭಿವೃದ್ಧಿ ಪಡಿಸಿದರು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿಕ್ಕದೇವರಾಜ ಒಡೆಯರ ಕಾಲವು ಮಹತ್ವಪೂರ್ಣ ಕಾಲವಾಗಿತ್ತು. ಇವರು ಶ್ರೇಷ್ಠ ವಿದ್ವಾಂಸರು, ಬರಹಗಾರರೂ ಆಗಿದ್ದು, ಸ್ವತಃ ಕನ್ನಡದಲ್ಲಿ ಅನೇಕ ಕೃತಿಗಳನ್ನು ಬರೆದುದೇ ಅಲ್ಲದೆ, ಅನೇಕ ಕವಿಗಳಿಗೆ ವಿಶೇಷವಾಗಿ ಪ್ರೋತ್ಸಾಹ ನೀಡಿದರು. ಇವರ ಆಸ್ಥಾನದಲ್ಲಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಶೃಂಗಾರಮ್ಮ, ಸಂಚಿಯ ಹೊನ್ನಮ್ಮ - ಮೊದಲಾದ ಕವಿಗಳು ಮತ್ತು ಕವಯಿತ್ರಿಯರಿದ್ದು ಅನೇಕ ಶ್ರೇಷ್ಠ ಕೃತಿಗಳನ್ನು ರಚಿಸಿ, ಕನ್ನಡ ಸಾಹಿತ್ಯ ಕ್ಷೇತ್ರವನ್ನು ವಿಸ್ತಾರಗೊಳಿಸಿದರು. ಹೀಗೆ ಚಿಕ್ಕದೇವರಾಜ ಒಡೆಯರ ವಿಶೇಷ ಆಸಕ್ತಿ ಅಭಿಮಾನಗಳಿಂದ ಅವರ ಕಾಲದಲ್ಲಿ ಕನ್ನಡ ಸಾಹಿತ್ಯವು ಅಭೂತಪೂರ್ವ ಬೆಳವಣಿಗೆಯನ್ನು ಕಂಡಿತು.

ಆದರೆ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ನಂತರ ರಾಜ್ಯದಲ್ಲಿ ಉಂಟಾದ ರಾಜಕೀಯ ಗೊಂದಲಗಳಿಂದ ಸಾಹಿತ್ಯ ಬೆಳವಣಿಗೆ ಇಳಿಮುಖವಾಯಿತು. ಅಂದಮಾತ್ರಕ್ಕೆ ಚಿಕ್ಕದೇವರಾಜ ಒಡೆಯರ ನಂತರ ಅಧಿಕಾರಕ್ಕೆ ಬಂದ ಒಡೆಯರು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಲಿಲ್ಲ ಎಂದು ಅರ್ಥವಲ್ಲ. ಅವರಿಗೆ ಕನ್ನಡ ನಾಡು-ನುಡಿ, ಕಲೆ-ಸಾಹಿತ್ಯ ಮತ್ತು ಸಂಸ್ಕೃತಿಗಳ ಮೇಲೆ ಅಪಾರ ಅಭಿಮಾನವಿತ್ತು. ಅವುಗಳನ್ನು ಪೋಷಿಸಿ ಬೆಳೆಸಬೇಕೆನ್ನುವ ಉತ್ಸುಕತೆಯು ಅವರಲ್ಲಿತ್ತು. ಆದರೆ ಅಂದಿನ ರಾಜಕೀಯ ಪರಿಸ್ಥಿತಿಗಳು ಅವರ ಉತ್ಸುಕತೆಗೆ ತಡೆಯನ್ನುಂಟುಮಾಡಿದ್ದವು. ಅಂದು ಮೊಗಲರು ಮತ್ತು ಮರಾಠರು ರಾಜಕೀಯವಾಗಿ ಪ್ರಬಲರಾಗಿದ್ದು, ಮೈಸೂರು ರಾಜ್ಯವನ್ನು ಹರಿದು ಹಂಚಿಕೊಳ್ಳಲು ಸದಾ ಹವಣಿಸುತ್ತಿದ್ದರು. ಇಂತಹ ಕ್ಲಿಷ್ಟಕರ ಪರಿಸ್ಥಿತಿಯಲ್ಲಿ ರಾಜ್ಯವನ್ನು ರಕ್ಷಿಸಿಕೊಳ್ಳುವುದರತ್ತ ಹೆಚ್ಚು ಗಮನ ಹರಿಸುವುದು ಒಡೆಯರಿಗೆ ಅನಿವಾರ್ಯವಾಗಿತ್ತು. ಎರಡನೆಯದಾಗಿ, ಚಿಕ್ಕದೇವರಾಜ ಒಡೆಯರ ನಂತರ ಅಧಿಕಾರಕ್ಕೆ ಬಂದ ಒಡೆಯರು ಪ್ರಾಪ್ತವಯಸ್ಸಿನವರೂ, ಸ್ವಯಂಪ್ರಬುದ್ಧರೂ, ಸಮರ್ಥರೂ ಆಗಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ದಳವಾಯಿ ಸೋದರರಾದ ದೇವರಾಜಯ್ಯ ಮತ್ತು ನಂಜರಾಜಯ್ಯ ಅವರುಗಳು ಪ್ರಬಲರಾಗಿ

* ಇತಿಹಾಸ ಉಪನ್ಯಾಸಕಿ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬.

ರಾಜ್ಯದ ಆಡಳಿತ ಸೂತ್ರಗಳನ್ನು ತಮ್ಮ ಕೈಯಲ್ಲಿ ಕೇಂದ್ರೀಕರಿಸಿಕೊಂಡಿದ್ದರು. ಪರಿಣಾಮವಾಗಿ ಕೆಲಕಾಲ ಮಂಕಾಗಿದ್ದ ಸಾಹಿತ್ಯ ರಚನೆ ನಂತರ ಚೇತರಿಸಿಕೊಂಡಿತು.

ಆದಾಗ್ಯೂ ಸಾಹಿತ್ಯದ ಅಭಿಮಾನಿಗಳೂ, ಪೋಷಕರೂ ಆದ ಎರಡನೇ ಕಂಠೀರವ ನರಸರಾಜ ಒಡೆಯರು (೧೭೦೪-೧೭೧೪), ದೊಡ್ಡಕೃಷ್ಣರಾಜ ಒಡೆಯರು (೧೭೧೪-೧೭೩೨) ಆರನೇ ಚಾಮರಾಜ ಒಡೆಯರು (೧೭೩೨-೧೭೩೪) ಮತ್ತು ಚಿಕ್ಕಕೃಷ್ಣರಾಜ ಒಡೆಯರು (೧೭೩೨-೧೭೬೧)ಗಳು ಅಂದಿನ ಗೊಂದಲಮಯ ರಾಜಕೀಯ ಪರಿಸ್ಥಿತಿಗಳಿದ್ದರೂ ಕಲೆ ಮತ್ತು ಸಾಹಿತ್ಯವನ್ನು ಪೋಷಿಸುವುದು ತಮ್ಮ ಆದ್ಯ ಕರ್ತವ್ಯವೆಂದು ನಂಬಿ, ಕವಿಗಳು ಮತ್ತು ವಿದ್ವಾಂಸರಿಗೆ ಆಶ್ರಯ ನೀಡಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಚೇತನ ತುಂಬಿದರು.

ಹೀಗೆ ಹದಿನೆಂಟನೇ ಶತಮಾನದಲ್ಲಿ ರಾಜ್ಯವು ತನ್ನ ರಾಜಕೀಯ ಪರಿಸ್ಥಿತಿಯಿಂದ ಕಲುಷಿತಗೊಂಡಿದ್ದರೂ ದಳವಾಯಿಗಳಾದ ಕಳಲೆ ವೀರರಾಜ, ರಾಣಿ ಚೆಲುವಾಂಬೆ, ರಾಮಾಯಣಂ ತಿರುಮಲಾರ್ಯ, ದಳವಾಯಿ ಕರಾಚೂರಿ ನಂಜರಾಜಯ್ಯ, ಕತ್ತಿಗೋಪಾಲರಾಜ ಮತ್ತು ಶಾಲ್ಯದ ಕೃಷ್ಣರಾಜರು ಅನೇಕ ಕೃತಿಗಳನ್ನು ರಚಿಸಿ, ಕನ್ನಡ ಸಾಹಿತ್ಯವನ್ನು ಸಮೃದ್ಧಿಗೊಳಿಸಿದರು. ಹಾಗೂ ಇವರ ಆಶ್ರಿತ ಕವಿಗಳಾದ ಚೆನ್ನಯ್ಯ, ರಂಗಯ್ಯ, ನಗರದ ಪುಟ್ಟಯ್ಯ, ಬಾಲವೈದ್ಯದ ಚೆಲುವ, ವೆಂಕಟೇಶ, ಚೆನ್ನರಾಜಪ್ಪ - ಮೊದಲಾದವರು ಕನ್ನಡದಲ್ಲಿ ಕೃತಿಗಳನ್ನು ರಚಿಸಿ ತಮ್ಮ ಕವಿತಾ ಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಇವರು ಮೈಸೂರು ಅರಸರ ಬಗೆಗೆ ಚಾರಿತ್ರಿಕ ಕೃತಿಗಳನ್ನೂ, ರಾಮಾಯಣ, ಮಹಾಭಾರತ, ಶಿವಪುರಾಣ ಹಾಗೂ ಕ್ಷೇತ್ರ ಮಹಿಮೆಗಳನ್ನು ಕುರಿತು ಟೀಕೆಟಿಪ್ಪಣಿಗಳನ್ನು, ಮಹಾತ್ಮೆಗಳನ್ನು ಮತ್ತು ನಾಟಕಗಳನ್ನು ಬರೆದು ಅವುಗಳನ್ನು ಕನ್ನಡಕ್ಕೆ ಭಾಷಾಂತರ ಪಡಿಸಿದರು.

ಎರಡನೇ ಕಂಠೀರವನರಸರಾಜ ಒಡೆಯರ ಕಾಲದಲ್ಲಿ ಇದ್ದ ನಗರದ ಪುಟ್ಟಯ್ಯ ಎಂಬ ಕವಿಯು **ಮೈಸೂರು ದೊರೆಗಳ ಪೂರ್ವಾಭ್ಯುದಯ ವಿವರ***೨ ಎಂಬ ಕೃತಿಯನ್ನು ರಚಿಸಿರುವನು. ಇದು **ಕಡತ** ರೂಪದಲ್ಲಿದ್ದು ಸಂಭಾಷಣೆ ಅಥವಾ ಆಡುಮಾತಿನ ಕಾವ್ಯಶೈಲಿಯಲ್ಲಿದೆ. ಈ ಕೃತಿಯಲ್ಲಿ ಮೈಸೂರು ದೊರೆಗಳ ವಂಶಾವಳಿ, ಅವರು ಸಿಂಹಾಸನವೇರಿದ ಕಾಲ, ಒಡೆಯರು ಹೊಂದಿದ್ದ ಪತ್ನಿಯರು, ರಾಣಿಯರು, ದಳವಾಯಿಗಳು, ಅವರ ಕಾಲ ಮತ್ತು ದಳವಾಯಿಗಳು ಹೊಂದಿದ್ದ ಅಧಿಕಾರಗಳು - ಮೊದಲಾದ ವಿವರಣೆಗಳಿವೆ. ಹಾಗೂ ರಾಜಒಡೆಯರವರಿಂದ - ಎರಡನೇ ಕಂಠೀರವನರಸರಾಜ ಒಡೆಯರವರೆಗೆ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದ ಹೊಸ ಪ್ರದೇಶಗಳ ವಿವರವೂ ಇದೆ. ಕರ್ನಲ್ ವಿಲ್ಕ್ಸ್ ಅವರ ಅಭಿಪ್ರಾಯದಂತೆ ಚಾರಿತ್ರಿಕವಾಗಿ ಕುತೂಹಲಕರವಾಗಿರುವ ಈ ಗ್ರಂಥ ಚಿಕ್ಕದಾಗಿದ್ದರೂ ನೈಜಘಟನೆಗಳನ್ನು ಒಳಗೊಂಡಿದೆ. *೩ ಒಟ್ಟಿನಲ್ಲಿ ಮೈಸೂರು ಒಡೆಯರ ಮೂಲ ಇತಿಹಾಸ ತಿಳಿಯಲು ಈ ಕೃತಿ ಉಪಯುಕ್ತವಾಗಿದೆ.

ದೊಡ್ಡಕೃಷ್ಣರಾಜ ಒಡೆಯರು ಸಾಹಿತ್ಯ ಮತ್ತು ಸಂಗೀತಗಳೆರಡರಲ್ಲಿಯೂ ಅಪಾರವಾದ ಪರಿಶ್ರಮ ಮತ್ತು ಅಭಿರುಚಿಯನ್ನು ಹೊಂದಿ ಅವುಗಳ ಸಂರಕ್ಷಣೆಗಾಗಿ ಅನೇಕ ಕ್ರಮಗಳನ್ನು ಕೈಗೊಂಡರು. ಅವರ ಆಸ್ಥಾನದಲ್ಲಿದ್ದ ಬರಹಗಾರರಲ್ಲಿ ಒಬ್ಬನಾದ ರಾಮಾಯಣಂ ತಿರುಮಲಾರ್ಯನು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಕೆಲವು ಶಾಸನ ಕಾವ್ಯಗಳನ್ನು ಸಮರ್ಥವಾಗಿ ರಚಿಸಿರುವನಲ್ಲದೆ, **ರಾಮಾಯಣ** ಮತ್ತು **ಮಹಾಭಾರತ**ದಂತಹ ಮಹಾಕಾವ್ಯಗಳನ್ನು ಓದಿ ಕನ್ನಡಕ್ಕೆ ಅರ್ಥೈಸುವುದರಲ್ಲಿ ಪ್ರಖ್ಯಾತನಾಗಿದ್ದನು. ಅವನು ರಚಿಸಿರುವ ಶಾಸನ ಕಾವ್ಯಗಳಲ್ಲಿ - **ಕಳಲೆ ತಾಮ್ರಶಾಸನ** (೧೭೧೬), **ತೊಂಡನೂರು ತಾಮ್ರಶಾಸನ** (೧೭೨೨) ಮತ್ತು **ಕಂಚಿಮಠದ ತಾಮ್ರಶಾಸನಗಳು** (೧೭೨೪) ಅತ್ಯುತ್ತಮವಾದವು. *೪ ದೊಡ್ಡಕೃಷ್ಣರಾಜ ಒಡೆಯರು ಅನೇಕ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ ತ್ರಿಮತಸ್ಥ ಬ್ರಾಹ್ಮಣರಿಗೆ ಕೊಡುಗೆ ನೀಡಿದ ವಿವರಗಳನ್ನು ಈ ಶಾಸನಗಳು ಒಳಗೊಂಡಿವೆಯಾದರೂ, ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದ್ದು ಪದ್ಯಗದ್ಯಗಳಿಂದ ಕೂಡಿರುವುದು ಅವುಗಳ ವೈಶಿಷ್ಟ್ಯವಾಗಿದೆ.

ಅವುಗಳಲ್ಲಿ ಹದಿನೈದು ತಾಮ್ರಪಟಗಳಿಂದ ಕೂಡಿರುವ ತೊಂಡನೂರು ತಾಮ್ರ ಶಾಸನವು ಮೈಸೂರು ರಾಜಮನೆತನದ ಅತ್ಯಂತ ದೊಡ್ಡ ಶಾಸನಗಳಲ್ಲಿ ಒಂದಾಗಿದೆ. *೫ ಇದು ಪ್ರಾರಂಭದಲ್ಲಿ ಕಾವ್ಯಮಯ ವರ್ಣನೆಗಳಿಂದ ಕೂಡಿದ್ದು, ನಂತರ ಕನ್ನಡ ಗದ್ಯದಲ್ಲಿ ಮುಂದುವರಿದಿದೆ. ಈ ಶಾಸನವು ಪ್ರಾರಂಭದಿಂದ ದೊಡ್ಡಕೃಷ್ಣರಾಜ ಒಡೆಯರವರೆಗಿನ ಮೈಸೂರು ಅರಸರ ವಂಶಾವಳಿ, ಅವರ ಸಾಧನೆಗಳು, ಶಾಸನ ಕೊಡುಗೆಯ ಉದ್ದೇಶ, ಅದನ್ನು ಪಡೆದವರ ವಿವರಗಳನ್ನು ತಿಳಿಸುತ್ತದೆ. ಹೀಗೆ ಕಾವ್ಯಗುಣಗಳನ್ನು ಹೊಂದಿರುವ ಈ ಮೂರು ಶಾಸನಗಳು, ಮೈಸೂರು ಒಡೆಯರ ಇತಿಹಾಸದ ಪುನಾ ರಚನೆಗೆ ಉಪಯುಕ್ತ ಮಾಹಿತಿ ನೀಡುತ್ತವೆ.

ದೊಡ್ಡಕೃಷ್ಣರಾಜ ಒಡೆಯರ ಆಸ್ಥಾನ ಕವಿಯಾದ 'ಕಳಲೆ ವೀರರಾಜ' **ಸಕಲವೈದ್ಯ ಸಂಹಿತಾ ಸಾರಾರ್ಣವ** ಎಂಬ ಆಯುರ್ವೇದ ಗ್ರಂಥವನ್ನು ರಚಿಸಿರುವನು. *೬ ಈ ಗ್ರಂಥವನ್ನು **ವೀರರಾಜೇಂದ್ರೋಕ್ತಿ ವಿಲಾಸ** ಎಂಬ ಹೆಸರಿನಿಂದಲೂ ಕರೆಯಲಾಗುತ್ತಿದೆ. ಇದು ಹೊಸಗನ್ನಡದ ಗದ್ಯರೂಪದಲ್ಲಿದೆ. ವೀರರಾಜನಿಗೆ ಸಣ್ಣವಯಸ್ಸಿನಲ್ಲಿಯೇ ಕಾವ್ಯ ನಾಟಕ, ಅಲಂಕಾರ, ವ್ಯಾಕರಣ, ಮೊದಲಾದುವುಗಳಲ್ಲಿ ಪರಿಣತಿ ಇದ್ದಂತೆ, ಭೋಜರಾಜ ಸಂಹಿತೆ

ಮತ್ತು ವೈದ್ಯಕಲ್ಪತರುಗಳೂ ಕೂಡ ತಿಳಿದಿದ್ದವು. ಅವನಿಗೆ ಆಯುರ್ವೇದದಲ್ಲಿ ಹೆಚ್ಚು ಅನುಭವವಿದ್ದು, ದೊಡ್ಡಕೃಷ್ಣರಾಜ ಒಡೆಯರ ಆಸ್ಥಾನ ಸೇರಿದ ಮೇಲೆ ಆ ಅನುಭವವನ್ನು ಬಳಸಿಕೊಂಡು ಈ ಗ್ರಂಥವನ್ನು ರಚಿಸಿರುವಂತೆ ಕಂಡುಬರುತ್ತದೆ. ಈ ಕೃತಿಯನ್ನು ರಚಿಸಲು ಉಂಟಾದ ಪ್ರೇರಣೆಯನ್ನು ವೀರರಾಜನು ತಿಳಿಸುತ್ತ - *ಒಂದು ದಿನ ಆಸ್ಥಾನದ ವಿದ್ವತ್ಸಭೆಯಲ್ಲಿ ಆಯುರ್ವೇದ ಕುರಿತು ಚರ್ಚೆ ನಡೆಸುತ್ತಿದ್ದಾಗ ಸಮಕಾಲೀನ ಆಯುರ್ವೇದ ವಿದ್ವಾಂಸರೊಡನೆ ಸಮಾಲೋಚಿಸಿ, ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಸಮಸ್ತ ಗ್ರಂಥಗಳನ್ನು ಕ್ರೋಢೀಕರಿಸಿ ಪರಿಶೋಧಿಸಿ, ಲೋಕಹಿತಾರ್ಥವಾಗಿ, ಈ ಕೃತಿಯನ್ನು ಕನ್ನಡ ವಾಕ್ಯದಿಂದ ರಚಿಸಿದೆನೆಂದು ಹೇಳಿಕೊಂಡಿದ್ದಾನೆ.* *೮

ಕೃತಿಯ ಪೀಠಿಕಾ ಭಾಗದಲ್ಲಿ ತನ್ನ ಮನೆತನದವರ ವಿವರಗಳನ್ನು ನೀಡುವ ಸಂದರ್ಭದಲ್ಲಿ ಚಿಕ್ಕದೇವರಾಜ ಒಡೆಯರು ಮತ್ತು ತನ್ನ ತಂದೆ ದೊಡ್ಡಯ್ಯನನ್ನು ಪ್ರಶಂಸನೆ ಮಾಡಿ ಮುಂದೆ ಮರಾಠರ ದಾದಾಜಿ, ಜೈತಾಜಿ, ನಿಂಬಾಜಿಯವರ ಮೇಲೆ ದೊಡ್ಡಯ್ಯನು ನಡೆಸಿದ ಯುದ್ಧದ ವಿವರಣೆಗಳನ್ನು ನೀಡಿದ್ದಾನೆ. ಆನಂತರ ವೀರರಾಜನು ಆಯುರ್ವೇದ ಚಿಕಿತ್ಸೆಯ ಮಹತ್ವ ಮತ್ತು ಅವಶ್ಯಕತೆಗಳನ್ನು ಒತ್ತಿ ಹೇಳಿದ್ದಾನೆ. ರೋಗಿ ಮತ್ತು ರೋಗಗಳ ಲಕ್ಷಣ, ಅವುಗಳಿಗೆ ನಡೆಸಬೇಕಾದ ಚಿಕಿತ್ಸೆಗಳು, ನಾಡೀಪರೀಕ್ಷೆ, ನಾಲಿಗೆ ಪರೀಕ್ಷೆ, ಮೂತ್ರ ಪರೀಕ್ಷೆ ಮುಂತಾದ ಚಿಕಿತ್ಸಾ ವಿಧಾನಗಳನ್ನು ತಿಳಿಸಿದ್ದಾನೆ. ಒಟ್ಟು ೧೪೯ ಚಿಕಿತ್ಸಾ ವಿಧಾನಗಳು ವರ್ಣಿತಗೊಂಡಿವೆ. ಇಷ್ಟಕ್ಕೇ ಸೀಮಿತಗೊಳ್ಳದೆ ವೀರರಾಜನು ಆಭರಣಗಳ ವಿಶಿಷ್ಟತೆ, ವಾಸದ ಮನೆಗಳ ಗುಣಲಕ್ಷಣ, ತಾಂಬೂಲದ ಮಹತ್ವ ಇತ್ಯಾದಿಗಳ ಬಗೆಗೂ ತನ್ನ ಕೃತಿಯಲ್ಲಿ ವಿವರಣೆ ನೀಡಿದ್ದಾನೆ. ಆಭರಣಗಳು ಅಲಂಕಾರಕ ವಸ್ತುಗಳು ಮಾತ್ರವಾಗಿರದೆ ಜೀವನ ಮೌಲ್ಯಗಳ ಸಂಕೇತವೂ, ದೇವತೆಗಳು ಧರಿಸುವ ಪವಿತ್ರ ವಸ್ತುಗಳೂ ಆಗಿದ್ದು ಮುತ್ತೈದೆಯರು ಯಾವ ಸಂದರ್ಭಗಳಲ್ಲಿ ಅವುಗಳನ್ನು ಧರಿಸಿದರೆ ಮಂಗಳ ಮತ್ತು ಅಮಂಗಳಕರವಾಗುತ್ತದೆ ಎಂಬುದರ ಬಗೆಗೆ ವೀರರಾಜನು **ಭೂಷಣಧಾರಣ ಲಕ್ಷಣ** ಎಂಬ ಅಧ್ಯಾಯದಲ್ಲಿ ಸವಿಸ್ತಾರವಾಗಿ ತಿಳಿಸಿದ್ದಾನೆ. ಒಟ್ಟಿನಲ್ಲಿ ವೀರರಾಜನ ಈ ಕೃತಿಯು ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಒಂದು ವಿಶಿಷ್ಟ ಕೃತಿಯಾಗಿದ್ದು, ಆರೋಗ್ಯಪೂರ್ಣ ಜೀವನ ನಡೆಸಲು ಮಾಡಬೇಕಾದ ಶಾರೀರಿಕ ಕಸರತ್ತುಗಳ ವಿವರ ತಿಳಿಯಬಯಸುವವರಿಗೆ ವಿಶ್ವಕೋಶದಂತಿದೆ.

ಆದರೆ ರಾಜಾವಳಿ ಕಥೆಯಲ್ಲಿ ದೇವಚಂದ್ರನು ಅನೇಕ ''ವೈದ್ಯಶಾಸ್ತ್ರಂಗಳೊಳಿರ್ಪ ರೋಗಹರಿಮಪ್ಪ ಚಿಕಿತ್ಸೆಗಳಂ ಕನ್ನಡ ವಾಕ್ಯದೊಳ್ ವೀರರಾಜೋಕ್ತಿ ವಿಲಾಸವೆಂದು ಬರೆಯಿಸಿ''*೯ ಎಂದು ಹೇಳಿರುವುದನ್ನು ಗಮನಿಸಿದಾಗ ವೀರರಾಜನು ಈ ಕೃತಿಯನ್ನು ಬೇರೆಯವರಿಂದ ಬರೆಯಿಸಿರಬಹುದೆಂಬ ಸಂದೇಹ ಬರುತ್ತದೆಯಾದರೂ, ಆಯುರ್ವೇದಕ್ಕೆ ಸಂಬಂಧಿಸಿದಂತೆ ಸಂಸ್ಕೃತದಲ್ಲಿ ಹಲವಾರು ಕೃತಿಗಳಿದ್ದು, ಕನ್ನಡದಲ್ಲಿ ಅವು ಕಂಡುಬರುವುದಿಲ್ಲ. ಆದ್ದರಿಂದ ಈ ಕೃತಿ ಮಹತ್ವದ್ದಾಗಿದ್ದು ವೀರರಾಜನೇ ಅದನ್ನು ರಚಿಸಿದ್ದಾನೆಂದು ಹೇಳಬಹುದು. ದೊಡ್ಡ ಕೃಷ್ಣರಾಜ ಒಡೆಯರು ಕವಿಗಳನ್ನು ಪ್ರೋತ್ಸಾಹಿಸಿದುದಷ್ಟೇ ಅಲ್ಲದೆ, ತಮ್ಮ ರಾಣಿ ಚೆಲುವಾಂಬೆಯನ್ನು ಕನ್ನಡದಲ್ಲಿ ಕೃತಿಗಳನ್ನು ರಚಿಸುವಂತೆ ಪ್ರೇರೇಪಿಸಿದರು. ಚೆಲುವಾಂಬೆ ದಳವಾಯಿ ದೊಡ್ಡೇಂದ್ರನ ಮಗ ಕಳಲೆ ಕಾಂತಪ್ಪನ ಮಗಳು. ಈಕೆ ವರನಂದೀ ಕಲ್ಯಾಣ, ವೆಂಕಟಾಚಲಮಹಾತ್ಮೆ, ಲಾಲೀಪದ, ಅಲಮೇಲುಮಂಗೆ ಲಾಲೀಪದ, ತಲಕಾವೇರಿ ಮಹಾತ್ಮೆ ಟೀಕೆ ಮತ್ತು ಮಂಗಳಾರತಿ ಪದ ಎಂಬ ಕೃತಿಗಳನ್ನು ರಚಿಸಿದ್ದಾಳೆ.

'ವರನಂದೀ - ಕಲ್ಯಾಣ'ವನ್ನು ತನ್ನ ಪತಿಯು ''ಯದುಗಿರಿಯರೆಯನ ಚಾರಿತ್ರ್ಯವನ್ನು ನೆರೆ ಸೊಬಗಿನೊಳುಸುರು'' ಎಂದು ನೇಮಿಸಲು ಅದನ್ನು ಶಿರದೊಳಾಂತು ಈ ಕಾವ್ಯವನ್ನು ರಚಿಸಿದೆನೆಂದು*೧೦ ಹೇಳುವ ಚೆಲುವಾಂಬೆ, ಕೃತಿಯ ಆರಂಭದಲ್ಲಿ 'ಉನ್ನತಿ ಪಡೆದ ಅಚ್ಚಗನ್ನಡದ ಇನಿವಾತನ್ನು ಚೆನ್ನತೆಗೊಳಿಸಿ ವರ್ಣಕದಲ್ಲಿ ಕಾವ್ಯವನ್ನು ಹೇಳುವುದಾಗಿ ಹೇಳಿದ್ದಾಳೆ.*೧೧ ಸುಮಾರು ೭ ಸಂಧಿಗಳು ಮತ್ತು ೮೮೧ ಪದ್ಯಗಳಿರುವ ಈ ಕೃತಿ ಸಾಂಗತ್ಯದಲ್ಲಿದ್ದು, ಹಿಂದೂ ಮುಸಲ್ಮಾನರ ಭಾವೈಕ್ಯತೆಯ ಸಂಕೇತವಾಗಿದೆ. ಇದು *ದೆಹಲಿಯ ಬಾದಶಹನ ಮಗಳು ವರನಂದಿಗೂ* ಮೇಲುಕೋಟೆಯ ಚೆಲುವನಾರಾಯಣ ಸ್ವಾಮಿಗೂ ನಡೆದ ವಿವಾಹದ ಕಥೆಯನ್ನು ನಿರೂಪಿಸುತ್ತದೆಯಾದರೂ ಚೆಲುವಾಂಬೆ ಅರಮನೆಯ ಸಂಪ್ರದಾಯಗಳನ್ನು ಅನುಸರಿಸಿ ಈ ಕಾವ್ಯವನ್ನು ರಚಿಸಿರುವುದರಿಂದ ಮೈಸೂರು ಒಡೆಯರ ಕೆಲವು ಸಂಪ್ರದಾಯಗಳ ಪರಿಚಯವಾಗುತ್ತದೆ. ರಾಜರ ಆಚಾರ ವಿಚಾರಗಳು, ಉಡುಗೆ-ತೊಡುಗೆಗಳು, ಅಲಂಕಾರಗಳು, ವಿವಾಹ ಸಂಪ್ರದಾಯಗಳು, ಒಡೆಯರು ಮಕ್ಕಳನ್ನು ಬೆಳೆಸುತ್ತಿದ್ದ ರೀತಿ, ಅವರ ಶಿಕ್ಷಣ, ಆಟಪಾಠಗಳು ಮುಂತಾದವುಗಳ ವಿವರಣೆ ನೀಡಿರುವುದರಿಂದ ಮೈಸೂರು ಒಡೆಯರ ಸಾಂಸ್ಕೃತಿಕ ಇತಿಹಾಸ ರಚಿಸುವವರಿಗೆ ಈ ಗ್ರಂಥ ಅತ್ಯಂತ ಉಪಯುಕ್ತವಾಗಲಿದೆ.

ತಲಕಾವೇರಿ ಮಹಾತ್ಮೆಯು ಚೆಲುವಾಂಬೆಯ ಮತ್ತೊಂದು ಕೃತಿ.*೧೨ ಇದಕ್ಕೆ **ಚೆಲುವಾಂಬಿಕ ವಾಣೀವಿಲಾಸ** ಎಂದೂ ಕರೆಯುತ್ತಾರೆ. ಇದು ಅಗ್ನಿ ಪುರಾಣದಲ್ಲಿ ಉಕ್ತವಾಗಿರುವ **ತುಲಾ ಕಾವೇರಿ ಮಹಾತ್ಮೆಗೆ** ಬರೆದ ಕನ್ನಡ ವ್ಯಾಖ್ಯಾನ. ದಕ್ಷಿಣಗಂಗೆ ಎಂದು ಪ್ರಸಿದ್ಧಿ ಪಡೆದಿರುವ ಕಾವೇರಿ ನದಿಯ ಮಹತ್ವ ಇದರಲ್ಲಿ ವರ್ಣಿತಗೊಂಡಿದೆ. ಕಾವೇರಿ ನದಿಯನ್ನು ಕುರಿತು ಅನೇಕ ಕವಿಗಳು ಮಾಹಾತ್ಮ್ಯಗಳನ್ನು ರಚಿಸಿದ್ದರೂ, ಈ ಗ್ರಂಥವನ್ನು ಗದ್ಯದಲ್ಲಿ ಬರೆದಿರುವುದು ಚೆಲುವಾಂಬೆಯ ವೈಶಿಷ್ಟ್ಯವಾಗಿದೆ. ಚೆಲುವಾಂಬೆಯ **ವೆಂಕಟಾಚಲ ಮಾಹಾತ್ಮ್ಯ ಲಾಲೀಪದದಲ್ಲಿ** ವೆಂಕಟಗಿರಿ ಮತ್ತು

ತಿರುಪತಿ ವೆಂಕಟೇಶ್ವರನ ಮಹಿಮೆ ವರ್ಣಿತಗೊಂಡಿದೆ. ನಾರದಮುನಿ ಹಿಂದೆ ಭೃಗುಮುನಿಗೆ ಹೇಳಿದ ವೆಂಕಟಗಿರಿ ಮಹಿಮೆಯನ್ನು ತಾನು ಕನ್ನಡದಲ್ಲಿ ಹೇಳುತ್ತಿರುವುದಾಗಿ ಕವಯಿತ್ರಿ ಹೇಳುತ್ತಾಳೆ. *೧೩ ಅಲಮೇಲುಮಂಗೆ ಲಾಲೀಪದವು ತಿರುಪತಿ ವೆಂಕಟರಮಣ ಸ್ವಾಮಿಯ ಪತ್ನಿ ಅಲಮೇಲಮ್ಮನ ಹಾಗೂ ಮಂಗಳಾರತಿ ಪದವು ಮೇಲುಕೋಟೆ ಚೆಲುವನಾರಾಯಣ ಸ್ವಾಮಿಯ ಸ್ತುತಿರೂಪಕವಾಗಿವೆ. ಒಟ್ಟಿನಲ್ಲಿ ಚೆಲುವಾಂಬೆ ವೈಷ್ಣವ ಪರವಾದ ಕೃತಿಗಳನ್ನು ರಚಿಸಿ, ಆ ಧರ್ಮದಲ್ಲಿ ತನಗಿದ್ದ ಭಕ್ತಿ ನಿಷ್ಠೆಗಳನ್ನು ವ್ಯಕ್ತಪಡಿಸಿದ್ದರೂ, ಅವು ಗದ್ಯಪದ್ಯಗಳಿಂದ ಕೂಡಿದ್ದು, ಸರಳವಾಗಿದ್ದು ಜನಸಾಮಾನ್ಯರಿಗೆ ಸುಲಭವಾಗಿ ಅರ್ಥ ವಾಗುವಂತಿವೆ.

ಇಮ್ಮಡಿ ಕೃಷ್ಣರಾಜ ಒಡೆಯರ (೧೭೩೪-೧೭೬೬) ಮಂತ್ರಿ ಮತ್ತು ಸೇನಾನಿಯಾಗಿ ಅಂದಿನ ರಾಜಕೀಯ ಕ್ಷೇತ್ರದಲ್ಲಿ ಮಹತ್ವದ ಸೇವೆ ಸಲ್ಲಿಸಿದ ಕರಾಚೂರಿ ನಂಜರಾಜಯ್ಯನು ಸಾಹಿತ್ಯ ಮತ್ತು ಕಲಾಭಿವೃದ್ಧಿಗೆ ಅಮೋಘ ಸೇವೆ ಸಲ್ಲಿಸಿರುವನು. ಸ್ವತಃ ಕವಿಯೂ, ವಿದ್ವಾಂಸನೂ ಆಗಿದ್ದ ನಂಜರಾಜನು ಅನೇಕ ಕವಿಗಳಿಗೆ ಪೋಷಕನಾಗಿದ್ದನು. ಕೃಷ್ಣರಾಜ ಒಡೆಯರ ಆಸ್ಥಾನ ಪಂಡಿತರಲ್ಲಿಯೇ ಘನವಿದ್ವಾಂಸನೆನಿಸಿಕೊಂಡಿದ್ದ ನಂಜರಾಜ, ವಿದ್ವಾಂಸರ ನಡುವೆ ಕುಳಿತು ಸುದೀರ್ಘ ಚರ್ಚೆಗಳನ್ನು ನಡೆಸಿ ಎಲ್ಲರನ್ನೂ ಬೆರಗುಗೊಳಿಸುವ ಸಾಮರ್ಥ್ಯವನ್ನು ಹೊಂದಿದ್ದನು. *೧೪ ಇವನು ವಿವಿಧ ಕಲೆ ಮತ್ತು ಶಾಸ್ತ್ರಗಳನ್ನು ಕಲಿತು ಕರಗತಮಾಡಿಕೊಂಡಿದ್ದಂತೆ ಶೈವಾಗಮನಿಗಮ ಮತ್ತು ಶೈವಪಂಚಾಕ್ಷರಗಳನ್ನು ಚೆನ್ನಾಗಿ ಅರಿತಿದ್ದನು. ಬಹುಭಾಷಾ ವಿಶಾರದನಾಗಿದ್ದ ಅವನು ಶೈವಧರ್ಮಕ್ಕೆ ಸಂಬಂಧಿಸಿದ ಅನೇಕ ಕೃತಿಗಳನ್ನು ನಂಜರಾಜ ವಾಣೀ ವಿಲಾಸ ಎಂಬ ಹೆಸರಿನಲ್ಲಿ ಅಚ್ಚ ಕನ್ನಡದಲ್ಲಿ ಬರೆದಿದ್ದಾನೆ. ಇವುಗಳಲ್ಲಿ ಹಲವು ಶೈವಪುರಾಣ ತತ್ವಗಳಿಗೆ ಸಂಬಂಧಿಸಿದವುಗಳಾದರೆ, ಕೆಲವು ಸ್ಥಳ ಮಹಿಮೆಯನ್ನು ವರ್ಣಿಸುತ್ತವೆ. ನಂಜರಾಜನ ಪಾಂಡಿತ್ಯ ಮತ್ತು ಅದ್ವಿತೀಯ ಕಾವ್ಯರಚನಾ ಶಕ್ತಿಯನ್ನು ಕಂಡ ಕವಿಗಳು 'ನಾನಾ ಭಾಷಾ ವಿಶೇಷ ಕಾವ್ಯ ರಚನಾ ಚಾತುರೀಧುರೀಣ', 'ಶ್ರೀ ನಂಜರಾಜೋನವ ಭೋಜರಾಜ', 'ನೂತನ ಭೋಜರಾಜ' ಎಂಬುದಾಗಿ ಹೊಗಳಿದ್ದಾರೆ. *೧೫

ವೀರಶೈವ ಧರ್ಮಕ್ಕೆ ಸಂಬಂಧಿಸಿದ ಕನ್ನಡ ಕೃತಿಗಳನ್ನು ನಂಜರಾಜನು ಬರೆದ ಸಂದರ್ಭವನ್ನು ದೇವಚಂದ್ರನು ತನ್ನ ರಾಜಾವಳಿ ಕಥೆಯಲ್ಲಿ ಹೀಗೆ ಹೇಳುತ್ತಾನೆ: ''*ಕಳಲಿ ನಂಜರಾಜರಿಗೆ ಕೇರಳದೇಶ ಕೊಂಗನಾಡತ್ತಣಿಂ ದಾಂಡಿಗಳ್ ಬಂದು ಸೇರಿ ವೀರಶೈವ ಪುರಾಣಮಂದನೇಕ ಕಲ್ಪನಾ ಕಥೆಗಳಂ ಕೇಳ್ದರದರೊಳ್ ಅತಿಭಕ್ತಿ ಪುಟ್ಟಿ ಕನ್ನಡ ವಾಕ್ಯಂಗಳಿಂದ ನಂಜರಾಜ ಕೃತಮೆಂದು ಗ್ರಂಥಗಳಂ ವಿರಚಿಸಿದ್ದ*''. *೧೬

ಕವಿಚರಿತೆಕಾರರು ಗುರುತಿಸಿರುವಂತೆ ನಂಜರಾಜನು ಬರೆದಿರುವ ಕೃತಿಗಳೆಂದರೆ: '*ಕಕುದ್ಗಿರಿ ಮಹಾತ್ಮ್ಯ*', '*ಕಾಶೀಮಹಿಮಾರ್ಥದರ್ಪಣ*', '*ಗರಳಪುರಿ ಮಹಿಮಾದರ್ಶ*', '*ಸೇತುಮಾಹಿಮಾದರ್ಶ*', '*ಭದ್ರಗಿರಿ ಮಹಾತ್ಮ್ಯ*', '*ಲಿಂಗಪುರಾಣ*', '*ವಿಘ್ನೇಶ್ವರ ವ್ರತಕಲ್ಪದ ಟೀಕು*', '*ಶಿವಧರ್ಮೋತ್ತರ ಟೀಕು*', '*ಭಾರತ ತಾತ್ಪರ್ಯ ಟೀಕು*', '*ಮಾರ್ಕಂಡೇಯ ಪುರಾಣಾರ್ಥ ದೀಪಿಕೆ*', '*ಶಿವಗೀತೆ*', '*ಶಿವಭಕ್ತವಿಲಾಸದರ್ಪಣ*', '*ಹರದತ್ತಾಚಾರ್ಯ ಮಹಾತ್ಮ್ಯ*', '*ಹಾಲಾಸ್ಯ ಮಹಾತ್ಮ್ಯ*' ಮತ್ತು '*ಅರುವತ್ತುಮೂವರ ತ್ರಿವಿಧಿ*' - ಮುಂತಾದವುಗಳು ಆಯಾ ಸಂಸ್ಕೃತ ಗ್ರಂಥಗಳ ಕನ್ನಡ ಗದ್ಯಾನುವಾದಗಳಾಗಿವೆ. ಇವುಗಳು ಆಯಾ ಹೆಸರಿನಿಂದ ಕೂಡಿದ ಸ್ಥಳಮಹಿಮೆಯನ್ನೂ ವರ್ಣಿಸುತ್ತವೆ. ನಂಜರಾಜನ ಈ ಕೃತಿಗಳು ಲಲಿತಶೈಲಿಯಲ್ಲಿದ್ದು ಜನಸಾಮಾನ್ಯರು ಸುಲಭವಾಗಿ ಆಸ್ವಾದಿಸಬಹುದಾದಷ್ಟು ಸರಳವಾಗಿಯೂ ಮನೋಹರ ವಾಗಿಯೂ ಇವೆ.

ನೀಲಕಂಠ ಭಾಷ್ಯಕಾರ, ಹರಿದತ್ತಾಚಾರ್ಯ ಮತ್ತು ಸೌಂದರೇಶ್ವರಾಚಾರ್ಯರನ್ನು ತನ್ನ ಕೃತಿಗಳಲ್ಲಿ ಸ್ಮರಿಸಿರುವ ನಂಜರಾಜನು ಸ್ಕಾಂದಪುರಾಣ ಅಗಸ್ತ್ಯಸಂಹಿತೆಯಲ್ಲಿ ಬರುವ ಮಧುರೆಯ ಸುಂದರೇಶ್ವರ ದೇವರಿಗೆ ಸಂಬಂಧಿಸಿದ ಅರವತ್ನಾಲಕ್ಕು ಕಥೆಗಳನ್ನು (ಲೀಲೆಗಳು) ವರ್ಣಿಸುವ 'ಹಾಲಾಸ್ಯ ಮಾಹಾತ್ಮ್ಯ'ವನ್ನೂ, ಬ್ರಹ್ಮಾಂಡ ಪುರಾಣದ 'ಭದ್ರಗಿರಿಯ ಮಾಹಾತ್ಮ್ಯ'ವನ್ನೂ ೧೬ ಅಧ್ಯಾಯಗಳಲ್ಲಿ; 'ಶಿವ ಧರ್ಮೋತ್ತರ'ವನ್ನು ೫೦ ಅಧ್ಯಾಯಗಳಲ್ಲಿ, ಭವಿಷ್ಯೋತ್ತರ ಪುರಾಣದ 'ಶಿವಗೀತೆ'ಯನ್ನು ೧೬ ಅಧ್ಯಾಯಗಳಲ್ಲೂ ಹಾಗೂ 'ಲಿಂಗಪುರಾಣ'ವನ್ನು ೧೦೮ ಮತ್ತು ೫೦ ಅಧ್ಯಾಯಗಳ ಎರಡು ಭಾಗಗಳಲ್ಲಿ ಬರೆದಿದ್ದಾನೆ. ಲಿಂಗಪುರಾಣವು ನಂಜರಾಜನು ಬರೆದಿರುವ ಕೃತಿಗಳಲ್ಲೆಲ್ಲಾ ಅತ್ಯಂತ ದೊಡ್ಡಕೃತಿಯಾಗಿದ್ದು, ಶಿವನನ್ನು ಆರಾಧಿಸುವ ವಿವಿಧ ದೇವಪೂಜಾ ವಿಧಾನಗಳು, ಶಿವನ ಸ್ವರೂಪ ಇತ್ಯಾದಿಗಳನ್ನು ಒಳಗೊಂಡಿದೆ. ಇವುಗಳಲ್ಲದೆ 'ಶಿವಭಕ್ತ ವಿಲಾಸದರ್ಪಣ', 'ಸೇತುಮಹಿಮಾದರ್ಶ', ಸ್ಕಾಂದಪುರಾಣದ 'ವಿಘ್ನೇಶ್ವರ ವ್ರತಕಲ್ಪ'ವನ್ನು 'ಸ್ಯಾಮಂತಕೋಪಾಖ್ಯಾನ', 'ಸಂಕಷ್ಟಹರ ಚತುರ್ಥೀ ವ್ರತ', 'ಧುಂಡೀವಿನಾಯಕ ಚರಿತ್ರೆ' *೧೭ ಎಂಬ ಮೂರು ಭಾಗಗಳಲ್ಲಿ ಬರೆದುದೇ ಅಲ್ಲದೆ 'ಮಾರ್ಕಂಡೇಯ ಪುರಾಣ'ವನ್ನೂ ಬರೆದಿದ್ದಾನೆ.

'ಮಹಾಭಾರತ ತಾತ್ಪರ್ಯ ಟೀಕು'ವನ್ನು 'ವಾಣೀವಿಲಾಸ' ಎನ್ನುವ ಹೆಸರಿನಲ್ಲಿ ರಚಿಸಿದ್ದಾನೆ. ಇದು ಆದಿಪರ್ವ, ಸಭಾಪರ್ವ, ಅನುಶಾಸನಪರ್ವ, ದ್ರೋಣಪರ್ವ, ಶಲ್ಯಪರ್ವ, ಸೌಪ್ತಿಕಪರ್ವ ಮುಂತಾದ ಪರ್ವಗಳಿಂದ ಕೂಡಿರುವ ಅನೇಕ ಅಧ್ಯಾಯ ಗಳನ್ನೊಳಗೊಂಡಿದೆ. ಇದಲ್ಲದೆ ಸ್ಕಾಂದಪುರಾಣದ ತೀರ್ಥ ಖಂಡದಲ್ಲಿ ಬರುವ 'ಶಿವಗಂಗೆ ಮಹಾತ್ಮ್ಯ'ವನ್ನು 'ಕಕುದ್ಗಿರಿ

ಮಾಹಾತ್ಮ್ಯ' ಎನ್ನುವ ಹೆಸರಿನಲ್ಲಿ ರಚಿಸಿದ್ದಾನೆ. ಇದರಲ್ಲಿ ನಂಜರಾಜನು ಧಾರಾನಗರದ ಮೇಲೆ ದಂಡೆತ್ತಿಕೊಂಡು ಹೋದುದು ಹಾಗೂ ದೇವನಹಳ್ಳಿಯನ್ನು ಮುತ್ತಿಗೆ ಹಾಕಿದ ವಿಚಾರಗಳಿವೆ. ಸ್ಕಾಂದಪುರಾಣದ **ಗರಳಪುರಿ ಮಹಿಮಾದರ್ಶವು** ೧೨ ಅಧ್ಯಾಯಗಳಲ್ಲಿದ್ದು, ನಂಜನಗೂಡಿನ ಸ್ಥಳಮಹಿಮೆ, ಕಪಿಲಾನದಿಯ ಉಗಮ, ಗೌತಮಕ್ಷೇತ್ರದ ಮಹಿಮೆ ಇತ್ಯಾದಿಗಳ ವರ್ಣನೆಯನ್ನು ತಿಳಿಸುತ್ತದೆ. ಈ ಗ್ರಂಥರಚನೆಯ ಸ್ಮರಣಾರ್ಥವಾಗಿ ಕ್ರಿ. ಶ. ೧೭೬೩ರಲ್ಲಿ ನಂಜರಾಜನು ನಂಜನಗೂಡಿನಲ್ಲಿ **ನಂಜರಾಜ ತಿರುನಾಳ** ಉತ್ಸವವನ್ನು ನೆರವೇರಿಸಿದನು. *೧೮ ಹೀಗೆ ಸ್ವತಃ ಪಂಡಿತನೂ, ಕವಿಗಳ ಪೋಷಕನೂ ಆಗಿದ್ದ ನಂಜರಾಜನು ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದುದೇ ಅಲ್ಲದೆ, ಅವುಗಳನ್ನು ಪೋಷಿಸುವ ಮೂಲಕ ಅದರ ಮಹೋನ್ನತ ಬೆಳವಣಿಗೆಗೆ ಕಾರಣನಾಗಿದ್ದಾನೆ. ಸಿ. ಹಯವದನರಾಯರು ಗುರುತಿಸಿರುವಂತೆ ನಂಜರಾಜನು ತನ್ನ ಕೃತಿಗಳನ್ನು ಕ್ರಿ. ಶ. ೧೭೩೪-೧೭೪೨, ೧೭೪೨-೧೭೫೧ ಹಾಗೂ ೧೭೫೧-೧೭೬೧ರ ಅವಧಿಗಳ ಮೂರು ಹಂತಗಳಲ್ಲಿ ಬರೆದಿದ್ದಾನೆ. *೧೯

ತಮ್ಮ ಒಡೆಯನ ಆದರ್ಶವನ್ನನುಸರಿಸಿ ಕಳಲೆಯ ದಳವಾಯಿಗಳು ಅನೇಕ ಕವಿಗಳಿಗೆ ಪೋಷಕರಾಗಿದ್ದರು. ಕಳಲೆ ವೀರರಾಜನ ಆಶ್ರಿತನಾಗಿದ್ದ ಚೆನ್ನಯ್ಯನೆಂಬ ಕವಿಯು **ಪದ್ಮಿನೀ ಪರಿಣಯ** ಎಂಬ ಸಾಂಗತ್ಯ ಕೃತಿ ರಚಿಸಿದ್ದಾನೆ. *೨೦ ಮೂರು ಆಶ್ವಾಸಗಳುಳ್ಳ ಈ ಕೃತಿಯಲ್ಲಿ ೧೮ ಸಂಧಿಗಳಿದ್ದು ೨೫೦೦ ಪದ್ಯಗಳಿವೆ. ಇದು ತಿರುಪತಿಯ ವೆಂಕಟೇಶ್ವರ ಮತ್ತು ಪದ್ಮಾವತಿಯರ ಪರಿಣಯದ ಕಥೆಯನ್ನು ನಿರೂಪಿಸುತ್ತದೆಯಾದರೂ, ಪುರವರ್ಣನೆ, ಆಸ್ಥಾನವರ್ಣನೆ, ಪದ್ಮಿನಿಯ ವಿವಿಧ ರೂಪಾಂತರ ವರ್ಣನೆಗಳನ್ನು ನೀಡುತ್ತದೆ. ಹಾಗೂ ಮೈಸೂರು ಅರಸರ ಆಸ್ಥಾನದಲ್ಲಿ ಸೈನಿಕರಾಗಿ, ಅಧಿಕಾರಿಗಳಾಗಿ ಸೇವೆ ಸಲ್ಲಿಸಿದ ಕಳಲೆ ದಳವಾಯಿಗಳ ಪರಿಚಯವೂ ಇದೆ. ಈತನ ಇನ್ನೊಂದು ಕೃತಿ 'ಭಗವದ್ಗೀತಾ' ಕೂಡ ಹೊಸಗನ್ನಡದ ಗದ್ಯದಲ್ಲಿದೆ. *೨೧ ದೊಡ್ಡ ಕೃಷ್ಣರಾಜ ಒಡೆಯರ ಬೊಕ್ಕಸದ ಕರಣಿಕನಾದ ವೆಂಕಟಪತಿಯ ಪ್ರೋತ್ಸಾಹದಿಂದ ಚಿಕ್ಕನಾಯಕನಪುರದ ರಾಮಾವಧಾನಿಯ ಮಗ 'ಬಾಲವೈದ್ಯದ ಚೆಲುವ'ನೆಂಬ ಕವಿಯು **ಕನ್ನಡ ಲೀಲಾವತಿ** ಮತ್ತು ರತ್ನಶಾಸ್ತ್ರ ಗಳನ್ನು ಬರೆದಿದ್ದಾನೆ. *೨೨ ಇವು ಕ್ರಮವಾಗಿ ಕಂದ ಮತ್ತು ವಾರ್ಧಕ ಷಟ್ಪದಿಯಲ್ಲಿದ್ದು, ಸಾಧಾರಣ ಗಣಿತ ಮತ್ತು ಕ್ಷೇತ್ರ ಗಣಿತವನ್ನೂ, 'ರತ್ನಶಾಸ್ತ್ರ'ವು ನವರತ್ನಗಳ ವಿಷಯವನ್ನೂ ನಿರೂಪಿಸುತ್ತವೆ. ದಳವಾಯಿ ದೇವರಾಜಯ್ಯನ ಆಶ್ರಿತನಾಗಿದ್ದ ರಂಗಯ್ಯನೆಂಬ ಮತ್ತೋರ್ವ ಕವಿಯು (೧೭೩೦) **ಕಾವೇರೀ ಮಾಹಾತ್ಮ್ಯ**ವನ್ನು ಭಾಮಿನೀ ಷಟ್ಪದಿಯಲ್ಲಿ ಬರೆದಿರುವನು. *೨೩ ಇದರಲ್ಲಿ ಕಾವೇರಿ ನದಿಯ ಸ್ಥಳಮಹಿಮೆಯು ವರ್ಣಿತಗೊಂಡಿದೆ.

ಕರಾಚೂರಿ ನಂಜರಾಜನ ಆಶ್ರಿತರಲ್ಲೊಬ್ಬನಾದ ನೂರೊಂದನೆಂಬ ವೀರಶೈವ ಕವಿಯು **ಸೌಂದರ ಕಾವ್ಯ** ಎಂಬ ಕೃತಿಯನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ. *೨೪ ಈ ಕೃತಿಯು ೧೩ ಸಂಧಿಗಳಿಂದಲೂ ೧೩೯೫ ಪದ್ಯಗಳಿಂದಲೂ ಕೂಡಿದೆ. ಮೊದಲ ಮೂರು ಸಂಧಿಗಳಲ್ಲಿ ಎರಡನೇ ಕೃಷ್ಣರಾಜ ಒಡೆಯರ ವೈಭವ ಪರಾಕ್ರಮಗಳು, ನವರಾತ್ರಿಯ ಉತ್ಸವ ಹಾಗೂ ಉತ್ಸವದ ಸಂದರ್ಭದಲ್ಲಿ ಭಾಗವಹಿಸಿದ್ದ ವಿವಿಧ ದೇಶಗಳ ರಾಜಪ್ರತಿನಿಧಿಗಳ ವಿವರ ನೀಡುತ್ತಾನೆ. ನಂಜರಾಜನ ಇನ್ನೊಬ್ಬ ಆಶ್ರಿತ ಕವಿ ವೆಂಕಟೇಶನು **ಹಾಲಾಸ್ಯ ಮಾಹಾತ್ಮ್ಯ** ಎಂಬ ಕನ್ನಡ **ಚಂಪೂ** ಗ್ರಂಥವನ್ನು ಬರೆದಿರುವನು. *೨೫ ನಂಜರಾಜನು ನಂಜನಗೂಡಿನ ನಂಜುಂಡೇಶ್ವರನ ಸೇವಾರ್ಥವಾಗಿ ಗುಡಿಗೋಪುರಗಳನ್ನು ಕಟ್ಟಿಸಿ, ಅಲ್ಲಿ ೬೩ ಶಿವಭಕ್ತರ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡಿದನೆಂಬ ವಿವರಗಳನ್ನು ಇವನು ನೀಡುತ್ತಾನೆ.

ಇಮ್ಮಡಿ ಕೃಷ್ಣರಾಜ ಒಡೆಯರ ಮಾವನಾದ ಬೆಟ್ಟದ ಕೋಟೆಯ ಕತ್ತಿಗೋಪಾಲರಾಜನು (೧೭೪೦-೧೭೫೦) **ಗೋಪಾಲಸ್ವಾಮಿ ಬೆಟ್ಟದ** ಚರಿತ್ರೆಯನ್ನು ಕುರಿತು **ಕಮಲಾಚಲ ಮಾಹಾತ್ಮ್ಯ** ವನ್ನು ಗದ್ಯದಲ್ಲಿ ಬರೆದಿದ್ದಾನೆ. *೨೬ ಇದಕ್ಕೆ **ಶ್ರೀ ಗೋಪಾಲ ಭೂಪಾಲೋಕ್ತಿ ವಿಲಾಸ** ಎಂಬ ಹೆಸರೂ ಇದೆ. ಮೈಸೂರು ಆನೆಗೊಂದಿ ಅರಸು ಮನೆತನಕ್ಕೆ ಸೇರಿದ ಚೆನ್ನರಾಜಪ್ಪನು **ವೆಂಕಟೇಶ್ವರ ಶತಕ** ಎಂಬ ಭಕ್ತಿನೀತಿ ಕೃತಿಯನ್ನು ಕ್ರಿ. ಶ. ೧೭೫೦ರಲ್ಲಿ ರಚಿಸಿದರೆ, *೨೭ ಪದ್ಮರಾಜನೆಂಬ ಜೈನಕವಿಯು **ವಿಜಯಕುಮಾರನ ಕಥೆ** ಎಂಬ ಯಕ್ಷಗಾನವನ್ನು ಬರೆದನು. *೨೮ ಶಾಲ್ಯದ ಕೃಷ್ಣರಾಜನು ಮೈಸೂರು ಅರಸು ಮನೆತನದ ಒಬ್ಬ ಶ್ರೇಷ್ಠ ಕವಿಯಾಗಿದ್ದು, ಸಂಸ್ಕೃತ, ತೆಲುಗು ಮತ್ತು ಕನ್ನಡ ಈ ಮೂರು ಭಾಷೆಗಳಲ್ಲಿ ಕೃತಿರಚನೆ ಮಾಡಿ ತ್ರಿಭಾಷಾ ಪಂಡಿತನೆಂಬ ಖ್ಯಾತಿಯನ್ನು ಹೊಂದಿದ್ದನು. ಇವನು **ಧರ್ಮಗುಪ್ತ ಚರಿತೆ**ಯನ್ನು ರಚಿಸಿರುವನು. ಈತನ **ಭಕ್ತಿಮಾರ್ಗ ಸರೋವರ**ದಲ್ಲಿ ಶಿವನ ಸ್ತುತಿರೂಪವಾದ ೮೬ ಕೀರ್ತನೆಗಳಿವೆ. **ವಿವೇಕಾಭರಣ**ವು ಶ್ರೀರಂಗಪಟ್ಟಣದ ತ್ರಿಯಂಬಕ ಗುರುವಿನ ಬಳಿ ನರಸಾರ್ಯನೆಂಬುವನು ನಿಗಮಾರ್ಥ ಉಪದೇಶವನ್ನು ಪಡೆದು ಅವುಗಳನ್ನು 'ಜ್ಞಾನಸರ್ವಸ್ವ' ಎಂದು ಸಂಸ್ಕೃತದಲ್ಲಿ ರಚಿಸಿ, ಅದನ್ನು ಕನ್ನಡದಲ್ಲಿ ರಚಿಸುವಂತೆ ಶಾಲ್ಯದ ಕೃಷ್ಣರಾಜನಿಗೆ ತಿಳಿಸಲು ಅವನು ಈ ಕೃತಿಯನ್ನು 'ವಿವೇಕಾಭರಣ' ಎನ್ನುವ ಹೆಸರಿನಲ್ಲಿ ಬರೆದಿದ್ದಾನೆ. *೨೯

ಇವುಗಳಲ್ಲದೆ ದಾಸಪರಂಪರೆಯ ಗೋಪಾಲದಾಸ, ವೇಣುಗೋಪಾಲದಾಸ, ಮೋಹನದಾಸ, ಹಯವದನದಾಸ, ಹೆಳವನಕಟ್ಟೆ ಗಿರಿಯಮ್ಮ ಮೊದಲಾದ ದಾಸಪರಂಪರೆಯ ಕವಿಗಳು ಮತ್ತು ಕವಯಿತ್ರಿಯವರು ಸರಳ ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದರು. *೩೦ ಹೀಗೆ ಹದಿನೆಂಟನೆ ಶತಮಾನದಲ್ಲಿ ಆಳಿದ ಒಡೆಯರು ರಾಜಕೀಯವಾಗಿ ದುರ್ಬಲರೆನಿಸಿಕೊಂಡರೂ, ದಳವಾಯಿಗಳ ಸಹಕಾರದಿಂದ ಕವಿಗಳನ್ನು ಪ್ರೋತ್ಸಾಹಿಸಿ ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಿದರು. ಹೀಗೆ ಅಭಿವೃದ್ಧಿಗೊಂಡ

ಈ ಕಾಲದ ಬರವಣಿಗೆಗಳು ಕಾವ್ಯ ಭಾಷೆಯ ಹಿಂದಿನ ಕಠಿಣತೆಯನ್ನು ಕಳೆದುಕೊಂಡು ಸರಳೀಕರಣಗೊಂಡಿರುವುದು ಒಂದು ವಿಶೇಷ; ಚಿಕ್ಕದೇವರಾಜ ಒಡೆಯರ ಕಾಲದವರೆಗೆ ವಿರಳವಾಗಿದ್ದ ಗದ್ಯಕೃತಿಗಳು ಚಿಕ್ಕ ಸಸಿಯಾಗಿ ಹುಟ್ಟಿಕೊಂಡು ಮುಂದೆ ಈ ಚರ್ಚಿತ ಅವಧಿಯಲ್ಲಿ ಅವು ವಿಸ್ತಾರವಾಗಿ ಬೆಳೆದಿರುವುದನ್ನು ನಾವು ಕಾಣುತ್ತೇವೆ. ಅಂದರೆ ಗದ್ಯ ಪ್ರಾಧಾನ್ಯವು ಈ ಕಾಲದ ಭಾಷೆಯ ಬೆಳವಣಿಗೆಯ ಒಂದು ಮುಖ್ಯ ಲಕ್ಷಣ ಹಾಗೂ ಒಂದು ಹೊಸ ಬೆಳವಣಿಗೆ. ಮಹಾಭಾರತ, ರಾಮಾಯಣ, ಭಾಗವತಾದಿ ಕಥೆಗಳ ಆಧಾರದ ಮೇಲೆ ಉತ್ತಮ ಕಾವ್ಯಗಳು ಸೃಷ್ಟಿಯಾದರೂ, ಅವುಗಳನ್ನು ಸಂಸ್ಕೃತ ಗ್ರಂಥಗಳಿಂದ ಕನ್ನಡಕ್ಕೆ ಅನುವಾದಿಸಲಾಗಿದೆ. ಕ್ಷೇತ್ರಮಹಿಮೆ, ಯಕ್ಷಗಾನ, ಹಾಡು ಮುಂತಾದುವುಗಳನ್ನು ಕುರಿತ ಕೃತಿಗಳೂ ರಚನೆಗೊಂಡವು. ಪದ್ಯಕಾವ್ಯಗಳಾದ ಚಂಪೂ, ಷಟ್ಪದಿ, ಸಾಂಗತ್ಯ, ಲಾಲಿಪದಗಳು ಸೃಷ್ಟಿಯಾದರೂ, ಸಾಂಗತ್ಯದಲ್ಲಿಯೇ ಹೆಚ್ಚಿನ ಕೃತಿಗಳು ಬರೆಯಲ್ಪಟ್ಟಿವೆ.

ಕೊನೆಯದಾಗಿ ದೊಡ್ಡಕೃಷ್ಣರಾಜ ಒಡೆಯರ ಕಾಲದಲ್ಲಿ ರಚನೆಗೊಂಡ ಕೃತಿಗಳಲ್ಲಿ ಶ್ರೀ ವೈಷ್ಣವ ತತ್ವ ಅಭಿವ್ಯಕ್ತಗೊಂಡಿದ್ದರೆ, ಚಿಕ್ಕಕೃಷ್ಣರಾಜ ಒಡೆಯರ ಕಾಲದಲ್ಲಿ ರಚನೆಗೊಂಡ ಕೃತಿಗಳಲ್ಲಿ ವೀರಶೈವ ತತ್ವಗಳು ಅಭಿವ್ಯಕ್ತಗೊಂಡಿವೆ. ಶ್ರೀ ವೈಷ್ಣವ ಭಕ್ತಳಾದ ಚೆಲುವಾಂಬೆ ರಚಿಸಿರುವ ಕೃತಿಗಳೆಲ್ಲವೂ ಶ್ರೀವೈಷ್ಣವ ಧರ್ಮವನ್ನು ಕುರಿತವುಗಳಾದರೆ; ಕರಾಚೂರಿ ನಂಜರಾಜಯ್ಯನು ರಚಿಸಿರುವ ಕೃತಿಗಳು ವೀರಶೈವಧರ್ಮವನ್ನು ಕುರಿತವುಗಳಾಗಿವೆ. ಹೀಗೆ ವಿದ್ಯಾಪಕ್ಷಪಾತಿಗಳಾಗಿದ್ದ ಒಡೆಯರು ಆಡಳಿತದಲ್ಲಿ ಪಾರಂಪರ್ಯವಾಗಿ ನಡೆದುಕೊಂಡು ಬಂದಿದ್ದ ಮೌಲ್ಯಗಳನ್ನು ಎತ್ತಿಹಿಡಿಯುವುದರ ಜೊತೆಗೆ ಮುಕ್ತ ಮನಸ್ಸಿನಿಂದ ಎಲ್ಲಾ ಪಂಥಗಳ ಕವಿಗಳಿಗೂ ಆಶ್ರಯದಾತರಾಗಿದ್ದು ಕನ್ನಡ ಸಾಹಿತ್ಯ-ಕಲೆ- ಸಂಸ್ಕೃತಿಗಳ ಸರ್ವಾಂಗ ಅಭಿವೃದ್ಧಿಗೆ ಕಾರಣರಾದರೆ, ಕಳಲೆಯ ದಳವಾಯಿಗಳು ಸ್ವತಃ ಗ್ರಂಥಗಳನ್ನು ಬರೆದೋ ಬರೆಯಿಸಿಯೋ ಕನ್ನಡ ಸಾಹಿತ್ಯ ಬೆಳವಣಿಗೆಗೆ ವಿಶಿಷ್ಟ ಸೇವೆಯನ್ನು ಸಲ್ಲಿಸಿ, ತಮಗಿರುವ ಸಾಹಿತ್ಯ ಪಕ್ಷಪಾತವನ್ನು ಕನ್ನಡ ನಾಡು-ನುಡಿಯ ಪ್ರೇಮವನ್ನು ತೋರ್ಪಡಿಸಿದ್ದಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ರಾ. ನರಸಿಂಹಾಚಾರ್ : **ಕರ್ನಾಟಕ ಕವಿ ಚರಿತ್ರೆ**, ಸಂಪುಟ-೩, ಪು ೧೩೩-೧೩೪ ಮತ್ತು ಸಂಪುಟ-೨, ಪು. ೩೨೬.

*೨. ನಂ. ೧೮-೧೫-೩೭, ಕಡತಂ : ಮ. ಓ. ಲೈ.

*೩. ಕರ್ನಲ್ ವಿಲ್ಕ್ಸ್ : **ಮೈಸೂರು ಇತಿಹಾಸ**, ಸಂಪುಟ-೧, ಪ್ರಸ್ತಾವನೆ, ಪು.೨೩

*೪. ಕೃಷ್ಣ ಎಂ. ಹಚ್ : **ಮೈಸೂರು ಡಿಸ್ಟ್ರಿಕ್ಟ್ ಸಪ್ಲಿಮೆಂಟರಿ** ಸಂಪುಟ.೧೪, ನಗೂ ೨೯೫; ಎ, ಕ. ೩(೧), ಶ್ರೀಪ. ೬೪ ಮತ್ತು ೧೦೦.

*೫. ಎ. ಕ. ೩(೧) ಶ್ರೀಪ. ೬೪.

*೬. ಮೈಸೂರು ಓರಿಯಂಟಲ್ ಲೈಬ್ರರಿ, ಕನ್ನಡ ಕ್ರಮ ಸಂಖ್ಯೆ ನಂ.೧೯, ಮೈಸೂರು ೧೯೩೨. (ಈ ಕೃತಿಯು ೨ ಸಂಪುಟಗಳಲ್ಲಿ ಪ್ರಕಟಗೊಂಡಿದ).

*೭. ವೀರರಾಜ : **ಸಕಲವೈದ್ಯ ಸಂಹಿತಾ ಸಾರಾರ್ಣವ**, ಸಂ. ೧, ಪು. ೪

*೮. ಅದೇ ; ಪುಟ. ೪ ಮತ್ತು ೧೦, ಪದಸಂಖ್ಯೆ ೧೬

*೯. ದೇವಚಂದ್ರ : **ರಾಜಾವಳಿ ಕಥಾಸಾರ**, ಪು. ೨೮೮, (ಸಂ) ಬಿ. ಎಸ್. ಸಣ್ಣಯ್ಯ, ಕ.ಅ. ಸಂ. ಮೈಸೂರು, ೧೯೮೮

*೧೦. ಚೆಲುವಾಂಬೆ: **ವರನಂದೀ-ಕಲ್ಯಾಣ**, ಸಂಧಿ-೧, ಪದಸಂಖ್ಯೆ ೩, (ಸಂ) ಎಂ. ಪಿ. ಮಂಜಪ್ಪಶೆಟ್ಟಿ, ಕ.ಅ.ಸಂ. ಮೈಸೂರು, ೧೯೮೪

*೧೧. ಅದೇ. ಪ. ಸಂ. ೪

*೧೨. ಎಂ. ಎಸ್. ನಂ. ೧೮-೩-೬-ಪಿ. ಎಲ್; ಕ. ಕ. ಚೆ(೩) ಪು. ೨೫, (ಸಂ) ಎಂ. ಪಿ. ಮಂಜಪ್ಪಶೆಟ್ಟಿ, ಕ. ಅ. ಸಂ. ಮೈಸೂರು

*೧೩. **ವೆಂಕಟಾಚಲ ಮಾಹತ್ಮ್ಯಂ ಲಾಲಿಪದ** - ಪದಸಂಖ್ಯೆ ೪

*೧೪. ಸಿ. ಹಯವದನರಾವ್ : **ಮೈಸೂರು ಇತಿಹಾಸ**, ಸಂ-೨, ಪು.೬೦೫; ಶಿವಗೀತೆ : ೧, ಪ. ೧೩; ಶಿವಭಕ್ತವಿಲಾಸ ದರ್ಪಣ, ೧, ಪು.೧೨

*೧೫. ನೀಲಕಂಠ-ಕವಿ : **ನಂಜರಾಜಯಸಸ್ಸಮೋಲ್ಲಾಸ ಚಂಪು**, ಸಂಧಿ-೬, ಪ. ೮೯;

*೧೬. ದೇವಚಂದ್ರ : **ರಾಜಾವಳಿ ಕಥಾಸಾರ**, ಪು. ೨೮೮

*೧೭. ಹಯವದನರಾವ್ ಸಿ. ಪೂರ್ವೋಕ್ತ, ಪುಟ. ೬೦೭

*೧೮. ಅದೇ, ಪು. ೬೦೯

*೧೯. ಅದೇ, ಪು. ೬೦೬, ೬೦೮, ೬೦೯; **ಕ. ಕ. ಚ ಸಂಪುಟ-೩**, ಪುಟ. ೪೨ - ೬೭

*೨೦. ಎಂ.ಎಸ್.ನಂ. ಎ. ೧೧೫-ಮೈ. ಓ.ಲೈಬ್ರರಿ; **ಕ. ಕ. ಚ.** ಸಂ. ೩, ಪು. ೧೨-೧೪

*೨೧. ಅದೇ ನಂ. ೧೪೭

*೨೨. **ಕ.ಕ.ಚ.** ಭಾಗ-೩, ಪು.೬-೮ ಮತ್ತು ೮-೯; ಎಂ ಎಸ್. ನಂ. ಜಿ.೬೯ ಮೈ. ಓ. ಲೈ.

*೨೩. ಅದೇ; ಪು. ೩೭, ೩೮

*೨೪. ಎಂ. ಎಸ್. ನಂ. ಬಿ. ೨೮೫. ಮೈ. ಓ. ಲೈ.

*೨೫. ಕ.ಕ.ಚ. ಸಂ. ೩, ಪು. ೫೦-೫೩

*೨೬. ಎಂ. ಎಸ್. ನಂ. ೨೭೯, ಮೈ. ಓ. ಲೈ.

*೨೭. ಅದೇ ; ನಂ. ಬಿ. ೧೬೮

*೨೮. ಅದೇ; ನಂ. ಬಿ. ೨೫೭

*೨೯. ಎಂ. ನಂಜಮ್ಮಣ್ಣಿ : **ಅರಸು ಜನಾಂಗ ಒಂದು ಅಧ್ಯಯನ**, ಪುಟ. ೨೫೦

*೩೦. ಕ.ಕ.ಚ. ಸಂ-೩, ಪು. ೫೮, ೫೯, ೬೧ ಮತ್ತು ೬೯.

ಡಾ॥ ಬಿ. ವಿ. ಸುಧಾಮಣಿ *

# ಮೈಸೂರು ಸಂಸ್ಥಾನದ ಆಡಳಿತದಲ್ಲಿ ನಜ಼ರಾನದ ಪ್ರವೇಶ

ಮೈಸೂರು ಜಿಲ್ಲೆ ನಂಜನಗೂಡು ತಾಲೂಕಿಗೆ ಸೇರಿರುವ 'ಕಳಲೆ' ಇಂದು ಒಂದು ಕುಗ್ರಾಮ. ಹದಿನೈದನೇ ಶತಮಾನದಿಂದ ಹದಿನೆಂಟನೇ ಶತಮಾನದ ಮಧ್ಯದವರೆಗೆ ಕಳಲೆಮನೆತನಕ್ಕೆ ಸೇರಿದ ವ್ಯಕ್ತಿಗಳು ಸುಮಾರು ೪೦ ಗ್ರಾಮಗಳನ್ನೊಳಗೊಂಡ 'ಕಳಲೆ ಸಂಸ್ಥಾನ'ದ ಆಳ್ವಿಕೆ ನಡೆಸಿದರು. ಅಂತೆಯೇ ಇವರು ಮೈಸೂರಿನ ಒಡೆಯರ ಆಳ್ವಿಕೆಯಲ್ಲಿ ದಳವಾಯಿಗಳಾಗಿ ರಾಜಒಡೆಯರ ಕಾಲದಿಂದಲೂ ಸೇವೆಸಲ್ಲಿಸಿದರು. ಈ ಮನೆತನದ ದಳವಾಯಿಗಳಲ್ಲಿ ಹದಿನೆಂಟನೇ ಶತಮಾನದ ಪೂರ್ವಾರ್ಧದಲ್ಲಿ (೧೭೩೯-೧೭೫೯) ಸರ್ವಾಧಿಕಾರಿ ಹಾಗೂ ದಳವಾಯಿಯಾಗಿ ಸೇವೆಸಲ್ಲಿಸಿದ ಕರಾಚೂರಿ ನಂಜರಾಜಯ್ಯನ ಕಾಲ ಮಹತ್ವವಾದುದು. ಅಂದು ಸಿಂಹಾಸನಾಧೀಶರಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರು ಅಪ್ರಾಪ್ತ ವಯಸ್ಕರಾಗಿದ್ದ ಹಿನ್ನೆಲೆಯಲ್ಲಿ ಸಂಸ್ಥಾನದ ಆಡಳಿತ ಸೂತ್ರ ದಳವಾಯಿ ನಂಜರಾಜಯ್ಯನ ಅಧೀನಕ್ಕೆ ಬಂದಿತು. ಪ್ರಸ್ತುತ ಲೇಖನದಲ್ಲಿ ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು ಸಂಸ್ಥಾನದ **ಆರ್ಥಿಕ ಆಡಳಿತದಲ್ಲಿ 'ನಜ಼ರಾನ'** ಎಂಬ ವಿಶಿಷ್ಟ ರೀತಿಯ ಆದಾಯದ ಮೂಲ ಪ್ರವೇಶವಾದುದರ ಬಗೆಗೆ ಗಮನ ಹರಿಸಲಾಗಿದೆ.

'ನಜ಼ರಾನ' ಮುಸಲ್ಮಾನರ ಆಡಳಿತದಲ್ಲಿ ಸರ್ವೇ ಸಾಮಾನ್ಯವಾಗಿತ್ತು, ಆದರೆ ಕ್ರಿ. ಶ. ೧೭೫೯ರಲ್ಲಿ ಮೈಸೂರು ಸಂಸ್ಥಾನದ ಆಡಳಿತದಲ್ಲಿ ಆವರೆವಿಗೂ ಇಲ್ಲದಿದ್ದ ಈ ವಿಶಿಷ್ಟ ಪದ್ಧತಿಯನ್ನು ನಂಜರಾಜಯ್ಯ ಪ್ರಥಮ ಬಾರಿಗೆ ಜಾರಿಗೆ ತಂದುದಕ್ಕೆ ಕಾರಣವೇನು? ಎನ್ನುವಾಗ ಮೊದಲಿಗೆ 'ನಜರಾನ' ಶಬ್ದ ಮತ್ತು ಪದ್ಧತಿಯ ಕಡೆಗೆ ನಮ್ಮ ಗಮನ ಹೊರಳುತ್ತದೆ. 'ನಜ಼ರ್' ಎಂದರೆ ದೃಷ್ಟಿ, ನೋಡುವುದು 'ಆನ' ಬರುವುದು, ನೀಡುವುದು, ಕೊಡುವುದು ಎಂದಾಗುತ್ತದೆ. ಅಂದರೆ ನೋಡಿದುದಕ್ಕೆ ನೀಡುವುದು ಎಂದರ್ಥೈಸಬಹುದು. ಆಗ ಯಾರನ್ನು ನೋಡಿದುದಕ್ಕೆ? ಏನನ್ನು ನೀಡುವುದು? ಎಷ್ಟು ಪ್ರಮಾಣದಲ್ಲಿ? ಇತ್ಯಾದಿ ಪ್ರಶ್ನೆಗಳು ಎದುರಾಗುತ್ತವೆ.

ಮುಸಲ್ಮಾನರ ಆಡಳಿತ ವ್ಯವಸ್ಥೆಯಲ್ಲಿ ಅವರ ಬಾದಷಹನನ್ನು ನೋಡಲು ಹೋದವರು ತಮ್ಮ ತಮ್ಮ ಶಕ್ತ್ಯಾನುಸಾರ ತಮಗಿಷ್ಟ ಬಂದ ಕಾಣಿಕೆಯನ್ನು ಆತನಿಗೆ ನೀಡಿ ನಂತರ ತಾವು ಬಂದಿದ್ದ ಉದ್ದೇಶವನ್ನು ತಿಳಿಸುವ ಸಂಪ್ರದಾಯವಿತ್ತು. ನಜ಼ರಾನ ಐಚ್ಛಿಕವಾಗಿದ್ದಿತಾದರೂ ಬಾದಷಹನನ್ನು ನೋಡಲು ಬರಿಕೈಯಲ್ಲಿ ಹೋಗುವ ಪದ್ಧತಿ ಇರಲಿಲ್ಲವೆಂದು ತೋರುತ್ತದೆ.

ಹಿಂದೂ ರಾಜ್ಯಗಳಲ್ಲಿಯೂ ರಾಜನನ್ನು ನೋಡುವ ಸಂದರ್ಭದಲ್ಲಿ ತಮ್ಮ ಶಕ್ತಿಗೆ ಅನುಗುಣವಾಗಿ ತಮ್ಮಿಚ್ಛೆ ಪ್ರಕಾರ ರಾಜನಿಗೆ ಏನನ್ನಾದರೂ ಕಾಣಿಕೆ ನೀಡುತ್ತಿದ್ದರೆಂಬುದು ಸಮಕಾಲೀನ ಸಾಹಿತ್ಯಾಧಾರಗಳಿಂದ ತಿಳಿದುಬರುತ್ತದೆ. ರಾಜರು, ಗರ್ಭಿಣಿಯರು, ಮಕ್ಕಳು, ರೋಗಿಗಳನ್ನು ನೋಡಲು ಬರಿಕೈಯಲ್ಲಿ ಹೋಗಬಾರದೆಂಬ ಸಂಪ್ರದಾಯ ಹಳೇ ಮೈಸೂರು ಸಂಸ್ಥಾನದ ಜನಪದರಲ್ಲಿ ಇಂದಿಗೂ ಉಳಿದಿರುವುದು ಗಮನಾರ್ಹ. ದಳವಾಯಿ ನಂಜರಾಜನ ಆಶ್ರಿತ ಕವಿ ನೂರೊಂದ ತನ್ನ 'ಸೌಂದರಕಾವ್ಯ' ಕೃತಿಯಲ್ಲಿ ಕ್ರಿ.ಶ. ೧೭೪೦ರಲ್ಲಿ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ಏರ್ಪಡಿಸಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ ಒಡ್ಡೋಲಗಕ್ಕೆ ಆಹ್ವಾನಿತರಾಗಿ ಬಂದಿದ್ದ ಎಲ್ಲ ರಾಜರುಗಳು, ಅರಸರು, ಗುರಿಕಾರರು, ಸಾಮಂತರು, ಒಡೆಯರಿಗೆ ತಾವು ತಂದಿದ್ದ ಕಾಣಿಕೆಗಳನ್ನು ಅರ್ಪಿಸಿದರು ಎಂಬುದಾಗಿ ಉಲ್ಲೇಖಿಸಿದ್ದಾನೆ. *೧

ದಳವಾಯಿ ನಂಜರಾಜನ ಸಂದರ್ಭದಲ್ಲಿ 'ನಜ಼ರಾನಾ'ವನ್ನೂ ಕಡ್ಡಾಯವಾಗಿ ಹಾಗೂ ನಿರ್ಧರಿಸಲ್ಪಟ್ಟ ಪ್ರಮಾಣದಲ್ಲಿ ಪಡೆದಿದ್ದುದು ನಮ್ಮ ಗಮನ ಸೆಳೆಯುತ್ತದೆ. ನಂಜರಾಜ ಈ ರೀತಿ ನಡೆದುಕೊಳ್ಳುವ ಅಗತ್ಯವೇನಿತ್ತೆಂದು ಪರಿಶೀಲಿಸ ಹೊರಟಾಗ ದೇಶದ ಸಮಕಾಲೀನ ರಾಜಕೀಯ ಪರಿಸ್ಥಿತಿ

* 'ಕಮಲ ಜ್ಯೋತಿ', ನಂ. ೧೦೦, ಎಂ. ಐ. ಜಿ - ೨, ಹುಡ್ಕೋ ೩ನೇ ಹಂತ, ಹೆಬ್ಬಾಳ್, ಮೈಸೂರು - ೫೭೦ ೦೧೭.

ಹಾಗೂ ಮೈಸೂರಿನ ಆರ್ಥಿಕ ಒತ್ತಡ ಇವುಗಳ ಕಡೆಗೆ ಗಮನ ಹರಿಯುತ್ತದೆ. ಹದಿನೆಂಟನೇ ಶತಮಾನದ ಪೂರ್ವಾರ್ಧದಲ್ಲಿ ಮೊಗಲ್ ಚಕ್ರವರ್ತಿ ಔರಂಗಜೇಬನ ಮರಣದಿಂದಾಗಿ ಭಾರತದಲ್ಲಿದ್ದ ಕೇಂದ್ರೀಕೃತ ಆಡಳಿತ ವ್ಯವಸ್ಥೆ ಕುಸಿದಿತ್ತು. ದಖನ್ನಿನಲ್ಲಿ ಹೈದರಾಬಾದಿನ ನಿಜಾಮ, ಆರ್ಕಾಟಿನ ನವಾಬ, ಮರಾಠರು ಸ್ವೇಚ್ಛೆಯಿಂದಿದ್ದರು. ಇವರೆಲ್ಲರ ವಿಸ್ತರಣಾ ನೀತಿಗೆ ಮೈಸೂರು ಗುರಿಯಾಗಿತ್ತು. ಇದರ ಜೊತೆಗೆ ಐರೋಪ್ಯರಾದ ಬ್ರಿಟಿಷರು ಮತ್ತು ಫ್ರೆಂಚರು ಭಾರತದಲ್ಲಿ ರಾಜಕೀಯ ಸಾರ್ವಭೌಮಾಧಿಕಾರ ಸ್ಥಾಪಿಸುವ ಸಲುವಾಗಿ ದೇಶೀಯ ಆಂತರಿಕ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡತೊಡಗಿದರು. ಈ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ವಾಸ್ತವ ಅಧಿಕಾರ ನಿರ್ವಹಿಸಿದ್ದ ದಳವಾಯಿ ನಂಜರಾಜ ಸಂಸ್ಥಾನದ ವಿಸ್ತರಣೆಯ ಉದ್ದೇಶದಿಂದ ಹಲವಾರು ದಿಗ್ವಿಜಯಗಳನ್ನು ಕೈಗೊಂಡು [ಕೈಲಾಂಛ, ಧಾರಾನಗರ, ದೇವನಹಳ್ಳಿ ವಿಜಯ, ತಿರುಚಿನಾಪಳ್ಳಿ ಮುತ್ತಿಗೆ], ಅಂದಿನ ರಾಜಕೀಯ ಚದುರಂಗದಾಟದಲ್ಲಿ ತಾನೂ ಸಕ್ರಿಯ ಪಾತ್ರವಹಿಸತೊಡಗಿದನು. ಇದರಿಂದಾಗಿ ಮೈಸೂರು ಸಂಸ್ಥಾನದ ಖಜಾನೆಗೆ ಸಾಕಷ್ಟು ಹೊರೆಬಿದ್ದಿತು. ಇದನ್ನು ಸರಿದೂಗಿಸಲು ಬಹುಶಃ ನಂಜರಾಜ ನಜ್ಜರಾನಾವನ್ನು ಕಡ್ಡಾಯಗೊಳಿಸಿರಬೇಕು. ೧೭೫೭ರಲ್ಲಿ ಮರಾಠರು ಮೈಸೂರಿನ ಮೇಲೆ ಧಾಳಿ ಮಾಡಿದಾಗ ಮೈಸೂರು ಸಂಸ್ಥಾನ ೩೨ ಲಕ್ಷರೂಗಳನ್ನು ಮರಾಠರಿಗೆ ಪರಿಹಾರಾತ್ಮಕವಾಗಿ ನೀಡಬೇಕಾಯಿತು. *೨ ಇಷ್ಟೊಂದು ಬೃಹತ್ ಪ್ರಮಾಣದ ಮೊತ್ತ ಭರಿಸಲು ಅಂದು ಸಂಸ್ಥಾನದ ಖಜಾನೆಗೆ ಶಕ್ತಿ ಇರಲಿಲ್ಲವಾದ ಕಾರಣ ರಾಜ್ಯದ ದೇವಾಲಯಗಳ ಹಾಗೂ ಅರಮನೆಯವರ ಒಡವೆ ಮತ್ತು ಐಶ್ವರ್ಯಗಳನ್ನು ಸೇರಿಸಿದರೂ ಅಷ್ಟೊಂದು ಹಣ ಸಂಗ್ರಹವಾಗಲಿಲ್ಲ. ಅನ್ಯಮಾರ್ಗವಿಲ್ಲದೆ ನಂಜರಾಜ ಮರಾಠರಿಗೆ ಉಳಿದ ಬಾಕಿಗಾಗಿ ಹತ್ತು ತಾಲೂಕುಗಳನ್ನು ಒತ್ತೆ ಇಡಬೇಕಾಯಿತು. ಆದರೆ ಮರಾಠರ ಸೈನ್ಯ ರಾಜ್ಯದಲ್ಲಿದ್ದಷ್ಟು ಕಾಲ ರಾಜ್ಯಕ್ಕೆ ಅಪಾಯ - ನಷ್ಟ ತಪ್ಪಿದ್ದಲ್ಲವೆಂದು ಭಾವಿಸಿ ಆದಷ್ಟು ಬೇಗ ಅವರ ಬಾಕಿಯನ್ನು ಕೊಟ್ಟು ಅವರನ್ನು ಸಂಸ್ಥಾನದಿಂದ ಹೊರಹಾಕುವ ಯೋಜನೆಯನ್ನು ಮಾಡಿದ್ದರಲ್ಲಿ ನಂಜರಾಜನ ದೂರಾಲೋಚನೆಯ ಅರಿವಾಗುತ್ತದೆ. ನಂಜರಾಜ ಈ ಹೆಚ್ಚುವರಿ ಹಣವನ್ನು ಪ್ರಜೆಗಳಿಂದ ವಸೂಲಿ ಮಾಡಲು ಯೋಚಿಸಿ ಅದಕ್ಕೆ ನಜರಾನ ಎಂದು ಕರೆದನು. ನಜ್ಜರಾನಾವನ್ನು ವಸೂಲಿ ಮಾಡಲು ಸ್ವತಃ ತಾನು ಹೋಗದೆ, ಅಂದು ಮೈಸೂರು ಸಂಸ್ಥಾನದ ರಾಜಕೀಯದಲ್ಲಿ ವಿಶೇಷವಾದ ಮೆಚ್ಚುಗೆಗೆ ಪಾತ್ರನಾಗಿದ್ದ ಹೈದರಾಲಿಯನ್ನು ಈ ಕಾಯಕಕ್ಕೆ ನೇಮಿಸಿದ್ದುದರಲ್ಲೂ ನಂಜರಾಜನ ಬುದ್ಧಿವಂತಿಕೆ ಎದ್ದು ಕಾಣುತ್ತದೆ. ಮುಸಲ್ಮಾನರಲ್ಲಿ ನಜ್ಜರಾನ ಪಡೆಯುವುದು ಸಂಪ್ರದಾಯವೇ ಆಗಿದ್ದುದರಿಂದ ಹೈದರನನ್ನು ಆ ಕಾರ್ಯಕ್ಕೆ ಕಳುಹಿಸುವುದು ಸಮಂಜಸ; ಇದರಿಂದ ಜನ ತನ್ನನ್ನು ಅಪಾರ್ಥ ಮಾಡಿಕೊಳ್ಳುವುದಿಲ್ಲವೆಂದು ನಂಜರಾಜ ಯೋಚಿಸಿದನು. ಈ ಅವಧಿಯಲ್ಲಿ ಸಂಸ್ಥಾನದ ಐಶ್ವರ್ಯವಂತ ಪ್ರಜೆಗಳೂ ಹಾಗೂ ಆಡಳಿತದಲ್ಲಿ ಸೇವೆ ಸಲ್ಲಿಸುತ್ತಿದ್ದ ಎಲ್ಲ ಅಧಿಕಾರಿಗಳೂ ಅವರವರ ವೇತನ ಹಾಗೂ ಅಂತಸ್ತಿಗೆ ಅನುಗುಣವಾಗಿ ನಜ್ಜರಾನಾದ ಲೆಖ್ಖಕ್ಕೆ, ಹಣ ಪಾವತಿ ಮಾಡಬೇಕಾಗಿತ್ತು. *೩ ಇದು ಇಲ್ಲಿ ಕಡ್ಡಾಯವಾಗಿತ್ತು ಎಂಬ ಅಂಶ ಗಮನಾರ್ಹ. ಮೊಗಲರಲ್ಲಿದ್ದ ನಜರಾನಾವಾಗಲೀ, ಮೈಸೂರು ಸಂಸ್ಥಾನದಲ್ಲಿದ್ದ ಕಾಣಿಕೆ ನೀಡುವ ಪದ್ಧತಿಯಾಗಲೀ ಕಡ್ಡಾಯವಾಗಿರಲಿಲ್ಲ. ಆದರೆ ಸರ್ಕಾರದ ಉಳಿವಿಗಾಗಿ ನಂಜರಾಜ ನಜ್ಜರಾನಾವನ್ನು ಕಡ್ಡಾಯಗೊಳಿಸಿದ್ದನು. ಪ್ರಜೆಗಳು ಈತನ ಸದಾಲೋಚನೆಯನ್ನು ಅರ್ಥಮಾಡಿಕೊಂಡಿದ್ದರಿಂದಲೋ ಅಥವಾ ಮುಸಲ್ಮಾನನಾದ ಹೈದರನೇ ಅದರ ವಸೂಲಾತಿಗೆ ಹೋದದರಿಂದಲೋ ಏನೋ ಒಟ್ಟಾರೆ ನಜ್ಜರಾನ ನೀಡಲು ಶ್ರೀಮಂತಪ್ರಜೆಗಳಾಗಲೀ, ಅಧಿಕಾರಿಗಳಾಗಲೀ ವಿರೋಧ ವ್ಯಕ್ತಪಡಿಸಿದಂತೆ ಕಂಡುಬರುವುದಿಲ್ಲ. ಅಂದಿನ ಆರ್ಥಿಕ ಪರಿಸ್ಥಿತಿಯನ್ನು ಸರಿದೂಗಿಸಲು ನಂಜರಾಜ ಈ ಕ್ರಮ ಕೈಗೊಂಡಿದ್ದರೂ ಮುಂದೆ ಹೈದರ್ ಹಾಗೂ ಟಿಪ್ಪುಸುಲ್ತಾನನ ಕಾಲದಲ್ಲಿ ಇದು ವ್ಯಾಪಕವಾಗಿ ಮುಂದುವರೆಯಿತು. ೧೭೯೯ರಲ್ಲಿ ಟಿಪ್ಪುವಿನ ಮರಣಾನಂತರ ಪುನಃ ಮೈಸೂರು ಸಂಸ್ಥಾನದ ಆಡಳಿತ ನಿರ್ವಹಣೆ ಒಡೆಯರ ಮನೆತನದವರಿಗೇ ದೊರಕಿದ ನಂತರವೂ, ಕೊನೆಯ ಒಡೆಯರ ಕಾಲದಲ್ಲೂ ನಜ್ಜರ್ ಒಪ್ಪಿಸುವುದು ಎಂಬ ಸಂಪ್ರದಾಯ ಉಳಿದುಕೊಂಡು ಬಂದಿದ್ದುದು ತಿಳಿದುಬಂದಿದೆ.

### ಆಧಾರ ಸೂಚಿ


*೧. ನೂರೊಂದ., ಸೌಂದರಕಾವ್ಯ, ಹಸ್ತಪ್ರತಿ, ಕೆ. ಬಿ. ೨೮೫, (೧೭೪೦) ಸಂಧಿ - ೨, ಪದ್ಯ : ೧೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
*೨. - ಕನ್ನಡ ಹಸ್ತಪ್ರತಿ, ಕೆ. ಬಿ. ೫೩೦, ಪುಟ - ೧೯, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
*೩. Krishna Rao, P., **The History of Mysore**, Bombay, 1868, P. 46.

ಡಾ|| ಲೀಲಾ ಬಿ. *

# ಪ್ಲೇಗ್ ಉಪದ್ರವ; ಇಂಡಿಯಾದ ಮಾರಕ ರೋಗ (೧೮೯೬-೧೯೦೦) ಕರ್ನಾಟಕಕ್ಕೆ ಸಂಬಂಧ - ಒಂದು ವಿಶ್ಲೇಷಣೆ

ಪ್ಲೇಗ್‌ಮಾರಿ, ಆಳುವವರು ಮತ್ತು ಅವರ ಪ್ರಜೆಗಳಲ್ಲಿ ಅತ್ಯಂತ ತಪ್ಪು ತಿಳುವಳಿಕೆಗೆ ದಾರಿಮಾಡಿಕೊಟ್ಟಿತು.''*೧ ಧಾರವಾಡದಲ್ಲಿ ಪುರೋಹಿತ ಹಯಾಗ್ರೀವಾಚಾರ್ಯರ ಆತ್ಮಹತ್ಯೆ, ಪೂನಾದಲ್ಲಿ ಪ್ಲೇಗ್ ಅಧಿಕಾರಿ ವಾಲ್ಟರ್‌ಚಾರ್ಲ್ಸ್‌ರ್ಯಾಂಡ್ ಸಾಹೇಬರ ಕೊಲೆ ಮತ್ತು ಶ್ರೀರಂಗಪಟ್ಟಣದ ದೊಂಬಿ, ಇವೆಲ್ಲಾ ಸುಮಾರು ಒಂದು ಶತಮಾನದ ಹಿಂದೆ ಅಂದರೆ ೧೮೯೬-೯೭ರ ಅವಧಿಯಲ್ಲಿ ನಡೆದ ಅತ್ಯಂತ ದುರಂತದ ವಿಷಯ. ಪ್ಲೇಗ್ ಮಾರಕದಿಂದ ಜನಸಾಮಾನ್ಯರ ಮೇಲೆ ಉಂಟಾದ ಪರಿಣಾಮ ಮತ್ತು ಅದರಿಂದ ಉಂಟಾದ ನಷ್ಟಗಳು ಅಪಾರ.

ಪ್ಲೇಗ್ ಮಾರಕ, ಮುಂಬಯಿಯಲ್ಲಿ ಶುರುವಾದದ್ದು ಸುಮಾರು ೧೮೯೬*೪ ರಲ್ಲಿ ಮತ್ತು ಕರ್ನಾಟಕ ಅಂದರೆ ಹಳೇ ಮೈಸೂರು ಮತ್ತು ಮುಂಬೈ ಪ್ರಾಂತದಲ್ಲಿದ್ದ ಧಾರವಾಡ, ಬೆಳಗಾವಿ ಮತ್ತು ಹುಬ್ಬಳ್ಳಿ ಪ್ರದೇಶಕ್ಕೆ ಹಬ್ಬಿದ್ದು ಅಕ್ಟೋಬರ್ ೧೮೯೭*೫ ರಲ್ಲಿ. ಬ್ರಿಟಿಷ್ ಅಧಿಕಾರಿಗಳು ಇದನ್ನು ಹತೋಟಿಗೆ ತರಲು ಪ್ರಯತ್ನಿಸಿದ್ದಾಗ್ಯೂ ಈ ರೋಗದ ಹಬ್ಬುವಿಕೆ ಅತ್ಯಂತ ಶೀಘ್ರವಾಗಿ, ಉಗ್ರವಾಗಿ ಪರಿಣಮಿಸಿದ್ದರಿಂದ ಇದರ ಹತೋಟಿ ತಾತ್ಕಾಲಿಕವಾಗಿ ಮಾತ್ರ ಸಾಧ್ಯವಾಯಿತು. ಆದರೆ ಇದು ಬ್ರಿಟಿಷರ ಆಳ್ವಿಕೆಯಲ್ಲಿ ನಡೆದ ಅತ್ಯಂತ ಭೀಕರ ಉಪದ್ರವ. ಇದರಿಂದಾದ ಹಾನಿ ಅಪಾರ.

ಪ್ಲೇಗ್ ಉಪದ್ರವದ ತಿಳುವಳಿಕೆ ಮತ್ತು ರೋಗದ ಹರಡುವಿಕೆ ಇವುಗಳು ಸಾಮಾನ್ಯ ಜನತೆಯ ಅರಿವಿಗೆ ಬಂದಿರಲಿಲ್ಲ. ಮತ್ತು ಪ್ಲೇಗ್ ನಿವಾರಕ ಔಷಧಿಯ ಬಳಕೆಯು ಗೊತ್ತಿರಲಿಲ್ಲ. ಆಸ್ಪತ್ರೆ, ಆಸ್ಪತ್ರೆಯ ಔಷಧವನ್ನು ಸೇವಿಸುವದು ಇವೆಲ್ಲಾ ಕೇವಲ ಹಲವರಿಗೆ ಮೀಸಲಾಗಿದ್ದು ಎಂಬ ಭಾವನೆಯಿಂದ, ಜನ ಸಾಮಾನ್ಯರಿಗೆ ಇವೆಲ್ಲದರ ತಿಳುವಳಿಕೆ ಇರಲಿಲ್ಲ. ೧೯ನೇ ಶತಮಾನದ ಕೊನೆಗೆ ನಾವು ಆಂಗ್ಲರ ಔಷಧಿ ಪದ್ಧತಿಯ ಅನುಕರಣೆ ಮತ್ತು ಉಪಯೋಗ ಇವುಗಳನ್ನು ಕಾಣುತ್ತೇವೆ. ಈಗಾಗಲೆ ಈ ವಿಷಯಕ್ಕೆ ಸಂಬಂಧಿಸಿದಂತೆ ಆಂಗ್ಲ ಇತಿಹಾಸ ತಜ್ಞರಾದ ಡೇವಿಡ್ ಆರ್ನಾಡ್ ಕ್ಯಾಟನಾಟ್ ಇತರರು ಸಾಕಷ್ಟು ಬೆಳಕನ್ನು ಚೆಲ್ಲಿರುತ್ತಾರೆ. ಆದರೆ ಇವರೆಲ್ಲಾ ಮಾಡಿರುವ ಕೆಲಸ ಕರ್ನಾಟಕದ ಹೊರಗಿನ ಮುಂಬಯಿ, ಮತ್ತಿತರ ಪ್ರದೇಶಕ್ಕೆ ಸಂಬಂಧಿಸಿದ್ದು. ಈ ಉಪದ್ರವದಿಂದ ಕರ್ನಾಟಕದ ಸಾಮಾನ್ಯ ಮನುಷ್ಯನು ನಿತ್ಯಜೀವನದಲ್ಲಿ ಎದುರಿಸಿದ್ದ ಕಷ್ಟ ನಷ್ಟಗಳು, ಎದ್ದ ದಂಗೆ, ಬ್ರಿಟಿಷ್ ಸರ್ಕಾರದ ಪ್ಲೇಗ್ ಕಾರ್ಯಕ್ರಮದ ವೈಫಲ್ಯಗಳನ್ನು ಸದ್ಯ ವಿವರಿಸಿದೆ.

### *ಪ್ಲೇಗಿನ ಇತಿಹಾಸ*

ಪ್ಲೇಗ್ ಮತ್ತು ಇಲಿಯ ನಂಟು ಪ್ರಾಚೀನಕಾಲದಿಂದ ಬಂದದ್ದು. ಇಲಿಯಿಂದ ಪ್ಲೇಗ್ ಕೀಟಾಣು ಮನುಷ್ಯನಲ್ಲಿ ಸೇರಿದಾಗ ಜ್ವರ ಮತ್ತು ಗಡ್ಡೆ ಬಂದು ಚಿಕಿತ್ಸೆ ಸಕಾಲದಲ್ಲಿ ದೊರೆಯದಿದ್ದರೆ ಸಾವು ನಿಶ್ಚಿತ. ಭಾರತದಲ್ಲಿ ಮೊಟ್ಟಮೊದಲನೆ ಪ್ಲೇಗ್ ಉಪದ್ರವ ತೋರಿದ್ದು ಆಗ್ರಾದಲ್ಲಿ (೧೬೧೨). ಇದು ಆಗ್ರಾದಲ್ಲಿ ಕಂಡ ಬಗ್ಗೆ ಚಕ್ರವರ್ತಿ ಜಹಾಂಗೀರ್ ತನ್ನ ದಿನಚರಿಯಲ್ಲಿ ಹೇಳಿದ್ದಾನೆ. ಅನಂತರ (೧೮೧೨-೨೧)ಗುಜರಾತಿನಲ್ಲಿ, (೧೮೨೩) ಕುಮಾಮ್ ಮತ್ತು (೧೮೩೬) ರಾಜಪುಟಾಣದಲ್ಲಿ ಪ್ಲೇಗ್ ಕಂಡ ಬಗ್ಗೆ ದಾಖಲೆ ಉಂಟು. ೧೮೭೧ರಲ್ಲಿ ನೈರುತ್ಯ ಚೀನಾದ ಭಾಗದಲ್ಲಿ ಗೋಚರಿಸಿದ ಪ್ಲೇಗ್, ವ್ಯಾಪಾರಿ ಮಾರ್ಗಗಳ ಮೂಲಕ ಸಾಗಿ ಬಂದು ೧೮೯೬ರಲ್ಲಿ ಮುಂಬಯಿಯಲ್ಲೂ, ೧೮೯೭ರಲ್ಲಿ ಧಾರವಾಡದಲ್ಲೂ ಮತ್ತು ೧೮೯೮ರಲ್ಲಿ ಮೈಸೂರು ದೇಶಕ್ಕೂ ಹಬ್ಬಿತು. *೨ ಭಗವತಿ ಪುರಾಣದಲ್ಲೂ ಪ್ಲೇಗಿನ ಉಲ್ಲೇಖನವಿಂತಿದೆ (ಕ್ರಿ. ಶ. ೫೦೦-೧೧೯೪): ''ಇಲಿಗಳ ಬೀಳುವಿಕೆಯ ತಕ್ಷಣ ಎಚ್ಚರಿಕೆ ವಹಿಸಬೇಕು ಮತ್ತು ಶುದ್ಧೀಕರಿಸಿ, ಗುಡಿಸಿ ಸುಣ್ಣ ತೊಡಿಸಬೇಕು''. ಮನುಷ್ಯನಿಂದ ಮತ್ತು ಅವನು ತೊಡುವ ಬಟ್ಟೆ ಸೋಂಕಿನಿಂದ ಪ್ಲೇಗ್ ಬರುವದೆಂದು ೧೯೦೮ರವರೆಗೂ ನಂಬಿಕೆಯಲ್ಲಿತ್ತು. ಆದರೆ ೧೯೦೮ರಲ್ಲಿ ಇಲಿಗಳಿಂದ ಪ್ಲೇಗ್ ಹರಡುವುದೆಂದು ಖಚಿತವಾಯ್ತು. *೩

* ಫ್ಲಾಟ್ ನಂ. ೪೬, ಶ್ಯಾಮಲ, ೧ನೇ ಅಂತಸ್ತು, ಮಾತುಂಗ, ಮುಂಬಯಿ - ೪೬೦ ೦೧೯

ನಿರ್ಮೂಲೀಕರಣ

ಬೆಂಗಳೂರು, ಮೈಸೂರಿನ ರಾಜಧಾನಿ ಅಲ್ಲದೆ ವ್ಯಾಪಾರದ ಮುಖ್ಯಸ್ಥಳವಾಗಿತ್ತು. (ಕ್ರಿ.ಶ. ೧೫೩೭ರಲ್ಲಿ) ಕೆಂಪೇಗೌಡರಿಂದ ಸ್ಥಾಪನೆಯಾದ ಬೆಂಗಳೂರಿನ ಮಣ್ಣು ಅತ್ಯಂತ ಮಲಿನವಾಗಿದ್ದು, ಊರು ಚಿಕ್ಕದಾಗಿ, ಜನ ಜಾಸ್ತಿಯಾಗಿತ್ತು. *೪ ಕೆಲವು ಜಾಗಗಳಂತೂ ತೀರ ಕೊಳಕಾಗಿತ್ತು. ನೀರೂ ಮಲಿನವಾಗಿತ್ತು. ಸಿಸಿಲ್ ಉಡಹಾಮ್ ಸ್ಮಿತ್, ಫ್ಲಾರನ್ಸ ನೈಟಂಗೇಲ್‌ರವರ ಆತ್ಮಚರಿತ್ರೆಯನ್ನು ಬರೆದವರು, ಬೆಂಗಳೂರಿನ ಸ್ವಚ್ಛತೆ ಬಗ್ಗೆ ಹೀಗೆ ಹೇಳಿರುತ್ತಾರೆ:

"ಬೆಂಗಳೂರಿನ ಕುಡಿಯುವ ನೀರಿನ ಟ್ಯಾಂಕ್ ಮಲಿನವಾಗಿದ್ದು ಇದನ್ನು ಸಿಟಿಯಲ್ಲಿ ವಾಸಿಸುತ್ತಿರುವ ೧,೨೫,೦೦೦ ಜನರಿಗೆ ಸರಬರಾಜು ಮಾಡಲಾಗುತ್ತಿದೆ. ಪ್ರಧಾನ ಸೇನಾಧಿಕಾರಿ ಇದರ ಬಗ್ಗೆ ೪ ೧/೨ ವರ್ಷಗಳಿಂದ ಸರ್ಕಾರದ ಅವಗಾಹನೆಗೆ ತಂದರೂ, ಇದರ ಬಗ್ಗೆ ಸರ್ಕಾರ ಗಮನ ಕೊಟ್ಟಿಲ್ಲ." ನಾಲೆಗಳ ವ್ಯವಸ್ತೆ, ಚರಂಡಿ ಇವುಗಳ ನಿಜವಾದ ಅರ್ಥ ಗೊತ್ತಿಲ್ಲ. ಬಚ್ಚಲುಗಳನ್ನು ಇವರು ತಮ್ಮ ವರದಿಯಲ್ಲಿ ಹೆಚ್ಚು ಉತ್ಪ್ರೇಕ್ಷಿಸಿದ್ದಾರೆ. ಅವುಗಳು, ಬಟ್ಟೆ ಬದಲಾಯಿಸುವ ಕೊಟಡಿಗಳಂತೆ ಇವೆಯೆಂದಿದ್ದಾರೆ. *೫

ಬೆಂಗಳೂರಿನಲ್ಲಿ ಜನದ ಬೀಡು ಜಾಸ್ತಿಯಾಗಿದ್ದು, ನೀರಿನ ಮತ್ತು ಚರಂಡಿ ವ್ಯವಸ್ತೆಗೆ, ಪುರಸಭೆಯು ಸಾಕಷ್ಟು ಗಮನವನ್ನು ಕೊಡದೆ ಇರುವದರ ಕಾರಣ, ರೋಗ ರುಜಿನಗಳ ಬೀಡಾಗಿದೆ. ಇದಲ್ಲದೆ, ಪುರಸಭೆಯು ಇದಕ್ಕೆ ಹಣ ಒದಗಿಸಲು ವಿಫಲವಾಗಿದೆ. ಹೆಚ್ಚಿನ ಗಮನ ಮತ್ತು ಹಣ ಸಹಾಯವಿಲ್ಲದೆ ಯಾವುದೇ ಪರಿಣಾಮಕಾರಿಯಾದ ವ್ಯವಸ್ಥೆಯನ್ನು ಕೈಗೊಳ್ಳಲು ಅಸಾಧ್ಯವಾಗಿದೆ. *೬ ಮೈಸೂರು ದೇಶ ೧೯೦೨ರ ಹೊತ್ತಿಗೆ ಮಾದರಿ ಸಂಸ್ಥಾನವೆಂದು ಹೆಸರು ಪಡೆದಿತ್ತು. *೭ ಮತ್ತು ಬೆಂಗಳೂರು ಅತ್ಯಂತ ಮುಖ್ಯಸ್ಥಾನ ಪಡೆದಿತ್ತು. ಆದರೆ ೧೮೯೮ರಲ್ಲಿ ಪ್ಲೇಗ್ ಮಾರಿ ಹಬ್ಬುವ ತನಕ ಬೆಂಗಳೂರಿಗೆಂದು ಒಬ್ಬ ಪ್ರತ್ಯೇಕ ಆರೋಗ್ಯ ಅಧಿಕಾರಿ ಇರಲಿಲ್ಲ. ೨ನೇ ಅಕ್ಟೋಬರ್ ೧೮೯೮ರಲ್ಲಿ ಸರ್ಕಾರವು ಡಾ॥ ಕೃಷ್ಣಸ್ವಾಮಿಯವರನ್ನು ಆರೋಗ್ಯ ಅಧಿಕಾರಿಯನ್ನಾಗಿ ನೇಮಿಸಿತು. ಅವರು ೧೮೯೯ನೇ ಫೆಬ್ರುವರಿ ವರಿಗೆ, ಅಧಿಕಾರಿಯಾಗಿ ಮುಂದುವರೆದು ಪ್ಲೇಗ್ ಕಡಿಮೆಯಾದ ಮೇಲೆ ಕೋಲಾರ ಗೋಲ್ಡ್ ಫೀಲ್ಡ್‌ಗೆ ಹೋದರು. ಡಾ॥ ಚೋಕ್ಸಿ ಅವರು ಎರಡೂ ಖಾತೆ ಅಂದರೆ ಪ್ಲೇಗ್ ಮತ್ತು ಆರೋಗ್ಯ ಹುದ್ದೆಯನ್ನು ನಿರ್ವಹಿಸಿದರು.

ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ಪ್ಲೇಗ್ ಶುರುವಾದ್ದರಿಂದ (೧೭ನೇ ಅಕ್ಟೋಬರ್ ೧೮೯೭) ಬೆಂಗಳೂರಿನಲ್ಲಿ ಪ್ಲೇಗ್ ಬಗ್ಗೆ ಎಚ್ಚರಿಕೆ ಕ್ರಮ ಕೈಗೊಳ್ಳಲಾಯ್ತು. ೧೮೯೭ರ ಸಾಂಕ್ರಾಮಿಕ ರೋಗದ ಆಕ್ಟ್ ಪ್ರಕಾರ ಸರ್ಕಾರವು ಅಧಿಕಾರಿಗಳಿಗೆ, ಪ್ಲೇಗ್ ನಿಯಂತ್ರಣಕ್ಕೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿತ್ತು. ವಿ. ಪಿ. ಮಾಧವರಾವ್ ಅಧಿಕಾರವನ್ನು ವಹಿಸಿಕೊಂಡರು. ಪ್ಲೇಗ್ ಬಗ್ಗೆ ತೆಗೆದುಕೊಂಡ ಎಚ್ಚರಿಕೆಯ ಕ್ರಮವೆಂದರೆ, ಭಾವಿಗಳ ಸ್ವಚ್ಛತೆ, ಮಲಿನ ಮಾಡುವವರನ್ನು ಶಿಕ್ಷಿಸುವದು, ಹಳ್ಳಿಗಳ ಸ್ವಚ್ಛತೆ ಕ್ರಮದ ಬಗ್ಗೆ ಕಾನೂನು (೧೮೯೮), ಮತ್ತು ರೈಲು ಬಸ್ಸುಗಳಿಂದ ಬರುವವರನ್ನು ಪರೀಕ್ಷಿಸಿ ಒಳಕ್ಕೆ ಬಿಡುವದು, ಮತ್ತು ಪ್ಲೇಗ್ ಹಾಸ್ಪಿಟಲನ್ನು ಊರ ಹೊರಗೆ ಕಟ್ಟಿಸಿದ್ದು, ಮತ್ತು ಸೋಂಕಿನ ಅನುಮಾನ ಬಂದ ತಕ್ಷಣ ಜನರನ್ನು ಊರ ಹೊರಗೆ ಆರೋಗ್ಯ ಶಿಬಿರದಲ್ಲಿ ಇಡುವಿಕೆ, ಇವು ಮುಖ್ಯವಾದ ಕ್ರಮಗಳು. ಆದರೆ ಇಷ್ಟೆಲ್ಲಾ ಕ್ರಮಗಳನ್ನು ಸರ್ಕಾರದ ವತಿಯಿಂದ ಮಾಡಿದರೂ ೧೨ನೇ ಆಗಸ್ಟ್ ೧೮೯೮ರಲ್ಲಿ, ಪ್ಲೇಗ್ ಬೆಂಗಳೂರನ್ನು ಆವರಿಸಿತು.

ಸರ್ಕಾರವು ಪ್ಲೇಗ್ ಆಸ್ಪತ್ರೆಯೊಂದೇ, ರೋಗಕ್ಕೆ ಶಮನವೆಂದು ತಿಳಿಯಿತು. ಮತ್ತು ಪ್ಲೇಗ್ ರೆಗ್ಯುಲೇಷನ್ ಪ್ರಕಾರ (ನಂ. 9384 M. 2/96 date 10/Feb/98) ಮುನಿಸಿಪಾಲಿಟಿ ಪ್ರೆಸಿಡೆಂಟ್‌ರಿಗೆ ಸಾವಿನ ಬಗ್ಗೆ ತನಿಖೆ ಮಾಡುವ ಅಧಿಕಾರ ಕೊಟ್ಟು, ೨ ಗಂಟೆಯೊಳಗೆ ಸಾವಿನ ಬಗ್ಗೆ (ಪ್ಲೇಗ್ ಮಾಹಿತಿ) ಪ್ಲೇಗ್ ಮತ್ತು ಆರೋಗ್ಯ ಅಧಿಕಾರಿಯಿಂದ ಪತ್ರ ಪಡೆಯುವಂತೆ ತಿಳಿಸಿತು.

ಇನಾಕ್ಯುಲೇಷನ್‌ನನ್ನು ೧೮೯೮ರ ಸೆಪ್ಟೆಂಬರ್‌ನಿಂದ ಸರ್ಕಾರವು ಕಡ್ಡಾಯ ಮಾಡಿದ್ದಲ್ಲದೆ ಸ್ಕೂಲ್ ಮಕ್ಕಳು ಕಡ್ಡಾಯವಾಗಿ ಇನಾಕ್ಯುಲೇಷನ್ ಮಾಡಿಸಿಕೊಳ್ಳಬೇಕೆಂದೂ, ಈ ವಿಷಯದಲ್ಲಿ, ಉಪಾಧ್ಯಾಯರು ಮಕ್ಕಳಿಗೆ ಇನಾಕ್ಯುಲೇಷನ್ ಮಹತ್ವವನ್ನು ವಿವರಿಸಿ ಕಡ್ಡಾಯ ಮಾಡಬೇಕೆಂದೂ ಮತ್ತು ಇದನ್ನು ಉಲ್ಲಂಘಿಸಿದವರಿಗೆ, ಶಾಲೆಯ ಪ್ರವೇಶಕ್ಕೆ, ಅನುಮತಿ ನೀಡಬಾರದೆಂದೂ ವಿಧಿಸಿತು. ಜಾತ್ರೆಗಳ ಮೇಲೆ ಪ್ರತಿಬಂಧವನ್ನು ಹೇರಿತು. ಮಾಗಡಿ ರಸ್ತೆಯನ್ನು ತಡೆಹಿಡಿಯುವ ಹಾದಿ ಶಿಬಿರವನ್ನಾಗಿ ಪರಿವರ್ತಿಸಿತು. ಸೊಂಕುರೋಗದ ಆಸ್ಪತ್ರೆಯನ್ನು ಪ್ಲೇಗ್ ಹಾಸ್ಪಿಟಲ್ ಆಗಿ ಮಾಡಿ, ಮಾಗಡಿ ರೋಡ್ ಎದುರು ರಸ್ತೆಯಲ್ಲಿ ಮುನಿಸಿಪಾಲಿಟಿಯ ಷೆಡ್ ಹಾಕಿ, ರೋಗ ತಗಲಿದವರಿಗೆ ಬೇರೆ ಇಡುವ ಶಿಬಿರವನ್ನಾಗಿ ಮಾಡಿತು. ಅವಣ್ಣವರ ಛತ್ರವನ್ನು ಆರೋಗ್ಯ ಶಿಬಿರವನ್ನಾಗಿ ಪರಿವರ್ತಿಸಿತು ಮತ್ತು ಇಲಿ ಹಿಡಿದು ಕೊಟ್ಟವರಿಗೆ ಒಂದು ಆಣೆ ಇನಾಮು ಕೊಡುವುದಾಗಿ ಪ್ರಕಟಿಸಿತು.

ಪಾಶ್ಚಾತ್ಯ ಔಷಧಿ ನೀಡಿಕೆ ಮತ್ತು ಇನಾಕ್ಯುಲೇಷನ್ *೮ ಚುಚ್ಚುವಿಕೆ ಹೆಚ್ಚಿನ ಸಂಖ್ಯೆಯಲ್ಲಿ ತೀವ್ರಗತಿಯಲ್ಲಿ ಸಾಗುತ್ತಿದ್ದರೂ, ಮಧ್ಯಮ ವರ್ಗದ ಜನರಲ್ಲಿ ಆಸ್ಪತ್ರೆಯ ಚಿಕಿತ್ಸೆಯ ಬಗ್ಗೆ ಮತ್ತು ಕುಟುಂಬದಿಂದ ಬೇರೆಯಾಗಿ ಇರಿಸುವದು ಅಸಮಾಧಾನಕ್ಕೆ ಎಡೆಮಾಡಿತ್ತು. ಬಹಳ ಜನ ದೇಶೀಯ ವೈದ್ಯ ಪದ್ಧತಿಯಲ್ಲಿ ಹೆಚ್ಚು ನಂಬಿಕೆ ಇಟ್ಟಿದ್ದರು.

ಜನರಿಗೆ ಆಸ್ಪತ್ರೆ ಔಷಧಿ ಮತ್ತು ಸ್ವಜನರಿಂದ ದೂರವಾಗಿರುವುದು ಬೇಡವಾಗಿತ್ತು. ಅದಲ್ಲದೆ ತಮ್ಮ ಜಾತಿ

ಕೆಡುತ್ತದೆ ಎಂಬ ಭಯ. ಹೀಗಾಗಿ ಜನ ಸಾಮಾನ್ಯರು ಆಸ್ಪತ್ರೆ ಎಂದರೆ ಕಾರಾಗೃಹ ಎಂದು ಭಾವಿಸಿದ್ದರು. ಹಿಂದೂಗಳೇ ಆಗಲಿ, ಮುಸಲ್ಮಾನರೇ ಆಗಲಿ ತಮ್ಮ ಮನೆಗಳಿಂದ ತಮ್ಮನ್ನು ಹೊರಗೆ ಹಾಕಲು ಒಪ್ಪುತ್ತಿರಲಿಲ್ಲ. ಪ್ಲೇಗ್ ಕಾನೂನು ಭಯವನ್ನು ಹುಟ್ಟಿಸುವಂತಾಗಿತ್ತು. ಭಯದಿಂದ ಜನರು ಹೆಣಗಳನ್ನು ಬೀದಿಗೆಸೆದದ್ದು ಕಂಡುಬರುತಿತ್ತು. ಅನೇಕ ಸಲ ಭಯಕ್ಕೋಸ್ಕರ ಮನೆಯಲ್ಲೇ ಹೆಣಗಳನ್ನು ಹೂತು ತಾವು ತಮ್ಮ ಮನೆ ಬಾಗಿಲು ಮುಚ್ಚಿಕೊಂಡದ್ದು ಉಂಟು. ಮುಸಲ್ಮಾನರು ತಮ್ಮ ಹೆಂಗಸರಿಗೆ ಶಿಬಿರದಲ್ಲಿ ಬೇರೆ ಏರ್ಪಾಡು ಮಾಡುವ ತನಕ ತಮ್ಮ ಮನೆಗಳನ್ನು ಶುಚಿಮಾಡಲು ಕೊಡುವದಿಲ್ಲವೆಂದು ಹಟಹಿಡಿದರು. ಸರ್ಕಾರ ಅವರ ಎಲ್ಲಾ ಬೇಡಿಕೆಯನ್ನು ಮನ್ನಿಸಿತು.

### ಹಾರು ಸುದ್ದಿ, ಸಂಪು ಮತ್ತು ದೊಂಬಿ

ಪ್ಲೇಗ್‌ನಿಂದ ಸರ್ಕಾರ ವಿಧಿಸಿದ್ದ ಕಾನೂನು ವಿಧಿಗಳ ವಿರುದ್ಧ ಜನ ಸಂಪು, ಪ್ರತಿಭಟನೆ ಮತ್ತು ದಂಗೆಗಳಲ್ಲಿ ತೊಡಗಿದರು. ಜನ ಸಾಮಾನ್ಯರು ಗುಂಪಾಗಿ ಚರ್ಚಿಸತೊಡಗಿದರು. ಜನ ಬ್ರಿಟಿಷ್ ಸರ್ಕಾರವು ಪ್ಲೇಗನ್ನು ಬೇಕೆಂದೇ ತಂದಿದೆ. ಇದು ಸರ್ಕಾರದ ಒಂದು ಕುತಂತ್ರ ಎಂದು ಭಾವಿಸಿದ್ದೇ ಅಲ್ಲದೆ ಜನರನ್ನು ಮುಗಿಸಲು ಸರ್ಕಾರ ಮಾಡುತ್ತಿರುವ ಒಂದು ಪ್ರಯತ್ನ ಎಂದು ಭಾವಿಸಿದರು. ಇದು ಸಾಮಾನ್ಯ ಜನರಲ್ಲಲ್ಲದೆ, ವಿದ್ಯಾವಂತ ಜನರಲ್ಲೂ ಈ ಭಾವನೆ ಬೆಳೆದಿತ್ತು. *೯

ಮತ್ತೊಂದು ಭಯಂಕರವಾದ ಹಾರು ಸುದ್ದಿ, ಸರ್ಕಾರವು ಶಿಬಿರವನ್ನು ಕಟ್ಟಿಸುತ್ತಿರುವದು, ಒಟ್ಟಿಗೆ ಜನರಿಗೆ ವಿಶಪ್ರಾಶನ ಮಾಡಿ ಕೊಲ್ಲುವದಕ್ಕಾಗಿ. *೧೦ ಹೀಗಾಗಿ ಸರ್ಕಾರದ ಅಧಿಕಾರ ಗಳನ್ನು ಜನ ನಂಬದೆ, ಪ್ಲೇಗ್ ಇಲ್ಲ, ಇದು ಒಂದು ಕಾಲ್ಪನಿಕ ಕಟ್ಟುಕಥೆ ಸರ್ಕಾರದ್ದು ಎಂದು ಅಂದುಕೊಂಡಿದ್ದೂ ಉಂಟು. ಪ್ಲೇಗ್ ಹೆಚ್ಚಾದಾಗ ಮುನಿಸಿಪಲ್ ಖಾತೆಯ ಕೆಲಸಗಾರರು, ತಮಗೆ ಹೆಚ್ಚಿನ ಸಂಬಳ ಬೇಕೆಂದು ಮುಷ್ಕರ ಹೂಡಿದರು. ಕಸ ಸಾಗಿಸುವವರು ತಮಗೆ ಶವವನ್ನು ಸಾಗಿಸುವದು ಭಯಂಕರವಾದ ಕೆಲಸವಾಗಿದೆ ಎಂದು ಕೆಲಸಕ್ಕೆ ಬಾರದೆ ಇದ್ದಾಗ ಸರ್ಕಾರವು ಪ್ರೈವೇಟ್ ಸಂಸ್ಥೆಗಳಿಗೆ ಶರಣು ಹೋಗಬೇಕಾಯ್ತು. ನವೆಂಬರ್ ೧೮೯೮ರಲ್ಲಿ ವಿದ್ಯುಚ್ಛಕ್ತಿ ಇಲಾಖೆ ಮುಷ್ಕರ ನಡೆಸಿತು. ಕೊನೆಯದಾಗಿ ಕಸ ಗುಡಿಸುವವರು ಮುಷ್ಕರ ನಡೆಸಿದಾಗ, ಮೈಸೂರು ದರ್ಬಾರು ೬೦ ಎತ್ತುಗಳನ್ನೂ ಅದನ್ನು ನಡೆಸುವವರನ್ನೂ ಕೊಟ್ಟು ತಾತ್ಕಾಲಿಕ ಪರಿಹಾರ ನೀಡಿ ಶಮನ ಮಾಡಿತು.

ಹೀಗಾಗಿ ಸರ್ಕಾರದ ಪ್ರತಿ ಒಂದು ಕೆಲಸವನ್ನೂ ಜನರು ಅನುಮಾನದಿಂದ ನೋಡುವಂತಾಗಿತ್ತು. ಇನಾಕ್ಯುಲೇಷನ್‌ನಲ್ಲಿ, ವಿಶಪ್ರಾಶನ ಔಷಧಿ ಸೇರಿಸಿದೆ ಎಂದು ಭಾವಿಸಿದರು. ಜನರು ನೀರು ಉಪಯೋಗಿಸುವದಕ್ಕೆ ಹೆದರಿ, ದೂರದಲ್ಲಿ ಉಪಯೋಗಿಸದ ಹಾಳು ಭಾವಿಯಿಂದ ನೀರುತಂದು ಕುಡಿದು ಖಾಯಿಲೆ ತಂದುಕೊಂಡಿದ್ದು ಉಂಟು.

ಜನರ ಮನಸ್ಸಿನ ಉದ್ರೇಕ, ದಂಗೆಗೆ ಎಡೆಕೊಟ್ಟಿತು. ಅನೇಕ ಕಡೆಗಳಲ್ಲಿ ಶಿಬಿರಗಳನ್ನು ಸುಟ್ಟುಹಾಕಿ, ಡೆಪ್ಯುಟಿ ಕಮಿಷನರ್, ಪ್ಲೇಗ್ ಆಫೀಸರ್ ಮತ್ತು ಹೆಲ್ತ್ ಆಫೀಸರ್ ಇವರುಗಳನ್ನು ದ್ವೇಷಿಸಲಾರಂಭಿಸಿದರು. ''ಇನಾಕ್ಯುಲೇಷನ್ ವಿರುದ್ಧ ದಂಗೆ ಎದ್ದ ಯುವಕನೊಬ್ಬ ಅಚ್ಯುತರಾವ್‌ಗೆ ಕಲ್ಲೆಸೆದನು.''*೧೧ ಜನರ ಪ್ರತಿಭಟನೆಯು ಗಂಜಾಂ ದಂಗೆಗೆ ಎಡೆಕೊಟ್ಟಿತು.

### *ಗಂಜಾಂ ದಂಗೆ ( ೨೧ ನೇ ನವೆಂಬರ್ ೧೮೯೮ )*

ಗಂಜಾಂ ದಂಗೆಯು ಮಾಧವರಾಯರ ಶೌರ್ಯ ಪ್ರದರ್ಶನಕ್ಕೆ ಒಂದು ನಿದರ್ಶನವಾಗಿ ಮುಂದೆ ಅವರು ಮೈಸೂರು ದಿವಾನರಾಗಲು ಸಹಾಯಕವಾದರೂ, ಜನರ ಸುಪ್ತ ಚೇತನವನ್ನು ಎಬ್ಬಿಸಿದ ಒಂದು ನಿದರ್ಶನವೆನ್ನಬಹುದು.

ಶ್ರೀರಂಗಪಟ್ಟಣದಲ್ಲಿ ಪ್ಲೇಗ್ ಆವರಿಸಿದ್ದಾಗ, ಬೆಂಗಳೂರಿನಿಂದ ಬಂದ ಮೂವರು ನೇಯ್ಗೆಕಾರರನ್ನು ತಪಾಸಣೆ ಮಾಡುವದಕ್ಕೆ ಸರ್ಕಾರ ಇರಿಸಿತ್ತು. ಅದರಲ್ಲಿ ೬ನೇ ನವೆಂಬರ್ ೧೮೯೮ರಂದು ಒಬ್ಬ ಪ್ಲೇಗ್‌ನಿಂದ ಮರಣ ಹೊಂದಿದ. ಅವನಿಗೆ ದಹನಕ್ರಿಯೆ ಮಾಡಲಾಯ್ತು. ಇದಕ್ಕೆ ಯಾವ ಪ್ರತಿಭಟನೆಯೂ ಇರಲಿಲ್ಲ. ೧೦ನೇ ನವೆಂಬರ್ ೧೮೯೮ರಂದು ಮತ್ತೊಬ್ಬನು ಮಡಿದ. ರೊಚ್ಚಿಗೆದ್ದ ಜನ ವಿಶಪ್ರಾಶನದಿಂದ ಇಬ್ಬರು ಸತ್ತಿದ್ದಾರೆಂದು, ಗುಡಿಸಲು ಸುತ್ತ ಪ್ರತಿಭಟಿಸಲು ಆರಂಭಿಸಿದರು ಮತ್ತು ಇನ್ನೊಬ್ಬನ ದಹನಕ್ರಿಯೆ ಮಾಡಕೂಡದೆಂದು ಪ್ರತಿಭಟಿಸಿದರು. ಅಲ್ಲದೆ, ಪೋಲೀಸ್ ಪೇದೆಯನ್ನು ಬದಿಗಿರಿಸಿ, ಹೆಣವನ್ನು ತೆಗೆದುಕೊಂಡು ಹೋಗಿ ಕಾವೇರಿನದಿಯಲ್ಲಿ ಮುಳುಗಿಸಿದರು. ರೊಚ್ಚಿಗೆದ್ದ ಗುಂಪು, ಅಮಲ್ದಾರ್, ಸಬ್ ಅಸಿಸ್ಟೆಂಟ್ ಸರ್ಜನ್ ಅವರ ಮೇಲೆ ಕಲ್ಲಿನ ಮಳೆ ಸುರಿದರು. ಇದರಿಂದ ಹೆದರಿದ ಅಧಿಕಾರಿಗಳು ಓಡಿಹೋದರು. ಸಬ್ ಅಸಿಸ್ಟೆಂಟರನ ಎತ್ತಿನಗಾಡಿ ಮುರಿಯಿತು. ಪ್ಲೇಗ್ ಷೆಡ್ ಸುಟ್ಟರು. ಸ್ಯಾನಿಟರಿ ಇನ್ಸ್‌ಪೆಕ್ಟರ್, ಫ್ರೆಂಚ್‌ರಾಕ್ಸ್ (ಪಾಂಡವಪುರ)ಗೆ ಓಡಿಹೋದನು. ಸರ್ಕಾರವು ಮಿಲಿಟರಿ ಸಹಾಯದಿಂದ ಗುಂಪನ್ನು ಚದುರಿಸಿತು.

ಇದರಿಂದ ರೊಚ್ಚಿಗೆದ್ದ ಜನ ಅಲ್ಲಲ್ಲಿ ಗುಂಪಾಗಿ ಮುಂದಿನ ಕ್ರಮವನ್ನು ಚರ್ಚಿಸತೊಡಗಿದರು. ಸರ್ಕಾರವು ೧೮ನೇ ನವೆಂಬರ್ ೧೮೯೮ರಂದು ೫೫ ಜನರನ್ನು ಬಂಧಿಸಿತು. ಇದಕ್ಕೆ ಹೆದರದ ಗುಂಪು, ಹತ್ತಿರದ ಗಂಜಾಂ ಮತ್ತಿತರ ಹಳ್ಳಿಗಳಿಂದ ಬಂದು, ಖೈದಿಗಳನ್ನು ರಕ್ಷಿಸಲು ಮುಂದಾದರು ಮತ್ತು ಪೋಲೀಸ್ ಠಾಣೆಯ ಹತ್ತಿರ ಬಂದು ಗುಂಪು ಕಟ್ಟಿದರು. ಅದಲ್ಲದೆ ಸೇತುವೆಯ

ಮೇಲೆ ಜಮಾಯಿಸಿದರು. ಸರ್ಕಾರವು ಅತ್ಯಂತ ಕಠಿಣವಾದ ಪರೀಕ್ಷೆಗೆ ಒಳಗಾಯಿತು. ಪೋಲಿಸರು ಗುಂಡು ಹಾರಿಸಿದ್ದರಿಂದ ಹಲವರಿಗೆ ಗಾಯವಾಗಿ, ಹಲವರು ಮರಣವನ್ನಪ್ಪಿದರು. ಸರ್ಕಾರವು ೧೩೫ ಜನರನ್ನು ಬಂಧಿಸಿ ಬೆಂಗಳೂರಿಗೆ ಕೊಂಡೊಯ್ಯಿತು. ಸರ್ಕಾರದ ಮಿಲಿಟರಿ ಕ್ರಮಕ್ಕೆ ಜನ ಬಂಧನಗೊಂಡರೂ ರೊಚ್ಚಿಗೆದ್ದ ಜನ ಯಾವಾಗ ಏನು ಮಾಡುವರೋ ಎಂಬ ಭಯ ಸರ್ಕಾರಕ್ಕಿತ್ತು. ಮೈಸೂರಿನ ಸುತ್ತ ಪ್ಲೇಗ್ ವಿರುದ್ಧ ದೊಂಬಿ ಗಲಭೆ ಶುರುವಾದ್ದರಿಂದ ಸರ್ಕಾರವು ಒಂದು ಘೋಷಣೆಯನ್ನು ಹೊರಡಿಸಿ, ಕಡ್ಡಾಯ ಬೇರ್ಪಡಿಸುವಿಕೆಯನ್ನು ಹಿಂದೆ ತೆಗೆದುಕೊಂಡಿತು (೧ನೇ ಡಿಸೆಂಬರ್ ೧೮೯೮).

ಬೆಂಗಳೂರಿನ ಮಾಗಡಿ ಕ್ಯಾಂಪಿಗೆ ದಿನಕ್ಕೆ ಸುಮಾರು ೫೦೦ ರೂಪಾಯಿ ಖರ್ಚಾಗುತಿತ್ತು. ಸರ್ಕಾರಕ್ಕೆ ಈ ವೆಚ್ಚವನ್ನು ಭರಿಸಲು ಕಷ್ಟವಾಗಿತ್ತು. ಇದಲ್ಲದೆ ಪ್ರತ್ಯೇಕ ಜಾತಿ ಮತದ ಗಣನೆಯನ್ನು ಪರಿಗಣಿಸಿ ಕ್ಯಾಂಪಿನಲ್ಲಿ ವ್ಯವಸ್ಥೆಯ ಏರ್ಪಾಡು ಮಾಡಬೇಕಾಗಿತ್ತು. ಹಲವಾರು ಜನ ಬೆಂಗಳೂರು ಬಿಟ್ಟು ಹೋದದ್ದೇ ಅಲ್ಲದೆ, ಸೊಂಕುರೋಗವನ್ನು ಬೇರೆ ಊರಿಗೆ ಹಬ್ಬಿಸಿತು, Segregation ವಿಫಲತೆಯನ್ನು ಹೊಂದಿತು. ಜನರ ಪ್ರತಿಭಟನೆಯ ಸಲುವಾಗಿ ಸರ್ಕಾರವು ಪ್ಲೇಗ್ ಕಾಯ್ದೆಯನ್ನು ಸಡಿಲ ಮಾಡಿತು. ಮತ್ತು ಸಾಕಷ್ಟು ತಿದ್ದುಪಡಿ ಉಂಟುಮಾಡಿತು. ಪ್ಲೇಗ್ ನಿಯಂತ್ರಣದಲ್ಲಿ ಆಡಳಿತ ವೈಫಲ್ಯದ ಕಾರಣ, ಸರ್ಕಾರವು ಮಿಲಿಟರಿ ಸಹಾಯವನ್ನು ಕೋರುವದನ್ನು ನಿಲ್ಲಿಸಿತು.

ಇದರಿಂದ ಕೊಂಚ ಸಮಾಧಾನ ಹೊಂದಿದ ಜನರು ಸರ್ಕಾರಕ್ಕೆ ಬೆಂಬಲಕೊಟ್ಟಿದ್ದಲ್ಲದೆ ಬೆಂಗಳೂರು ತಾಲೂಕ ಮತ್ತು ತುಮಕೂರ ಪ್ರಜೆಗಳು *''ತಾವು ಹೊರಗಡೆಯಿಂದ ಬೆಂಗಳೂರು, ಪ್ಲೇಗ್ ಸೊಂಕಿದ ಯಾರನ್ನೂ ಬಿಡುವುದಿಲ್ಲವೆಂದೂ ತಮ್ಮಲ್ಲೇ ಒಂದು ಒಪ್ಪಂದ ಮಾಡಿಕೊಂಡು (೨೦ನೇ ಜನವರಿ ೧೮೯೯)ಮತ್ತು ಯಾರಾದರೂ ನಿಯಮ ಉಲ್ಲಂಘನೆ ಮಾಡಿದಲ್ಲಿ ೨೦ರೂ fine ಕೊಡಬೇಕೆಂದೂ ತೀರ್ಮಾನಿಸಿದರು. ಇದಲ್ಲದ ಜನರು ತಮ್ಮಲ್ಲೇ ತೀರ್ಮಾನಿಸಿ, ತಮ್ಮ ಜನರನ್ನು ನೇಮಿಸಿ ಯಾವ ಮನೆಯಲ್ಲಿ ಪ್ಲೇಗ್ ಹೊಕ್ಕಿದ ಎಂಬುದಾಗಿ ತಿಳಿಸುವದಾಗಿ ತೀರ್ಮಾನಿಸಿದರು.''*

ಹೀಗೆ ಮೊದಲ ಹಂತದ ಪ್ಲೇಗ್ ಪಿಡುಗಿನಲ್ಲಿ ನಾವು ಮೈಸೂರಿನ ಪ್ರತಿಭಟನೆಯ ಇಣುಕು ನೋಟವನ್ನು ಕಾಣುತ್ತೇವೆ. ಹಿತವಾದಿ ಪತ್ರಿಕೆಯು*೧೨ ''ಪ್ಲೇಗ್‌ಗಿಂತ, ಪ್ಲೇಗ್ ಸಂಬಂಧಿತ ಕಾನೂನು ಜನರಲ್ಲಿ ಅಸ್ವಸ್ಥತೆ ಪಡಿಸಿತು'' ಎಂದು ಬರೆಯಿತು. ಪ್ಲೇಗಿನ ಮೊದಲ ಹಂತದಲ್ಲಿ, ಪಾಶ್ಚಾತ್ಯ ಔಷಧಿ ಪದ್ಧತಿಯನ್ನು ಸಂಶಯದಿಂದ ನೋಡುತ್ತಿದ್ದ ಸಾಮಾನ್ಯ ಜನ, ಪಾಶ್ಚಾತ್ಯ ಔಷಧಿಯನ್ನು ಒಪ್ಪಿಕೊಂಡರು. ಇದರಲ್ಲಿ ಮಧ್ಯಮ ವರ್ಗದ ವಿದ್ಯಾವಂತ ಜನರು ಮುಖ್ಯ ಪಾತ್ರ ವಹಿಸಿದರು.

ಮತ್ತೊಂದು ಮುಖ್ಯವಾಗಿ ಗಮನಿಸಬೇಕಾದ ಅಂಶ- ಪ್ಲೇಗ್ ಪಿಡುಗಿನಿಂದ ಸರ್ಕಾರವು ತನ್ನ ಕಾರ್ಯನಿರ್ವಾಹಕ ರೀತಿಯನ್ನು ವಿಮರ್ಶಿಸಿ ನೋಡುವಂತಾಗಿ ನಗರದ ಅಭಿವೃದ್ಧಿಗೆ ಹೆಚ್ಚು ಗಮನ ಕೊಡುವಂತಾದ್ದು. ಹೆಚ್ಚಿನ ಜನಬೀಡಾದ ನಗರದಲ್ಲಿ ಜನರಿಗೆ ಗಾಳಿ ಬೆಳಕಿನ ವಸತಿಯನ್ನು ಏರ್ಪಡಿಸಲು ಸರ್ಕಾರ ತೀರ್ಮಾನಿಸಿತು. ಸರ್ಕಾರವು ಊರ ಹೊರಗೆ ಹಾಕಿದ್ದ ಆರೋಗ್ಯ ಶಿಬಿರಗಳು ಹೆಚ್ಚು ಜನಾದರಣೀಯವಾಗದಿದ್ದ ಕಾರಣ ಹೊಸ ಬಡಾವಣೆಗಳನ್ನು ನಿರ್ಮಿಸಿತು. ಅಂತಾಗಿ ಬಸವನಗುಡಿ ಬಡಾವಣೆಯು ನಿರ್ಮಾಣವಾಯಿತು ಮತ್ತು ೨೯೧ ಎಕರೆ ವಿಸ್ತೀರ್ಣವಾದ ಮಲ್ಲೇಶ್ವರಂ ಬಡಾವಣೆ ನಿರ್ಮಿತವಾದುದನ್ನೂ ಕಾಣುತ್ತೇವೆ.

ಮತ್ತೊಂದು ಮುಖ್ಯವಾದ ಬದಲಾವಣೆ ಎಂದರೆ ೧೯೦೩ರಲ್ಲಿ ಸರ್ಕಾರವು 'ಮೈಸೂರು ನಗರ ಅಭಿವೃದ್ಧಿ ಟ್ರಸ್ಟ್' ಸ್ಥಾಪಿಸಿದ್ದು. ಇದಕ್ಕಾಗಿ ೩ ಲಕ್ಷ ರೂಪಾಯಿಯನ್ನು ಸರ್ಕಾರವು ಎತ್ತಿರಿಸಿ, ಇದಕ್ಕೆ ಕೆಲವು ಸರ್ಕಾರದ ಅಧಿಕಾರಿಗಳು, ಮುಖ್ಯ ನಾಗರೀಕರನ್ನು ಮತ್ತು ಮುಖ್ಯ ಇಂಜಿನಿಯರ್‌ರನ್ನು ನೇಮಕ ಮಾಡಿತು.

Evan Machonochie ತಮ್ಮ "Life in the Indian Civil service" *೧೩ ಕೃತಿಯಲ್ಲಿ ಹೀಗೆ ಬರೆದಿರುತ್ತಾರೆ:

*"We got to work, cleared out the slums, straightned and widened the roads, put in a surface drainage system leading into main sewers that discharged into septic tanks, provided new quarters for the displaced population and tieded up generally. The city of Mysore as a consequence; challenges comparison for beauty, cleanliness and general amenity with any capital of its size in the world".*

ಆದರೆ ಪ್ಲೇಗ್ ಪಿಡುಗು ಮೈಸೂರಿನಲ್ಲಿ ೧೯೪೦ರವರೆಗೂ ಮನೆಮಾಡಿದ್ದನ್ನು ನಾವು ಕಾಣುತ್ತೇವೆ. ಇದನ್ನು ಸಾಕಷ್ಟು ಸಾಹಿತ್ಯ, ಗ್ರಂಥಗಳ ಆಧಾರಗಳಿಂದ ವಿವರಿಸಬಹುದು. ಇತ್ತೀಚೆಗೆ ಪ್ರಕಟವಾದ ಎಸ್. ಎಲ್. ಭೈರಪ್ಪನರ ಕೃತಿ 'ಭಿತ್ತಿ'ಯಲ್ಲಿ ಇದರ ಭೀಕರತೆಯನ್ನು ಕಾಣಬಹುದಾಗಿದೆ.

### *ಧಾರವಾಡ ಹುಬ್ಬಳಿ, ಬೆಳಗಾಂ: ಮತ್ತಿತರ ಪ್ರದೇಶಗಳು*

ಪ್ಲೇಗ್ ಪಿಡುಗು ಮುಂಬೈನಲ್ಲಿ ಶುರುವಾದದ್ದು ೧೮೯೬ ಆಗಸ್ಟ್‌ನಲ್ಲಿ. ಆದರೆ ೨೩ನೇ ಸೆಪ್ಟೆಂಬರ್ ೧೮೯೬ರವರೆಗೆ ಪ್ಲೇಗ್ ಸೊಂಕು ಇದೆ ಎಂಬುದೇ ಗೊತ್ತಿರಲಿಲ್ಲ. ಡಾ॥ ವೈಗಸ್ ಎಂಬ ಡಾಕ್ಟರ್, ಮುಂಬೈ ಮುನಿಸಿಪಲ್ ಕಮಿಷನರ್ ಅವರಿಗೆ ಪ್ಲೇಗ್ ಇದೆ ಎಂಬುದನ್ನು ಅವಗಾಹನೆಗಾಗಿ ತಂದು, ಅದಾಗಿ ಮುಂಬೈನಲ್ಲಿ ಪ್ಲೇಗ್ ಸರ್ಕಾರದ ಪ್ರಕಟಣೆ ಹೊರಟಿದ್ದು ೨೯ನೇ ಸೆಪ್ಟೆಂಬರ್ ೧೮೯೬ರಲ್ಲಿ. ಡಾ॥ಹಾಫಕಿನ್ ರವರನ್ನು ಸರ್ಕಾರವು ಕಲ್ಕತ್ತಾದಿಂದ ಮುಂಬೈಗೆ ಅಣುಜೀವಿಗಳ, ಪರೀಕ್ಷೆಯನ್ನು ಮಾಡಿ, ಪ್ಲೇಗ್ ಪಿಡುಗು ಹತ್ತಿದ್ದನ್ನು ದೃಢಪಡಿಸಲು *೧೪ ಕಳುಹಿಸಿತು.

ಬೆಳಗಾಂನಲ್ಲಿ ಮೊದಲನೆ ಪ್ಲೇಗ್ ಆವರಿಸಿದ್ದು ೨೧ನೇ ಅಕ್ಟೋಬರ್ ೧೮೯೭ರಂದು ಕಗವಾಡ ಎಂಬ ಹಳ್ಳಿಯಲ್ಲಿ. ಇದು ಹೊರಗಿನ ಸತಾರಾದಿಂದ ತಂದದ್ದು. ಇದು ಇಡೀ ಬೆಳಗಾಂ ಅನ್ನು ಆವರಿಸಿದ್ದು, ಮತ್ತು ೧೯೧೦-೧೧ ರ ವರದಿ ನೋಡಿದಾಗ, ೧,೮೩,೦೦೦ ಅಥವಾ ೧೧% ಜನ ಪ್ಲೇಗ್‌ನಿಂದ ಸಾವನ್ನು ಅಪ್ಪಿದ್ದನ್ನು ಕಾಣಬಹುದು. *೧೫

ಧಾರವಾಡ ಡಿಸ್ಟ್ರಿಕ್ಟ್‌ನಲ್ಲಂತೂ ಅತ್ಯಂತ ದಾರುಣವಾದ ಮರಣ ಸಂಖ್ಯೆಯನ್ನು ಕಾಣಬಹುದು. ೮ ತಿಂಗಳಲ್ಲಿ ಅಂದರೆ ಜುಲೈ ೧೮೯೮, ಏಪ್ರಿಲ್ ೧೮೯೯ರ ಅವಧಿಯಲ್ಲಿ ೩೦,೦೦೦ ಮಂದಿ ಪ್ಲೇಗ್‌ನಿಂದ ಮಡಿದದ್ದೇ ಅಲ್ಲದೆ ಪ್ಲೇಗ್‌ನ ಮೊದಲ ಹಂತದಲ್ಲಿ, ಮುಂಬಯಿ ಪ್ರಾಂತ್ಯವನ್ನೆಲ್ಲಾ ಸೇರಿಸಿದರೆ, ಮರಣ ಸಂಖ್ಯೆ ೨೦,೭೩೭ ಆಗಿತ್ತು. ಆದರೆ ಧಾರವಾಡ ಒಂದೇ ಡಿಸ್ಟ್ರಿಕ್ಟ್‌ನಲ್ಲಿ ಈ ಸಂಖ್ಯೆ ೩೭,೮೦೫ ತಲುಪಿತ್ತು. ಪ್ಲೇಗ್ ತಡೆಗಟ್ಟಲು ಮುಂಬೈ ಸರ್ಕಾರ ಹಲವಾರು ಸೂಕ್ತ ಕ್ರಮ, ಕಾಯಿದೆಗಳನ್ನು ವಿಧಿಸಿತು. ಇದರಲ್ಲಿ ಮುಖ್ಯವಾದವು:

ಪ್ಲೇಗ್ ಪಿಡುಗು ಇದ್ದ ಕಡೆ, ಸ್ಥಳವನ್ನು ಖಾಲಿಮಾಡುವದು, ಸ್ವಚ್ಛತೆ ಮತ್ತು ಪ್ಲೇಗ್ ಸೋಂಕಿದವರನ್ನು ಆಸ್ಪತ್ರೆಗೆ ಕಳುಹಿಸುವದು ಮತ್ತು ಇವನ್ನೆಲ್ಲಾ ಕಡ್ಡಾಯ ಮಾಡಿ, ೧೮೯೭ರ ಸೊಂಕು ರೋಗದ ಕಾಯ್ದೆಯನ್ನು ಜಾರಿಮಾಡಿತು. *೧೬ ಡಬ್ಲ್ಯೂ. ಡಬ್ಲ್ಯೂ. ಡ್ರೂ ಎಂಬುವರನ್ನು ಬೆಳಗಾಂಗೆ ಪ್ರೆಸಿಡೆಂಟರನ್ನಾಗಿ ನೇಮಿಸಿತು. ಸರ್ಜನ್ ಸಿಮರ್ ಮಾನ್ ಅವರಿಗೆ ಸಹಾಯಕರಾದರು. ಇವರಿಗೆ ಸರ್ಕಾರ ಸಂಪೂರ್ಣ ಅಧಿಕಾರವನ್ನು ಕೊಟ್ಟು, ಕಾನೂನನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ವಿಧಿಸುವ ಹಕ್ಕನ್ನು ವಹಿಸಿಕೊಟ್ಟಿತು.

ಸರ್ಕಾರದ ಕಾನೂನು, ಕಾಯ್ದೆ, ಪ್ಲೇಗನ್ನು ತಡೆಗಟ್ಟುವ ರೀತಿ, ಉಗ್ರವಾಗಿದ್ದು ಜನ ತಮ್ಮ ಧಾರ್ಮಿಕ, ಮತ್ತು ಸಾಮಾಜಿಕ ಜೀವನದ ಘರ್ಷಣೆಯಲ್ಲಿ ತೊಡಗಿದರು. ಡಿಸೆಂಬರ್ ೧೮೯೬ರಲ್ಲಿ ಸಿಟಿಯ ಸರ್ಜನ್ ಜನರಲ್ ಒಂದು ಹೇಳಿಕೆಯನ್ನು ಹೊರಡಿಸಿ, ಜನರ ಧಾರ್ಮಿಕ ಕ್ರಮಗಳು ಮತ್ತು ಜಾತಿಯನ್ನು ಸರ್ಕಾರವು ಗೌರವಿಸುತ್ತಾದರೂ, ಆರೋಗ್ಯ ರಕ್ಷಣಾ ಸಂಬಂಧ, ಸ್ವಾಸ್ಥ್ಯ ಪರಿಪಾಲನೆ ನಿರ್ಮಲೀಕರಣ ಇವುಗಳನ್ನು ಕಾನೂನು ಬದ್ಧವಾಗಿ ಪಾಲಿಸುವುದೆಂದು ತಿಳಿಸಿತು. *೧೭ ಸರ್ಕಾರದ ಈ ಧೋರಣೆ ಅತ್ಯಂತ ನಿಷ್ಠುರವಾಗಿತ್ತು, ಇದಲ್ಲದೆ, ಜನಸಾಮಾನ್ಯರು ಪಾಶ್ಚಾತ್ಯ ಔಷಧ ಪದ್ಧತಿಗೆ ಮಣಿದಿರಲಿಲ್ಲ.

*ಪ್ರತಿಭಟನೆ*

ಜನರು ತಾವು ತಮ್ಮ ಮನೆ ಖಾಲಿ ಮಾಡಿದರೆ ತಮ್ಮ ಆಸ್ತಿ ಪಾಸ್ತಿಯನ್ನು ಬೇರೆಯವರು ದೋಚುತ್ತಾರೆ ಎಂದು ಹೆದರಿದ್ದೇ ಅಲ್ಲದೆ ಸರ್ಕಾರವು ತಮ್ಮ ಆಸ್ತಿ ಪಾಸ್ತಿಯನ್ನು ನೋಡಿಕೊಳ್ಳಲು ಯಾವ ಅಧಿಕಾರಿಯನ್ನು ನೇಮಿಸದಿದ್ದಲ್ಲಿ, ಬೇರೆಯವರ ಪಾಲಿಗೆ ಹೋಗಬಹುದೆಂದು ರೊಚ್ಚಿಗೆದ್ದರು. ಮುಂಬೈನಲ್ಲಿ ಬ್ಯಾಂಕ್ ಇತ್ಯಾದರೂ ತಮ್ಮ ಅಮೂಲ್ಯವಸ್ತುಗಳನ್ನು ಬ್ಯಾಂಕ್‌ನಲ್ಲಿ ಆಗಲಿ ಅಥವಾ ಯಾರಲ್ಲಿಯಾಗಲಿ ಒತ್ತೆಯಿಡಲು, ನಂಬಿಕೆ ದ್ರೋಹವಾಗಬಹುದು ಎಂದು ತಿಳಿದರು. ಅದೂ ಅಲ್ಲದೆ, ಸಾಮಾನ್ಯರಿಗೆ, ಬ್ಯಾಂಕ್ ಎಂಬ ಪದ ಹೊಸತಾಗಿತ್ತು. *೧೮

ಹಲವಾರು ವೃತ್ತಪತ್ರಿಕೆಗಳು, ಸರ್ಕಾರದ ಪ್ಲೇಗ್ ಸಂಬಂಧದ ಕಾನೂನನ್ನು ಟೀಕಿಸಿದವು. ಮತ್ತು ಪ್ಲೇಗ್‌ನಿಂದ ಸ್ಥಳಾಂತರ ಮಾಡುವದನ್ನೂ ವಿರೋಧಿಸಿದವು.

ಪ್ಲೇಗ್ ಪಿಡುಗು ಹೆಚ್ಚು ಆವರಿಸಿದಾಗ ಮತ್ತು ದಿನಕ್ಕೆ ೨೦-೨೫ ಜನರು ಮೃತ ಹೊಂದಿದಾಗ ಜನರು ಹೆಣಗಳನ್ನು ಮುಚ್ಚಿಡುವದಕ್ಕೆ ಪ್ರಯತ್ನಿಸಿದರು. ಆಸ್ಪತ್ರೆಗಳಲ್ಲಿ, ರೋಗಗಳ ಬಗ್ಗೆ ಹೆಚ್ಚಿನ ಕಾಳಜಿ ವಹಿಸುತ್ತಿರಲಿಲ್ಲ. ಜನರು ಆಸ್ಪತ್ರೆಗೆ ಹೋದರೆ 'ಸಾವು ಖಂಡಿತ' ಎಂದು ಭಾವಿಸಿದ್ದರು. Kalidas ಪತ್ರಿಕೆಯು ೨೯ನೇ ಜುಲೈ ೧೮೯೮ರಲ್ಲಿ ಪ್ಲೇಗ್ ಬಗ್ಗೆ ಬರೆಯುತ್ತಾ "ಇಲ್ಲಿಯ *ಕಲೆಕ್ಟರರಲ್ಲಿ ಪ್ಲೇಗ್ ಸಂಬಂಧಿತವಾದ ಕಾರ್ಯಕ್ರಮಗಳು, ಮತ್ತು ಜನರನ್ನು ಮನೆಯಿಂದ ಬೇರ್ಪಡಿಸಿ ಶಿಬಿರಕ್ಕೆ ಕಳುಹಿಸುವ ಮಾರ್ಗವು ಜನರ ಸೂಕ್ಷ್ಮ ಮನಸ್ಸಿನ ಮೇಲೆ ಅತ್ಯಂತ ಪರಿಣಾಮವನ್ನು ಬೀರಿದೆ, ಇದು ಪ್ರಪಂಚದ ಚರಿತ್ರೆಯಲ್ಲಿ ಒಂದು ಕರಾಳ ಭಾಗ*" ಎಂದು ಹೇಳಿತು.

ಮಿಲಿಟರಿ ಶಕ್ತಿಯನ್ನು ಉಪಯೋಗಿಸಿದ್ದರಿಂದ ಹುಬ್ಬಳ್ಳಿಯ ಮೊಗಲ್‌ಖಾನೆಯಲ್ಲಿ ಹೆಚ್ಚಿನ ಪರಿಣಾಮ ಉಂಟಾಗಲಿಲ್ಲ. ನಂದಗಡ ಮತ್ತು ಗಂದಿಗವಾಡಿಯಲ್ಲಿ ಪ್ಲೇಗ್ ಕಾಯಿಲೆ ಬಗ್ಗೆ ವಿರೋಧವಿತ್ತು. ಮಹಮ್ಮದೀಯರ - ಮೊಗಲ್ ಖಾನ್ ಹುಬ್ಬಳ್ಳಿಯಲ್ಲಿ - ಘೋಷಾ ಹೆಂಗಸರು, ತಮ್ಮನ್ನು ಪರೀಕ್ಷಿಸಲು, ಹೆಂಗಸು ಡಾಕ್ಟರ್ ಮತ್ತೂ ನರ್ಸ್‌ಗಳು ಇರಬೇಕೆಂದು ಹಟಹಿಡಿದರು. ಹುಬ್ಬಿ ಕಲೆಕ್ಟರ್, ಆಸ್ಪತ್ರೆಗೆ ಸಾಗಿಸುವದನ್ನು ಜನ ಪಿಶಾಚಿ ಪ್ರವೇಶ ಮತ್ತು ನರಕಕ್ಕೆ ನೂಕುವ ದೌರ್ಜನ್ಯ ಎಂದು ಭಾವಿಸಿದ್ದಾರೆ, ಎಂದು ಮುಂಬೈ ಅಧಿಕಾರಿಗೆ ಬರೆದನು. *೧೯

ಇದಲ್ಲದೆ ಶವದ ಪರೀಕ್ಷೆಯನ್ನು ಮಾಡಿ, ಪ್ಲೇಗ್ ನಿರ್ಧಾರ ಮಾಡಬೇಕೆಂದು ಮುಂಬೈ ಸರ್ಕಾರ ಹೊರಡಿಸಿದ ಕಾನೂನಿಗೆ ಜನರ ತೀವ್ರ ಪ್ರತಿಭಟನೆ ಇತ್ತು. ಧಾರವಾಡದ ಕಲೆಕ್ಟರ್ ಇ. ಎಲ್. ಕಾಪೆಲ್ ಮುಂಬೈ ಅಧಿಕಾರಿಗೆ, "*ಪ್ರತಿಯೊಬ್ಬ ಹಿಂದುವಾಗಲಿ, ಮುಸಲ್ಮಾನನೇ ಆಗಲಿ ಹೆಣವನ್ನು ಸ್ನಾನಮಾಡಿಸಿದ ಮೇಲೆ ಅದನ್ನು ಮುಟ್ಟಲು ಅವಕಾಶ ಕೊಡುವದಿಲ್ಲ. ಅದು ಅಪವಿತ್ರವಾಗುತ್ತದೆ ಎಂದು ಭಾವಿಸಲಾಗುತ್ತದೆ. ಇದು ಅತ್ಯಂತ ಧಾರ್ಮಿಕವಾದ ಮತ್ತು ಸೂಕ್ಷ್ಮವಾದ ವಿಷಯ. ಇದನ್ನು ಸ್ಥಳೀಯ ಆಫೀಸರ್ ನಿರ್ಧರಿಸತಕ್ಕದ್ದು. ಆದರೆ ಧಾರವಾಡದಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಿನದಿರುವದರಿಂದ ಅವರು ನಮ್ಮನ್ನು ಅರ್ಥಮಾಡಿ*

ಕೊಳ್ಳುವರೆಂದು, ಸಹಕರಿಸುವರೆಂದು ನನಗೆ ನಂಬಿಕೆ ಇದೆ'' ಎಂದು ಮುಂಬೈ ಸರ್ಕಾರಕ್ಕೆ ಬರೆದರು. ಆದರೆ ತಾವು ಬೇರೆ ಊರುಗಳ ವಿಷಯದಲ್ಲಿ ನಿರ್ಧಾರಕ್ಕೆಬರುವದು ಸಾಧ್ಯವಿಲ್ಲವೆಂದೂ ತಿಳಿಸಿದರು.

ಸರ್ಕಾರವು ಜನರ ಉದ್ರೇಕವನ್ನು ಮತ್ತು ಜಾತಿ ಪ್ರಶ್ನೆಯನ್ನು ಗಮನಿಸಿ ಶವದ ಪರೀಕ್ಷೆಯನ್ನು ಮಾಡಲೇಬೇಕೆಂಬ ನಿರ್ಧಾರದ ಕಾನೂನನ್ನು ನಿಲ್ಲಿಸಿತು. *೨೦ ಕ್ಯಾಂಪಬೆಲ್ ಕಮಿಟಿಯು ನಿರ್ಧಾರ ತೆಗೆದುಕೊಳ್ಳುವುದಕ್ಕೆ ಮೊದಲೆ ಅದರ ವಿರುದ್ಧ ಸಾಕಷ್ಟು ಪ್ರತಿಭಟನೆ ಮುಂಬೈನಲ್ಲಿ ಆಗಲೇ ನಡೆದದ್ದರಿಂದ, ಸರ್ಕಾರವು ಈ ವಿಷಯವನ್ನು ಹೆಚ್ಚು ಮುಂದುವರಿಯಲು ಬಿಡಲಿಲ್ಲ.

ಪ್ಲೇಗ್ ಕಮೀಷನ್ ಯೂರೋಪಿಯನ್ ಅಧಿಕಾರಿಯ ಪ್ರಕಾರ (೧೮೯೮-೯೯), ''ಶವ ಸಂಸ್ಕಾರ ಸತ್ತ ನಂತರ ಮಾಡಬೇಕಾದ ಮುಖ್ಯ ವಿಧಿ. ಹೆಣ ಸಾಗಿಸದ ಹೊರತು ಊರಿನಲ್ಲಿ ಯಾರೂ ನೀರು ಅಥವಾ ಊಟ ಮಾಡುವ ಹಾಗಿಲ್ಲ,'' ಎಲ್ಲವೂ ನಿಷಿದ್ಧ *೨೧ ಆಗಿತ್ತು.

ಸ್ಥಳೀಯ ಅಧಿಕಾರಿಗಳ ಸಹಾಯವನ್ನು ಸರ್ಕಾರ ಆಗಾಗ ಕೋರುತ್ತಲೇ ಇತ್ತು. *೨೨ ಬ್ರಿಟೀಶರ ದಬ್ಬಾಳಿಕೆಯ ಆಡಳಿತದಲ್ಲಿ ಒಂದಾದ, ಮನೆಯನ್ನು ಶುದ್ಧಗೊಳಿಸುವ ಕ್ರಮದಲ್ಲಿ ಮತಶ್ರದ್ಧೆಯುಳ್ಳ ಬ್ರಾಹ್ಮಣನೊಬ್ಬ ಆತ್ಮಹತ್ಯೆ ಮಾಡಿಕೊಂಡಿದ್ದು ಉದಾ ಇದೆ:

ಧಾರವಾಡದ ಹಯಗ್ರೀವಾಚಾರ್ಯ ಎಂಬ ಧರ್ಮನಿಷ್ಠ, ಪುರೋಹಿತರ ಮನೆಯಲ್ಲಿ ಪ್ಲೇಗ್ ತಲೆದೋರಿತು. ಮನೆಯಲ್ಲಿ ಇದ್ದವರು ಪುರೋಹಿತ ಹಯಗ್ರೀವಾಚಾರ್ಯ, ಅವರ ಪತ್ನಿ, ಭಾವಮೈದುನ ಮತ್ತು ಇಬ್ಬರು ಮಕ್ಕಳು. ಹೆಂಡತಿಯ ಆರೋಗ್ಯ ಸೂಕ್ಷ್ಮವಾಗಿದ್ದರಿಂದ ಪುರೋಹಿತರು ಮನೆಯಲ್ಲಿದ್ದರು ಮತ್ತು ಭಾವಮೈದುನ ಆಸ್ಪತ್ರೆಯಲ್ಲಿ ಪ್ಲೇಗ್ ಸೋಂಕಿದ ಸಂಬಂಧಿಯನ್ನು ನೋಡಿಕೊಳ್ಳುತ್ತಲಿದ್ದ. ಸೊಂಕು ತಗುಲಿದ ಆಚಾರ್ಯರ ಮನೆಯನ್ನು ಶುದ್ಧಗೊಳಿಸಲು ಬ್ರಿಟಿಷ್ ಹೆಲ್ತ್ ಇನ್ಸ್‌ಪೆಕ್ಟರ್ ಮತ್ತು ಅವರ ಇಬ್ಬರು ಸಿಬ್ಬಂದಿಗಳು ಇದ್ದರು. ಬಿಸಿನೀರನ್ನು ಮನೆಯಿಂದ ಕೊಡಲಾಯ್ತು. ಬ್ರಿಟಿಷ್ ಇನ್ಸ್‌ಪೆಕ್ಟರ್ ಬಾಗಿಲಲ್ಲಿ ನಿಂತು, ತನ್ನ ಬೆತ್ತದಿಂದ ಯಾವಜಾಗವನ್ನು ಶುಚಿಮಾಡಿಸಬೇಕೆಂದು ತೋರಿಸುತ್ತಿದ್ದ. ಆ ದಿನ ಪುರೋಹಿತರು ತಮ್ಮ ತಂದೆಯ ಶ್ರಾದ್ಧ ವಿಧಿಯನ್ನು ಮಾಡಬೇಕಾಗಿತ್ತು. ಶುದ್ಧಿ ಮಾಡಲು ಬಂದ ಕೂಲಿ ಆಳುಗಳು ಕೀಳು ಜಾತಿಯಿಂದ ಬಂದವರು. ಸಾಹೇಬ ತನ್ನ ಬೆತ್ತದಿಂದ ಪೂಜೆ ಮಾಡುವ ಮನೆಯನ್ನೂ ಶುದ್ಧಿಗೊಳಿಸುವಂತೆ ಸೂಚಿಸಿದ.

ಸಾಯಂಕಾಲದ ಹೊತ್ತಿಗೆ ಹಯಗ್ರೀವಾಚಾರ್ಯರ ಆತ್ಮಹತ್ಯೆಯ ಪತ್ರ ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟ್ E. J. Cappel ಕೈಸೇರಿತು. E. J. Cappel ತನ್ನನ್ನೂ ಸಾಬೀತು ಪಡಿಸಿಕೊಂಡು, ಶುದ್ಧೀಕರಣಕ್ಕೆ ಆಚಾರ್ಯರಿಂದ ಏನಾದರೂ ವಿರುದ್ಧವಿದ್ದಲ್ಲಿ ಮೊದಲೇ ತಿಳಿಸಬೇಕಾಗಿತ್ತು, ಇನ್ಸ್‌ಪೆಕ್ಟರ್ ಮರಾಠ ಜನರಿಂದ ಶುದ್ಧೀಕರಣ ಮಾಡಿಸುತ್ತಿದ್ದ, ಎಂದದ್ದೇ ಅಲ್ಲದೆ ಹಯಗ್ರೀವಾಚಾರ್ಯ ''was a man of low intelligence'' ಎಂದು ವಾದಿಸಿದರು.

ಹಯಗ್ರೀವಾಚಾರ್ಯರು ತಮ್ಮ ತಂದೆಯ ಶ್ರಾದ್ಧಕ್ಕೆ ಎಲ್ಲಾ ಏರ್ಪಾಡು ಮಾಡಿದ್ದರೂ, ಶ್ರಾದ್ಧ ಮಾಡದೆ ಆತ್ಮಹತ್ಯೆ ಮಾಡಿಕೊಂಡರು. *೨೩ ಇದಕ್ಕೆ ಕೇಸರಿ ಪತ್ರಿಕೆಯು ತನ್ನ ೨೦ನೇ ಸೆಪ್ಟೆಂಬರ್ ೧೮೯೮ರ ಸಂಚಿಕೆಯಲ್ಲಿ ಈ ರೀತಿ ಬರೆಯಿತು:

ಇಷ್ಟು ದಿವಸ ಜನರಿಂದ ಹಲವಾರು ಪತ್ರಬಂದಿದೆ. ಧಾರವಾಡದ ಕಲೆಕ್ಟರ್, ಹಯಗ್ರೀವಾಚಾರ್ಯರ ಆತ್ಮಹತ್ಯೆ, ಅವರಿಗೆ ವ್ಯವಹಾರ ಜ್ಞಾನವಿಲ್ಲದ್ದರಿಂದ ಆದದ್ದು ಎಂದು ತಿಳಿಸಿದ್ದಾರೆ. ಆದರೆ ಅವರ ನಿರಾಶೆ ಹಾಗೂ ತಾವು ಕ್ಷಣಿಸದಿದ್ದರೆ ಮತ್ತು ಮತ್ತೊಬ್ಬರಿಗೆ ತಮ್ಮಿಂದ ತೊಂದರೆಯಾಗಬಾರದೆಂಬ ಬ್ರಾಹ್ಮಣ ತತ್ವವನ್ನೂ ನೆನಪಿಟ್ಟಿದ್ದರಿಂದ ತಾವು ತಮ್ಮ ಸಾವಿಗೆ ಕಾರಣರಾದರು. ಇಲ್ಲದಿದ್ದರೆ ಅವರು ಮಾನಸಿಕ ಸಮತೋಲನ ಕಳೆದುಕೊಂಡಿದ್ದರೆ ರಾಂಡಿ ಸಾಹೇಬನ ಕಾಲದಲ್ಲಿ ನಡೆದ ಪೂನಾದ ಪುನರಾವರ್ತನೆ, ಧಾರವಾಡದಲ್ಲೂ ಆಗುತ್ತಿತ್ತು. *೨೪

ಹಯಗ್ರೀವಾಚಾರ್ಯರ ಆತ್ಮಹತ್ಯೆಯ ವಿಷಯವನ್ನು ಚರ್ಚೆ ಮಾಡಕೂಡದೆಂದು E. J. Cappel ವಿಧಿಸಿದ ಆಜ್ಞೆಯನ್ನು ಖಂಡಿಸಿ ಐದು ಜನ ಮುನಿಸಿಪಾಲಿಟಿ ಮೆಂಬರ್‌ಗಳು ಮತ್ತು ಒಬ್ಬ ನೇಮಿತವಾದ ಮೆಂಬರ್, ತಮ್ಮ ರಾಜೀನಾಮೆ ಸಲ್ಲಿಸಿದರು. *೨೫ ಹಯಗ್ರೀವಾಚಾರ್ಯರ ಪತ್ರ ಮಾತ್ರ ಹೊರಬರಲಿಲ್ಲ. *೨೬ Governor ಲಾರ್ಡ್ ಸ್ಯಾಂಡ್ ಹರ್ಸ್ಟ್ ಅವರು ೧೫ನೇ ಜುಲೈ ೧೮೯೮ರಂದು ಹುಬ್ಬಳ್ಳಿಗೆ ಬಂದಾಗ, ಜನರು ಬಂದು ಮನವಿ ಪತ್ರವನ್ನು ಸಲ್ಲಿಸಿ ತಮ್ಮ ಬೇಡಿಕೆಗಳನ್ನು ಲಿಖಿತ ಮೂಲಕ ಕೊಟ್ಟರು. ಆದರೆ Hurstಗೆ ಸಲ್ಲಿಸಿದ ಮನವಿ ಪತ್ರದಿಂದ ಉಪಯೋಗ ಆಗಲಿಲ್ಲ ಮತ್ತು ಜನರು ಇದು ನಮ್ಮ ಹಣೆಬರಹವೆಂದು ಸುಮ್ಮನಾದರು. *೨೭

## ಇನಾಕ್ಯುಲೇಷನ್

ಮತ್ತೊಂದು ಪ್ಲೇಗ್ ಕಾಯಿದೆಯಂತೆ ಇನಾಕ್ಯುಲೇಷನ್, ಹ್ಯಾಪಕಿನ್‌ರವರ ಇನಾಕ್ಯುಲೇಷನ್ ಚುಚ್ಚು ಮದ್ದು ತೆಗೆದುಕೊಳ್ಳಲು ಮೊದಲು ಜನರು ಭಯಪಟ್ಟರು ಆಮೇಲೆ ಪ್ಲೇಗ್ ಸಾಂಕ್ರಾಮಿಕ ಪಿಡುಗಾಗಿ ಆವರಿಸಿದಾಗ ಜನ ಪಾಶ್ಚಾತ್ಯ ಔಷಧಿಯನ್ನು ಒಪ್ಪಿಕೊಂಡು ಪ್ಲೇಗ್ ತಪ್ಪಿಸಿಕೊಳ್ಳಲು ಜಾಸ್ತಿ ಸಂಖ್ಯೆಯಲ್ಲಿ ಇನಾಕ್ಯುಲೇಷನ್ ಮಾಡಿಸಿಕೊಂಡರು. ಮೊದಲು

ಮಧ್ಯಮ ವರ್ಗದ ಜನರು ಹೆಚ್ಚು ಸಂಖ್ಯೆಯಲ್ಲಿ ಇನಾಕ್ಯುಲೇಷನ್ ಮಾಡಿಸಿಕೊಂಡರು. ಅದೂ ಅಲ್ಲದೆ, ಮಧ್ಯಮ ವರ್ಗದ ಮುಖಂಡರು ತಾವು ಮೊದಲು ಇನಾಕ್ಯುಲೇಷನ್ ಮಾಡಿಸಿಕೊಂಡದ್ದರಿಂದ ಮಿಕ್ಕವರಿಗೆ ಧೈರ್ಯ ಬಂದಿತು. ಕೆಳಜನರಿಗೆ ಸರ್ಕಾರ ಒಪ್ಪಿಕೊಳ್ಳುವಂತೆ ಹಲವಾರು ಪ್ರೋತ್ಸಾಹಕರವಾದ ಆಸೆಗಳನ್ನು ತೋರಿಸಿತು. ೧೮೯೯ರಲ್ಲಿ ಪ್ಲೇಗ್ ಕಮೀಷನ್‌ನನ್ನು ಸರ್ಕಾರ ನೇಮಿಸಿದಾಗ, ಗೋಖಲೆಯವರನ್ನು ಅದಕ್ಕೆ ಸದಸ್ಯರನ್ನಾಗಿ ನೇಮಿಸಿತು. ಆಗ ತಾನೆ ಹಾಪ್‌ಕಿನ್‌ರವರ ಇನಾಕ್ಯುಲೇಷನ್ ಶುರುವಾಗಿತ್ತು. ತಿಲಕರವರು ಇನಾಕ್ಯುಲೇಷನ್ ಅನ್ನು ಜನರಿಗೆ ಕಡ್ಡಾಯ ಮಾಡಬಾರದೆಂದೂ, ಅದು ಇನ್ನೂ ಮೊದಲನೆ ಹಂತದಲ್ಲಿದೆಯೆಂದೂ ವಾದಮಾಡಿದರು. ಆದರೆ ತಿಲಕ್‌ರವರು ಜೈಲು ಸೇರಿದಾಗ ಅವರಿಗೆ ಚುಚ್ಚುಮದ್ದನ್ನು ನೀಡಿ ಕಳುಹಿಸಲಾಯ್ತು. ಡಾ॥ ಬಾಲಚಂದ್ರ ಕೃಷ್ಣ ಬಾಟವಡೇಕರ್, ಚುಚ್ಚುಮದ್ದು ಕಡ್ಡಾಯ ಮಾಡಬೇಕೆಂದು ಅಭಿಪ್ರಾಯಪಟ್ಟರು. ಧಾರವಾಡದ *ಕಾಲಿದಾಸಪತ್ರಿಕೆಯ* ಸಂಪಾದಕ ಕೃಷ್ಣಾಜಿ ಅಂಬಾಜಿ ಗುರೂಜಿ ಇದಕ್ಕೆ ವಿರುದ್ಧವಾಗಿದ್ದರು. ಡಾ॥ ರಾಜಮ್ ಐಯಂಗಾರ್ ಎಂಬ ಹೋಮಿಯೋಪತಿ ಡಾಕ್ಟರ್ ಸ್ನೆಹಿತನನ್ನೂ ಗೋಖಲೆಯವರು ಖುದ್ದಾಗಿ ಧಾರವಾಡಕ್ಕೆ ಕಳುಹಿಸಿದರು. ರಾಜಮ್ ಐಯಂಗಾರ್ ಖುದ್ದಾಗಿ ಧಾರವಾಡಕ್ಕೆ ಭೇಟಿ ಕೊಟ್ಟು *''ಗೊತ್ತಾದ ಪ್ರಮಾಣಕ್ಕೆ ಮಿರಿದ ಔಷಧಿ ಮತ್ತು ಸಿರಿಂಜಗಳನ್ನು ಅನುಭವ ಇಲ್ಲದಿರುವ ಡಾಕ್ಟರ್ ಉಪಯೋಗಿಸುತ್ತಿರುತ್ತಾರ''* ಎಂದು ತಿಳಿಸಿದರು. *೨೮ ***ಕೇಸರಿ ಪತ್ರಿಕೆ,*** ಹಾಪ್‌ಕಿನ್‌ರವರಿಗಿಂತ, ಡಾ॥ ಬಾಲಚಂದ್ರರವರಿಗೆ ಚುಚ್ಚುಮದ್ದಿನಲ್ಲಿ ವಿಶ್ವಾಸ ಹೆಚ್ಚಿದೆ ಅಂತ ಬರೆಯಿತು. ಹುಬ್ಬಳ್ಳಿಯು ವ್ಯಾಪಾರಸ್ಥರ ಸ್ಥಳ. ಅದರ ಜನಸಂಖ್ಯೆ ಸುಮಾರು ೫೨,೦೦೦ ಮತ್ತು ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳಲ್ಲಿ ಅತ್ಯಂತ ಮಳೆ ಸುರಿಯುತ್ತದೆ. ಜನರು ಪೂರ್ಣ ಮನೆಖಾಲಿಮಾಡಿ ಹೊರಗೆ ಶಿಬಿರದಲ್ಲಿ ಇರುವದು ಕಠಿಣವಾದದ್ದು ಮತ್ತು ಪ್ಲೇಗ್ ಶೀಘ್ರವಾಗಿ ಹಬ್ಬುವ ಸಾಧ್ಯತೆ ಇದ್ದು, ಇದನ್ನು ತಡೆಗಟ್ಟುವ ಮಾರ್ಗ ಇನಾಕ್ಯುಲೇಷನ್, *೨೯ ಎಂಬುದು ಜೆ.ಕೆ. ಕಾಂಡನ್ ಅವರ ವರದಿಯಿಂದ ವ್ಯಕ್ತ ಎಂದಾಗಿದ್ದುದು.

ಜನರಿಗೆ ಬೇಕಾದ್ದು ತಾತ್ಕಾಲಿಕ ಶಮನವಲ್ಲ. ಚುಚ್ಚುಮದ್ದು ತಾತ್ಕಾಲಿಕ ಶಮನವನ್ನೂ ಒದಗಿಸುವದು. ಪ್ಲೇಗ್ ನಿವಾರಣೆ ಮಾಡಬೇಕಾದರೆ ಅದಕ್ಕೆ ನಿರ್ಮಲೀಕರಣ, ಆರೋಗ್ಯವ್ಯವಸ್ಥೆ ಇವುಗಳ ವ್ಯವಸ್ಥೆ ನಿರಂತರವಾಗಿ ಮಾಡಬೇಕು. *೩೦ ಈ ಬಗ್ಗೆ ಗೌರ್‍ನರ ಸ್ಯಾಂಡ ಹರ್ಸ್ಟ ಜನಗಳ ಮನಸ್ಸನ್ನು ತಿಳಿಯುವದಕ್ಕೆ ಪ್ರಯತ್ನಮಾಡಲಿಲ್ಲ.

''ಬೆಳಗಾಂನಲ್ಲಿ ಜನರನ್ನು ಚುಚ್ಚುಮದ್ದು ತೆಗೆದು ಕೊಳ್ಳಲೇಬೇಕೆಂದು ಕಡ್ಡಾಯಮಾಡಿದ್ದೇ ಅಲ್ಲದೆ, ಹಲವಾರು ಜಾಗದಲ್ಲಿ ಪ್ಲೇಗ್ ಇಲ್ಲದಿದ್ದರೂ, ಜನರನ್ನು ಮನೆಯಿಂದ ಒತ್ತಾಯವಮಾಡಿ ಕರೆತಂದು ಇನಾಕ್ಯುಲೇಷನ್ ಮದ್ದನ್ನು ಚುಚ್ಚಲಾಗುತ್ತಿತ್ತು.'' *೩೧

ಜನತೆ ತಮಗೆ ಸ್ಥಳೀಯ ಡಾಕ್ಟರ್ ಬೇಕೆಂದೂ, ಅವರು ಸಾಕಷ್ಟು ಅನುಭವಸ್ಥರೂ, ತಮ್ಮನ್ನು ಅರ್ಥಮಾಡಿ ಕೊಳ್ಳುವವರೆಂದೂ ಮತ್ತು ಸ್ಥಳೀಯ ಡಾಕ್ಟರ್‌ಗಳನ್ನು ನೇಮಿಸಿದರೆ ಕಡಿಮೆ ಖರ್ಚಿನಲ್ಲಿ ಸಹಾಯ ಪಡೆಯಬಹುದೆಂದೂ ವಾದಿಸಿದ್ದೇ ಅಲ್ಲದೆ, ನೇಮಿಸಿದ ಸ್ಥಳೀಯ ಅನುಭವಿ ಡಾಕ್ಟರಗಳನ್ನು ಬದಲಾಯಿಸಿ, ಯಾರೋಪಿಯನ್ ಅನನುಭವಸ್ಥ ಡಾಕ್ಟರ್‌ಗಳನ್ನು ಹಾಕುವದರಿಂದ, ಅನಾಹುತವಾಗುವುದೆಂದು ಅಸಂತುಷ್ಟಿಯನ್ನು ವ್ಯಕ್ತಪಡಿಸಿತು ಮತ್ತು ಇನಾಕ್ಯುಲೇಷನ್ ವಿಷಯದಲ್ಲಿ ವಿರುದ್ಧ ಅಭಿಪ್ರಾಯವಿರುವದರಿಂದ ಒತ್ತಾಯ ಹೇರುವದು ಬೇಡ ಎಂದು **ಧಾರವಾಡ ವೃತ್ತ** (೩೦ನೇ ನವೆಂಬರ್ ೧೮೯೯) ಪತ್ರಿಕೆ ಎಚ್ಚರಿಕೆ ನೀಡಿತು. ಕಡ್ಡಾಯ ಇನಾಕ್ಯುಲೇಷ್, ಜನರ ಅಸಮಾಧಾನವನ್ನು ಇನ್ನಷ್ಟು ಹೆಚ್ಚಿಸಿತು. ಕಾರಣ ಇನಾಕ್ಯುಲೇಷನ್‌ನಿಂದ ಬೆಳಗಾಂ ನಲ್ಲಿ ಒಬ್ಬ ಮಹಿಳೆ ಪಾರ್ಶ್ವವಾಯು ಹೊಡೆದು ಸಿವಿಲ್ ಆಸ್ಪತ್ರೆ ಯಲ್ಲಿ ಮಲಗಿದ್ದಳು. E. L. Cappel, ಕಮೀಷನರ್‌ರವರು ಡಾ ॥J. W. Jackson ರವರಿಗೆ ಈ ವಿಷಯವನ್ನೂ ಕೂಲಂಕಶವಾಗಿ ವಿವರಿಸಿ ವರದಿ ಬರೆಯುವಂತೆ ತಿಳಿಸಿದರು. ರಮಾಬಾಯಿ ರಾಮಗೋಪಾಲ್ (Residence No. 2482) ಇನಾಕ್ಯುಲೇಷನ್‌ಗೆ ಮೊದಲು ಆರೋಗ್ಯವಾಗಿದ್ದ ಮಹಿಳೆ. ಇನಾಕ್ಯುಲೇಷನ್ ಮಾಡಿಸಿಕೊಂಡ ೪ ದಿನದ ಮೇಲೆ ಲಕ್ವಹೊಡೆದು ತನ್ನ ಕಣ್ಣು ಮತ್ತು ಮಾತು, ಎಲ್ಲದರ ಸ್ವಾಧೀನವನ್ನೂ ಕಳೆದುಕೊಂಡಳು. ಆದರೆ ಸಿವಿಲ್ ಸರ್ಜನ್ ಮತ್ತು captain, ''ಈ ಮಹಿಳೆಗೆ ಲಕ್ವ ಹೊಡೆದಿಲ್ಲ, ಅವಳ ಬುದ್ಧಿ ಮಟ್ಟವಿಲ್ಲ. ನಿಶ್ಶಕ್ತತೆ ಮತ್ತೂ ಉನ್ಮಾದರೋಗ ಇವಳಿಗೆ ಇದೆ. ಉನ್ಮಾದರೋಗ, ಇನಾಕ್ಯುಲೇಷನ್ ಭಯದಿಂದ ಹೆಚ್ಚಿದೆ'' ಎಂದು ಹೇಳಲು, ರಮಾಬಾಯಿ ರಾಮಗೋಪಾಲ್ ಕೇಸ್ ಈ ರೀತಿ ಕೊನೆಗಂಡಿತು.

ಇನ್ನು ಗದಗ್ ಬೆಟಗೇರಿಯಲ್ಲಿನ ಇನ್ನೊಂದು ಚಿತ್ರ ಹೀಗಿದೆ: ಪ್ಲೇಗು ಗದಗ್ ಆವರಿಸಿದ್ದು ನವೆಂಬರ್ ೧೮೯೮ರಲ್ಲಿ. ಗದಗ್ ಜನಸಂಖ್ಯೆ ಸುಮಾರು ೨೩,೮೯೯. ಗದಗಿನಲ್ಲಿ ಜನ ಇನಾಕ್ಯುಲೇಷನ್ ಅನ್ನು ಸ್ವಾಗತಿಸಿದರು. ಡಾ ॥ ಅಲೆಸ್ corthorn ಮೆಡಿಕಲ್ ಆಫೀಸರ್ ಆಗಿ ಪ್ಲೇಗ್ ಡ್ಯೂಟಿಗೆ ಬಂದಾಗ (ಫೆಬ್ರುವರಿ ೧೮೯೯) ಅವರಿಗೆ ಸಿಕ್ಕ ಭವ್ಯ ಸ್ವಾಗತವನ್ನು ಅವರು ಬರೆದಿರುವ ರಿಪೋರ್ಟ್‌ನಲ್ಲಿ ಕಾಣುತ್ತೇವೆ: *''ಜನರು ಬೆಳಗಿನಿಂದ ಕಾದು, ತಮಗೆ ಇನಾಕ್ಯುಲೇಷನ್ ಮಾಡಬೇಕೆಂದು ಕೋರಿದರು. ಇದಲ್ಲದೆ ತಮ್ಮ ತಮ್ಮ ಮನೆಗಳಲ್ಲಿ ಏರ್ಪಾಡು ಮಾಡುತ್ತಿದ್ದರು. ಹೀಗಾಗಿ ಬೆಳಿಗ್ಗೆ ಸಾಮಾನ್ಯ ಜನರಿಗೂ ಮಧ್ಯಾಹ್ನ ಮನೆ ಮನೆಗೂ ಹೋಗಿ ಇನಾಕ್ಯುಲೇಷನ್*

ಮಾಡಬೇಕಾಯ್ತು.''*೩೩ ಹೀಗಾಗಿ, ಜನರು ತಮ್ಮ ಸರ್ತಿ ಬರುವವರೆಗೂ ಕಾಯುತ್ತಿದ್ದರು. ಜನರು ಅತ್ಯಂತ ನಿಷ್ಠೆಯಿಂದ ಕಾಯ್ದಿದ್ದರಿಂದ ದಿನಕ್ಕೆ ೬೦೦ ಜನರ ಪ್ರಕಾರ ಒಂದು ವಾರದಲ್ಲಿ ೪೨೦೦ inoculation ಮಾಡಲು ಸಾಧ್ಯವಾಯಿತು.

*''ಜನರು ನಮಗೆ ಸಾಧ್ಯವಾದ ಎಲ್ಲಾ ಸೌಕರ್ಯವನ್ನು ಮಾಡಿಕೊಟ್ಟು, ಸಾಯಂಕಾಲ ದೀಪದ ಬುಡ್ಡಿಯನ್ನು ಒದಗಿಸಿದರು. ಮುಸಲ್ಮಾನರೂ ನಮಗೆ ಸಹಕರಿಸಿದರು. ಎರಡು ಹಗ್ಗವನ್ನು ಎರಡು ಮಾರ್ಗದಲ್ಲಿ ಹಿಡಿದುಕೊಂಡು ಒಂದು ಟೇಬಲ್, ಒಂದು ಕುರ್ಚಿ ಹಾಕಿ, ಎರಡು ಬುಡ್ಡಿ ದೀಪವನ್ನು ಹಿಡಿದುಕೊಂಡು, ಬಿದಿಗೆ ಚಂದ್ರನ ಬೆಳಕಿನಲ್ಲಿ ನಾನು ಹಲವು ಸಹಸ್ರ ಜನರಿಗೆ ಇನಾಕ್ಯುಲೇಷನ್ ಮಾಡಲು ಸಾಧ್ಯವಾಯಿತು. ಈ ರೀತಿ ಚುಚ್ಚುಮದ್ದು ಮುಗಿಯುವವರಗೆ ಮಾಡಿದ.''*

ಗದಗ್ ಮತ್ತು ಬೆಟಗೇರಿಯಲ್ಲಿನ ಜನರ ಇನಾಕ್ಯುಲೇಷನ್ ಉತ್ಸಾಹಕ್ಕೆ ನಾವು ಈ ರೀತಿ ಕಾರಣ ಕೊಡಬಹುದು. ಗದಗ್, ಬೆಟಗೇರಿಯಲ್ಲಿ ಪ್ಲೇಗ್, ಧಾರವಾಡದಂತೆ ಭಯಂಕರವಾಗಿ ಆವರಿಸಿರಲಿಲ್ಲ. ಹುಬ್ಬಳ್ಳಿ ಧಾರವಾಡ, ಬೆಂಗಳೂರಿನಲ್ಲಿ ಪ್ಲೇಗ್ ಪಿಡುಗು ಲಕ್ಷಾಂತರ ಜನರನ್ನು ಬಲಿ ತೆಗೆದುಕೊಂಡಿತ್ತು. ಇದಲ್ಲದೆ ಬೆಟಗೇರಿಯು ರೈಲ್ವೆ ಸಂಪರ್ಕವನ್ನು ಹೊಂದಿತ್ತು. ಬೆಟಗೇರಿಯು ಮುಕ್ಕಾಲು ಜನ ನೂಲು, ನೇಯ್ಗೆಯಿಂದ ಜೀವನ ಮಾಡುವವರು. ತಮ್ಮ ವ್ಯಾಪಾರವನ್ನು ಬಿಟ್ಟು ಹೋಗುವುದೆಂದರೆ ಅಪಾರ ನಷ್ಟವಾಗುತ್ತಿತ್ತು. ಧಾರವಾಡ, ಹುಬ್ಬಳ್ಳಿಯಲ್ಲಿ ಜನರಿಗೆ ಕೊಟ್ಟ Bonus, ಗದಗ್ ಜನರಿಗೆ ಕೊಡಲಾಯ್ತು. ಅದೇನೆಂದರೆ, ಇನಾಕ್ಯುಲೇಷನ್ ಎರಡು ಸಾರ್ತಿ ಮಾಡಿಸಿಕೊಂಡರೆ, ಮಾಡಿಸಿಕೊಂಡವನು ಮನೆಬಿಟ್ಟು ಕ್ಯಾಂಪ್‌ನಲ್ಲಿ ಇರಬೇಕಾಗಿಲ್ಲ ಮತ್ತೂ ತಮ್ಮ ಕೆಲಸದಲ್ಲಿ ಮುಂದುವರಿಯಬಹುದು. ಈ ಅವಕಾಶವನ್ನು ಕಳೆದುಕೊಳ್ಳಲು ಜನರು ಸಿದ್ಧವಿರಲಿಲ್ಲ. ಸಂಸಾರಕ್ಕೆ ಇನಾಕ್ಯುಲೇಷನ್‌ಗೋಸ್ಕರ ಸಂಸಾರ ಒಂದಕ್ಕೆ ೨ರೂ ವಸೂಲ್ಮಾಡಿದರೂ ಜನರು ಕೊಡಲು ತಯಾರಿದ್ದರು, ಇದರಿಂದ ಸರ್ಕಾರಕ್ಕೆ ೩೦೦೦ ರೂ. ಲಾಭದಾಯಕವಾಯ್ತು. ಹೀಗಾಗಿ ಗದಗನ ಎಲ್ಲಾ ಜನರೂ ಅಂದರೆ ೨೪,೫೩೦ ಜನ ಇನಾಕ್ಯುಲೇಷನ್‌ಗೆ ಮಣಿದರು.

*ಪ್ಲೇಗಿನಿಂದ ಉಂಟಾದ ಪರಿಣಾಮ ಎಂದರೆ ಹಲವಾರು. ಶಾಲಾವಿದ್ಯಾರ್ಥಿಗಳಿಗೆ ಹಲವಾರು ದಿನಗಳ ಕಾಲ ಮಾಸ್ತರಗಳಿಲ್ಲದೆ, ಶಾಲೆಯನ್ನು ಮುಚ್ಚಲಾಗಿತ್ತು. ಪ್ಲೇಗ್‌ನಿಂದ ವ್ಯಾಪಾರ ವರ್ಗದವರಿಗಾದ ಹಾನಿ ಅಪಾರ. ಸ್ಯಾನಿಟೇರ್ಷ ಆಕ್ಟ್ ಗಲರ್ಲರಲ್ಲಿ ಆರಂಭಿಸಿದ್ದರೂ ಕೆಲವೇ ಹಳ್ಳಿಗಳಲ್ಲಿ ಸ್ಯಾನಿಟರಿ ಪುಸ್ತಕವನ್ನು ಬರೆದಿರುತ್ತಿದ್ದರು. ಅದೂ ಅಲ್ಲದೆ ಬೆಳಗಾಂನ ೬ ಹಳ್ಳಿಗಳಲ್ಲಿ ಮತ್ತು ಧಾರವಾಡದ ೨೦ ಹಳ್ಳಿಗಳಲ್ಲಿ ಮಾತ್ರ ಈ ಸ್ಯಾನಿಟರಿ ಪುಸ್ತಕದ ವ್ಯವಸ್ಥೆ ಇತ್ತು.*

*ಪ್ಲೇಗ್ ಪರ ಹೇಳುವದಾದರೆ, ಸರ್ಕಾರ ಎಚ್ಚೆತ್ತು, ಟೌನ್ ಪ್ಲಾನಿಂಗ್‌ಗೆ ಮುಖ್ಯ ಪ್ರಾಮುಖ್ಯತೆಯನ್ನು ಕೊಡುವಂತಾದ್ದು.*

ಸರ್ಕಾರವು ಪ್ಲೇಗ್ ಕ್ರಮಗಳಿಂದ, ಪ್ಲೇಗ್ ತಡೆಗಟ್ಟಲು ಯತ್ನಿಸಿದ್ದು ನಿಜ.ಆದರೆ ಜನರಿಗೆ ಇದರ ಅವಶ್ಯಕತೆಯ ತಿಳಿವು ಇರಲಿಲ್ಲ. ಇದರಿಂದ ಹಲವಾರು ತಪ್ಪುಭಾವನೆಗಳು ಉಂಟಾದವು.

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಕೇಸರಿ, 20 sept. 1898

*೨. Report of the Plague Commission, para, 105

*೩. Upto to the end of 1903-4 the death in Dharwar district amounted to 1,49857 or 13% of the population, and in Belgaum the death total was 1,83000 or 11% of the population [Gazetteer of Bombay Presidency, vol.XXI - B; vol. XII - B, Dharwar & Saranur, p. 3]

*೪. C. G. Pandit: Agra University Extension lectures, 1958, p.3. & E. H. Hankin: **The Bubonic Plague**., 1899. see also Visvakosha. vol. II, 1957, p. 535

*೫. Liston, W. G: The Causes and Prevention of the Spread of Plague in India; A lecture delivered before the Bombay Sanitary Association on 11th Dec. 1907

*೬. V. P. Madhav Rao: Report on Plague operations in the Mysore State 1898-99, p. 1

*೭. Cecil woodham smith: **Florence Nightingale** 1820-1910, London, 1955, p. 408

*೮. From the minutes of Evidence taken by the Indian Plague Commission, Appendices. vol. I, 12th Dec. 1898, p. 102

*೯. Gushafson : Mysore a Model State, 1881-1902 unpublished PHD Thesis, Wislon Sin University - 19

*೧೦. The total no. of people inoculated till 30th June 1899 was 36, 299 of which 34832 were first inoculated and 1427 got inoculated for the second time

*೯. Curzon: Lord Curzon in India being a selection from his specehes - 1898-1905, London, Macmillan, 1906

*೧೦. Minitues of Evidence taken by the Indian Plague Commission, Appendices, vol. I, p. 105.
- Many people believed that when a man goes to the Plague Hospital he goes there to die. It is the compulsion which is objected to.

*೧೧. V. P. Madhav Rao: Report on Plague operations in the city of Mysore state 1898 - 1899, p.33.
*G. A. Natesan; *Indian Statesmen Dewans and Prime ministers*, Madras, n. d. p. 138

*೧೨. **Hitavadi**, 26 March 1897. (Bengal)

*೧೩. Evan Machanochie was in the Indian Civil Service and had put in Service in India. He was aksed to be in the committee to work in the improvement of the city. The members included : (1) AchutRao,Civil Surgeon, (2) M. Venkatakrishniah, editor of Mysore Herald (3) JEAD'Cruz Engineer P.W.D.
*Evan Machanochie : Life in the Indian Civil Service. 1926. p.153. London, Chapman wall,

*೧೪. J. K. Condon: The Plague being a history of the progress of Plague in the Bombay Presidency from September 1896 to June 1899, p.I. 1900

*೧೫. **Gazetteer of the Bombay Presidency**. vol XXI-B, P. V. Belgaum - 1926

*೧೬. (GL) Plague vol. 90. 1897. (MSA) Maharastra State Archives

*೧೭. Report of the NNP. Rasika Ranjani. 15/Jan/1898. M. E. ouchman : Account of Plague Administration in the Bombay Presidency from Sept 1896 till May 1897, Bombay, 1897, p. 3, 32

*೧೮. Plague vol. 699. 1898, see also. Madhu Masika 5th Feb 1898, **Rajahamsa**, 23 Feb 1898

*೧೯. Plague vol. 746 of 1899. page 61, 64 (MSA)

*೨೦. G. D. Plague vol. 382. 1898, p.479-80. Corpse Inspection Correspondence

*೨೧. ಇದರ ಬಗ್ಗೆ ಅನಂತಮೂರ್ತಿಯವರ 'ಸಂಸ್ಕಾರ'ದಲ್ಲಿ ನಾವು ವಿವರ ಕಾಣಬಹುದು.

*೨೨. Annual Report of the Sanitary Commissioner, 1898. p. 173

*೨೩. **Lok Bandhu**, 11th Sept. 1898

*೨೪. **Kesari**, 20th Sept. 1898

*೨೫. **Mahratha**, 11/Sept/1898

*೨೬. **Karnata Vritha**, 20th Sept. 1898

*೨೭. **Hublipatra**, 25th July 1898, Gujarati 25th Sept. 1898, **Karnataka patra** 26, Sept, 1898, **Arunodaya**, 25th Sept. 1898 Jagadhitechu, 24/Sept/1898

*೨೮. D. B. Mathur: Gokhale; A Political biography, 1966, p. 54

*೨೯. J. K. Condon: The Bombay Plague being a history of the Progress of Plague in the Bombay Presideney from September 1896 to June 1899, 1900, p. 45

*೩೦. **Gujarati**, 20th Aug. 1898

*೩೧. **Induprakash**, 2nd Oct. 1899

*೩೨. Bombay Plague, vol. no 591 of 1898, p. 455. Correspondence file between E. L. Cappel and Dr. J. W. Jackson

*೩೩. Alice M. Corthorn: Gadag and Betigeri, August - 1898 - May 1899

ಡಾ॥ ಸೂರ್ಯನಾಥ ಯು. ಕಾಮತ್ *

# ಪಾರಂಪರಿಕ ಕೈಗಾರಿಕೆಗಳ ನಾಶ : ಹಿಂದುಳಿದ ವರ್ಗಗಳ ಚಳವಳಿಗೆ ನಾಂದಿ

ಬ್ರಿಟಿಷರ ಆಡಳಿತ ಬಂದ ನಂತರ ಪಾಶ್ಚಾತ್ಯ ಶಿಕ್ಷಣದ ಜೊತೆ ಸರಕಾರದಿಂದ ಬೆಂಬಲ ಪಡೆದ ಶಿಕ್ಷಣ ವ್ಯವಸ್ಥೆ ಸಾರ್ವತ್ರಿಕವಾಯಿತು. ಸರಕಾರೀ ನೌಕರಿಯ ಬಾಗಿಲುಗಳು ಎಲ್ಲರಿಗೂ ತೆರೆದುಕೊಂಡವು. ಪಾರಂಪರಿಕವಾಗಿ ಅಗ್ರಹಾರಗಳಲ್ಲಿ ದೇವಾಲಯಗಳಲ್ಲಿ ಆಸರೆ ಪಡೆದಿದ್ದ ಬ್ರಾಹ್ಮಣರು ಇನಾಮು ಭೂಮಿಗಳನ್ನು ಕಳೆದುಕೊಂಡಾಗ ಸರಕಾರೀ ನೌಕರಿಗಳಿಗೆ ನೂಕುನುಗ್ಗಲು ಮಾಡಿದರು. ಪೋಲೀಸ್ ಇಲಾಖೆಯಲ್ಲೂ ಬ್ರಾಹ್ಮಣರ ಸಂಖ್ಯೆ ಸಾಕಷ್ಟು ಇತ್ತು. ಬ್ರಿಟಿಷರ ಆಗಮನದ ಪೂರ್ವದಲ್ಲೂ ಕಂದಾಯ ಮತ್ತು ಇತರ ಲೇಖನಿ ವ್ಯವಸಾಯದ ಇಲಾಖೆಗಳಲ್ಲಿನ ಸರಕಾರೀ ಹುದ್ದೆಗಳಲ್ಲಿ ಬ್ರಾಹ್ಮಣರೇ ಹೆಚ್ಚಿದ್ದರು. ಇಂಗ್ಲಿಷ್ ಶಿಕ್ಷಣ ಪಡೆಯುವಲ್ಲಿ ಕೂಡ ಬ್ರಾಹ್ಮಣರು ಮೊದಲಿಗರಾದರು.

ಆದರೆ ಎಲ್ಲ ಸರಕಾರೀ ನೌಕರಿಗಳನ್ನು ಬ್ರಾಹ್ಮಣರೇ ಬಾಚಿಕೊಂಡರೆಂದು ಭಾವಿಸಬೇಕಾಗಿಲ್ಲ. ಬ್ರಾಹ್ಮಣರು ವೈದಿಕ ಪರಂಪರೆಯನ್ನು ಆಚರಿಸಿ ಬದುಕಲಾರದೆ ವ್ಯಾಪಾರ, ಹೊಟೇಲು, ಹೈನಗಳ ಉದ್ಯೋಗ ಆರಂಭಿಸಿದ್ದರು. ೧೯ನೆಯ ಶತಮಾನದ ಆರಂಭಕ್ಕೆ ಸಾಲಿಗ್ರಾಮ ತೊಳೆಯುತ್ತಿದ್ದ ಬ್ರಾಹ್ಮಣರು ಸಾಲು ಸಾಲು ಎಮ್ಮೆಗಳ ಬೆನ್ನು ತೊಳೆಯುತ್ತಿದ್ದಾರೆಂದು ಪ್ರಾಣೇಶದಾಸರು ಲೇವಡಿ ಮಾಡಿದ್ದನ್ನು ಗಮನಿಸಬಹುದು.

ಹಿಂದಿನ ಅನೇಕ ಹಿರಿಕಿರಿ ಪಾಳೆಯಗಾರರ ಸೈನ್ಯದಲ್ಲಿ ಕಂದಾಚಾರದ ಪೋಲೀಸ್ ಇಲಾಖೆಯಲ್ಲಿ ಬ್ರಾಹ್ಮಣೇತರರಿಗೆ ಇದ್ದ ಅವಕಾಶಗಳು ಬ್ರಿಟಿಷ್ ಸರಕಾರ ಬಂದ ಮೇಲೆ ಕಡಿಮೆಯಾದವು. ಜೊತೆಯಲ್ಲಿ ಕೈಗಾರಿಕೆಗಳ ನಾಶದಿಂದ ಬ್ರಾಹ್ಮಣೇತರರು ಕಂಗೆಟ್ಟರು.

ಮುಖ್ಯವಾಗಿ ಸರಕಾರೀ ನೌಕರಿಗೇ ನೂಕುನುಗ್ಗಲಾಗುವ ಪರಿಸ್ಥಿತಿಯಿಂದ ಹಿಂದುಳಿದ ವರ್ಗಗಳ ಪುರೋಗಮನ ಚಳವಳಿಗಳು ಮೊದಲಿಟ್ಟವು. ಹಿಂದುಳಿದ ವರ್ಗಗಳ ಆರ್ಥಿಕ ಸಂಕಷ್ಟಗಳೇ ಇಂಥ ಚಳವಳಿಗೆ ಕಾರಣ. ಇಂಥ ಚಳವಳಿಗಳಲ್ಲಿ ಧಾರವಾಡದ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಘ (೧೮೮೩) ವೀರಶೈವ ಮಹಾಸಭಾ (೧೯೦೪), ಬೆಂಗಳೂರಿನ ಒಕ್ಕಲಿಗರ ಸಂಘ (೧೯೦೬), ಸೆಂಟ್ರಲ್ ಮೊಹಮ್ಮಡನ್ ಎಸೋಸಿಯೇಶನ್, ಉತ್ತರ ಕರ್ನಾಟಕದ ರೆಡ್ಡಿ ಎಜುಕೇಶನ್ ಅಂಡ್ ಸೋಶಿಯಲ್ ಲೀಗ್ (೧೯೧೬), ಬೆಳಗಾವಿಯ ಕೆ. ಎಲ್. ಇ. ಸೊಸೈಟಿ (೧೯೧೬), ಮಂಗಳೂರಿನ ಬಂಟರ ಯಾನೆ ನಾಡವರ ಸಂಘ (೧೯೦೭), ಪ್ರಜಾಮಿತ್ರ ಮಂಡಳಿ (೧೯೧೭), ಹುಬ್ಬಳ್ಳಿಯ ಬ್ರಾಹ್ಮಣೇತರ ಪರಿಷತ್ (೧೯೨೦) ಈ ರೀತಿ ಆರಂಭವಾದ ಹಲವು ಸಂಸ್ಥೆಗಳು ಮುಖ್ಯವಾಗಿ ಹಿಂದುಳಿದವರ ಶಿಕ್ಷಣ ಮತ್ತು ನೌಕರಿಗಳಿಗೆ ಸಂಬಂಧಿಸಿದ ಸಮಸ್ಯೆಗಳ ಪರಿಹಾರಕ್ಕೆ ದುಡಿದವುಗಳಲ್ಲಿ ಕೆಲವು. ಪ್ರಜಾಮಿತ್ರ ಮಂಡಲಿ ಹಾಗೂ ಬ್ರಾಹ್ಮಣೇತರ ಪರಿಷತ್ ರಾಜಕೀಯವಾಗಿಯೂ ಶ್ರಮಿಸಿದವು.

ಆದರೆ ಉದ್ಯೋಗದ ಕ್ಷೇತ್ರದಲ್ಲಿ ಭಾರೀ ನಿರ್ವಾತ ಸೃಷ್ಟಿಯಾಗಲು, ಬ್ರಿಟಿಷರ ಸಾಮ್ರಾಜ್ಯಶಾಹೀ ನೀತಿಯಿಂದಾಗಿ ಭಾರತದ ಸರ್ವವ್ಯಾಪಿಯಾಗಿದ್ದ ಗುಡಿ ಕೈಗಾರಿಕೆಗಳ ನಾಶವೇ ಕಾರಣ. ಕರ್ನಾಟಕವೂ ಇದಕ್ಕೆ ಹೊರತಾಗಿರಲಿಲ್ಲ. ಕೈಮಗ್ಗ, ಗೋಣಿನೆಯ್ಗೆ, ಉಪ್ಪಿನ ಉತ್ಪಾದನೆ, ಕಬ್ಬಿಣದ ಹಾಗೂ ಉಕ್ಕಿನ ಉದ್ಯಮ, ಬೆಲ್ಲ, ಗಾಣದ ಎಣ್ಣೆ, ಕಂಬಳಿ ನೇಯ್ಗೆಯಂಥ ಅನೇಕ ಗೃಹ ಕೈಗಾರಿಕೆಗಳು ಅಂಶತಃ ಅಥವಾ ಪೂರ್ಣನಾಶವಾದವು. ಇಂಗ್ಲಂಡ್‌ನಲ್ಲಾದ ಕೈಗಾರಿಕಾ ಕ್ರಾಂತಿ ಇದಕ್ಕೆ ಮುಖ್ಯ ಕಾರಣ. ಲಕ್ಷಲಕ್ಷ ಜನ ಆಗ ನಿರುದ್ಯೋಗಿಗಳಾದರು. ನಿರುದ್ಯೋಗದಿಂದ ಉಪವಾಸ ಬಿದ್ದು ಸತ್ತವರ ಸಂಖ್ಯೆಯೂ ಬಲು ದೊಡ್ಡದು.

ಭಾರತ ಕೃಷಿ ಪ್ರಧಾನ ದೇಶವೆನ್ನಲಾಗುತ್ತದೆ. ಆದರೆ

* ಮುಖ್ಯಸಂಪಾದಕರು (ನಿವೃತ್ತ), ಕರ್ನಾಟಕ ಗ್ಯಾಸೆಟಿಯರ್– ‘ಕೀರ್ತಿ [illegible], ೧೧ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು - ೫೬೦ ೦೧೯

ಪ್ರಾಚೀನ ಭಾರತ ಕೈಗಾರಿಕೆಯಲ್ಲೂ ಗಣ್ಯ ದೇಶವಾಗಿತ್ತು. ಬಟ್ಟೆಯ ಕೈಗಾರಿಕೆಯು ಭಾರತದ್ದೇ ಎನ್ನುವಷ್ಟು ಗುತ್ತೇದಾರೀ ಪರಿಸ್ಥಿತಿ ಇತ್ತು. 'ಮುಸ್ಲಿನ್' ಮಥುರಾ ಪಟ್ಟಣದಿಂದ, 'ಕ್ಯಾಲಿಕೋ' ಕಲ್ಲಿಕೋಟೆಯಿಂದ, 'ಮಕಮಲ್' ಡಾಕಾದಿಂದ ರಫ್ತಾಗುತ್ತಿದ್ದು, ಇವು ಬಟ್ಟೆಗಳ ಖ್ಯಾತ ನಮೂನೆಗಳಾಗಿದ್ದು ಯಂತ್ರೋತ್ಪಾದಿತ ಇಂಗ್ಲೆಂಡಿನ ಬಟ್ಟೆಗಳಿಗೂ ಇದೇ ಹೆಸರುಗಳನ್ನು ಬಳಸಿದರು. ಯಂತ್ರಗಳ ಸ್ಪರ್ಧೆ ಇದ್ದರೂ ಈಗಲೂ ಮೇಲುಕೋಟೆ ಪಂಚೆ, ಇಳಕಲ್ ಅಥವಾ ಮೊಳಕಾಲ್ಮೂರು ಸೀರೆ, ಅಥವಾ ಗುಳೇದ ಗುಡ್ಡ ಖಣದ ಖ್ಯಾತಿ ಕಡಿಮೆ ಆಗಿಲ್ಲ. ಹಿಂದೆ ಅವುಗಳು ಅತ್ಯಂತ ಹೆಮ್ಮೆಯ ಸ್ಥಾನದವಾಗಿದ್ದವು. ಬುಕಾನನ್ ಹೇಳುವಂತೆ (೧೮೦೦-೧೮೦೧) ಕರ್ನಾಟಕದ ಅತ್ಯಂತ ಗಣ್ಯ ನೇಯ್ಗೆ ಕೇಂದ್ರಗಳಲ್ಲಿ ಬೆಂಗಳೂರು ಒಂದು. ಪಟ್ಟೆಗಾರರು, ಖತ್ರಿಗಳು, ದೇವಾಂಗದವರು, ಶಯನಗಾರರು ಪದ್ಮಸಾಲಿ, ಸಮಯಸಾಲಿ, ಕುರುಹಿನ ಶೆಟ್ಟರು, ಬಿಳಿಮಗ್ಗ, ಹೊಲೆಯರು ಇವರೆಲ್ಲ ಇಲ್ಲಿ ನೇಯ್ಗೆ ಮಾಡುವ ಜಾತಿಯ ಜನರು. ನೀಲಗಾರರು ಬಣ್ಣಹಾಕುವವರು. ಇದಕ್ಕೂ ಹಿಂದೆ ಚಿಕ್ಕದೇವರಾಯರ ಕಾಲದಲ್ಲೇ ಬೆಂಗಳೂರಲ್ಲಿ ೧೨,೦೦೦ ನೇಕಾರ ಕುಟುಂಬಗಳಿದ್ದುವೆಂದು ನಾವು ಕೇಳಿದ್ದೇವೆ ಎಂದಾಗ, ಆಗಿನ್ನೂ ಶ್ರೀರಂಗಪಟ್ಟಣದ ಹೈದರ್, ಟಿಪ್ಪುಗಳ ಆಸ್ಥಾನದಿಂದ ಪ್ರೋತ್ಸಾಹಿತವೂ ಆಗಿದ್ದ ಬೆಂಗಳೂರಿನ ನೇಯ್ಗೆ ಕೈಗಾರಿಕೆಯ ಹಿರಿಮೆ ಏನೆಂದು ಹೇಳಬೇಕಾಗಿಲ್ಲ.

ಇದಲ್ಲದೆ ಬ್ರಾಹ್ಮಣರ ವಿನಾ ಎಲ್ಲ ಜಾತಿಯ ಮಹಿಳೆಯರು ಮನೆಯಲ್ಲಿ ಇಡೀ ದಿನ ನೂಲುತ್ತಾರೆ; ಬೆಂಗಳೂರ ಮಹಿಳೆಯರ ನೂಲಂತೂ ಅತ್ಯಂತ ನವಿರಾದದ್ದೆಂದು, ಅವನು ಹೇಳುತ್ತಾನೆ. ವಾರಕ್ಕೊಮ್ಮೆ ಸಂತೆಗೆ ತಾವು ನೂತ ನೂಲು ತಂದು ಅದರ ಬದಲಿಗೆ ಮುಂದಿನ ವಾರಕ್ಕೆ ತಮಗೆ ಬೇಕಾಗುವ (ಕಚ್ಚಾ) ಅರಳೆ ಹಾಗೂ ಮನೆಗೆ ಬೇಕಾಗುವ ಲವಾಜಮೆಗಳನ್ನು ಅವರು ಒಯ್ಯುತ್ತಾರೆಂದೂ ಬುಕಾನನೇ ಹೇಳಿದ್ದಾನೆ. ಬೆಂಗಳೂರಷ್ಟೇ ಅಲ್ಲ ಇಡೀ ಸಂಸ್ಥಾನದಲ್ಲಿ ಎಲ್ಲೆಡೆ, ಹಳ್ಳಿಗಳ ರೈತ ಮಹಿಳೆಯರೂ ಎಡೆಬಿಡದೆ ನೂಲಿನ ಕಾಯಕದಲ್ಲಿ ನಿರತರೆಂದು ಅವನು ತಿಳಿಸುತ್ತಾನೆ. ಹೊಲೆಯ ಮತ್ತು ಗೊಲ್ಲ ಮಹಿಳೆಯರು ಚಕ್ರದ ನೂಲುಗಾರರೆಂದೂ ಅವನು ಹೇಳುತ್ತಾನೆ. ಕರ್ನಾಟಕದ ವಿವಿಧ ಕೇಂದ್ರಗಳಲ್ಲಿ ಸಾವಿರ ಸಾವಿರ ನೇಕಾರರಿದ್ದರೆ, ಲಕ್ಷ ಲಕ್ಷ ನೂಲುವ ಮಹಿಳೆಯರಿದ್ದರು. ನೂಲುವ ಮಹಿಳೆಗೆ ಸರಿಸುಮಾರಿಗೆ ಜಮೀನಿನಲ್ಲಿ ದುಡಿಯುವದರಷ್ಟೇ ದಿನಗೂಲಿ ಸಿಗುತ್ತಿದೆಂದೂ ಅವನು ಹೇಳುತ್ತಾನೆ. ಬಳ್ಳಾರಿ, ಬಾದಾಮಿ, ಬಾಗಲ್‌ಕೋಟೆ, ರಾಯ್ಚೂರು, ಹುಬ್ಬಳ್ಳಿ, ಕೊಡಿಯಾಳ, ಹರಿಹರ, ಗದಗ, ರಾಣಿಬೆನ್ನೂರು, ಗಜೇಂದ್ರಗಡ, ಮುನವಳ್ಳಿ ಹೀಗೆ ನಾಡಿನ ಎಲ್ಲೆಡೆ ಈ ನೂಲಿನ, ನೇಯುವ ಕೈಗಾರಿಕೆ ವ್ಯಾಪಕವಾಗಿತ್ತು. ೧೬೩೮ರಲ್ಲಿ ಆರಂಭವಾದ ಬ್ರಿಟಿಷರ ಕಡವಾಡ (ಕಾರವಾರ ಬಳಿ) ಮಳಿಗೆ ಒಳನಾಡಿನ ೫೦,೦೦೦ ಮಗ್ಗಗಳಿಂದ ಬಟ್ಟೆ ಖರೀದಿಸುತ್ತಿತ್ತು. ಆದರೆ ಇಂಗ್ಲಂಡಿನಲ್ಲಿ ಕೈಗಾರಿಕಾ ಕ್ರಾಂತಿ ಆಗಿ ಮೆಂಚೆಸ್ಟರ್, ಲಿವರಪೂಲ್ ಮುಂತಾದೆಡೆ ಯಾಂತ್ರಿಕ ನೇಯ್ಗೆ ಆರಂಭ ಆದಾಗ ಈ ಕೈಗಾರಿಕೆ ನಮ್ಮ ನಾಡಲ್ಲಿ ವಿನಾಶದ ಅಂಚು ಹಿಡಿಯಿತು. (ಇಂಗ್ಲೆಂಡ್‌ನ ನೂಲು ನೇಕಾರ ವೃತ್ತಿಯವರು ಈ ಬಟ್ಟೆಯ ಕೈಗಾರಿಕೆಗಳ ಯಾಂತ್ರೀಕರಣದ ವಿರುದ್ಧ ನಡೆಸಿದ ದಂಗೆಗಳು **'ಲಡ್ಡೈಟ್ ರೊಯಟ್ಸ್'** ಎಂದು ಪರಿಚಿತವಾಗಿವೆ.)

ಇದೇ ರೀತಿ ಗೋಣಿ ನೇಯ್ಗೆಯ ಗೋಣಿಗರೆಂಬ ಜಾತಿಯು ಬೆಂಗಳೂರಲ್ಲೂ ಇತರೆಡೆಗಳಲ್ಲೂ ಸಣಬು ಹಾಗೂ ನಾರಿನಿಂದ ಗೋಣಿಚೀಲ, ಹಗ್ಗ ಮತ್ತು ಇಂಥ ಉದ್ಯೋಗದಲ್ಲಿ ತೊಡಗಿತ್ತು. (ಈ ಜಾತಿಯ ಜನ ಗೋಣಿಗರು ಈಗಲೂ ಇದ್ದಾರೆ). ೧೭ನೇ ಶತಮಾನದಲ್ಲಿ ಕಾರವಾರ ಮತ್ತು ಗೇರುಸೊಪ್ಪ ಬಂದರುಗಳ ಹಿನ್ನಾಡಿನಲ್ಲಿ ನಾರಿನ ('ಹೆಂಪ್') ಉದ್ಯಮ ಸಮೃದ್ಧವಾಗಿತ್ತೆಂದು ಫಾಯರ್ ಎಂಬ ಪ್ರವಾಸಿ ಹೇಳುತ್ತಾನೆ. ಕಂಬಳಿಯ ನೇಯ್ಗೆಯೂ ಕಂಬಳಿಯ ದಾರವನ್ನು ನೂಲುವುದೂ ಎಲ್ಲೆಡೆ ಅಷ್ಟೇ ವ್ಯಾಪಕವಾದ ಉದ್ಯೋಗವಾಗಿತ್ತು.

ಬೆಂಗಳೂರಿನ ಖತ್ರಿಗಳು ರೇಷ್ಮೆಯ ಮತ್ತು ಕಲಾಬತ್ತಿನ ನೇಯ್ಗೆಯಲ್ಲಿ ಅದ್ವಿತೀಯರು, ಅವರದು ದೈತ್ಯ ಪರಿಣತಿ ಎಂಬುದಾಗಿ ಬುಕಾನನ್ ಹೇಳುತ್ತಾನೆ. ಆದರೆ ೧೮೧೧ರಿಂದ ಆರಂಭವಾಗಿ ಒಂದೆರಡು ದಶಕಗಳಲ್ಲೆ ಬಹುಪಾಲು ನೂಲುವ ಜನ ಉದ್ಯೋಗ ಕಳೆದುಕೊಂಡರು. ನೇಯ್ಗೆಯಲ್ಲಿ ಕೆಲವು ವಿಶಿಷ್ಟ ಸ್ಥಳೀಯ ಅವಶ್ಯಕತೆಗಳನ್ನು ಪೂರೈಸುವ ಮಟ್ಟಿಗೆ ಉಳಿಯಿತು. ಅದು ದೇಶದಲ್ಲಿದ್ದ ಸಾರ್ವತ್ರಿಕ ಮಾರುಕಟ್ಟೆಯನ್ನು ಕಳೆದುಕೊಂಡಿತು. ವಿದೇಶ ಮಾರುಕಟ್ಟೆಯಂತೂ ಪೂರ್ತಿ ಮುಚ್ಚುವಂತಾಯಿತು (ನೋಡಿ: ಸುಜಿನ್ ಉಸ್ ಬೀನ್, "ದಿ ಫ್ಯಾಬ್ರಿಕ್ಸ್ ಆಫ್ ಸೋಶಲ್ ಲಾಯಿಫ್ ಇನ್ ಪ್ರಿ ಬ್ರಿಟಿಷ್ ಮೈಸೂರ್", ಕಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ, ನಂ. ೭೭, ಅಂಕ ೧-೨, ಪು. ೭೯-೮೭).

ಭಾರತದ ಕೈಮಗ್ಗದ ಬಟ್ಟೆಗೆ ಇಂಗ್ಲೆಂಡಿನಲ್ಲಿ ಇದ್ದ ಬಿದ್ದ ಮಾರುಕಟ್ಟೆಯನ್ನು ನಿರ್ನಾಮ ಮಾಡಲೆಂದೇ ಆ ದೇಶಕ್ಕೆ ಬರುವ ಭಾರತದ ಬಟ್ಟೆಯ ಮೇಲೆ ಶೇಕಡಾ ೨೭ ರಿಂದ, ೭೦ರ ವರೆಗೆ ಆಯಾತ ಶುಲ್ಕ ಹೇರಿದರು. ಆದರೆ ಮುಕ್ತ ಮಾರುಕಟ್ಟೆಯ ತಮ್ಮ ನೀತಿಯ ಹೆಸರಲ್ಲಿ ಭಾರತಕ್ಕೆ ಬರುವ ಇಂಗ್ಲೆಂಡ್‌ನ ಬಟ್ಟೆಯ ಮೇಲೆ ಯಾವುದೇ ಸುಂಕ ಹೇರದೇ ಹೋದರು.

***ಭಾರತದ ಕೋಟಿ ಕೋಟಿ ಹಾಗೂ ಕರ್ನಾಟಕದ ಲಕ್ಷಲಕ್ಷ ಮಹಿಳೆಯರು ತಮ್ಮ ನೂಲಿನ ವೃತ್ತಿಗೆ ಎರವಾದರು ( ಇದರಿಂದ ಅವರ ಆರ್ಥಿಕ ಸಾಮರ್ಥ್ಯ ಕುಂದಿ ಅವರಿಗಿದ್ದ ಸಾಮಾಜಿಕ ಸ್ಥಾನಮಾನ - ಪುರುಷರ ಎದುರು ಕೂಡ ಪತಿತ ಸ್ಥಿತಿಗೆ ಮುಟ್ಟಿತು ).***

ಭಾರತದ ಕೈಮಗ್ಗದ ಕೈಗಾರಿಕೆ ನಾಶವಾದುದರ ಬಗ್ಗೆ ವೈಸ್‌ರಾಯ್ ಲಾರ್ಡ್‌ವಿಲಿಯಂ ಬೆಂಟಿಂಕನ ಮಾತನ್ನೇ ಕೇಳಿ "*ಭಾರತದ ಬಯಲುಗಳೆಲ್ಲ, ಉಪವಾಸ ನರಳಿ ಸತ್ತ ನೇಕಾರರ ಮೂಳೆಗಳಿಂದ ಬಿಳುಪಾಗಿವೆ*".

ನೇಕಾರ, ನೂಲುಗಾರ, ಬಣ್ಣಗಾರ, ಹಾಗೂ ನೇಯ್ಗೆ ಉದ್ಯಮಕ್ಕೆ ಸಂಬಂಧಿಸಿದ ಎಲ್ಲ ಜನ ಉದ್ಯೋಗಕ್ಕೆ ಎರವಾದರು. ಸ್ಕಾಟ್‌ಲೆಂಡ್‌ನ ದಂಡೆಯಿಂದ ಬರುವ ಗೋಣಿಚೀಲಗಳಿಂದ ಇಲ್ಲಿನ ಗೋಣಿಗರು ಉದ್ಯೋಗ ಹೀನರಾದರು. ಯಂತ್ರಗಳಿಂದ ಬರುವ ಆಕರ್ಷಕ ಬ್ಲ್ಯಾಂಕೆಟ್‌ಗಳಿಂದ ಕಂಬಳಿ ಉದ್ಯೋಗವು ಸಾಕಷ್ಟು ಹಿನ್ನಡೆ ಕಂಡಿತು. ಕುರುಬರ ಪಾರಂಪರಿಕ ಶ್ರೀಮಂತಿಕೆ ಕಣ್ಮರೆಯಾಯಿತು.

ದಕ್ಷಿಣ ಭಾರತ ಕಬ್ಬಿಣದ ಕೈಗಾರಿಕೆಗೆ ಪ್ರಸಿದ್ಧವಾಗಿತ್ತು. ಉಕ್ಕಿನ ವಸ್ತುಗಳಂತೂ ಭಾರತದಿಂದಲೇ ಹೋಗುತ್ತಿದ್ದವು. ದಕ್ಷಿಣ ಭಾರತದಲ್ಲಿ ಬಳ್ಳಾರಿ, ಕೆಮಣ್ಣುಗುಂಡಿ, ಕುದುರೆಮುಖ ಪ್ರದೇಶದಲ್ಲಿ ಅಪಾರ ಕಬ್ಬಿಣದ ಅದಿರು ಇತ್ತು. ಇಲ್ಲಿ ಇಂಧನಕ್ಕೆ ಬೇಕಾಗುವ ಕಾಡುಗಳೂ ವಿಪುಲವಾಗಿದ್ದವು. ಖಡ್ಗ, ಕಠಾರಿಗಳಿಗೆ ಬಳಸುವ 'ವೂಟ್ಜ್' ಎಂದು ಪಾಶ್ಚಾತ್ಯ ದೇಶಗಳಲ್ಲಿ ಪರಿಚಿತವಾದ ಉಕ್ಕು, 'ಉಕ್ಕು' ಅಥವಾ 'ಉರ್ಕು' ಎಂಬ ಕನ್ನಡ (ದ್ರಾವಿಡ) ಶಬ್ದದಿಂದ ಬಂದುದು. 'ದಮಾಸ್ಕಸ್ ಸ್ಟೀಲ್' ಎಂಬುದು ಭಾರತದಿಂದ ದಮಾಸ್ಕಸ್‌ಗೆ ಹೋಗಿ ಯುರೋಪನ್ನು ಮುಟ್ಟುತ್ತಿತ್ತು. ಬುಕನನ್ ೧೮೦೦ರಲ್ಲಿ ಮಾಗಡಿಯಲ್ಲಿ ತಯಾರಾಗುವ ಶ್ರೇಷ್ಠ ಮಟ್ಟದ ಉಕ್ಕಿನ ವಿವರ ನೀಡಿದ್ದಾನಲ್ಲದೆ ಆ ಉಕ್ಕಿನ ಕುಲುಮೆಯ ಚಿತ್ರವನ್ನೂ ನೀಡಿದ್ದಾನೆ. ಉತ್ಪಾದನೆಯ ವಿಧಾನಗಳನ್ನು ವಿವರಿಸಿದ್ದಾನೆ. ಮಧುಗಿರಿ, ಚೆನ್ನರಾಯದುರ್ಗ, ಹಾಗಲವಾಡಿ, ದೇವರಾಯನ ದುರ್ಗಗಳು ಕಬ್ಬಿಣದ ಕೈಗಾರಿಕೆಗಳ ಕೇಂದ್ರವೆಂದು ಹೇಳಿದ್ದಾನೆ. ಬಳ್ಳಾರಿ ಜಿಲ್ಲೆಯೂ ಉಕ್ಕಿನ ಕೈಗಾರಿಕೆಯ ಗಣ್ಯ ಕೇಂದ್ರವಾಗಿತ್ತು. ಚಿಕ್ಕದೇವರಾಜ, ಟಿಪ್ಪು ಕಬ್ಬಿಣದ ವ್ಯವಹಾರವನ್ನು (ಕೊಳ್ಳುವುದು - ಮಾರುವುದು) ಸರಕಾರೀ ಗುತ್ತಿಗೆಯಾಗಿ ಮಾಡಿದ್ದರು. ಮೈಸೂರು ಆಡಳಿತದಲ್ಲಿ ಕಬ್ಬಿಣದ ಚಾವಡಿಯೆಂದೇ ಇತ್ತು. ಧಾರವಾಡ ಜಿಲ್ಲೆಯ ತೇಗೂರು, ಹುಲುಕೊಪ್ಪ, ಮಂಡ್ಯ ಜಿಲ್ಲೆಯ ಹುಲಿಗೂರು ಪ್ರಾಚೀನ ಕಬ್ಬಿಣದ ಕೈಗಾರಿಕೆಯ ಕೇಂದ್ರಗಳು.

ಆದರೆ ಇಂಗ್ಲೆಂಡಿನಲ್ಲಿ ಕಲ್ಲಿದ್ದಲಿನ ಗಣಿಗಳು ಉದಿಸಿ ಹಬೆಯಿಂದ ನಡೆಯುವ ಕುಲುಮೆ ಹಾಗೂ ಯಂತ್ರಗಳು ಬಂದು ಶಫೀಲ್, ಬರ್ಮಿಂಗ್ ಹ್ಯಾಮ್‌ನ ಕಬ್ಬಿಣ, ಉಕ್ಕಿನ ವಸ್ತುಗಳ ಮುಂದೆ ನಮ್ಮ ಪಾಂಚಾಳರ ಆಟ ನಡೆಯದಾಯಿತು. {ಅದಿರಿನಿಂದ ಕಬ್ಬಿಣ ಪಡೆಯುವ ವಿಧಾನ ಯಂತ್ರಗಳಿಂದ ಸುಲಭವಾಗಿ, ಪಾರಂಪರಿಕ ವಿಧಾನವನ್ನು ಅರಿತ ಒಬ್ಬ ಕಬ್ಬಿಣದ ಕುಲುಮೆಗಾರನೂ ಮಾದರಿ-(ಸ್ಯಾಂಪಲ್)-ಗಾಗಿ ಕೂಡ ನಮ್ಮಲ್ಲಿ ಇಲ್ಲದಂತೆ ಆಗಿದೆ. ಗುಜರಿಯಲ್ಲಿ ಸಿಗುವ ಕಬ್ಬಿಣದ ಕಂಬಿ ತಂದೇ ಅವರು ಹಳ್ಳಿಯ ಬೇಡಿಕೆಗಳನ್ನು - ಸಲಕರಣೆ ತಯಾರಿಸಿ ಪೂರೈಸುತ್ತಾರೆ}.

*ಉಪ್ಪಿನ ಉತ್ಪಾದನೆಯನ್ನು ಬ್ರಿಟಿಷರು ಸರಕಾರದ ಗುತ್ತಿಗೆಯಾಗಿ ಮಾಡಿದರು. ಕರ್ನಾಟಕದ ಕರಾವಳಿಯಲ್ಲಿ ಸಾಣೆಕಟ್ಟೆಯಲ್ಲಿ ಮಾತ್ರ ಒಂದು ಸರಕಾರೀ ಉಪ್ಪಿನ ಆಗರ ಉಳಿಸಿಕೊಂಡರು (ಕರಾವಳಿಯ ಉಪ್ಪಳ, ಉಪ್ಪಿನ ಪಟ್ಣ, ಉಪ್ಪಿನ ಸೊಗರು ಉಪ್ಪೂರು, ಉಪ್ಪೋಣಿ, ಉಪ್ಪಿನಂಗಡಿ, ಉಪ್ಪಿನಕುದುರು ಮುಂತಾದ ಉಪ್ಪಿನ ಉತ್ಪಾದನೆಯ, ವ್ಯವಹಾರದ ಪ್ರಾಚೀನ ಕೇಂದ್ರಗಳನ್ನು ಗಮನಿಸಿ. ಕೋಲಾರ ಜಿಲ್ಲೆಯ ಟೇಬಲ್ ಕಲ್ಲುಪ್ಪಿನ ದೊಡ್ಡ ಕೇಂದ್ರವೆಂದು ಬುಕಾನನ್ ಹೇಳಿದ್ದಾನೆ). ಉಪ್ಪನ್ನು ಪರದೇಶದಿಂದ ತಂದು ಮಾರಿದರು. ಕರಾವಳಿಯ ಅಗೇರರೂ ಖಾರ್ವಿಗಳೂ ಇದರಿಂದ ಉದ್ಯೋಗ ಕಳೆದುಕೊಂಡರು. ಒಳನಾಡಿನ ಉಪ್ಪಾರರೂ (ಮೇಲು ಸಕ್ಕರೆಯವರು) ನಿರುದ್ಯೋಗಿಗಳಾದರು. ಚಿಕ್ಕಮಗಳೂರು ಜಿಲ್ಲೆಯ ಪ್ರಾಚೀನ ಉಪ್ಪುವಳ್ಳಿಯ ಜನ ತಾವು ಗಣಿ ಉಪ್ಪು (ಕಲ್ಲುಪ್ಪು) ತಯಾರಿಸುವ ತಮ್ಮ ಉದ್ಯೋಗಕ್ಕೆ ಎರವಾದುದರಿಂದ ತಮಗೆ ಕೃಷಿಮಾಡಲು ಭೂಮಿ ಕೊಡಬೇಕೆಂದು ಸರಕಾರವನ್ನು ವಿನಂತಿಸಿದರು (ಈ ಕಡಿತ ರಾಜ್ಯ ಪತ್ರಾಗಾರದಲ್ಲಿ ಇದೆ). ಉಪ್ಪಿನ ಮೇಲಂತೂ ಶೇಕಡಾ ೨೦೦೦ದಷ್ಟು ದರ ಹೇರಿದ್ದು ಇನ್ನೊಂದು ಬೃಹತ್ ಪ್ರಮಾಣದ ಆರ್ಥಿಕ ಶೋಷಣೆಯಾಗಿತ್ತು. (ಭಾರತದಿಂದ ಕಚ್ಚಾಮಾಲು ಸಾಗಿಸುವ ಹಡಗುಗಳು ನಾಲ್ಕಾದರೆ, ಅದೇ ಕಚ್ಚಾ ಮಾಲಿನಿಂದ ಸಿದ್ಧವಸ್ತು ತಯಾರಾದಾಗ ಅದನ್ನು ಇಲ್ಲಿಗೆ ತರುವ ಹಡಗು ಬಂದು, ಉಳಿದ ಮೂರು ಹಡಗುಗಳು ಖಾಲಿ ಬರುವ ಬದಲು ಅದರಲ್ಲಿ ಉಪ್ಪನ್ನು ವಿದೇಶದಿಂದ ಹೇರಿ ತರುತ್ತಿದ್ದರು).*

ಇನಾಮಲ್, ಪಿಂಗಾಣಿ ಪಾತ್ರೆಗಳು ಜನಪ್ರಿಯವಾದಾಗ ಕಂಚುಗಾರರು ಉದ್ಯೋಗಗಳನ್ನು ಕಳೆದುಕೊಂಡರು. ಇನಾಮಲ್ (ಬಿಲಾವರ್) ಹಾಗೂ ಪಿಂಗಾಣಿ ಅಗ್ಗದ್ದೂ ಒಂದು ರೀತಿಯ ಆಕರ್ಷಣೆಯದೂ ಆದ ವಸ್ತುವಾಗಿತ್ತು.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸೀಮೆ ಎಣ್ಣೆ ಬಳಕೆಗೆ ಬಂತು. ಅದು ದೀಪಕ್ಕೆ ಉರಿಸುವ ಗಾಣದ ಎಣ್ಣೆಗೂ ಅಗ್ಗವಾಗಿತ್ತು. ಹೀಗಾಗಿ ರಾತ್ರಿ ದೀಪ ಬೆಳಗಲು ಗಾಣದ ಎಣ್ಣೆಯ ಬಳಕೆ ಕಡಿಮೆಯಾಯಿತು. ಸೀಮೆಎಣ್ಣೆ ಬಂದುದರಿಂದ ಹುಬ್ಬಳ್ಳಿಯಲ್ಲಿ ಗಾಣಿಗರ ವೃತ್ತಿಗೇ ಭಾರಿ ಹೊಡೆತ ಬಿತ್ತೆಂದು ಹಳೆಯ ಧಾರವಾಡ ಗ್ಯಾಸೆಟಿಯರ್ ಹೇಳುತ್ತದೆ. ಇದು ಇಡೀ ನಾಡಿನ ಬಗ್ಗೆ ಸತ್ಯ.

*ಶ್ರೀರಂಗಪಟ್ಟಣದಲ್ಲಿ ಟಿಪ್ಪು ಉತ್ತಮ ಕಾಗದದ ಉತ್ಪಾದನೆ ಆರಂಭಿಸಿದ್ದ. ಆದಿಲ್‌ಷಾಹಿಗಳ ಕಾಲದಲ್ಲಿ ಕಾಗದದ ಉತ್ಪಾದನೆ*

ಉತ್ತರ ಕರ್ನಾಟಕದಲ್ಲಿ ವ್ಯಾಪಕವಾಗಿತ್ತು. ಅಥಣಿ (ಅಲ್ಲಿ 'ಕಾಗಜೀ ಗಲ್ಲಿ' ಎಂಬ ಓಣಿ ಈಗಲೂ ಇದೆ), ಧಾರವಾಡ, ಗದಗ, ಗುತ್ತಲಿ, ನವಲಗುಂದ, ರಾಣಿಬೆನ್ನೂರು, ಹುಬ್ಬಳ್ಳಿ, ಕರ್ಜಗಿಗಳಲ್ಲಿ ಕಾಗದ ತಯಾರಾಗುತ್ತಿದ್ದು, ಮುಸಲ್ಮಾನರು ಈ ಉದ್ಯೋಗದಲ್ಲಿ ಹೆಚ್ಚಾಗಿ ತೊಡಗಿದ್ದರು. ಯಾಂತ್ರೀಕೃತ ಕಾಗದ ಬಂದಾಗ ಈ ಕಾಗದವನ್ನು ಕೇಳುವವರಿಲ್ಲವಾದರು.

ಯಂತ್ರೋತ್ಪಾದಿತ ಸಕ್ಕರೆಯಿಂದ ಬಂದ ಸ್ಪರ್ಧೆ ಆಲೆಮನೆಗಳಿಗೆ ಕುತ್ತಾಯಿತು. ಬೆಲ್ಲದ ಬಳಕೆ ಇಳಿಯಿತು. ಈ ದೇಶದಲ್ಲೇ ತಯಾರಾಗುತ್ತಿದ್ದ ಬುರಾಸಕ್ಕರೆ, ಕಲ್ಲುಸಕ್ಕರೆಗಳಿಗೆ ಬೇಡಿಕೆ ಇಲ್ಲದೆ ಹೋಯಿತು. ಶ್ರೀರಂಗಪಟ್ಟಣ, ಚಿಕ್ಕಬಳ್ಳಾಪುರ ಕಲ್ಲುಸಕ್ಕರೆಯ ಉತ್ಪಾದನೆಯ ಕೇಂದ್ರಗಳನ್ನು ಬುಕಾನನ್ ಹೆಸರಿಸಿದ್ದಾನೆ. ರೈತರ ದೊಡ್ಡ ಆದಾಯ ಮೂಲವಾದ ಬೆಲ್ಲದ ಉತ್ಪಾದನೆ ಕುಗ್ಗಿತು.

ನೇಕಾರರು, ಕುರುಬರು, ಕಮ್ಮಾರರು, ಗಾಣಿಗರು, ಕಾಗದ ತಯಾರಿಸುವರು, ಹಾಗೂ ನೂಲುತ್ತಿದ್ದ ಸಕಲ ಜಾತಿಯ ಹೆಂಗಸರು ಉದ್ಯೋಗ ಕಳೆದುಕೊಂಡರು. ಚಪ್ಪಲಿ, ಬಳೆ, ಗಾಜು, ಕಂಚು, ಹಿತ್ತಾಳೆ ಉತ್ಪಾದನೆಗೂ ಹಾನಿಯಾಯಿತು. ಇಲ್ಲಿ ಹೇಳಿದ್ದು ಕೆಲವು ಉದಾಹರಣೆ ಮಾತ್ರ. ಕೈಗಾರಿಕಾ ಕ್ರಾಂತಿ ಈ ದೇಶದಲ್ಲಿ ಸಾರ್ವತ್ರಿಕ ನಿರುದ್ಯೋಗ ಮೂಡಿಸಿದಾಗ ಹಿಂದುಳಿದ ಎಲ್ಲ ವರ್ಗಗಳ ಜನ ಶಿಕ್ಷಣ, ಸರಕಾರೀ ನೌಕರಿಗಳಿಗಾಗಿ ಯತ್ನಿಸಲು ಚಳವಳಿ ನಡೆಸಿದ್ದು ಸಹಜವೇ ಆಗಿತ್ತು.

ಎಂ. ಬಿ. ಪಾಟೀಲ *

# ಉತ್ತರ ಕನ್ನಡ ಜಿಲ್ಲೆಯ ಸಾಂಸ್ಥಿಕ ಹಣಕಾಸು ಸಂಸ್ಥೆಗಳ ಹುಟ್ಟು ಮತ್ತು ಬೆಳವಣಿಗೆ ( ೧೮೬೩-೧೯೪೭ )

ಒಂದು ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಪೂರಕ ಅಂಶಗಳಾಗಿ ಸಂಘಟಿತ ಮತ್ತು ಅಸಂಘಟಿತ ವಲಯದ ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಬಹು ಮಹತ್ವದ ಪಾತ್ರವನ್ನು ವಹಿಸುವುವು. ಸಂಘಟಿತ ವಲಯದಲ್ಲಿ ವ್ಯವಸಾಯ ವಾಣಿಜ್ಯ ಚಟುವಟಿಕೆಗಳಿಗೆ ಪೂರಕವಾಗುವಂತೆ ಸರ್ಕಾರಿ ಮತ್ತು ಸರ್ಕಾರೇತರ ಹಣಕಾಸು ಸಂಸ್ಥೆಗಳು ಪ್ರಾರಂಭಗೊಳ್ಳುವ ಪೂರ್ವದಲ್ಲಿ ಅಂದರೆ ೧೯ನೇ ಶತಮಾನದ ಪ್ರಾರಂಭದ ದಶಕಗಳಿಗಿಂತ ನೂರಾರು ವರ್ಷಗಳ ಮೊದಲಿಗೆ ಖಾಸಗಿ ಸಾವುಕಾರರು, ವರ್ತಕರು, ಜಮೀನುದಾರರು ಅಧಿಕಾರವರ್ಗದವರು, ಮುಂತಾದವರು ಗ್ರಾಮೀಣ ಮತ್ತು ನಗರ ಪ್ರದೇಶಗಳ ಆರ್ಥಿಕ ವಲಯದಲ್ಲಿ ತಮ್ಮದೇ ಆದ ಪ್ರಭಾವ ಹೊಂದಿದ್ದರು. ಎಲ್ಲೆಡೆಯಲ್ಲಿಯೂ ಸಾಮಾನ್ಯವಾಗಿದ್ದ ಈ ಒಂದು ಪರಿಸ್ಥಿತಿಯು ಉತ್ತರ ಕನ್ನಡ ಜಿಲ್ಲೆಗೂ ಅನ್ವಯಿಸುತ್ತಿತ್ತು.

*೧೮೧೮ರಲ್ಲಿ ಪೇಶ್ವೆಯವರ ನಂತರ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಈ ಪ್ರದೇಶವು ದಕ್ಷಿಣ ಮಹಾರಾಷ್ಟ್ರದ ಭಾಗವಾಗಿತ್ತು. ಉತ್ತರ ಕನ್ನಡ ಜಿಲ್ಲೆಯು ಪ್ರಾರಂಭದಲ್ಲಿ ಬಳ್ಳಾರಿ ಕಲೆಕ್ಟರ್ ಅಧೀನದಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಸೇರಿತ್ತು. ಮುಂದೆ ೧೮೬೨ರಲ್ಲಿ ಮುಂಬೈ ಪ್ರಾಂತ್ಯದ ಭಾಗವಾಗಿ 'ಉತ್ತರ ಕನ್ನಡ' ಎಂದು ಕರೆಯಲಾಯಿತು. ಮುಂದೆ 'ಉತ್ತರ' ಎಂಬ ಪದವನ್ನು ತೆಗೆದು ಹಾಕಿ "ಕಾನಡಾ" ಎಂದು ಹೆಸರಾಯಿತು. ಪೇಶ್ವೆಯವರು ತಮ್ಮ ಕಾಲದಲ್ಲಿ ವ್ಯಾಪಾರ ಅಭಿವೃದ್ಧಿಗೆ, ತನ್ಮೂಲಕ ನಗರಗಳ ಬೆಳವಣಿಗೆ, ಮತ್ತು ಮಾರುಕಟ್ಟೆಗಳ ಸಂತೆಗಳ, ಅಭಿವೃದ್ಧಿಗೆ ಕಾರಣರಾದರು . ಇದರಿಂದ ಅನೇಕ ಹಳ್ಳಿಗಳು, ನಗರಗಳಾಗಿ ಬೆಳೆಯಲು ಸಹಾಯಕವಾಯಿತು.*

### *ಖಾಸಗಿ ಸಾಹುಕಾರರು*

೧೮೮೪ರ ಗ್ಯಾಸೆಟ್ಟಿಯರ್‌ನಲ್ಲೂ ವರದಿಯಾಗಿರುವಂತೆ ೧೮೭೨ರ ಗಣತಿಯ ಪ್ರಕಾರ ಈ ಜಿಲ್ಲೆಯಲ್ಲಿ ೫೨೧೮ ಜನರು ಸಂಪತ್ತು ಉಳ್ಳವರಾಗಿದ್ದರು. ಆ ಪೈಕಿ ಆರು ಜನ ಬ್ಯಾಂಕರುಗಳು, ೧೦ ಜನ ಹಣ ಬದಲಾಯಿಸುವವರು **'ಮನಿ ಚೇಂಜರ್ಸ'** ಅಥವಾ ಅಂಗಡಿಕಾರರು ಆಗಿದ್ದರು ಎಂದು ತಿಳಿದು ಬರುವದು.

ಅಂದಿನ ಉ. ಕ. ಒಳಗೊಂಡಂತೆ ಬೊಂಬಾಯಿ ಕರ್ನಾಟಕ ನಾಲ್ಕು ಜಿಲ್ಲೆಗಳಲ್ಲಿ ಸೇರಿ, ವರ್ಷಕ್ಕೆ ರೂ. ೧೦೦ ರಿಂದ ೧೦೦೦ ವರೆಗೆ ಬಂಡವಾಳ ಉಳ್ಳ ವ್ಯಾಪಾರಸ್ಥರ ಸಂಖ್ಯೆ ೧೮೮೪ರಲ್ಲಿ ೪೨,೭೫೦ ಆಗಿತ್ತು. ಆ ಪೈಕಿ ಧಾರವಾಡದಲ್ಲಿ ೨೧,೦೪೬, ಬೆಳಗಾವಿ ೧,೮೧೪, ಬಿಜಾಪುರ ೧೫,೮೨೪, ಕಾನಡಾದಲ್ಲಿ ೪,೦೬೬ ಎಂದು ತಿಳಿದು ಬರುವುದು. ಈ ಮೇಲಿನ ೪೦೬೬ ವ್ಯಾಪಾರಸ್ಥರ ಪೈಕಿ, ಬಹುಪಾಲು ೧,೭೧೭ ಜನರು ರೂ. ೧೦೦-೧೫೦ ( ೧೦ರಿಂದ ೧೫ ಪೌಂಡು ) ಬಂಡವಾಳದವರು, ೭೯೯ ಜನರು ರೂ. ೧೫೦ ರಿಂದ ೨೫೦ ರೂ, ೫೯೨ ಜನರು ರೂ. ೨೫೦ ರಿಂದ ೩೫೦ ರೂ, ೨೯೪ ಜನರು ರೂ. ೫೦೦ ರಿಂದ ೭೫೦ ಬಂಡವಾಳ ತೊಡಗಿಸಿದವರಾಗಿದ್ದರು. ರೂ. ೧೦,೦೦೦ ಕ್ಕಿಂತ ಹೆಚ್ಚು ಬಂಡವಾಳ ಹೂಡಿದ್ದವರು ಒಟ್ಟು ನಾಲ್ಕು ಜಿಲ್ಲೆ ಸೇರಿ ೩೮ ಜನರಿದ್ದರೆ ಅದರಲ್ಲಿ ಧಾರವಾಡ ೧೯, ಬೆಳಗಾವಿ ೫, ಬಿಜಾಪುರ ೧೧, ಕಾನಡಾದಲ್ಲಿ ೩ ಜನರು ಇದ್ದರು.

ಇತರೇ ಪ್ರದೇಶಗಳಂತೆ ಈ ಜಿಲ್ಲೆಯಲ್ಲಿಯೂ ಬಡ್ಡಿ ವ್ಯವಹಾರ ಬಹಳ ಅವ್ಯಾಹತವಾಗಿ ನಡೆಯುತ್ತಿತ್ತು. ಅದಕ್ಕೆ ಯಾವದೇ ಜಾತಿ ಮತದ ಕಟ್ಟಳೆಗಳು ಇರಲಿಲ್ಲ. ಲೈಸನ್ಸ್ ಟ್ಯಾಕ್ಸ್ ಪ್ರಮಾಣದಿಂದ ನೋಡಲಾಗಿ ಒಟ್ಟು ತೆರಿಗೆಯಲ್ಲಿ ಶೇ. ೭೫ ಬಡ್ಡಿ ವ್ಯವಹಾರ ಮಾಡುವುದರಿಂದ ವಸೂಲಾಗುತ್ತಿತ್ತು. ಈ ವ್ಯವಹಾರದಲ್ಲಿ ಶೇ ೪೦ ನಗರದಲ್ಲಿದ್ದರೆ ಶೇ. ೬೦ ಹಳ್ಳಿಗಳಲ್ಲಿ ನಡೆಯುತ್ತಿತ್ತು. ೧೮೮೧-೮೨ರಲ್ಲಿ ಈ ಜಿಲ್ಲೆಯ ಆದಾಯ ರೂ. ೫೧,೮೦೦ ಆಗಿದ್ದರೆ ಖರ್ಚು ರೂ. ೫೨,೮೦೦ ಎಂದು ತಿಳಿದುಬರುವದು. ೧೮೭೯ರ ಲೈಸೆನ್ಸ್ ಕಾಯಿದೆ ಪ್ರಕಾರ ೫೦

---

* ಮುಖ್ಯ ಸಂಪಾದಕರು, (ನಿವೃತ್ತ) ಕರ್ನಾಟಕ ಗ್ಯಾಸೆಟಿಯರ್- 'ಶ್ರೀ ರೇಣುಕ', ೩೫೬, ೬ನೇ ಅಡ್ಡರಸ್ತೆ, ಚೆನ್ನಮ್ಮ ಕೆರೆ ಅಂಗಳ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಪೌಂಡು(ರೂ. ೫೦೦)ವರೆಗಿನ ವಾರ್ಷಿಕ ಆದಾಯದವರು ಯಾವುದೇ ಲೈಸನ್ಸ್ ಸುಂಕ ಕೊಡಬೇಕಾಗಿರಲಿಲ್ಲ.

### *ಹಣದ ಚಲಾವಣೆ*

ಇಕ್ಕೇರಿ ವರಹ, ಟಿಪ್ಪುಸುಲ್ತಾನರ ಸುಲ್ತಾನಿ ಹಣ, ಹೈದರನ ಬಹಾದ್ದೂರಿ ಹಣ, ಸೂರತ್ ಮತ್ತು ಮದ್ರಾಸ್ ರೂಪಾಯಿ ಜಾರಿಯಲ್ಲಿ ಇದ್ದವು.

ಅಂದು ಬ್ಯಾಂಕಿಂಗ್ ವ್ಯವಹಾರ ಪ್ರತ್ಯೇಕವಾಗಿರಲಿಲ್ಲ - ಬಹುಪಾಲು ವ್ಯಾಪಾರಸ್ಥರು ತಮ್ಮದೇ ಆದ ರೀತಿಯಲ್ಲಿ ಸ್ಥಳೀಯ ರೂಢಿಗಳ ಪ್ರಕಾರ ಬ್ಯಾಂಕಿಂಗ್ ವ್ಯವಹಾರಗಳನ್ನು ಮಾಡುತ್ತಿದ್ದರು.

ಸಾಹುಕಾರರು ಹಣದ ಲೇವಾದೇವಿ ಮಾಡುತ್ತಿದ್ದರು. ಕೇವಲ ಸಾಲ ಖಾತೆಯನ್ನು ಹೊಂದಿದ್ದರು. ಠೇವಣಿ ಖಾತೆಯು ಇರಲಿಲ್ಲ. ಯಾವುದೇ ಅಡಮಾನ ಇಲ್ಲದೇ ನೀಡುವ ಸಾಲಕ್ಕೆ ಶೇ. ೬ ರಿಂದ ೧೨ ರವರೆಗೆ, ಅಡಮಾನದ ಸಾಲಕ್ಕೆ ಶೇ. ೩ ರಿಂದ ೬ ರವರೆಗೆ ಬಡ್ಡಿಯನ್ನು ವಿಧಿಸಲಾಗುತ್ತಿತ್ತು. ತಿಂಗಳ ಅವಧಿಯ ಸಾಲಕ್ಕೆ ತಿಂಗಳಿಗೆ ಶೇ. ಒಂದರಿಂದ ೩ ರವರೆಗೆ ಬಡ್ಡಿ ಇರುತ್ತಿತ್ತು.

ಗುಜರಾತ್ ಮತ್ತು ಕಾಠೇವಾಡಿಯ ಲೇವಾದೇವಿದಾರರು ಗುಮಾಸ್ತರನ್ನು ನೇಮಿಸಿಕೊಳ್ಳುತ್ತಿದ್ದರು. ಇವರು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದ ಕುಮಟಾ ಮತ್ತು ಕಾರವಾರದಲ್ಲಿ ನೆಲೆಸಿದ್ದರು. ಇವರ ಗುಮಾಸ್ತರಿಗೆ ವಾರ್ಷಿಕ ರೂ. ೭೫ ರಿಂದ ೧೦೦ ರವರೆಗೆ ಪಗಾರ ಇರುತ್ತಿತ್ತು. ಹುಂಡಿಯ ವ್ಯವಹಾರದಲ್ಲೂ ಶೇ. ಒಂದರಿಂದ ಎರಡರವರೆಗೆ ಕಮಿಶನ್ ಪಡೆಯಲಾಗುತ್ತಿತ್ತು. ಕುಮಟಾದಲ್ಲೂ ರೂ. ೧೫೦೦೦ ವರೆಗೆ ಹಣ ಪಾವತಿ ಮಾಡುವ ಕಂಪನಿಗಳು ಇದ್ದವು.

ಆಹಾರ ಧಾನ್ಯ ಅಥವಾ ಬೀಜವನ್ನು ಸಾಲವಾಗಿ ಪಡೆದಾಗ ೧/೪ ಅಥವಾ ೧/೩ ದಷ್ಟು ಹೆಚ್ಚಿಗೆ ಕೊಡಬೇಕಾಗುತ್ತಿತ್ತು. ಸಾಮಾನ್ಯವಾಗಿ ಜಮೀನುದಾರರು ಅದನ್ನು ಗೇಣಿದಾರರಿಂದ ವಸೂಲಿ ಮಾಡುತ್ತಿರಲಿಲ್ಲ. ರೈತನು ಅತೀ ಬಡವನಿದ್ದು ಅವನಿಗೆ ವ್ಯವಸಾಯಕ್ಕೆ ಸಹಾಯಕವಾಗುವಂತೆ ಜಮೀನುದಾರನು ಎತ್ತನ್ನು ಒದಗಿಸಿದ್ದರೆ ೨೦೦ ರಿಂದ ೩೦೦ ಅಳತೆ ಅಕ್ಕಿಯನ್ನು, ಕೋಣಕ್ಕೆ ೪೦೦ ರಿಂದ ೫೦೦ ಸೇರು ಅಕ್ಕಿಯನ್ನು ಕೊಡಬೇಕಾಗುತ್ತಿತ್ತು. ಸಾಲವು ಹಣದ ರೂಪದಲ್ಲಿ ಆಗಿದ್ದರೆ ಶೇ ೧೨ ಬಡ್ಡಿ ಆಕರಣೆ ಮಾಡುತ್ತಿದ್ದರು. ರೂ. ೫೦ ವರೆಗಿನ ಸಾಲವನ್ನು ಪಟ್ಟಿಯಲ್ಲಿ ಯಾದಿಯಲ್ಲಿ ಬರೆದು ಇಡಲಾಗುತ್ತಿತ್ತು. ದೊಡ್ಡ ಸಾಲವನ್ನು ಖಾತಾ ಪುಸ್ತಕಗಳಲ್ಲಿ ದಾಖಲು ಮಾಡಲಾಗುತ್ತಿತ್ತು.

ಅಕ್ಟೋಬರ್‌ದಿಂದ ಮೇ ವರೆಗೆ ಹತ್ತಿಯ ವ್ಯಾಪಾರ ನಡೆಯುತ್ತಿತ್ತು. ಈ ಅವಧಿಯಲ್ಲಿ ಹತ್ತಿಯನ್ನು ಸಾಗಿಸುವ ಹಡಗುಗಳಿಗೆ (ಕುಮಟಾ-ಕಾರವಾರದಿಂದ) ಬೊಂಬಾಯಿಯಲ್ಲಿ ವಿಮೆ ಮಾಡಿಸಲಾಗುತ್ತಿತ್ತು. ಬ್ರಿಟೀಶ್ ಇಂಡಿಯಾ ಸ್ಟೀಮ್ ನ್ಯಾವಿಗೇಶನ್ ಕಂಪನಿ ಹೊಗೆಹಡಗುಗಳ ಮೂಲಕ ಸರಕು ಸಾಗಾಣಿಕೆ ಮಾಡುತ್ತಿತ್ತು. ಕಾರವಾರ, ಸದಾಶಿವಗಡ, ಅಂಕೋಲಾ, ಕುಮಟಾ, ಮುಂತಾದ ಸಮುದ್ರ ತೀರದ ಗ್ರಾಮಗಳಲ್ಲಿ ಸಣ್ಣ ದೊಡ್ಡ ನಾವೆಗಳನ್ನು ಕಟ್ಟಲಾಗುತ್ತಿತ್ತು.

**ಹಣ ಉಳಿತಾಯ ಮಾಡುವವರು :** ಸರ್ಕಾರಿ ನೌಕರರು, ವಕೀಲರು, ಲೇವಾದೇವಿದಾರರು, ಶೇಣವಿಗಳು, ಸಾರಸ್ವತರು, ದೇಶಸ್ತರು, ಚಿತ್ತಪಾವನರು, ವಾಣಿಗಳು, ಬಣಜಿಗರು; ವ್ಯವಸಾಯಗಾರರಲ್ಲಿ, ಹವಿಕರು, ಹಬ್ಬುಗಳು, ನಾಡವರು, ಕೊಂಕಣಿಗಳು, ಹಣ ಉಳಿತಾಯ ಮಾಡುತ್ತಿದ್ದರು. ಬೆಸ್ತರಲ್ಲಿ ಖಾರವಿಗಳು, ಹರಿಕಂತರು ಮೊಗೆರರು, ಅಂಬಿಗರು ಗುಡಿಸಲುಗಳಲ್ಲಿ ವಾಸಿಸುತ್ತಿದ್ದರೂ ವ್ಯವಸಾಯಗಾರರಿಗಿಂತಲೂ ಆರ್ಥಿಕವಾಗಿ ಹೆಚ್ಚು ಅನುಕೂಲವಾಗಿದ್ದರು. ೧೮೬೩-೬೫ರ ಕಾಟನ್ ಬೂಮಿನ ಅವಧಿಯಲ್ಲಿ ಕೆಲವು ಮೊಗೆರರು ಹತ್ತಿಯ ವ್ಯಾಪಾರಸ್ಥರಾಗಿದ್ದರು. ಮತ್ತು ಕಮಿಶನ್ ಏಜೆಂಟರಾಗಿದ್ದರು ಎಂದು ತಿಳಿದುಬರುವದು.

ಕಾಟನ್‌ಬೂಮಿನಿಂದ ಬೊಂಬಾಯಿ ಕರ್ನಾಟಕ ಹತ್ತಿ ಬೆಳೆಯುವ ಪ್ರದೇಶಗಳಲ್ಲಿ ಅನೇಕ ದೀರ್ಘಕಾಲಿಕ ಸಾಮಾಜಿಕ ಆರ್ಥಿಕ ಬದಲಾವಣೆಗಳು ಆಗಿರುವುದನ್ನು ವಿವರವಾಗಿ ಅಂದಿನ ಗ್ಯಾಸೆಟಿಯರ್‌ಗಳಲ್ಲಿ ದಾಖಲಿಸಲಾಗಿದೆ. ಬೊಂಬಾಯಿ-ಕರ್ನಾಟಕದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಈ ಜಿಲ್ಲೆಯಲ್ಲಿ ಕಾಟನ್‌ಬೂಮಿನಿಂದ ಉಂಟಾದ ಪರಿಣಾಮ ಕಡಿಮೆ ಎಂದು ಹೇಳಬಹುದು.

### *ಜೀತನೋಂದಣಿ ಪದ್ಧತಿ*

ವ್ಯವಸಾಯ ಪ್ರಧಾನವಾದ ಈ ಪ್ರದೇಶದಲ್ಲಿ ಇತರೇ ಪ್ರದೇಶಗಳಲ್ಲಿ ಜಾರಿಯಲ್ಲಿ ಇದ್ದಂತೆ ಜೀತಪದ್ಧತಿಯು ನಡೆದುಕೊಂಡು ಬಂದಿರುವುದು ಸರ್ವೆಸಾಮಾನ್ಯವಾಗಿದ್ದರೂ *ಜೀತವನ್ನು ನೋಂದಾಯಿಸುವ ಒಂದು ವಿಶಿಷ್ಟವಾದ ಸಂಪ್ರದಾಯ ಈ ಭಾಗದಲ್ಲಿ ಆದರಲ್ಲಿಯೂ ಘಟ್ಟದ ಮೇಲಿನ ಶಿರಸಿ-ಸಿದ್ದಾಪುರ ಪ್ರದೇಶದಲ್ಲಿ ಜಾರಿಯಲ್ಲಿ ಇದ್ದುದಾಗಿ ತಿಳಿದುಬಂದಿರುವುದು.* ಬಹುಶಃ ಬಾಯಿ ಮಾತಿನ ಒಪ್ಪಂದಕ್ಕಿಂತ ಬರವಣಿಗೆಯ ಒಪ್ಪಂದ ಎರಡೂ ಪಕ್ಷದವರಿಗೆ ಸುರಕ್ಷಿತವು ಅಥವಾ ಪರಸ್ಪರ ಅಪನಂಬಿಕೆಯಿಂದ ಈ ರೀತಿ ದುಡಿಮೆಯ ನೋಂದಣಿಯಾಗಿರುವಂತೆ ಕಂಡುಬರುವುದು. ೧೮೮೦-೮೨ ರಲ್ಲಿ ಶಿರಸಿ-ಸಿದ್ದಾಪುರ ತಾಲೂಕುಗಳಲ್ಲಿ ಸುಮಾರು ೨೦ ಜೀತದಾಳುಗಳ ಬಾಂಡುಗಳು ನೋಂದಾವಣೆಯಾದ ಬಗ್ಗೆ ದಾಖಲೆಗಳಿಂದ ತಿಳಿದು ಬರುವುದು. ಜೀತನಿಲ್ಲುವವರು ಕರಾರು ಪತ್ರ ಬರೆದುಕೊಡುತ್ತಿದ್ದರು. ಈ ಪತ್ರಕ್ಕೆ ಸಾಕ್ಷಿಗಳು ಸಹ

ಇರುತ್ತಿದ್ದರು. ಜೀತದಾಳಿನ ಸೇವೆಯನ್ನು ಊಟ ಮತ್ತು ಬಟ್ಟೆಕೊಡುವ ಕರಾರಿನ ಮೇಲೆ, ತಿಂಗಳಿಗೆ ಎರಡು ರೂ.ನಂತೆ ಇಲ್ಲದಿದ್ದಲ್ಲಿ ರೂ.ನಾಲ್ಕರಂತೆ ಮುರಿದು ಕೊಳ್ಳಲಾಗುತ್ತಿತ್ತು. ಜೀತದಾಳು ಅಸಲು ಮತ್ತು ಬಡ್ಡಿಗೆ ಸೇರಿ ದುಡಿಯಬೇಕಾಗುತ್ತಿತ್ತು. ಅತ್ಯಂತ ಅನುಭವಿ, ಆರೋಗ್ಯವಂತ ಜೀತದಾಳು ಆಗಿದ್ದರೆ ತಿಂಗಳಿಗೆ ೪ ರೂ.ನಂತೆ ಆಹಾರದೊಂದಿಗೆ ಬಟ್ಟೆ, ಕಂಬಳಿ, ಮೆಟ್ಟು ಮತ್ತು ೬ ರೂ.ನಂತೆ ಆದರೆ ಆಹಾರ ಬಟ್ಟೆ ಇಲ್ಲದೇ ಒಣಜೀತ ದುಡಿಯಬೇಕಾಗುತ್ತಿತ್ತು. ಯಜಮಾನನ ಮನೆಯಲ್ಲಿ ಊಟ ಮಾಡುವ ಜೀತದಾಳು ಹೆಚ್ಚಿನ ಅವಧಿಯನ್ನು ಸಾಹುಕಾರರ ಮನೆಯಲ್ಲಿ ಕಳೆಯಬೇಕಾಗುತ್ತಿತ್ತು; ಊಟವನ್ನು ತನ್ನ ಮನೆಯಲ್ಲಿಯೇ ಮಾಡುತ್ತಿದ ಜೀತದಾಳಿಗೆ ಸಾಮಾನ್ಯವಾಗಿ ಮೂರು ಗಂಟೆಗಳ ಬಿಡುವನ್ನು ಕೊಡಬೇಕಾಗುತ್ತಿತ್ತು. ಯಜಮಾನ ಸತ್ತರೆ ಅವನ ವಾರಸುದಾರರೊಂದಿಗೆ ಜೀತ ಮುಂದು ವರೆಯುತ್ತಿತ್ತು. ಆದರೆ ಜೀತದ ಆಳು ಸತ್ತರೆ ಸಾಲಕೊಟ್ಟವನಿಗೆ ಸಾಲಗಾರನ ಹೆಂಡತಿ ಮಕ್ಕಳ ಸೇವೆಯನ್ನು ಉಪಯೋಗಿಸುವ ಅಧಿಕಾರ ಸಾಮಾನ್ಯವಾಗಿ ಇರಲಿಲ್ಲ. ಒಂದು ವೇಳೆ ಕರಾರು ಪತ್ರದಲ್ಲಿ ಈ ವಿಷಯ ನಮೂದಾಗಿದ್ದರೆ ಅವರ ಸೇವೆಯನ್ನು ಉಪಯೋಗಿಸಬಹುದಾಗಿತ್ತು. ಈ ಎಲ್ಲಾ ಜೀತಗಳಲ್ಲಿ ಸಾಲದ ಉದ್ದೇಶ ಬಹುಪಾಲು ಮದುವೆಯ ಸಾಲಗಳಾಗಿರುತ್ತಿದ್ದವು: ೧೮೮೧ನೇ ಅಕ್ಟೋಬರ್ ೧೧ರ ಶಿರಸಿ ತಾಲ್ಲೂಕಿನ ಕಲಗುಣಿ ಹಳ್ಳಿಯ ಒಂದು ಜೀತಪತ್ರದಲ್ಲಿ ಗಂಡ-ಹೆಂಡತಿ ಇಬ್ಬರೂ ಒಡೆಯನ ಸಾಲಕ್ಕೆ ಜೀತನಿಂತ ಬಗ್ಗೆ ಜೀತದಾಳಿನ ಹೆಂಡತಿಗೆ ಒಡೆಯನು ಒದಗಿಸಬೇಕಾದ ಬಟ್ಟೆ, ಬರೆ ಮುಂತಾದ ವಿವರ, ಜೀತಕ್ಕೆ ತಪ್ಪಿದಲ್ಲಿ ಸರ್ಕಾರ ವಿಧಿಸುವ ಶಿಕ್ಷೆಯನ್ನು ಅನುಭವಿಸಲು ಜೀತದಾಳು ಮನಸಾರೆ ಒಪ್ಪಿಗೆ ನೀಡಿರುವ ವಿಷಯ ತಿಳಿದುಬರುವದು. ಈ ಪತ್ರಗಳು ಕೇವಲ ಒಪ್ಪಂದದ ಪಟ್ಟಿಗಳಾಗಿರದೇ ಅಂದಿನ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲುವವು. ನೋಡಿ ಅನುಬಂಧ - ೧.

ಒಂದು ವೇಳೆ ಸೇವಕರು ಯಜಮಾನನ ಸೇವೆಯನ್ನು ಪೂರೈಸದೇ ಇದ್ದಲ್ಲಿ ಅವನ ಮೇಲೆ ಯಾವುದೇ ಕಾನೂನಿನ ಕ್ರಮ ಜರುಗಿಸುವಂತೆ ಇರಲಿಲ್ಲ. ಕಾರಣ ಇಂತಹ ದಾವೆಗಳನ್ನು ಕರಾರು ಪತ್ರ ಇದ್ದರೂ, ನ್ಯಾಯಾಲಯ ಒಪ್ಪುತ್ತಿರಲಿಲ್ಲ. ಕಾರಣ ಬ್ರಿಟೀಷ್ ಸರ್ಕಾರವು ೧೮೪೩ರಲ್ಲಿ ಗುಲಾಮಗಿರಿಯನ್ನು ಕಾನೂನಿನ ಅನ್ವಯ ತೆಗೆದು ಹಾಕಿತ್ತು. ಆದರೂ ೧೮೬೦ರ ಒಪ್ಪಂದದ ಕಾನೂನು ಪ್ರಕಾರ ಜೀತವನ್ನು ನೊಂದಾಯಿಸುತ್ತಿದ್ದರು. ಜೀತದಾಳುಗಳನ್ನು ಅಡಿಕೆತೋಟ ಭತ್ತದ ಗದ್ದೆಯ ಕೆಲಸಕ್ಕೆ ಉಪಯೋಗಿಸ ಲಾಗುತ್ತಿತ್ತು. ಬಡ ಹವಿಕ ಹೆಣ್ಣು ಮಕ್ಕಳು ಅದೇ ಜಾತಿಯ ಶ್ರೀಮಂತರ ಮನೆಯಲ್ಲಿ ಆಹಾರ, ಬಟ್ಟೆಗೋಸ್ಕರ ದುಡಿಯುತ್ತಿದ್ದರು.

### ಜೀತನಿರತರು

ಸಾಮಾನ್ಯವಾಗಿ ಕೆಳವರ್ಗದವರಲ್ಲಿ ಹೊಲೆಯರು, ಮಾದಿಗರು ಮುಖರಿಗಳು, ದೀವರು, ಚಲುವಾದಿ, ಆರೇರು ಮುಂತಾದವರು ಜೀತದಾಳಾಗಿ ಸೇವೆಯನ್ನು ಮಾಡುತ್ತಿದ್ದರು. ೧೮೦೦ರಲ್ಲಿ ಗಂಡಸರ ಒಂದು ವರ್ಷದ ಕೂಲಿ ರೂ. ೨೪, ಇದರೊಂದಿಗೆ ದಿನಕ್ಕೆ ಮೂರು ಊಟಗಳು ವರ್ಷಕ್ಕೆ ಒಂದು ಕಂಬಳಿ ಮತ್ತು ಒಂದು ಟಾವೆಲ್ಲ ನೀಡಲಾಗುತ್ತಿತ್ತು. ಹೆಂಗಸರಿಗೆ ದಿನದ ಕೂಲಿ ೧½ ಸೇರು ಅಕ್ಕಿ, ಮೇಲೆ ಒಂದಾಣೆ ನಗದು ರೂಪದಲ್ಲಿ ಕೊಡಲಾಗುತ್ತಿತ್ತು. ೧೮೮೪ರ ಸುಮಾರಿಗೆ ಕೂಲಿಯ ಪ್ರಮಾಣ ಗಣನೀಯವಾಗಿ ಹೆಚ್ಚಳಗೊಂಡಿದ್ದರಿಂದ ಜೀತಪದ್ಧತಿಯು ತನ್ನಿಂದ ತಾನೇ ಕಡಿಮೆಯಾಗುತ್ತಾ ನಡೆಯಿತು. [ಆದರೆ ಇದುವರೆಗೂ ಒಂದಲ್ಲ ಒಂದು ವಿಧದಲ್ಲಿ ಅದು ಮುಂದುವರೆದು ಬರುತ್ತಿದೆ.] ಸುಗ್ಗಿಯ ನಂತರ ಬಡವರ್ಗದವರು ಸಾಮಾನು ಸಾಗಾಣಿಕೆ ವೃತ್ತಿಯಲ್ಲಿ ತೊಡಗುತ್ತಿದ್ದರು. ಅಲ್ಲದೇ ರಸ್ತೆ, ಸೇತುವೆ ನಿರ್ಮಾಣದಲ್ಲಿಯೂ ತೊಡಗುತ್ತಿದ್ದರು. ಕುಮಟಾ ಮತ್ತು ಕಾರವಾರಗಳಲ್ಲಿ ಹತ್ತಿ ಜೀನು ಮಾಡುವ ಉದ್ಯೋಗದಲ್ಲಿ ತೊಡಗುತ್ತಿದ್ದರು.

### ಹಣದ ವಿನಿಯೋಗ

೧೮೬೨-೬೩ ರಲ್ಲಿ ಕಾರವಾರ ಜಿಲ್ಲಾ ಕೇಂದ್ರವಾದನಂತರ ಕಾರವಾರ, ಕುಮಟಾಗಳಲ್ಲಿ ಮನೆ ನಿವೇಶನಗಳ ಬೆಲೆ ಹೆಚ್ಚಾಯಿತು. ಅದಕ್ಕೂ ಮೊದಲಿಗೆ ಅಂಕೋಲಾ, ಶಿರಸಿ, ಕುಮಟಾ ಹಳ್ಳಿಯಾಳಗಳಲ್ಲಿ ಬೇಡಿಕೆಯೇ ಇರಲಿಲ್ಲ. ೧೮೬೯-೭೪ರಲ್ಲಿ ಕಾರವಾರವು ರೈಲು ಸಂಪರ್ಕವನ್ನು ಪಡೆಯುವ ಸುದ್ದಿಯು ವ್ಯಾಪಕವಾಗಿ ಹರಡಿ ಭೂಮಿಯ ಬೆಲೆ ಬಹಳ ಮಟ್ಟಿಗೆ ಹೆಚ್ಚಾದವು. ಇದರಿಂದ ಅನೇಕ ಸಾರಸ್ವತರು, ಶೇಣವಿಗಳು, ಪಾರ್ಶಿಗಳು, ಬೊಂಬಾಯಿಯ ಯುರೋಪಿಯನ್ ಕಂಪನಿಗಳು ಇಲ್ಲಿ ಭೂಮಿಯನ್ನು ಹೆಚ್ಚಿನ ಬೆಲೆಗೆ ಕೊಂಡು ಅಂಗಡಿ, ಉಗ್ರಾಣಗಳನ್ನು ಕಟ್ಟಿಸಿದರು. ಆದರೆ ಈ ಯೋಜನೆ ರದ್ದಾದನಂತರ ತಾವು ಕೊಂಡ ಜಾಗಗಳನ್ನು ಅತ್ಯಂತ ಕಡಿಮೆ ಬೆಲೆಗೆ ಮಾರಬೇಕಾಯಿತು. ಉದಾ: ೪೦ x ೪೦ ಚ. ಅಳತೆಯ ಒಂದು ಜಾಗೆಗೆ ೧೮೬೭ ರಲ್ಲಿ ರೂ. ೧೦೦ ರಿಂದ ೪೦೦ ಬೆಲೆಬಾಳುತ್ತಿದ್ದರೆ, ೧೮೮೨ರಲ್ಲಿ ರೂ. ೨೦ ರಿಂದ ೫೦ ವರೆಗೆ ದರ ಇಳಿಯಿತು. ಆದರೆ ವ್ಯವಸಾಯ ಭೂಮಿಯ ಬೆಲೆ ಹೆಚ್ಚಳವಾಗಿತ್ತು.

### ಭೂಮಿಯ ಮೇಲೆ ಹಣ ತೊಡಗಿಸುವವರು

ಭೂಮಿಯ ಮೇಲೆ ಹಣ ತೊಡಗಿಸುವವರಲ್ಲಿ ಲಿಂಗಾಯಿತರು, ಹಬ್ಬುಗಳು, ಹವಿಕರು, ಕೊಂಕಣಿಗಳು, ಶೇಣವಿಗಳು, ಪ್ರಮುಖರಾಗಿದ್ದರು. ಭೂಮಿಯ ನಂತರದ ಪ್ರಮುಖ

ಹಣ ಹೂಡಿಕೆ ಚಿನ್ನಾಭರಣಗಳಲ್ಲಿ ಆಗಿತ್ತು. ಕಾಟನ್ ಬೂಮ್‌ನ ಅವಧಿಯಲ್ಲಿ ಜಿಲ್ಲೆಯಲ್ಲಿ ಅಕ್ಕಸಾಲಿಗರ ಸಂಖ್ಯೆ ಹೆಚ್ಚಾಯಿತು. ಈ ಜಿಲ್ಲೆಯಲ್ಲಿ ೩೬೧ ಮಂದಿ ಅನುಮತಿ ಪಡೆದ ಅಕ್ಕಸಾಲಿಗರು ಇದ್ದರು ಎಂದು ವರದಿಯಿಂದ ತಿಳಿದುಬರುವದು.

### ವಾಣಿಜ್ಯ ಬ್ಯಾಂಕುಗಳು

ಕರ್ನಾಟಕದಲ್ಲಿ ವ್ಯವಸ್ಥಿತ ವಾಣಿಜ್ಯ ಬ್ಯಾಂಕುಗಳ ಇತಿಹಾಸ ಸುಮಾರು ೧೩೪ ವರ್ಷಗಳಷ್ಟು ಹಳೆಯದು. ಈ ಮೊದಲೇ ತಿಳಿಸಿದಂತೆ ೧೮೬೩ ರಲ್ಲಿ ಧಾರವಾಡದಲ್ಲಿ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕಿನ (೧೮೪೦) ಶಾಖೆಯನ್ನು ಪ್ರಾರಂಭಿಸಲಾಯಿತು. ಇದು ಅಂದಿನ ಬೊಂಬಾಯಿ ಕರ್ನಾಟಕದ ಪ್ರದೇಶದಲ್ಲಿ ಪ್ರಥಮ ಸರ್ಕಾರಿ ವಲಯದ ಬ್ಯಾಂಕಿನ ಶಾಖೆಯಾಗಿತ್ತು. ಅಂದಿನ ದಿನಗಳಲ್ಲಿ ಹತ್ತಿಯ ವ್ಯಾಪಾರದಲ್ಲಿ ತೊಡಗಿದ್ದ ಈ ಭಾಗದ ವ್ಯಾಪಾರಸ್ಥರಿಗೆ, ಯುರೋಪಿಯನ್ ಕಂಪನಿಗಳಿಗೆ ಹಣಕಾಸಿನ ನೆರವನ್ನು ಒದಗಿಸುವುದು ಮತ್ತು ಈ ಭಾಗದ ಉಳಿತಾಯದ ಹಣವನ್ನು ಬೇರೆ ಕಡೆಗೆ ವಿನಿಯೋಗಿಸುವುದು ಅಲ್ಲದೇ ಈ ಭಾಗದ ಅಭಿವೃದ್ಧಿಗೆ ಸಹಾಯಕವಾಗುವುದು ಇವೆ ಮುಂತಾದವುಗಳು ಶಾಖೆಯ ಮುಖ್ಯ ಉದ್ದೇಶವಾಗಿತ್ತು. ಬೊಂಬಾಯಿ ಬ್ಯಾಂಕು ಬೆಳಗಾವಿ (೧೮೬೭), ಹುಬ್ಬಳ್ಳಿ (೧೮೭೦), ಕುಮಟಾ(೧೮೭೨-೭೩)ಗಳಲ್ಲಿ ತನ್ನ ಶಾಖೆಗಳನ್ನು ಪ್ರಾರಂಭಿಸಿತ್ತು ಎಂದು ತಿಳಿದು ಬರುವುದು. ಇದಕ್ಕೂ ಪೂರ್ವದಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯ ಬ್ಯಾಂಕು (೧೮೪೩) ಬೆಂಗಳೂರಿನ ದಂಡು ಪ್ರದೇಶ (೧೮೬೪), ಮಂಗಳೂರು (೧೮೬೭) ಮುಂತಾದ ಕಡೆಗಳಲ್ಲಿ ತನ್ನ ಶಾಖೆಗಳನ್ನು ಪ್ರಾರಂಭಮಾಡಿತ್ತು. ಧಾರವಾಡದ ಪ್ರಥಮ ಶಾಖೆಯನ್ನು ೧೫ ವರ್ಷದ ನಂತರ ೧೮೭೮ ರಲ್ಲಿ ಮುಚ್ಚಲಾಯಿತು. ಅಂತಿಮವಾಗಿ ಹುಬ್ಬಳ್ಳಿಯ ಶಾಖೆಯನ್ನು ೧೮೮೪ ರಲ್ಲಿ ಮುಚ್ಚಲಾಯಿತು.

### ದೇಶಿಯ ಬ್ಯಾಂಕುಗಳು

ಬೊಂಬಾಯಿದೊಂದಿಗೆ ಈ ಜಿಲ್ಲೆಯ ಸಂಪರ್ಕ ಹಳೆಯದಾಗಿದ್ದರೂ ಬೊಂಬಾಯಿ ಮೂಲದ ಯಾವ ಬ್ಯಾಂಕೂ ಈ ಜಿಲ್ಲೆಯಲ್ಲಿ ಪ್ರಾರಂಭದಲ್ಲಿ ಯಾವುದೇ ಶಾಖೆಯನ್ನು ತೆರೆಯಲೇ ಇಲ್ಲ ಎಂಬುದು ಗಮನಾರ್ಹ. ಈ ಜಿಲ್ಲೆಯ ಅಂದಿನ ಜನ ಸಾಮಾನ್ಯರ ಆರ್ಥಿಕ ಸ್ಥಿತಿಗತಿ 'ಮನಿಆರ್ಡರ್ ಎಕಾನೆಮಿ' ಆಗಿತ್ತು, ಈ ಜಿಲ್ಲೆಗೆ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆ ಕಾಯಂ ಆಗಿ ರೂಪುಗೊಂಡದ್ದು ೧೯೨೯ ರಲ್ಲಿ ಸಿಂಡಿಕೇಟ್ ಬ್ಯಾಂಕಿನ ಶಾಖೆಯನ್ನು ಕುಮಟಾದಲ್ಲಿ ಪ್ರಾರಂಭಿಸುವ ಮೂಲಕ. ಕುಮಟಾ ಶಾಖೆಯು ಸಿಂಡಿಕೇಟ್ ಬ್ಯಾಂಕಿನ ಪ್ರಥಮ ಶಾಖೆಯಾಗಿತ್ತು. [ಕುಮಟಾ ಅಂದಿನ ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿದ್ದ ಟಿ.ಎಂ.ಎ. ಪೈ ಅವರ ಮಾವನ ಊರಾಗಿತ್ತು ಎಂಬುದು ಬೇರೆ ವಿಷಯ.] ನಂತರ ಕಾರವಾರ (೧೯೩೧) ಹೊನ್ನಾವರ (೧೯೩೩) ಸಿರ್ಸಿ ಮತ್ತು ಅಂಕೋಲಾ (೧೯೩೪) ಬಟಕಳ (೧೯೩೬) - ಈ ರೀತಿ ಬ್ಯಾಂಕಿಂಗ್ ಶಾಖೆಗಳು ಹೆಚ್ಚುತ್ತ ಹೋದವು.

### ಜಿಲ್ಲೆಯಿಂದ ಮೂಡಿಬಂದ ಬ್ಯಾಂಕುಗಳು

ದಕ್ಷಿಣ ಕನ್ನಡ ಜಿಲ್ಲೆಯು ದೇಶದಲ್ಲಿಯೇ **ಬ್ಯಾಂಕಿಂಗ್ ಉದ್ಯಮದ ತೊಟ್ಟಿಲು** ಎಂದು ಪ್ರಖ್ಯಾತವಾಗಿದ್ದರೂ ಭೌಗೋಳಿಕವಾಗಿ ಅದರೊಂದಿಗೆ ಹೊಂದಿಕೊಂಡಿರುವ ಈ ಜಿಲ್ಲೆಯಿಂದ ಜನಿಸಿದ ಪ್ರಥಮ ಬ್ಯಾಂಕು (೧೯೪೪) ರಲ್ಲಿ ಕಾರವಾರದಲ್ಲಿ ಪ್ರಾರಂಭಗೊಂಡ ದಿ **ಬ್ಯಾಂಕ್ ಆಫ್ ರೂರಲ್ ಇಂಡಿಯಾ** ಆಗಿತ್ತು. ಶ್ರೀ. ಜೆ. ಡಿ. ಸಿಲ್ವಾ ಅವರು ಅದರ ಅಧ್ಯಕ್ಷರಾಗಿದ್ದರು. ೧೯೪೪ ರಲ್ಲಿ ಈ ಸಂಸ್ಥೆಯು ಸಿರ್ಸಿ, ಕುಮಟಾ, ಹೊನ್ನಾವರ ಹುಬ್ಬಳ್ಳಿ, ಧಾರವಾಡದ ಶಾಖೆಗಳೂ ಸೇರಿದಂತೆ ೫ ಶಾಖೆಗಳನ್ನು ಹೊಂದಿತ್ತು. ಈ ಸಂಸ್ಥೆ ಸುಮಾರು ೧೦ ವರ್ಷ ಕಾರ್ಯನಿರ್ವಹಿಸಿದಂತೆ ತಿಳಿದುಬರುವುದು. ಬೆಳಗಾವಿ ಮೂಲದ **ಬ್ಯಾಂಕ್ ಆಫ್ ಸಿಟಿಜನ್ಸ** (೧೯೩೭) ಕಾರವಾರದಲ್ಲಿ ಒಂದು ಶಾಖೆಯನ್ನು ಹೊಂದಿತ್ತು. ಸಿಟಿಜನ್ಸ ಬ್ಯಾಂಕ್ ೧೯೬೧ ರಲ್ಲಿ ಕಾರ್ಪೋರೇಷನ್ ಬ್ಯಾಂಕಿನೊಂದಿಗೆ ವಿಲೀನಗೊಂಡಿತು. ಕುಂದಾಪುರ ಮೂಲದ ***ಅಗ್ರಿಕಲ್ಚರ್ ಮತ್ತು ಇಂಡಸ್ಟ್ರಿಯಲ್ ಬ್ಯಾಂಕ್*** (೧೯೩೪) ಕಾರವಾದಲ್ಲಿ ತನ್ನ ಒಂದು ಶಾಖೆಯನ್ನು ಹೊಂದಿತ್ತು. ಸದರಿ ಬ್ಯಾಂಕು ೧೯೫೩ ರಲ್ಲಿ ವಿಸರ್ಜನೆಗೊಂಡಿತು. ಕಾರವಾರ ಶಾಖೆಯನ್ನು ಮುಚ್ಚಲಾಯಿತು. ೧೯೪೪ ರಲ್ಲಿ ಬೊಂಬಾಯಿ ಮೂಲದ ***ವಿಠಲ, ಶಾಮರಾವ್ ಸಹಕಾರಿ ಬ್ಯಾಂಕು*** ಕಾರವಾರದಲ್ಲಿ ತನ್ನ ಶಾಖೆಯನ್ನು ತೆರೆಯಿತು.

ವಾಣಿಜ್ಯ ಬ್ಯಾಂಕುಗಳು ಪ್ರಾರಂಭಗೊಳ್ಳುವ ಹಲವು ದಶಕಗಳ ಮೊದಲು ಸ್ಥಳೀಯ ವರ್ತಕರ ಅವಶ್ಯಕತೆಗಳನ್ನು ಪೂರೈಸಲು ಸಹಕಾರಿ ಬ್ಯಾಂಕುಗಳು ತಮ್ಮದೇ ಆದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಆದ್ದರಿಂದ ವಾಣಿಜ್ಯ ಬ್ಯಾಂಕುಗಳ ಬೆಳವಣಿಗೆ ಸ್ವಾತಂತ್ರ್ಯ ಪೂರ್ವದಲ್ಲಿ ಅಷ್ಟೊಂದು ವ್ಯಾಪಕವಾಗಿರಲಿಲ್ಲ.

### ಸಹಕಾರಿ ವಲಯದ ಬ್ಯಾಂಕಿಂಗ್

*ಭಾರತದಲ್ಲಿಯೇ ಸಹಕಾರದ ಪ್ರಥಮ ತೊಟ್ಟಿಲು ತೂಗಿದ್ದು ಇಂದಿನ ಗದಗ ಜಿಲ್ಲೆಯ ಗದಗ ತಾಲ್ಲೂಕಿನ ಕಣಗಿನಹಾಳದಲ್ಲಿ ೧೯೦೫ ಮೇ ೮ ರಂದು.* ಈ ಜಿಲ್ಲೆಯಲ್ಲಿಯೂ ಸಹಕಾರ ಚಳುವಳಿ ಪ್ರಪ್ರಥಮವಾಗಿ ಪ್ರಾರಂಭವಾದುದು ೧೯೦೫ ರಲ್ಲಿ. ಸಿರ್ಸಿಯಲ್ಲಿ ಪ್ರಾರಂಭಗೊಂಡ ಗ್ರಾಮೀಣ ಪತ್ತಿನ ಸಹಕಾರಿ ಸಂಘಗಳ ಮೂಲಕ ಇದೇ ಸಂಸ್ಥೆ ಮುಂದೆ ೧೯೧೩ ರಲ್ಲಿ ಪಟ್ಟಣ ಸಹಕಾರಿ ಬ್ಯಾಂಕಾಗಿ ಬೆಳೆದು ಇಂದು ಜಿಲ್ಲೆಯ ಸಹಕಾರಿ ವಲಯದ ಒಂದು ಪ್ರಮುಖ

ಸಾಂಸ್ಥಿಕ ಹಣಕಾಸು ಸಂಸ್ಥೆಯಾಗಿ ಬೆಳೆದಿದೆ. ಗ್ರಾಮೀಣ ಆರ್ಥಿಕ ವ್ಯವಸ್ಥೆಯ ಅವಶ್ಯಕತೆಗಳನ್ನು ತಕ್ಕಮಟ್ಟಿಗೆ ಪೂರೈಸಲು ಅನುಕೂಲವಾಗುವಂತೆ ಮುಂಡಗೋಡ (೧೯೧೧), ಹಳಿಯಾಳ (೧೯೧೨), ಪಾಳಾ (೧೯೧೩)ಗಳಲ್ಲಿ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘಗಳು ಮೂಡಿ ಬಂದವು. ವ್ಯವಸಾಯೇತರ ಉದ್ದೇಶಗಳಿಗೆ ಸಾಲ ನೀಡುವ ಸಹಕಾರಿ ಸಂಸ್ಥೆಗಳಲ್ಲಿ ಸಿರ್ಸಿಯಲ್ಲಿ ೧೯೧೧ ರಲ್ಲಿಯೇ **ಚರ್ಮಕಾರ ಪರಸ್ಪರ ಪತ್ತಿನ ಸಹಕಾರ ಸಂಘ** ಪ್ರಾರಂಭವಾಯಿತು. (ನಂತರ ಇದು ಸಮಾಪನ ಗೊಂಡಿತು).

ನಗರದ ಮಧ್ಯಮವರ್ಗದ ವ್ಯವಸಾಯೇತರ ಚಟುವಟಿಕೆಗಳಿಗೆ ಹಣಕಾಸಿನ ನೆರವನ್ನು ಒದಗಿಸಲು ಕಾರವಾರ (೧೯೧೨), ಕುಮಟಾ (೧೯೧೨), ಹೊನ್ನಾವರ(೧೯೧೨), ಪಟ್ಟಣ ಸಹಕಾರ ಬ್ಯಾಂಕುಗಳು ಮತ್ತು ಜಾತಿ ಆಧಾರಿತ ಸಾಲ ಸಂಸ್ಥೆಗಳು ಜಿಲ್ಲೆಯ ಹಲವು ಭಾಗಗಳಲ್ಲಿ ಪ್ರಾರಂಭಗೊಂಡವು. ಸಿರ್ಸಿ, ಸಿದ್ದಾಪುರ, ಯಲ್ಲಾಪುರ ಭಾಗದ ತೋಟದ ಬೆಳೆಗಾರರ ಅನುಕೂಲತೆಗಾಗಿ ಟಿ. ಎಸ್. ಎಸ್. ೧೯೧೩ ರಲ್ಲಿ ಕಾರ್ಯಾರಂಭ ಮಾಡಿತು. ಈ ಸಂಸ್ಥೆ ಮುಂದೆ ೧೯೬೩ ರಲ್ಲಿ ರೂರಲ್ ಬ್ಯಾಂಕ್ ಆಗಿ ಪುನರ್ ರಚನೆಗೊಂಡಿತು. ಕರಾವಳಿಯ ಮೀನುಗಾರರ ಅವಶ್ಯಕತೆಯನ್ನು ಪೂರೈಸಲು ೧೯೧೫ ರಲ್ಲಿ ಹರಿಕಂತಾರ ಖಾರ್ವಿ ಮೀನುಗಾರ ಸಹಕಾರ ಸಂಘ ಕಾರವಾರದಲ್ಲಿ ಪ್ರಾರಂಭವಾಯಿತು. ಇಂತಹ ಎರಡನೇ ಸಂಘ ಮಾಜಾಳಿಯಲ್ಲಿ ೧೯೨೧ರಲ್ಲಿ ಪ್ರಾರಂಭವಾಯಿತು. ೧೯೨೦ರಲ್ಲೂ ಇಂದಿನ ಜಿಲ್ಲಾಕೇಂದ್ರ ಸಹಕಾರ ಬ್ಯಾಂಕ್ ರಚನೆಗೊಂಡನಂತರ ಜಿಲ್ಲೆಯ ಸಹಕಾರ ಚಳವಳಿಗೆ ಹೊಸ ಚಾಲನೆ ದೊರೆಯಿತು. ಸಹಕಾರ ರಂಗದ ಚಟುವಟಿಕೆಗಳು ವಿಸ್ತೃತಗೊಂಡವು. ೧೯೨೦-೩೦ ರ ದಶಕದಲ್ಲೂ ತಾಲ್ಲೂಕು ಅಭಿವೃದ್ಧಿ ಸಂಘಗಳು ರಚನೆಗೊಂಡವು. ಅವುಗಳ ಮೂಲ ಉದ್ಧೇಶ ಹೆಚ್ಚು ಆಹಾರ ಬೆಳೆಯುವಲ್ಲೂ ಮಾರ್ಗದರ್ಶಿ, ಪ್ರೋತ್ಸಾಹ ನೀಡುವದಾಗಿತ್ತು.

ಕೃಷಿಕ ವಲಯದ ಅನೇಕ ಅವಶ್ಯಕತೆಗಳನ್ನು ಪೂರೈಸಲು ಸಹಕಾರ ಸಂಘಗಳು ಮೂಡಿಬಂದವು. ಇವು ಸಂಘಶಕ್ತಿಯ ಪ್ರತೀಕವಾಗಿದ್ದವು. ಉದಾ: ಬೇಲಿಹಾಕುವ ಸಹಕಾರ ಸಂಘ, ಹುನಗುಂದ, ಮುಂಡಗೋಡ ತಾಲೂಕು (೧೯೨೫), ಪುಟ್ಟಣಮನೆ ಸಿರ್ಸಿ ತಾಲೂಕು ಬೆಳೆ ರಕ್ಷಣಾ ಸಹಕಾರ ಸಂಘವು (೧೯೪೯)ರಲ್ಲಿ ಪ್ರಾರಂಭಗೊಂಡಿತು. ಬೆಳೆಗಳನ್ನು ಕೋತಿ ಮತ್ತು ಕಾಡುಮೃಗಗಳಿಂದ ರಕ್ಷಿಸುವದು ಈ ಸಂಘಗಳ ಉದ್ದೇಶವಾಗಿತ್ತು. ಈ ಸಂಘಗಳಿಗೆ ಜಿಲ್ಲಾಬೋರ್ಡು, ಸಂಘದ ಸದಸ್ಯರು ಕೊಂದ ಕಾಡುಪ್ರಾಣಿಗಳ ಬಾಲದ ಆಧಾರದ ಮೇಲೆ ಬಾಲಕ್ಕೆ ಒಂದು ರೂನಂತೆ ಸಹಾಯ ಧನ ನೀಡುತ್ತಿದ್ದವು. ಈ ಸಂಘ ೧೯೫೨ ರ ವರೆಗೆ ಇತ್ತು.

ಒಡ್ಡು ಹಾಕುವ ಮೂರು ಸಂಘಗಳು ಈ ಜಿಲ್ಲೆಯಲ್ಲಿ ೧೯೫೨-೫೩ ರಲ್ಲಿ ನೋಂದಾಯಿಸಲ್ಪಟ್ಟವು. ಅದರಂತೆ ಜೇನು ಕೃಷಿಕರಿಗೆ ನೆರವಾಗಲು ಹೊನ್ನಾವರದಲ್ಲಿ ಜೇನು ಸಹಕಾರ ಸಂಘ ೧೯೪೧), ಹಿಳಕಡದಲ್ಲಿ ಅರಣ್ಯ ಕೂಲಿಕಾರರ ಸಂಘ (೧೯೪೯), ಉಪ್ಪು ತಯಾರಕರ ಸಂಘ ನಾಗರಬೈಲು (೧೯೫೨) ಮುಂತಾದವು ಪ್ರಾರಂಭಗೊಂಡವು. ದೀರ್ಘಾವಧಿ ಸಾಲಗಳ ಅವಶ್ಯಕತೆಯನ್ನು ಪೂರೈಸಲು ೧೯೩೫ ರಲ್ಲಿ ಕಾರವಾರದಲ್ಲಿ ಭೂಅಭಿವೃದ್ಧಿ ಬ್ಯಾಂಕನ್ನು ಪ್ರಾರಂಭಿಸಲಾಯಿತು. ಈ ಮೇಲೆ ವಿವರಿಸಿದ ಸಹಕಾರ ಸಂಘಗಳಲ್ಲಿ ಕೆಲವು ಸಂಸ್ಥೆಗಳು ಅತ್ಯಂತ ಮಾದರಿಯವಾಗಿದ್ದು ಇಂದಿಗೂ ಕಾರ್ಯ ನಿರ್ವಹಿಸುತ್ತಿವೆ. ಉದಾ: ಸಿರ್ಸಿ ಪಟ್ಟಣ ಬ್ಯಾಂಕ್ (೧೯೧೩)- ಇದು ೧೯೩೦-೪೦ ರ ದಶಕದ ಆರ್ಥಿಕ ಹಿನ್ನಡೆಯಲ್ಲಿ ಸದಸ್ಯರಿಗೆ ಅತ್ಯಂತ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿತು. ಇದಕ್ಕೂ ಮೊದಲಿಗೆ ೧೯೧೬-೧೯ ರ ಅವಧಿಯಲ್ಲಿ ಇದು ಕೇಂದ್ರ ಸಹಕಾರಿ ಬ್ಯಾಂಕಿನಂತೆ ಕಾರ್ಯನಿರ್ವಹಿಸುತ್ತಿತ್ತು. ಅದರಂತೆ ಟಿ.ಎಸ್.ಎಸ್. ಎಂದೇ ಪ್ರಚಲಿತ ಇರುವ ಸಿರ್ಸಿ ನಗರದ ತೋಟದ ಬೆಳೆಗಾರರ ಮಾರಾಟ ಸಂಘ ಘಟ್ಟದ ಮೇಲಿನ ಬಹುಪಾಲು ತೋಟದ ಬೆಳೆಗಾರರ ಅವಶ್ಯಕತೆಯನ್ನು ಪೂರೈಸುತ್ತಿರುವ ಜಿಲ್ಲೆಯ ಪ್ರಮುಖ ಸಹಕಾರ ಸಂಸ್ಥೆಯಾಗಿದೆ. ಅದರಂತೆ ಸಾಣಕಟ್ಟದ ಉಪ್ಪು ತಯಾರಕರ ಸಂಘ, ಕದರಿಯ ಮೀನುಗಾರರ ಸಹಕಾರ ಸಂಘ ಮುಂತಾದವುಗಳು. ಇವು ಕೇವಲ ಉದಾಹರಣೆಗಳು.

**ಅನುಬಂಧ - ೧**

*Bira, Dyava, and Gurappa, sons of Habler Bira, **living in Islur in Sirsi**, in favour of **Subaya Hegde**, son of **Krishna Hegde, living in Chippige in Sirsi**. We have this day borrowed from you Rs. 60 required for the marriage of one of us Dyava. We are not in a position to pay back this amount to you, but in its place agree to the following conditions: One of us three will properly serve at your place and the sum of Rs. 18, the salary agreed, will go towards the payment of the principal amount and this service will continue till the whole amount is paid. Then this document will be taken back from you duly endorsed. **If without any reasonable cause the service is denied any day contrary to the conditions of this contract, we agree to pay you in one lump sum the amount that may remain unpaid till that day, together with interest at 25 per cent which will be***

***calculated on the amount then due.*** *This bond will then be taken back duly endorsed. As we have promised to pay off the debt by service, the responsibility of answering you rests with all three of us, should we by acting contrary to the conditions of this agreement break our faith with you.* ***This bond is executed with our full consent*** *this day the 3rd of June 1881.*

*Witnesses,* *Signed.......................*

*Signed......................*

ಅನುಬಂಧ - ೨

ಗಂಡ ಹೆಂಡತಿ ಇಬ್ಬರೂ ಒಡೆಯನಲ್ಲಿ ಜೀತ ಮಾಡುವವರೆಗೂ ಬರೆದು ಕೊಡಲಾಗಿರುವ ಪತ್ರ:

*Shanna bin Malla Halayar, living in* ***Happige in the Kalguni village of Karur in Sirsi, in favour of Narnabhatta son of Shankarbhatta,*** *also living in Hippige. On this day* ***I have borrowed from you Rs. 100 for my marriage****. I am unable to pay this amount in a lump sum as have no other assistance. I have therefore agreed before these persons to pay off this amount by service.* ***My monthly pay will be one rupee and you will also give me every year a blanket, a waistcloth five yards long and a headscarf three yards long, and for the use of my wife a robe and two bodices. Both of us will work at your place.*** *My pay will go towards the clearing of the debt.* ***If before the debt is cleared we keep away from your service and attend some one else, we will undergo the punishment awarded to us by the Sirkar for our*** *failure to abide by the conditions of this contract and after the punishment is undergone, we will labour at your place and thus clear off the debt. Also we will not conduct ourselves contrary to the conditions mentioned above. This service bond is executed with my pleasure and consent, this day the* ***11th of October 1881.***

*Witnesses,* *Signed.............................*

*Signed..............................*

*B 816-5*

## ಗ್ರಂಥ ಋಣ


೧. Gazetteer of Bombay Presidency, Kanara District, Part - I, 1883.

೨. Banking Development in N. K. District, Pismy Economic Review Jan 1974 and Fifty years of Banking in Karwar. July 1981.

೩. ಎಸ್. ಕೆ. ತಿಂಗಳಾಯ: **ಕರ್ನಾಟಕದಲ್ಲಿ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆ**, ಬೆಂಗಳೂರು, ೧೯೮೬.

೪. District Gazetteer of Uttar Kannada and the State Gazetteer, Govt of Karnataka.

೫. ಸಹಕಾರಿ ಸಂಸ್ಥೆಗಳ ಆಡಳಿತ ವರದಿ ಮತ್ತು ಸ್ವಂತ ಮಾಹಿತಿ ಸಂಗ್ರಹಣೆ

ಡಾ॥ ಎಂ. ವೈ. ಸಾವಂತ *

# ಸ್ವಾತಂತ್ರ್ಯ ಹೋರಾಟದಲ್ಲಿ ಧಾರವಾಡದ ಪಾತ್ರ

ವಿದ್ಯೆ - ಸಂಸ್ಕೃತಿಗಳ ತವರಾದ ಧಾರವಾಡವು ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನದೇ ಆದ ಒಂದು ಪ್ರಮುಖ ಪಾತ್ರ ವಹಿಸಿದೆ. *ಕನ್ನಡದ ಪುನರುಜ್ಜೀವನಕ್ಕೆ, ಕರ್ನಾಟಕದ ಏಕೀಕರಣಕ್ಕೆ ನಾಂದಿ ಹಾಡಿದ ಈ ಧಾರವಾಡ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂಬ ಹೆಮ್ಮೆಯ ಸ್ಥಾನಗಳಿಸಿತು. ನಮ್ಮ ದೇಶ ಸ್ವಾತಂತ್ರ್ಯ ಸುವರ್ಣಮಹೋತ್ಸವ ಆಚರಿಸುತ್ತಿರುವ ಈ ಸಂದರ್ಭದಲ್ಲಿ ಅಂದಿನ ಧಾರವಾಡದ ಜನರ ಹೋರಾಟ, ತ್ಯಾಗ ಮತ್ತು ಬಲಿದಾನಗಳನ್ನು ಸ್ಮರಿಸಿಕೊಳ್ಳುವುದು ನಮ್ಮ ಧರ್ಮ.*

ಹತ್ತೊಂಭತ್ತನೆಯ ಶತಮಾನದಲ್ಲಿ ಸಾಮಾಜಿಕ, ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲುಂಟಾದ ನವೋದಯವು ದೇಶದ ಇತರ ಭಾಗಗಳಲ್ಲಿ ಆದಂತೆ ಧಾರವಾಡದ ಜನತೆಯಲ್ಲಿ ರಾಷ್ಟ್ರ ಪ್ರಜ್ಞೆಯನ್ನು ಬಡಿದೆಬ್ಬಿಸಿತು. ಅಂದು ಜನ್ಮತಾಳಿದ ಮಹನೀಯರು ಬ್ರಿಟೀಷರ ದಬ್ಬಾಳಿಕೆಯ ಅನರ್ಥವನ್ನು ಜನರಿಗೆ ಮನದಟ್ಟು ಮಾಡಿ ಅವರಲ್ಲಿ ಜಾಗೃತಿಯ ಬೀಜ ಬಿತ್ತಿ ರಾಷ್ಟ್ರೀಯತೆಯನ್ನು ಉದ್ದೀಪಿಸಲು ಕಾರಣೀಭೂತರಾದರು.

ಆಗ ಉತ್ತರ ಕರ್ನಾಟಕವು ಮುಂಬೈ ಪ್ರಾಂತಕ್ಕೆ ಸೇರಿದ್ದರಿಂದ ಅಲ್ಲಿನ ಮುಖಂಡರ ಪ್ರಭಾವಕ್ಕೆ ಅದು ಒಳಗಾಯಿತು. ಪುಣೆಯು ರಾಜಕೀಯ ಚಟುವಟಿಕೆಗಳ ಕೇಂದ್ರಸ್ಥಳವಾಗಿತ್ತು. 'ಪುಣೆಯಲ್ಲಿ ಮಳೆಯಾದರೆ ಧಾರವಾಡದಲ್ಲಿ ಕೊಡೆ ಹಿಡಿಯುತ್ತಿದ್ದರು' ಎಂಬ ಹೇಳಿಕೆ ಆಗ ಪ್ರಚಲಿತವಿತ್ತು. ಅಂದರೆ ಪುಣೆಯಲ್ಲಿ ಯಾವುದೇ ಚಳುವಳಿ ಅಥವಾ ಹೊಸ ಪತ್ರಿಕೆಗಳು ಪ್ರಾರಂಭವಾದರೆ ಅದರ ಪ್ರಭಾವ ಧಾರವಾಡದಲ್ಲಿ ಕಂಡುಬರುತ್ತಿತ್ತು. ತಿಲಕ್ ಮುಂತಾದವರ ಸ್ಫೂರ್ತಿಯುತ ಭಾಷಣ ಮತ್ತು ಅವರ 'ಕೇಸರಿ' ಮತ್ತು 'ಮರಾಠಾ' ಪತ್ರಿಕೆಗಳು ಈ ಭಾಗದ ಜನರಲ್ಲಿ ನವಚೇತನವನ್ನು ತುಂಬಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕುವಂತೆ ಮಾಡಿದವು.

*'ಧಾರವಾಡ ವೃತ್ತ' ಮತ್ತು 'ಭಾವಾ' ಎಂಬ ಮರಾಠೀ ಪತ್ರಿಕೆಗಳು ಪ್ರಾರಂಭದಲ್ಲಿ ಇದ್ದವು. 'ಚಂದ್ರೋದಯ' ಎಂಬ ಕನ್ನಡ ಪತ್ರಿಕೆಯನ್ನು ೧೮೭೬ರಿಂದ ಹುಚ್ಚಯ್ಯವಿಭೂತಿ ಇವರು ಪ್ರಕಟಿಸುತ್ತಿದ್ದರು. ನಂತರ 'ಕರ್ನಾಟಕ ವೃತ್ತ' (೧೮೯೫, ಮುದವೀಡ ಕೃಷ್ಣರಾವ); 'ರಾಜಹಂಸ' (೧೮೯೧, ಬಳವಂತರಾವ ಜಠಾರ) 'ಧನಂಜಯ' (ದಿನಪತ್ರಿಕೆ, ೧೮೯೫), 'ವಾಗ್ಭೂಷಣ' (೧೮೯೬), ವಾಗ್ದೇವಿ (೧೯೧೬, ಹೊನ್ನಪೂರಮಠ), ಕರ್ಮವೀರ, (೧೯೨೧, ರಂಗನಾಥ ದಿವಾಕರ) ಈ ಪತ್ರಿಕೆಗಳಲ್ಲಿ ರಾಷ್ಟ್ರೀಯ ಕಾಂಗ್ರಸ್ ನಾಯಕರ ಬಗ್ಗೆ, ಆದರ ಚಟುವಟಿಕೆಗಳ ಬಗ್ಗೆ ಲೇಖನಗಳಿರುತ್ತಿದ್ದವು. ಉದಾ: 'ಚಂದ್ರೋದಯ' ಪತ್ರಿಕೆಯಲ್ಲಿ ಕಾಂಗ್ರಸ್ ಅಧ್ಯಕ್ಷರು ಯಾರಾಗಬೇಕು ಎಂಬ ಬಗ್ಗೆ ವಿಚಾರಗಳು ವ್ಯಕ್ತವಾಗುತ್ತಿದ್ದವು. ನಂತರ ಬ್ರಿಟೀಷರ 'ಪ್ರೆಸ್ ಎಕ್ಟ್' ಜಾರಿಗೆ ತಂದು ಬಹುತೇಕ ಪತ್ರಿಕೆಗಳು ಮುಚ್ಚಲ್ಪಟ್ಟವು. ಆದರೆ ಜನರಲ್ಲಿ ಮೂಡಿದ ರಾಷ್ಟ್ರೀಯ ಭಾವನೆ ಅಡಗಲಿಲ್ಲ.*

ಮಿತ್ರಸಮಾಜ ಕ್ಲಬ್(೧೮೯೫-೯೬), ನ್ಯೂ ಇಂಗ್ಲೀಷ್ ಸ್ಕೂಲ್-೧೮೮೨, ಸಂಸ್ಕೃತ ಪಾಠಶಾಲೆ-೧೮೮೯ ಮುಂತಾದ ಸಂಸ್ಥೆಗಳು ರಾಷ್ಟ್ರೀಯ ಚಟುವಟಿಕೆಗೆ ಪೋಷಕವಾಗಿದ್ದವು. ಗಣಪತಿ ಉತ್ಸವ, ಶಿವಾಜಿ ಉತ್ಸವಗಳು ೧೮೯೫ ರಿಂದಲೇ ಆರಂಭವಾಗಿ ಜನರಲ್ಲಿ ಒಕ್ಕಟ್ಟು ಸಂಘಟನಾ ಶಕ್ತಿ ಹಾಗೂ ದೇಶಾಭಿಮಾನ ಮೂಡಲು ಕಾರಣವಾದವು.

ಈ ಕಾಲದಲ್ಲಿ ಧಾರವಾಡದ ಟ್ರೈನಿಂಗ್ ಕಾಲೇಜಿನಲ್ಲಿ ಮುಖ್ಯ ಅಧ್ಯಾಪಕರಾಗಿದ್ದ ಖರೆ ಎಂಬ ಕ್ರಾಂತಿಕಾರರು ಮುದವೀಡು ಕೃಷ್ಣರಾವ, ಗದಿಗಯ್ಯ ಹೊನ್ನಾಪುರಮಠ ಹೊಸಕೇರಿ, ಅಣ್ಣಾಚಾರ್ಯ ಮುಂತಾದವರಿಗೆ ರಾಷ್ಟ್ರೀಯ ದೀಕ್ಷೆ ನೀಡಿದರು. ಹೀಗಾಗಿ ಅನೇಕ ವಿದ್ಯಾರ್ಥಿಗಳು, ಯುವ ಶಿಕ್ಷಕರು, ಸಮಾಜ ಕಾರ್ಯಕರ್ತರು ತಮ್ಮನ್ನು ಸ್ವಾತಂತ್ರ್ಯ ಚಳುವಳಿಗೆ ಸಮರ್ಪಿಸಿಕೊಂಡರು.

ಸ್ವಾತಂತ್ರ್ಯ ಸಂಗ್ರಾಮ ಚಳುವಳಿಗೆ ಮೂರ್ತ ಸ್ವರೂಪವನ್ನು

* ಲಕ್ಷ್ಮೀನಗರ, ವಿದ್ಯಾಗಿರಿ, ಧಾರವಾಡ - ೫೮೦ ೦೦೪

ತಂದುಕೊಡಲು ಯತ್ನಿಸಿದ ಧಾರವಾಡದ ಸಾಹಿತಿಗಳ ಕೊಡುಗೆಯೂ ಗಣನೀಯವಾದುದು. ಬೇಂದ್ರೆ, ಬಾಲಚಂದ್ರ ಘಾಣೇಕರ, ಬುರ್ಲಿ ಬಿಂದುಮಾಧವ, ಆಲೂರ ವೆಂಕಟರಾವ, ಡಾ. ಕಬ್ಬೂರ, ನಾರಾಯಣರಾವ ಭೀಸೆ, ಎನ್ಕೆ ಕುಲಕರ್ಣಿ ಮೊದಲಾದವರು ತಮ್ಮ ಲೇಖನ ಕವಿತೆಗಳಿಂದ, ಘೋಷಣೆಗಳಿಂದ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು.

*ಧಾರವಾಡದ ಕರ್ನಾಟಕ ಕಾಲೇಜು ಕೂಡ ಸ್ವಾತಂತ್ರ್ಯ ಹೋರಾಟಕ್ಕೆ ತನ್ನ ಕೊಡುಗೆ ನೀಡಿದೆ. ಚಲೇ ಜಾವ ಚಳುವಳಿ ಪ್ರಾರಂಭವಾದಾಗ ಎ. ಸಿ. ಫಿರನ್ ಎಂಬುವರು ಐರಿಷ್ ಪ್ರಿನ್ಸಿಪಾಲರಾಗಿದ್ದರು. ಆವರು ವಿದ್ಯಾರ್ಥಿಗಳಿಗೆ ಪರೋಕ್ಷವಾಗಿ ಪ್ರೋತ್ಸಾಹ ನೀಡುತ್ತಿದ್ದರು. ೨೬-೧-೧೯೪೪ರಂದು ವಿದ್ಯಾರ್ಥಿ ಸ್ವಯಂ ಸೇವಕರು ಕರ್ನಾಟಕ ಕಾಲೇಜಿನ ಮೇಲೆ ತ್ರಿವರ್ಣ ಧ್ವಜ ಹಾರಿಸಿದ್ದರು. ಎಲ್ಲ ವಿದ್ಯಾರ್ಥಿಗಳು ಗಾಂಧಿ ಟೊಪ್ಪಿಗೆ ಧರಿಸಿದ್ದರು. ವಿಧವಾ ವಿವಾಹ, ವೇಶ್ಯಾ ವಿವಾಹ, ಅಂತರಜಾತೀಯ ವಿವಾಹಕ್ಕೆ ಪ್ರೋತ್ಸಾಹ ನೀಡಲಾಯಿತು. ಎಲ್ಲ ಜಾತಿ ಧರ್ಮಗಳ ವಿದ್ಯಾರ್ಥಿಗಳು ಹಾಸ್ಟೆಲುಗಳಲ್ಲಿ ಇರಲಾರಂಭಿಸಿದರು. ಇಂತಹ ಸುಧಾರಣಾ ಕ್ರಮಗಳಿಂದ ಯುವಕರಲ್ಲಿ ಕ್ರಾಂತಿಕಾರಿ ವಿಚಾರಗಳು ಮೂಡಲು ಕಾರಣವಾದವು. ೧೮೯೦ ರಲ್ಲಿ ಸ್ಥಾಪಿತವಾದ ವಿದ್ಯಾವರ್ಧಕ ಸಂಘ ಈ ಭಾಗದ ಕನ್ನಡಿಗರಿಗೆ ತಮ್ಮ ಭಾವನೆಗಳ, ವಿಚಾರಗಳ ಅಭಿವ್ಯಕ್ತಿಯ ವೇದಿಕೆಯಾಯಿತು. ಅನೇಕ ಬ್ರಾಹ್ಮಣೇತರ ತರುಣರು ಕೂಡ ರಾಷ್ಟ್ರೀಯತೆ ಮತ್ತು ಗಾಂಧೀಜಿಯವರ ವ್ಯಕ್ತಿತ್ವಗಳಿಂದ ಪ್ರಭಾವಿತರಾದರು. ೧೯೨೭ರಲ್ಲಿ ಧಾರವಾಡದಲ್ಲಿ ಭಾರತೀಯ ತರುಣ ಸಂಘ ಸ್ಥಾಪಿತವಾಯಿತು. ಹಳ್ಳಿಕೇರಿ ಗುದ್ಲೆಪ್ಪ, ಕಲ್ಲನಗೌಡ ಪಾಟೀಲ, ತಲ್ಲೂರ ರಾಯನಗೌಡ ಮುಂತಾದವರು ಸದಸ್ಯರಾಗಿದ್ದರು.*

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸಂಸ್ಥಾಪನೆಯ (ಕ್ರಿ. ಶ. ೧೮೮೫) ಸ್ವಾತಂತ್ರ್ಯ ಸಂಗ್ರಾಮದ ಪ್ರಥಮ ಹಂತ, ಮುಂಬೈನಲ್ಲಿ ಜರುಗಿದ ಕಾಂಗ್ರೆಸ್ಸಿನ ಮೊದಲ ಅಧಿವೇಶನದಲ್ಲಿ ಬಳ್ಳಾರಿಯ ಕೋಲಾಚಲಂ ವೆಂಕಟರಾವ್ ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದರು. ಅವರು ಉತ್ತರ ಕರ್ನಾಟಕದ ಧುರೀಣರಿಗೆ ಪ್ರೇರಣೆ ನೀಡಿದರು. ಕಾಂಗ್ರೆಸ್ ಸಂಸ್ಥಾಪಕ ಎ. ಓ. ಹ್ಯೂಮ್ ೧೮೯೫ ರಲ್ಲಿ ಧಾರವಾಡಕ್ಕೆ ಬಂದು ಕಾಂಗ್ರೆಸ್ ಧ್ಯೇಯವನ್ನು ಪ್ರಸಾರ ಮಾಡಿದರು. ಇದರಿಂದ ಈ ಭಾಗದ ಜನರಲ್ಲಿ ಸ್ಫೂರ್ತಿ ಬಂದು ಕಾಂಗ್ರೆಸ್ ಚಟುವಟಿಕೆಗಳಲ್ಲಿ ಭಾಗವಹಿಸಲು ಮುಂದಾದರು. ಎರಡನೆಯ ಮುಂಬೈ ರಾಜಕೀಯ ಪರಿಷತ್ತು ೧೯೦೪ ರಲ್ಲಿ ಧಾರವಾಡದಲ್ಲಿ ನಡೆಯಿತು. ಇದರಲ್ಲಿ ದಿನ್ ಷಾ ಛಾವಾ. ಫಿರೋಜ ಶಹಾ ಮೆಹತಾ, ಗೋಪಾಲಕೃಷ್ಣ ಗೋಖಲೆ ಮತ್ತು ತಿಲಕರು ಭಾಗವಹಿಸಿದರು. ದಾಜಿ ಅಬಾಜಿ ಖರೆ ಅಧ್ಯಕ್ಷರಾಗಿದ್ದರು. ಈ ದಿಗ್ಗಜರ ಸ್ಫೂರ್ತಿಯುತ ಭಾಷಣ ಈ ಭಾಗದ ಜನರಲ್ಲಿ ನವಚೇತನವನ್ನು ತುಂಬಿ ವಿಶೇಷ ಜಾಗೃತಿಗೆ ಕಾರಣವಾಯಿತು. ೧೯೦೫-೦೬ ರಲ್ಲಿ ಉತ್ತರ ಕರ್ನಾಟಕದಲ್ಲಿ ತಿಲಕರು ಪ್ರವಾಸ ಮಾಡಿ ಸ್ವದೇಶಿ ಮತ್ತು ರಾಷ್ಟ್ರೀಯ ಶಿಕ್ಷಣ ಪ್ರಸಾರ ಮಾಡಿದರು. ಇದರಲ್ಲಿ ಆಲೂರ ವೆಂಕಟರಾವ್, ಸಕ್ಕರಿ ಬಾಳಾಚಾರ್ಯ, ಕೃಷ್ಣರಾವ್ ಮುದವೇಡಕರ ಪ್ರಮುಖ ಪಾತ್ರವಹಿಸಿದರು.

ಕರ್ನಾಟಕದಲ್ಲಿ 'ಹೋಮ್ ರೂಲ್ ಲೀಗ್' ಗಂಗಾಧರ್ ರಾವ್ ದೇಶಪಾಂಡೆಯವರ ನೇತೃತ್ವದಲ್ಲಿ ಧಾರವಾಡದಲ್ಲಿ (೧೯೧೬) ಅಸ್ತಿತ್ವಕ್ಕೆ ಬಂದಿತು. ಈ ಚಳುವಳಿಯ ಅಂಗವಾಗಿ ವಿದೇಶಿ ಬಟ್ಟೆಗಳನ್ನು ಬಹಿರಂಗವಾಗಿ ಸುಡಲಾಯಿತು. ಆಲೂರ ವೆಂಕಟರಾಯರು; ಮುದವೀಡು ಕೃಷ್ಣರಾಯರು, ಸಕ್ಕರಿ ಬಾಳಾಚಾರ್ಯ ಮುಂತಾದವರು ಉತ್ತರ ಕನ್ನಡಾದ್ಯಂತ ಪ್ರವಾಸ ಮಾಡಿ, "ಸ್ವದೇಶಿ ಚಳುವಳಿ" ಬಗ್ಗೆ ಕನ್ನಡಿಗರನ್ನು ಹುರಿದುಂಬಿಸಿದರು. ಈ ಚಳುವಳಿಯಲ್ಲಿ ಪಾಲ್ಗೊಂಡ ಅನೇಕರು ಬಂದಿಖಾನೆಯನ್ನು ಸೇರಿದರು.

೧೯೨೦ ರಲ್ಲಿ ಜರುಗಿದ ನಾಗಪುರ ಅಧಿವೇಶನದಲ್ಲಿ ಕಡಪ ರಾಘವೇಂದ್ರರಾಯರ ನೇತೃತ್ವದಲ್ಲಿ ಭಾಗವಹಿಸಿದ ***ಕನ್ನಡಿಗರ ಪರಿಶ್ರಮದಿಂದಾಗಿ ಕರ್ನಾಟಕದ ಪ್ರಥಮ ಪ್ರಾಂತೀಯ ಕಾಂಗ್ರೆಸ್ ಸಮಿತಿಯನ್ನು ( ನಾಗಪುರದ ಅಧಿವೇಶನದಲ್ಲಿ ) ಸ್ಥಾಪಿಸಲಾಯಿತು.***

*ಸ್ವದೇಶಿ ಚಳುವಳಿ ಧಾರವಾಡದ ಗ್ರಾಮಾಂತರ ಪ್ರದೇಶಗಳಿಗೂ ಸಹ ಕಾಡುಕಿಚ್ಚಿನಂತೆ ಹಬ್ಬಿತು. ಉಪ್ಪಿನ ಬೆಟಗೇರಿ, ಗರಗ, ಹೆಬ್ಬಳ್ಳಿ, ಹಾಗೂ ಇತರ ಗ್ರಾಮಗಳಲ್ಲಿ ಸ್ವದೇಶಿ ಬಟ್ಟೆ, ಔಷಧ ಹಾಗೂ ಯಂತ್ರಗಳ ಪ್ರಚಾರ ದೊಡ್ಡ ಪ್ರಮಾಣದಲ್ಲಿ ನಡೆಯಿತು. ದೇಶೀ ಗಿರಣಿಗಳಿಂದ ತಯಾರಾದ ವಸ್ತುಗಳನ್ನೇ ಜನರು ಉಪಯೋಗಿಸಲು ಪ್ರಾರಂಭಿಸಿದರು. ಮಕ್ಕುಮಿ ಎಂಬ ದೇಶೀ ಸಕ್ಕರೆ ಉಪಯೋಗಿಸಿದರು. ಜಾನಪಲ ಎಂಬ ವಿದೇಶಿ ಧೋತರಗಳನ್ನು ಸುಟ್ಟರು, ಗರಗದಲ್ಲಿ ಬ್ರೀಟಿಷರಿಗೆ ಪರವಾಗಿದ್ದ ಗೌಡರು, ವಿಲೇಜ್ ಪಾಟೀಲರನ್ನು ಬಹಿಷ್ಕರಿಸಿ ಅವಮಾನ ಮಾಡಲಾಯಿತು. ಇದು 'ಗರಗ ಪ್ರಕರಣ' ಎಂದು ಹೆಸರಾಯಿತು. ಗರಗದ ಖಾದಿ ಕೇಂದ್ರವು ತನ್ನದೇ ಆದ ಒಂದು ಪ್ರಮುಖ ಪಾತ್ರವಹಿಸಿದೆ. ರಾಷ್ಟ್ರಧ್ವಜಕ್ಕೆ ಬೇಕಾದ ಬಟ್ಟೆಯನ್ನು ಪೂರೈಸುವ ಹಿರಿಮೆ ಗರಗ ಗ್ರಾಮದ್ದು. ಖಾದಿ ಕಮಿಷನ್‌ನಿಂದ ಮನ್ನಣೆ ಪಡೆದಿರುವ ರಾಷ್ಟ್ರದ ಏಕೈಕ ಕೇಂದ್ರ ೧ ಾಗಿದೆ.*

೧೯೨೦ ರಲ್ಲಿ ಗಾಂಧೀಜಿಯವರು ಧಾರವಾಡಕ್ಕೆ ಶೌಕತ್ ಆಲಿಯವರು ಜೊತೆಗೆ ಬಂದಿದ್ದರು. ಅವರು ಮೊದಲನೆಯ ದಿನ ಉಳವಿ ಬಸಪ್ಪನಗುಡ್ಡದಲ್ಲಿ ಸ್ಟೇಶನ್ ರೋಡಿನ ಮಗ್ಗಲಿಗೆ ಭಾಷಣ ಮಾಡಿದರು. ಮರುದಿವಸ ಕರಗುದರಿ ನಾರಾಯಣರಾಯರ ಮನೆಯ ಹತ್ತಿರ ಇರುವ ಗಾಯಕವಾಡನ ಬಂಗ್ಲೆಯಲ್ಲಿ ಜನರ ಕೂಡ ಪ್ರಶ್ನೋತ್ತರ ಮಾಡುವ ಸಮಯದಲ್ಲಿ ಹೊರಗಿನಿಂದ ಯಾರೋ ಕಿಡಿಗೇಡಿಗಳು ಆ ಬಂಗ್ಲೆಯ ಮೇಲೆ ಕಲ್ಲು ಒಗೆದರು. ಆ ಕಲ್ಲಿನ ಸಪ್ಪಳಕ್ಕೆ ಜನರಲ್ಲಿ ಸ್ವಲ್ಪ ಗಡಿಬಿಡಿಯಾಯಿತು. ಇದನ್ನು

ಕಂಡು ಗಾಂಧೀಜಿಯವರು *'ಕಲ್ಲು ಬೀಳುವುದು ಇಷ್ಟೇ ಏಕೆ ನಮ್ಮ ಸ್ವಾತಂತ್ರ್ಯದ ಸಲುವಾಗಿ ಗುಂಡಿನ ಮಳೆ ಬಿದ್ದರೂ ನಾವು ಸಹನ ಮಾಡಿಕೊಳ್ಳಬೇಕು'* ಎಂದರು. ಅವರ ಮಾತು ಅಲ್ಲಿ ನೆರೆದಿದ್ದ ಜನರ ಮೇಲೂ ನನ್ನ ಮೇಲೂ ಪರಿಣಾಮ ಬೀರಿತು. ಅವತ್ತಿನಿಂದ ನಾನು ಸ್ವರಾಜ್ಯದ ಸಲುವಾಗಿ ನಡುಕಟ್ಟಿ ನಿಂತೆನು ಎಂದು ಪರಮಣ್ಣಾ ಹೊಸಮನಿ ತಮ್ಮ ನೆನಹುಗಳಲ್ಲಿ ಬರೆದಿದ್ದಾರೆ.

ಪ್ರಥಮ ಮಹಾಯುದ್ಧ ಮುಗಿದು ದೊರೆ ಖಲೀಫ (ಪ್ರವಾದಿ ಮಹ್ಮದರ ಪ್ರತಿನಿಧಿ) ನನ್ನು ಬ್ರಿಟೀಷರು ಪದಚ್ಯುತಗೊಳಿಸಲು, ಅದರ ವಿರುದ್ಧ ಭಾರತದಲ್ಲಿ ಮುಸಲ್ಮಾನರು ಖಿಲಾಫತ್ ಚಳುವಳಿ ಆರಂಭಿಸಿದರು. ಕಾಂಗ್ರೆಸ್ ಈ ಚಳುವಳಿಗೆ ಬೆಂಬಲ ನೀಡಿತು. ಧಾರವಾಡದ ಮುಸಲ್ಮಾನರೂ ಕಾಂಗ್ರೆಸ್ ಸೇರಿ ತಮ್ಮ ಬೆಂಬಲ ಸೂಚಿಸಿದರು. ಎಲ್ಲೆಡೆ ಪಿಕೆಟಿಂಗ್ ನಡೆಸಿದರು. ಖಿಲಾಫತ್ ಮೈದಾನ (ಕಡಪಾ ಮೈದಾನ)ದಲ್ಲಿ ಭಾಷಣಗಳಾದವು.

*ಧಾರವಾಡದಲ್ಲಿ ನಡೆದ ಅಸಹಕಾರ ಆಂದೋಲನ ಸ್ವಾತಂತ್ರ್ಯ ಸಂಗ್ರಾಮದ ಒಂದು ಮೈಲುಗಲ್ಲು ೧೯೨೧ ರಲ್ಲಿ ಧಾರವಾಡದಲ್ಲಿ ಅಸಹಕಾರ ಚಳುವಳಿ ಕಾಲಕ್ಕೆ ಗೋಳಿಬಾರ ಆಯಿತು. ಧಾರವಾಡದ ಜಕಣಿಭಾವಿಯ ಹತ್ತಿರದ ವಿದೇಶಿ ಸೇಂದಿ ಸರಾಯಿ ಅಂಗಡಿಗಳ ಮುಂದ ಪಿಕೆಟಿಂಗ್ ನಡೆಸಿದ್ದರಿಂದ ಇಬ್ಬರೂ ಖಿಲಾಫತ್ ಸ್ವಯಂ ಸೇವಕರಿಗೆ ಆರು ತಿಂಗಳು ಕಠಿಣ ಶಿಕ್ಷೆಯಾಯಿತು. ಇದನ್ನು ಪ್ರತಿಭಟಿಸಲು ಹರತಾಳ ಆಚರಿಸಲಾಯಿತು. ಜೂನ್ ೩೦, ೧೯೨೧ ರಂದು ಅಂದಿನ ಧಾರವಾಡದ ಜಿಲ್ಲಾಧಿಕಾರಿ ಎಸ್. ಎಲ್. ಪೇಂಟರ ನಿರ್ದೇಶನದ ಮೇರಗೆ ಶಿವಲಿಂಗಪ್ಪನೆಂಬ ಫೌಜುದಾರನು ಗುಂಡಿನ ಮಳೆ ಸುರಿಸಿದನು. ಮೂವರು ಮುಸ್ಲಿಂ ಯುವಕರು ಮೃತಪಟ್ಟರು (ಮಲ್ಲಿಕ್ ಸಾಬ್ ಬಿನ್ ಮರ್ದಾನಾ, ಗಾಸಸಾಬ ಬಿನ್ ಖಾದರ ಮತ್ತು ಅಬ್ದುಲ್ ಖಾದರ ಚಕತಾಯಿ ಇವರೇ ಈ ಮೂವರು ಹುತಾತ್ಮರು. ಈ ಹುತಾತ್ಮರ ಚಿರನೆನಪಿಗಾಗಿ ಧಾರವಾಡದಲ್ಲಿ ಚಕಣಿ ಭಾವಿಯ ಹತ್ತಿರದ ವರ್ತುಲದಲ್ಲಿ ಒಂದು ಸ್ಮಾರಕ ನಿರ್ಮಿಸಲಾಗಿದೆ). ೩೯ ಮಂದಿ ಗಾಯಗೊಂಡರು. ಇವರ ಮೇಲ ಖಟ್ಲೆ ಹಾಕಲಾಯಿತು. ಖಟ್ಲೆ ಹಾಕಲ್ಪಟ್ಟವರಲ್ಲಿ ಅಣ್ಣಾಚಾರ್ಯ ಹೊಸಕೇರಿ, ವಾಮನ ಜಠಾರ, ಇಮಾಮ್ ಮಣಿಯಾರ, ಮಹಮ್ಮದಸಾಬ ಸೌದಾಗರ ತಿರುಮಲರಾವ ಜೋಶಿ, ಮದ್ವಾಚಾರ್ ಹೊಸಕೇರಿ, ಮಾಧವ ಕಮಲಾಪೂರ, ಗೋವಿಂದಾಚಾರ್ಯ ಗುತ್ತಲ ಇವರಿಗೆ ತಲಾ ಒಂದು ವರ್ಷ ಶಿಕ್ಷೆಯಾಯಿತು. ಇತರರು ನಿರಪರಾಧಿಗಳೆಂದು ಬಿಡುಗಡೆಯಾದರು. ಆ ವರ್ಷ ಧಾರವಾಡದಲ್ಲಿ ಮೊಹರಮ್ ಮತ್ತು ನವರಾತ್ರಿ ಹಬ್ಬಗಳು ಆಚರಣೆ ಆಗಲಿಲ್ಲ.*

ಈ ಗೋಳಿಬಾರ್ ಬಗ್ಗೆ ಕರ್ನಾಟಕದಲ್ಲಿ ಅಷ್ಟೇ ಅಲ್ಲ, ರಾಷ್ಟ್ರಮಟ್ಟದ ನಾಯಕರು ತಮ್ಮ ವಿರೋಧ ಹಾಗೂ ಪ್ರತಿ ಭಟನೆಯನ್ನು ವ್ಯಕ್ತಪಡಿಸಿದರು. ನಿವೃತ್ತ ಶಾಲಾ ಇನ್ಸ್‌ಪೆಕ್ಟರ್ ವಿನಾಯಕರಾವ ಜೋಶಿಯವರು ಧಾರವಾಡ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಅವರು ತಮ್ಮ 'ರಾವಬಹದ್ದೂರ' ಪದವಿಯನ್ನು ಬಿಟ್ಟು ಕೊಟ್ಟರು. ಕೆ. ಪಿ. ಸಿ. ಸಿ. ಅಧ್ಯಕ್ಷ ಗಂಗಾಧರ ರಾವ ದೇಶಪಾಂಡೆಯವರು ಧಾರವಾಡಕ್ಕೆ ಆಗಮಿಸಿ ಮುಂದಿನ ಕ್ರಮ ಕೈಗೊಳ್ಳುವ ಬಗ್ಗೆ ವಿಚಾರ ವಿನಿಮಯ ಮಾಡಿದರು. "ದಿ ಬೊಂಬೆ ಕ್ರಾನಿಕಲ್" ಪತ್ರಿಕೆಗೆ ತಂತಿ ಸಂದೇಶ ಕಳುಹಿಸಲಾಯಿತು. ಅದರ ಪ್ರತಿನಿಧಿಗಳು ಧಾರವಾಡಕ್ಕೆ ಆಗಮಿಸಿ ವರದಿಯನ್ನು ಸಲ್ಲಿಸಿದರು. ಮುಂಬೈ ಸರ್ಕಾರದ ಗೃಹ ಖಾತೆಯ ಸದಸ್ಯರೊಬ್ಬರು ಧಾರವಾಡಕ್ಕೆ ಭೇಟಿ ನೀಡಿ ವಿಚಾರಣೆಯನ್ನು ಮಾಡಿದರು. ಗಂಗಾಧರ ದೇಶಪಾಂಡೆಯವರ ವಿನಂತಿಯ ಮೇರೆಗೆ ಗಾಂಧೀಜಿಯವರು ಲಾಲಾ ಲಜಪತರಾಯ್ ಮತ್ತು ಶೌಕತ್ ಅಲಿಯವರನ್ನು ಧಾರವಾಡಕ್ಕೆ ಕಳಿಸಿದರು

೧೯೨೧ ನೇ ಜುಲೈ ತಿಂಗಳಲ್ಲಿ ನವಲಗುಂದದಲ್ಲಿ ಧಾರವಾಡ ಜಿಲ್ಲಾ ರಾಜಕೀಯ ಪರಿಷತ್ತಿನ ಸಮ್ಮೇಳನ ನಡೆಯಿತು. ಅದರ ಅಧ್ಯಕ್ಷತೆಯನ್ನು ವಹಿಸಿದ ಗಂಗಾಧರರಾವ ದೇಶಪಾಂಡೆಯವರು ತಮ್ಮ ಭಾಷಣದಲ್ಲಿ ಧಾರವಾಡ ಜಿಲ್ಲಾಧಿಕಾರಿ ಪೇಂಟರನ ದಬ್ಬಾಳಿಕೆಯನ್ನು ಖಂಡಿಸಿದರು. ಇದರ ಬಗ್ಗೆ ಅವರ ಮೇಲೆ ಖಟ್ಲೆ ಹಾಕಲಾಯಿತು. ಇದನ್ನು ಅರಿತ ಗಾಂಧೀಜಿಯವರು ದೇಶಪಾಂಡೆಯವರನ್ನು ಅಭಿನಂದಿಸಿದರು. ಮತ್ತು ಜುಲೈ ೧೪, ೧೯೨೧ ರಂದು ಧಾರವಾಡ ಜನತೆಗೆ ಈ ರೀತಿಯಾಗಿ ಸಂದೇಶವನ್ನು ಕಳುಹಿಸಿದರು.

***"ನಾನು ಧಾರವಾಡದಲ್ಲಿನ ಸರ್ಕಾರದ ಕಾರ್ಯಗಳೆಲ್ಲವನ್ನೂ ತುಂಬ ಕಾತುರದಿಂದ ತಿಳಿದುಕೊಳ್ಳುತ್ತಿದ್ದೇನೆ. ಸರ್ಕಾರಿ ಗೂಂಡಾಗಿರಿಯಿಂದ ನೊಂದವರಿಗೆಲ್ಲ ಮತ್ತು ಅತ್ಯುನ್ನತ ಮಟ್ಟದ ಸಹನೆ, ಸೌಹಾರ್ದತೆಯನ್ನು ವ್ಯಕ್ತಪಡಿಸಿರುವವರಿಗೆಲ್ಲ ನನ್ನ ಸಹಾನುಭೂತಿಪರ ಧನ್ಯವಾದಗಳು. ಧಾರವಾಡದ ಜನತೆ 'ಬಂಧನ'ದಿಂದಾಗಿ ಧೃತಿಗೆಟ್ಟಿಲ್ಲವೆನ್ನುವುದನ್ನರಿತು ಸಂತೋಷ ವೆನಿಸಿದೆ. ಅಹಿಂಸೆ ಮತ್ತು ಸಹನೆಗಳಿಂದ ಧಾರವಾಡದ ಘಟನೆಯಂತಹ ಸ್ಥಿತಿ, ಸ್ವರಾಜ್ಯದತ್ತ ಸಾಗಿರುವ ನಮ್ಮ ಪಥವನ್ನು ಮತ್ತಷ್ಟು ತೀವ್ರಗೊಳಿಸುತ್ತದೆ. ಸ್ವಚ್ಛತೆಯಿಂದ ಆಚರಿಸುತ್ತಿರುವ ಅಹಿಂಸಾ ಸತ್ಯಾಗ್ರಹ ನಮ್ಮ ನಾಡಿನ ಜನತೆಗೆ ಪ್ರಚಂಡ ಧೈರ್ಯವನ್ನೂ, ಸ್ವಾತಂತ್ರ್ಯದ ಕಾರಣಕ್ಕೆ ಮಹತ್ವದ ಪಾವಿತ್ರ್ಯತೆಯನ್ನು ಒದಗಿಸಿಕೊಟ್ಟಿದೆ"*** ಈ ಸಂದೇಶದಿಂದ ಧಾರವಾಡ ಜನತೆ ಮತ್ತಷ್ಟು ಸ್ಫೂರ್ತಿ ಪಡೆದು ಹೋರಾಟದಲ್ಲಿ ಧುಮುಕಿತು. ಮೇ ೧೯೩೯ ರಲ್ಲಿ ಧಾರವಾಡಕ್ಕೆ ಭೇಟಿ ನೀಡಿದ ಸುಭಾಷ ಚಂದ್ರ ಭೋಸರೊಂದಿಗೆ ಶ್ರೀ ಎಂ. ಬಿ. ಬೂದಿಹಾಳಮಠ ಮತ್ತು ಶ್ರೀ ವೀರಯ್ಯ ಸ್ವಾಮಿ ಮಠ ಗುರೂಜಿ ಪಾಲ್ಗೊಂಡಿದ್ದರು. ಆಗ ಹೊಸಮನಿ ಸಿದ್ಧಪ್ಪನವರು ಕರ್ನಾಟಕ ಫಾರ್ವರ್ಡ್ ಬ್ಲಾಕ್‌ನ ಘಟಕದ ಅಧ್ಯಕ್ಷರಾಗಿದ್ದರು. ಡಿ. ಡಿ. ಇಡಗುಂಜಿಯವರು ಜಿಲ್ಲಾ ಅಧ್ಯಕ್ಷರು, ಕಲ್ಲನಗೌಡ ಪಾಟೀಲರು ಕಾರ್ಯದರ್ಶಿಗಳಾಗಿದ್ದರು. ಐ. ಎನ್. ಎ. ಸೇನಾನಿ ಗುಡುಭಾಯಿ ಹುಸೇನಸಾಬ ಮುಂತಾದವರು ಇನ್ನೂ ಇದ್ದಾರೆ.

೧೯೪೨ ರಲ್ಲಿ ಕ್ವಿಟ್ ಇಂಡಿಯಾ (ಭಾರತವನ್ನು ಬಿಟ್ಟು

ತೊಲಗಿ) ಚಳುವಳಿಯು ಪ್ರಾರಂಭವಾಗಿ ಗಾಂಧೀಜಿಯವರು ಬಂಧಿತರಾದರು. ಈ ಸಮಯದಲ್ಲಿ, ಉತ್ತರ ಕರ್ನಾಟಕದಲ್ಲಿ ರಂಗನಾಥ ದಿವಾಕರ, ಹುಕ್ಕೇರಿಕರ, ದಾತಾರ ಮತ್ತು ಸುಬ್ಬರಾವ ಹಳದಿಪುರಕರ ಚಳುವಳಿಯನ್ನು ಸಮರ್ಥವಾಗಿ ನಿರ್ದೇಶಿಸಿದರು. ಈ ಚಳುವಳಿಯು ಧಾರವಾಡದಲ್ಲಿ ಉಗ್ರರೂಪವನ್ನು ತಾಳಿತು. ವಿದ್ಯಾರ್ಥಿಗಳು ಚಳುವಳಿಯಲ್ಲಿ ಧುಮುಕಿ ರೈಲು ಕಂಬಿ ಕೀಳುವುದು, ಪ್ರವಾಸಿ ಬಂಗ್ಲೆಗಳನ್ನು ಸುಡುವುದು. ಉಗ್ರ ಪ್ರತಿಭಟನೆಯನ್ನು ನಡೆಸುವುದು ಸಾಮಾನ್ಯ ದೃಶ್ಯವಾಗಿತ್ತು. ಶ್ರೀ ಹೊಸಕೇರಿ ನಾರಾಯಣರವರು ಎಲ್ಲ ಗುಂಪುಗಳ ಸಂಪರ್ಕ ಶಕ್ತಿಯಾಗಿದ್ದರು. ಕರಪತ್ರಗಳನ್ನು ತೆಗೆಯುವುದು ಶ್ರೀ ಹೊಸಕೇರಿಯವರ ಕೆಲಸವಾಗಿತ್ತು. ರೈತ ಸಮುದಾಯವು ಬೃಹತ್ ಪ್ರಮಾಣದಲ್ಲಿ ಚಳುವಳಿಯಲ್ಲಿ ಸೇರಿಕೊಂಡು ನಡೆಸಿದ ಭೂಗತ ಹೋರಾಟವು ಬ್ರಿಟಿಷ್ ಸರ್ಕಾರಕ್ಕೆ ಭಾರಿ ತಲೆನೋವಾಯಿತು. ರೈತ ತರುಣರು ಭೂಗತರಾಗಿ ನೂರಾರು ವಿಧ್ವಂಸಕ ಕೃತ್ಯಗಳನ್ನು ನಡೆಸಿದರು. ಧಾರವಾಡ ಅಬಕಾರಿ ಸ್ಟೇಶನ್‌ಗೆ ಬೆಂಕಿ, ಮೋತಿ ತಲಾವ್ ಪೋಲಿಸ್ ಚೌಕಿಗೆ ಬೆಂಕಿ, ಅಮರಗೋಳ ಸ್ಟೇಶನ್‌ಗೆ ಬೆಂಕಿ ಹೀಗೆ ಅನೇಕ ಘಟನೆಗಳು ಸಾಗಿ ಧಾರವಾಡಕ್ಕೆ ಐರೋಪ್ಯರಿರುವ ಸೇನೆ ತರುವ ಪ್ರಸಂಗ ಬಂತು.

*ಈ ಚಳುವಳಿಯಲ್ಲಿ ಧಾರವಾಡದ ಮಹಿಳೆಯರು ಮಹತ್ವದ ಪಾತ್ರವಹಿಸಿದರು. ವಿಮಲಾ ಗುಲವಾಡಿ ಮತ್ತು ಹೇಮಲತಾ ಶಿನೋಳಕರ ಎಂಬ ಕಾಲೇಜು ವಿದ್ಯಾರ್ಥಿನಿಯರು ಅಕ್ಟೋಬರ್ ೨೩, ೧೯೪೨ ರಂದು ಜಿಲ್ಲಾ ನ್ಯಾಯಾಲಯವನ್ನು ಹೊಕ್ಕು ನ್ಯಾಯಾಧೀಶರ ಪೀಠದ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿ ರಾಜೀನಾಮೆ ಕೊಡುವಂತೆ ನ್ಯಾಯಾಧೀಶರನ್ನು ಒತ್ತಾಯಿಸಿದರು. ಮುಂದೆ ಇವರ ಬಂಧನವಾಯಿತು. ಶ್ರೀಮತಿ ಶಕುಂತಲಾ ಕುರ್ತಕೋಟಿ, ಶಕುಂತಲಾ ದಾಖಡೆ, ಶ್ರೀಮತಿ ಕರಮರಕರ ಶಾಂತಾಬಾಯಿ, ಶ್ರೀಮತಿ ಕೃಷ್ಣಾಬಾಯಿ ಪಣಜಿಕರ ಮೊದಲಾದ ನಾರೀಮಣಿಯರು ಧಾರವಾಡದಲ್ಲಿ ಸತ್ಯಾಗ್ರಹ ನಡೆಸಿ ಜೈಲು ಕಂಡರು. ಕಲ್ಬುರ್ಗಿ ಕಲ್ಲಪ್ಪ, ಶಂಕರ ಕುರ್ತಕೋಟಿ, ರಾಘವೇಂದ್ರ ಕಟ್ಟಿ, ಆರ್. ಆರ್. ದಿವಾಕರ, ವೆಂಕಟೇಶ ಮುದವೇಡಕರ, ರಾಮಚಂದ್ರ ಹುಕ್ಕೇರಿಕರ, ಸುಬ್ಬರಾವ ಹಳದಿಪುರಕರ (ನಾಲ್ಕು ಕರರು) ಜಿ. ಎ. ದೇಶಪಾಂಡೆ, ಎಸ್. ಎಲ್. ದೇಸಾಯಿ, ಎಚ್. ಪಿ. ಮಹಾಜನ, ವೆಂಕಟೇಶ ಶ್ರೀನಿವಾಸ ಮಿರ್ಜಿ, ಡಿ. ಬಿ. ರತ್ನನ್ನವರ ಮತ್ತು ಎ. ಇ. ವಿರಕ್ತಮಠ ಮುಂತಾದವರು ಚಳುವಳಿಯಲ್ಲಿ ಭಾಗವಹಿಸಿದ ಪ್ರಮುಖ ಹೋರಾಟಗಾರರು.*

ಹೀಗೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಧಾರವಾಡದ ಪಾತ್ರ ಮಹತ್ತರವಾದದು. ದೇಶದ ಸ್ವಾತಂತ್ರ್ಯಕ್ಕಾಗಿ ಅಹರ್ನಿಶಿ ದುಡಿದು ಅಜರಾಮರರಾಗಿರುವ ಮಹಾನ್ ವ್ಯಕ್ತಿಗಳ ಸಾಹಸದ ನಿದರ್ಶನಗಳು ಅಭೂತಪೂರ್ವವಾಗಿವೆ. ಅವುಗಳ ಬಗೆಗೆ ಪುಲಕಿತರಾಗಬೇಕು. ಹೆಮ್ಮೆಪಟ್ಟುಕೊಳ್ಳಬೇಕು.

ನಮ್ಮ ರಾಷ್ಟ್ರನಾಯಕರು ದ್ವಿತೀಯ ಕ್ರಾಂತಿಗೆ ಕರೆ ಕೊಟ್ಟಿದ್ದಾರೆ. *ಸ್ವಾತಂತ್ರ್ಯ ಆಂದೋಲನ ಸಂದರ್ಭದಲ್ಲಿ ಕಂಡು ಬಂದ ತ್ಯಾಗ, ಬಲಿದಾನ ಹಾಗೂ ಆದರ್ಶಗಳು ಈಗ ಸಂಪೂರ್ಣ ಮರೆಯಾಗಿವೆ. ದೇಶದ ಅಭಿವೃದ್ಧಿಗೆ ಕಂಟಕಪ್ರಾಯವಾಗಿರುವ ಅನ್ಯಾಯ, ಜಾತೀಯತೆ ಹಾಗೂ ಭ್ರಷ್ಟಾಚಾರವನ್ನು ತೊಡೆದು ಹಾಕಲು ಭಾರತೀಯರೆಲ್ಲ ಜಾಗೃತರಾಗಿ ಹೋರಾಡಬೇಕಿದೆ.*

## ಆಧಾರ ಗ್ರಂಥಗಳು

**ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು** (ಸಂ: ಸೂರ್ಯನಾಥ ಕಾಮತ), ಮೈಸೂರು, ಭಾಗ ೧-೩
**ಗಾಂಧಿ ಮತ್ತು ಕರ್ನಾಟಕ** (ಸಂ: ಸಿದ್ಧನವಳ್ಳಿ ಕೃಷ್ಣಶರ್ಮ), ಗಾಂಧಿ ಸ್ಮಾರಕ ನಿಧಿ, ಬೆಂಗಳೂರು, ೧೯೬೯
**ಶ್ರೀ ಗಂಗಾಧರರಾವ ದೇಶಪಾಂಡೆ ( ಆತ್ಮ ಚರಿತ್ರೆ )**, ಅನು : ರಾಮಚಂದ್ರ ವಡವಿ, ಹುಬ್ಬಳ್ಳಿ, ೧೯೬೦
**ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಸಂಗ್ರಾಮ**, (ಸಂ : ಸುರೇಂದ್ರ ದಾನಿ), ಹುಬ್ಬಳ್ಳಿ, ೧೯೯೬
ಆರ್. ಎಸ್. ನಾರಾಯಣ: **ಗಂಗಾಧರರಾವ ದೇಶಪಾಂಡೆ, ಪ್ರಕಟಣೆ** ವಿಭಾಗ, ಭಾರತ ಸರ್ಕಾರ
**ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು**, ಪ್ರಥಮ ಸಂಪುಟ
ಗು. ರು. ಅಯ್ಯಂಗಾರ: 'ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ', **ಅವಲೋಕನ**
ಡಾ ॥ ಸೂರ್ಯನಾಥ ಕಾಮತ: **ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು**, ಬುರ್ಲಿ ಬಿಂದು ಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ, ೧೯೮೮
ರಾ. ವೆ. ಕರಗುದರಿ: **ಸೇನಾಪತಿ ಡಾ ॥ ಹರ್ಡಿಕರರು**, ಸಾಹಿತ್ಯ ಭಂಡಾರ, ಹುಬ್ಬಳ್ಳಿ ೧೯೩೪
ಆಲೂರು ವೆಂಕಟರಾಯರು: **ನನ್ನ ಜೀವನ ಸ್ಮೃತಿಗಳು**, ಮನೋಹರ ಗ್ರಂಥಮಾಲಾ, ಧಾರವಾಡ, ೧೯೭೪
**ಹೊನ್ನಪುರ**, (ಸಂ.) ಹೇಮಾ
ತಿ. ತಾ. ಶರ್ಮಾ: **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ**, ಪುರೋಗಾಮಿ, ಬೆಂಗಳೂರು, ೧೯೭೩
ಶ್ರೀರಂಗ : **ಸಲ್ಯತ್ತೆರಡರ ಚಲೇಜಾವ್ ಚಳುವಳಿ**
**ಧಾರವಾಡ ಜಿಲ್ಲಾ ಗೆಝೆಟಿಯರ್** : (ಸಂ.) ಡಾ ॥ ಸೂರ್ಯನಾಥ ಕಾಮತ

# ಕರ್ನಾಟಕ ಇತಿಹಾಸ ಅಕಾದೆಮಿ ( ರಿ., )

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ, ಬಸವನಗುಡಿ ರಸ್ತೆ,
ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯

## ೧೯೯೭ನೆಯ ಸಾಲಿನ ವಾರ್ಷಿಕ ವರದಿ

ಪ್ರಿಯ ಸದಸ್ಯ ಬಂಧುಗಳೇ,

ನಾಡಿನಾದ್ಯಂತ ಹತ್ತು-ಹಲವು ಕಾರ್ಯಕ್ರಮಗಳನ್ನು ನಡೆಸುತ್ತಾ, ಕರ್ನಾಟಕ ಇತಿಹಾಸ ಅಕಾದೆಮಿಯನ್ನು ವರ್ಷದ ಎಲ್ಲ ಕಾಲವೂ ಕ್ರಿಯಾಶೀಲವಾಗಿ ನಡೆಸುತ್ತಿರುವ ಸರ್ವಸದಸ್ಯರಿಗೂ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುವುದು ನಮ್ಮ ಕರ್ತವ್ಯವೆಂದು ಭಾವಿಸಿದ್ದೇವೆ. ಹನ್ನೆರಡನೆಯ ವಾರ್ಷಿಕ ಸಮ್ಮೇಳನಕ್ಕೆ ಅಣಿಗೊಳ್ಳುತ್ತಿರುವ ನಾವು ಕಳೆದ ವರ್ಷ, ಅಂದರೆ ೧೯೯೭ರಲ್ಲಿ ಹೇಗೆ ಕಾರ್ಯ ನಿರ್ವಹಿಸಿದ್ದೇವೆ ಎಂದು ಪರಿಚಯಿಸುವುದೂ ಸಹ ನಮ್ಮ ಜವಾಬ್ದಾರಿಯಾಗಿದೆ.

### ಐತಿಹಾಸಿಕ ಪರಂಪರೆ ಉಳಿಸಿ - ೧೯೯೭

೧೯೯೦ನೆಯ ವರ್ಷ ಆರಂಭವಾದ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮವು ಮೊದಲ ಎರಡು ವರ್ಷಗಳು ಅಕ್ಟೋಬರ್ ೩೦ರಂದೂ, ನಂತರದ ವರ್ಷಗಳಲ್ಲಿ ಆಗಸ್ಟ್ ೧೬ ರಂದೂ ಉದ್ಘಾಟನೆಗೊಂಡು, ಸಪ್ತಾಹವೆಂಬ ಪರಿಕಲ್ಪನೆಯಿದ್ದರೂ, ವರ್ಷವಿಡೀ ಜನರಿಗೆ ಅರಿವು ಮೂಡಿಸುವ ನಿಟ್ಟಿನಲ್ಲಿ ಫಲಪ್ರದವಾಗುತ್ತಿದೆ.

೧೯೯೭ನೆಯ ಸಾಲಿನಲ್ಲಿ ೧೬-೮-೧೯೯೭ರಂದು ಸಂಜೆ ೬ ಘಂಟೆಗೆ, ಬೆಂಗಳೂರಿನ ವೆಂಕಟಪ್ಪ ಆರ್ಟ್‌ಗ್ಯಾಲರಿಯ ಸಭಾಂಗಣದಲ್ಲಿ ನಡೆದ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಉದ್ಘಾಟನಾ ಕಾರ್ಯಕ್ರಮದಲ್ಲಿ, ಕನ್ನಡ, ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಇಲಾಖೆಗಳ ರಾಜ್ಯ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಭಿತ್ತಿಪತ್ರವನ್ನು ಅನಾವರಣ ಮಾಡಿ, ಐತಿಹಾಸಿಕ ಪರಂಪರೆಯ ಅರಿವು ಜನತೆಗೆ ಅತ್ಯಂತ ಅವಶ್ಯಕವೆಂದೂ, ಯಾವುದೇ ಒಂದು ಸರ್ಕಾರ ತನ್ನ ಇತಿ-ಮಿತಿಗಳಲ್ಲಿ ಕಾರ್ಯನಿರ್ವಹಿಸುವ ಸಂದರ್ಭಗಳಲ್ಲಿ, ಜನತೆಯೂ ಸಹಕರಿಸಿದರೆ ಐತಿಹಾಸಿಕ ಪರಂಪರೆ ಉಳಿಸುವಂತಹ ಕಾರ್ಯಗಳು ಯಶಸ್ವಿಯಾಗುತ್ತವೆ ಎಂದೂ ತಿಳಿಸಿದರು. ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಖ್ಯಾತ ರಂಗ ಕಲಾವಿದ ಶ್ರೀ ಸಿ. ಆರ್. ಸಿಂಹ ಅವರು 'ಬದುಕಿನ ಪ್ರತಿ ಹಂತದಲ್ಲೂ ಇತಿಹಾಸದ ಅರಿವು ಮುಖ್ಯವಾಗುತ್ತದೆ. ಇತಿಹಾಸವನ್ನು ತಿಳಿದ ಯಾರೇ ಆದರೂ ಅದರಿಂದ ಹೆಚ್ಚು ಹೆಚ್ಚು ಕಲಿಯುತ್ತಾ ತಾವೂ ಬೆಳೆಯುತ್ತಾರೆ ಮತ್ತು ಸಮಾಜವನ್ನೂ ಬೆಳೆಸುತ್ತಾರೆ'- ಎಂದು ಅಭಿಪ್ರಾಯಪಟ್ಟರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ, ಅಕಾದೆಮಿಯ ಅಧ್ಯಕ್ಷರೂ ಆದ ಡಾ॥ ಸೂರ್ಯನಾಥ ಕಾಮತ್ ಅವರು ಈವರೆಗೆ ಇತಿಹಾಸ ಅಕಾದೆಮಿಯು 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದ ಮೂಲಕ ಜನರಲ್ಲಿ ಮೂಡಿಸಿರುವ ಅರಿವನ್ನೂ ಪ್ರಸ್ತಾಪಿಸಿ, ಐತಿಹಾಸಿಕ ಸ್ಮಾರಕಗಳು ಮತ್ತು ದಾಖಲೆಗಳು ಎಲ್ಲರ ಆಸ್ತಿಯಾದ್ದರಿಂದ ಅವುಗಳನ್ನು ರಕ್ಷಿಸುವ ಹೊಣೆಗಾರಿಕೆ ಎಲ್ಲರಿಗೂ ಇದೆ ಎಂದು ತಿಳಿಸಿ, ಕೆಲವೆಡೆ ಜನರಿಗೆ ಅರಿವಿಲ್ಲದೆ ಅಥವಾ ಯಾವುದೋ ಕ್ಷುಲ್ಲಕ ಕಾರಣಗಳಿಂದ ಸ್ಮಾರಕಗಳು ಮತ್ತು ದಾಖಲೆಗಳು ನಶಿಸಿಹೋಗುತ್ತಿರುವುದನ್ನು ಪ್ರಸ್ತಾಪಿಸಿ, ಹಾಗಾಗದಂತೆ ತಡೆಯಬೇಕಾದ್ದು ಎಲ್ಲರ ಕರ್ತವ್ಯ, ಎಂದು ತಿಳಿಸಿದರು. ಸಮಾರಂಭದಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕ ಶ್ರೀ ಎಂ. ಎಲ್. ಶಿವಶಂಕರ್ ಅವರೂ ಭಾಗವಹಿಸಿದ್ದು, ಮಾನ್ಯ ಸಚಿವೆಯರ ಮೂಲಕ ತಮ್ಮ ಇಲಾಖೆಯು ಈ ಕಾರ್ಯಕ್ರಮದ ಸಲುವಾಗಿ ಅಕಾದೆಮಿಗೆ ನೀಡುವ ಧನಸಹಾಯವನ್ನು ಚೆಕ್ ಮೂಲಕ ಕೊಡಿಸಿದರು.

ಬೆಂಗಳೂರಿನಲ್ಲಿ ಭಿತ್ತಿಪತ್ರದ ಅನಾವರಣದ ಮೂಲಕ ಉದ್ಘಾಟನೆಗೊಂಡ ನಂತರ, ರಾಜ್ಯದಾದ್ಯಂತ ವಿವಿಧ ಸ್ಥಳಗಳಲ್ಲಿ ಅಕಾದೆಮಿಯ ಕ್ರಿಯಾಶೀಲ ಸದಸ್ಯರು ಮತ್ತು ಸಂಘ-ಸಂಸ್ಥೆಗಳು ನಡೆಸಿದ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಗಳ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ.

## "ಐತಿಹಾಸಿಕ ಪರಂಪರೆ ಉಳಿಸಿ" - ಸಪ್ತಾಹದ ವರದಿ ೧೯೯೭-೯೮
(ಒಟ್ಟು ೮೫ ಕಾರ್ಯಕ್ರಮಗಳು)

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಅಧ್ಯಕ್ಷರು | ಉದ್ಘಾಟಕರು / ಮುಖ್ಯ ಅತಿಥಿಗಳು |
|---|---|---|---|
| | | ಸರ್ವಶ್ರೀ | ಸರ್ವಶ್ರೀ |
| ೧೬-೦೮-೯೭ | ಸರಕಾರಿ ಸಂಯುಕ್ತ ಪ. ಪೂ. ಕಾಲೇಜು ದೇವಲಾಪುರ, ಬೈಲಹೊಂಗಲ | ವಿ. ವ. ಲೋಖಂಡೆ (ಪ್ರಾಂಶುಪಾಲರು) | ಉದಯಕುಮಾರ್ ಮುತಾಲಿಕ್ ದೇಸಾಯಿ<br>ಟಿ. ಎಂ. ಪಂಚಾಕ್ಷರಯ್ಯ |
| ೧೬-೦೮-೯೭ | ಥಿಯಾಸಾಫಿಕಲ್ ಸೊಸೈಟಿ ಮಹಿಳಾ ಕಾಲೇಜು, ಹೊಸಪೇಟೆ. | ಉಷಾರಾಣಿ (ಪ್ರಾಂಶುಪಾಲರು) | ಪ್ರೊ॥ ಟಿ. ಪರಮೇಶ್ವರಪ್ಪ |
| | *(ವಿಶೇಷ ಆಹ್ವಾನಿತರಾಗಿ ವಿಜಯನಗರ ರಾಜವಂಶಜ ಅಚ್ಯುತ ದೇವರಾಯರು ಭಾಗವಹಿಸಿದ್ದರು.)* | | |
| ೧೬-೦೮-೯೭ | ನೀಲಕಂಠೇಶ್ವರ ವಿದ್ಯಾವರ್ಧಕ ಸಂಘದ ಎಸ್. ಜಿ. ವಿ. ಕಲಾ ಮಹಾವಿದ್ಯಾಲಯ ಬೈಲಹೊಂಗಲ | ಶ್ರೀ ಮ. ನಿ. ಪ್ರ. ಸ್ವ. ಗಂಗಾಧರ ಸ್ವಾಮಿಗಳು (ಸಂಸ್ಥೆಯ ಅಧ್ಯಕ್ಷರು) | ಉದಯಕುಮಾರ್ ಮುತಾಲಿಕ್ ದೇಸಾಯಿ<br>ಎಸ್. ಎಂ. ಭಾವಿ,<br>ಎಸ್. ಜಿ. ಗಡತಗನವರ್ |
| | *(ಪ್ರೌಢ ಶಾಲೆಗೆ - "ಕರ್ನಾಟಕ ವೀರರಾಣಿಯರು" ಮತ್ತು ಕಾಲೇಜಿಗೆ - "ಐತಿಹಾಸಿಕ ಮೂಲಾಧಾರಗಳು" ಎಂಬ ವಿಷಯದ ಬಗೆಗೆ ಭಾಷಣ ಸ್ಪರ್ಧೆ ಏರ್ಪಡಿಸಲಾಗಿತ್ತು.)* | | |
| ೧೬-೦೮-೯೭ | ಶ್ರೀ ಚನ್ನಬಸವಸ್ವಾಮಿ ಮಹಾವಿದ್ಯಾಲಯ ಗಂಗಾವತಿ | ವಿ. ಎನ್. ಉಪ್ಪಿನ್ (ಪ್ರಾಂಶುಪಾಲರು) | ಶರಣಬಸಪ್ಪ ಕೋಲ್ಕಾರ್ |
| | *(೧೯-೮-೯೭ ರಿಂದ ೨೩-೮-೯೭ರ ವರೆಗೆ ನಡೆದ ಐತಿಹಾಸಿಕ ವಸ್ತು ಪ್ರದರ್ಶನ ಮತ್ತು ಚಿತ್ರ ಪ್ರದರ್ಶನದ ಅಂಗವಾಗಿ ಗಂಗಾವತಿ ಬಸ್ ನಿಲ್ದಾಣದಲ್ಲಿ ತಾಲ್ಲೂಕಿನ ಐತಿಹಾಸಿಕ ಮತ್ತು ಪ್ರೇಕ್ಷಣೀಯ ಸ್ಥಳಗಳ ಮಾರ್ಗದರ್ಶಿ ಫಲಕದ ಸ್ಥಾಪನೆ ಮಾಡಲಾಯಿತು.)* | | |
| ೧೬-೦೮-೯೭ | ಕೆ. ಎಲ್. ಇ. ಎಸ್. ಕನ್ನಡ ಅಧ್ಯಾಪಕರ ತರಬೇತಿ ಕಾಲೇಜು, ಬೆಳಗಾವಿ | ಪ್ರೊ॥ ಜಿ. ಬಿ. ಕೊಳಕಿ | ಹೆಚ್ ಬಿ. ರಾಜಶೇಖರ್<br>ಮನುಬಳಿಗಾರ<br>(ಅಧಿಕ ಜಿಲ್ಲಾ ದಂಡಾಧಿಕಾರಿ) |
| ೧೬-೦೮-೯೭ | ಪಿ. ವಿ. ಎಸ್. ಬಿ. ಸಿ. ಪ. ಪೂ. ಕಾಲೇಜು, ಹೊಸಪೇಟೆ | ವಸಂತ ರಾವ ದೇಸಾಯಿ | ಜಿ. ವಿ. ಪೆಂಡಕೂರು,<br>ಜಿ.ಕೆ. ಕುಲಕರ್ಣಿ |
| | *(ಪ್ರೊ॥ ಯು. ರಾಘವೇಂದ್ರ ರಾವ್ ಅವರ ಸಂಚಾಲಕತ್ವದಲ್ಲಿ ಐದು ಕಾರ್ಯಕ್ರಮ ಗಳು ನಡೆದಿವೆ.)* | | |
| ೧೮-೦೮-೯೭ | ವಿಜಯ ಮೇರಿ ಪ್ರೌಢಶಾಲೆ, ಸಿರಗುಪ್ಪ | ಸಿಸ್ಟರ್ ಸಿಸಲಿ (ಮುಖ್ಯೋಪಾಧ್ಯಾಯಿನಿ) | ಜಿ. ತಿಪ್ಪೇಸ್ವಾಮಿ<br>ಎನ್. ಜಿ. ಗೊರವರ್ |
| ೧೯-೦೮-೯೭ | ಕಲ್ಯವಾಣಿ ಪ್ರೌಢಶಾಲೆ, ಸಿರಗುಪ್ಪ | ಕಲ್ತೂರಿ ಅರುಣಾಚಲಂ | ಶಾರದ ಪತ್ತಾರ್ |
| ೧೯-೦೮-೯೭ | ಥಿಯಾಸಾಫಿಕಲ್ ಮಹಿಳಾ ಕಾಲೇಜು, ಹೊಸಪೇಟೆ | ಉಷಾರಾಣಿ ಶರ್ಮ | ಪ್ರೊ॥ ಟಿ. ಪರಮೇಶ್ವರಪ್ಪ |
| ೧೯-೦೮-೯೭ | ಗಂಡು ಮಕ್ಕಳ ಪ್ರಾಥಮಿಕ ಶಾಲೆ ಬೈಲಹೊಂಗಲ | ಜಿ. ಬಿ. ತುರುಮುರಿ (ಮುಖ್ಯೋಪಾಧ್ಯಾಯರು) | ಎಸ್. ಎಂ. ಭಾವಿ |
| ೧೯-೦೮-೯೭ | ಸರಕಾರಿ ಸಂ. ಪ. ಪೂ. ಕಾಲೇಜು ಒಕ್ಕುಂದ | ಕೆ. ಎನ್. ನಾದಾಫ್ | ಉದಯ ಕುಮಾರ್ ಮುತ್ತಾಲಿಕ್ ದೇಸಾಯಿ<br>ಎಂ. ಎನ್. ಭಾವಿ ಮತ್ತು ಎನ್. ಜಿ. ಅಂಗಡಿ<br>ಜಿ. ಜಿ. ಗಾಣಗಿ |
| ೨೦-೦೮-೯೭ | ವಿವೇಕಾನಂದ ಪ್ರೌಢಶಾಲೆ, ಸಿರಗುಪ್ಪ | ಎನ್. ಪರಮೇಶ್ವರಪ್ಪ | ಶ್ರೀಮತಿ ಲಕ್ಷ್ಮಿದೇವಿ, ಸುಸನ್ನಲಲಿತ |
| ೨೦-೦೮-೯೭ | ಶ್ರೀ ಬಸವೇಶ್ವರ ಪ್ರೌಢಶಾಲೆ ನಾಗನೂರು | ಶ್ರೀ ಕೆ. ಎನ್. ಕೊಂಡಪ್ಪ ತಲ್ಲೂರ್ | ಉದಯಕುಮಾರ್ ಮುತಾಲಿಕ್ ದೇಸಾಯಿ<br>ಎಸ್. ಎಂ. ಭಾವಿ, ಮತ್ತು<br>ಎನ್. ಕೆ. ತಲ್ಲೂರು |
| ೨೧-೦೮-೯೭ | ವಿಜಯನಗರ ಕಾಲೇಜು ಹೊಸಪೇಟೆ | ಜೆ. ಎಂ. ಗುರುಬಸವರಾಜ್ (ಪ್ರಾಂಶುಪಾಲರು) | ಎನ್. ಎಂ. ದಾರುಕಾಚಾರ್ಯ |
| ೨೧-೦೮-೯೭ | ಸರಕಾರಿ ಪ. ಪೂ. ಕಾಲೇಜು, ಸಿರಗುಪ್ಪ | ಹೆಚ್. ಚಂದ್ರಶೇಖರ್ | ಎಸ್. ವಿ. ಅಗ್ನಿ |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಅಧ್ಯಕ್ಷರು | ಉದ್ಘಾಟಕರು / ಮುಖ್ಯ ಅತಿಥಿಗಳು |
|---|---|---|---|
| | | ಸರ್ವಶ್ರೀ | ಸರ್ವಶ್ರೀ |
| ೨೧-೦೮-೯೭ | ಶ್ರೀ ಶಿವಯೋಗೀಶ್ವರ ಸಂಯುಕ್ತ ಪ. ಪೂ. ಮಹಾವಿದ್ಯಾಲಯ, ಇಂಚಲ | ಎಂ. ಎಸ್. ರಾಹು ತನಮ್ *( ಶಿವಾನಂದ ಭಾರತಿ ಸಂಸ್ಥೆ ಅಧ್ಯಕ್ಷರು )* | ಉದಯಕುಮಾರ್ ಮುತಾಲಿಕ್ ದೇಸಾಯಿ ಎಸ್. ಎಂ. ಭಾವಿ |
| ೨೧-೦೮-೯೭ | ಮಹಾತ್ಮ ಪ್ರೌಢಶಾಲೆ, ವಿಜಯಪುರ | ಅಪ್ಪಯ್ಯಣ್ಣ | ಎಂ. ರಾಮಚಂದ್ರಪ್ಪ |
| ೨೨-೦೮-೯೭ | ಸರಕಾರಿ ಪ. ಪೂ. ಕಾಲೇಜು ಚಿತ್ತವಾಡಿಗಿ, ಹೊಸಪೇಟೆ | ಪ್ರೊ ॥ ಪಿ. ಪತೆವಳಕಲ್ *( ಪ್ರಾಂಶುಪಾಲರು )* | ಪ್ರೊ ॥ ವಿಜಯಕುಮಾರ್ |
| ೨೨-೦೮-೯೭ | ವಿಜಯನಗರ ಮಹಾವಿದ್ಯಾಲಯ ಹೊಸಪೇಟೆ | ಡಾ ॥ ಎಸ್. ಜಿ.ವಿರೂಪಣ್ಣ | ಮಲ್ಹಾರಿ ದೀಕ್ಷಿತ್ ಅಡವೀಶ್ವರ ಗೌಡ |
| ೨೨-೦೮-೯೭ | ಸಿ. ಎ. ಸಂ. ಬಾಲಿಕಾ ಪ್ರೌಢಶಾಲೆ ಸಿರಗುಪ್ಪ | ಸಿ. ಎನ್. ಅನ್ನಮ್ಮ | ಅಡವೀಶ್ವರ ಗೌಡ |
| ೨೨-೦೮-೯೭ | ಬೆಲ್ಲದ ಬಾಗೇವಾಡಿಯ ಭರತೇಶ ಪದವಿಪೂರ್ವ ವಿದ್ಯಾಲಯ, ಹುಕ್ಕೇರಿ | ಬಿ. ಆರ್. ಕುಂಬಾರ | ಪ್ರೊ ॥ ಎಲ್. ವಿ. ಪಾಟೀಲ್ |
| ೨೨-೦೮-೯೭ | ಸರಕಾರಿ ಸಂ. ತ. ಪೂ. ಕಾಲೇಜು ದೇವಲಾಪುರ | ಒ. ವಿಂ. ಲೋಖಂಡೆ | ಎಸ್. ಎಂ. ಭಾವಿ |
| | **( ಮುಕ್ತಾಯ ಸಮಾರಂಭದಲ್ಲಿ 'ಕನ್ನಡ ನಾಡಿನ ದೇವಾಲಯಗಳು' ವಿಷಯವಾಗಿ ನಿಬಂಧ ಸ್ಪರ್ಧೆ ನಡೆಸಲಾಯಿತು. )** | | |
| ೨೨-೦೮-೯೭ | ಕಲಾ ಹಾಗೂ ವಾಣಿಜ್ಯ ಪದವಿಪೂರ್ವ ಮಹಾ ವಿದ್ಯಾಲಯ, ರಾಯಬಾಗ್, ಬೆಳಗಾವಿ | ಪ್ರೊ ॥ ಭಾಸ್ಕರ್ | ಡಾ ॥ ಎಸ್. ವಿ. ಜೋಶಿ *( ಪುರಾತತ್ವವಿದ )* ಪ್ರೊ. ಬಿ. ಜಿ. ತಮ್ಮಣಗಿ |
| ೨೩-೦೮-೯೭ | ಸರಕಾರಿ ಪ್ರೌಢಶಾಲೆ, ಅನಂತಶಯನ ಗುಡಿ ಹೊಸಪೇಟೆ | ಎಂ. ಶಂಕ್ರಪ್ಪ ಮುಖ್ಯೋಪಾಧ್ಯಾಯರು | ಡಾ ॥ ಮೃತ್ಯುಂಜಯ ರುಮಾಲೆ ಪ್ರೊ ॥ ಹೆಚ್. ಎಂ. ಚಂದ್ರಶೇಖರ ಶಾಸ್ತ್ರಿ |
| ೨೩-೦೮-೯೭ | ಸಿ. ವಿ. ಸಂ. ಆಂಗ್ಲ ಮಾಧ್ಯಮ ಶಾಲೆ ಸಿರಗುಪ್ಪ | ಶ್ರೀಮತಿ ಮೇ. ಆಜಿಲ ಜೋಸೆಫ್ | ಗಿ. ವೆಂಕಟಪ್ಪ |
| ೨೩-೦೮-೯೭ | ಸರಕಾರಿ ಬಾಲಕಿಯರ ಪ್ರೌಢಶಾಲೆ ದೇವನಹಳ್ಳಿ | ಶ್ರೀಪಾದರಾವ್ *( ಮುಖ್ಯೋಪಾಧ್ಯಾಯರು )* | ಈಶ್ವರಪ್ಪ ಉಕ್ಕಡಗಾರ್ತಿ |
| ೨೫-೦೮-೯೭ | ಸರಕಾರಿ ಪ್ರೌಢಶಾಲೆ, ಬಿಯಂಸೂಗೂರು | ನಾಗರತ್ನಬಾಯಿ | ಜೆ. ನರಸಿಂಹಮೂರ್ತಿ |
| ೨೫-೦೮-೯೭ | ಡಾ ॥ ಕೆ. ಎನ್. ಶರ್ಮ ಸಭಾ ಭವನ ಹುಬ್ಬಳ್ಳಿ | ಎಂ. ಎಲ್. ಶಿವಶಂಕರ್ *( ನಿರ್ದೇಶಕರು, ಪುರಾತತ್ವ-ವಸ್ತುಸಂಗ್ರಹಾಲಯ ಇಲಾಖೆ )* | ಡಾ ॥ ಆರ್. ಎಂ. ಷಡಕ್ಷರಯ್ಯ |
| ೨೫-೦೮-೯೭ | ಸಂಯುಕ್ತ ಪ. ಪೂ. ಕಾಲೇಜು, ತೆಕ್ಕಲಕೋಟೆ | ಎಂ. ವಿರೇಶ್ | ಹೆಚ್. ಚಂದ್ರಶೇಖರ್ |
| ೨೫-೦೮-೯೭ | ಶಾಸನ ತಜ್ಞರ ಕಛೇರಿ, ಹುಬ್ಬಳ್ಳಿ | ಎಂ.ಎಲ್. ಶಿವಶಂಕರ್ *( ನಿರ್ದೇಶಕರು , ಪುರಾತತ್ವ-ವಸ್ತು ಸಂಗ್ರಹಾಲಯ ಇಲಾಖೆ )* | ಡಾ ॥ ಎಂ. ಎಂ. ರಾಜಶೇಖರಯ್ಯ ಡಾ ॥ ಆರ್. ಎಂ. ಷಡಕ್ಷರಯ್ಯ *( ನಿರ್ದೇಶಕರು ಕ. ಸಂ. ಸಂ. ಧಾರವಾಡ )* ಹೆಚ್. ಎಂ. ಚಂದ್ರಶೇಖರಶಾಸ್ತ್ರಿ, ಡಾ ॥ ಮೃತ್ಯುಂಜಯ ರುಮಾಲೆ |
| ೨೫-೦೮-೯೭ | ಪ್ರಾಚ್ಯವಸ್ತು ಸಂಗ್ರಹಾಲಯ, ಸರ್ಕಾರಿ ಪ್ರೌಢಶಾಲೆ, ಅನಂತಶಯನಗುಡಿ | ಎಂ. ಶಂಕ್ರಪ್ಪನವರು | ಎ. ಮಲ್ಲಿಕಾರ್ಜುನ |
| ೨೬-೦೮-೯೭ | ಸರಕಾರಿ ಪ್ರೌಢಶಾಲೆ ರಾರಾವಿ. | ನಾ. ಮ. ಕಲಿಗಣನಾಥ | ಎ. ಮಲ್ಲಿಕಾರ್ಜುನ |
| ೨೬-೦೮-೯೭ | ಸರಕಾರಿ ಪ್ರೌಢಶಾಲೆ, ಹಚ್ಚೊಳ್ಳಿ | ಎನ್. ಬಿ. ಗೊರವರ್ | ಗುರುಕೃಷ್ಣಾಚಾರ್ |
| ೨೭-೦೮-೯೭ | ಶಾಂತಿನಿಕೇತನ ವಿದ್ಯಾಮಂದಿರ ಸಿರಗುಪ್ಪ | ಬಿ. ಶಾಂತಕುಮಾರಿ | ಯಲ್ಲಾರೇಶ್ |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಅಧ್ಯಕ್ಷರು | ಉದ್ಘಾಟಕರು / ಮುಖ್ಯ ಅತಿಥಿಗಳು |
| --- | --- | --- | --- |
| | | ಸರ್ವಶ್ರೀ | ಸರ್ವಶ್ರೀ |
| ೨೭-೦೮-೯೭ | ಸರಕಾರಿ ಪ್ರೌಢಶಾಲೆ ಶಿರಗೇರಿ | ಶ್ರೀರಾಮಲು | ನಾಗೇಂದ್ರಪ್ಪ |
| ೨೮-೦೮-೯೭ | ಸರಕಾರಿ ಪ್ರೌಢಶಾಲೆ, ಕರೂರು | ಟಿ. ಶ್ರೀಕಂಠೇಶ್ವರ | ಟಿ. ಕೊಟ್ರೇಶ್ವರ, ಶರಣಯ್ಯ |
| ೨೮-೦೮-೯೭ | ಪ್ರಾಚೀನ ಭಾರತ ಇತಿಹಾಸ ವಿಭಾಗ<br>ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ಡಾ ॥ ಜಿ. ಎಸ್. ದೀಕ್ಷಿತ್ | ಪ್ರೊ ॥ ಇಕ್‌ಬಾಲ್ ಅಹಮದ್<br>ಡಾ ॥ ಹೆಚ್. ಆರ್. ರಘುನಾಥಭಟ್ |
| ೨೯-೦೮-೯೭ | ಅಂಬೇಡ್ಕರ್ ಪ್ರೌಢಶಾಲೆ, ತಾಳೂರು | ಕುಮಾರಸ್ವಾಮಿ | ಗಂಗಾಧರಯ್ಯ |
| ೨೯-೦೮-೯೭ | ಸರಕಾರಿ ಪ್ರಥಮ ದರ್ಜೆ ಕಾಲೇಜು<br>ಸಿರಗುಪ್ಪ | ಸಿ. ಜಿ. ಸೇಡಂಕರ್ | ಗಿ. ವೆಂಕಟಪ್ಪ |
| ೨೯-೦೮-೯೭ | ಛತ್ರಪತಿ ಶಿವಾಜಿ ವಿದ್ಯಾಮಂದಿರ<br>ಸೊಂಡೂರು | ಡಾ ॥ ಶಾಂತಿನಾಥ ದಿಬ್ಬದ | ಕೆ. ಹೆಚ್. ಎಂ. ವಿಜಯಕುಮಾರ್ |
| ೨೯-೦೮-೯೭ | ಭಾರತಿ ಪ್ರೌಢಶಾಲೆ, ಶಿವಮೊಗ್ಗ | ಮೋಹನ ಗ. ಹಗ್ಗಡೆ | ಕೆ. ಪಿ. ತಿಪ್ಪೇಸ್ವಾಮಿ<br>ಜಿ. ವಿ. ಕೊಲ್ಲಾಪುರ<br>( ರಸಪ್ರಶ್ನೆ ಕಾರ್ಯಕ್ರಮ ಏರ್ಪಡಿಸಲಾಗಿತ್ತು ) |
| ೩೦-೦೮-೯೭ | ವಿ. ಕೆ. ಜೈ. ಪದವಿಪೂರ್ವ ಕಾಲೇಜು<br>ಸಿರಗುಪ್ಪ | ಎಸ್. ಎ. ರಾಜಗೋಪಾಲ<br>( ಕುಂ. ಬಾ. ಸದಾಶಿವಪ್ಪನವರ ನೇತೃತ್ವದಲ್ಲಿ ಒಟ್ಟು ೧೬ ಕಾರ್ಯಕ್ರಮಗಳು ನಡೆದಿವೆ. ) | ಗುರುಮೂರ್ತಿ ಪೆಂಡಕೂರ್ |
| ೩೧-೦೮-೯೭ | ಗ್ರಾಮ ಪಂಚಾಯಿತಿ ಕಾರ್ಯಾಲಯ<br>ಕೃಷ್ಣ ನಗರ | ಜಿ. ಪಾಂಡುರಂಗಾಚಾರ್ | ಡಾ ॥ ಸಿ. ನಾಗಭೂಷಣ |
| ೦೧-೦೯-೯೭ | ವಿಜಯನಗರ ಕಾಲೇಜು, ಹೊಸಪೇಟೆ | ಡಾ ॥ ಎಸ್. ಜಿ. ವಿರೂಪಣ್ಣ | ಮಲ್ಲಾರಿ ದೀಕ್ಷಿತ್ |
| ೦೨-೦೯-೯೭ | ಎಸ್. ಯು. ಜೆ. ಎಂ. ಪದವಿಪೂರ್ವ<br>ಕಾಲೇಜು, ಹರಪನಹಳ್ಳಿ | ಡಾ ॥ ಎಸ್. ಬಸವರಾಜ್ | ಐ. ಬಸವರಾಜ್ |
| ೦೨-೦೯-೯೭ | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ<br>ಶಾಲೆ, ಕುಂಚೂರು | ಹೆಚ್. ಕರಿಯಪ್ಪ<br>( ಮುಖ್ಯೋಪಾಧ್ಯಾಯರು ) | ವಿಜಯಕುಮಾರ್ ಎಂ.<br>ಜಿ. ಮಲ್ಲಿಕಾರ್ಜುನ<br>ಗಡಿಯಾಳ ಕೋಟೆಪ್ಪ |
| ೦೨-೦೯-೯೭ | ಸಂತಜಾನ್ ಪದವಿಪೂರ್ವ ಕಾಲೇಜು<br>ಬಳ್ಳಾರಿ | ರೆ.ಫಾ.ವಾಲ್ಟರ್ ಮೆನೆಜಿಸ್<br>( ಪ್ರಾಂಶುಪಾಲರು ) | ಶಾಶ್ವತಸ್ವಾಮಿ ಮುಕ್ಕುಂದಿ ಮಠ<br>ಜೋರನೂರು ಕೊಟ್ರಪ್ಪ<br>ಕೆ. ಜಿ. ಪ್ರಸಾದ್ |
| ೦೩-೦೯-೯೭ | ಟಿ. ಎಂ. ಎ. ಇ. ಎನ್. ಪ್ರೌಢಶಾಲೆ<br>ನೀಲಗುಂದ | ಜಿ. ಎಂ. ಶಿವದೇವಯ್ಯ | ಎಸ್. ಬಸವರಾಜು |
| ೦೪-೦೯-೯೭ | ಸರಕಾರಿ ಪದವಿಪೂರ್ವ ಕಾಲೇಜು<br>ಹರಪನಹಳ್ಳಿ | ಡಿ. ದುಷ್ಯಂತಗೌಡ | ಕೆ. ಎನ್. ನಿಜಲಿಂಗಪ್ಪ<br>( ಸಂಚಾಲಕರು ಟಿ. ಜಯಪ್ರಕಾಶ್ ) |
| ೦೪-೦೯-೯೭ | ಸರಕಾರಿ ಬಾಲಕಿಯರ ಪ್ರೌಢಶಾಲೆ<br>ಹರಪನಹಳ್ಳಿ | ಸಿ. ಎಂ. ತಿಪ್ಪೇರುದ್ರಯ್ಯ<br>( ಮುಖ್ಯೋಪಾಧ್ಯಾಯರು ) | ಎಂ. ಪಿ. ಎಂ. ದಯಾನಂದ ಸ್ವಾಮಿ |
| ೦೫-೦೯-೯೭ | ಸರಕಾರಿ ಬಾಲಕಿಯರ ಮಾದರಿ<br>ಹಿರಿಯ ಪ್ರಾಥಮಿಕ ಶಾಲೆ, ಹರಪನಹಳ್ಳಿ | ಎಸ್. ಬಸವರಾಜು | ಎಂ. ಮರುಳುಸಿದ್ದಯ್ಯ |
| ೦೮-೦೯-೯೭ | ಭಾರತಿ ಪ್ರೌಢಶಾಲೆ, ಕೆಳದಿ | ಮೋಹನ ಜಿ. ಹೆಗ್ಗಡೆ | ಕೆಳದಿ ವೆಂಕಟೇಶ್ ಜೋಯಿಸ್ |
| ೦೯-೦೯-೯೭ | ಎಂಪ್ರೆಸ್ ಬಾಲಕಿಯರ ಪ್ರೌಢಶಾಲೆ<br>ತುಮಕೂರು | ಸಿ. ವಿಶ್ವನಾಥ<br>( ಪ್ರಾಚಾರ್ಯರು ) | ಡಾ ॥ ಡಿ. ಎನ್. ಯೋಗೀಶ್ |
| ೦೯-೦೯-೯೭ | ಭಾರತಿ ಪ್ರೌಢಶಾಲೆ, ಕೆಳದಿ | ಡಾ ॥ ವೆಂಕಟೇಶ್ ಜೋಶಿ | ಡಾ ॥ ಜಿ. ವಿ. ಕಲ್ಲಾಪುರ |
| ೦೯-೦೯-೯೭ | ಜನತಾ ವಿದ್ಯಾ ಸಂಸ್ಥೆ, ವಿವೇಕಾನಂದ<br>ಕಾಲೇಜು, ಬೆಂಗಳೂರು | ಎಡಿ. ಗೋವಿಂದಯ್ಯ | ಡಾ ॥ ಕೆ. ಆರ್. ಗಣೇಶ್ |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಅಧ್ಯಕ್ಷರು | ಉದ್ಘಾಟಕರು / ಮುಖ್ಯ ಅತಿಥಿಗಳು |
|---|---|---|---|
| | | ಸರ್ವಶ್ರೀ | ಸರ್ವಶ್ರೀ |
| ೦೯-೦೯-೯೭ | ಕ. ವಿ. ಪ್ರ. ಸಮಿತಿಯ ಕಲಾ ವಿಜ್ಞಾನ ವಾಣಿಜ್ಯ ವಿದ್ಯಾಲಯ, ಹೊಳೆಆಲೂರು | ಎನ್. ಎನ್. ಪಟ್ಟಣ ಶೆಟ್ಟಿ | ಉದಯ ಆನಂದ ಶಾಸ್ತ್ರಿಗಳು ( ಸಹಾಯಕ ಅಧಿಕಾರಿ, ಪುರಾತತ್ವ ಇಲಾಖೆ ) |
| ೧೦-೦೯-೯೭ | ಬಾಬು ಜಗಜೀವನರಾಮ್ ಪ್ರಥಮ ದರ್ಜೆ ಕಾಲೇಜು, ತುಮಕೂರು | ಎಂ. ಎಸ್. ಉಮಾಮಹೇಶ್ ( ಪ್ರಾಂಶುಪಾಲರು ) | ವೈ. ಆರ್. ಸದಾಶಿವಯ್ಯ |
| ೧೧-೦೯-೯೭ | ಸಿದ್ಧಗಂಗಾ ಬಾಲಕರ ಕಾಲೇಜ್ ತುಮಕೂರು | ಸಿ. ಆರ್. ನಾಗರಾಜ್ ( ಪ್ರಾಂಶುಪಾಲರು ) | ಯತಿರಾಜು |
| ೧೨-೦೯-೯೭ | ವಿವೇಕಾನಂದ ಹೈಸ್ಕೂಲ್ ತುಮಕೂರು | ಎ. ಶಿವಣ್ಣ | ಎನ್. ಆರ್. ಉಮಾ ಮಹೇಶ್ |
| ೧೩-೦೯-೯೭ | ಆರ್ಯನ್ ಬಾಲಕಿಯರ ಪ್ರೌಢಶಾಲೆ ತುಮಕೂರು | ಹೆಚ್. ಎನ್. ವೆಂಕಟೇಶ್ ( ಪ್ರಾಂಶುಪಾಲರು ) | ವೈ. ಆರ್. ಸದಾಶಿವಯ್ಯ |
| ೧೩-೦೯-೯೭ | ಪೂರ್ಣಪ್ರಜ್ಞಾ ಕಾಲೇಜು, ಉಡುಪಿ | ಪ್ರೊ॥ ಬಿ. ಎನ್. ದೀಕ್ಷಿತ್ ( ಪ್ರಾಂಶುಪಾಲರು ) | ಕೆ. ಶ್ರೀನಿವಾಸ ಉಡುಪ<br>ಹೆಚ್. ಟಿ. ಕೃಷ್ಣಮೂರ್ತಿ |
| ೧೪-೦೯-೯೭ | ಬಾಪೂಜಿ ಪದವಿಪೂರ್ವ ಕಾಲೇಜು ತುಮಕೂರು | ಡಿ. ಹೆಚ್. ಗೌರಮ್ಮ | ಡಿ. ಸಿದ್ಧಲಿಂಗಯ್ಯ |
| ೧೬-೦೯-೯೭ | ರೇಣುಕ ಸಂಯುಕ್ತ ಪದವಿಪೂರ್ವ ಕಾಲೇಜು, ಹಗರಿಬೊಮ್ಮನಹಳ್ಳಿ | ಹೆಚ್. ಬಾಲರಾಜು ( ಕ್ಷೇತ್ರ ಶಿಕ್ಷಣಾಧಿಕಾರಿಗಳು ) | ಶ್ರೀಮತಿ ಇಂದುಮತಿ |
| ೧೬-೦೯-೯೭ | ಭೈರವೇಶ್ವರ ಪ. ಪೂ. ಕಾಲೇಜು ತುಮಕೂರು | ಚಿ. ಗೋವಿಂದನಾಯ್ಕ ( ಪ್ರಾಂಶುಪಾಲರು ) | ಬಿ. ಗಂಗಾಧರ ಮೂರ್ತಿ |
| ೧೭-೦೯-೯೭ | ಆರ್ಯನ್ ಬಾಲಕರ ಪ್ರೌಢಶಾಲೆ ತುಮಕೂರು | ಎ. ಎಸ್. ವೆಂಕಟೇಶ್ | ಹೆಚ್. ಎಲ್. ಗೋವಿಂದರಾಜು |
| ೧೭-೦೯-೯೭ | ಗಂಜೀ. ಸ. ಪದವಿಪೂರ್ವ ಕಾಲೇಜು, ಹಗರಿಬೊಮ್ಮನಹಳ್ಳಿ | ಟಿ. ಬಸವರಾಜು ( ಪ್ರಭಾರಿ ಪ್ರಾಂಶುಪಾಲರು ) | ಕೆ. ರಾಮನಗೌಡ |
| ೧೭-೦೯-೯೭ | ಕೌದಿ ಮಹಾಂತೇಶ್ವರ ಪ್ರೌಢಶಾಲೆ ಬಾಚಿಗೊಂಡನ ಹಳ್ಳಿ | ಎನ್. ಎನ್. ಎಂ. ಹಿರೇಮಠ | ಎಂ. ವಿ. ಚಕ್ರಪಾಣಿ<br>ಕುರುಕುಡ್ಡಿ ಶಿವಕುಮಾರ್<br>ಕೆ. ಶಂಕರಗೌಡ್ರು. |
| ೧೮-೦೯-೯೭ | ಶ್ರೀ ಪಾಪುಸ್ವಾಮಿ ಜಿಲ್ಲಾ ಪರಿಷತ್ ಪ್ರೌಢಶಾಲೆ, ಹಗರಿಬೊಮ್ಮನಹಳ್ಳಿ | ಹೆಚ್. ಕೃಷ್ಣಮೂರ್ತಿ ( ಮುಖ್ಯೋಪಾಧ್ಯಾಯರು ) | ಕೆ. ಪನ್ನಂಗಧರ |
| ೧೯-೦೯-೯೭ | ರಾಷ್ಟ್ರೋತ್ಥಾನ ಪ್ರೌಢಶಾಲೆ ಹಗರಿಬೊಮ್ಮನಹಳ್ಳಿ | ಜವರೇಗೌಡರು | ಜಿ. ವಿಜಯಕುಮಾರ್<br>ಕೆ. ಪಿ. ವಿಠಲ್ , ಹೆಚ್. ನಂಜುಂಡಪ್ಪ<br>ಕೆ. ಎಸ್. ಕೃಷ್ಣಮೂರ್ತಿ ರಾವ್ |
| ೧೯-೦೯-೯೭ | ಸಿದ್ಧಗಂಗಾ ಮಹಿಳಾ ಕಾಲೇಜು ತುಮಕೂರು | ಪ್ರೊ॥ ಕೆ. ಹೆಚ್. ಪರಮಶಿವಯ್ಯ ( ಪ್ರಾಂಶುಪಾಲರು ) | ಶಿ. ರಾಜೇಂದ್ರಪ್ಪ |
| ೧೯-೦೯-೯೭ | ಸಿದ್ಧಗಂಗಾ ಪ. ಪೂ. ಕಾಲೇಜು ತುಮಕೂರು | ಎಸ್. ವಿಶ್ವನಾಥಯ್ಯ ( ಪ್ರಾಂಶುಪಾಲರು ) | ಡಾ॥ ಬಿ. ನಂಜುಂಡಸ್ವಾಮಿ |
| ೨೦-೦೯-೯೭ | ಕಾಳಿದಾಸ ಪದವಿಪೂರ್ವ ಕಾಲೇಜು ತುಮಕೂರು | ಸಿ. ಯತಿರಾಜು ( ಪ್ರಾಂಶುಪಾಲರು ) | ಸಿ. ರಮೇಶ |
| ೨೨-೦೯-೯೭ | ಇಂದಿರಾ ಮಹಿಳಾ ಕಾಲೇಜು ತುಮಕೂರು | ಶ್ರೀಮತಿ ರೀಟಾ ( ಪ್ರಾಂಶುಪಾಲರು ) | ಕಮಲೇಶ್ |
| ೨೩-೦೯-೯೭ | ಸಿದ್ಧಾರ್ಥ ಪ್ರಥಮ ದರ್ಜೆ ಕಾಲೇಜ್ ತುಮಕೂರು | ಪ್ರೊ॥ ಎಸ್. ಗುರುಪ್ರಕಾಶ್ ( ಪ್ರಾಂಶುಪಾಲರು ) | ಡಾ॥ ಬಿ. ನಂಜುಂಡಸ್ವಾಮಿ |
| ೨೪-೦೯-೯೭ | ಯನಿಯನ್ ಕ್ರಿಶ್ಚಿಯನ್ ಕಾಲೇಜ್, ತುಮಕೂರು................................................ | | |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಅಧ್ಯಕ್ಷರು | ಉದ್ಘಾಟಕರು / ಮುಖ್ಯ ಅತಿಥಿಗಳು |
|---|---|---|---|
| | | ಸರ್ವಶ್ರೀ | ಸರ್ವಶ್ರೀ |
| ೨೬-೦೯-೯೭ | ಯೋಗ ಕೇಂದ್ರ ಒಳಕ್ರೀಡಾಂಗಣ<br>ಜಿ. ಬಿ. ಆರ್. ಕಾಲೇಜು, ಹಡಗಲಿ | ಎಲ್. ಪರಮೇಶ್ವರಪ್ಪ | ವೈ. ಜಂಬಣ್ಣನವರು<br>ಸೊಪ್ಪಿನ ವೀರಪ್ಪ<br>ಎಂ. ಪಿ. ಎಂ. ದಯಾನಂದ ಸ್ವಾಮಿ |
| ೨೭-೦೯-೯೭ | ಕರ್ನಾಟಕ ಸಂಘ ಭವನ,<br>ಶಿವಮೊಗ್ಗ | ಮಲ್ಲೇಪುರಂ ವೆಂಕಟೇಶ್<br>( ಕನ್ನಡ ವಿಶ್ವವಿದ್ಯಾಲಯ ) | ಜಯದೇವಪ್ಪ ಜೈನಕೇರಿ<br>( ವಿಚಾರ ಸಂಕಿರಣವನ್ನು ನಡೆಸಲಾಗಿದೆ ) |
| ೨೯-೦೯-೯೭ | ಸ್ವಾಮಿ ವಿವೇಕಾನಂದ ಸರ್ಕಾರಿ ಪ. ಪೂ.<br>ಕಾಲೇಜು, ಹೊಳಲು | ಎಸ್. ಬಿ. ಕರಬಸಳನವರ್ | ಎಲ್. ಪಿ. ನಾಗೇಶ್<br>ಆರ್. ಆರ್. ಮಾಬಿ ಗೌಡ್ರು<br>ಎ. ಎಸ್. ಕೊಟ್ರಬಸಪ್ಪ |
| ೦೧-೧೦-೯೭ | ಮರಿಸ್ವಾಮಯ್ಯ ಮಠದ ಪಾಟೀಲ್<br>ಕಿರಿಯ ಮಹಾ ವಿದ್ಯಾಲಯ, ಇಟಗಿ | ಹಿ. ಮ. ಗುರುಬಸವರಾಜ | ಕೆ. ಲಕ್ಷ್ಮಣ ಸುಮಂಗಳ<br>ಮಾರುಶೇಶ, ಪ್ರಕಾಶ್‌ಗೌಡ |
| ೧೪-೦೯-೯೭ | ಬಸವೇಶ್ವರ ಪ್ರಥಮ ದರ್ಜೆ ಕಾಲೇಜು,<br>ಬೆಂಗಳೂರು | ಹೆಚ್.ಎಸ್. ರೇಣುಕಾ ಪ್ರಸಾದ್ | ಡಾ \|\| ಜ್ಯೋತ್ಸ್ನಾ ಕಾಮತ್<br>( ಸ್ಥಿರಚಿತ್ರ ಪ್ರದರ್ಶನದ ವಿರ್ಪಾಡನ್ನು ಮಾಡಲಾಗಿತ್ತು ) |
| ೦೮-೧೧-೯೭ | ವಿವೇಕಾನಂದ ಹೈಸ್ಕೂಲ್, ಬೆಂಗಳೂರು | ಸಣ್ಣತಮ್ಮೇಗೌಡ<br>( ಮುಖ್ಯೋಪಾಧ್ಯಾಯರು ) | ಜೆ. ಟಿ. ಜಯರಾಮಯ್ಯ<br>( ಸ್ಥಿರಚಿತ್ರ ಪ್ರದರ್ಶನದ ವಿರ್ಪಾಡನ್ನು ಮಾಡಲಾಗಿತ್ತು ) |
| ೦೧-೧೨-೯೭ | ಕರ್ನಾಟಕ ಸಂಘ ಭವನ, ಶಿವಮೊಗ್ಗ | ಡಾ \|\| ಹೆಚ್.ಎಸ್. ಗೋಪಾಲರಾವ್ | ಡಾ \|\| ಅ. ಸುಂದರ<br>ಸಿದ್ಧಯ್ಯ ಹಿರೇಮಠ |
| | ( ಐತಿಹಾಸಿಕ ಛಾಯಾಚಿತ್ರ ಪ್ರದರ್ಶನ, ನಾಣ್ಯ ಪ್ರದರ್ಶನ ಮತ್ತು ಜಿಲ್ಲಾ ಪತ್ರಿಕಾ ಪ್ರದರ್ಶನ ವಿರ್ಪಡಿಸಲಾಗಿತ್ತು. ಡಾ \|\| ಅ. ಸುಂದರ ಅವರನ್ನು ಅಕಾದೆಮಿಯ ಪರವಾಗಿ, ಶ್ರೀ ಎಂ. ಚಿದಂಬರ ಮತ್ತು ಮಕ್ಕಳು, ಶಿವಮೊಗ್ಗ ಅವರು ಸನ್ಮಾನಿಸಿದರು. ) | | |
| ೦೨-೧೨-೯೭ | ಜಗದ್ಗುರು ಸಚ್ಚಿದಾನಂದ ಪ್ರೌಢಶಾಲೆ<br>ಯಲವಟ್ಟಿ ಮತ್ತು ಮಲೆನಾಡು ವೀರಶೈವ<br>ಅಧ್ಯಯನ ಸಂಸ್ಥೆ ಶಿವಮೊಗ್ಗ | ಹೆಚ್. ಎಂ. ಚಂದ್ರಶೇಖರಪ್ಪ | ಡಾ \|\| ಅ. ಸುಂದರ<br>ಡಾ \|\| ಬಿ.ಎಸ್. ನಾಗರಾಜ್<br>ಸಿದ್ಧಯ್ಯ ಹಿರೇಮಠ<br>( ಇತಿಹಾಸ ಸಮ್ಮೇಳನ, ಪ್ರಬಂಧ ಸ್ಪರ್ಧೆ ಹಾಗೂ ವಸ್ತುಪ್ರದರ್ಶನಗಳನ್ನು ನಡೆಸಲಾಗಿದೆ ) |
| ೩೧-೧೨-೯೭ | ಶಿವಮೊಗ್ಗ ಸಹ್ಯಾದ್ರಿ ಕಲಾ ಮತ್ತು<br>ವಾಣಿಜ್ಯ ಮಹಾವಿದ್ಯಾಲಯ | ಜ \|\| ಶ್ರೀ ಶ್ರೀ ಮಲ್ಲಿಕಾರ್ಜುನ<br>ಮುರುಘರಾಜೇಂದ್ರ<br>ಮಹಾಸ್ವಾಮಿಗಳು<br>ಪ್ರೊ \|\| ಆರ್. ಆರ್ ಕುಲಕರ್ಣಿ | ಪ್ರೊ \|\| ಪಿ. ವೆಂಕಟರಾಮಯ್ಯ<br>ಎಂ.ಎಸ್. ಬಸವರಾಜ್<br>ಹೆಚ್. ಎಂ. ಚಂದ್ರಶೇಖರಪ್ಪ<br>ಸಿದ್ಧಯ್ಯ ಹಿರೇಮಠ<br>ಜಯದೇವಪ್ಪ ಜೈನಕೇರಿ |
| | ( ಈ ಸಂದರ್ಭದಲ್ಲಿ ರಾಜ್ಯಪುರಾತತ್ವ ಇಲಾಖೆ-ಶಿವಪ್ಪನಾಯಕನ ಅರಮನೆ ವತಿಯಿಂದ ಛಾಯಾಚಿತ್ರ ಪ್ರದರ್ಶನ, ಶ್ರೀ ಎಸ್. ರಾಮಚಂದ್ರ ಕಾರಂತ್, ಶಿವಮೊಗ್ಗ ಅವರಿಂದ ಪ್ರಾಚೀನ ನಾಣ್ಯ ಪ್ರದರ್ಶನ ವಿರ್ಪಾಟಾಗಿತ್ತು ) | | |
| ೨೯-೦೧-೯೮ | ಗ್ರಾಮಾಂತರ ಪ್ರೌಢಶಾಲೆ,<br>ಗಾಜನೂರು | ಕೆ. ವೈ. ಗಣೇಶ್ | ಎಂ. ಮಾಧವ ಪೈ<br>ಸಿದ್ಧಯ್ಯ ಹಿರೇಮಠ<br>ಜಯದೇವಪ್ಪ ಜೈನಕೇರಿ<br>( ಇತಿಹಾಸ ವಿಷಯದ ಪ್ರಬಂಧ ಸ್ಪರ್ಧೆಯನ್ನು ನಡೆಸಲಾಗಿದೆ ) |

**ಹನ್ನೊಂದನೆಯ ವಾರ್ಷಿಕ ಸಮ್ಮೇಳನ**

೨೫-೧೦-೯೭ ರಿಂದ ೨೭-೧೦-೯೭ರವರೆಗೆ ಮೂರು ದಿನಗಳು ಶಿರಸಿಯಲ್ಲಿ ನಡೆದ ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಸಮ್ಮೇಳನಕ್ಕೆ ಸೋಂದಾದ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನವು ಆಶ್ರಯ ನೀಡಿತು. ಫಲಪ್ರದವಾದ ಸಮ್ಮೇಳನವನ್ನು ೨೫-೧೦-೯೭ರಂದು ಬೆಳಿಗ್ಗೆ ೧೦ ಘಂಟೆಗೆ ಶಿರಸಿಯ ಶ್ರೀ ಕಡವೆ ಶ್ರೀಪಾದ ಹೆಗಡೆ ಕಲ್ಯಾಣಮಂಟಪದಲ್ಲಿ ಸೋಂದೆಯ ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳ ಸನ್ನಿಧಾನದಲ್ಲಿ ಕರ್ನಾಟಕ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಹಾಗೂ ಪ್ರವಾಸೋದ್ಯಮ ಇಲಾಖೆಗಳ ರಾಜ್ಯ ಸಚಿವೆಯರಾದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಉದ್ಘಾಟಿಸಿದರು. ಸಮ್ಮೇಳನಾಧ್ಯಕ್ಷ ಶ್ರೀ ಕೆ. ಅಭಿಶಂಕರ್ ಅವರು ರಾಷ್ಟ್ರೀಯ ಭಾವೈಕ್ಯತೆಗೆ ಇತಿಹಾಸದ ಅರಿವು ಅವಶ್ಯಕವಾದ ಕಾರಣ ಸಂಬಂಧಿಸಿದ ಎಲ್ಲಾ ದಾಖಲೆಗಳ ರಕ್ಷಣೆ ಮತ್ತು ಅಧ್ಯಯನ ಅತ್ಯವಶ್ಯಕ ಎಂದು ತಿಳಿಸಿದರು. ಇತಿಹಾಸದಲ್ಲಿ ನಡೆದಿರುವ ಒಳ್ಳೆಯ ಘಟನೆಗಳ ಬಗೆಗೆ ಸಂಶೋಧಿಸಿ ಅದನ್ನು ಜನತೆಗೆ ತಿಳಿಸಬೇಕೆಂದು ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀಮದ್ ಗಂಗಾಧರೇಂದ್ರ ಸರಸ್ವತಿ ಮಹಾಸ್ವಾಮಿಗಳು ಆಶೀರ್ವಚನ ನೀಡುವ ಸಂದರ್ಭದಲ್ಲಿ ತಿಳಿಸಿದರು.

ಸಮ್ಮೇಳನದಲ್ಲಿ ಡಾ॥ ಎ. ಕೆ. ಶಾಸ್ತ್ರಿಯವರ *ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ* ಕೃತಿ ಹಾಗೂ ಕರ್ನಾಟಕ ರಾಜ್ಯ ಪುರಾತತ್ತ್ವ ಇಲಾಖೆಯ ಇತ್ತೀಚಿನ ಎರಡು ಪ್ರಕಟಣೆಗಳನ್ನು ಡಾ॥ ಬಾ. ರಾ. ಗೋಪಾಲ್, ಡಾ॥ ಶ್ರೀನಿವಾಸ ಹಾವನೂರ್ ಮತ್ತು ಡಾ॥ ಎಚ್. ಎಸ್. ಗೋಪಾಲರಾವ್ ಅವರು ಸಂಪಾದಿಸಿದ ನೆಲಮಂಗಲ ಲಕ್ಷ್ಮೀನಾರಾಯಣರಾಯರ ಸಂಶೋಧನ ಲೇಖನಗಳನ್ನೊಳಗೊಂಡ Epigraphical Studies ಮತ್ತು ಡಾ॥ ಜಿ. ಎಸ್. ದೀಕ್ಷಿತ್, ಪ್ರೊ॥ ಬಿ. ರಾಮಸ್ವಾಮಿ ಮತ್ತು ಡಾ॥ ಭಾರ್ಗವಿ ಶಿವಯ್ಯ ಅವರು ಸಂಪಾದಿಸಿರುವ **ಶ್ರೀ ಕೃಷ್ಣದೇವರಾಯ- ಜೀವನ ಸಾಧನೆಗಳು**, ಎಂಬ ಕೃತಿಗಳನ್ನು ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಬಿಡುಗಡೆ ಮಾಡಿದರು. ಅಕಾದೆಮಿಯ ಉಪಾಧ್ಯಕ್ಷ ಶ್ರೀ ಎಂ. ಜಿ. ನಾಗರಾಜ್ ಮತ್ತು ಶ್ರೀ ಪಿ. ವಿ. ಕೃಷ್ಣಮೂರ್ತಿ ಸಂಪಾದಿತ ಅಕಾದೆಮಿಯ ಸಂಶೋಧನ ಸಂಪುಟವಾದ **ಇತಿಹಾಸ ದರ್ಶನದ ೧೨ನೆಯ ಸಂಚಿಕೆಯನ್ನು** ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಭಾಗೀರಥಿ ಭಟ್ ಅವರೂ, ಶ್ರೀವಾಸುದೇವ ಬಡಿಗೇರ ಅವರ **ಸಂಡೂರು ಪರಿಸರದ ಕಾರ್ತಿಕೇಯ ತಪೋವನ** ಎಂಬ ಕೃತಿಯನ್ನು ಶಾಸಕ ಶ್ರೀ ಪಿ. ಎಸ್. ಜೈವಂದ ಅವರೂ ಬಿಡುಗಡೆ ಮಾಡಿದರು. ಸಮಾರಂಭದಲ್ಲಿ ಡಾ॥ ಚೆನ್ನಕ್ಕಪಾವಟೆ ಅವರ **'ಹಾನಗಲ್ಲಿನ ಕದಂಬರ'**ನ್ನು ಕುರಿತ ಕೃತಿಯೂ ಬಿಡುಗಡೆಯಾಯಿತು. ಸಮಾರಂಭದಲ್ಲಿ ಶಾಸಕರಾದ ಶ್ರೀ ವಿಶ್ವೇಶ್ವರ ಹೆಗಡೆ , ಜಿ. ಪಂ. ಅಧ್ಯಕ್ಷ ಶ್ರೀ ವಿ. ಎಸ್. .ನಾಯಕ ಅವರೂ ಉಪಸ್ಥಿತರಿದ್ದು ಮಾತನಾಡಿದರು.

ಇದೇ ಸಮಾರಂಭದಲ್ಲಿ ಕಳೆದ ಒಂದು ವರ್ಷದಲ್ಲಿ ವಿವಿಧ ವಿಶ್ವವಿದ್ಯಾಲಯಗಳಿಂದ ಪಿಎಚ್. ಡಿ ಪದವಿ ಪಡೆದ ಅಕಾದೆಮಿಯ ಹತ್ತು ಸದಸ್ಯರನ್ನು ನೆನಪಿನ ಫಲಕಗಳನ್ನಿತ್ತು ಸನ್ಮಾನಿಸಲಾಯಿತು. ಅವರುಗಳ ವಿವರ ಕೆಳಗಿನಂತಿದೆ.

| ಸದಸ್ಯರ ಹೆಸರು | ವಿಶ್ವವಿದ್ಯಾಲಯ | ಮಾರ್ಗದರ್ಶಕರು | ವರ್ಷ | ವಿಷಯ |
|---|---|---|---|---|
| ಡಾ॥ ಕೆ. ರವೀಂದ್ರನಾಥ | ಗುಲ್ಬರ್ಗಾ ವಿ. ವಿ. | ಡಾ॥ ಮೃತ್ಯುಂಜಯ ಹೊರಕೇರಿ | ೧೯೯೬ | ಕನ್ನಡ ಸಾಹಿತ್ಯಕ್ಕೆ ಮಠ ಮಾನ್ಯಗಳ ಸೇವೆ |
| ಡಾ॥ ಕೆ. ಬಿ. ಸುದರ್ಶನ್ | ಬೆಂಗಳೂರು ವಿ. ವಿ. | ಡಾ॥ ಸೂರ್ಯನಾಥ ಕಾಮತ್ | ೧೯೯೬ | *History of the Surya Cult with special reference to South India- from 600AD to1600AD* |
| ಡಾ॥ ಪಿ. ಬಿ. ಶಿವಣ್ಣ | ಮೈಸೂರು ವಿ. ವಿ. | ಡಾ॥ ಕಾಳೇಗೌಡ ನಾಗವಾರ | ೧೯೯೬ | ಕಾಡುಗೊಲ್ಲರ ಇಬ್ಬರು ಸಾಂಸ್ಕೃತಿಕ ವೀರರು - ಒಂದು ಅಧ್ಯಯನ |
| ಡಾ॥ ಎಂ. ಜಿ. ವಾರಿ | ಕರ್ನಾಟಕ ವಿ. ವಿ. | ಡಾ॥ ಬಿ. ಆರ್. ಹಿರೇಮಠ | ೧೯೯೬ | ಸೋದೆ ಅರಸುಮನೆತನ ಒಂದು ಅಧ್ಯಯನ |
| ಡಾ॥ ಉಷಾ ಡಿ. ದೇಸಾಯಿ | ಗುಲ್ಬರ್ಗಾ ವಿ. ವಿ. | ಡಾ॥ ಎಲ್. ಆರ್. ಕುಲಕರ್ಣಿ | ೧೯೯೬ | *Freedem movement in Raichur Dist.* |
| ಡಾ॥ ಜಿ. ಶ್ರೀನಿವಾಸಮೂರ್ತಿ | ಬೆಂಗಳೂರು ವಿ. ವಿ. | ಡಾ॥ ಕೆ. ವಿ. ನಾರಾಯಣ | ೧೯೯೬ | ಕನ್ನಡ ಕಾವ್ಯ ಭಾಷೆ ಮತ್ತು ಸಂಸ್ಕೃತಿ |
| ಡಾ॥ ಬಿ. ವಿ. ಸುಧಾಮಣಿ | ಮೈಸೂರು ವಿ. ವಿ. | ಡಾ॥ ಎಂ. ಬಿ. ಪದ್ಮ | ೧೯೯೭ | ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು ರಾಜ್ಯ- ಒಂದು ಸಾಂಸ್ಕೃತಿಕ, ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ (೧೭೩೯-೫೯) |
| ಡಾ॥ ಸಿ. ಆರ್. ಗೋವಿಂದರಾಜು | ಕನ್ನಡ ವಿ. ವಿ. ಹಂಪಿ | ಪ್ರೊ॥ ಕಿ. ರಂ. ನಾಗರಾಜ | ೧೯೯೭ | ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ |
| ಡಾ॥ ಬಸವರಾಜ ಎಸ್. ಅಕ್ಕಿ | ಕರ್ನಾಟಕ ವಿ. ವಿ. | ಡಾ॥ ಕೆ. ಆರ್. ಬಸವರಾಜ | ೧೯೯೭ | *Municipal Administration in Princely Mysore State from 1862-1956* |
| ಡಾ॥ ಡಿ. ಎನ್. ಯೋಗೀಶ್ವರಪ್ಪ | ಮೈಸೂರು ವಿ. ವಿ. | ಡಾ॥ ಸುಗೀತಾ ಸುವರ್ಣ | ೧೯೯೭ | ಹಾಗಲವಾಡಿ ಪಾಳೆಯಗಾರರು - ಒಂದು ಸಮಗ್ರ ಅಧ್ಯಯನ |

ವಾರ್ಷಿಕ ಸಮ್ಮೇಳನಗಳ ಪ್ರಮುಖ ಗುರಿಯಾದ ಸಂಶೋಧನ ಪ್ರಬಂಧಗಳ ಮಂಡನೆ, ಚರ್ಚೆಗಳು, ೨೫-೧೦-೯೭ರಂದು ಮಧ್ಯಾಹ್ನ ೨ ಘಂಟೆಗೇ ಆರಂಭವಾದವು. ಹತ್ತು ಗೋಷ್ಠಿಗಳಲ್ಲಿ ಒಟ್ಟು ೮೨ ಪ್ರಬಂಧಗಳು ಮಂಡಿತವಾದವು.

೨೫-೧೦-೧೯೯೭ರಂದು ಡಾ॥ ಅ. ಸುಂದರ, ಮತ್ತು ಡಾ॥ ಎಸ್. ಕೆ. ಜೋಶಿ, ಡಾ॥ ಶ್ರೀನಿವಾಸ ಹಾವನೂರ್ ಅವರ ಅಧ್ಯಕ್ಷತೆಯಲ್ಲಿ ನಡೆದ ಮೂರು ವಿಚಾರಗೋಷ್ಠಿಗಳಲ್ಲಿ ಒಟ್ಟು ೨೪ ಪ್ರಬಂಧಗಳು ಮಂಡಿತವಾದವು.

೨೬-೧೦-೧೯೯೭ರಂದು ವಿಚಾರಗೋಷ್ಠಿಗಳನ್ನು ಸೋಂದೆಯ ಶ್ರೀಮಹಾಸಂಸ್ಥಾನ ಮಠದ ಆವರಣದಲ್ಲಿ ನಡೆಸಲಾಯಿತು. ಅಂದು ಬೆಳಿಗ್ಗೆ ೯ ಘಂಟೆಗೆ ಸೋಂದಾ(ಸ್ವಾದಿ)ದ ಬಗೆಗೇ ವಿಶೇಷ ವಿಚಾರಗೋಷ್ಠಿಯೊಂದನ್ನು ಆಯೋಜಿಸಲಾಗಿತ್ತು. ಅದರ ಅಧ್ಯಕ್ಷತೆಯನ್ನು ಅಕಾದೆಮಿಯ ಆಜೀವ ಗೌರವಾಧ್ಯಕ್ಷರೂ ಆದ ಹಿರಿಯ ಇತಿಹಾಸಕಾರ ಪ್ರೊ॥ ಜಿ. ಎಸ್. ದೀಕ್ಷಿತ್ ಅವರು ವಹಿಸಿದ್ದರು. ೧೧ ಪ್ರೌಢ ಪ್ರಬಂಧಗಳು ಮಂಡಿತವಾದುವು. ಅದೇ ಸ್ಥಳದಲ್ಲಿ ಮುಂದುವರಿದ ವಿಚಾರಗೋಷ್ಠಿಯಲ್ಲಿ ಡಾ॥ ಶ್ರೀನಿವಾಸರಿತ್ತಿ ಅವರ ಅಧ್ಯಕ್ಷತೆಯಲ್ಲಿ ೯ ಪ್ರಬಂಧಗಳು ಮಂಡಿತವಾದವು.

ವಿಚಾರಗೋಷ್ಠಿಗಳ ಆರಂಭಕ್ಕೆ ಮೊದಲು ಆಹ್ವಾನದ ಮೇರೆಗೆ ಶ್ರೀಮಠಕ್ಕೆ ಆಗಮಿಸಿದ್ದ ಸೋದೆಯ ರಾಜಮನೆತನದ ಶ್ರೀ ಬಸವಲಿಂಗ ಒಡೆಯರ್ ಮತ್ತು ಶ್ರೀ ಮಧುಲಿಂಗ ಒಡೆಯರನ್ನು ಸ್ವಾಮೀಜಿಯವರು ಸನ್ಮಾನಿಸಿ ಆಶೀರ್ವದಿಸಿದರು.

ನಂತರ ನಡೆದ ಎರಡು ವಿಚಾರಗೋಷ್ಠಿಗಳ ಅಧ್ಯಕ್ಷತೆಯನ್ನು ಕ್ರಮವಾಗಿ ಡಾ॥ ಜ್ಯೋತ್ಸ್ನಾ ಕಾಮತ್ ಮತ್ತು ಡಾ॥ ಕೆ. ಜಿ. ವಸಂತ ಮಾಧವ ವಹಿಸಿದ್ದು ಒಟ್ಟು ೧೫ (೭+೮) ಸಂಶೋಧನಾ ಪ್ರಬಂಧಗಳು ಮಂಡನೆ ಆದುವು.

೨೬-೧೦-೯೭ರಂದೇ ಸಂಜೆ ೬-೩೦ಕ್ಕೆ ಸಮ್ಮೇಳನದ ಸಭಾಸ್ಥಾನವಾದ ಶಿರಸಿಯ ಕಡವೆ ಶ್ರೀಪಾದ ಹೆಗಡೆ ಕಲ್ಯಾಣಮಂಟಪದಲ್ಲಿ ಅಕಾದೆಮಿಯ ಸರ್ವಸದಸ್ಯರ ಸಭೆ ನಡೆಯಿತು. ಅದರ ವಿವರಗಳನ್ನು ಪ್ರತ್ಯೇಕವಾಗಿ ವರದಿ ಮಾಡಲಾಗಿದೆ.

ಸಮ್ಮೇಳನದ ಮೂರನೆಯ ದಿನ ಅಂದರೆ ೨೭-೧೦-೧೯೯೭ರಂದು ಮೂರು ಗೋಷ್ಠಿಗಳು ನಡೆದವು. ಡಾ॥ ಎ. ಕೆ. ಶಾಸ್ತ್ರಿ, ಡಾ॥ ರು. ಮ. ಷಡಕ್ಷರಯ್ಯ ಮತ್ತು ಡಾ॥ ಎಂ. ಬಿ. ನೆ..ನಹಾಳ್ ಅವರ ಅಧ್ಯಕ್ಷತೆಯಲ್ಲಿ ನಡೆದ ಮೂರು ಗೋಷ್ಠಿಗಳಲ್ಲಿ ಕ್ರಮವಾಗಿ ೭, ೮ ಮತ್ತು ೮ ಸಂಶೋಧನ ಪ್ರಬಂಧಗಳು ಮಂಡಿತವಾದವು. ೨೭-೧೦-೯೭ರಂದು ಸಂಜೆ ೪ ಘಂಟೆಗೆ ನಡೆದ ಸಮಾರೋಪ ಸಮಾರಂಭದಲ್ಲಿ ಸೋಂದಾದ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಶ್ರೀ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು ಅಧ್ಯಕ್ಷ ಸ್ಥಾನದ ಮೂಲಕ ಆಶೀರ್ವದಿಸಿ, ಸಮಾರಂಭ, ಯಶಸ್ವಿಯಾಯಿತೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಅಕಾದೆಮಿಯ ಗೌರವಾಧ್ಯಕ್ಷರಾದ ಡಾ॥ ಜಿ. ಎಸ್. ದೀಕ್ಷಿತ್, ಸಮ್ಮೇಳನಾಧ್ಯಕ್ಷ ಶ್ರೀ ಕೆ. ಅಭಿಶಂಕರ್ ಮುಂತಾದವರು ಸಮ್ಮೇಳನದ ಏರ್ಪಾಡು, ಅಚ್ಚುಕಟ್ಟು, ಆತ್ಮೀಯ ಆತಿಥ್ಯ, ವಿಚಾರ ಪ್ರಚೋದಕ ಪ್ರಬಂಧಗಳು-ಇತ್ಯಾದಿಗಳನ್ನು ಕುರಿತು ತೃಪ್ತಿ ವ್ಯಕ್ತಪಡಿಸಿ ಅತಿಥೇಯರನ್ನು ಅಭಿನಂದಿಸಿದರು. ಅತಿಥಿಗಳಾಗಿ ಲೋಕಸಭಾ ಸದಸ್ಯರಾದ ಶ್ರೀ ಅನಂತಕುಮಾರ ಹೆಗಡೆ ಅವರು ಭಾಗವಹಿಸಿದ್ದರು.

ಸಮ್ಮೇಳನದ ಸಂದರ್ಭ ಸದಾಕಾಲ ಅತಿಥಿಗಳ ಮತ್ತು ಪ್ರತಿನಿಧಿಗಳ ಸೌಕರ್ಯ ಹಾಗೂ ಕಾರ್ಯಕ್ರಮಗಳ ಬಗೆಗೆ ಕ್ರಿಯಾಶೀಲ ರಾಗಿ ಶ್ರಮಿಸಿ, ಎಲ್ಲರ ಪ್ರೀತಿ, ವಿಶ್ವಾಸ ಮತ್ತು ಗೌರವಗಳಿಗೆ ಪಾತ್ರರಾದ ಸಮ್ಮೇಳನದ ಕಾರ್ಯಾಧ್ಯಕ್ಷರಾದ ಶ್ರೀ ಜಿ. ವಿ. ಜೋಶಿ, ಕಾಗೇರಿ, ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಉಪಾಧ್ಯಕ್ಷರಾದ ಶ್ರೀ ಜಿ. ಎಸ್. ಹೆಗಡೆ ಅಜ್ಜೀಬಳ, ಪ್ರೊ॥ ಎ. ಕೆ. ಶಾಸ್ತ್ರಿ ಮತ್ತಿತರ ಗಣ್ಯರನ್ನು ಕೃತಜ್ಞತೆಯಿಂದ ಸ್ಮರಿಸಲಾಯಿತು.

ಸಮ್ಮೇಳನದ ಅಂಗವಾಗಿ ಐತಿಹಾಸಿಕ ಕೃತಿಗಳ ಮತ್ತು ನಾಣ್ಯಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

**ಸರ್ವ ಸದಸ್ಯರ ಸಭೆಯ ವರದಿ**

ದಿನಾಂಕ ೨೬-೧೦-೧೯೯೭, ಭಾನುವಾರ ಸಂಜೆ ೬-೩೦ ಘಂಟೆಗೆ, ಸರ್ವಸದಸ್ಯರಿಗೂ ಆ ಮೊದಲೇ ಪತ್ರ ಮುಖೇನ ತಿಳಿಸಿದ್ದಂತೆ, ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ, ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ ಉತ್ತರ ಕನ್ನಡ ಜಿಲ್ಲೆಯ ಶಿರಸಿಯ ಶ್ರೀ ಕಡವೆ ಶ್ರೀಪಾದ ಹೆಗಡೆ ಕಲ್ಯಾಣ ಮಂಟಪದಲ್ಲಿ ನಡೆದ ಅಕಾದೆಮಿಯ ವಾರ್ಷಿಕ ಸರ್ವಸದಸ್ಯರ ಸಭೆಯ ನಡವಳಿಕೆಗಳು ಕೆಳಕಂಡಂತಿವೆ.

ಸಭೆಯಲ್ಲಿ ೧೦೫ ಜನ ಸದಸ್ಯರು ಹಾಜರಿದ್ದು ಸಭೆಯ ಆರಂಭಕ್ಕೆ ಮುನ್ನ ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ಅವರು, ಆ ಮೊದಲು ಅಂಚೆಯ ಮೂಲಕ ಸರ್ವಸದಸ್ಯರಿಗೂ ಕಳುಹಿಸಲಾಗಿದ್ದ ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ವಾಚಿಸಿ, ಸಭೆಯ ಆರಂಭಕ್ಕೆ ಅನುಮತಿ ಕೋರಿದರು. ಡಾ॥ ಎಚ್. ಚಂದ್ರಶೇಖರ್ ಅವರು ಸಭೆಯ ಆರಂಭಕ್ಕೆ ನೀಡಿದ ಸಮ್ಮತಿಗೆ ಹಾಜರಿದ್ದ ಸದಸ್ಯರೆಲ್ಲಾ ದನಿಗೂಡಿಸಿದರು.

ಸಭೆಯನ್ನು ಶ್ರೀಮತಿ ಜಯಮ್ಮ ಕರಿಯಣ್ಣ ಅವರ ಪ್ರಾರ್ಥನೆಯೊಂದಿಗೆ ಆರಂಭಿಸಲಾಯಿತು. ಪ್ರಾರ್ಥನೆಯ ನಂತರ ಕಳೆದ ಸರ್ವಸದಸ್ಯರ ಸಭೆಯಿಂದೀಚೆಗೆ ಈ ಸಭೆಯ ಆರಂಭದವರೆಗೆ ಮೃತರಾಗಿರುವ ಇತಿಹಾಸಕಾರರು, ಕೆಲವು ಗಣ್ಯರು ಮತ್ತು ಅಕಾದೆಮಿಯ ಜೊತೆ ಸಂಪರ್ಕವಿರಿಸಿಕೊಂಡಿದ್ದ ಕೆಲವು ವ್ಯಕ್ತಿಗಳ ನಿಧನಕ್ಕೆ ಸಂತಾಪ ಸೂಚಿಸಿ ಎರಡು ನಿಮಿಷಗಳ ಮೌನ ಶ್ರದ್ಧಾಂಜಲಿ ಅರ್ಪಿಸಲಾಯಿತು. ಶ್ರದ್ಧಾಂಜಲಿ ಸಲ್ಲಿಸಲಾದ ಗಣ್ಯರ ಹೆಸರುಗಳು ಕೆಳಕಂಡಂತಿವೆ.

೧) ಡಾ॥ ಬಾ. ರಾ. ಗೋಪಾಲ್, ಮೈಸೂರು
೨) ಡಾ॥ ಬಿ. ವಸಂತ ಶೆಟ್ಟಿ, ಬ್ರಹ್ಮಾವರ
೩) ಡಾ॥ ಹೆಚ್. ಎಸ್. ಕಾಂಬಳೆ, ಧಾರವಾಡ
೪) ಜನಾರ್ಧನ, ಬೆಂಗಳೂರು
೫) ಮದರ್ ಥೆರೇಸಾ, ಕಲ್ಕತ್ತ
೬) ಇ. ಎಸ್. ವೆಂಕಟರಾಮಯ್ಯ, ಬೆಂಗಳೂರು
೭) ಡಾ॥ ವೀರತ್ತಪ್ಪ, ಬೆಂಗಳೂರು
೮) ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿ, ಮಾಗಳ
೯) ಎಸ್. ಎಚ್. ಪಾಠಕ್, ಧಾರವಾಡ

ಶ್ರದ್ಧಾಂಜಲಿ ಸಲ್ಲಿಸಲಾದ ನಂತರ ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ಅವರು ಅಧ್ಯಕ್ಷರಾದಿಯಾಗಿ ಸಭೆಯಲ್ಲಿ ಹಾಜರಿದ್ದ ಎಲ್ಲಾ ಸದಸ್ಯರನ್ನೂ ಸ್ವಾಗತಿಸಿದರು.

**೧೯೯೬ ನೇ ಸಾಲಿನ ವರದಿ**

೧೯೯೬ನೇ ಸಾಲಿನ ವರದಿಯ ಮುದ್ರಿತ ಪ್ರತಿಗಳನ್ನು ಸಭೆಯ ಆರಂಭದಲ್ಲೇ ಹಾಜರಿದ್ದ ಸರ್ವಸದಸ್ಯರಿಗೂ ಹಂಚಲಾಗಿದ್ದುದರಿಂದ, ವರದಿಯ ವಾಚನದ ಅವಶ್ಯಕತೆ ಇಲ್ಲವೆಂದು ಡಾ॥ ರು. ಮ. ಷಡಕ್ಷರಯ್ಯ ಅಭಿಪ್ರಾಯ ವ್ಯಕ್ತಪಡಿಸಿದರು. ಅದನ್ನು ಸದಸ್ಯರು ಅನುಮೋದಿಸಿದರು. ೧೯೯೬ ರ ವರದಿಯಲ್ಲಿನ ಕೆಳಕಂಡ ತಿದ್ದುಪಡಿ ಬಗೆಗೆ ಸದಸ್ಯರು ಗಮನ ಸೆಳೆದರು.

ವರದಿಯ ಎರಡನೆಯ ಪುಟ (ಮುದ್ರಿತ ಪು. ಸಂ.: ೨೬೮)ದ ನಾಲ್ಕನೆಯ ಸಾಲಿನಲ್ಲಿ ಪ್ರಸ್ತಾಪಿತವಾಗಿರುವಂತೆ ಡಾ॥ ರು. ಮ. ಷಡಕ್ಷರಯ್ಯ ಅವರ 'ಬೀದರ್ ಜಿಲ್ಲೆಯ ಶಾಸನಗಳು' ಎಂಬ ಕೃತಿ, ಬಿಡುಗಡೆಯಾಗಲಿಲ್ಲವೆಂದು ಶ್ರೀಮತಿ ಹನುಮಾಕ್ಷಿ ಗೋಗಿ ಸೂಚಿಸಿದರು. ತಿದ್ದುಪಡಿಯ ಸೂಚನೆಯನ್ನು ಸ್ವೀಕರಿಸಲಾಯಿತು. ವರದಿಯ ಪು. ೨ರ (ಮುದ್ರಿತ - ಪು. ೨೬೮) ೧೩ನೇ ಸಾಲಿನಲ್ಲಿ ೨೬ ಎಂಬುದು ೭೬ ಎಂದೂ; ವರದಿ ಪು. ೭ರ (ಮುದ್ರಿತ ಪು. ೨೭೩ರ) ೧೬ನೇ ಸಾಲಿನ 'ಪ್ರಾಚೀನ ಇತಿಹಾಸ' ಎಂಬುದರ ಬದಲು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ ಮಾನಸಗಂಗೋತ್ರಿ ಎಂದೂ, ವರದಿ ಪುಟ ೯ರ (ಮುದ್ರಿತ ಪು. ೨೭೫) ೪ನೆಯ ಸಾಲಿನಲ್ಲಿ ರವಿವರ್ಮ ಕಾಲೇಜು ಎಂಬುದನ್ನು ವಿಜಯನಗರ ಕಾಲೇಜು ಎಂದು ತಿದ್ದಿಕೊಳ್ಳಬೇಕೆಂದು ಸರ್ವಶ್ರೀ ಡಾ॥ ಕೆಳದಿ ವೆಂಕಟೇಶ್, ಶ್ರೀಮತಿ ಹನುಮಾಕ್ಷಿ ಗೋಗಿ, ಡಾ॥ ಮೃತ್ಯುಂಜಯ ರುಮಾಲೆ ಅವರ ಸೂಚನೆಗಳಂತೆ ತಿದ್ದುಪಡಿಯನ್ನು ಮಾಡಿಕೊಳ್ಳಲಾಯಿತು. ಡಾ॥ ಶ್ರೀನಿವಾಸ್ ಹಾವನೂರ್ ಅವರು ಮೈಸೂರು ಜಿಲ್ಲಾ ಘಟಕದ ವರದಿಯಲ್ಲಿ ಅದೇ ಪುಟದ 'ಘಟಕದಿಂದ'ಎಂದಿರುವುದರಲ್ಲಿ 'ಮೈಸೂರು ಘಟಕ' ಎಂದೇ ಅರ್ಥ ಎಂಬುದನ್ನು ಮನಗಾಣಿಸಿದರು.

ಕುಂ. ಬಾ. ಸದಾಶಿವಪ್ಪ ಅವರು ಸಕಾಲಕ್ಕೆ ತಮ್ಮ ಘಟಕದ (ಬಳ್ಳಾರಿ ಜಿಲ್ಲೆ) ವರದಿ ಕಳುಹಿಸಲಾಗಲಿಲ್ಲವೆಂದು ತಿಳಿಸಿದರು. ಮುಂದಿನ ವರ್ಷಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ವರದಿಗಳಲ್ಲಿ ಸಂಘಟಕರ ಹೆಸರುಗಳನ್ನು ಸೇರಿಸಬೇಕೆಂದು ಶ್ರೀ ಜಯದೇವಪ್ಪ ಜೈನಕೇರಿ ಸೂಚಿಸಿದರು. ಅದನ್ನು ಸರ್ವಸದಸ್ಯರೂ ಅನುಮೋದಿಸಿದರು. ೧೯೯೬ ನೆಯ ಸಾಲಿನಲ್ಲಿ ಸ್ವೀಕರಿಸಲಾದ ಠರಾವುಗಳ ಬಗೆಗೆ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ ಮತ್ತು ಅದರ ಫಲಿತಗಳೇನು ಎಂದು ಪ್ರೊ॥ ಭೀಮಪ್ಪ ಸುರಪುರ ತಿಳಿಯ ಬಯಸಿದರು. ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್‌ರು ಆ ಬಗೆಗೆ ಸ್ಪಷ್ಟನೆ ನೀಡಿದರು.

ಕೇಂದ್ರ ಪುರಾತತ್ವ ಇಲಾಖೆಯ ಧಾರವಾಡ ವಲಯದ ಸ್ಥಾಪನೆಗೆ ಸಂಬಂಧಿಸಿದಂತೆ ಠರಾವನ್ನು ಸ್ವೀಕರಿಸಲಾಗಿದ್ದು, ಈಗ ಕೇಂದ್ರ ಪುರಾತತ್ವ ಇಲಾಖೆಯ ಧಾರವಾಡ ವಲಯ ಅಸ್ತಿತ್ವಕ್ಕೆ ಬಂದಿದೆ. ಕರ್ನಾಟಕ ರಾಜ್ಯ ಪತ್ರಾಗಾರಕ್ಕೆ ಪ್ರತ್ಯೇಕ ಕಟ್ಟಡವನ್ನು ರಾಜ್ಯ ಸರ್ಕಾರ ಒದಗಿಸುವುದರ ಸಂಬಂಧ ಸ್ವೀಕರಿಸಲಾಗಿದ್ದ ಠರಾವಿಗೆ ಸಂಬಂಧಿಸಿದಂತೆ ಉತ್ತರಿಸಿದ ಡಾ॥ ಸೂರ್ಯನಾಥ ಕಾಮತರು, ಹಿಂದೆ ರಾಜ್ಯ ಸರ್ಕಾರವು ರಾಜ್ಯ ಪತ್ರಾಗಾರಕ್ಕೆ ಪ್ರತ್ಯೇಕ ಸ್ಥಳವನ್ನು ಒದಗಿಸಲು ಮುಂದೆ ಬಂದಿದ್ದು, ಅದನ್ನು ಇಲಾಖೆಯ ಹಿಂದಿನ ಅಧಿಕಾರಿಗಳು ತಿರಸ್ಕರಿಸಿದ್ದರು. ಈಗ ಇರುವ ಅಧಿಕಾರಿಗಳೊಡನೆ ವಿಷಯವನ್ನು ಪ್ರಸ್ತಾಪಿಸಲಾಗಿದ್ದು, ಬರುವ ದಿನಗಳಲ್ಲಿ ಕಛೇರಿ ಸ್ಥಳ ಬದಲಾವಣೆ

ಆಗುವ ನಿರೀಕ್ಷೆ ಇದೆಯೆಂದೂ ಆ ನಿಟ್ಟಿನಲ್ಲಿ ತಾವು ಪ್ರಯತ್ನ ಮುಂದುವರಿಸುವುದಾಗಿಯೂ ತಿಳಿಸಿದರು. ಸದಸ್ಯರು ಅವರ ಮಾತುಗಳನ್ನು ಅನುಮೋದಿಸಿದರು.

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳ ಪರಿಷ್ಕರಣೆ ಮತ್ತು ಪ್ರಕಟಣೆಯ ಸಲುವಾಗಿ ಸ್ವೀಕರಿಸಲಾಗಿದ್ದ ಠರಾವಿಗೆ ಸಂಬಂಧಿಸಿದಂತೆ ನಡೆದ ಚರ್ಚೆಯಲ್ಲಿ ಡಾ॥ ರು. ಮ. ಷಡಕ್ಷರಯ್ಯ, ಡಾ॥ ಹೆಚ್. ಆರ್. ರಘುನಾಥಭಟ್ ಮತ್ತು ಡಾ॥ ದೇವರಕೊಂಡಾರೆಡ್ಡಿ ಅವರು ಪಾಲ್ಗೊಂಡರು. ಈ ವರ್ಷ ಎಪಿಗ್ರಾಫಿಯಾ ಕರ್ನಾಟಿಕದ ಪರಿಷ್ಕೃತ ಹತ್ತನೆಯ ಸಂಪುಟ ಪ್ರಕಟವಾಗಿದ್ದು, ಆ ಕಾರ್ಯಕ್ಕೆ ಡಾ॥ ಎ. ವಿ. ನರಸಿಂಹಮೂರ್ತಿಯವರು ನಿಯುಕ್ತರಾಗಿರುವುದರಿಂದ ಮುಂದಿನ ಸಂಪುಟಗಳೂ ಶೀಘ್ರವೇ ಸಿದ್ಧವಾಗುವ ಆಶಾಭಾವನೆಯನ್ನು ಆ ಸಮಿತಿಯ ಸದಸ್ಯರಾಗಿರುವ ಡಾ॥ ಹೆಚ್. ಆರ್. ರಘುನಾಥಭಟ್ ಅವರು ವ್ಯಕ್ತಪಡಿಸಿದರು. ಮುಂಬಯಿ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕಕ್ಕೆ ಸೇರಿದ ಜಿಲ್ಲೆಗಳ ಶಾಸನ ಸಂಪುಟಗಳನ್ನು ಕ್ರಮವಾಗಿ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಗುಲಬರ್ಗಾ ವಿಶ್ವವಿದ್ಯಾಲಯಗಳು ತರುವ ಪ್ರಯತ್ನ ನಡೆಸಬಹುದೆಂದು ಅಭಿಪ್ರಾಯ ವ್ಯಕ್ತವಾಯಿತು. ಬೀದರ್ ಜಿಲ್ಲೆಯ ಶಾಸನಗಳ ಸಂಪುಟ ಸಿದ್ಧವಾಗುತ್ತಿರುವುದಾಗಿ ಡಾ॥ ರು. ಮ. ಷಡಕ್ಷರಯ್ಯ ತಿಳಿಸಿದರು. ಗುಲ್ಬರ್ಗ ಜಿಲ್ಲೆಯ ಶಾಸನಗಳನ್ನು ಶ್ರೀಮತಿ ಹನುಮಾಕ್ಷಿ ಗೋಗಿ ಪ್ರಕಟಿಸಿರುವುದನ್ನು ಹಲವು ಸದಸ್ಯರು ತಿಳಿಸಿದರು. ಆದರೆ ಕ್ರಮಬದ್ಧವಾಗಿ ಪ್ರಕಟಣಾ ಕಾರ್ಯ ನಡೆಯುತ್ತಿಲ್ಲ ಎಂಬುದೇ ಅನೇಕ ಸದಸ್ಯರ ಆಕ್ಷೇಪಣೆಯಾಗಿದೆ. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟವನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಸದಸ್ಯದಲ್ಲೇ ಪ್ರಕಟಿಸುವುದೆಂದೂ, ಕೊಪ್ಪಳ ಜಿಲ್ಲೆಯ ಶಾಸನ ಸಂಗ್ರಹಣ ಕಾರ್ಯ ಆರಂಭವಾಗಿರುವುದಾಗಿಯೂ ಡಾ॥ ದೇವರಕೊಂಡಾರೆಡ್ಡಿ ಸಭೆಗೆ ತಿಳಿಸಿದರು. ಎಪಿಗ್ರಾಫಿಯಾ ಕರ್ನಾಟಿಕಾ ಪರಿಷ್ಕರಣ ಸಮಿತಿಯ ಸದಸ್ಯರಾಗಿರುವ, ಡಾ॥ ಹೆಚ್. ಆರ್. ರಘುನಾಥಭಟ್ ಅವರು ಮೈಸೂರು ವಿಶ್ವವಿದ್ಯಾಲಯವು ಎ. ಕ. ಸಂಪುಟಗಳ ಪರಿಷ್ಕರಣ ಕಾರ್ಯವನ್ನು ಮುಂದುವರಿಸಿದ್ದು, ಉತ್ತರ ಕರ್ನಾಟಕದ ಜಿಲ್ಲೆಗಳ ಶಾಸನ ಸಂಪುಟಗಳ ಪ್ರಕಟಣೆಯ ಕಾರ್ಯವನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕೈಗೆತ್ತಿಕೊಂಡಿದೆ ಎಂದು ತಿಳಿಸಿದರು. ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕರಣ ಸಮಿತಿಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಗೆ ಪ್ರಾತಿನಿಧ್ಯವಿರಬೇಕೆಂದು ಡಾ॥ ಶ್ರೀನಿವಾಸ ಹಾವನೂರ್ ಅವರು ಸೂಚಿಸಿದರು. ಆ ಸಮಿತಿಯಲ್ಲಿರುವ ಡಾ॥ ಎ. ವಿ. ನರಸಿಂಹಮೂರ್ತಿ ಮತ್ತು ಡಾ॥ ಹೆಚ್. ಆರ್. ರಘುನಾಥ ಭಟ್ ಅವರು ಅಕಾದೆಮಿಯವರೇ ಆಗಿರುವುದರಿಂದ ಪ್ರತ್ಯೇಕ ಪ್ರಾತಿನಿಧ್ಯದ ಅವಶ್ಯಕತೆ ಇಲ್ಲವೆಂದು ಡಾ॥ ಎಚ್. ಎಸ್. ಗೋಪಾಲರಾವ್ ಅಭಿಪ್ರಾಯ ವ್ಯಕ್ತಪಡಿಸಿದರು.

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳ ಪರಿಷ್ಕರಣೆಯ ಕಾರ್ಯ ವಿಳಂಬವಾಗುತ್ತಿರುವ ಕಾರಣ, ಇನ್ನೂ ಪರಿಷ್ಕರಣವಾಗದಿರುವ ಹಳೆಯ ಎ. ಕ. ಸಂಪುಟಗಳ ಪುನರ್ಮುದ್ರಣಕ್ಕೆ ಪ್ರಯತ್ನಿಸಬೇಕೆಂಬುದು ಡಾ॥ ರು. ಮ. ಷಡಕ್ಷರಯ್ಯ ಅವರ ಒತ್ತಾಯವಾಗಿತ್ತು. ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ ಮಾತ್ರ ಆ ಕೆಲಸ ಮಾಡಬಹುದೆಂದೂ, ಆ ನಿಟ್ಟಿನಲ್ಲಿ ಅಕಾದೆಮಿ ಇಲಾಖೆಗೆ ಕೋರಿಕೆ ಸಲ್ಲಿಸುವುದೆಂದೂ ಪ್ರಧಾನ ಕಾರ್ಯದರ್ಶಿಯವರು ತಿಳಿಸಿದರು. ಎ. ಕ. ಸಂಪುಟಗಳನ್ನು ಸಹಕಾರೀ ಪ್ರಕಾಶನದ ಮಾದರಿಯಲ್ಲಿ ಅಕಾದೆಮಿಯು ಪ್ರಕಟಿಸಲು ಸಾಧ್ಯವೇ ಎಂಬುದನ್ನು ಪರಿಶೀಲಿಸಲು ಶ್ರೀ ಕೆ. ಅಭಿಶಂಕರ್ ಸೂಚಿಸಿದರು. ಅವರ ಸೂಚನೆಗೆ ಕೆಲವರಿಂದ ಬೆಂಬಲ ಬಂದಿತಾದರೂ, ಅಂತಹ ಸಹಕಾರೀ ಪ್ರಕಾಶನದ ಜವಾಬ್ದಾರಿ ಹೊರಲು ಅಕಾದೆಮಿಗೆ ಸಾಧ್ಯವಿಲ್ಲವೆಂದು ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಸ್ಪಷ್ಟಪಡಿಸಿದರು. ಸ್ಥಳಾವಕಾಶ ಮತ್ತು ಮಾನವ ಬಲದ ಕೊರತೆಯೇ ಅಸಾಧ್ಯತೆಗೆ ಕಾರಣವೆಂದು ಡಾ॥ ಕಾಮತ್ ತಿಳಿಸಿದರು. ದಕ್ಷಿಣಕನ್ನಡ ಜಿಲ್ಲೆಯ ಶಾಸನಗಳ ಎರಡನೆಯ ಸಂಪುಟವನ್ನು ಸಿದ್ಧಪಡಿಸಲು ಅಕಾದೆಮಿಯು ತನ್ನ ಮೂವರು ಸದಸ್ಯರಿಗೆ ಸೂಚಿಸಿತ್ತು. ಅವರಲ್ಲಿ ಈಗ ಒಬ್ಬರು ಇಲ್ಲವಾಗಿದ್ದಾರೆ. ಉಳಿದಿಬ್ಬರು ಪ್ರಯತ್ನಿಸಿ ಸಂಪುಟವನ್ನು ಸಿದ್ಧಪಡಿಸಿದರೆ ಪ್ರಕಟಣೆಯತ್ತ ಗಮನಹರಿಸಬಹುದೆಂದು ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು.

ಕಳೆದ ವರ್ಷ ಸ್ವೀಕರಿಸಲಾಗಿದ್ದ 'ಕದಂಬ-ಗಂಗ' ವಾರ್ಷಿಕ ಪ್ರಶಸ್ತಿಯ ಬಗೆಗೂ ವಿವರವಾದ ಚರ್ಚೆಯಾಯಿತು. ಹೆಸರಿನ ಬಗೆಗೇ ನಮ್ಮಲ್ಲೇ ಭಿನ್ನಾಭಿಪ್ರಾಯಗಳಿವೆಯೆಂದು ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು. 'ಕದಂಬ-ಗಂಗ' ಎನ್ನುವುದು ಇಡಿಯಾಗಿ ಕರ್ನಾಟಕದ ಇತಿಹಾಸ ಪರಂಪರೆಯನ್ನು ಸೂಚಿಸುವುದಿಲ್ಲ ಎನ್ನುವುದು ಅನೇಕರ ಅಭಿಪ್ರಾಯವಾಗಿತ್ತು. ಚರ್ಚೆಯ ಸಂದರ್ಭ ಪ್ರಶಸ್ತಿಗೆ 'ಇತಿಹಾಸ ಶ್ರೀ' ಎಂದು ಹೆಸರಿಡಬಹುದೆಂದು ಡಾ॥ ಎಸ್. ಕೆ. ಜೋಶಿ ಸೂಚಿಸಿದರು. ಒಂದು ಸ್ಪರ್ಧೆ ಇಟ್ಟು ಹೆಸರಿನ ಬಗೆಗೆ ತೀರ್ಮಾನಿಸಬಹುದೆಂದು ಡಾ॥ ಹೆಚ್. ಆರ್. ರಘುನಾಥಭಟ್ ಸೂಚಿಸಿದರು. ಹೆಸರು ಏನಾದರೂ ಇರಲಿ ಪ್ರಶಸ್ತಿ ನೀಡಲು ಸರ್ಕಾರಕ್ಕೆ ಒತ್ತಾಯಿಸಬೇಕೆನ್ನುವುದು ಡಾ॥ ರು. ಮ. ಷಡಕ್ಷರಯ್ಯ ಮತ್ತು ಡಾ. ಶ್ರೀನಿವಾಸ ಹಾವನೂರ್ ಅವರ ಸೂಚನೆಯಾಗಿತ್ತು. ಪ್ರತಿ ವರ್ಷವೂ ಇತಿಹಾಸ ಸಂಶೋಧಕರೊಬ್ಬರಿಗೆ ಒಂದು ಲಕ್ಷ ರೂಪಾಯಿ ಮೊತ್ತದ ಒಂದು ಪ್ರಶಸ್ತಿ ನೀಡುವಂತೆ ಸರ್ಕಾರವನ್ನು ಒತ್ತಾಯಿಸಬೇಕೆಂದು ಡಾ॥ ಶ್ರೀನಿವಾಸ ಹಾವನೂರ್, ಡಾ॥ ಹೆಚ್. ಚಂದ್ರಶೇಖರ್ ಸೂಚಿಸಿ, ಸರ್ಕಾರವು ಪ್ರಶಸ್ತಿ ನೀಡಲು

ಸಿದ್ಧವಾದಾಗ ಹೆಸರನ್ನು ಸೂಚಿಸಲು ನಿರ್ಧರಿಸಬಹುದೆಂದು ತಿಳಿಸಿದರು. ಸಭೆಯು ಅವರ ಮಾತಿಗೆ ಪೂರ್ಣ ಸಮ್ಮತಿ ಸೂಚಿಸಿತು. ಆ ಬಗೆಗೆ ಕಾರ್ಯಕಾರೀ ಸಮಿತಿಯೇ ತೀರ್ಮಾನಿಸಿ ಕೈಗೊಳ್ಳಬಹುದೆಂದು ಸಭೆಯು ಅನುಮತಿ ನೀಡಿತು. ಪ್ರಾಚೀನ ದೇವಾಲಯ ಮತ್ತು ಇತರ ಪ್ರಾಚ್ಯವಸ್ತುಗಳ ರಕ್ಷಣೆಗೆ ಸಂಬಂಧಿಸಿದಂತೆ ನಿಧಿಯನ್ನು ಸ್ಥಾಪಿಸಬೇಕೆಂಬ ೧೯೯೫ರ ನಿರ್ಣಯಕ್ಕೆ ಸಂಬಂಧಿಸಿದಂತೆ ಅಕಾದೆಮಿಯು ಈವರೆಗೂ ಯಾವುದೇ ರೀತಿಯ ಕ್ರಮ ಕೈಗೊಂಡಿಲ್ಲವೆಂದು ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು.

ಕಳೆದ ವರ್ಷದ ಠರಾವುಗಳ ಬಗೆಗಿನ ಕಾರ್ಯಯೋಜನೆಗಳ ಚರ್ಚೆಯ ನಂತರ ಸೂಚಿತವಾದ ತಿದ್ದುಪಡಿಗಳೊಂದಿಗೆ ೧೯೯೬ರ ವರದಿಯನ್ನು ಒಪ್ಪಬಹುದೆಂದು ಶ್ರೀ ಕುಂ. ಬಾ. ಸದಾಶಿವಪ್ಪ ಸೂಚಿಸಿದರು. ಡಾ॥ ಹೆಚ್. ಚಂದ್ರಶೇಖರ್ ಅವರ ಜೊತೆಗೆ ಸರ್ವ ಸದಸ್ಯರು ಸೂಚನೆಯನ್ನು ಅನುಮೋದಿಸಿದರು.

### ೧೯೯೬ ರ ಪರಿಶೋಧಿತ ಲೆಕ್ಕಪತ್ರಗಳು

೧೯೯೬ರ ಪರಿಶೋಧಿತ ಲೆಕ್ಕಪತ್ರಗಳ ವರದಿಯ ಕರಡಚ್ಚು ಪ್ರತಿಗಳನ್ನು ಸದಸ್ಯರಿಗೆ ಮೊದಲೇ ಒದಗಿಸಲಾಗಿತ್ತು. ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರು ಲೆಕ್ಕಪತ್ರ ವರದಿಯ ವಾಚನ ಮಾಡಿ, ಹಲವು ಸದಸ್ಯರಿಂದ ಆಜೀವ ಸದಸ್ಯತ್ವ ಶುಲ್ಕದ ಬಾಕಿ ಬರಬೇಕಾಗಿದ್ದು, ಆ ಮೊತ್ತವು ರೂ. ೨೫,೦೦೦-೦೦ ಗಳನ್ನು ಮೀರುತ್ತದೆ ಎಂದು ತಿಳಿಸಿದರು. ಪ್ರಗತಿ ಸಹಕಾರಿ ಬ್ಯಾಂಕಿನಲ್ಲಿ ಇಡಲಾಗಿರುವ ಠೇವಣಿಗೆ ದೊರೆಯುತ್ತಿರುವ ಬಡ್ಡಿಯ ದರದ ಬಗೆಗೆ ಶ್ರೀ ಕೆ. ರಾಮಯ್ಯ ಕೇಳಿದರು. ಠೇವಣಿಯ ಅವಧಿಯನ್ನು ಪರಿಗಣಿಸಿ, ಶೇ. ೧೨ ರಿಂದ ೧೫ ರವರೆಗಿನ ಬಡ್ಡಿ ದರವನ್ನು ಸಹಕಾರಿ ಬ್ಯಾಂಕ್ ನೀಡುತ್ತಿರುವುದಾಗಿ ಶ್ರೀ ಎಂ. ಬಿ. ಪಾಟೀಲ್ ಸ್ಪಷ್ಟಪಡಿಸಿದರು. ಮೂರು ವರ್ಷಗಳಿಗೆ ಹಿಂದೆ ಆಂಶಿಕ ಸದಸ್ಯತ್ವ ಶುಲ್ಕ ಪಾವತಿಮಾಡಿ, ಈವರೆಗೆ ಪೂರ್ಣ ಶುಲ್ಕ ನೀಡದೆ ಬಾಕಿ ಉಳಿಸಿಕೊಂಡಿರುವ ಆಜೀವ ಸದಸ್ಯರನ್ನು ಸದಸ್ಯತ್ವದಿಂದ ವಜಾ ಮಾಡಬಹುದೆಂಬ ಸೂಚನೆಯನ್ನು ಡಾ॥ ಶ್ರೀನಿವಾಸ ಹಾವನೂರ್ ನೀಡಿದರು. ಡಾ॥ ಎಂ. ಬಿ. ನೇಗಿನಹಾಳ ಸೇರಿದಂತೆ ಸರ್ವಸದಸ್ಯರೂ ಸೂಚನೆಗೆ ಒಪ್ಪಿಗೆ ನೀಡಿದರು. ೧೯೯೬ ರ ಲೆಕ್ಕಪತ್ರವನ್ನು ಸ್ವೀಕರಿಸಬಹುದೆಂಬ ಡಾ॥ ಅ. ಸುಂದರ ಅವರ ಸೂಚನೆಗೆ ಡಾ॥ ಕೆ. ಬಿ. ಸುದರ್ಶನ್ ಅನುಮೋದನೆ ನೀಡಿದರು.

### ೧೯೯೭ರ ಮುಂಗಡ ಪತ್ರ ಮಂಡನೆ

೧೯೯೭ ರ ಮುಂಗಡ ಪತ್ರದ ಕರಡಚ್ಚು ಪ್ರತಿಗಳನ್ನೂ ಸಹ ಸದಸ್ಯರಿಗೆ ಮೊದಲೇ ಹಂಚಲಾಗಿತ್ತು. ಆದಾಯಕ್ಕಿಂತ ವೆಚ್ಚ ಅಧಿಕವಾಗಿರುವುದರ ಬಗ್ಗೆ ಪ್ರೊ॥ ಭೀಮಪ್ಪ ಸುರಪುರ ಅವರು ಗಮನ ಸೆಳೆದು ಈ ವೆಚ್ಚವನ್ನು ಹೇಗೆ ಸರಿಯಾಗಿಸುತ್ತೀರಿ ಎಂದು ಪ್ರಶ್ನಿಸಿದರು. ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರು ಸದಸ್ಯರಿಂದ ದೇಣಿಗೆ ಪಡೆದು ಅಥವಾ ಠೇವಣಿಯಲ್ಲಿ ಅವಶ್ಯಕವಾದಷ್ಟನ್ನು ಅವಧಿಗೆ ಮೊದಲೇ ಹಿಂಪಕ್ಕೆ ಪಡೆದು ಅಧಿಕ ವೆಚ್ಚವನ್ನು ಸರಿದೂಗಿಸಲು ಅಥವಾ ವೆಚ್ಚದ ಪ್ರಮಾಣವನ್ನು ತಗ್ಗಿಸಲು ಪ್ರಯತ್ನಿಸಲಾಗುವುದು ಎಂಬ ಸ್ಪಷ್ಟನೆ ನೀಡಿದರು.

ಸರ್ಕಾರದ ನೆರವಿನ ಬಗೆಗೆ ಶ್ರೀ ಕೆ. ಜಿ. ರಾವ್ ಪ್ರಶ್ನಿಸಿದರು. 'ಇತಿಹಾಸ ದರ್ಶನ'ದ ಮುದ್ರಣ ವೆಚ್ಚಕ್ಕಾಗಿ ನೆರವು ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಲಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆಯವರು ನಮಗೆ ನೆರವು ನೀಡಲು ಉತ್ಸುಕರಾಗಿದ್ದಾರೆ. ಆದರೆ ಸರ್ಕಾರದ ಆಡಳಿತ ವ್ಯವಸ್ಥೆಯಲ್ಲಿ ಯಾವುದನ್ನೂ ಶೀಘ್ರವಾಗಿ ನಿರೀಕ್ಷಿಸುವಂತಿಲ್ಲ. ಮುದ್ರಣ ವೆಚ್ಚಕ್ಕೆ ನೆರವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪುಸ್ತಕ ಅಭಿವೃದ್ಧಿ ಪ್ರಾಧಿಕಾರದ ಮೂಲಕ ನೀಡಬೇಕಾಗುತ್ತದೆ. ಆದರೂ ಅಕಾದೆಮಿಯು ಸರ್ಕಾರದಿಂದ ತಾನೇ ತಾನಾಗಿ ನೆರವು ನೀಡುವಂತೆ ಪ್ರಾಮಾಣಿಕ ಪ್ರಯತ್ನ ಮಾಡುವುದೆಂದೂ, ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಸಭೆಗೆ ವಿವರಿಸಿದರು. ಸಭೆಯು ಅದನ್ನು ಅನುಮೋದಿಸಿ, ಸರ್ಕಾರದಿಂದ ನೆರವು ಪಡೆಯುವ ಪ್ರಯತ್ನವನ್ನು ಮುಂದುವರಿಸಬೇಕೆಂದು ಸೂಚಿಸಿತು. ಕಳೆದ ವರ್ಷವೂ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಕ್ಕೆ ರೂ. ೨೫,೦೦೦-೦೦ ನೆರವು ನೀಡಿದ ರಾಜ್ಯ ಪುರಾತತ್ವ ಇಲಾಖೆಗೆ ಕೃತಜ್ಞತೆ ಸಲ್ಲಿಸಿ, ಮುಂದೆಯೂ ನೆರವನ್ನು ಮುಂದುವರಿಸುವಂತೆ ಮನವಿ ಸಲ್ಲಿಸಲು ತೀರ್ಮಾನಿಸಲಾಯಿತು. ೧೯೯೭ರ ಮುಂಗಡ ಪತ್ರವನ್ನು ಒಪ್ಪಬಹುದೆಂದು ಶ್ರೀ ಸಿದ್ಧಯ್ಯ ಹಿರೇಮಠ್ ಸೂಚಿಸಿದರು. ಡಾ॥ ರು. ಮ. ಷಡಕ್ಷರಯ್ಯ ಸೂಚನೆಯನ್ನು ಅನುಮೋದಿಸಿದರು.

### ೧೯೯೭ ನೇ ಸಾಲಿಗೆ ಆಡಿಟರ್ ನೇಮಕ

ಈವರೆಗೆ ಅಕಾದೆಮಿಯ ಲೆಕ್ಕ ಪತ್ರಗಳನ್ನು ಪರಿಶೋಧಿಸುತ್ತಾ ಬಂದಿರುವ ಆಚಾರ್ಯ ಕೆ. ವಿ (ಆಚಾರ್ಯ ಮತ್ತು ಕಂಪೆನಿ), ಬೆಂಗಳೂರು ಅವರನ್ನೇ ೧೯೯೭ನೇ ಸಾಲಿಗೂ ಆಡಿಟರ್ ಆಗಿ ನೇಮಿಸಿಕೊಳ್ಳಬಹುದೆಂದು ಶ್ರೀ ಸಿದ್ಧಯ್ಯ ಹಿರೇಮಠ ಸೂಚಿಸಿದರು.

ಸರ್ವ ಸದಸ್ಯರೂ ಅದನ್ನು ಅನುಮೋದಿಸಿದರು. ಆಡಿಟರ್ ಅವರಿಗೆ ಹಿಂದಿನಂತೆಯೇ ಈ ವರ್ಷವೂ ರೂ. ೧,೫೦೦-೦೦ ಸಂಭಾವನೆ ನೀಡಬಹುದೆಂದೂ ತೀರ್ಮಾನಿಸಲಾಯಿತು.

**ಠರಾವುಗಳ ಮಂಡನೆ**

(೧) ಕರ್ನಾಟಕದ ಕೆಲವು ಜಿಲ್ಲೆಗಳ ಪುನರ್ವಿಂಗಡಣೆ ಆಗುತ್ತಿರುವ ಸಂದರ್ಭದಲ್ಲಿ ಕರ್ನಾಟಕದ ಇತಿಹಾಸ ಪ್ರಸಿದ್ಧ ಸ್ಥಳಗಳಾದ ಬನವಾಸಿ, ತಲಕಾಡು, ಪಟ್ಟದಕಲ್ಲು, ಮಳಖೇಡ, ಹಂಪಿ, ಕಿತ್ತೂರು ಮುಂತಾದ ಊರುಗಳನ್ನು ತಾಲ್ಲೂಕು ಸ್ಥಳಗಳನ್ನಾಗಿ ಮಾಡಿ ಅವನ್ನು ಅಭಿವೃದ್ಧಿಪಡಿಸಬೇಕೆಂದು ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ವಿನಂತಿ ಮಾಡುತ್ತದೆ.

*ಸೂಚನೆ : ಡಾ॥ ಬಿ. ನಂಜುಂಡಸ್ವಾಮಿ, ತುಮಕೂರು,* *ಅನುಮೋದನೆ : ಡಾ ॥ ಎಸ್. ಕೆ. ಜೋಶಿ ( ಸರ್ವಾನುಮತ ), ಧಾರವಾಡ*

(೨) ಕರ್ನಾಟಕದ ಭವ್ಯ ಇತಿಹಾಸ, ಪುರಾತತ್ವ, ಕಲೆಗಳು, ಸಾಹಿತ್ಯ, ಸಂಸ್ಕೃತಿ ಮುಂತಾದ ವಿವಿಧ ವಿಷಯಗಳನ್ನು ಪ್ರಭಾವಶಾಲಿಯಾಗಿ ಪ್ರತಿಬಿಂಬಿಸುವ ಬೃಹತ್ ವಸ್ತುಸಂಗ್ರಹಾಲಯವೊಂದನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ಕರ್ನಾಟಕ ರಾಜ್ಯ ಸರ್ಕಾರವನ್ನು ಒತ್ತಾಯಿಸುತ್ತದೆ.

*ಸೂಚನೆ : ಡಾ॥ ಮೃತ್ಯುಂಜಯ ರುಮಾಲೆ, ಹೊಸಪೇಟೆ,* *ಅನುಮೋದನೆ : ಡಾ॥ ಶ್ರೀನಿವಾಸ ಹಾವನೂರು, ಬೆಂಗಳೂರು ( ಸರ್ವಾನುಮತ ).*

(೩) ಕರ್ನಾಟಕ ಸರ್ಕಾರದ ಲೋಕಸೇವಾ ಆಯೋಗವು ಸರ್ಕಾರೀ ನೌಕರಿಗೆ ಭರ್ತಿ ಮಾಡಲು ನಡಸುವ ಅರ್ಹತಾ ಪರೀಕ್ಷೆಯಲ್ಲಿ ಕರ್ನಾಟಕ ಇತಿಹಾಸವನ್ನು ಒಂದು ಪತ್ರಿಕೆಯಾಗಿ ಕಡ್ಡಾಯವಾಗಿ ಅಧ್ಯಯನ ವಿಷಯವಾಗಿ ಇಟ್ಟುಕೊಳ್ಳಬೇಕೆಂದು ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ಒತ್ತಾಯಿಸುತ್ತದೆ.

*ಸೂಚನೆ : ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು,* *ಅನುಮೋದನೆ : ಡಾ॥ ಅ. ಸುಂದರ, ಬಿಜಾಪೂರ ( ಸರ್ವಾನುಮತ ).*

(೪) ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಕರ್ನಾಟಕದ ಇತಿಹಾಸದ ಬಗೆಗೆ ಏಳು ಸಂಪುಟಗಳನ್ನು ಪ್ರಕಟಿಸಿದ್ದರ ಬಗ್ಗೆ ಅಕಾದೆಮಿಯು ವಿಶ್ವವಿದ್ಯಾಲಯಕ್ಕೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

*ಸೂಚನೆ : ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು,* *ಅನುಮೋದನೆ : ಡಾ॥ ಶ್ರೀನಿವಾಸ ರಿತ್ತಿ, ಧಾರವಾಡ.*

(೫) ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪುರಾತತ್ವ ಇಲಾಖೆಗಳು ಸಂರಕ್ಷಿಸಿರುವ ಸ್ಮಾರಕಗಳನ್ನು ಕುರಿತು ಉತ್ತಮವಾದ ಮಾರ್ಗದರ್ಶಿ ಕೈಪಿಡಿಗಳ ಪ್ರಕಟಣೆಗೆ ಒತ್ತಾಯಿಸಬೇಕೆಂದು ದೊಡ್ಡಬಳ್ಳಾಪುರದ ಶ್ರೀ ಮುತ್ತುರಾಜು ಅವರು ಮಂಡಿಸಿದ ಠರಾವಿನ ಬಗೆಗೆ ಚರ್ಚೆಯಾಯಿತು. ಎರಡೂ ಸರ್ಕಾರಗಳು ಹಲವು ಕೈಪಿಡಿಗಳನ್ನು ಪ್ರಕಟಿಸಿರುವುದನ್ನು ಡಾ॥ ಅ. ಸುಂದರ ಅವರು ತಿಳಿಸಿದರು. ಈ ಬಗ್ಗೆ ಚರ್ಚಿಸಿ ಸೂಕ್ತ ಕ್ರಮಕೈಗೊಳ್ಳಲು ಡಾ॥ ಸೂರ್ಯನಾಥ ಕಾಮತ್ ಮತ್ತು ಡಾ॥ ಅ. ಸುಂದರ ಅವರಿಗೆ ಅಧಿಕಾರ ನೀಡಲು ಸದಸ್ಯರೆಲ್ಲರೂ ಸಮ್ಮತಿಸಿದರು.

ಕಳೆದ ವರ್ಷ ಸ್ವೀಕರಿಸಲಾಗಿದ್ದ ಮತ್ತು ಈ ಮೊದಲು ಸಭೆಯಲ್ಲಿ ಚರ್ಚಿತವಾದ ಈ ಕೆಳಗಿನ ಎರಡು ಠರಾವುಗಳನ್ನು ಪುನಃ ಸ್ವೀಕರಿಸಲಾಯಿತು.

೧. ಕರ್ನಾಟಕ ಸರ್ಕಾರವು ಪ್ರತಿವರ್ಷವೂ ಇತಿಹಾಸ ಸಂಶೋಧಕರೊಬ್ಬರಿಗೆ ಒಂದು ಲಕ್ಷ ರೂಪಾಯಿ ಮೌಲ್ಯದ ಪ್ರಶಸ್ತಿ ನೀಡಿ ಪುರಸ್ಕರಿಸಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ಸರ್ಕಾರಕ್ಕೆ ಮನವಿ ಮಾಡುತ್ತದೆ.

*ಸೂಚನೆ : ಶ್ರೀ ಕೆ. ಅಭಿಶಂಕರ್,* *ಅನುಮೋದನೆ : ಡಾ॥ಹೆಚ್. ಚಂದ್ರಶೇಖರ್*

೨. ರಾಜ್ಯ ಪತ್ರಾಗಾರವನ್ನು ವಿಧಾನಸೌಧದಿಂದ ಆಚೆಗೆ ಸೂಕ್ತವಾದ ವಿಶಾಲ ಪ್ರತ್ಯೇಕ ಕಟ್ಟಡಕ್ಕೆ ವರ್ಗಾಯಿಸಲು ಕ್ರಮ ಕೈಗೊಳ್ಳಬೇಕೆಂದು ರಾಜ್ಯ ಸರ್ಕಾರವನ್ನು ಅಕಾದೆಮಿಯ ಸರ್ವಸದಸ್ಯರ ಸಭೆ ಒತ್ತಾಯಿಸುತ್ತದೆ.

*ಸೂಚನೆ : ಡಾ॥ ಸೂರ್ಯನಾಥ ಕಾಮತ್,* *ಅನುಮೋದನೆ : ಡಾ. ಎ. ಕೆ. ಶಾಸ್ತ್ರಿ*

## ಇತರ ವಿಷಯಗಳು

ಇತಿಹಾಸ ಪಠ್ಯಪುಸ್ತಗಳಲ್ಲಿನ ದೋಷಗಳ ಬಗೆಗೆ ಡಾ॥ ಯೋಗೀಶ್ವರಪ್ಪ ಅವರು ಗಮನ ಸೆಳೆದರು. ಆ ಬಗೆಗೆ ತಾವು ಸಂಬಂಧಿಸಿದವರೊಡನೆ ಪರ್ಯಾಲೋಚಿಸುವುದಾಗಿ ಡಾ॥ ಸೂರ್ಯನಾಥ ಕಾಮತ್ ತಿಳಿಸಿದರು.

ಅಕಾದೆಮಿಯ ಜಿಲ್ಲಾವಾರು ಘಟಕಗಳ ಸ್ಥಾಪನೆಗೆ ಸಂಬಂಧಿಸಿದಂತೆ ಚರ್ಚೆ ನಡೆದು ಇಪ್ಪತ್ತೈದಕ್ಕೂ ಹೆಚ್ಚು ಸದಸ್ಯರು ಇರುವ ನಗರ ಜಿಲ್ಲೆಗಳಲ್ಲಿ ಅಕಾದೆಮಿಯ ಘಟಕಗಳ ಸ್ಥಾಪನೆಗೆ ಈ ಮೊದಲೇ ಅವಕಾಶ ಕಲ್ಪಿಸಲಾಗಿದ್ದು, ಈಗಾಗಲೇ ಹಲವು ಘಟಕಗಳು ಅಸ್ತಿತ್ವದಲ್ಲಿರುವುದನ್ನು ಸ್ಪಷ್ಟಪಡಿಸಲಾಯಿತು.

ಪಿಎಚ್. ಡಿ., ಪದವಿ ಪಡೆದು ಅಕಾದೆಮಿಯ ಪುರಸ್ಕಾರ ಪಡೆದ ಸದಸ್ಯರ ಹೆಸರು, ಪಿಎಚ್. ಡಿ., ವಿಷಯ ಇತ್ಯಾದಿ ವಿವರಗಳನ್ನು **ಇತಿಹಾಸದರ್ಶನ**ದಲ್ಲಿ ಪ್ರಕಟಿಸುವಂತೆ ಪ್ರೊ॥ ಭೀಮಪ್ಪ ಸುರಪುರ ಅವರು ನೀಡಿದ ಸಲಹೆಯನ್ನು ಸ್ವೀಕರಿಸಲಾಯಿತು.

ಪ್ರತಿವರ್ಷವೂ ಸಮ್ಮೇಳನದ ಉದ್ಘಾಟನೆಗೆ ಹಿಂದಿನ ದಿನ ರಾತ್ರಿ ಅಥವಾ ಉದ್ಘಾಟನೆಯ ದಿನ ರಾತ್ರಿ ಉದಯೋನ್ಮುಖ ಸಂಶೋಧಕರಿಗೆ ಪ್ರತ್ಯೇಕ ಗೋಷ್ಠಿ ನಡೆಸಿ, ಅವರಿಗೆ ಹಿರಿಯ ಸಂಶೋಧಕರಿಂದ ಮಾರ್ಗದರ್ಶನ ದೊರಕಿಸಿಕೊಡಬೇಕೆಂದು ಡಾ॥ ಶ್ರೀನಿವಾಸ ಹಾವನೂರ್ ಸೂಚನೆ ನೀಡಿದರು. 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಸಂದರ್ಭ ಸರ್ಕಾರದಿಂದ ಸಂಘಟಕರಿಗೆ ಅನ್ಯಕಾರ್ಯನಿಮಿತ್ತ ರಜೆ ಸೌಲಭ್ಯ ದೊರಕಿಸಿಕೊಡಬೇಕೆಂಬ ಸದಸ್ಯರೊಬ್ಬರ ಸಲಹೆಗೆ ಡಾ॥ ಸೂರ್ಯನಾಥ ಕಾಮತರು ಎಲ್ಲ ಸಂದರ್ಭಗಳಲ್ಲೂ ಅನ್ಯಕಾರ್ಯ ನಿಮಿತ್ತ ರಜೆಗೆ ಕೇಳುವುದು ಸೂಕ್ತವಲ್ಲ. ನಾವು ಪ್ರೀತಿ ಮತ್ತು ವಿಶ್ವಾಸಗಳಿಂದ ಮಾಡುವ ಕಾರ್ಯವನ್ನು ಸಪ್ತಾಹದ ವಾರದಲ್ಲಿಯೇ ಆಗಬೇಕೆಂದೇನೂ ಬಯಸದೆ ಬಿಡುವಿದ್ದಾಗ ಮಾಡುವುದು ಸೂಕ್ತವೆಂದೂ ತಿಳಿಸಿದರು.

## ಅಕಾದೆಮಿಯ ಹನ್ನೆರಡನೆಯ ಸಮ್ಮೇಳನ

೧೯೯೮ ನೆಯ ಸಾಲಿನಲ್ಲಿ ಅಕಾದೆಮಿಯ ಹನ್ನೆರಡನೆಯ ವಾರ್ಷಿಕ ಸಮ್ಮೇಳನಕ್ಕೆ ಶಿವಮೊಗ್ಗ ಜಿಲ್ಲಾ ಘಟಕದಿಂದ ಪತ್ರ ರೂಪದಲ್ಲಿ ಮತ್ತು ಬಳ್ಳಾರಿ ಜಿಲ್ಲಾ ಘಟಕದಿಂದ ಮಾತಿನ ರೂಪದಲ್ಲಿ ಆಹ್ವಾನ ಬಂದಿರುವುದನ್ನು ಸಭೆಯ ಗಮನಕ್ಕೆ ತರಲಾಯಿತು. ಆಹ್ವಾನಿಸಿದ ಸದಸ್ಯರು ಸಭೆಯಲ್ಲಿ ಹಾಜರಿದ್ದರು. ಈಗಾಗಲೇ ಬಳ್ಳಾರಿ ಜಿಲ್ಲೆಯಲ್ಲಿ (ಸಂಡೂರು - ೧೯೯೪) ಒಂದು ಸಮ್ಮೇಳನ ಆಗಿರುವುದರಿಂದ ಮುಂದಿನ (ಹನ್ನೆರಡನೆಯ) ಸಮ್ಮೇಳನವನ್ನು ಶಿವಮೊಗ್ಗೆಯಲ್ಲಿ ನಡೆಸಬಹುದೆಂದು ಹೆಚ್ಚು ಸಂಖ್ಯೆಯ ಸದಸ್ಯರು ಅಪೇಕ್ಷೆಪಟ್ಟ ಕಾರಣದಿಂದ ಶಿವಮೊಗ್ಗದಿಂದ ಬಂದ ಆಹ್ವಾನವನ್ನು ಸರ್ವಾನುಮತದಿಂದ ಒಪ್ಪಲಾಯಿತು - ಮತ್ತು ಆಹ್ವಾನ ನೀಡಿದ್ದ ಸದಸ್ಯರಿಗೆ, ಆಹ್ವಾನವನ್ನೊಪ್ಪಿ ಆಭಾರ ಸಲ್ಲಿಸಲಾಯಿತು.

ಅಕಾದೆಮಿಯ ಕಾರ್ಯದರ್ಶಿಗಳಲ್ಲೊಬ್ಬರಾದ ಡಾ॥ ಹೆಚ್. ಆರ್. ರಘುನಾಥ ಭಟ್ಟರು ಅಧ್ಯಕ್ಷರಾದಿಯಾಗಿ ಹಾಜರಿದ್ದ ಎಲ್ಲ ಸದಸ್ಯರಿಗೂ ವಂದನೆಗಳನ್ನು ಸಲ್ಲಿಸಿದರು.

## ಇತಿಹಾಸ ಪ್ರಶಸ್ತಿ ಪರೀಕ್ಷೆಗಳು

ಕಳೆದ ವರ್ಷಗಳಂತೆ ಈ ವರ್ಷವೂ ಎರಡನೆಯ ಪದವಿಪೂರ್ವ ಇತಿಹಾಸ ವಿದ್ಯಾರ್ಥಿಗಳಿಗೆ ೯-೩-೧೯೯೭ ರಂದು ಇತಿಹಾಸ ಪ್ರಶಸ್ತಿ ಪರೀಕ್ಷೆಗಳನ್ನು ಕರ್ನಾಟಕದ ಐದು ಕೇಂದ್ರಗಳಲ್ಲಿ ನಡೆಸಲಾಯಿತು. ಒಟ್ಟು ೫೭೬೦ ವಿದ್ಯಾರ್ಥಿಗಳು ಪರೀಕ್ಷೆಗೆ ಅರ್ಜಿಸಲ್ಲಿಸಿದ್ದು ೪೭೨೮ ವಿದ್ಯಾರ್ಥಿಗಳು ಹಾಜರಾಗಿ ಉತ್ತರಿಸಿದ್ದಾರೆ. ೪೧೨೫ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು, ಅವರುಗಳ ಪೈಕಿ ಬಹುಮಾನ ಪಡೆದವರ ಹೆಸರುಗಳು ಕೆಳಕಂಡಂತಿವೆ.

| | | |
|---|---|---|
| ೧ನೇ ಬಹುಮಾನ | : | **ಕು॥ ಕೆ. ಎಸ್. ಸರಸ್ವತಿ,** ಸರ್ಕಾರಿ ಪದವಿ ಪೂರ್ವ ಕಾಲೇಜು, ನೆಲಮಂಗಲ, ಬೆಂಗಳೂರು ಜಿಲ್ಲೆ |
| ೨ನೇ ಬಹುಮಾನ | : | **ಕು॥ ವಸಂತಲಕ್ಷ್ಮೀ ರಾಮಗುಂಡಿ,** ಎಸ್. ಜಿ. ಎಚ್. ಕಾಂಪೊಸಿಟ್ ಜೂನಿಯರ್ ಕಾಲೇಜು, ಯಮಕನಮರಡಿ, ಬೆಳಗಾಂ ಜಿಲ್ಲೆ |
| ೩ನೇ ಬಹುಮಾನ | : | **ಶ್ರೀ ಎ. ವಿ. ಅಮಿತ್‌ಕುಮಾರ್,** ಮರಿಮಲ್ಲಪ್ಪ ಪದವಿಪೂರ್ವ ಕಾಲೇಜು, ಮೈಸೂರು. |
| ಸಮಾಧಾನಕರ ಬಹುಮಾನಗಳು | : | **ಕು॥ ಗೀತಾ ಪಾವಶೆ,** ಲಿಂಗರಾಜ ಕಾಲೇಜು, ಬೆಳಗಾಂ |
| | | **ಶ್ರೀ ಮೋಹನ್,** ಮರಿಮಲ್ಲಪ್ಪ ಪದವಿಪೂರ್ವ ಕಾಲೇಜು, ಮೈಸೂರು. |
| | | **ಕು॥ ಮನೋರಮಾ ತಲ್‌ವಲ್‌ಕರ್,** ಮೌಂಟ್ ಕಾರ್ಮೆಲ್ ಕಾಲೇಜು, ಬೆಂಗಳೂರು |

ಇದಲ್ಲದೆ ಶ್ರೀ ಪ್ರದೀಪ, ಮಿಲಿಂದ ಪದವಿಪೂರ್ವ ಕಾಲೇಜು, ಗುಲಬರ್ಗ; ಶ್ರೀ ಎ. ಸುನೀಲ್, ಮಿಲಾಗ್ರಿಸ್ ಪದವಿಪೂರ್ವ ಕಾಲೇಜು, ಮಂಗಳೂರು ಇವರುಗಳಿಗೆ ಪರೀಕ್ಷಾ ಕೇಂದ್ರದ ವಿಶೇಷ ಬಹುಮಾನಗಳನ್ನು ನೀಡಲಾಗಿದೆ.

ಪರೀಕ್ಷೆಗಳ ಸಂಬಂಧ ಶ್ರೀ ಸಿ. ಆರ್. ಗಾಡಗೋಳಿ, ಅವರು ನೀಡಿದ ನೆರವನ್ನು ವಿಶೇಷವಾಗಿ ನೆನಸುತ್ತ ಪರೀಕ್ಷೆಗಳನ್ನು ನಡೆಸಲು ಬೆಂಗಳೂರು ಕೇಂದ್ರದಲ್ಲಿ ಪ್ರೊ॥ವೆಂಕಟರಾಜು, ಡಾ॥ಮಲ್ಲಿಕಾರ್ಜುನ., ಮೈಸೂರು ಕೇಂದ್ರದಲ್ಲಿ ಡಾ॥ಎಂ. ಎಸ್. ಕೃಷ್ಣಮೂರ್ತಿ., ಧಾರವಾಡ ಕೇಂದ್ರದಲ್ಲಿ ಡಾ॥ಹೆಚ್. ಆರ್. ರಘುನಾಥಭಟ್, ಶ್ರೀ ಎ. ಎಸ್. ಅಂಟಿನ್ ಹಾಗೂ ಡಾ॥ ಎಂ. ವೈ. ಸಾವಂತ್., ಗುಲಬರ್ಗದಲ್ಲಿ ಡಾ॥ ಸ್ವಾಮಿರಾವ್ ಕುಲಕರಣಿ ಮತ್ತು ಪ್ರೊ॥ ವಸಂತಕುಷ್ಟಗಿ., ಮಂಗಳೂರು ಕೇಂದ್ರದಲ್ಲಿ ಶ್ರೀ ಬಿ. ವಿ. ಉಪಾಧ್ಯಾಯ ಹಾಗೂ ಶ್ರೀ ಎಂ. ರಾಘವೇಂದ್ರ ಪ್ರಭು ಅವರುಗಳು ನೀಡಿದ ಸಹಕಾರಕ್ಕಾಗಿ ಅಕಾದೆಮಿಯು ಕೃತಜ್ಞವಾಗಿದೆ. ಜೊತೆಗೆ ಉತ್ತರ ಪತ್ರಿಕೆಗಳ ಮೌಲ್ಯಮಾಪನವನ್ನು ಆಸ್ಥೆಯಿಂದ ಮಾಡಿಕೊಟ್ಟ ಮೌಲ್ಯಮಾಪಕರಿಗೆ ಹಾಗೂ ಪರೀಕ್ಷೆಗಳನ್ನು ನಡೆಸಲು ಸ್ಥಳಾವಕಾಶ ನೀಡಿ ಸಹಕರಿಸಿದ ಕಾಲೇಜುಗಳ ಆಡಳಿತ ಮತ್ತು ಸಿಬ್ಬಂದಿ ವರ್ಗಕ್ಕೆ ಅಕಾದೆಮಿಯು ಧನ್ಯವಾದಗಳನ್ನು ಸಲ್ಲಿಸುತ್ತದೆ.

### ಕಾರ್ಯಕಾರೀ ಸಮಿತಿಯ ಸಭೆಗಳು

೧೯೯೭ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ನಾಲ್ಕು ಬಾರಿ (೧-೫-೧೯೯೭, ೧೬-೯-೧೯೯೭, ೮-೧೦-೧೯೯೭ ಮತ್ತು ೨೧-೧೦-೯೭) ಸಭೆ ಸೇರಿ ಅಕಾದೆಮಿಯ ವಿವಿಧ ಚಟುವಟಿಕೆಗಳ ಬಗೆಗೆ ಚರ್ಚಿಸಿ, ಸುಸೂತ್ರ ಕಾರ್ಯನಿರ್ವಹಣೆಗೆ ಸಹಕರಿಸಿದೆ. ಎಲ್ಲಾ ಸಭೆಗಳೂ ಬೆಂಗಳೂರಿನಲ್ಲಿರುವ ಅಕಾದೆಮಿಯ ಕಚೇರಿಯಲ್ಲೇ ನಡೆದು, ಸಭಾಧ್ಯಕ್ಷತೆಯನ್ನು ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರೇ ವಹಿಸಿದ್ದಾರೆ. ಸಭೆಗಳು ರಚನಾತ್ಮಕವಾಗಿ ನಡೆಯಲು ನೆರವು ನೀಡಿದ ಎಲ್ಲ ಕಾರ್ಯಕಾರೀ ಸಮಿತಿಯ ಸದಸ್ಯರಿಗೂ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ.

### ಸದಸ್ಯರ ಸಂಖ್ಯೆ

೧೯೯೭ರ ವರ್ಷಾಂತ್ಯಕ್ಕೆ ಅಕಾದೆಮಿಯ ಸದಸ್ಯ ಬಳಗವು ಈ ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಘ-ಸಂಸ್ಥೆಗಳು | ಒಟ್ಟು |
|---|---|---|---|
| ೭೨೦ | ೧೦ | ೨೦ | ೭೫೦ |

### ಅಕಾದೆಮಿಯ ಘಟಕಗಳು

ಶ್ರೀ ತ. ರಂ. ಕೃಷ್ಣಗೌಡರ ನೇತೃತ್ವದಲ್ಲಿ ಬೆಂಗಳೂರು ಜಿಲ್ಲಾ ಘಟಕವೂ, ಡಾ॥ ಎಂ. ಎಸ್. ಕೃಷ್ಣಮೂರ್ತಿ ಅವರ ನೇತೃತ್ವದಲ್ಲಿ ಮೈಸೂರು ಘಟಕವೂ, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು ಹಾಗೂ ಶ್ರೀ ಹೆಚ್. ಎಂ. ಚಂದ್ರಶೇಖರಪ್ಪ ನವರ ನೇತೃತ್ವದಲ್ಲಿ ಶಿವಮೊಗ್ಗ ಜಿಲ್ಲಾ ಘಟಕವೂ, ಶ್ರೀಗುರುಮೂರ್ತಿ ಪೆಂಡಕೂರು ಮತ್ತು ಶ್ರೀ ಕುಂ. ಬಾ. ಸದಾಶಿವಪ್ಪ ಅವರ ನೇತೃತ್ವದಲ್ಲಿ ಬಳ್ಳಾರಿ ಜಿಲ್ಲಾ ಘಟಕವೂ, ಶ್ರೀ ಕೇಶವ ಉಮರ್ಜಿ ಮತ್ತು ಡಾ॥ಕೃಷ್ಣಕೊಲ್ಹಾರ ಕುಲಕರ್ಣಿ ಅವರ ನೇತೃತ್ವದಲ್ಲಿ ಬಿಜಾಪುರ ಘಟಕವೂ ಸಮರ್ಥವಾಗಿ ಕಾರ್ಯನಿರ್ವಹಿಸುತ್ತಾ, ಅಕಾದೆಮಿಯ ಧ್ಯೇಯೋದ್ದೇಶಗಳು ಸಫಲಗೊಳ್ಳಲು ಸಹಕರಿಸುತ್ತಿವೆ.

## ಶಿವಮೊಗ್ಗ ಜಿಲ್ಲಾ ಘಟಕದ ೧೯೯೭ನೇ ಸಾಲಿನ ವರದಿ

| ಕಾರ್ಯಕ್ರಮ | ಸ್ಥಳ | ಸನ್ಮಾನ್ಯ ಅತಿಥಿಗಳು | ಉಪನ್ಯಾಸಕರು |
|---|---|---|---|
| ೧೫.೬.೯೭<br>ಕೆಳದಿ ರಾಣಿ ಚೆನ್ನಮ್ಮಾಜಿ ೨೦೦ ವರ್ಷ ಮತ್ತು ಕೆಳದಿ ಸಾಮ್ರಾಜ್ಯೋತ್ಸವ ೫೦೦ ವರ್ಷದ ಇತಿಹಾಸ ಸಮ್ಮೇಳನ | ಕರ್ನಾಟಕ ಇತಿಹಾಸ ಅಕಾದೆಮಿ ಶಿವಮೊಗ್ಗಾ ಜಿಲ್ಲಾ ಘಟಕ ಮತ್ತು ಕರ್ನಾಟಕ ಸಂಘ, ಶಿವಮೊಗ್ಗ | ಸಾನ್ನಿಧ್ಯ : ಜ॥ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಆನಂದಪುರ, ಬೆಕ್ಕಿನಕಲ್ಮಠ<br>ಉದ್ಘಾಟನೆ : ಪ್ರೊ॥ ಪಿ. ವೆಂಕಟರಾಮಯ್ಯ **(ಕುಲಪತಿಗಳು, ಕುವೆಂಪು ವಿಶ್ವವಿದ್ಯಾಲಯ)** | ಡಾ॥ ಸೂರ್ಯನಾಥ ಕಾಮತ್<br>ಡಾ॥ ಅ. ಸುಂದರ<br>ಡಾ॥ ಎಚ್.ಎಸ್. ಗೋಪಾಲರಾವ್<br>ಡಾ॥ ಹೆಚ್. ಆರ್. ರಘುನಾಥಭಟ್ |
| *ಈ ಸಂದರ್ಭದಲ್ಲಿ ತ್ಯಾನಂದೂರಿನ ಶ್ರೀ ವೈ. ಎಸ್. ಪುಟ್ಟಣ್ಣ ಅವರ 'ನಾ ಕಂಡ ಮಲೆನಾಡು' ಎಂಬ ಕೃತಿಯ ಬಿಡುಗಡೆ ಆಯಿತು.* | | | |
| ೨೭.೭.೯೭<br>ದ್ವಿತೀಯ ಜಿಲ್ಲಾ ಇತಿಹಾಸ ಸಮ್ಮೇಳನ | ಕರ್ನಾಟಕ ಸಂಘ ಶಿವಮೊಗ್ಗ | ಮುಖ್ಯ ಅತಿಥಿ : ಶ್ರೀ ಎಂ. ಲಕ್ಷ್ಮೀ ನಾರಾಯಣ್, ಐ. ಎ. ಎಸ್ **(ಶಿವಮೊಗ್ಗ ಜಿಲ್ಲಾಧಿಕಾರಿಗಳು)**<br>ಅಧ್ಯಕ್ಷತೆ : ಶ್ರೀ ಟಿ. ಆರ್. ಪಾಂಡುರಂಗ **(ಅಧ್ಯಕ್ಷರು, ಕರ್ನಾಟಕ ಸಂಘ)** | |

ಈ ಸಂದರ್ಭದಲ್ಲಿ 'ಅಭಿವ್ಯಕ್ತಿ ಸ್ವಾತಂತ್ರ್ಯ' ಕುರಿತು ನಡೆದ ವಿಚಾರ ಸಂಕಿರಣದಲ್ಲಿ ಸಾಹಿತಿ, ಇತಿಹಾಸಕಾರರು ಪಾಲ್ಗೊಂಡಿದ್ದರು. ಸಮ್ಮೇಳನದ ಮಂಡಿತ ನಿರ್ಣಯಗಳನ್ನು ಸಂಬಂಧಿಸಿದ ಇಲಾಖೆಗಳಿಗೆ ಕಳುಹಿಸಿ ಕಾರ್ಯಕ್ರಮ ಕೈಗೊಳ್ಳಲು ವಿನಂತಿಸಲಾಯಿತು. ಕೆಳದಿಯ ಶ್ರೀ ಮೋಹನ ಗ. ಹೆಗಡೆ ಅವರಿಂದ ಪತ್ರಿಕಾ ಪ್ರದರ್ಶನ, ಶ್ರೀ ಹುಮಾಯೂನ್ ಹರ್ಲಾಪುರ ಮತ್ತು ಸಂಗಡಿಗರಿಂದ ಸಂಗೀತ ಕಾರ್ಯಕ್ರಮ ನಡೆಯಿತು.

ಅಮೃತಾಪುರ ದೇವಾಲಯದ ಪರಿಸರ ರಕ್ಷಣೆಯ ಬಗ್ಗೆ ಪತ್ರ ಹಾಗು ಪತ್ರಿಕೆಯ ಮೂಲಕ ಕೇಂದ್ರ ಪುರಾತತ್ವ ಇಲಾಖೆಯ ಗಮನ ಸೆಳೆಯಲಾಗಿದೆ. ರಾಷ್ಟ್ರಮಟ್ಟದಲ್ಲಿ ಕೆಳದಿ ರಾಣಿ ಚೆನ್ನಮ್ಮಾಜಿ ೨೦೦ ವರ್ಷ, ಕೆಳದಿ ಸಾಮ್ರಾಜ್ಯೋತ್ಸವ ೫೦೦ ವರ್ಷ ಸಮಾರಂಭವನ್ನು ನಡೆಸಲು, ಮಾನ್ಯ ಮುಖ್ಯ ಮಂತ್ರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖಾ ಸಚಿವರು ಹಾಗು ಇಲಾಖಾಧಿಕಾರಿಗಳಿಗೆ ಪತ್ರ ಹಾಗು ಪತ್ರಿಕೆಗಳ ಮೂಲಕ ಮನವಿ ಮಾಡಲಾಗಿದೆ. ಹೀಗೆಯೇ ಅಕಾದೆಮಿಯ ಶಿವಮೊಗ್ಗ ಜಿಲ್ಲಾ ಘಟಕದ ಹಿರಿಯ ಉಪಾಧ್ಯಕ್ಷ ಶ್ರೀ. ಬಿ. ಎಸ್. ರಾಮಭಟ್ಟ ಅವರ ಸಲಹೆಯ ಮೇರೆಗೆ ನಗರದ ಕೊಪ್ಪಲು ಮಠದಲ್ಲಿಯ ಕೆಳದಿ ಅರಸರ ಸಮಾಧಿ ರಕ್ಷಣೆಯ ಬಗ್ಗೆ ಇಲಾಖೆಗೆ ಪತ್ರ ಬರೆದು ಪತ್ರಿಕೆಗಳಲ್ಲಿ ಲೇಖನವನ್ನು ಪ್ರಕಟಿಸಲಾಯಿತು. ಆ ಬಗ್ಗೆ ಪುರಾತತ್ವ ಇಲಾಖೆ ಸ್ಪಂದಿಸಿದೆ.

ಶಿವಪ್ಪನಾಯಕನ ಅರಮನೆ ಮತ್ತು ಶಿವಮೊಗ್ಗ ಜಿಲ್ಲಾ ಐತಿಹಾಸಿಕ ಭವ್ಯ ಸ್ಮಾರಕಗಳ ಅಭಿವೃದ್ಧಿ ಸಮಿತಿಯ ಸಭೆಯು ಜಿಲ್ಲೆಯ ಉಸ್ತುವಾರಿ ಮಂತ್ರಿಗಳಾದ ಸನ್ಮಾನ್ಯ ಜಿ. ಬಸವಣ್ಣಪ್ಪನವರ ಅಧ್ಯಕ್ಷತೆಯಲ್ಲಿ ನಡೆದು ಜಿಲ್ಲೆಯ ಅಭಿವೃದ್ಧಿ ಹಾಗು ಸ್ಮಾರಕಗಳ ರಕ್ಷಣೆಯ ಕುರಿತಾಗಿ ಅಕಾದೆಮಿಯ ಜಿಲ್ಲಾ ಘಟಕದ ಪ್ರಧಾನ ಕಾರ್ಯದರ್ಶಿ ಶ್ರೀ ಸಿದ್ದಯ್ಯ ಹಿರೇಮಠ ಮತ್ತು ಅಧ್ಯಕ್ಷ ಶ್ರೀ ಹೆಚ್. ಎಂ. ಚಂದ್ರಶೇಖರಪ್ಪನವರ ಸಫಲ ಪ್ರಯತ್ನಗಳನ್ನು ಶ್ಲಾಘಿಸಲಾಯಿತು. ಅಕಾದೆಮಿಯ ಇಲ್ಲಿನ ಘಟಕದ ಹಿರಿಯ ಉಪಾಧ್ಯಕ್ಷರಾದ ಶ್ರೀ ಹೆಚ್. ಇಬ್ರಾಹಿಂ ಸಾಹೇಬರು ನೀಡುತ್ತಿರುವ ನೆರವಿಗಾಗಿ ಹಾಗು ಸದಾ ಅಕಾದೆಮಿಯ ಕಾರ್ಯಕ್ರಮಗಳ ಬೆನ್ನೆಲುಬಾಗಿ ಹರಸುತ್ತಿರುವ ಪೂಜ್ಯ ಜ॥ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳಿಗೆ ಕೃತಜ್ಞತೆಗಳು ಸಲ್ಲಬೇಕು.

### ಮೈಸೂರು ಜಿಲ್ಲಾ ಘಟಕದ ೧೯೯೭ನೇ ಸಾಲಿನ ವರದಿ

| ಕಾರ್ಯಕ್ರಮ, ದಿನಾಂಕ | ಸ್ಥಳ | ಅಧ್ಯಕ್ಷರು/ಮುಖ್ಯಅತಿಥಿಗಳು | ಉಪನ್ಯಾಸಕರು ಮತ್ತು ವಿಷಯ |
|---|---|---|---|
| ೨.೨.೯೭ | ಬಿಡದಿ ಸಭಾಂಗಣ | ಡಾ॥ ಸೂರ್ಯನಾಥ ಕಾಮತ್ | i. ಮೈಸೂರು ನಾಗರಾಜ ಶರ್ಮ |
| ಶಾಲಾಕಾಲೇಜು | | | *( ಪ್ರಾಗೈತಿಹಾಸಿಕ ನೆಲೆಗಳ ಪರಿಚಯ )* |
| ಅಧ್ಯಾಪಕರಿಗಾಗಿ - | | ಡಾ॥ ಎಂ. ಮಾದಯ್ಯ | ii. ಡಾ॥ ಎಂ. ಎಸ್. ಕೃಷ್ಣಮೂರ್ತಿ |
| ಇತಿಹಾಸ ಸಂಶೋಧನಾ | | (ಕುಲಪತಿಗಳು, ಮೈಸೂರು ವಿ.ವಿ.) | *( ಆದಿ ಚರಿತ್ರ ಕಾಲದ ನೆಲೆಗಳ ಪರಿಚಯ )* |
| ಶಿಬಿರ | | | iii. ಡಾ॥ ಚೆನ್ನಬಸಪ್ಪ ಪಾಟೀಲ |
| | | | *( ಮಧ್ಯಕಾಲೀನ ನೆಲೆಗಳ ಪರಿಚಯ )* |

ಶಿಬಿರದ ಅಂಗವಾಗಿ ವಸ್ತುಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ೪೦ ಜನ ಶಾಲಾ ಕಾಲೇಜು ಅಧ್ಯಾಪಕರು ಶಿಬಿರಾರ್ಥಿಗಳಾಗಿ ಅರ್ಹತಾ ಪತ್ರಗಳನ್ನು ಪಡೆದರು.

| | | | |
|---|---|---|---|
| ೩.೨.೯೭ | ಪ್ರಾಚೀನ ಇತಿಹಾಸ ಮತ್ತು | ಡಾ॥ ಎ. ವಿ. ನರಸಿಂಹಮೂರ್ತಿ | ಜರ್ಮನಿಯ ವಿದ್ವಾಂಸರಾದ |
| | ಪುರಾತತ್ವ ವಿಭಾಗ | | ಡಾ॥ ಪೀಟರ್ ಬರ್ಗ್ ಹೌಸ್ |
| | ಮಾನಸ ಗಂಗೋತ್ರಿ | | *( ಕರ್ನಾಟಕದಲ್ಲಿ ರೋಮನ್ ನಾಣ್ಯಗಳು )* |

ಸದರಿ ಇತಿಹಾಸ ಸಂಶೋಧನಾ ಶಿಬಿರದ ಶಿಬಿರಾರ್ಥಿಗಳನ್ನು ಶೈಕ್ಷಣಿಕ ಪ್ರವಾಸದ ಅಂಗವಾಗಿ ಅಕಾದೆಮಿಯ ಮೈಸೂರು ಘಟಕದ ಅಧ್ಯಕ್ಷ ಡಾ॥ಎಂ. ಎಸ್. ಕೃಷ್ಣಮೂರ್ತಿ ಅವರು ೧೬-೨-೯೭ರಂದು ತಲಕಾಡಿಗೆ ಕರೆದೊಯ್ದು ತಾವು ನಡೆಸಿದ ಉತ್ಖನನದ ಸ್ಥಳ ಹಾಗು ಪ್ರಾಚೀನ ಗುಡಿಗೋಪುರಗಳನ್ನು ಪರಿಚಯಿಸಿದರು.

## ಕೃತಜ್ಞತೆಗಳು

ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಅಧಿವೇಶನವನ್ನು ಯಶಸ್ವಿಯಾಗಿ ನಡೆಸಿಕೊಟ್ಟ ಸೋಂದೆಯ ಶ್ರೀ ಸ್ವರ್ಣವಲ್ಲಿ ಮಹಾಸಂಸ್ಥಾನದ ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳು, ಶ್ರೀ ಜಿ. ಎಸ್. ಹೆಗಡೆ, ಅಜ್ಜೀಬಳ, ಶ್ರೀ ಜಿ. ವಿ. ಜೋಶಿ, ಕಾಗೇರಿ, ಡಾ || ಎ. ಕೆ. ಶಾಸ್ತ್ರಿ ಮತ್ತಿನ್ನೂ ಅನೇಕ ಸ್ಥಳೀಯ ಗಣ್ಯರು, ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಕ್ಕೆ ರೂ. ೨೫,೦೦೦ ಆರ್ಥಿಕ ನೆರವು ನೀಡಿ ಸಹಕರಿಸುತ್ತಿರುವ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯ ನಿರ್ದೇಶಕರು ಮತ್ತು ಸಿಬ್ಬಂದಿ, ಹಲವಾರು ಕಾರ್ಯಕ್ರಮಗಳೊಡನೆ ಸಹಯೋಗ ಒದಗಿಸುತ್ತಿರುವ ಮಿಥಿಕ್ ಸೊಸೈಟಿ, ಕಾಣಿಕೆಯ ರೂಪದಲ್ಲಿ ಧನಸಂಗ್ರಹಮಾಡಿ ನೆರವಾಗುತ್ತಿರುವ ಶ್ರೀ ಗುಜ್ಜಾರಪ್ಪ, ಮುದ್ರಣಕಾರ್ಯದಲ್ಲಿ ತಮ್ಮ ಸ್ವಂತ ಕೆಲಸದಂತೆ ನೆರವಾಗುತ್ತಿರುವ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್, ಶ್ರೀ ವೆಂಕಟೇಶ್ ಮತ್ತು ಸಿಬ್ಬಂದಿ, ವಾಗ್ದೇವಿ ಮುದ್ರಣಾಲಯದ ಶ್ರೀ ಶಾಂತಾರಾಂ ಪ್ರಭು, ಇತಿಹಾಸಪ್ರಶಸ್ತಿ ಪರೀಕ್ಷೆಗಳ ಸಂದರ್ಭ ಸಹಕರಿಸುತ್ತಿರುವ ಬೆಂಗಳೂರಿನ ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು, ಶೇಷಾದ್ರಿಪುರಂಕಾಲೇಜು, ಮೈಸೂರಿನ ಬನುಮಯ್ಯ ಕಾಲೇಜು, ದಳವಾಯಿ ಪ್ರೌಢಶಾಲೆ, ಧಾರವಾಡದ ಕಿಟೆಲ್ ಕಾಲೇಜು, ಗುಲಬರ್ಗದ ನೂತನ ವಿದ್ಯಾಲಯ ಮತ್ತು ಮಂಗಳೂರಿನ ಗಣಪತಿ ಹೈಸ್ಕೂಲುಗಳ ವ್ಯವಸ್ಥಾಪಕರು ಮತ್ತು ಪ್ರಾಂಶುಪಾಲರಿಗೆ ಅಕಾದೆಮಿಯ ಕೃತಜ್ಞತೆಗಳು ಸಲ್ಲುತ್ತದೆ.

ವರ್ಷದಿಂದ ವರ್ಷಕ್ಕೆ ಬೆಳೆಯುತ್ತಾ, ಸಾರ್ಥಕಸೇವೆ ಸಲ್ಲಿಸಲು ಕಾರಣರಾಗಿರುವ ಅಕಾದೆಮಿಯ ಎಲ್ಲ ಸದಸ್ಯರೂ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

**ಕಾರ್ಯಕಾರಿ ಸಮಿತಿಯ ಅನುಮತಿಯ ಮೇರೆಗೆ**

**ಡಾ || ಸೂರ್ಯನಾಥ ಯು. ಕಾಮತ್**
ಅಧ್ಯಕ್ಷರು

**ಎಂ. ಬಿ. ಪಾಟೀಲ್**
ಕೋಶಾಧಿಕಾರಿ

**ಡಾ || ಎಚ್. ಎಸ್. ಗೋಪಾಲರಾವ್**
ಪ್ರಧಾನ ಕಾರ್ಯದರ್ಶಿ

**ಡಾ || ಡಿ. ವಿ. ದೇವರಾಜ್, ಎಂ. ಜಿ. ನಾಗರಾಜ್**
ಉಪಾಧ್ಯಕ್ಷರು

**ಡಾ || ಹೆಚ್.ಆರ್. ರಘುನಾಥ ಭಟ್, ಡಾ || ಕೋ. ವಸಂತಲಕ್ಷ್ಮಿ**
ಕಾರ್ಯದರ್ಶಿಗಳು

"SHREESHA SHARANAM"

**Acharya K. V.** B. Com., F.C.A.
CHARTERED ACCOUNTANT

**'SRI KRISHNA'**
13/3, Pampamahakavi Road
BANGALORE - 560 004.
PHONE : 609606

Ref. : Date :...............................

## AUDITORS REPORT

Sub : Auditors Report on the Accounts of the Academy for the Calender year 1997.

- - -

I have audited the Balance Sheet of the Academy as at 31-12-1997 and the Income and Expenditure Account for the year ended on that date and Report that :

The Balance Sheet exhibits a true and fair view of the state of affairs of the Academy and the Income and Expenditure Account shows a true and fair view of the excess of Income over Expenditure according to the best of my information and explanation given to me and shown by the Books of Account of the Academy.

BANGALORE
03-08-1998

Sd/-
**(K. V. ACHARYA)**
Chartered Accountant

THE KARYAKARI SAMITHI
KARNATAKA ITIHASA ACADEMY (R)
BANGALORE - 560 019.

## KARNATAKA ITIHASA ACADEMY, BANGALORE- 560 019

### Receipts and Payments Account for the year ended 31st December 1997

| Receipt | | Amount | Payments | | Amount |
|---|---|---|---|---|---|
| To Balance b/d | | | By Fixed Deposit with M/s Pragathi | | |
| Cash in hand | 242-51 | | Co-operative Bank | | 40,000-00 |
| Cash at Syndicate Bank | | | " M/s S.J.B. Sangha (N) | | 20,000-00 |
| S.B. A/c No. 12467 | 1,823-70 | 2,066-21 | " Annual Conference Expenses | | 15,378-50 |
| " Life Membership Fees | | 16,850-00 | " Printing Itihasa Darshan Vol. XII | | 57,000-00 |
| " Institutional Membership Fees | | 1,250-00 | " K. H. Certificate Exam. Expenditure | | 1,12,237-50 |
| " Annual Membership Fees | | 200-00 | " Prize Money awarded | | 3,000-00 |
| " K. H. Certificate Exam. Fees received | | 1,69,824-00 | " Save Historical Heritage Week & | | |
| " Grants received - Historical | | | Celebration expenses | | 28,090-00 |
| Heritage Week Celebration | | 25,000-00 | " Printing & Stationery | | 4,735-50 |
| " Donation | | 14,964-00 | " Postage, Telegram & Telephone | | 2,675-00 |
| " Fixed Deposit Matured | | 30,000-00 | " Travelling and Conveyence | | 525-00 |
| " Interest on Fixed Deposit | | 29,909-00 | " Rent paid | | 2,800-00 |
| " Interest on S.B.A/c 12467 | | 875-00 | " Bank Charges | | 80-00 |
| " Sale of Publications | | 340-00 | " Audit fees for the year 1996 | | 1,500-00 |
| " Interest on Rental Deposit | | 275-00 | " Miscellaneous Expenses | | 980-00 |
| " Miscellaneous Receipts | | 1,375-00 | " Donations | | 1,000-00 |
| | | | " Balance C/d | | |
| | | | Cash in hand | 72-01 | |
| | | | Cash at Syndicate Bank | | |
| | | | S.B. A/c No. 12467 | 2,854-70 | 2,926-71 |
| | Total Rs. | 2,92,928-21 | | Total Rs. | 2,92,928-21 |

Bangalore
03-08-98

Sd/-
**Suryanath Kamath**
*President*

Sd/-
**H. S. Gopal Rao**
*Gen. Secretary*

Sd/-
**M. B. Patil**
*Treasurer*

Sd/-
**K. V. Acharya**
*Chartered Accountant*

## KARNATAKA ITIHASA ACADEMY, BANGALORE- 560 019

### Income and Expenditure Account for the year ended 31st December 1997

| Expenditure | Amount | Income | Amount |
|---|---|---|---|
| To Annual Conference Expenses | 15,378.50 | By Annual Membership Fees | 200.00 |
| " K. H. Certificate Exam. Expenses | 1,12,237.50 | " Institutional Membership Fees | 1,250.00 |
| " Prize Money Awarded | 3,000.00 | " K.H. Certificate Examination fees received | 1,69,824.00 |
| " Printing of Ithihasa Darshan Vol. XII | 57,000.00 | " Grants received for Historical Heritage week Celebrations | 25,000.00 |
| " Postage, Telegram & Telephone | 2,675.00 | " Donations received | 14,964.00 |
| " Travelling & Conveyance | 525.00 | " Sale of Publications | 340.00 |
| " Printing & Stationery | 4,735.50 | " Interest on Fixed Deposits | 29,909.00 |
| " Rent paid | 2,800.00 | " Interest on S.B. A/c | 875.00 |
| " Bank Charges | 80.00 | " Interest on Rental Deposit | 275.00 |
| " Audit Fees | 1,500.00 | " Miscellaneous Income | 1,375.00 |
| " Donations | 1,000.00 | | |
| " Historical Heritage Celebration Week expenses | 28,090.00 | | |
| " Miscellaneous expenses | 980.00 | | |
| " Depreciation on Furniture @ 10% | 319.55 | | |
| " Excess of Income over Expenditure | 13,690.95 | | |
| Total Rs. | 2,44,012.00 | Total Rs. | 2,44,012.00 |

Bangalore
03-08-98

| Sd/- | Sd/- | Sd/- | Sd/- |
|---|---|---|---|
| **Suryanath Kamath** | **H. S. Gopal Rao** | **M. B. Patil** | **K. V. Acharya** |
| *President* | *Gen. Secretary* | *Treasurer* | *Chartered Accountant* |

